# ರಾಮಾನುಜ ನೂತ್ತಂದಾದಿ ಮತ್ತು
# ದೇಶಿಕ ಪ್ರಬಂಧಂ

ತಿರುವರಂಗತ್ತಮುದನಾರ್‌ರವರಿಂದ ವಿರಚಿತವಾದ

# ರಾಮಾನುಜ ನೂತ್ತಂದಾದಿ

ಮತ್ತು

ಶ್ರೀ ಮನ್ನಿಗಮಾಂತ ಮಹಾ ದೇಶೀಕರವರಿಂದ ರಚಿಸಲಾದ

# ದೇಶಿಕ ಪ್ರಬಂಧಂ

ವಿದ್ವಾನ್ ಹ. ಗೋಪಾಲಾಚಾರ್ಯರ (ಮೈಸೂರ್ ಆಂಡವನ್)

(ಕನ್ನಡ ಪ್ರತಿಪದಾರ್ಥ, ತಾತ್ಪರ್ಯ ಮತ್ತು ಪ್ರತಿಪಾಶುರದ
ಸಂಸ್ಕೃತ ಪದ್ಯ ಸಹಿತ)





ಪ್ರಕಾಶಕರು

ಶ್ರೀರಂಗಂ ಶ್ರೀಮದಾಂಡವನ್ ಆಶ್ರಮಂ

ತಿರುವರಂಗತ್ತಮುದನಾರ್‌ರವರಿಂದ ವಿರಚಿತವಾದ

# ರಾಮಾನುಜ ನೂತ್ತಂದಾದಿ

ಮತ್ತು

ಶ್ರೀಮನ್ನಿಗಮಾಂತ ಮಹಾದೇಶೀಕರವರಿಂದ ರಚಿಸಲಾದ

# ದೇಶಿಕ ಪ್ರಬಂಧಂ

ವಿದ್ವಾನ್ ಹ. ಗೋಪಾಲಾಚಾರ್ಯರ (ಮೈಸೂರ್ ಆಂಡವನ್)

(ಕನ್ನಡ ಪ್ರತಿಪದಾರ್ಥ, ತಾತ್ಪರ್ಯ ಮತ್ತು ಪ್ರತಿಪಾಶುರದ
ಸಂಸ್ಕೃತ ಪದ್ಯ ಸಹಿತ)

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯೇತ್ಯಾದಿ ಬಿರುದಾಂಕಿತರಾದ
ಶ್ರೀ ಶ್ರೀರಂಗಂ ಶ್ರೀಮದಾಂಡವನ್ (ಶ್ರೀಮುಷ್ಣಂ) ಶ್ರೀರಂಗರಾಮಾನುಜ ಮಹಾದೇಶಿಕನ್
ಅವರ ದಿವ್ಯ ಆದೇಶ ಮತ್ತು ನಿಯಮಾನುಸಾರ
ಈ ಪುನರ್ಮುದ್ರಣವನ್ನು ಪ್ರಕಟಿಸಲಾಗಿದೆ.

ಪ್ರಕಾಶಕರು

ಶ್ರೀರಂಗಂ ಶ್ರೀಮದಾಂಡವನ್ ಆಶ್ರಮಂ

ಗರುತ್ಮಾನ್ ಪಾರ್ಕ್, ಜಯನಗರ,

ಬೆಂಗಳೂರು -560 004

Reprint of **Ramanuja Nuthandadi** *Written by Thiruvarangathamudanar* & **Desika Prabandham** - *Written by Sri Nigamantha Maha Desikar,* with word by word meaning and summaries in Kannada and 'Poem in Sanskrit for every Pasura' *by Vidwan H. Gopalachar (Mysore Andavan)* Published by Srirangam Srimadandavan Ashramam, Garuthman Park, Jayanagar, Bangalore-560 004. Phone: 080-26561953

*First Edition:* Ramanuja Nuthandadi - 1959
Desika Prabandham (in small Books) - 1960-62

*Reprint* (All consolidated in this Edition) - 2004



**Price: Rs. 800-00**

*Printed by*
**Sri Rama Printers**
No. 1, SGS Complex
Chunchaghatta Main Road
Konanakunte
Bangalore-560 062



ಶ್ರೀ ರಾಮಾನುಜಾಚಾರ್ಯರು



ಶ್ರೀ ಶ್ರೀಮದಾಂಡವನ್ (ತಿರುಕ್ಕುಡಂದೈ)
ಶ್ರೀವೇದಾಂತರಾಮಾನುಜಮಹಾದೇಶಿಕರು



ಶ್ರೀ ಶ್ರೀಮದಾಂಡವನ್ (ಮೈಸೂರು)
ಶ್ರೀನಿವಾಸ ರಾಮಾನುಜ ಮಹಾದೇಶಿಕರು



ಶ್ರೀ ಶ್ರೀಮದಾಂಡವನ್ (ಶ್ರೀಮುಷ್ಣಂ)
ಶ್ರೀರಂಗರಾಮಾನುಜ ಮಹಾದೇಶಿಕರು

Srimathe Rangaramanuja Mahadesikaya Namaha
Srimathe Srinivasa Ramanuja Mahadesikaya Namaha
Srimathe Vedantha Ramanuja Mahadesikaya Namaha
Srimathe Ranganatha Mahadesikaya Namaha
Srimathe Srinivasa Mahadesikaya Namaha
Srimathe Nigamantha Mahadesikaya Namaha
Srimathe Baghawathe Bashyakaraya Mahadesikaya Namaha
Sri Ranganatha Divyamani Padukabyam Namaha

**SRIRANGAM**
**SRIMAD ANDAVAN ASHRAMAM**

H.Qrs. Melur Road, Srirangam,
Tiruchirapalli - 620 006
Phone : 0431 - 432379
Camp : Secunderabad (Bhagyapuri)
Date : 22-7-04

॥ श्रीमते रङ्गरामानुज महादेशिकाय नमः ॥

विदितमेवेदं समेषां यदखिलतगः कर्शनं नाथोपज्ञे श्रीमद्भिः भाग्यकारैः संवर्द्धितं आस्माकीनं दर्शनं, दुर्वादिसार्थसमुपस्थापित दूरर्थदूरिकारण धुरन्धराः निगमान्तगुरवः परश्शतग्रन्थजातनिर्माण मुखेन निष्कण्टकीकृत्य अस्मानन्त्रगृह्वलिति । दुरूहेष्वाध्यात्मिकेषु विषयेषु प्रदर्शितप्रौढिमाप्रथिम्नः इमे आचार्यवर्याः संप्रदायस्थास्य अधृष्यतां आपाद्य काव्येषु कोमलधियः अनाकलित सादृश्य पादुका सहस्राख्य ग्रन्थानुग्रहेण अभिगम्यतां च अदर्शयन् । ग्रन्थतल्लजमह श्रीमत्परमहंसेत्यादि मैसूर् आण्डवनाभिख्या महागुरवः श्रीनिवास रामानुजमहादेशिकाः प्रतिपदार्थतात्पयार्थ प्रदान सहितया अतिललित

व्यख्यया अतीवलोकप्रियं अतिसुखप्रवेशंचाकारयन्तीति महदिदं आहोभाग्यं अस्माकम् । तथैव त एव रामानुजनूत्तन्दादि नामकस्य ग्रन्थरत्नस्य अमृतरञ्जन्यादि निगमान्तसूरिविरचित रहस्य ग्रन्थानां च तादृशीमेव व्याख्यामन्वगृह्णन् । अद्य व्याख्यासहित श्रीपादुकासहस्रस्य देशिकप्रबन्धानां च ग्रन्थद्वयरूपेण प्रकाशनं क्रियमाणं ज्ञात्वा श्रीमत्परमहंसेत्यादि श्रीमुष्णं श्रीमदाण्डवन् स्वामि अतीव मोदन्ते । श्रीमन्तः श्रीनिवासगोपालार्याः तत्प्रकाशन धुरं दधत इति हेम्नः परमामोदः । अस्मिन् पुस्तकद्वयप्रकाशनरूपे अतिमहति कैङ्कर्ये भागिनां श्रीरङ्गदिव्यदम्पत्योः पूर्वाचार्यपादुकाचानवग्रहेणानुगहेण नित्यश्रीः जित्यमङ्गलं भूयादित्याशासानाः आचार्यचरणाः, सर्वेऽपिसहृदयाः ग्रन्थद्वितयपठनेव कार्तार्थ्यं प्राप्नुवान्त्वीति चानुगृह्णन्ति ॥

इत्थं

श्रीमदाण्डवन् आचार्यचरणादेशक

**हो. नरसिंह राघवः**

श्रीकार्यम्

Srimathe Rangaramanuja Mahadesikaya Namaha
Srimathe Srinivasa Ramanuja Mahadesikaya Namaha
Srimathe Vedantha Ramanuja Mahadesikaya Namaha
Srimathe Ranganatha Mahadesikaya Namaha
Srimathe Srinivasa Mahadesikaya Namaha
Srimathe Nigamantha Mahadesikaya Namaha
Srimathe Baghawathe Bashyakaraya Mahadesikaya Namaha
Sri Ranganatha Divyamani Padukabyam Namaha

**SRIRANGAM**
**SRIMAD ANDAVAN ASHRAMAM**

*H.Qrs. Melur Road,*
*Srirangam,*
*Tiruchirapppalli-620 006*

*Camp: Hyderabad*

ಶ್ರೀಮತೇ ರಂಗರಾಮಾನುಜ ಮಹಾದೇಶಿಕಾಯನಮಃ

# ಪ್ರಕಾಶಕರ ನುಡಿ

ಶ್ರೀಮತ್ಪರಮಹಂಸೇತ್ಯಾದಿ ತಿರುಕ್ಕುಡಂದೈ ಶ್ರೀಮದಾಂಡವನ್‌ರವರ ನೇತೃತ್ವದಲ್ಲಿ ಬೆಂಗಳೂರು ಜಯನಗರ ಶ್ರೀಮದಾಂಡವನ್ ಆಶ್ರಮದವರು ಮೊದಲಾಯಿರಂ, ಪೆರಿಯ ತಿರುಮೊಳಿ, ತಿರುವಾಯ್ಮೊಳಿ, ಇಯರ್ಪಾ (ನಾಲಾಯಿರಂ) ದೇಶಿಕಪ್ರಬಂಧಂ ಮತ್ತು ನಿತ್ಯಾನುಸಂಧಾನ ಪುಸ್ತಕಗಳನ್ನು ಪ್ರಕಟಿಸಿ ಭಕ್ತಾದಿಗಳಿಗೆ ಮಹದುಪಕಾರ ಮಾಡಿದರು. ಈಗ ಮೂರು-ನಾಲ್ಕು ವರ್ಷಗಳಿಂದ ಶ್ರೀಮತ್ಪರಮಹಂಸೇತ್ಯಾದಿ ಶ್ರೀಮುಷ್ಣಂ ಶ್ರೀಮದಾಂಡವನ್‌ರವರಿಗೆ ಶ್ರೀಮತ್ಪರಮಹಂಸೇತ್ಯಾದಿ ಮೈಸೂರು ಶ್ರೀಮದಾಂಡವನ್‌ರವರು ಅವರ ಪೂರ್ವಾಶ್ರಮದಲ್ಲಿ ಪ್ರಕಟಿಸಿದ್ದ ಪಾದುಕಾಸಹಸ್ರಂ (ಕನ್ನಡ ಅರ್ಥ ಮತ್ತು

ತಾತ್ಪರ್ಯ ಸಹಿತ) ಪುಸ್ತಕದ ಪುನರ್ಮುದ್ರಣ ಮಾಡಿಸಬೇಕೆಂಬ ಹೆಬ್ಬಯಕೆಯು ಈವರೆಗೆ ಬಯಕೆಯಾಗಿಯೇ ಮುಂದುವರೆದಿತ್ತು. ಶ್ರೀಮತ್ಪರಮಹಂಸೇತ್ಯಾದಿ ಶ್ರೀಮುಷ್ಣಂ ಶ್ರೀಮದಾಂಡವನ್‌ರವರ 70ನೇ ತಿರುನಕ್ಷತ್ರದ ಸಮಾರಂಭ ಸಮಯದಲ್ಲಿ ಬೆಂಗಳೂರು ಜಯನಗರದ ಶ್ರೀ ಶ್ರೀನಿವಾಸ ಗೋಪಾಲ್‌ರವರು ಶ್ರೀಶ್ರೀಗಳವರನ್ನು ನೇರವಾಗಿ ವಿಚಾರಿಸಿದಾಗ ಶ್ರೀ ಶ್ರೀಗಳವರು ಅವರನ್ನೇ ಮಾಡಿಸಿಕೊಡುವಿರಾ ಎಂದು ಕೇಳಿದ್ದೇ ಈ ಪುನರ್ಮುದ್ರಣಕ್ಕೆ ನಾಂದಿ ಆಯಿತೆಂದರೆ ತಪ್ಪಾಗಲಾರದು. ತಕ್ಷಣವೇ ಮುದ್ರಣಕಾರರನ್ನು ಕರೆಯಿಸಿ, ಪಾದುಕಾ ಸಹಸ್ರಂ, ರಾಮಾನುಜ ನೂತ್ತಂದಾದಿ ಜೊತೆಯಲ್ಲಿ ದೇಶಿಕ ಪ್ರಬಂಧವನ್ನೂ ಸೇರಿಸಿ ಮುದ್ರಿಸಿ ಕೊಡುವಂತೆ ಅಪ್ಪಣೆ ಮಾಡಿದರು. ಇದಕ್ಕೆ ನಾವು ಶ್ರೀ ಶ್ರೀಗಳವರನ್ನು ಎಷ್ಟು ಕೊಂಡಾಡಿದರೂ ಸಾಲದು.

ಜಯನಗರದ ಆಂಡವನ್ ಆಶ್ರಮಂನ ಮ್ಯಾನೇಜರ್ ಶ್ರೀ ಎಂ.ಕೆ. ಶೇಷಾದ್ರಿಯವರು ಸಂಪೂರ್ಣ ಸಹಕಾರವನ್ನು ನೀಡಿದ್ದಾರೆ. ಕೇವಲ ಮೂರು ತಿಂಗಳ ಅವಧಿಯಲ್ಲಿ 1250 ಪುಟಗಳಿಗೂ ಮೀರಿದ ಈ ಪುಸ್ತಕಗಳ ಪ್ರಕಟಣೆಯನ್ನು ಸಮಯಕ್ಕೆ ಸರಿಯಾಗಿ ಮುಗಿಸಲೇಬೇಕೆಂದು ಬಹಳ ಶ್ರಮವಹಿಸಿದ ಶ್ರೀ ಸತ್ಯನಾರಾಯಣ ಮತ್ತು ಶ್ರೀಮತಿ ಮೀರಾರಘುರಾಂ ರವರಿಗೂ, ಇದು ಕೇವಲ ಸ್ವಾಮಿ ಕೈಂಕರ್ಯವೆಂದು ಶ್ರೀಹಯಗ್ರೀವರ ಮೇಲೆ ಭಾರಹಾಕಿ ಮೊದಲ ಕರಡಚ್ಚುಗಳನ್ನು ವಿಳಂಬಮಾಡದೆ ಪರಿಷ್ಕರಿಸಿಕೊಟ್ಟ ಶ್ರೀ ಶ್ರೀನಿವಾಸಗೋಪಾಲ್‌ರವರಿಗೂ, ಈ ಸಂಗ್ರಹದ ಎರಡನೇ ಕರಡಚ್ಚನ್ನು ಪರಿಶೋಧಿಸಿಕೊಟ್ಟ ಉ.ವೇ. ಶ್ರೀ ಹೆಚ್.ಆರ್. ಕೃಷ್ಣಸ್ವಾಮಿಯವರಿಗೆ ಶ್ರೀಶ್ರೀಗಳವರ ಮತ್ತು ಆಶ್ರಮದ ಪರವಾಗಿ ಹೃತ್ಪೂರ್ವಕ ಅಭಿನಂದನೆಗಳನ್ನು ಅರ್ಪಿಸಿ, ಇವರಿಗೆಲ್ಲಾ ದಿವ್ಯ ದಂಪತಿಯರ ಮತ್ತು ಆಚಾರ್ಯರ ಕೃಪಾಕಟಾಕ್ಷ ಚಿರಕಾಲವಿರಲಿ ಎಂದು ಪ್ರಾರ್ಥಿಸುತ್ತೇನೆ.

ಈ ಪುಸ್ತಕಗಳಲ್ಲಿ ಸೇರಿಸಿರುವ ಭಾವಚಿತ್ರಗಳ ಖರ್ಚನ್ನು ವಹಿಸಿಕೊಳ್ಳಲು ಸಹಕರಿಸಿದ ಶ್ರೀಮತಿ ಎ. ಲೀಲಾವತಿ, ಶ್ರೀ ಎಸ್.ಎನ್ ರಂಗನಾಥ್, ಶ್ರೀ ಬಾಲಾಜಿ ರಾಮಾನುಜಂ (ವಾಷಿಂಗ್‌ಟನ್), ಶ್ರೀ ಜಿ.ಎಸ್. ಶೇಷಾದ್ರಿ, ಶ್ರೀಮತಿ ನೀಳಮ್ಮ ಮತ್ತು ಶ್ರೀಮತಿ ಭೂಮಾ, ಇವರಿಗೆಲ್ಲಾ ನಮ್ಮ ಆತ್ಮೀಯ ಅಭಿನಂದನೆಗಳು.

ಈ ಕೆಲಸವನ್ನು ದೇವರ ಕೆಲಸವೆಂದು ತಿಳಿದು ಪದೇ ಪದೇ ವಿದ್ಯುಚ್ಛಕ್ತಿಯ ಅಡೆತಡೆಗಳನ್ನು ಎದುರಿಸಿ ಸಮಯಕ್ಕೆ ಸರಿಯಾಗಿ ಮುದ್ರಿಸಿಕೊಟ್ಟ ಶ್ರೀರಾಮ ಪ್ರಿಂಟರ್ಸ್‌ರವರಿಗೆ ನಮ್ಮ ಅನೇಕಾನೇಕ ಧನ್ಯವಾದಗಳು.

ಶ್ರೀ ಮತ್ಪರಮಹಂಸೇತ್ಯಾದಿ ಶ್ರೀಮುಷ್ಣಂ ಶ್ರೀಮದಾಂಡವನ್‌ರವರು ಈ ಪುಸ್ತಕಗಳನ್ನು 15ನೇ ಸೆಪ್ಟೆಂಬರ್ 2004ರಂದು ಅಂದರೆ ಶ್ರೀಮತ್ಪರಮಹಂಸೇತ್ಯಾದಿ ಮೈಸೂರು ಶ್ರೀಮದಾಂಡವನ್‌ರವರ 95ನೆಯ ತಿರುನಕ್ಷತ್ರದ ದಿನ ಹೈದರಾಬಾದಿನಲ್ಲಿ ಬಿಡುಗಡೆ ಮಾಡಲು ನಿರ್ಧರಿಸಿರುತ್ತಾರೆ.

ಎಷ್ಟೇಜನ, ಎಷ್ಟೇ ಸಲ ಕರಡಚ್ಚನ್ನು ಪರಿಶೋಧಿಸಿದರೂ ಅಲ್ಲಲ್ಲಿ ಕೆಲವು ದೋಷಗಳು ಕಂಡುಬಂದಿರಲಾರದು. ''**ದೋಷೋಯದ್ಯಪಿತಸ್ಯಾತ್ ಸಮೇತದಗರ್ಹಿತಂ**'' ಎಂಬಂತೆ ಸಜ್ಜನರು ಗುಣಗ್ರಾಹ್ಯರೇ ಹೊರತು ದೋಷಗಳನ್ನು ಹುಡುಕಿ ಎತ್ತಿ ತೋರಿಸುವವರಲ್ಲ ಎಂದು ನಮ್ಮ ಅಪಾರ ನಂಬಿಕೆ.

ಈ ಮಹಾ ಗ್ರಂಥಗಳನ್ನು ಎಲ್ಲಾ ಶ್ರೀವೈಷ್ಣವರೂ ಕೊಂಡುಕೊಂಡು ಅದರಲ್ಲಿರುವ ಭಾವಾರ್ಥಗಳನ್ನು ಚೆನ್ನಾಗಿ ತಿಳಿದುಕೊಂಡು ದಿವ್ಯದಂಪತಿಯರ ಮತ್ತು ಆಚಾರ್ಯವರ್ಯರ ಕೃಪೆಗೆ ಪಾತ್ರರಾಗಬೇಕೆಂದೇ ನಮ್ಮ ಅಭಿಲಾಷೆ.

**ಶ್ರೀಕಾರ್ಯಂ**

**ಶ್ರೀರಂಗಂ ಶ್ರೀಮದಾಂಡವನ್ ಆಶ್ರಮಂ**

# ಪರಿವಿಡಿ

ತಿರುವರಂಗತ್ತಮುದನಾರ್‌ರವರಿಂದ ವಿರಚಿತವಾದ

# ರಾಮಾನುಜ ನೂತ್ತಂದಾದಿ

ಮತ್ತು

ಶ್ರೀಮನ್ನಿಗಮಾಂತ ಮಹಾದೇಶೀಕರವರಿಂದ ರಚಿಸಲಾದ

# ದೇಶಿಕ ಪ್ರಬಂಧಂ

ವಿದ್ವಾನ್ ಹ. ಗೋಪಾಲಾಚಾರ್ಯರ (ಮೈಸೂರ್ ಆಂಡವನ್)

(ಕನ್ನಡ ಪ್ರತಿಪದಾರ್ಥ, ತಾತ್ಪರ್ಯ ಮತ್ತು ಪ್ರತಿಪಾಶುರದ
ಸಂಸ್ಕೃತ ಪದ್ಯ ಸಹಿತ)

# ರಾಮನುಜ ನೂತ್ತಂದಾದಿ ಕೃತಿಯ ಕವಿಯ ವಿಷಯವಾಗಿ ಒಂದೆರಡು ನುಡಿಗಳು

ಶ್ರೀ ರಾಮಾನುಜ ನೂತ್ತಂದಾದಿಯನ್ನು ರಚಿಸಿ, ಪಾಡಿದ ಮಹನೀಯರು ಶ್ರೀ ತಿರುವರಂಗತ್ತಮುದನಾರೆಂಬುವರು. ಇವರ ದೇಶಕಾಲ ವ್ಯಕ್ತಪಟ್ಟದ್ದರೂ ಅವರ ವಂಶ ಚರಿತ್ರೆ ವಿಶದವಾಗಿ ದೊರಕಿಲ್ಲ. ''ಶ್ರೀರಂಗೇ ಮೀನಹಸ್ತೇ ಜಾತಂ ರಂಗಾರ್ಯನಂದನಂ। ರಾಮಾನುಜ ಪದಾಸಕ್ತಂ ರಂಗನಾಥಗುರುಂಭಜೇ॥'' ಎಂಬುದು ಇವರ ತನಿಯ ಶ್ಲೋಕ. ಶ್ರೀ ರಂಗದಲ್ಲಿ ವಂಶಾನುಕ್ರಮವಾಗಿ ಶ್ರೀ ರಂಗನಾಥನ ಕೈಂಕರ್ಯದಲ್ಲಿ ನಿರತರಾಗಿ ಬರುವವರಲ್ಲೊಬ್ಬರು. ಇವರ ಕುಲದ ಹೆಸರು ''ಮೂಂಗಿಲ್'' ಎಂದು. ಅಣಿಯರಂಗತ್ತಮುದನಾರೆಂಬುವರು ಇವರ ತಂದೆ. ಜನಿಸಿದ ವರ್ಷ ಸರಿಯಾಗಿ ತಿಳಿದಿಲ್ಲ, ತಿಂಗಳು ಮೀನ, ನಕ್ಷತ್ರ ಹಸ್ತ ಇಷ್ಟು ಮಾತ್ರ ತನಿಯ ಪದ್ಯದಿಂದ ವೇದ್ಯವಾಗುವುದು. ದೇವಾಲಯದ ಅಧಿಕಾರಿ ವರ್ಗದಲ್ಲಿ ಈ ವಂಶದವರು ಪ್ರಧಾನರು. ದೇವಾಲಯದ ಸಮಸ್ತ ಬೀಗದಕೈಗಳೆಲ್ಲ ಇವರ ಕೈಯಲ್ಲೇ. ಹೀಗೆ ಅಸಾಧಾರಣ ಭಗವದ್ಭಕ್ತರಾಗಿ ಮೆರೆದವರು. ಶ್ರೀ ರಾಮಾನುಜಾಚಾರ್ಯರು ಶ್ರೀರಂಗದಲ್ಲೇ ನೆಲೆಸಿರಲು ನಿರ್ಧರಿಸಿ, ಶ್ರೀರಂಗನಾಥನ ಸೇವೆಯನ್ನೂ ಶಿಷ್ಯರಿಗೆ ಕಾಲಕ್ಷೇಪವನ್ನೂ ಹೇಳುತ್ತಾ ಇರುತ್ತಿದ್ದರು. ಕೂರತ್ತಾಳ್ವಾರ್ರು ಯೋಗೀಂದ್ರರನ್ನು ಆಶ್ರಯಿಸಿ ಅಂತರಂಗ ಶಿಷ್ಯರಾಗಿದ್ದವರಲ್ಲಿ ಬಹು ಮುಖ್ಯರು. ಈ ಮಹಾಮಹಿಮ ಶಿಷ್ಯರ ಪಾಂಡಿತ್ಯ ಅನ್ಯಾದೃಶವಾದುದು. ಪ್ರಕೃತ ನಮ್ಮ ಈ ಅಮುದನಾರ್ರು ಒಂದು ದಿನ ಶ್ರೀ ರಾಮಾನುಜಾಚಾರ್ಯರ ಸನ್ನಿಧಿಗೆ ಬಂದು, ''ಸ್ವಾಮಿ ! ನಾನು ಕಡುಪಾಪಿಯು. ನನ್ನನ್ನು ತಿದ್ದಿ ಪಾವನಗೊಳಿಸಿ. ತಮಗೆ ಶೇಷಭೂತನಾಗುವಂತೆ ಕರುಣಿಸಿ. ಯಾರಲ್ಲಾದರೂ ಸರಿಯಾದ ಶಿಕ್ಷಣ ಕೊಡಿಸಿ, ರಕ್ಷಿಸಬೇಕು.'' ಎಂದು ಪ್ರಾರ್ಥಿಸಲು ಶ್ರೀಮದಾಚಾರ್ಯರು ಕೂಡಲೇ ಶ್ರೀ ಕೂರತ್ತಾಳ್ವಾರ್‌ರವರಿಗೆ ಇವರನ್ನು ಪರಿಚಯಮಾಡಿಸಿಕೊಟ್ಟು, ಇವರ ಕೀಳುತನವನ್ನು ಗಮನಿಸದೆ, ಶ್ರೀ ರಂಗನಾಥನ ಸೇವೆಯಲ್ಲಿ ಪ್ರಧಾನ ಪಾತ್ರ ವಹಿಸಿರುವುದೊಂದನ್ನೇ ವೀಕ್ಷಿಸಿ, ದೇಶ ಕಾಲಾನುಗುಣವಾಗಿ ಅನುವರ್ತಿಸಿ, ಅನುಕೂಲರಾಗುವಂತೆ ಮಾಡಿ, ತಮ್ಮಲ್ಲಿಗೆ ಕರೆತರುವಂತೆ ನಿಯಮಿಸಿದರು. ಗುರುವಿನ ಆಜ್ಞೆಯನ್ನು ಶಿರಸಾವಹಿಸಿ, ಹಲವಾರು ಕಾಲ ಅನುವರ್ತಿಸಿ, ಪರಿಪಕ್ವವಾದ ಮನುವುಳ್ಳವರನ್ನಾಗಿಸಿ, ಶ್ರೀಮದಾಚಾರ್ಯರಿಗೆ ತಂದೊಪ್ಪಿಸಿದರು. ಆಗ ಮತ್ತೆ ಅವರನ್ನು ಶ್ರೀ ಕೂರತ್ತಾಳ್ವಾರ್‌ವರಲ್ಲೇ ಪೂರ್ಣ ಶಿಷ್ಯರಾಗುವಂತೆ ನೇಮಿಸಿದರು. ಶ್ರೀ ಆಳ್ವಾರ್ರ ಅನನ್ಯ ಸಾಧಾರಣವಾದ ಆಚಾರ್ಯ ಭಕ್ತಿಯಪಡಿಯಚ್ಚು ತಮ್ಮ ಶಿಷ್ಯವರ್ಯರಾದ ಅಮುದನಾರ್ರಲ್ಲಿ ಬೆಳಗಿ, ಕಡೆಗೆ ಪರಮಾಚಾರ್ಯರಾದ ಶ್ರೀ ರಾಮಾನುಜಾರ್ಯರ ಅಡಿದಾವರೆಗಳಲ್ಲಿ ನೂರ್ಮಡಿಸಿ, ಸರ್ವದೇಶ, ಸರ್ವಕಾಲ, ಸರ್ವಾವಸ್ಥೆಗಳಲ್ಲೂ ಶ್ರೀಮದಾಚಾರ್ಯರ ನಾಮ ಸಂಕೀರ್ತನವೇ ಧಾರಕ,

ಪೋಷಕವೆಂದು ಅದನ್ನೇ ಅನುಸಂಧಾನ ಮಾಡುತ್ತಾ, ಅವರ ಮಹಿಮೆಯನ್ನೇ ಕೊಂಡಾಡುತ್ತಾ, ಕಾಲಕ್ಷೇಪಗೈದರು. ''ಮೊಳಯ್ಯೆಕ್ಕಡಕ್ಕುಂ .....'' ಎಂಬ ನೂತ್ತಂದಾದಿ ಪಾಶುರವು ಈ ವಿಷಯವನ್ನು ವಿಶದಗೊಳಿಸುವುದು. ತಮ್ಮ ನೂರೆಂಟು ಪದ್ಯಗಳ ರಚನೆಗೆ ತಕ್ಕಂತೆಯೇ ದೇವರು ಈ ಭಕ್ತರಿಗೂ 108 ವರ್ಷ ಆಯಸ್ಸನ್ನು ಕೊಟ್ಟಿರಬಹುದೆನ್ನುವಂತೆ ಪುರುಷಾಯುಷಜೀವಿಯಾಗಿದ್ದು, ಶ್ರೀ ರಾಮಾನುಜೀಯರಿಗೆ ಭಕ್ತಿಸುಧೆಯನ್ನು ಪಾನಮಾಡಿಸಿ ನಮ್ಮೆಲರನ್ನೂ ಉಜ್ಜೀವನಗೊಳಿಸಿದರು.

ಆಚಾರ್ಯರಿಗೆ ತಮ್ಮ ಆತ್ಮಾತ್ಮೀಯವೆಲ್ಲವನ್ನೂ ಮೊದಲೇ ಅರ್ಪಿಸಿದ್ದರು. ಉಳಿದಿದ್ದುದು ಕೇವಲ ದೇವಾಲಯದ ಬೀಗದ ಕೈ ಗೊಂಚಲು ಒಂದೇ. ಅಚಂಚಲವಾದ ಭಕ್ತಿಯಿಂದ ಅದನ್ನೂ ಒಪ್ಪಿಸಿಬಿಟ್ಟರು. ದೇವಾಲಯದ ಸೇವಾನಿರ್ವಾಹದ ಭಾರವು ಪೂರ್ಣವಾಗಿ ತಮ್ಮ ಕೈಸೇರಿದಂತಾಗಿ, ಅದನ್ನು ಶ್ರೀಮದ್ರಾಮಾನುಜಾಚಾರ್ಯರಿಗೆ ಕೂರತ್ತಾಳ್ವಾರ್ರು ಒಪ್ಪಿಸಿದರು ಅದರಿಂದ ಅಂದಿನಿಂದಲೇ ''ಸರ್ವ ದೇಶದಶಾಕಾಲೇಷ್ವವ್ಯಾಹತಪರಾಕ್ರಮಾ । ರಾಮಾನುಜಾರ್ಯ ದಿವ್ಯಾಜ್ಞಾ ವರ್ಧತಾಂ ಅಭಿವರ್ಧತಾಂ ॥ ರಾಮಾನುಜಾರ್ಯ ದಿವ್ಯಾಜ್ಞಾ ಪ್ರತಿವಾಸರಮುಜ್ವಲಾ । ದಿಗಂತ ವ್ಯಾಪಿನೀ ಭೂಯಾತ್ ಸಾ ಹಿ ಲೋಕಹಿತೈಷಿಣಿ ॥'' ಎಂದು ಎಲ್ಲೆಲ್ಲೂ ಎಲ್ಲರೂ ಅನುಸಂಧಾನ ಮಾಡುವಂತಾಯಿತು. ಈ ವಿಷಯವು ಸಮಂಜಸವಾಗಿಯೇ ಇದೆ. ಇಂದಿಗೂ ನಾವು ಅನುಸಂಧಾನ ಮಾಡುತ್ತಿರುವುದೇ ಇದಕ್ಕೆ ಸಾಕ್ಷಿ. ಹೀಗಾಗಿ ಶ್ರೀ ಭಗದ್ರಾಮಾನುಜಾಚಾರ್ಯರ ದಿವ್ಯ ಪಾದಾರವಿಂದಗಳ ನಿರಂತರಾನುಸಂಧಾನದ ಪರೀವಾಹವೇ ಈ ''ಶ್ರೀ ರಾಮಾನುಜ ನೂತ್ತಂದಾದಿ'' ಎಂಬ ಶ್ರೀ ಸೂಕ್ತಿ. ಒಂದೇ ಮಾತಿನಲ್ಲಿ ಹೇಳುವುದಾದರೆ ''ನಮ್ಮಾಳ್ವಾರ್ರವರಿಗೆ ಮಧುರ ಕವಿಗಳು ಇದ್ದಂತೆ ಶ್ರೀ ರಾಮಾನುಜರಿಗೆ ತಿರುವರಂಗತ್ತಮುದನಾರ್ರವರು'' ಇದ್ದರು ಎನ್ನಬಹುದು. ಗುಣಾನುಭವದ ವಿಷಯದಲ್ಲಿ ಓದುಗರ ಮನಸ್ಸೇ ಸಾಕ್ಷಿಯಾಗುವುದು.

ಚಿರಶಾಂತಿ ದೊರಕಲು ಸದಾಚಾರ್ಯರ ಆಶ್ರಯ ಲಭಿಸಬೇಕು. ಅಂತಹವರಲ್ಲಿ ಅಚಂಚಲವಾದ, ಭಕ್ತಿಯಿಡಬೇಕು. ಇಂತಹ ಭಕ್ತಿಯೇ ಇಹಪರ ಶ್ರೇಯಸ್ಸಿಗೆ ಮುಖ್ಯ ಕಾರಣ. ಅಭ್ಯಾಸಕ್ಕೆ ನಿಲುಕದುದು ಯಾವುದೂ ಇರಲಾರದು. ಆಚಾರ್ಯರಲ್ಲಿ ಭಕ್ತಿಯಿರುವವರಿಗೆ ಈ ದಿವ್ಯ ಪ್ರಬಂಧವು ಮಾರ್ಗದರ್ಶಕವಾಗಿದೆ. ಈ ದಾರಿಯಲ್ಲಿ ದಾಸನ ಪರಿಶ್ರಮವು ಪಾಠಕರಿಗೆ ಸ್ವಲ್ಪ ಸಹಾಯಕವಾಗಬಹುದೆಂಬ ನಂಬಿಕೆಯಿದೆ.

ಶ್ರೀಮದ್ರಾಮಾನುಜಾಚಾರ್ಯರ 942ನೆಯ ಅವತಾರ ದಿನಮಹೋತ್ಸವದ ಹೊತ್ತಿಗೆ ಈ ಕಿರುಹೊತ್ತಿಗೆಯನ್ನು ಕಾಣಿಕೆಯಾಗಿ ಸಮರ್ಪಿಸಲು ತೊಡಗಿದ ಈ ಉದ್ಯಮಕ್ಕೆ ಪೂರ್ಣ ಸಹಕಾರವಿತ್ತ ಶ್ರೀಮದಾಚಾರ್ಯರ ಭಕ್ತಶಿರೋಮಣಿಗಳೆಲ್ಲರಿಗೂ ಈ ದಾಸನು ಚಿರಋಣಿ. ಇಂತಹ ಮಹನೀಯರಿಗೆ ಪ್ರತ್ಯರ್ಪಣೆಯೆಂದರೆ ಪೂರ್ಣ ಕೃತಜ್ಞತಾ ಪೂರ್ವಕವಾದ ವಂದನೆಗಳು.

*ಇತಿ ಸತ್ಪದಾಂಬುಜರೇಣುಃ*

*ಗ್ರಂಥಕರ್ತಾ*

*ಹ. ಗೋಪಾಲಾಚಾರ್ಯಃ*

ಶ್ರೀಃ

॥ ಶ್ರೀಮತೇ ರಾಮಾನುಜಾಯ ನಮಃ ॥

# ತನಿಯರ್ಗಳ್

ಮೂಲ : ಮುನ್ನೈವಿನ್ನೈಯಗಲ ಮೂಂಗಿಲ್ ಕುಡಿಯಮುದರ್
ಪೊನ್ನಂ ಕಳಲ್ ಕಮಲಪ್ಪೋದಿರಂಡುಂ, ಎನ್ನುಡೈಯ
ಶೆನ್ನಿಕ್ಕಣಿಯಾಕಚ್ಚೇರ್ತಿನೇನ್, ತೆನ್ಪುಲತ್ತಾರ್ಕು
ಎನ್ನಕ್ಕಡವುಡೈಯೇನ್ ಯಾನ್ ॥ 1

ಭಾವ :- ಮುನ್ಬು ಪಣ್ಣಿನ ಪಾಪಂಗಳೆಲ್ಲಾಂ ಒಳಿವದರ್ಕ್ಕಾಹ ಮೂಂಗಿಲ್ಕುಡಿಯೆನ್ನುಂ ವಂಶತ್ತಿಲೆ ಅವತರಿತ್ತ ತಿರುವರಂಗತ್ತಮುದನಾರುಡೈಯ ಪೊನ್‌ಪೋಲ್ ಅಳಹಾನ ತಿರುವಡಿತ್ತಾಮರೈಕಳಿರಂಡೈಯುಂ ಅಡಿಯೇನ್ ಮುಡಿಕ್ಕು ಅಲಂಕಾರ ಮಾಹ ವೈತ್ತುಕ್ಕೊಂಡೇನ್. ಇಪ್ಪಡಿ ಇರುಕ್ಕ ಅಡಿಯೇನ್ ತೆನ್ ದಿಶೈಯಿಲ್ ಇರುಕ್ಕುಂ ಯಮ ಕಿಂಕರರರ್‌ಹಳುಕ್ಕು ಎದುಕ್ಕಾಹ ವಶಮಾವೇನ್ ?

ಅರ್ಥ :- ಮುನ್ನೈ = ಹಿಂದೆ (ಮಾಡಿದ), ವಿನ್ನೈ = ಪಾಪವೆಲ್ಲ, ಅಕಲ = ಹೋಗುವುದಕ್ಕಾಗಿ, ಮೂಂಗಿಲ್ಕುಡಿ ಅಮುದರ್ = "ಮೂಂಗಿಲ್" ಎಂಬ ಕುಲದಲ್ಲಿ ಜನಿಸಿದ "ತಿರುವರಂಗತ್ತಮುದನಾರ್" ಎಂಬುವರ, ಪೊನ್ = ಚಿನ್ನದಂತೆ, ಅಂ = ಸುಂದರವಾದ, ಕಳಲ್‌ಕಮಲಪ್ಪೋದು = ಅಡಿದಾವರೆಗಳ, ಇರಂಡುಂ = ಎರಡನ್ನೂ, ಎನ್ನುಡೈಯ = ನನ್ನ, ಶೆನ್ನಿಕ್ಕು = ತಲೆಗೆ, ಅಣಿಯಾಕ = ಆಭರಣವಾಗಿ, ಶೇರ್ತಿನೇನ್ = (ಒಪ್ಪುವಂತೆ) ಸೇರಿಸಿಕೊಂಡೆನು. (ಹೀಗಿರಲು) ಯಾನ್ = ನಾನು, ತೆನ್‌ಪುಲತ್ತಾರ್ಕು = ದಕ್ಷಿಣದಿಕ್ಕಿನಲ್ಲಿರುವ ಯಮದೂತರಿಗೆ, ಎನ್ನ = ಏತಕ್ಕಾಗಿ, ಕಡವುಡೈಯೇನ್ = ವಶವಾದೇನು ?

ತಾತ್ಪರ್ಯ :- ಹಿಂದೆ ಮಾಡಿದ ಪಾಪಗಳೆಲ್ಲವೂ ಅಳಿದುಹೋಗಲು "ಮೂಂಗಿಲ್" ಎಂಬ ಕುಲದಲ್ಲಿ ಜನಿಸಿದ, "ತಿರುವರಂಗತ್ತಮುದನಾರ್" ಎನ್ನುವರ ಚಿನ್ನದಂತೆ ಅಂದವಾದ ಪಾದಾರವಿಂದಗಳೆರಡನ್ನೂ ನನ್ನ ತಲೆಗೆ ಅಲಂಕಾರವಾಗಿ ಮಾಡಿಕೊಂಡೆನು. ಹೀಗಾದ ಮೇಲೆ ನಾನು ತೆಂಕಲುದಿಕ್ಕಿನಲ್ಲಿ ಇರುವ ಯಮಭಟರಿಗೆ ಹೇಗೆತಾನೆ ಸಿಕ್ಕಿಕೊಂಡೇನು ? (ಶ್ರೀ ರಾಮಾನುಜರ ಭಕ್ತರನ್ನು ಸೇವಿಸಿದವರಿಗೆ ನರಕಭಯವಿಲ್ಲವೆಂದಮೇಲೆ ರಾಮಾನುಜರನ್ನೇ ಆಶ್ರಯಿಸಿದವರಿಗೆ ಅದರ ಸೊಲ್ಲೇ ಇಲ್ಲವೆಂದು ಭಾವ.)

पूर्वात्ताघविनाशनाय विमले जातस्य वंशान्वये ।
श्रीरङ्गामृतनामधेयसुधियो जाम्बूनदाभं शुभम् ।
पादाम्भोजयुगं मदीयशिरसो भूषायितं चेदृशः ।
याम्याशाकृतवासयामपुरुषाकृष्टो भवेयं कथम् ? ।। १

ಮೂಲ : ನಯಂತರುಪೇರಿನ್ಬಮೆಲ್ಲಾಂ ಪಳುದಿನ್ರಿನಣ್ಣಿನರ್‌ಪಾಲ್,
ಶಯಂತರುಕೀರ್ತಿ ಇರಾಮಾನುಶಮುನಿತಾಳಿಣೈಮೇಲ್,
ಉಯರ್‌ನ್ದ ಗುಣತ್ತುತ್ತಿರುವರಂಗತ್ತಮುದೋಂಗು, ಮನ್ಬಾಲ್
ಇಯಂಬುಂ ಕಲಿತ್ತುರೈಯಂದಾದಿವೋದವಿಶೈನೆಂಜಮೇ! ॥ 2

ಭಾವ :- ಮನಮೆ ! ವಿಷಯಂಗಳಾಲ್ ತರಪ್ಪಡುಕಿರ ಚಿತ್ತಿನ್ಬಂಗಳೆಲ್ಲಾಂ ವೀಣಾನವೈ ಎನ್ರು ಅವತ್ತೈ ವಿಟ್ಟುವಿಟ್ಟು ತಮ್ಮೈ ಆಶ್ರಯಿತ್ತವರ್ ವಿಷಯತ್ತಿಲ್ ಸಂಸಾರತ್ತೈ ಜಯಿಪ್ಪಿತ್ತ ಕೀರ್ತಿಯುಡೈಯವರಾನ ರಾಮಾನುಜರ್ ತಿರುವಡಿಕಳಿರಂಡಿ ವಿಷಯಮಾಹ ಒಶಂದ ಗುಣಮುಳ್ಳ ತಿರುವರಂಗತ್ತಮುದನಾರ್ ಅಧಿಕಮಾನ ಭಕ್ತಿಯಾಲೆ ಸಾದಿತ್ತರುಳಿನ ''ಕಲಿತ್ತುರೈ'' ಎನ್ನುಂ ಲಕ್ಷಣಮುಡೈಯ ನೂತ್ತಂದಾದಿಯ್ಯೆ ಓದ್ದುವುದರ್ಕ್ಕಾಹ ಸಮ್ಮತಿಕ್ಕವೇಣುಂ.

ಅರ್ಥ :- ನೆಂಜಮೆ = ಮನಸ್ಸೇ! ನಯಂತರು = ವಿಷಯಸುಖವೆಲ್ಲವನ್ನೂ, ಪಳುದೆನ್ರು = ವ್ಯರ್ಥವೆಂದು (ಅವನ್ನು ಬಿಟ್ಟು) ನಣ್ಣಿನರ್‌ಪಾಲ್ = ತಮ್ಮನ್ನು ಆಶ್ರಯಿಸಿದವರ ವಿಷಯದಲ್ಲಿ, ಶಯಂ = ಜಯವನ್ನು, ತರುಂ = ಉಂಟುಮಾಡುವ, ಕೀರ್ತಿ = ಯಶಸ್ಸುಳ್ಳ, ರಾಮಾನುಜಮುನಿ = ಶ್ರೀರಾಮಾನುಜಾಚಾರ್ಯರ, ತಾಳಿಣೈಮೇಲ್ = ಎರಡು ಅಡಿಗಳ ಮೇಲೆ, ಉಯರ್‌ನ್ದ = ಉತ್ತಮವಾದ, ಗುಣತ್ತು = ಗುಣಗಳುಳ್ಳ, ತಿರುವರಂಗತ್ತಮುದು = ತಿರುವರಂಗತ್ತಮುದನಾರ್ರು, ಓಂಗುಂ = ಅಧಿಕವಾಗುತ್ತಿರುವ, ಅನ್ಬಾಲ್ = ಭಕ್ತಿಯಿಂದ, ಇಯಂಬುಂ = ವಿರಚಿಸಿದ, ಕಲಿತ್ತುರೈ = ''ಕಲಿತ್ತುರೈ'' ಎಂಬ ತಮಿಳಿನ ಛಂದಸ್ಸಿನಲ್ಲಿ, ಅಂದಾದಿ = ಪದ್ಯದ ಕೊನೆಯ ಪದವೇ ಅದರಮುಂದಿನ ಪದ್ಯದ ಆದಿಯಾಗಿ ಬರುವ ಪದ್ಯಗಳನ್ನು, ಓದ = ಓದಲು, ಇಶೈ = ಸಮ್ಮತಿಸು.

ತಾತ್ಪರ್ಯ :- ಓ ಮನಸ್ಸೇ ! ಇಂದ್ರಿಯಗಳಿಂದ ಬರುವ ಸುಖವೆಲ್ಲವೂ ವ್ಯರ್ಥವೆಂದು ಅದನ್ನು ಬಿಟ್ಟು ತಮ್ಮನ್ನು ಆಶ್ರಯಿಸಿದವರ ವಿಷಯದಲ್ಲಿ ಸಂಸಾರ ಜಯವನ್ನು ಉಂಟುಮಾಡುವ ಕೀರ್ತಿಯನ್ನು ಪಡೆದಿರುವ, ಶ್ರೀ ರಾಮಾನುಜರ ಅಡಿದಾವರೆಗಳ ಮೇಲೆ ಅತ್ಯುತ್ತಮ ಗುಣಶಾಲಿಗಳಾದ ''ತಿರುವರಂಗತ್ತಮುದನಾರರು''ಅಮಿತವಾದ ಭಕ್ತಿಯಿಂದ ಹೇಳಿದ, ''ಕಲಿತ್ತುರೈ'' ಎಂಬ ಹೆಸರಿನ, ಕೊನೆಯ ಪದವೇ ಮುಂದಿನ ಪದ್ಯದ ಮೊದಲು ಬರುವ ಪದ್ಯಗಳನ್ನು ಸಂಕೀರ್ತನೆ ಮಾಡಲು ಅನುಮತಿ ಕೊಡು.

चित्तं ! त्वं विषयानुभूतिमखिलां चिन्माधुरीं निष्फलां ।
मत्वात्मानमुपेयिवत्सु भवजेत्रर्हं यशो यो दधे ।
तादृग्लक्ष्मणपादवर्णनपरं श्रीरङ्गपीयूषिणा ।
भक्त्यांतादिशतं कृतं च पठितुं देह्यभ्यनुज्ञां मम ।। २

ಮೂಲ : ಇನಿಯೆನ್ಕುರೈ ನಮಕ್ಕೆಂಬೆರುಮಾನಾರ್ ತಿರುನಾಮತ್ತಾಲ್,
ಮುನಿತಂದ ನೂತ್ತೆಟ್ಟು ಚ್ಚಾವಿತ್ತಿರಿ ಯೆನ್ರು ನುಣ್‌ಪೂರುಳ್ಳೈ,
ಕಲಿತಂದ ಶೆಂಜೊಲ್ಕಲಿತ್ತುರ್ರೈಯಂದಾದಿ ಪಾಡಿತ್ತಂದಾನ್,
ಪುನಿರ್ದ ತಿರುವರಂಗತ್ತಮುದಾಕಿಯ ಪುಣ್ಣಿಯನೇ ॥ 3

ಭಾವ :- ಮಿಕವುಂ ಪರಿಶುದ್ಧರುಂ ಪುಣ್ಯವಾನುಮಾನ ತಿರುವರಂಗತ್ತಮುದನಾರ್ ಸ್ವಾಮಿ ರಾಮಾನುಜರುಡೈಯ ತಿರುನಾಮತ್ತಾಲೆ ''ಕಲಿತ್ತುರ್ರೈ'' ಎನ್ನುಂ ಕಟ್ಟಳೈಯಾಲೆ ಪಣ್ಣಪ್ಪಟ್ಟ, ಅಂತಾದಿರೂಪಮಾನ, ಪಾಶುರಂಗಳ್ಳೈ, ಮುನ್ಬು ಭಗವಾರ್ ಬ್ರಹ್ಮಾವುಕ್ಕು ಉಪದೇಶಿತ್ತದಾನ ಸಾವಿತ್ರಿಯಿರ್ ತಿರಣ್ಡಪೊರುಳ್ ಕಂಡನ ವೆನ್ರು (ಅವೈ) ಸಾದಿತ್ತರುಳಿನ ಪಿರಹು ನಮಕ್ಕು ಎನ್ನತಾಂ ಕುರೈವುವರುಂ ? ಏದುಂವಾರಾದು, ಉಲಕತ್ತಿಲ್ ಕುರೈಯೇ ಇರಾದೆನ್ರು ಕರುತ್ತು.

ಅರ್ಥ :- ಪುನಿದನ್ = ಪರಿಶುದ್ಧರಾದ, ತಿರುಫರಂಗತ್ತಮುದಾಕಿಯ = ತಿರುವರಂಗತ್ತಮುದನಾರೆಂಬ, ಪುಣ್ಣಿಯರ್ = ಧಾರ್ಮಿಕರು, ಮುನಿ = ಭಗವಂತನು, (ಹಿಂದೆ ಬ್ರಹ್ಮನಿಗೆ) ತಂದ = ಉಪದೇಶಿಸಿದ, ನೂತ್ತೆಟ್ಟು = ನೂರೆಂಟುಸಲ ಜಪಿಸುವಂತಹ (108 ಆಗಿರುವ), ಸಾವಿತ್ತಿರಿ ಎನ್ನುಂ = ಗಾಯತ್ರಿಯೆನ್ನುವುದರ, ನುಣ್ = ಸಾರವಾದ, ಪೊರುಳ್ಳೈ = ಅರ್ಥವನ್ನು, ಎಂಬೆರುಮಾನಾರ್ = ರಾಮಾನುಜಾಚಾರ್ಯರ, ತಿರುನಾಮತ್ತಾಲ್ = ಹೆಸರಿನಿಂದಲೇ, ಕಲಿತಂದ = ಶಬ್ದಶಕ್ತಿಯನ್ನು ಕೊಟ್ಟ, ಶೆಂಜೊಲ್ = ಕಿವಿಗೆ ಇಂಪಾಗಿರುವ, ಕಲಿತ್ತುರ್ರೈ = ಕಲಿತ್ತುರ್ರೈಯೆಂಬ ತಮಿಳು ವೃತ್ತದಲ್ಲಿ, ಅಂತಾದಿ = ಕೊನೆಯ ಪದವೇ ಮುಂದಿನ ಪದ್ಯದ ಮೊದಲನೆಯದಾಗಿ, ಪಾಡಿತ್ತಂದಾನ್ = ಕೀರ್ತನೆಮಾಡಿ, (ನಮಗೂ) ಕೊಟ್ಟಿರುವರು. ಇನಿ = ಇನ್ನುಮೇಲೆ, ನಮಕ್ಕು = ನಮಗೆ, ಎರ್‌ಕುರೈ = ಏನುತಾನೇ ಕೊರತೆ ?

ತಾತ್ಪರ್ಯ :- ಬಹಳ ಶುದ್ಧರೂ, ಪುಣ್ಯಶಾಲಿಗಳೂ ಆದ ತಿರುವರಂಗತ್ತ ಮುದನಾರ್‌ರವರು ಭಗವಂತನು ಬ್ರಹ್ಮನಿಗೆ ಉಪದೇಶಿಸಿದ್ದ ಗಾಯತ್ರಿಯ ಸಾರವಾದ ಸೂಕ್ಷ್ಮಾರ್ಥವನ್ನುನಮ್ಮ ಶ್ರೀ ರಾಮಾನುಜರ ಹೆಸರಿನಿಂದಲೇ ಆ ಶಬ್ದ ಶಕ್ತಿಯನ್ನುತೋರಿಸಿ, ಕಿವಿಗೆ ಇಂಪಾಗಿರುವ ತಮಿಳಿನ ''ಕಲಿತ್ತುರ್ರೈ'' ಎಂಬ ವೃತ್ತದಲ್ಲಿ ಅಂತಾದಿ ರೂಪವಾಗಿ ಬರುವಂತಹ ಪದ್ಯಗಳನ್ನು ಹಾಡಿರುವರು. ಈ ರೀತಿ ನಮಗೆ ಲಭಿಸಿದ ಮೇಲೆ ಇನ್ನುಮುಂದೆ ಯಾವ ಕೊರತೆಯೂ ಇರದು.

श्रीरङ्गामृतसूरिराडतिशुचिः पुण्याकृतिस्सञ्जगौ ।
श्रीरामानुजनामतोऽतिरुचिरामष्टोत्तरां तां शतीम् ।
चेतोहारि 'कलित्तुरै' इति युतां वृत्तैरिह द्राविडीं ।
सावित्रीस्वरसार्थसारकलितां नः कोनतेतः परम् ॥ ३

ಮೂಲ : ಶೊಲ್ಲ್ ತೊಕ್ಕೈಕೊಂಡುನದಡಿಪ್ಪೋದುಕ್ಕುತ್ತೊಂಡುಶೆಯ್ಯುಂ,
ನಲ್ಲನ್ಬರೇತ್ತುಮುನ್ನಾಮಮೆಲ್ಲಾಂ ಎನ್ರನ್‌ನಾವಿನುಳ್ಳೇ,
ಅಲ್ಲುಂ ಪಹಲುಂ ಅಮರುಂಪಡಿನಲ್‌ಗು, ಅರುಶಮಯ
ವೆಲ್ಲುಂ ಪರಮ, ಇರಾಮಾನುಶಾ ! ಇದು ಎನ್ವಿಣ್ಣಪ್ಪಮೇ ॥ 4

ಭಾವ :- ಅಪ್ರಾಮಾಣಿಕಂಗಳಾನ ಆರು ಮತಂಗಳ್ಳೆಯುಂ ನಿರಸನಂ ಪಣ್ಣಿ ಪೂಜ್ಯರಾನ ರಾಮಾನುಜರೇ ! ದೇವರೀರ್ ತಿರುವಡಿಮಲರ್ ಕಳಿಲೆ ವಾಚಾಸೇವೆಯ್ಯೆಪ್ಪಣ್ಣುಂ ನಲ್ಲ ಭಕ್ತರ್‌ಕಳ್‌ವಾಕ್ಕುಕಳ್ಳೈಕ್ಕೊಂಡು ಕೊಂಡಾಡುಕಿರ ದೇವರೀರ್ ತಿರುನಾಮಂಗಳೆಲ್ಲಾಂ ಅಡಿಯೇನ್ ನೆಂಜಿಲೇ ಪಹಲಿರುಳುಂ ಪೊರುಂದಿನಿರ್ಕುಂಬಡಿ ಕೃಪೈಪಣ್ಣವೇಣುಂ. ಇದುವೇ ತಾನ್ ಅಡಿಯೇನ್ ಕೇಟ್ಟುಕೊಳ್ಳುವದು.

ಅರ್ಥ :- ಅರುಶಮಯಂ = (ಗಾಣಾಪತ್ಯವೆಂಬ) ಆರು ಮತಗಳನ್ನೂ ಬೌದ್ಧ ಚಾರ್ವಾಕ, ಶಾಕ್ಯ, ಉಲೂಕ್ಯ, ಪಾಶುಪತ, ವೆಲ್ಲುಂ = ಖಂಡಿಸಿ ಓಡಿಸುವ, ಪರಮ = ಪೂಜ್ಯರಾದ, ರಾಮಾನುಶಾ = ರಾಮಾನುಜರೆ ! ಉನದ್-ಅಡಿ-ಪ್ಪೋದುಕ್ಕು = ನಿಮ್ಮ ಚರಣ ಕಮಲಗಳಲ್ಲಿ, ತೊಂಡು ಶ್ಯೆಯ್ಯುಂ = ಮಾತಿನ ಸೇವೆಮಾಡುವ, ನಲ್-ಅನ್ಬರ್ = ಉತ್ತಮ ಭಕ್ತರಾದವರ, ಶೊಲ್ಲ್-ತೊಕ್ಕೈ-ಕೊಂಡು = ಶಬ್ದರಾಶಿಗಳನ್ನೇ ತೆಗೆದುಕೊಂಡು, ಏತ್ತುಂ = ಹೊಗಳುವ, ಉನ್-ನಾಮಂ-ಎಲ್ಲಾಂ = ನಿಮ್ಮ ಹೆಸರುಗಳನ್ನೆಲ್ಲಾ ಎನ್ರನ್-ನಾವಿನ್-ಉಳ್ಳೆ = ನನ್ನ ಮನಸ್ಸಿನಲ್ಲಿ, ಅಲ್ಲುಂ ಪಹಲುಂ = ಇರುಳೂ, ಹಗಲೂ, ಅಮರುಂಪಡಿ = ನೆಲೆಯಾಗಿರುವಂತೆ, ನಲ್ಕು = ದಯವಿಡಬೇಕು. ಇದುವೇ ಎನ್ ವಿಣ್ಣಪ್ಪಂ = ಇದೇ ನಾನು ಮಾಡುವ ಪ್ರಾರ್ಥನೆ.

ತಾತ್ಪರ್ಯ :- ಓ ರಾಮಾನುಜರೇ ! ಪ್ರಮಾಣಗಳಿಗೆ ಕಟ್ಟುಬೀಳದೆ ಕೇವಲ ಯುಕ್ತಿಗಳಿಂದಲೇ ಸ್ಥಾಪಿತವಾಗಿರುವ ಆರು ಮತಗಳನ್ನೂ ಖಂಡಿಸಿ, ಓಡಿಸಿದಿರಿ. ಅದರಿಂದ ಪೂಜ್ಯರೆನಿಸಿದಿರಿ. ನಿಮ್ಮ ಅಡಿದಾವರೆಗಳಲ್ಲಿ ಅಚಲವಾದ ಭಕ್ತಿಯುಳ್ಳವರ ಮಾತುಗಳನ್ನೇ ಉಪಯೋಗಿಸಿಕೊಳ್ಳುವುದರ ಮೂಲಕ ಕೊಂಡಾಡುವ ನಿಮ್ಮ ಹೆಸರುಗಳನ್ನು ನನ್ನ ಮನಸ್ಸಿನಲ್ಲಿ ರಾತ್ರಿ, ಹಗಲೂ, ನೆಲೆಯಾಗಿರುವಂತೆ ಕರುಣಿಸಬೇಕು. ಇದೊಂದೇ ನಾನು ತಮ್ಮಲ್ಲಿ ಕೇಳಿಕೊಳ್ಳುವುದು.

षट्सङ्ख्यान्वितदर्शनोन्मथन ! भो रामानुजाचार्य ! ते ।
पादाम्भोजयुगे सुयोजितवचस्सेवापराणां सताम् ।
आदायोक्तिचयं नुतानि भवतो नामानि नक्तंदिवं ।
चित्ते मे निवसंत्वितिह्यनुगृहाणैषा परा प्रार्थना ।। ४

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

# ಶ್ರೀರಾಮಾನುಜ ನೂತ್ತಂದಾದಿ

ಮೂಲ : ಪೂಮನ್ನುಮಾದು ಪೊರುಂದಿಯಮಾರ್ಬ್ಬ್, ಪುಹಳ್‌ಮಲಿಂದ
ಪಾಮನ್ನುಮಾರನಡಿಪಣಿನ್ದುಯ್‌ನ್ದವರ್, ಪಲ್‌ಕಲೈಯೋರ್
ತಾಮ್ಮನ್ನವಂದ ವಿರಾಮಾನುಶರ್ ಶರಣಾರವಿಂದಂ
ನಾಮ್ಮನ್ನಿವಾಳ, ನೆಂಜೇ ! ಶೊಲ್ಲುವೋಂ ಅವರ್ ನಾಮಂಗಳೇ ॥

ಭಾವ :- ಓ ಮನಮೇ ! ತಾಮರೈಮಲರಿಲ್ ನಿಲೈ ಪೆತ್ತಿರುಂದ ಪೆರಿಯ ಪಿರಾಟ್ಟಿ ಅದೈವಿಟ್ಟು ಅದೈಕ್ಕಾಟ್ಟಿಲುಂ ಅತಿಶಯಮಾನ ಭೋಗ್ಯತ್ತೈಯುಳ್ಳದಾದನಾಲ್ ನಿತ್ಯವಾಸಂ ಪಣ್ಣುಂ ತಿರುಮಾರ್ಬುಡೈಯ ಪೆರಿಯ ಪೆರುಮಾಳ್ ತಿರುಕ್ಕಲ್ಯಾಣ ಗುಣಂಗಳೈ ಪಾಡುಮದಿಲೇ ಊತ್ತಮುಡೈಯ ನಮ್ಮಾಳ್ವಾರ್ ತಿರುವಡಿಕಳೈ ಆಶ್ರಯಿತ್ತು, ಉಜ್ಜೀವಿತ್ತವರುಂ, ನನ್ನಾಹ ಶಾಸ್ತ್ರಂಗಳೈ ಅರಿಂದವರ್‌ಕಳ್ ವಂದು ನಿಲೈಪೆರುಂತನ್ಮೈಯುಳ್ಳವರಾಯ್ ವಂದು ಇವ್ವಿಡಂ ಅವತರಿತ್ತವರುಮಾನ, ಶ್ರೀರಾಮಾನುಜರುಡೈಯ ತಿರುವಡಿಮಲರ್‌ಕಳೈ ನಾಂ ಅವಲಂಬಿತ್ತು, ನನ್ಮೈಯುಡರ್ ವಾಳ್‌ವದರ್ಕು ಅವರುಡೈಯ ತಿರುನಾಮಂಗಳೈಯೇ ಸಂಕೀರ್ತನಂಪಣ್ಣುವೋಂ.

ಅರ್ಥ :- ನೆಂಜೇ = ಓ ಮನಸ್ಸೆ ! ಪೂ-ಮನ್ನುಮಾದು = ತಾವರೆ ಹೂವಿನಲ್ಲಿ ನೆಲೆಯಾಗಿದ್ದ ಮಹಾಲಕ್ಷ್ಮಿಯು, ಪೊರುಂದಿಯ-ಮಾರ್ಬ್ = (ಆ ಹೂವನ್ನು ಬಿಟ್ಟು ಬಂದು) ನೆಲೆಯಾಗಿ ವಾಸಿಸಲು ಕಾರಣವಾದ (ಅತಿಶಯವಾದ ಭೋಗ್ಯತೆಯುಳ್ಳ) ವಕ್ಷಸ್ಥಳವುಳ್ಳ ಶ್ರೀರಂಗನಾಥನಲ್ಲಿ, ಮನ್ನು-ಮಾರ್ರ್ = ದೃಢವಾದ (ಪರಮ) ಭಕ್ತಿಯಿರುವ ನಮ್ಮಾಳ್ವಾರ್‌ರವರ, ಅಡಿ = ಪಾದಗಳನ್ನು, ಪಣಿಂದು = ಆಶ್ರಯಿಸಿ, ಉಯರ್‌ನ್ದವರ್ = ಉಜ್ಜೀವಿತರಾದ, ಪಲ್ = ನಾನಾವಿಧವಾದ, ಕಲೈಯೋರ್‌ತಾಂ = ಶಾಸ್ತ್ರಗಳನ್ನು ಓದಿದ ಮಹಾತ್ಮರು ತಾವಾಗಿಯೇ ಬಂದು ಆಶ್ರಯಿಸಿ, ಮನ್ನ-ವಂದ = ನೆಲೆಗೊಳ್ಳುವಂತೆ ಇಲ್ಲಿ ಬಂದು ಅವತರಿಸಿದ, ಇರಾಮಾನುಶರ್ = ಶ್ರೀರಾಮಾನುಜರ, ಶರಣಾರವಿಂದಂ = ಕಮಲದಂತಿರುವ ಚರಣಗಳನ್ನು, ನಾಂ-ಮನ್ನಿ-ವಾಳ = ನಾವು ಆಶ್ರಯಿಸಿ ಚೆನ್ನಾಗಿ ಬಾಳುವುದಕ್ಕಾಗಿ, ಅವನ್ ನಾಮಂಗಳೇ = ಆ ರಾಮಾನುಜರ ಹೆಸರನ್ನೇ, ಶೊಲ್ಲುವೋಂ = ಹೇಳೋಣ.

ತಾತ್ಪರ್ಯ :- ಎಲೈ ಮನಸ್ಸೇ ! ತಾವರೆ ಹೂವಿನಲ್ಲಿ ವಾಸಮಾಡುವ ಮಹಾಲಕ್ಷ್ಮಿಯು ಅದನ್ನು ಬಿಟ್ಟು ಅದಕ್ಕಿಂತ ಸುಗಂಧವಾದ ಶ್ರೀ ರಂಗನಾಥನ ವಕ್ಷಸ್ಥಳದಲ್ಲಿ ನೆಲೆಸಿದಳು.

ಅಂತಹ ಪರಮಾತ್ಮನ ಕಲ್ಯಾಣ ಗುಣಗಳನ್ನು ಪಾಡಿ, ಆನಂದಿಸುವ ನಮ್ಮಾಳ್ವಾರ್‌ರವರ ಅಡಿದಾವರೆಗಳನ್ನು ಆಶ್ರಯಿಸಿ ಉದ್ಧಾರವಾದವರೂ, ಶಾಸ್ತ್ರಗಳನ್ನೆಲ್ಲಾ ಚೆನ್ನಾಗಿ ಅರಿತು ಪ್ರಸಿದ್ಧರಾಗಿದ್ದವರೆಲ್ಲರೂ ಬಂದು ಆಶ್ರಯಿಸಿ ನೆಲೆಗೊಳ್ಳುವಂತಹ ಮಹಿಮೆಯುಳ್ಳವರಾಗಿ ಬಂದು ಈ ಭೂಮಂಡಲದಲ್ಲಿ ಅವತರಿಸಿದವರೂ, ಆದ ಶ್ರೀರಾಮಾನುಜರ ಪಾದಾರವಿಂದಗಳನ್ನು ಆಶ್ರಯಿಸಿ, ಚೆನ್ನಾಗಿ ಬಾಳುವುದಕ್ಕಾಗಿ ಆ ಮಹಾಮಹಿಮರ ಪಾವನಕರವಾದ ನಾಮಧೇಯಗಳನ್ನು ಕೀರ್ತನೆ ಮಾಡೋಣ.

**पुष्पावासरमानिवासहृदयैकोपासिकार्यात्मज- ।**
**प्राप्यांघ्रिश्रयणावितस्य महतो रामानुजस्याऽन्वहम् ।**
**नानाशास्त्रविदाश्रयार्थकलितोदारावतारस्य तत् ।**
**पादाब्जे समुपेत्य जीवितुमवोचामाद्य नामानि हृत् ॥** १

ಮೂಲ : ಕಳ್ಳಾರ್ ಪೊಳಿಲ್ ತೆನ್ನರಂಗರ್, ಕಮಲಪ್ಪದಂಗಳ್ ನೆಂಜಿಲ್
ಕೊಳ್ಳಾಮನಿಶರ್ರೈನೀಂಗಿ, ಕುರೈಯಲ್ ಪಿರಾನಡಿಕ್ಕೀಳ್
ವಿಳ್ಳಾದವನ್ಬನಿ ರಾಮಾನುಶರ್ ಮಿಕ್ಕಶೀಲಮಲ್ಲಾಲ್
ಉಳ್ಳಾದೆನ್ನೆಂಜು, ಒನ್ರರಿಯೇನೆನಕ್ಕುತ್ತ ಪೇರಿಯಲ್ವೇ ॥ 2

ಭಾವ :- ತೇರ್ ನಿರ್ರೈಂದ ಶೋಲೈಕಳಿರ್ ನಡುವೇ ಇರುಕ್ಕುಂ ಶ್ರೀರಂಗತ್ತಿಲ್ ಎಳುಂದರುಳಿಯಿರುಕ್ಕುಂ ಶ್ರೀರಂಗನಾಥರ್ ತಿರುವಡಿಮಲರ್‌ಕಳೈ ತಮದು ಮನದಿಲ್ ಕೊಳ್ಳಾದ ಜನಂಗಳೈ ವಿಟ್ಟೊಳಿತ್ತು, ತಿರುವರಂಗಮನ್ನರ್ ತಿರುವಡಿಕಳಿಲೆ, ಅನವರತಂ ಭಕ್ತಿ ಪಣ್ಣುಮವರಾನ ರಾಮಾನುಜರುಡ್ಯೆಯ ಶಿರಂದ ಶೀಲಗುಣತ್ತೈತ್ತವಿರ ವೇರೊನ್ರೈಯುಂ ಎನ್ ಮನಂ ನಿನ್ಯೆಯಾದು. ಇಪ್ಪಡಿ ಎನಕ್ಕು ಫಲಿತ್ತದೊರು ಶಿರಂದ ಸ್ವಭಾವತ್ತಿರ್ಕ್ಕು ಯಾದೊರು ಕಾರಣಮುಂ ಅರಿಕಿನ್ರಿಲೇನ್.

ಅರ್ಥ :- ಕಳ್ಳಾರ್ -ಪೊಳಿಲ್ -ತೆನ್ನರಂಗರ್ = ಜೇನು ಸುರಿಯುವ ತೋಟಗಳ ನಡುವೆ ಬೆಳಗುವ ಶ್ರೀರಂಗದಲ್ಲಿ ವಿಜಯಮಾಡಿಸಿರುವ ಶ್ರೀ ರಂಗನಾಥನ, ಕಮಲಪ್ಪದಂಗಳ್ = ಅಡಿದಾವರೆಗಳನ್ನು, ನೆಂಜಿಲ್ = ಮನಸ್ಸಿನಲ್ಲಿ, ಕೊಳ್ಳಾ = ಇಟ್ಟುಕೊಳ್ಳದ, ಮನಿಶರ್ರೈ = ಮನುಜರನ್ನು, ನೀಂಗಿ = ಬಿಟ್ಟು, ಕುರೈಯಲ್ -ಪಿರಾನ್ -ಅಡಿಕ್ಕೀಳ್ -ವಿಳ್ಳಾದ-ಅನ್ಬರ್ = ತಿರುಮಂಗೈಮನ್ನರ ಅಡಿಗಳಲ್ಲಿ ಎಂದಿಗೂ ಕುಗ್ಗದಂತಹ ಭಕ್ತಿಯುಳ್ಳವರಾದ, ಇರಾಮಾನುಶರ್ = ಶ್ರೀ ರಾಮಾನುಜರ, ಮಿಕ್ಕ ಶೀಲ ಮಲ್ಲಾಲ್ = ಉತ್ತಮವಾದ ಶೀಲವೆಂಬ ಗುಣವನ್ನಲ್ಲದೆ, ಒನ್ರು = ಬೇರೆ ಯಾವುದನ್ನೂ, ಎನ್-ನೆಂಜು-ಉಳ್ಳಾದು = ನನ್ನ ಮನಸ್ಸು ನೆನೆಯಲಾರದು. (ಹೀಗೆ) ಎನಕ್ಕುತ್ತ ಪೇರಿಯಲ್ವು = ನನಗೆ ಸಿದ್ಧಿಸಿದ ಉತ್ತಮವಾದ ಈ ಸ್ವಭಾವಕ್ಕೆ, ಒನ್ರರಿಯೇನ್ = ಯಾವುದೊಂದೂ ಕಾರಣವನ್ನೂ ಅರಿಯೆನು.

ತಾತ್ಪರ್ಯ :- ಜೇನು ತುಂಬಿದ ಮರಗಳಿರುವ ತೋಟಗಳಿಂದ ಕಂಗೊಳಿಸುವ ಶ್ರೀರಂಗ ಕ್ಷೇತ್ರದಲ್ಲಿ ಪವಡಿಸಿರುವ ಶ್ರೀರಂಗನಾಥನ ಅಡಿದಾವರೆಗಳನ್ನು ಮನಸ್ಸಿನಲ್ಲೂ ಚಿಂತಿಸದಿರುವ ಜನರನ್ನು ಬಿಟ್ಟುಬಿಟ್ಟು ತಿರುವರಂಗಮನ್ನರವರ ಅಡಿಗಳೆರಡರಲ್ಲೇ ಯಾವಾಗಲೂ ಭಕ್ತಿಯುಳ್ಳವರಾಗಿದ್ದ ಶ್ರೀ ರಾಮಾನುಜರ ಉತ್ತಮವಾದ "ಶೀಲ"ವೆಂಬ ಗುಣವೊಂದನ್ನೇ ನೆನೆಯುತ್ತದೆ ಈ ನನ್ನ ಮನಸ್ಸು, ಮತ್ತಾವುದನ್ನೂ ನೆನೆಯದು. ಈ ರೀತಿ ಸಿದ್ಧಿ ಪಡೆದಿರಲು ಯಾವ ಕಾರಣವನ್ನೂ ನಾನರಿಯೆನು.

माध्वीस्यन्दिमहामहीरुहवृतावाचीलसद्रङ्गराट्- ।
पादाब्जेतरचित्तवृत्तिमनुजान् सन्त्यज्य रामानुजः ।
श्रीमत्कल्यरिसूरिपादकमलद्वन्द्वातिभक्तो बभौ ।
तच्छीलस्मृतिशीलमेव मम हृज्जाने न तत्कारणम् ॥ २

ಮೂಲ : ಪೇರಿಯಲ್ ನೆಂಜೇ ! ಅಡಿಪಣಿನ್ದೇನುನ್ನೈ, ಪ್ಪೇಯ್‌ಪ್ಪಿರವಿ
ಪೂರಿಯರೋಡುಳ್ಳ ಶುತ್ತಂ ಪುಲತ್ತಿ, ಪೊರುವರುಂಶೀರ್
ಆರಿಯರ್ ಶೆಮ್ಮೈಯಿರಾಮಾನುಶಮುನಿಕ್ಕನ್ಬುಶೆಯ್ಯುಂ
ಶೀರಿಯಪೇರುಡೈಯಾರ್, ಅಡಿಕ್ಕೀಳ್ ಎನ್ನೈಚ್ಚೇರ್ತದರ್ಕೇ ॥ 3

ಭಾವ :- ಓ ಮಿಕವುಂ ಗಂಭೀರಮಾನ ಮನಮೆ! ನಾ್ ಉನ್ನೈ ವಣಂಗು ಕಿನ್ರೇನ್, ಏನೆನ್ರಾಲ್, ಆಸುರಪ್ರಕೃತಿಕಳಾಯ್ ಪಿರಂದಿರುಕ್ಕುಂ ನೀಚರಾನ ಜನಂಗಳೋಡು ಅಡಿಯೇನುಕ್ಕು ಇರುಂದ ಸಂಬಂಧತ್ತೈ ಪ್ಪೋಕ್ಕಿನ ಅಸಾಧಾರಣ ಗುಣಂಗಳುಡೆಯವರುಂ, ನಲ್ಲನುಷ್ಠಾನವುಳ್ಳವರುಂ, ತಮ್ಮಡಿಯವರೋಡು ಸರಳಮಾಕವರ್ತಿಕ್ಕುಂ ತನ್ಮೈಯುಳ್ಳವರುಮಾನ, ರಾಮಾನುಜರ್ ತಿರತ್ತಿಲ್ ಭಕ್ತಿ ಇಡುಮದೇ ಪರಮ ಪುರುಷಾರ್ಥಮೆನ್ರಿರುಕ್ಕುಮವರ್‌ಕಳ್ ತಿರುವಡಿಗಳ್ಕೀಳ್ ಎನ್ನೈಕ್ಕೊಂಡು ಪೋಯ್‌ಶೇರ್ತಾಯ್ ಅಲ್ಲವಾ, ಇದುದಾ್ನಾ್ ಉನ್ನೈ ವಣಂಗಮುಖ್ಯಕಾರಣಂ.

ಅರ್ಥ :-ಪೇರಿಯಲ್ = ಬಲುಗಂಭೀರವಾದ, ನೆಂಜೇ = ಮನವೇ! ಉನ್ನೈ = ನಿನ್ನನ್ನು, ಅಡಿಪಣಿಂದೇನ್ = ನಮಸ್ಕರಿಸುತ್ತೇನೆ. (ಏಕೆಂದರೆ) ಪೇಯ್‌ಪ್ಪಿರವಿ = ರಾಕ್ಷಸಸ್ವಭಾವುಳ್ಳವರಾಗಿ ಜನಿಸಿರುವ, ಪೂರಿಯರೋಡುಳ್ಳ = ನೀಚಜನರೊಂದಿಗಿರುವ, ಶುಟ್ರಂ = ಸಂಬಂಧವನ್ನು, ಪುಲರ್ತಿ = ಹೋಗಲಾಡಿಸಿ, ಪೊರುವರುಂ-ಶೀರ್ = ಅಸದೃಶಗುಣುಳ್ಳವರೂ, ಆರಿಯರ್ = ಉತ್ತಮಅನುಷ್ಠಾನವುಳ್ಳವರೂ, ಶೆಮ್ಮೈ = (ಆಶ್ರಿತರಲ್ಲಿ) ಋಜುವಾದವರ್ತನೆಯುಳ್ಳವರೂ (ಆದ) ಇರಾಮಾನ್ನುಜಮುನಿಕ್ಕು = ಶ್ರೀ ರಾಮಾನುಜರ ಸನ್ನಿಧಿಯಲ್ಲಿ, ಅನ್ಬು ಶೆಯ್ಯುಂ ಶೀರಿಯ ಪೇರುಡೈಯಾರ್ ಭಕ್ತಿಯಿಡುವುದೇ ಪರಮಪುರುಷಾರ್ಥವೆಂದು ತಿಳಿದಿದ್ದ ಮಹಾತ್ಮರ, ಅಡಿಕ್ಕೀಳ್ = ಪಾದಗಳಡಿಯಲ್ಲಿ, ಎನ್ನೈ = ನನ್ನನ್ನು, ಶೇರ್ತದರ್ಕೇ = ಸೇರಿಸಿದ್ದಕ್ಕಾಗಿಯೇ

ತಾತ್ಪರ್ಯ :- ಓ ಮನಸ್ಸೇ ! ನೀನು ಬಲು ಗಂಭೀರವಾದ ಮೇಲ್ತನದಲ್ಲಿರುವೆ, ನಿನ್ನನ್ನು ನಮಿಸುತ್ತೇನೆ. ಏತಕ್ಕೆಂದರೆ, ಕೇವಲ ರಾಕ್ಷಸ ಸ್ವಭಾವದ ಜನರ ಸಂಬಂಧವನ್ನು ಬಿಡಿಸಿ, ಎಣೆಯಿಲ್ಲದ ಸದ್ಗುಣಗಳುಳ್ಳವರೂ, ಒಳ್ಳೆಯ ಆಚರಣೆಯುಳ್ಳವರೂ, ಆಶ್ರಯಿಸಿದವರೊಂದಿಗೆ ಅತಿ ಸರಳವಾಗಿ ವರ್ತಿಸುವ ಸ್ವಭಾವವುಳ್ಳವರೂ ಆದ ಶ್ರೀ ರಾಮಾನುಜರಲ್ಲಿ ಭಕ್ತಿಯಿಡುವುದೇ ಪರಮ ಪುರುಷಾರ್ಥವೆಂದು ತಿಳಿದಿದ್ದ ಮಹನೀಯರ ಅಡಿಗಳಲ್ಲಿ ನನ್ನನ್ನು ಕರೆತಂದು ಸೇರಿಸಿರುವೆಯಲ್ಲವೆ ?

हे गंभीरमदीयमानस ! नमस्तुभ्यं कुतोवेति चेत् ।
यद्रक्षः प्रकृतिप्रजाव्यतिकरात् व्यावृत्य मां सद्गुणे ।
शिष्टाचाररते श्रितातिसुलभे योगींद्ररामानुजं ।
भक्तिर्मुक्तिकरीति ये विदधिरे तत्पादसाच्चाकरोः ॥ ३

ಮೂಲ : ಎನ್ನೈ ಬ್ಬುವಿಯಲ್ ಒರು ಪೊರುಳಾಕ್ಕಿ, ಮರುಳ್ ಶುರಂದ
ಮುನ್ನೈ ಪ್ಪಳವಿನ್ನೈವೇರರುತ್ತು, ಊಳಿಮುದಲ್ವನ್ನೈಯೇ
ಪನ್ನಪಣಿತ್ತ ವಿರಾಮಾನುಶರ್ ಪರರ್ ಪಾದಮುಮ್ಎರ್
ಶೆನ್ನಿತ್ತರಿಕ್ಕವೈತ್ತಾರ್, ಎನಕ್ಕೇದುಂ ಶಿದೈವಿಲ್ಲೈಯೇ ॥ 4

ಭಾವ :- ಶ್ರೀಮನ್ನಾರಾಯಣರ್ ತಾನ್ ಕಾಲಂ ಮುದಲಿಯವೈಕಳುಕ್ಕು ಕಾರಣಂ ಎನ್ರು, ವಿವೇಕಿಕಳ್ ಚಿಂತಿಕ್ಕವೇಣುಮೆನ್ರು, ಅರುಳಿನವರುಂ, ಸರ್ವೋತ್ತಮರುಮಾನ ಶ್ರೀರಾಮಾನುಜರ್ ಇಂದ ಭೂಮಿಯಿಲ್ ಅಡಿಯೇನ್ನೈ ಒರು ವಸ್ತುವಾಕ್ಕಿ, ಅಜ್ಞಾನಮಡಿಯಾಕ ವೆಹುಕಾಲತ್ತಿಲಿರುಂದುವಂದ ಪಾಪಂಗಳೈಯೆಲ್ಲಾಂ ವೇರೋಡೆ ನಶಿಪ್ಪಿತ್ತು, ತಮದು ತಿರುವಡಿಕಳೈಯುಂ ಎನ್ಮುಡಿಯಿಲೇ ವೈತ್ತರುಳಿನಾರ್, ಇನಿ ಅಡಿಯೇನುಕ್ಕು ಯಾದೊರುಕುರೈವುಂ ತಟ್ಟವಳಿಯಿಲ್ಲೈ.

ಅರ್ಥ :- ಊಳಿ ಮುದಲ್ವನ್ನೈಯೆ = ಕಾಲಮೊದಲಾದವುಗಳಿಗೆಲ್ಲ ಕಾರಣನಾದ ಪರಮಪುರುಷನನ್ನೇ, ಪನ್ನ = ಅನುಸಂಧಾನ ಮಾಡುವಂತೆ, ಪಣಿತ್ತ = (ಗ್ರಂಥಗಳಿಂದ) ತಿಳಿಸಿದ, ಪರರ್-ಇರಾಮಾನುಶರ್ = ಅತಿ ಶ್ರೇಷ್ಠವಾದ ರಾಮಾನುಜರು, ಬುವಿಯಿಲ್ = ಈ ಲೋಕದಲ್ಲಿ, ಎನ್ನೈ = ನನ್ನನ್ನು. ಒರು ಪೊರುಳ್-ಆಕ್ಕಿ = ಒಂದು ಪದಾರ್ಥವನ್ನಾಗಿ ಮಾಡಿ, ಮರುಳ್-ಶುರಂದ-ಮುನ್ನೈ-ಪ್ಪಳ-ವಿನ್ನೈ-ವೇರ-ರುತ್ತು = ಅಜ್ಞಾನ ಮೂಲವಾಗಿ ಬಹಳ ಹಿಂದಿನಿಂದಲೂ ಸೇರಿ ಬಂದಿರುವ ಪಾಪವೆಲ್ಲವನ್ನೂ ಹೋಗಲಾಡಿಸಿ, ಪಾದಮುಂ = ತನ್ನಡಿಗಳನ್ನೂ, ಎರ್‌ಶೆನ್ನಿ = ನನ್ನ ತಲೆಯ ಮೇಲೆ, ದರಿಕ್ಕವೈತ್ತಾರ್ = (ನಾನು ಬಹಳ ಸಂತೋಷದಿಂದ ಯಾವಾಗಲೂ) ಧರಿಸುವುದಕ್ಕಾಗಿಯೇ ಇಟ್ಟರು. (ಹೀಗಾದಮೇಲೆ) ಎನಕ್ಕು = ನನಗೆ, ಏದುಂ = ಯಾವ ವಿಧವಾದ, ಶಿದೈಯುಂ = ಹಾನಿಯೂ, ಇಲ್ಲೈ = ಇಲ್ಲ.

ತಾತ್ಪರ್ಯ:- ಕಾಲ ಮೊದಲಾದವುಗಳಿಗೆಲ್ಲ ಶ್ರೀಮನ್ನಾರಾಯಣನೇ ಕಾರಣನೆಂಬುದನ್ನು ತಮ್ಮ ಗ್ರಂಥಗಳಿಂದ ಸ್ಪಷ್ಟಪಡಿಸಿ ಸ್ಥಿರಪಡಿಸಿದವರೂ, ಸರ್ವ ಶ್ರೇಷ್ಠರೂ ಆದ, ಶ್ರೀ ರಾಮಾನುಜಾಚಾರ್ಯರು ಈ ಲೋಕದಲ್ಲಿ ನನ್ನನ್ನೂ ಒಂದು ವಸ್ತುವನ್ನಾಗಿ ಮಾಡಿ, ಅಜ್ಞಾನಮೂಲವಾಗಿ ಅನಾದಿಯಾಗಿ ಬಂದಿದ್ದ ನನ್ನ ಪಾಪವೆಲ್ಲವನ್ನೂ ಬೇರುಸಹಿತ ನಾಶಮಾಡಿ, ತಮ್ಮಡಿಗಳನ್ನೂ ನನ್ನ ತಲೆಯಮೇಲೆ ಇರಿಸಿದರು. ಹೀಗಾದಮೇಲೆ ಇನ್ನು ನನಗೆ ಯಾವ ಹಾನಿಯೂ ತಟ್ಟುವುದಿಲ್ಲ.

कालादीनां निदानं हरिरिति कृतिभिः प्राह रामानुजार्यः ।
मामेकं वस्तु कुर्वन्नमतिवशकृतानादिपापान्यलुम्पत् ।
स्वीये पादाम्बुजे मे शिरसि निहितवान् मां च पूतं वितेने ।
तन्नूनं नैव काचिद्विपदिह घटते भाग्यवान् कीदृशोऽहम् ॥ ४

ಮೂಲ : ಎನಕ್ಕುತ್ತ ಶೆಲ್ವಮಿರಾಮಾನುಶನೆನ್ರು, ಇಶೈಯಕಿಲ್ಲಾ
ಮನಕ್ಕುತ್ತಮಾನ್ದರ್ ಪಳಿಕ್ಕಿಲ್‌ಪ್ಪುಹಳ್, ಅವರ್ ಮನ್ನಿಯಶೀರ್
ತನಕ್ಕುತ್ತವನ್ಬರವರ್ ತಿರುನಾಮಂಗಳ್ ಶಾತ್ತು ಮೆನ್ಪಾ
ಎನಕ್ಕುತ್ತಂ ಕಾಣಕಿಲ್ಲಾರ್, ಪತ್ತಿಯೇಯ್‌ನ್ದ ಇಯಲ್ವಿದೆನ್ರೇ ॥ 5

ಭಾವ :- ಅಡಿಯೇನುಕ್ಕು ಕಿಡೈತ್ತ ಸಂಪತ್ತಾನದು ಶ್ರೀ ರಾಮಾನುಜರ್ ತಾನ್ ಎನ್ರು ತೆರಿಂದುಕೊಂಡಿರಾದ ದೋಷಮುಳ್ಳಮನತ್ತೈ ಮನಿದರ್‌ಕಳ್ ದೂಷಿಪ್ಪಾರಾಕಿಲ್ ಅದು ದೂಷಣಮಾಕಾದು. ಭೂಷಣಂ ತಾನ್ ಆಕುಂ. ಅಂದ ಮಹಾನುಡೈಯ ನಿಲೈಯಾನ ನಲ್ಲ ಗುಣಂಗಳುಕ್ಕುತಕುಂದದಾನ ಅನ್ಬುಳ್ಳ ಮಹಾನ್‌ಕಳ್ ಇಂದ ನೂಲ್ ಭಕ್ತಿಯೋಡು ಶೇರ್‌ನ್ದ ಪ್ರಪತ್ತಿಯುಳ್ಳದೆನ್ರು, ತಿರುವುಳ್ಳಂ ಪತ್ತಿ ಅಂದ ರಾಮಾನುಜರುಡೈಯ ತಿರುನಾಮಂಗಳೈ ಚ್ಚೊಲ್ಲುಕಿರ ಇಂದ ಪಾಶುರಮಾಲೈ ಕಳಿಲ್ ದೋಷಂಗಳೈ ಅಡಿಯೋಡು ಕಾಣಮಾಟ್ಟಾರ್ ಕಳ್.

ಅರ್ಥ :- ಎನಕ್ಕು = ನನಗೆ, ಉತ್ತ = ದೊರಕಿದ, ಶೆಲ್ವಂ = ಐಶ್ವರ್ಯವು, ಇರಾಮಾನುಶರ್ ಎನ್ರು = ಶ್ರೀ ರಾಮಾನುಜರೇ ಎಂದು, ಇಶೈಯಕಿಲ್ಲಾ = ನೆನೆಯದಿರುವ, ಮನಕ್ಕುತ್ತ = ಮನದಲ್ಲಿಕೇಡನ್ನು ಬಯಸುವ, ಮಾಂದರ್ = ಮಾನವರು, ಪಳಿಕ್ಕಿಲ್ = ತೆಗಳುವುದಾದರೆ, ಪುಹಳ್ = (ಅದು) ಹೊಗಳಿಕೆಯೇ (ಆಗುವುದು). ಉತ್ತ = ತಕ್ಕುದಾದ, ಅನ್ಬರ್ = ಭಕ್ತರು, ಇದು = ಈ ಸೂಕ್ತಿಯು, ಪತ್ತಿ-ಏಯ್‌ನ್ದ = ಭಕ್ತಿಯೊಡನೆ ಕೂಡಿದ, ಇಯಲ್ವು-ಎನ್ರು = ಪ್ರಪತ್ತಿಯೊಡಗೂಡಿದುದೆಂದು (ತಿಳಿದು), ಅವರ್ = ಅವರ (ರಾಮಾನುಜರ), ತಿರುನಾಮಂಗಳ್ = ಹೆಸರುಗಳನ್ನು ಶಾತ್ತುಂ = ಹೇಳುವ, ಎನ್ = ನನ್ನ, ಪಾವಿನ = ಪಾಶುರುಗಳಲ್ಲಿರುವ, ಕುತ್ತಂ = ದೋಷವನ್ನು, ಕಾಣಗಿಲ್ಲಾರ್ = ನೋಡುವುದಿಲ್ಲ.

ತಾತ್ಪರ್ಯ : - ನನಗೆ ಲಭಿಸಿರುವ ಐಶ್ವರ್ಯ ''ಶ್ರೀ ರಾಮಾನುಜರು'' ಎಂಬುದನ್ನು ಅರಿಯದೆ ಇರುವುದೇ ದೋಷ. ಈ ದೋಷವಿರುವ ಮನಸ್ಸಿನ ಜನರು ದೂಷಿಸುವುದಾದರೆ, ಅದು ಭೂಷಣವೇ ಆದೀತು. ಆ ರಾಮಾನುಜರ ನೆಲೆಯಾದ ಸದ್ಗುಣಗಳಿಗೆ ಒಪ್ಪುವಂತಹ ಭಕ್ತಿಯುಳ್ಳ ಮಹಿಮರು, ಈ ನನ್ನ ಮಾತು ಭಕ್ತಿಯೊಡಗೂಡಿದ ಪ್ರಪತ್ತಿಯುಳ್ಳದ್ದೆಂದು ಆ ರಾಮಾನುಜರ ನಾಮಗಳನ್ನು ಸಂಕೀರ್ತನೆಮಾಡುವ ಈ ನನ್ನ ಪದ್ಯಮಾಲೆಯಲ್ಲಿ ದೋಷ ಲೇಶವನ್ನೂ ನೋಡರು.

**श्रीमद्रामानुजो नस्सकलविधधनं हीत्यविज्ञाय मौढ्यात् ।**
**निन्देयुश्चेन्मनुष्याः कलिमलहृदया स्सातु सत्कीर्तिरिव ।**
**तन्निष्ठोत्कृष्टशीलप्रमुखगुणजुषस्सजना अस्मदुक्तौ ।**
**भक्त्युन्मेषप्रपत्तिक्र मयुतकवितायां न पश्यन्ति दोषान् ॥** ५

ಮೂಲ : ಇಯಲುಂ ಪೊರುಳುಂ ಇಶೈಯತ್ತೊಡುತ್ತು, ಈನ್‌ಕವಿಕಳನ್ಬಾಲ್
ಮಯಲ್ಕೊಂಡು ವಾಳ್‌ತ್ತುಮಿರಾಮಾನು ಶನ್ನೈ, ಮದಿಯಿನ್ಮೈಯಾಲ್
ಪಯಿಲುಂ ಕವಿಕಳಿಲ್ ಪತ್ತಿಯಿಲ್ಲಾದ ಎನ್ಪಾವಿನೆಂಜಾಲ್
ಮುಯಲ್ ಕಿನ್ರನರ್, ಅವರ್ ತರ್ ಪೆರುಂ ಕೀರ್ತಿ ಮೊಳಿನ್ದಿಡವೇ ॥ 6

ಭಾವ :- ಅತಿ ವಿಲಕ್ಷಣರಾನ ಕವಿಕಳ್ ಮಿಕವುಂ ಪ್ರೀತಿಯಾಲೆ ಶಬ್ದಮುಂ ಅರ್ಥಮುಂ ನನ್ರಾಹ ಅಮೈಂದಿರುಕ್ಕುಂಪಡಿ ಕವನಂ ಪಣ್ಣಿ, ಮೋಹಮೋಹಂಕೊಂಡು, ಸ್ತುತಿಕ್ಕುಂಪಡಿ ನಿನ್ರ, ರಾಮಾನುಜರೈ ವರ್ಣಿಕ್ಕಿನ್ರ ಕವಿತೈಕಳಿಲೆ ಭಕ್ತಿಯಿಲ್ಲಾದ ಅಡಿಯೇರ್ ಪಾವಿನೆಂಜಾಲೇ ಅವರುಡೈಯ ಪೆರುಂ ಪ್ರವರ್ತಮಾನದು ಬುದ್ಧಿಯಿರ್ ಕುರೈವೋಡೆ ಕೂಡ ಮಿಕುಂದ ಉತ್ಸಾಹಮಿರುಪ್ಪದೈಯುಂ ವೆಳಿಯಿಡುಕಿರದು.

ಅರ್ಥ :- ಈರ್ ಕವಿಕಳ್ = (ಪ್ರಬಂಧ ನಿರ್ಮಾಣಕ್ಕಾಗಿಯೆ) ಅವತರಿಸಿದಂತಹ ಕವಿಗಳು, ಅನ್ಬಾಲ್ = ಪ್ರೇಮಾತಿಶಯದಿಂದ, ಇಯಲುಂ = ಶಬ್ದವೂ, ಪೊರುಳುಂ = ಅರ್ಥವೂ, ಇಶೈಯ = ಚೆನ್ನಾಗಿ ಒಪ್ಪುವಂತೆ, ಕೊಡುತ್ತು = ಕವನಮಾಡಿ, ಮಯಲ್-ಕೊಂಡು = ವ್ಯಾಮೋಹವು ತಲೆಯೆತ್ತಿ, ವಾಳ್‌ತ್ತುಂ = ಸೋತ್ರಮಾಡುವಂತಿರುವ ಇರಾಮಾನುಶನ್ನೈ = ರಾಮಾನುಜಾಚಾರ್ಯರನ್ನು, ಪಯಿಲುಂ = ವರ್ಣಿಸುವ, ಕವಿ ಕಳಿಲ್ = ಹಾಡುಗಳಲ್ಲಿ, ಪತ್ತಿಯಿಲ್ಲಾದ = ಭಕ್ತಿಯಿಲ್ಲದ, ಎರ್-ಪಾವಿ-ನೆಂಜಾಲ್ = ಎನ್ನ ಪಾಪಮಾಡಿದ ಮನಸ್ಸಿನಿಂದ, ಅವರ್ ತರ್ = ಆ ರಾಮಾನುಜರ, ಪೆರುಂ-ಕೀರ್ತಿ = ಅಪರಿಮಿತ ಯಶಸ್ಸನ್ನು, ಮೊಳಿಂದಿಡವೇ = ಹೇಳುವುದಕ್ಕಾಗಿ, ಮತಿ-ಯಿನ್ಮೈಯಾಲ್ = ಬುದ್ಧಿಯಿಲ್ಲದಿರುವತನದಿಂದ, ಮುಯಲ್‌ಕಿನ್ರನರ್ = ಪ್ರವರ್ತಿಸಿರುವೆನು.

ತಾತ್ಪರ್ಯ :- ಅದ್ಭುತಶಕ್ತಿಯಿರುವ ಕವಿಗಳು ಬಹಳ ಪ್ರೀತಿಯಿಂದ ಶಬ್ದಾರ್ಥಗಳು ಬಹಳ ಚೆನ್ನಾಗಿ ಹೊಂದಿಕೊಂಡು ರಂಜಿಸುವಂತೆ ಕವನಗಳನ್ನು ಮಾಡಿ, ಮುಗ್ಧರಾಗಿ ಹೊಗಳುವ ರೀತಿಯಲ್ಲಿ ಹೊಗಳಿಸಿಕೊಳ್ಳುವ, ಶ್ರೀ ರಾಮಾನುಜರ ಅತಿಶಯವಾದ ಕೀರ್ತಿಯನ್ನು ಹೊಗಳಬೇಕೆಂದು ಮತಿಯಿಲ್ಲದ ನಾನು ತೊಡಗಿರುವೆನು. ಹೊಗಳುವ ಯೋಗ್ಯತೆಯಿಲ್ಲದಿದ್ದರೂ, ಅದರಲ್ಲಿ ತೊಡಗಿರುವುಗಿರುವುದು ನನ್ನ ಬುದ್ಧಿಯಿಲ್ಲದಿರುವಿಕೆಯನ್ನೂ, ಮಿತಿಮೀರಿದ ಉತ್ಸಾಹವನ್ನೂ ವ್ಯಕ್ತಪಡಿಸುವುದು.

प्रीत्यान्यादृशधीविलासकविराट्शब्दार्थरम्योक्तिभिः ।
स्तोतुं योग्य उदारधीरनुपमो रामानुजार्यो मुनिः ।
तत्तादृग्वरकीर्तिवर्णनविधौ चित्तं प्रवृत्तं तद-
प्यंहोलिप्तमहो ! विहीनमतितोत्साहौ ममावेदितौ ॥ ६

ಮೂಲ : ಮೊಳಿಯೈಕ್ಕಡುಕ್ಕುಂ ಪೆರುಂಪುಹರ್ಳಾ, ವಂಜಮುಕ್ಕುರುಮ್ಬಾಂ
ಕುಳಿಯೈಕ್ಕಡುಕ್ಕುಂ ನಂಕೂರತ್ತಾಳ್ವಾರ್ ಶರಣ್ ಕೂಡಿಯರ್ಪಿ,
ಪಳಿಯೈಕ್ಕಡತ್ತು ಮಿರಾಮಾನುಶರ್ ಪುಹಳ್ಪ್ಪಾಡಿ, ಅಲ್ಲಾ
ವಳಿಯೈಕ್ಕಡತ್ತಲ್, ಎನಕ್ಕಿನಿಯಾದುಂ ವರುತ್ತಮನ್ರೇ ॥ 7

ಭಾವ :- ವಾಯಾಲೆ ವರ್ಣಿಕ್ಕ ಮುಡಿಯಾದಪಡಿ ಅಪಾರಮಾನ ಕೀರ್ತಿಯುಳ್ಳವರುಂ, ಮೂನ್ರುವಿಧ ಕುರುಂಬುಕಳೆನ್ರುಂ ಪಡುಕುಳಿಯೈ ಕಡಂದಿರುಪ್ಪವರುಂ, ನಮಕ್ಕು ನಾಥನಾನ ಕೂರತ್ತಾಳ್ವಾನ್ ತಿರುವಡಿಕಳ್ಳೆ ಅಡ್ಯೆಂದ ಪಿನ್ಬು ಸರ್ವ ಪಾಪಂಗಳ್ಳೆಯುಂ ಪೋಕ್ಕುಮವರಾನ ಶ್ರೀರಾಮಾನುಜರ್ಗ ಕಲ್ಯಾಣಗುಣಂಗಳ್ಳೆಪ್ಪಾಡಿ, ಸ್ವರೂಪತ್ತಿರ್ಕು ಒತ್ತುಕ್ಕೊಳ್ಳಾದ ವಳಿಕಳ್ಳೆ ವಿಟ್ಟುಪಿಳಕ್ಕ್ಯೆಯಾನದು, ಇನಿಮೇಲ್ ಅಡಿಯೇನುಕ್ಕು ಕೊಂಚಮುಂ ಕಷ್ಟಮನ್ರು.

ಅರ್ಥ:- ಮೊಳಿಯೈ-ಕ್ಕಡುಕ್ಕುಂ = ಮಾತುಗಳಿಂದ ವರ್ಣಿಸಲಾಗದ, ಪೆರುಂ-ಪುಹರ್ಳಾ = ಹೆಚ್ಚು ಕೀರ್ತಿಯುಳ್ಳವರೂ, ಮುಕ್ಕುರುಂಬಾಂ = ಮೂರುವಿಧ ದೋಷಗಳೆಂಬ, ವಂಚಕ್ಕುಳಿಯೈ = ದೊಡ್ಡ ಹಳ್ಳದಲ್ಲಿ, ಕಡಕ್ಕುಂ = ಬಿದ್ದಿರುವವರೂ (ಆದ) ನಂ = ನಮ್ಮ, ಕೂರತ್ತಾಳ್ವಾರ್ = ಕೂರತ್ತಾಳ್ವಾರವರ, ಶರಣ್ = ಚರಣಗಳನ್ನು, ಕೂಡಿಯರ್ಪಿ = (ನಾನು) ಆಶ್ರಯಿಸಿದಮೇಲೆ, ಪಳಿಯೈಕ್ಕಡತ್ತುಂ = ಸರ್ವ ಪಾಪಗಳನ್ನೂ ಹೋಗಲಾಡಿಸುವ, ಇರಾಮಾನುಶರ್ = ಶ್ರೀ ರಾಮಾನುಜರ, ಪುಹಳ್ = ಸದ್ಗುಣಗಳನ್ನು, ಪಾಡಿ = ಕೀರ್ತನೆ ಮಾಡಿ, ಅಲ್ಲಾ-ವಳಿಯೈ-ಕಡತ್ತಲ್ = (ಸ್ವರೂಪಕ್ಕೆ) ವಿರೋಧಿಯಾದ ದಾರಿಯನ್ನು ಬಿಟ್ಟು ಬಾಳುವುದು, ಎನುಕ್ಕು = ನನಗೆ, ಇನಿ = ಮುಂದೆ, ಯಾದುಂ = ಯಾವ ವಿಧವಾದ, ವರುತ್ತ. ಮನ್ರು = ಪ್ರಯಾಸವೂ ಆಗುವುದಿಲ್ಲ.

ತಾತ್ಪರ್ಯ:- ಬಾಯಿಂದ ವರ್ಣಿಸಲಾಗದಷ್ಟು ಯಶಸ್ಸು ಪಡೆದವರೂ ವಿದ್ಯಾ, ಧನ, ಕುಲ, ಮದಗಳೆಂಬ ದೊಡ್ಡ ಮಡುವಿನಲ್ಲಿ ಬಿದ್ದಿರುವವರೂ ಮತ್ತು ನನಗೆ ನಾಥರೂ ಆಗಿರುವ ಕೂರತ್ತಾಳ್ವಾರ್ರ ಅಡಿಗಳನ್ನು ಆಶ್ರಯಿಸದಮೇಲೆ ಸರ್ವ ಪಾಪಗಳನ್ನೂ ಹೋಗಲಾಡಿಸುವ ಶ್ರೀ ರಾಮಾನುಜರ ಸದ್ಗುಣಗಳನ್ನು ಪಾಡಿ, ಸ್ವರೂಪಕ್ಕೆ ವಿರೋಧವಾದ ಮಾರ್ಗಗಳನ್ನು ಬಿಟ್ಟು ಬಾಳುವುದು ಇನ್ನು ಮೇಲೆ ನನಗೆ ಪ್ರಯಾಸವಾಗುವುದಿಲ್ಲ. (ಮಹಾತ್ಮರ ಆಶ್ರಯವು ಬಾಳನ್ನು ಪ್ರಶಂಸನೀಯವನ್ನಾಗಿ ಮಾಡುವುದು).

अस्मत्कूराधिनेतुस्त्रिविधमदमहागर्तवृत्तस्य सूरेः ।
यस्याशक्यं गुणानां कथनमपि तदीयांघ्रिलाभात् परन्तु ।
संकीर्त्यानेकपापप्रशमनकररामानुजीयान् गुणांश्च ।
व्याधूतात्मस्वरूपाननुगुणसरणे मेप्रयासो न भावी ॥ ೭

ಮೂಲ : ವರುತ್ತಂ ಪುರವಿರುಳ್‌ಮಾತ್ತ, ಎಂಪೊಯ್ ಕೈಪ್ಪಿರ್ರಾ ಮರ್ರೈಯಿರ್
ಕುರುತ್ತಿರ್ ಪೊರುಳ್ಳೈಯುಂ ಶೆನ್ದಮಿಳ್ ತನ್ನೈಯುಂಕೂಟ್ಟಿ, ಒನ್ರ
ತ್ತಿರಿತ್ತನ್ರೆರಿತ್ತತ್ತಿರುವಿಳಕ್ಕೈ ತರ್ತಿರುವುಳ್ಳತ್ತೇ
ಯಿರುತ್ತುಂಪರಮರ್, ಇರಾಮಾನುಶರ್ ಎಮ್ಮಿರೈಯವನೇ ॥ 8

ಭಾವ :- ವರುತ್ತತ್ತೈಯೇ ಉಂಡಾಕ್ಕುಂ ಬಾಹ್ಯ ವಿಷಯಂಗಳ್ಳೈಪ್ಪತ್ತಿನ ಅಜ್ಞಾನವೆನ್ನುಮಿರುಟ್ಟೈನೀಕ್ಕುವದರ್ಕ್ಕು ಅಪ್ಪೋದು ನಮ್ಮುದಲ್ವರ್ ಪೊಯ್ ಕೈಯಾಳ್‌ವಾರ್ ಉಪನಿಷತ್ತುಕ್ಕಳಿಲ್ ಪದಿಂದಿರುಕ್ಕುಂಪೊರುಳ್‌ಕಳ್ಳೈಯುಂ, ಶೆಂದಮಿಳ್‌ಮೊಳಿಕಳ್ಳೈಯುಂ ಒನ್ರಾಕಶೇರ್ತು, ಒರುತಿರಿಯಾಕ್ಕಿ ಏತ್ತಿನ (ಮುದಲ್ ತಿರುವಂದಾದಿಯೆನ್ನುಂ) ತಿರುವಿಳಕ್ಕೈ ತಮ್ಮುಡೈಯ ತಿರುವುಳ್ಳತ್ತಿಲೇ ವೈತ್ತುಕ್ಕೊಂಡವರುಂ, ''ದೇವಮಿವಾಚಾರ್ಯಮುಪಾಸೀತ'' ಎನ್ನುಂ ಶೊಲ್ಲಪ್ಪಟ್ಟ ಪೆರುಮ್ಮೈಯುಡ್ಡೈಯವರುಮಾನ ಶ್ರೀ ರಾಮಾನುಜರ್ ನಮಕ್ಕು ಸ್ವಾಮಿ.

ಅರ್ಥ:- ವರುತ್ತಂ = ದುಃಖವನ್ನು ಕೊಡುವ, ಪುರ-ವಿರುಳ್ = ಬಾಹ್ಯ ವಿಷಯಗಳಿಗೆ ಆಶ್ರಯವಾದ ಅಜ್ಞಾನವೆಂಬ ಕತ್ತಲನ್ನು, ಮಾತ್ತ = ಹೋಗಲಾಡಿಸಲು, ಎಂ-ಪೊಯ್‌ಕ್ಕೈ-ಪ್ಪಿರ್ರಾ = ನಮ್ಮ ಸ್ವಾಮಿ ಪೊಯ್‌ಕ್ಕೈ ಆಳ್‌ವಾರ್ರು, ಅನ್ರು = ಆಗ, ಮರ್ರೈಯಿರ್ = ವೇದಾಂತಗಳಲ್ಲಿ, ಕುರುತ್ತಿರ್ = ಹುದುಗಿರುವ, ಪೊರುಳ್ಳೈಯುಂ = ಸಾರವಾದ ಅರ್ಥಗಳನ್ನೂ, ಶೆಂ-ತಮಿಳ್-ತನ್ನೈಯುಂ = ಅಂದವಾದ ತಮ್ಮ ತಮಿಳು ನುಡಿಗಳನ್ನೂ ಸೇರಿಸಿ, ಒನ್ರ-ತಿರಿತ್ತು = ಒಂದು ಬತ್ತಿಯನ್ನಾಗಿ ಮಾಡಿ, ಎರಿತ್ತ = ಉರಿಸಿದ, ತಿರುವಿಳಕ್ಕೈ = ದೀಪವನ್ನು, ತರ್-ತಿರುವುಳ್ಳತ್ತೆ = ತಮ್ಮ ಮನದಲ್ಲಿ, ಇರುತ್ತುಂ = ನೆಲೆಯಾಗಿಬೆಳಗಿಸಬಲ್ಲ, ಪರಮರ್ = ಪ್ರಭಾವವುಳ್ಳ, ಇರಾಮಾನುಶರ್ = ಶ್ರೀ ರಾಮಾನುಜರು, ಎಂ-ಇರೈಯವರ್ = ನಮ್ಮ ಸ್ವಾಮಿ

ತಾತ್ಪರ್ಯ :- ದುಃಖಗಳನ್ನೇ ತರುವ ಹೊರಗಿನ ವಿಷಯಗಳಿಗೆ ಒಡಲಿನಂತಿರುವ ಅಜ್ಞಾನವೆಂಬ ಕತ್ತಲನ್ನು ಹೋಗಲಾಡಿಸುವುದಕ್ಕಾಗಿಯೇ ಹಿಂದೆ ನಮ್ಮ ಮೊದಲಿಗರಾದ ಸರೋಮುನಿಗಳು ಉಪನಿಷತ್ತುಗಳ ಸಾರಾರ್ಥವನ್ನೂ ಅಂದವಾದ ಮತ್ತು ತಮಿಳಿನ ತಮ್ಮ ನಲ್ನುಡಿಗಳನ್ನೂ ಒಂದಾಗಿ ಒಪ್ಪುವಂತೆ ಸೇರಿಸಿ, ಒಂದು ದೀಪದ ಬತ್ತಿಯನ್ನಾಗಿ ಮಾಡಿ, ಉರಿಸಿದ ದೀಪವನ್ನು ತಮ್ಮ ಮನಸ್ಸಿನಲ್ಲಿ ಮತ್ತಷ್ಟು ಪ್ರಕಾಶಗೊಳಿಸಿ ಎಂದೆಂದಿಗೂ ನಿಂತು ಉರಿಯುವಂತೆ ಮಾಡಬಲ್ಲವರೂ ಮಹಾಮಹಿಮರೂ ಆದ ಶ್ರೀ ರಾಮಾನುಜರು ನಮಗೆ ಸ್ವಾಮಿ.

अत्यन्तश्रमकारिबाह्यविषयाभोगांधकारप्रणा- ।
शार्थं यस्तु सरोमुनिश्श्रुतिशिरस्सारान्वितां द्राविडीम् ।
वर्तीकृत्य पुरा विदीपयति तं चित्ते निधायात्मनः ।
यः प्रादीपयदत्युदारमहिमा रामानुजो नः प्रभुः ॥ ८

ಮೂಲ : ಇರೈವನೈಕ್ಕಾಣುಂ ಇದಯತ್ತಿರುಳ್‌ಕೆಡ, ಜ್ಞಾನಮೆನ್ನುಂ
ನಿರೈವಿಳಕ್ಕೇತ್ತಿಯ ಪೂದತ್ತಿರುವಡಿತ್ತಾಳ್‌ಕಳ್, ನೆಂಜ
ತ್ತುರೈಯವೈತ್ತಾಳುಂ ಇರಾಮಾನುಶರ್ ಪುಹಳ್ ಓದುಂ ನಲ್ಲೋರ್
ಮರೈಯಿನೈಕ್ಕಾತ್ತು, ಇಂದಮಣ್ಣಕತ್ತೇ ಮನ್ನ ವೈಪ್ಪವರೇ ॥ 9

ಭಾವ :- ಸರ್ವೇಶ್ವರನಾದ ಶ್ರೀ ಮನ್ನಾರಾಯಣನ್ನೈ ಕಾಣ್‌ಕೈಕ್ಕು ಸಾಧನಮಾನ ಮನತ್ತಿಲ್ ಇರುಕ್ಕುಂ ಅಜ್ಞಾನಮಾಕಿರ ಇರುಟ್ಟು ನಶಿತ್ತುಪ್ಪೋಂಪಡಿ ಜ್ಞಾನಮೆನ್ನುಂ ನಿರೈಂದ ವಿಳಕ್ಕೈ ವಿಳಂಗಪ್ಪಿತ್ತರುಳಿನ ಪೂದತ್ತಾಳ್ವಾರ್ ತಿರುವಡಿಕಳೈ ತಂತಿರುವುಳ್ಳತ್ತಿಲೆ ನಿಲೈಯಾಕ್ಕಿಕೊಂಡು ಅನುಭವಿಕ್ಕುಂ, ಸ್ವಾಮಿರಾಮಾನುಜರ್ ಗುಣಂಗಳೈ ಓದುಂ ಅಸಾಧಾರಣ ಪುರುಷರ್‌ಕಳ್ ತಾನ್ ಇಂದ ವಿಶಾಲ ಭೂಮಿಯಿಲೇ ವೇದಂಗಳೈ ಸಂರಕ್ಷಿತ್ತು, ಅವ್ವೈಕಳ್ ನಿಲೈಪೆರುಂಪಡಿ ಶೈಯ್ಯವಲ್ಲವರ್‌ಕಳ್.

ಅರ್ಥ :- ಇರೈವನ್ನೈ = ಸರ್ವೇಶ್ವರನನ್ನು, ಕಾಣುಂ = ನೋಡಲು (ಬೇಕಾದ) ಇದಯತ್ತು = ಮನದಲ್ಲಿರುವ, ಇರುಳ್ = ಅಜ್ಞಾನವೆಂಬ ಕತ್ತಲು, ಕೆಡ = ನಶಿಸುವಂತೆ, ಜ್ಞಾನಮೆನ್ನುಂ-ನಿರೈ-ವಿಳಕ್ಕೇತ್ತಿಯ = ಜ್ಞಾನವೆಂಬ ತುಂಬಿದ ದೀಪವನ್ನು ಬೆಳಗಿಸಿದ, ಪೂದ-ತ್ತಿರುವಡಿ-ತಾಳ್‌ಕಳ್ = ಪೂದಾತ್ತಳ್ವಾರ್ರ ಅಡಿದಾವರೆಗಳನ್ನು, ನೆಂಜತ್ತು = ತಮ್ಮ ಮನದಲ್ಲಿ, ಉರೈಯವ್ವೈತ್ತು = ಎಂದೆಂದೂ ಇರುವಂತೆ ಮಾಡಿ, ಆಳುಂ = ಅನುಭವಿಸುವ, ಇರಾಮಾನುಶರ್ = ಶ್ರೀ ರಾಮಾನುಜರ, ಪುಹಳ್ = ಸದ್ಗುಣಗಳನ್ನು, ಓದುಂ = ಬಿಡದೆ ಸ್ಮರಿಸುವ, ನಲ್ಲೋರ್ = ಮಹನೀಯರೇ, ಇಂದ-ಮಣ್-ಅಕತ್ತೆ = ಈ ವಿಶಾಲ ಭೂಮಿಯಲ್ಲಿ, ಮರೈಯಿನ್ನೈ = ವೇದಗಳನ್ನು, ಕಾತ್ತು = ರಕ್ಷಿಸಿ, ಮನ್ನ-ವೈಪ್ಪವರ್ = ನೆಲೆಗೊಳ್ಳುವಂತೆ ಸ್ಥಾಪಿಸತಕ್ಕವರು

ತಾತ್ಪರ್ಯ :- ಸರ್ವೇಶ್ವರನನ್ನು ನೋಡಲು ಇರುವ ಸಾಧನ ಚಿತ್ತ. ಅದು ಶುದ್ಧವಾಗಿರಬೇಕು. ನೋಡಲಾಗದಿರಲು ತಡೆ ಹೃದಯದಲ್ಲಿ ಸೇರಿದ ಅಜ್ಞಾನವೆಂಬ ಕತ್ತಲು. ಅದನ್ನು ನೀಗಿಸಲು ಜ್ಞಾನವೆಂಬ ತುಂಬು ದೀಪವನ್ನು (ಎರಡನೆಯ ತಿರುವಂದಾದಿಯನ್ನು) ಪ್ರಜ್ವಲಗೊಳಿಸಿದ ಪೂದತ್ತಾಳ್ವಾರ್ರರವರ ಅಡಿದಾವರೆಗಳನ್ನು ತಮ್ಮ ಅಂತರಂಗದಲ್ಲಿ ನೆಲೆಗೊಳಿಸಿಕೊಂಡು ಅನುಭವಿಸುವ, ಸ್ವಾಮಿ ರಾಮಾನುಜರ ಒಳ್ಳೆಯ ಗುಣಗಳನ್ನು ಕೊಂಡಾಡುವ, ಅಸಾಧಾರಣ ಪುರುಷರೇ ಈ ವಿಶಾಲ ಭೂ ಮಂಡಲದಲ್ಲಿ ವೇದಗಳನ್ನು ಸಂರಕ್ಷಿಸಿ, ಅವು ಇಲ್ಲಿ ನೆಲೆಗೊಳ್ಳುವಂತೆ ಮಾಡತಕ್ಕವರು.

सर्वेशानसुखावलोकनरिपुस्वान्तास्स्थितांधन्तमो- ।
नाशायैव पुरा प्रकाशितवतो ज्ञानप्रदीपं मुनेः ।।
भूताख्यस्य पदाम्बुजे विधृतवान् रामानुजार्योऽनिशं ।
तत्कल्याणगुणानुभूतिरसिका ये ते त्रयीरक्षकाः ।। ९

ಮೂಲ : ಮನ್ನಿಯಪೇರಿರುಳ್ ಮಾಣ್ಡರ್ಪಿ, ಕೋವಲುಳ್‌ಮಾಮಲರಾಳ್
ತನ್ನೊಡು ಮಾಯನ್ನೈಕ್ಕಂಡಮ್ಮೈಕಾಟ್ಟುಂ, ತಮಿಳ್‌ತ್ತಲೈವನ್
ಪೊನ್ನಡಿಪೋತ್ತುಮಿರಾಮಾನುಶರ್ಕನ್ಬುಪೂಣ್ಡವರ್‌ತಾಳ್
ಶೆನ್ನಿಯಿಲ್ ಶೂಡುಂ, ತಿರುವುಡ್ಡೈಯಾರೆನ್ರುಂಶೀರಿಯರೇ ॥ 10

ಭಾವ :- ನಿಲೈಪೆತ್ತಿರುಂದ ಅಜ್ಞಾನಮೆನ್ನುಮಿರುಟ್ಟಾನದು (ಪೊಯ್‌ಕೈ+ಪೂದತ್ತಾರ್ ಕಳಾಲೆ) ಪೋನಪಿನ್ಬು ತಿರುಕ್ಕೋವಲೂರ್ ಪೆರುಮಾಳೈತ್ತಾಯಾರೋಡುತಾಂ ಸೇವಿತ್ತ (ತಿರುಕ್ಕಂಡೇರ್ ಮುದಲಾನವೈಕಳಾಲೆ) ಶೊನ್ನವರುಂ, ತಮಿಳಿಲ್ ಮುದಲ್ವರುಪೂನಪೇಯಾಳ್ವಾರ್ ಅಳಕಾನತಿರುಕ್ಕಳಲ್‌ಕಳೈ ಕೊಂಡಾಡಿನ ರಾಮಾನುಜರಿಡಂ ಭಕ್ತಿಯುಳ್ಳವರಡಿಕಳೈ ತಮ್ಮುಡಿಕ್ಕು ಒಡಮ್ಬೈಯಾಕ್ಕಿಕ್ಕೊಳ್ಳುಂ ಐಶ್ವರ್ಯಮುಳ್ಳವರ್‌ತಾರ್ ಎಪ್ಪೋದುಂ ಶ್ರೀಮಾರ್‌ಕಳಾವರ್‌ಕಳ್

ಅರ್ಥ :- ಮನ್ನಿಯ = ಸ್ಥಿರವಾಗಿನಿಂತ, ಪೇರಿರುಳ್ = (ಅಜ್ಞಾನವೆಂಬ) ಕಗ್ಗತ್ತಲೆಯು, ಮಾಣ್ಡರ್ಪಿ = ನಿಶ್ಶೇಷವಾಗಿ ಹೋದಮೇಲೆ, ಕೋಮಲುಳ್ = ತಿರುಕ್ಕೋವಲೂರಿನಲ್ಲಿ, ಮಾ-ಮಲರಾಳ್-ತನ್ನೊಡು = ಮಹಾಲಕ್ಷ್ಮೀ ಸಮೇತನಾದ, ಮಾಯನ್ನೈ = ಭಗವಂತನನ್ನು ಕಂಡಮ್ಮೈ = ತಾವು ಕಂಡ ರೀತಿಯನ್ನು, ಕಾಟ್ಟುಂ = ಬೆಳಗುವ, ತಮಿಳ್‌ತ್ತಲೈವರ್ = ತಮಿಳಿಗೆಕ ಮೊದಲಿಗರಾದ ಪೇಯಾಳ್ವಾರ್‌ರವರ, ಪೊನ್ನಡಿ = ಅಂದವಾದ ಪಾದಗಳನ್ನೂ, ಪೋತ್ತುಂ = ವರ್ಣಿಸುವ, ಇರಾಮಾನುಶರ್ಕು = ಶ್ರೀರಾಮಾನುಜರಲ್ಲಿ, ಅನ್ಬು-ಪೂಣ್ಡವರ್ = ಪೂರ್ಣಭಕ್ತಿಯಿಟ್ಟಿರುವವರ, ತಾಳ್ = ಪಾದಗಳನ್ನು, ಶೆನ್ನಿಯಿಲ್ = ತಲೆಯಲ್ಲಿ, ಶೂಡುಂ = ಧರಿಸುವ, ತಿರು-ಉಡ್ಡೈಯಾರ್ = ಸಂಪತ್ತುಳ್ಳವರೇ, ಎನ್ರುಂ = ಎಂದೆಂದಿಗೂ, ಶೀರಿಯರ್ = ಶ್ರೀಮಂತರಾಗುವರು

ತಾತ್ಪರ್ಯ :- ಯಾರಿಂದಲೂ ಹೋಗಲಾಡಿಸಲಾಗದೇ ಇದ್ದ ಅಜ್ಞಾನವೆಂಬ ಅಂಧಕಾರವು ಹೋದಮೇಲೆ, ತಿರುಕ್ಕೋವಲೂರಿನಲ್ಲಿಲಕ್ಷ್ಮೀಸಮೇತನಾದ ಭಗವಂತನನ್ನು ತಾವು ಸಾಕ್ಷಾತ್ಕರಿಸಿದ ರೀತಿಯನ್ನು ("ತಿರುಕ್ಕಂಡೇರ್" ಮೊದಲಾದ ಪ್ರಬಂಧಗಳಿಂದ) ಬೆಳಗಿದವರೂ, ತಮಿಳಿಗೆ ಮೊದಲನೆಯವರೂ ಆದ ಪೇಯಾಳ್‌ವಾರ್‌ರವರ ಅಂದವಾದಡಿಗಳನ್ನು ಕೊಂಡಾಡುವ ಶ್ರೀ ರಾಮಾನುಜರಲ್ಲಿ ಭಕ್ತಿಯುಳ್ಳವರ ಅಡಿಗಳನ್ನು ಯಾರು ತಮ್ಮ ತಲೆಗೆ ಶಿಂಗರಿಸಿಕೊಳ್ಳುವ ಸಿರಿಯನ್ನು ಪಡೆದಿರುವವರೋ, ಅವರು ಎಂದೆಂದಿಗೂ ಸಿರಿವಂತರಾಗಿಯೇ ಬೆಳಗುವರು.

ध्वान्तं प्रोत्सार्य लक्ष्मीधरमनुभवता बर्हिपुर्यां यथावत् ।
व्यक्तं तत्सर्वमुक्तं द्रविडकविमहन्नामभाजा तदीयौ ।
चार्वंघ्री यो नुनाव प्रथयति च महायोगिरामानुजार्यः ।
तस्मिन् ये भक्तियुक्ताः कलितनिजशिरस्तत्पदा नित्यवित्ताः ॥ १०

ಮೂಲ : ಶೀರಿಯನಾನ್ಮರೈಚ್ಚೆಂಪೊರುಳ್, ಶೆಂದಮಿಳಾಲಳಿತ್ತ
ಪಾರಿಯಲುಂ ಪುಹಳ್ಪಾಣ್ಪೆರುಮಾಳ್, ಶರಣಾಂಪದುಮ
ತ್ತಾರಿಯಿಲ್ ಶೆನ್ನಿಯಿರಾಮಾನುರ್ಶ ತನ್ನೈ ಶಾರ್ನ್ದವರ್ತಂ
ಕಾರಿಯವಣ್ಣೈ, ಎನ್ನಾಲ್ ಶೊಲ್ಲೊಣಾದಿಕ್ಕಡಲಿಡತ್ತೇ ॥ 11

ಭಾವ :- ಶಿರಂದ ನಾಲು ವೇದಂಗಳ್ಕಿ ಅಳಕಾನ ಪೊರುಳ್ಕಳೈ ಅಳಕಾನ ತಮಿಳ್ ಪಾಟ್ಟುಕ್ಕಳಾಲ್ ಅರುಳಿಚ್ಚೆಯ್ದವರುಂ, ಇವ್ವುಲಕುಂ ಮುಳುದುಂ ಪರವಿನ ಕೀರ್ತಿಯುಡೈಯವರುಮಾನ, ತಿರುಪ್ಪಾಣಾಳ್ವಾರ್ ತಿರುವಡಿಮಲರ್ಕಳಾಲೆ ಅಲಂಕರಿಕ್ಕಪಟ್ಟ ತಿರುಮುಡಿಯುಡೈಯರಾನ ರಾಮಾನುಜರೈ ಅಡೈಂದಿರುಕ್ಕುಮವರ್ ಕಳ್ಕಿ ವಿಲಕ್ಷಣಮಾನ ಅನುಷ್ಠಾನಮಾನದು ಕಡಲ್ಶೂಳ್ನ್ದ ವಿಡಮಾನ ಇಂದ ಮಾನಿಡತ್ತಿಲ್ ಇಪ್ಪಡಿಪ್ಪಟ್ಟದೆನ್ರು ಅಡಿಯೇನಾಲ್ ಶೊಲ್ಲಮುಡಿಯಾದು.

ಅರ್ಥ :- ಶೀರಿಯ = ಮಹಾಮಹಿಮೆಯುಳ್ಳ, ನಾನ್ಮರೈ = ನಾಲ್ಕು ವೇದಗಳಲ್ಲಿರುವ ಶೆಂಪೊರುಳ್ = ರಮ್ಯವಾದ ಅರ್ಥಗಳನ್ನು, ಶೆಂ-ದಮಿಳಾಲ್ = ಸೊಗಸಾದ ತಮಿಳು ಪದ್ಯಗಳಿಂದ, ಅಳಿತ್ತ = ಮಾಡಿದವರೂ, ಪಾರ್ = ಭೂಮಿಯಲ್ಲಿ, ಇಯಲುಂ = ನೆಲೆಯಾದ, ಪುಕಳ್ = ಕೀರ್ತಿಯುಳ್ಳ, ಪಾಣ್ಪೆರುಮಾಳ್ = ತಿರುಪ್ಪಾಣಾಳ್ವಾರರ, ಶರಣ್ = ಕಾಲುಗಳೆಂಬ, ಪದುಮಂ = ತಾವರೆ ಹೂವಿನಿಂದ, ತಾರಿಯಲ್ = ಅಲಂಕರಿಸಲ್ಪಟ್ಟ, ಶೆನ್ನಿ = ತಲೆಯುಳ್ಳವರಾದ, ಇರಾಮಾನುರ್ಶ ತನ್ನೈ = ಶ್ರೀ ರಾಮಾನುಜರನ್ನು, ಶಾರ್ನ್ದವರ್ ತಂ = ಆಶ್ರಯಿಸಿದವರ, ಕಾರಿಯ-ವಣ್ಣೈ = ಅನುಷ್ಠಾನದ ಪ್ರಭಾವವು, ಇಕ್ಕಡಲಿಡತ್ತು = ಸಮುದ್ರಪರಿವೃತವಾದ ಈ ಭೂಮಿಯಲ್ಲಿ, ಎನ್ನಾಲ್ = ನನ್ನಿಂದ, ಶೊಲ್ಲೊಣಾದು = ಹೇಳಲು ಆಗುವುದಿಲ್ಲ.

ತಾತ್ಪರ್ಯ :- ಮಹಾ ಮಹಿಮೆಯುಳ್ಳ ನಾಲ್ಕು ವೇದಗಳಲ್ಲಿರುವ ರಮ್ಯವಾದ ಅರ್ಥಗಳನ್ನು ಮನೋಹರವಾದ ತಮಿಳಿನ ಪದ್ಯಗಳಿಂದ ವಿರಚಿಸಿದವರೂ, ಈ ಲೋಕದಲ್ಲೆಲ್ಲಾ ಹರಡಿದ ಯಶಸ್ಸುಳ್ಳವರೂ ಆದ ತಿರುಪ್ಪಾಣಾಳ್ವಾರ್‌ರವರ ಅಡಿದಾವರೆಗಳಿಂದ ಅಲಂಕೃತವಾದ ತಲೆಯುಳ್ಳ ಶ್ರೀ ರಾಮಾನುಜರನ್ನು ಆಶ್ರಯಿಸಿದ ಮಹಾತ್ಮರ ಆಚರಣೆಯು ಅತಿ ವಿಲಕ್ಷಣವಾದುದು. ಸಮುದ್ರದವರೆಗಿನ ಈ ಭೂತಲದಲ್ಲಿ ಅವರ ಪ್ರಭಾವವು ಇಂತಹುದೆಂದು ನನ್ನಿಂದ ಹೇಳಲೂ ಆಗುವುದಿಲ್ಲ.

सारासारविवेकभासुरचतुर्वेदार्थसारार्थिकाम् ।
चारुद्राविडसूक्तिमाह च धराव्याप्तं यदीयं यशः ।
तत्तादृङ्मुनिवाहनांघ्रिकमलापीडं च रामानुजम् ।
संश्रित्योल्लसतां अनुष्ठितिरसावित्यक्षमा शंसितुम् ॥ ११

ಮೂಲ : ಇಡಂಕೊಂಡ ಕೀರ್ತಿಮಳಿಶೈಕ್ಕಿರರ್ವ, ಇಣೈಯಡಿಪ್ಪೋದು
ಅಡಂಗುಮಿದಯತ್ತಿ ರಾಮಾನುಶರ್ ಅಂಪೊರ್ಪ್ಪಾದಮೆನ್ರುಂ
ಕಡಂಕೊಂಡಿರೈಂಜುಂ ತಿರುಮುನಿವರ್ಕನ್ರಿಕ್ಕಾದಲ್‌ಶೆಯ್ಯಾ
ತ್ತಿಡಂಕೊಂಡ ಜ್ಞಾನಿಯರ್ಕ್ಕೇ, ಅಡಿಯೇನನ್ಬುಶೈವದುವೇ ॥ 12

ಭಾವ :- ಎಲ್ಲಾ ವಿಡತ್ತಿಲುಂ ಪ್ಯಾಪಿತ್ತ ಕೀರ್ತಿಯುಳ್ಳ ತಿರುಮಳಶೈಯಾಳ್‌ವಾರ್ ಇರಂಡು ತಿರುವಡಿಮಲರ್‌ಕಳುಂ ಕುಡಿಪೆತ್ತ ತಿರುವುಳ್ಳಮುಳ್ಳವರಾನ ರಾಮಾನುಜರುಡ್ಡೈಯ ಮಿಕವುಂ ಅಳಗಿಯಕಳಿಲ್ ಕಳ್ಳೈ ಎಲ್ಲಾತ್ತಿಲುಂ ಇದುವೇ ನಮುಕ್ಕು ಸ್ವರೂಪಮೆನ್ರುಮರಿವೋಡೆ ಅಡ್ಯೈದಲಾಕಿರ ಶೆಲ್ವಮುಳ್ಳ ಮಹಾಕಳ್ ಇಡಂ ತವಿರ ಮತ್ತವರ್‌ಕಳಿಡಂ ಭಕ್ತಿಯ್ಯೆ ಪಣ್ಣಾದ, ಮಿಕ್ಕ ಉರುದಿಯೋಡು ಅರಿವುತ್ತವರ್‌ಕಳುಕ್ಕುತ್ತಾ ಅಡಿಯೇನ್ ಭಕ್ತನಾಯಿರುಪ್ಪೇನ್.

ಅರ್ಥ :- ಇಡಂ = ಭೂಮಿಯಲ್ಲೆಲ್ಲಾ, ಕೊಂಡ = ಆವರಿಸಿಕೊಂಡ, ಕೀರ್ತಿ = ಯಶಸ್ಸುಳ್ಳ ಮಳಿಶೈಕ್ಕಿರರ್ವ = ತಿರುಮಳಿಶೈ ಆಳ್ವಾರ್ರವರ, ಇಣೈ-ಅಡಿಪ್ಪೋದು = ಒಂದಕ್ಕೊಂದು ಒಪ್ಪುವ ಪಾದಪದ್ಮಗಳು, ಅಡಂಗುಂ = ಅಡಕಗೊಂಡಿರುವ, ಇದಯತ್ತು = ಮನಸ್ಸುಳ್ಳ, ಇರಾಮಾನುಶರ್ = ಶ್ರೀ ರಾಮಾನುಜರ, ಅಂ-ಪೊರ್‌ಪಾದಂ = ಅತಿ ವಿಲಕ್ಷಣವಾಗಿಯೂ, ಅಂದವಾಗಿಯೂ ಇರುವ ಪಾದಗಳನ್ನು, ಎನ್ರುಂ = ಸರ್ವಕಾಲದಲ್ಲೂ, ಕಡಂ = ಇದುವೇ ಪಡೆಯಬೇಕಾದುದು (ಎಂದು) ಕೊಂಡು = ಚೆನ್ನಾಗಿ ಅರಿತು, ಇರೈಂಜುಂ = ಆಶ್ರಯಿಸಬೇಕೆಂಬ, ತಿರು = ಸಿರಿಯುಳ್ಳ, ಮುನಿವರ್ಕನ್ರಿ = ಸದಾ ಮನನಮಾಡುವ ಮಹಾತ್ಮರಿಗೇ ಹೊರತು (ಬೇರೆಯವರಿಗೆ) ಕಾದಲ್-ಶೆಯ್ಯಾ = ಭಕ್ತಿ ಮಾಡದಿರುವ, ತಿಡಂ = ದೃಢವಾದ, ಕೊಂಡ = ಭಾವನೆಯಿರುವ, ಜ್ಞಾನಿಯರ್ಕ್ಕೇ = ತಿಳಿದವರಿಗೇನೆ, ಅಡಿಯೇನ್ = ನಾನು, ಅನ್ಬು-ಶೈವದು = ಭಕ್ತನಾಗಿರುವುದು.

ತಾತ್ಪರ್ಯ :- ಎಲ್ಲೆಲ್ಲೂ ವ್ಯಾಪಿಸಿದ ಕೀರ್ತಿವಂತರಾದ ತಿರುಮಳಿಶೈ ಆಳ್ವಾರ್ರವರ ಪರಮಭೋಗ್ಯವಾದ ಅಡಿದಾವರೆಗಳನ್ನು ತಮ್ಮ ಹೃದಯದಲ್ಲಿ ಅಳವಡಿಸಿಕೊಂಡ ಶ್ರೀ ರಾಮಾನುಜರ ಅತಿ ಸುಂದರವಾಗಿಯೂ ಸ್ಪೃಹಣೀಯವಾಗಿಯೂ ಇರುವ ಪಾದಗಳನ್ನು ಪ್ರಾಪ್ಯವು ಇದೇ ಎಂದು ಯಾವಾಗಲೂ ಚಿಂತಿಸಿ, ಬಿಡದೆ ಪಡೆಯುವುದೇ ಐಶ್ವರ್ಯವೆಂದು ದೃಢವಾಗಿರುವ ಮಹನೀಯರಲ್ಲಿ ಹೊರತು ಮತ್ತವರಲ್ಲಿ ಭಕ್ತಿಯಿಡದಂತೆ. ದೃಢಮನಸ್ಸಿನಿಂದಿರುವ ಜ್ಞಾನಿಗಳಿಗೇ ನಾನು ಭಕ್ತನಾಗಿರುವೆನು.

सर्वोद्देशविसारिकीर्तिमहित श्रीभक्तिसाराभिध- ।
श्रीयोगीन्द्रपदांबुजाश्रित मनोरामानुजस्यान्वहम् ।
युक्तं रम्यपदाब्जसंश्रयणमित्युद्वेलभक्त्यंचिताः ।
नान्यत्रेति दृढं विदन्ति सुधियस्तेष्वेव भक्तोऽस्म्यहम् ॥ १२

ಮೂಲ : ಶೆಯ್ಯುಂ ಪಶುಂ ತುಳಬತ್ತೊಳಿಲ್ ಮಾಲೈಯುಂ, ಶೆಂದಮಿಳಿಲ್
ಪೆಯ್ಯುಂ ಮರೈತ್ತಮಿಳ್‌ಮಾಲೈಯುಂ, ಪೇರಾದ ಶೀರರಂಗ
ತ್ತೈಯ್ಯ‌ ಕಳರ್‌ಕಣಿಯುಂ ಪರನ್ ತಾಳನ್ರಿಯಾದರಿಯಾ
ಮೆಯ್ಯ‌, ಇರಾಮಾನುಶ‌ ಶರಣೇಗತಿ ವೇರೆನುಕ್ಕೇ ॥ 13

ಭಾವ :- ತೊಂಡರಡಿಪ್ಪೊಡಿಯಾಳ್ವಾರಾಲೆ ಶೆಯ್ಯಪ್ಪಟ್ಟ ಪಶುವ್ಯೈಯುಳ್ಳ ತಿರುತ್ತುಳಾಯಾಲೆ ವಕುಪ್ಪುಂಡಾಕ ಶಮೈತ್ತ ಮಾಲೈಯುಂ, ತಮಿಳಿಲ್‌ಶೆಯ್ಯಪ್ಪಟ್ಟಿರುಕ್ಕುಂ ಮಾಲೈಯುಂ ಶ್ರೀರಂಗನಾಥ‌ ತಿರುವಡಿಕಳಿಲೆ ಶಾತ್ತಿನ ತೊಂಡರಡಿಪ್ಪೊಡಿಕಳ್ ತಿರುವಡಿಮಲರ್‌ಕಳ್ ತವಿರ ವೇರೊನ್ನೈಯುಂ ವೇಂಡಾದವರುಂ, ಸತ್ಯಶೀಲರುಮಾನ ರಾಮಾನುಜ‌ ತಿರುವಡಿಗಳೇ ಎನುಕ್ಕು ಅತಿ ವಿಲಕ್ಷಣಮಾಯುಂ, ಅವಶ್ಯಂ ಅಡ್ಯೆಯಕ್ಕೂಡಿಯದಾಯುಂ ಇರುಕ್ಕಿರ ವಸ್ತು.

ಅರ್ಥ :- ಶೆಯ್ಯುಂ = ನಿರ್ಮಿಸಲ್ಪಟ್ಟ ಪಶುಂ-ತುಳಬಂ = ಬಾಡದೆ ಕಂಪನ್ನೀಯುವ ತುಳಿಸಿಯ, ತೊಳಿಲ್ = ಆಕರ್ಷಣೀಯವಾಗಿ ಕಟ್ಟಿದ, ಮಾಲೈಯುಂ = ಮಾಲಿಕೆಗಳನ್ನೂ, ಶೆಂದಮಿಳಿಲ್ = ಸೊಗಸಾದ ತಮಿಳಿನಲ್ಲಿ, ಪೆಯ್ಯುಂ = ಉಂಟಾದ, ಮರೈ-ತ್ತಮಿಳ್ ಮಾಲೈಯುಂ = ವೇದಕ್ಕೆ ಸಮನಾದ ತಮಿಳು ನುಡಿಯ ಮಾಲೆಯನ್ನೂ, ಪೇರ್-ಆನ-ಶೀರ್-ಅರಂಗತ್ತೈಯ್ಯ‌ = ಹೋಗಲಾಡಿಸಲಾಗದ, ಒಳ್ಳೆಯ ಗುಣಗಳುಳ್ಳ ಶ್ರೀರಂಗನಾಥನ, ಕಳರ್ಕು = ಪಾದಗಳಿಗೆ, ಅಣಿಯುಂ = ಅಲಂಕರಿಸಿದ ಪರ‌ = ಶ್ರೇಷ್ಠರಾದ (ತೊಂಡರಡಿಪ್ಪೊಡಿಯಾಳ್ವಾರ್), ತಾಳ್-ಆದರಿಯಾ = ಅಡಿಗಳ ಹೊರತು ಮತ್ತಾವುದನ್ನೂ ಬಯಸದ, ಮೆಯ್ಯ‌ = ಸತ್ಯಶೀಲರಾದ, ಇರಾಮಾನುಶ‌ = ಶ್ರೀರಾಮಾನುಜರ, ಶರಣೇ = ಚರಣಗಳೇ, ಎನುಕ್ಕು = ನನಗೆ, ವೇರು-ಗತಿ = ವಿಲಕ್ಷಣವಾದ, ಪಡೆಯಲೇಬೇಕಾದ ವಸ್ತು.

ತಾತ್ಪರ್ಯ :- ತೊಂಡರಡಿಪ್ಪೊಡಿಯಾಳ್ವಾರ್ರು ತಮ್ಮ ತೋಟದಲ್ಲಿ ತಾವೇ ಬೆಳೆದು, ಬಾಡದಿರುವ, ಕಂಪಿನ, ತುಲಸಿಯಿಂದ ಕಟ್ಟಿದ ಹಾರವನ್ನೂ ಸುಂದರವಾಗಿಯೂ ವೇದಕ್ಕೆ ಸಮನಾದ ತಮಿಳಿನ ಪದ್ಯಮಾಲೆಯನ್ನೂ ಕಲ್ಯಾಣಗುಣಗಳಿಗೆ ನಿಧಿಯಾದ ಶ್ರೀರಂಗನಾಥನ ಪಾದಗಳಲ್ಲಿ ಸಮರ್ಪಿಸಿ, ಪರಮಶ್ರೇಷ್ಠರೆನಿಸಿದ ಆಳ್ವಾರ್ರವರ ಪಾದಗಳನ್ನು ಹೊರತು ಮತ್ತಾವುದನ್ನೂ ಬೇಡದ ಸತ್ಯಶೀಲರಾದ ರಾಮಾನುಜರ ಅಡಿದಾವರೆಗಳೇ ನನಗೆ ಅತಿ ವಿಲಕ್ಷಣವಾದ ಪರಮಪ್ರಾಪ್ಯವಾದ ವಸ್ತು.

**आत्मारामरुहातिरम्यतुलसीमाला स्त्रयींसंनिभाः ।**
**चारुद्राविडवाक्स्रजस्समयुनग्रङ्गेशपादांबुजे ।**
**ताहग्भक्तपदाब्जरेणुचरणानन्यप्रिय स्सत्यधीः ।**
**श्रीरामानुजएव तत्पदसरोजं मे गति र्नान्यथा ॥** १३

ಮೂಲ : ಕದಿಕ್ಕುಪ್ಪದರಿ, ವೆಂಕಾನಮುಂ ಕಲ್ಲುಂ ಕಡಲುಮೆಲ್ಲಾಂ
ಕೊದಿಕ್ಕತ್ತವಂ ಶೆಯ್ಯುಂ ಕೊಳ್ಹೈಯತ್ತೇಱ್, ಕೊಲ್ಲಿಕಾವಲನ್ಶೊಲ್
ಪದಿಕ್ಕುಂ ಕಲೈಕ್ಕವಿಪಾಡುಂ ಪೆರಿಯವರ್ ಪಾದಂಗಳೇ
ತುದಿಕ್ಕುಂ ಪರಮಱ್, ಇರಾಮಾನುಶಱ್ ಎನ್ನೈಚ್ಚೋರ್ವಿಲನೇ ॥ 14

ಭಾವ :- ಕುಲಶೇಖರಾಳ್ವಾರ್ ಅರುಳಿಚ್ಚೆಯ್ದು, ಶಾಸ್ತ್ರಚ್ಚೊಲ್‌ಕಳೈ ತಮ್ಮುಡೈಯ ಸೂಕ್ತಿಕಳಿಲೆ ಶೇರ್ತು ನಿರ್ಮಿತ್ತ ಪ್ರಬಂಧಂಗಳೈ (ಪೆರುಮಾಳ್‌ತಿರುಮೊಳಿ) ಪಾಡವಲ್ಲ ಮಹಾಱ್ಕಳ್‌ತಿರುತ್ತಾಳ್‌ಕಳೈಯೇ ಸ್ತುತಿಕ್ಕುಮವರಾಯುಂ, ಪರಮ ಶ್ರೇಷ್ಠರಾಯುಂ, ಇರುಕ್ಕಿರ ರಾಮಾನುಶರ್ ಅಡಿಯೇನ್ನೈವಿಟ್ಟುಪಿರಿಂದಿರುಕ್ಕಿರಾರಿಲ್ಲೈ. ಆದಲಾಲ್ ಅಡೈಯವೇಂಡಿಯದರ್ಕಾಕ ಪ್ಪದರಿ, ಮಿಕವುಂತಪಿತ್ತಿರುಕ್ಕುಂ ಕಾಡುಕಳಿಲುಂ, ಮಲೈಕಳಿಲುಂ, ಕಡಲ್‌ಕಳಿಲುಂ, ನಿನ್ರುಉಡಂಬೆಲ್ಲಾಂಕೊದಿಕ್ಕುಂ ಪಡಿ ತಪಸ್ಸೈಶೆಯ್ಯವೇಣುಮೆಂಗಿರ ಎಣ್ಣತ್ತೈವಿಟ್ಟುವಿಟ್ಟೇಱ್

**ಅರ್ಥ** :- ಕೊಲ್ಲಿ-ಕಾವಲ್‌ಱ್ = ಕುಲಶೇಖರಾಳ್ವಾರಿಂದ, (ರಚಿಸಲ್ಪಟ್ಟ) ಕಲೈ = ಶಾಸ್ತ್ರಗಳ, ಶೊಲ್ = ವಚನಗಳು, ಪದಿಕ್ಕುಂ = ಹುದುಗಿರುವ, ಕವಿ = ಪದ್ಯಗಳನ್ನೂ, ಪಾಡುಂ = ಗಾನಮಾಡುವ, ಪೆರಿಯವರ್ = ಮಹಾತ್ಮರ, ಪಾದಂಗಳೇ = ಅಡಿಗಳನ್ನೇ, ತುದಿಕ್ಕುಂ = ಸ್ತೋತ್ರಮಾಡುವ, ಪರಮಱ್ = ಅತ್ಯುತ್ತಮರಾದ, ಇರಾಮಾನುಶಱ್ = ಶ್ರೀರಾಮಾನುಜರು, ಎನ್ನೈ = ನನ್ನನ್ನು, ಶೋರ್ವಿಲ್‌ಱ್ = ಬಿಟ್ಟಿರುವುದಿಲ್ಲ (ಆದುದರಿಂದ) ಕದಿಕ್ಕು= ಪಡೆಯಬೇಕಾದುದನ್ನು ಹೊಂದಲು, ಪದರಿ = ಕಾತುರಗೊಂಡು, ವೆಂಕಾನಮುಂ = ತಾಪಕರವಾದ ಕಾಡುಗಳಲ್ಲೂ, ಕಲ್ಲುಂ = ಪರತ್ವಗಳಲ್ಲೂ, ಕಡಲುಂ = ಸಮುದ್ರಗಳಲ್ಲೂ, (ನಿಂತು) ಎಲ್ಲಾಂಕೊದಿಕ್ಕ= ದೇಹವೆಲ್ಲಾಕುದಿಯುವಂತೆ, ತವಂ = ತಪಸ್ಸನ್ನೂ, ಶೆಯ್ಯುಂ = ಮಾಡುವ, ಕೊಳ್ಹೈ = ಸ್ವಭಾವವನ್ನು, ಅತ್ತೇಱ್ = ಬಿಟ್ಟೆನು.

ತಾತ್ಪರ್ಯ :- ಶ್ರೀಕುಲಶೇಖರರು ರಚಿಸಿದ ಪ್ರಬಂಧವು ಶಾಸ್ತ್ರಾನುವಾದ ನಿಬಂಧನದಂತಿದೆ. ಅದನ್ನು ಭಕ್ತಿಯಿಂದ ಪಾಡುವ ಮಹನೀಯರ ಅಡಿದಾವರೆಗಳನ್ನು ಸ್ತುತಿಸುವ, ಶ್ರೇಷ್ಠರಾದ ಶ್ರೀರಾಮಾನುಜರು ನನ್ನನ್ನು ಬಿಟ್ಟಿರುವುದಿಲ್ಲ. ಆದುದರಿಂದ ಪಡೆಯಬೇಕಾದುದನ್ನು ಪಡೆಯಲುಕಾತರಿಸಿ, ತಪಿಸುವ ಕಾಡು, ಬೆಟ್ಟ, ಸಮುದ್ರಗಳಲ್ಲಿ ನಿಂತು ಉಗ್ರತಪಸ್ಸುಮಾಡಿ, ದೇಹ ದಹಿಸಿಹೋಗುವಂತೆ ಯತ್ನಿಸುವುದಿಲ್ಲ.

**रम्या श्श्रीकुलशेखरास्यगळिता श्शास्त्रोक्तितुल्या गिरः ।**
**तास्स्तुन्वन्ति च ये महामतियुता स्तांस्तौति रामानुजः ।**
**श्रीमान् मां स न मुंचतीति विदितः प्राप्यार्थमुत्कण्ठितः ।**
**तप्त्वारण्यनगार्णवेषु च तपो दग्धुं तनुं नायते ॥** १४

ಮೂಲ : ಶೋರಾದಕಾದಲ್ ಪೆರುಂಶುಳಿಪ್ಪಾಲ್, ತೊಲ್ಲೈಮಾಲ್ಲೈಯೊನ್ರುಂ
ಪಾರಾದವನ್ನೈ ಪಲ್ಲಾಂಡೆನ್ರು, ಕಾಪ್ಪಿಡುಂ, ಪಾನ್ಮೈಯರ್ ತಾಳ್
ಪೇರಾದವುಳ್ಳತ್ತಿರಾಮಾನುಶರ್ ತರ್ ಪಿರಂಗಿಯಶೀರ್
ಶಾರಾಮನಿಶರ್ರೈಚ್ಚೇರೇ್, ಎನಕ್ಕೆನ್ನತಾಳ್ವಿನ್ನೈಯೇ ॥ 15

ಭಾವ :- ಒರುಕ್ಕಾಲಮುಂಕುರ್ರೈವುತ್ತಟ್ಟಾಮಲ್ ಪೆರುತ್ತಪ್ರೇಮಶುಳಿಪ್ಪಡು ಕೈಯಾಲೆ ನಿತ್ಯನಾನಪೆರುಮಾಳ್‌ಪ[illegible]ಯ್ಯೆ ಶಿರಿದುಂ ನಿರೂಪಿಕ್ಕಾಮಲೇ ಅಂದ ಭಗವಾನ್ನೈ "ಪಲ್ಲಾಂಡು ಪಲ್ಲಾಂಡು" ಎನ್ರು ಮಂಗಳಾಶಾಸನಂಶೆಯ್‌ಕೈಯೇ ಸ್ವಭಾವ ಮಾಯಿರುಕ್ಕುಂ ಪೆರಿಯಾಳ್ವಾರುಡ್ಯೆಯ ತಿರುತ್ತಾಳ್ಕಳ್ಳೈ ವಿಟ್ಟಕಲಾದ ಮನಮುಳ್ಳ ರಾಮಾನುಜರುಡ್ಯೆಯ ಮಿಕ್ಕಗುಣಂಗಳ್ ಅನುಭವಿಕ್ಕಪ್ಪಡುಮವ್ವೈಕಳೆನ್ರು ಕೊಳ್ಳಾದ ಮನಿದರ್ರೈ ಶೇರಮಾಟ್ಟೇನ್, ಇವ್ವಿದ ಉರುದಿಪಿರನ್ದಪಿನ್ಬು ಎನಕ್ಕುಕುರ್ರೈವುರ್ತಾ ಎನ್ನದು ?

ಅರ್ಥ :- ಶೋರಾದ-ಕಾದಲ್-ಪೆರುಂ-ಶುಳಿಪ್ಪಾಲ್ = ಎಂದಿಗೂ ಕುಗ್ಗದೆ ಹೆಚ್ಚುವ ಪ್ರೇಮವೆಂಬ ದೊಡ್ಡಸುಳಿಗೆ ಸಿಕ್ಕಿದುದರಿಂದ. ತೊಲ್ಲೈಮಾಲ್ಲೈಯೊನ್ರುಂ-ಪಾರಾದು = ನಿತ್ಯನಾದ ಭಗವಂತನ ರೀತಿಯನ್ನು ಸ್ವಲ್ಪವೂ ನಿರೂಪಿಸದೆ, ಅವನ್ನೈ = ಆ ದೇವರನ್ನು, (ನೋಡಿ) ಪಲ್ಲಾಂಡು-ಎನ್ರು-ಕಾಪ್ಪಿಡುಂ-ಪಾನ್ಮೈಯರ್ = ಪಲ್ಲಾಂಡೆಂದು ಮಂಗಳಾಶಾಸನಮಾಡುವುದೇ ಸ್ವಭಾವವಾಗಿರುವ ಪೆರಿಯಾಳ್ವಾರ್, ತಾಳ್-ಪೇರಾದುಳ್ಳತ್ತು=ಅಡಿಗಳನ್ನು ಬಿಟ್ಟಗಲದೆ ಮನಸ್ಸುಳ್ಳ, ಇರಾಮಾನುಶರ್ತರ್ = ಶ್ರೀರಾಮಾನುಜರ, ಪಿರಂಗಿಯ-ಶೀರ್ = ಮೇಲಾದಗುಣಗಳನ್ನೂ, ಶಾರಾ = ತಾವು ಅನುಭವಿಸಬೇಕೆಂದು ಹೊಂದದ, ಮನಿಶರ್ರೈ = ಮನುಜರನ್ನು, ಶೇರೇನ್ = ಸೇರಿಸುವುದಿಲ್ಲ, ಇನಿ = ಹೀಗಾದಮೇಲೆ, ಎನಕ್ಕು-ಎನ್ನತಾಳ್ವು ? = ನನಗೆ ಏನು ತಾನೆ ಕೊರತೆ ?

ತಾತ್ಪರ್ಯ :- ಎಂದಿಗೂ ಕಡಿಮೆಯಾಗದೆ ಹೆಚ್ಚುವ ಪ್ರೇಮದ ಸುಳಿಗೆ ಸಿಕ್ಕಿ, ನಿತ್ಯನಾದ ಪರಮಾತ್ಮನ ಸ್ವರೂಪಾದಿಗಳನ್ನು ಸ್ವಲ್ಪವೂ ನಿರೂಪಣಮಾಡದೆ, ಪಲ್ಲಾಂಡೆಂದು ಮಂಗಳಾಶಾಸನ ಮಾಡುವುದೇ ತಮ್ಮ ಸಹಜ ಗುಣವೆಂದಿರುವರು ಶ್ರೀ ವಿಷ್ಣುಚಿತ್ತರು. ಅವರಡಿದಾವರೆಗಳನ್ನು ಬಿಡದ ಮನೋಭಾವವುಳ್ಳವರು ರಾಮಾನುಜರು. ಅಂತಹ ಮಹಿಮರ ಪಾದಕಮಲಗಳನ್ನು ಅನುಭವಿಸಬೇಕೆಂದು ಭಾವಿಸದ ಜನರೊಡನೆ ನಾನು ಸೇರೆನು. ಹೀಗೆ ದೃಢಮನೋಭಾವವಿದ್ದಮೇಲೆ ನನಗೆ ಇನ್ನು ಮುಂದೆ ಕೊರತೆ ಎಲ್ಲಿ ಬಂದೀತು ?

अश्रान्तानूनपूर्वाधिकललितमहास्नेहनावर्तकृष्टः ।
नित्यानन्दस्वरूपाद्यकथनकृततन्मङ्गलाशासनस्य ।
पादावाश्रित्य नित्यं महदभिधमुने र्योऽलसत्तादृशस्य ।
नेक्षे रामानुजस्योत्तमगुणकथनासक्तिहीनान् ततः किम्! ॥ १५

ಮೂಲ : ತಾಳ್ವೊನ್ರಿಲ್ಲಾಮರೈತಾಳ್ನ್ದು, ತಲಮುಳುದುಂ ಕಲಿಯೇ
ಆಳ್ಕಿನ್ರನಾಳ್ವಂದಳಿತ್ತರ್ವರ್ಕಾಣ್ಣೆನ್, ಅರಂಗರ್ಮೌಲಿ
ಶೂಳ್ಕಿನ್ರಮಾಲ್ಯೆಯ್ಯೆ ಶೂಡಿಕ್ಕೊಡುತ್ತವಳ್ ತೊಲ್ಲರುಳಾಲ್
ವಾಳ್ಕಿನ್ರವಳ್ಳಲ್, ಇರಾಮಾನುಶನೆನ್ರುಂ ಮಾಮುನಿಯೇ ॥ 16

ಭಾವ :- ಶ್ರೀರಂಗನಾಥರ್ ತಿರುಮುಡಿಕ್ಕು ಶಾತ್ತುಮದಾನ ಪೂಮಾಲ್ಯೆಯ್ಯೆ ತನ್ನುಳಲಿಲೇ ಶೂಟ್ಟಿಕ್ಕೊಂಡು, ಅವ್ವಳಕ್ಕೈ, ಅನುಭವಿತ್ತು ಪಿನ್ಬು ಅತ್ತೈಯೇ ಪೆರುಮಾಳುಕ್ಕುಂ ಭೋಗ್ಯತಮಮಾಕ್ಕಿನ ಆಂಡಾಳುಡೈಯ ಸಹಜಮಾನ ಅರುಳಾಲೆ ವಾಳ್ಕಿನ್ರವರುಂ, ಪರಮೋದಾರರುಮಾನ ರಾಮಾನುಜ ಮಹಾಮುನಿಕಳ್ ಎಕ್ಕಾಲತ್ತಿಲುಂ ಯಾದೊರುಕುರೈವುಂ ಇಲ್ಲಾದುದಾನ ವೇದಮಾನದು ದುರ್ವಾದಿಗಳಾಲೆ ಇಳವು ಪೆಟ್ರದನ್ರಿಯೆ ಉಲಕಮೆಂಗುಂ ಕಲಿಪುರುಷನೇ ಆಳ್ಕಿನ್ರ ಕಾಲತ್ತಿಲೆ ಇಂಗುವಂದವತ್ತರಿತ್ತು ಅಂದ ವೇದತ್ತೈಯುಂ, ಉಲಕತ್ತೈಯುಂ ರಕ್ಷಿತ್ತರುಳಿನಾರಲ್ಲವಾ !

ಅರ್ಥ :- ಅರಂಗರ್-ಮೌಳಿ-ಶೂಳ್ಕಿನ್ರ-ಮಾಲ್ಯೆಯ್ಯೆ = ಶ್ರೀರಂಗನಾಥನ ಮುಡಿಗೆ ಅಲಂಕರಿಸುವ ಹೂಮಾಲೆಯನ್ನು, ಶೂಡಿಕೊಡುತ್ತವಳ್ = ತನ್ನ ಮುಡಿಗೆ ಮುಡಿದುಕೊಂಡನಂತರ ಅದನ್ನೇ ದೇವರಿಗೆ ಮುಡಿಸಿದ ಆಂಡಾಳ್ ದೇವಿಯ, ತೊಲ್ಲರುಳಾಲ್ = ಸಜಹ ಕೃಪೆಯಿಂದ, ವಾಳ್ಕಿನ್ರ = ಬಾಳುವ, ವಳ್ಳಲ್ = ಉದಾರರೂಆದ, ಇರಾಮನುಶರ್-ಎನ್ನುಂ-ಮಾ-ಮುನಿ = ಶ್ರೀರಾಮಾನುಜ ಮಹಾ ಮುನಿಗಳು, ತಾಳ್-ವೊನ್ರಿ-ಲ್ಲಾ-ಮರೈ = ಯಾವ ಹಾನಿಯೂ ಇಲ್ಲದಿದ್ದ ವೇದವು, ತಾಳ್ನ್ದು = ಇಳಿಮುಖವಾಗಲು, ತಲ-ಮುಳುದುಂ = ಭೂಮಿಯಲ್ಲೆಲ್ಲಾ, ಕಲಿಯೇ = ಕಲಿಪುರುಷನೇ, ಆಳ್ಕಿನ್ರ = ಆಳುತ್ತಿದ್ದ, ನಾಳ್ = ಕಾಲದಲ್ಲಿ, ವಂದು = ಇಲ್ಲಿ ಬಂದವತರಿಸಿ, ಅಳಿತ್ತರ್ವರ್ ಕಾಣ್ಣೆ = (ಅವನನ್ನು) ರಕ್ಷಿಸಿ ಕರುಣಿಸಿದರಲ್ಲವೆ ?

ತಾತ್ಪರ್ಯ :- ಶ್ರೀರಂಗನಾಥನಿಗೆ ಅರ್ಪಿಸಬೇಕಾದ ಹೂಮಾಲೆಯನ್ನು ತಾನು ಧರಿಸಿ, ಚೆಲುವನ್ನು ನೋಡಿಕೊಂಡು ಅದನ್ನೇ ದೇವರಿಗೆ ಅತ್ಯಂತ ಭೋಗ್ಯವಾದುದನ್ನಾಗಿ ಮಾಡಿದ ಗೋದಾದೇವಿಯ ಸಹಜ ದಯೆಯಿಂದ ಬಾಳಿದರು ನಮ್ಮ ರಾಮಾನುಜರು. ಬಹಳ ಉದಾರರು. ಇಂತಹ ಮಹಾಮುನಿಗಳು ಎಂದೂ ಕುಂದುತಟ್ಟದ ವೇದಗಳು ದುರ್ವಾದಿಗಳಿಂದ ಇಳಿಮುಖವಾದುವಲ್ಲದೆ, ಲೋಕದಲ್ಲೆಲ್ಲಾ ಕಲಿಯೇ ನಿರಂಕುಶನಾಗಿ ಆಳುತ್ತಿರಲು, ಅಂತಹ ಕಾಲದಲ್ಲಿ ಅವತರಿಸಿ, ಕಲಿಯ ಸೊಕ್ಕಡಗಿಸಿ, ವೇದಮಾತೆಯನ್ನು ರಕ್ಷಿಸಿದರಲ್ಲವೆ ?

रङ्गाधीशोत्तमाङ्गोचितरुचिरसुमस्रग्धरा तां च गोदा ।
देवायाधारयत्तन्निरुपधिकरुणायुक्तजीवोऽत्युदार: ।
श्रीमद्रामानुजार्य श्श्रुतिषु च निरघास्वाहितोपप्लवासु ।
क्षोण्यां त्राणाय तासां ननु कलिमदनाशाय जज्ञे मुनीन्द्र: ॥ १६

ಮೂಲ : ಮುನಿಯಾರ್ ತುಯರಂಗಳ್ಮುಂದಿಲುಂ, ಇನ್ಬಙ್ಗಳ್ಮೊಯ್‌ತ್ತಿಡಿನುಂ
ಕನಿಯಾರ್ಮನಂ ಕಣ್ಣಮಂಗೈನಿನ್ರಾನೈ, ಕಲೈಪರವುಂ
ತನಿಯಾನೈಯೈ ತಂಡಮಿಳ್‌ಶೆಯ್ದ ನೀಲರ್ ತನಕ್ಕುಲಗಿಲ್
ಇನಿಯಾನೈ, ಎಂಗಳಿರಾಮಾನುಶನೈ ವಂದೆಯ್ದಿನರೇ ॥ 17

ಭಾವ :- ಶಾಸ್ತ್ರಂಗಳಾಲ್ ಕೊಂಡಾಡಪ್ಪಡುಕಿರ, ಒಪ್ಪಟ್ರದಾನ, ಮದತ್ತಯಾನೈಯೈಪ್ಪೋನ್ರ, ತಿರುಕ್ಕಣ್ಣ ಮಂಗೈಯಿಲೇ ಇರುಕ್ಕುಂ ಪೆರುಮಾಳೈಕ್ಕುರಿತ್ತು ಇವ್ವುಲಕತ್ತಿಲ್ ತಾಪಹರಮಾನ, ಪ್ರಬಂಧತ್ತೈ ಸಾದಿತ್ತ ತಿರುಮಂಗೈಯಾಳ್‌ವಾರಿಡಂ ಅತಿ ಪ್ರೀತಿಯೋಡಿರುಪ್ಪವರುಂ, ಎನ್ನೈಪ್ಪೋಲೆ ಎಲ್ಲಾರೈಯುಂ ಉಜ್ಜೀವಿಪ್ಪಿಕ್ಕೈಕ್ಕಾಕವೇ ಅವತರಿತ್ತ ರಾಮಾನುಜರೈ ವಂದಡೈಂದ ಭಾಗ್ಯವಾರ್ಕಳ್ ದುಃಖಂಗಳ್‌ವಂದಾಲುಂ ವರುತ್ತಪ್ಪಡಾರ್ಕಳ್. ಸುಖಂಗಳ್ ಮೇನ್ಮೇಲೆಂವದಾಲುಂ ಕಳಿಪ್ಪಡೈಯಾರ್ಕಳ್.

ಅರ್ಥ :- ಕಲೈ = ಶಾಸ್ತ್ರಗಳಿಂದ, ಪರವುಂ = ಹೊಗಳಲ್ಪಡುವ, ತನಿ = ಅಸದೃಶವಾದ, ಯಾನೈ = ಮತ್ತಗಜದಂತೆ (ಇರುವ), ಕಣ್ಣಮಂಗೈ-ನಿನ್ರಾನೈ = ತಿರುಕ್ಕಣ್ಣಮಂಗೈಯಲ್ಲಿರುವ ದೇವರನ್ನು ಕುರಿತು, ಉಲಕಿಲ್ = ಈ ಲೋಕದಲ್ಲಿ ತಣ್-ತಮಿಳ್-ಶೆಯ್ದ = (ಸಂಸಾರತಾಪವು ಆರುವಂತಹ) ದಿವ್ಯವಾದ ತಮಿಳು ಪ್ರಬಂಧವನ್ನು ರಚಿಸಿದ, ನೀಲರ್-ತನಕ್ಕು = ತಿರುಮಂಗೈಯಾಳ್ವಾರ್ರಲ್ಲಿ, ಇನಿಯಾನೈ ಪ್ರೀತಿಯುಳ್ಳವರಾಗಿ, ಎಂಗಳ್-ಇರಾಮಾನುಶನೈ = ನಮ್ಮ ಸ್ವಾಮಿ ರಾಮಾನುಜರನ್ನು, ವಂದೆಯ್ದಿನರ್ = ಬಂದು ಆಶ್ರಯಿಸಿದವರು, ತುಯರಂಗಳ್ = ದುಃಖಗಳು, ಮುಂದಿಲುಂ = ಒಟ್ಟಿಗೆಬಂದರೂ, ಮುನಿಯಾರ್ = ವ್ಯಾಕುಲರಾಗುವುದಿಲ್ಲ, ಇನ್ಬಂಗಳ್ = ಸುಖಗಳು, ಮೊಯಿತ್ತಿಡಿನುಂ = ಆವರಿಸಿದರೂ, ಮನಂ-ಕನಿಯರ್ = ಮನಹಿಗ್ಗುವುದಿಲ್ಲ.

ತಾತ್ಪರ್ಯ :- ಶ್ರುತ್ಯಾದಿಗಳಿಂದ ಸ್ತುತಿಸಲ್ಪಡುವವನೂ, ಸರ್ವ ವಿಲಕ್ಷಣನೂ, ಮದಿಸಿದ ಆನೆಯಂತೆ ಬಂದು ತಿರುಕ್ಕಣ್ಣ ಮಂಗೈಯಲ್ಲಿ ನಿಂತಿರುವ ದೇವರ ವಿಷಯವಾಗಿ ತಿರುಮಂಗೈಯಾಳ್ವಾರ್ರು ಪಾಡಿರುವರು. ಅದು ಸಂಸಾರತಾಪವನ್ನು ನೀಗುವ ಉತ್ತಮಪ್ರಬಂಧ. ಅವರಲ್ಲಿ ಬಹು ಪ್ರೀತಿಯುಳ್ಳವರು ನಮ್ಮ ಸ್ವಾಮಿ ರಾಮಾನುಜರು. ಇವರನ್ನು ಆಶ್ರಯಿಸಿದವರು ಎಷ್ಟೇ ದುಃಖಕ್ಕೆ ಈಡಾದರೂ ಕುಗ್ಗುವುದಿಲ್ಲ, ಎಷ್ಟೇ ಸುಖ ಬಂದರೂ ಹಿಗ್ಗುವುದೂ ಇಲ್ಲ.

श्रीशं प्रत्यद्वितीयं मदगजसदृशं सर्वशास्त्रेड्यमानम् ।
देवं श्रीभक्तजीवं कलिदमनगुरु निर्ममे यः प्रबन्धम् ।
दिव्यं संसारतापप्रशमनमनघं भक्तिमान् य श्च तस्मिन् ।
तं ये रामानुजार्यं ययुरतिसुखदुःखास्स्युरेकस्वभावाः ॥ १७

ಮೂಲ : ಎಯ್‌ದರ್ಕರಿಯ ಮರ್ೈಕಳ್ೈ, ಆಯಿರಮಿನ್ದಮಿಳಾಲ್
ಶ್ೈಯ್‌ದರ್ಕುಲಗಿಲ್ ವರುಂ ಶಡಗೋಪನ್ೈ, ಶಿನ್ದ್ೈಯುಳ್ಳೇ
ಪೆಯ್‌ದರ್ಕಿಶ್ೈಯುಂ ಪೆರಿಯವರ್ ಶೀರ್ೈ ಉಯಿರ್ ಕಳೆಲ್ಲಾಂ
ಉಯ್‌ದರ್ಕುದವುಂ, ಇರಾಮಾನುಶ ಎಮ್ಮುರುತುಣ್ೈಯೇ ॥ 18

ಭಾವ :- ಅರಿಯಮುಡಿಯಾದದಾಯುಂ, "ಅನಂತಾ ವೈ ವೇದಾಃ" ಎನ್ನುಂ ಪಡಿ ಅಪರಿಮಿತಂಗಳಾಯುಂ ಇರುಕ್ಕುಂ ಶ್ರುತಿಕಳ್ೈ ಇನಿಯದಾನ ತಮಿಳಿಲ್ ಆಯಿರಂ ಪಾಶುರಂಗಳಾಕ ಶೆಯ್ವದರ್ಕು ಇವ್ವುಲಕತ್ತಿಲ್ ಅವತರಿತ್ತನಮ್ಮಾಳ್ವಾರ್ೈ ತಂತಿರುವುಳ್ಳತ್ತಿಲೇ ನಿನ್ೈಪ್ಪದರ್ಕು ವೇಂಡಿನ ಪ್ರಭಾವಮುಳ್ಳ ಶ್ರೀ ಮಧುರಕವಿಯಾಳ್ವಾರುಡ್ೈಯ ಗುಣಂಗಳ್ೈ ಎಲ್ಲಾ ಜೀವರ್‌ಕಳುಂ ಉಜ್ಜೀವಿಕ್ಕ ಉಪಕರಿತ್ತರುಳುಂ ರಾಮಾನುಶರ್ ನಮಕ್ಕು ದೃಢಮಾನ ತುಣ್ೈ.

ಅರ್ಥ:- ಎಯ್‌ದರ್ಕರಿಯಮರ್ೈಕಳ್ೈ = ತಿಳಿಯಲಾಗದಷ್ಟು ಅಪಾರವಾದ ವೇದಗಳನ್ನೂ, ಇನ್-ತಮಿಳ್-ಆಯಿರತ್ತಾಲ್ = ಇಂಪಾದ ತಮಿಳಿನ ಸಾವಿರ ಪದ್ಯಗಳಿಂದ, ಶೆಯ್ದರ್ಕು = ಪ್ರಬಂಧವನ್ನು ಮಾಡುವುದಕ್ಕೆ, ಉಲಕಿಲ್-ವರುಂ = ಈ ಲೋಕದಲ್ಲಿ ಬಂದವತರಿಸಿದ, ಶಠಕೋಪರ್ೈ = ನಮ್ಮಾಳ್ವಾರನ್ನು, ಶಿಂದ್ೈಯುಳ್ಳೆ = ತಮ್ಮ ಮನಸ್ಸಿನಲ್ಲೇ ಪೆಯ್‌ದರ್ಕು = ಧ್ಯಾನಿಸಲು (ಬೇಕಾದ) ಇಶ್ೈಯುಂ = ಪ್ರಭಾವವುಳ್ಳ, ಪೆರಿಯವರ್ = ಶ್ರೀ ಮಧುರಕವಿಯಾಳ್ವಾರ್ರ, ಶೀರ್ೈ = ಗುಣಗಳನ್ನು, ಉಯಿರ್‌ಕಳೆಲ್ಲಾಂ = ಸಕಲಜೀವರೂ, ಉಯ್ದರ್ಕು = ಉಜ್ಜೀವಿಸಲು, ಉದವುಂ = ಸಹಾಯಮಾಡಿದ, ಇರಾಮಾನುಶ = ಶ್ರೀ ರಾಮಾನುಜರು, ಎಂ-ಉರು-ತುಣ್ೈ = ನಮಗೆ ದೃಢವಾದ ಸಹಾಯಕರು.

ತಾತ್ಪರ್ಯ :- ತಿಳಿಯುವುದು ಕಷ್ಟಸಾಧ್ಯವಾಗುವ ಮತ್ತು ಅಪರಿಮಿತವಾದ ವೇದಗಳ ಸಾರವಾದರ್ಥಗಳನ್ನು ಇಂಪಾದ ತಿಳಿ ತಮಿಳಿನಲ್ಲಿ ಸಾವಿರ ಪದ್ಯಗಳಿಂದ ಕೂಡಿದ ಪ್ರಬಂಧವನ್ನು ರಚಿಸಿ, ಎಲ್ಲರನ್ನೂ ಉಜ್ಜೀವನಗೊಳಿಸಲು ನಮ್ಮಾಳ್ವಾರ್ರು ಅವತರಿಸಿದರು. ಅವರನ್ನು ಸತತವಾಗಿ ಧ್ಯಾನಮಾಡಿ ಸಿದ್ಧಿ ಪಡೆದರು ಶ್ರೀ ಮಧುರ ಕವಿಗಳು. ಅವರ ಸದ್ಗುಣಗಳನ್ನು ಎಲ್ಲರೂ ತಿಳಿದು ಉಜ್ಜೀವನಗೊಳ್ಳಲೆಂದು ತುಂಬ ಉಪಕರಿಸಿದರು ನಮ್ಮ ಸ್ವಾಮಿ ರಾಮಾನುಜರು. ಹೀಗೆ ಕರುಣಿಸಿದ ಮಹಾ ಮಹಿಮರಾದ ಇವರೇ ನಮಗೆ ಇರುವ ದೃಢವಾದ ಸಹಾಯ.

गूढार्थक्लेशसाध्यश्रुतिशिखरगिर स्सर्वसामान्यवेद्याः ।
कर्तुं जज्ञे प्रबन्धं शठरिपुरकृत द्राविडं चारु वेद्यम् ।
तध्यानैकात्मलब्धेः मधुरकविमुनेस्सद्गुणान् यस्त्वनावीत् ।
सर्वात्मोज्जीवनार्थ्यप्यतिशयसहकृन्मेऽद्य रामानुजार्यः ॥ १८

ಮೂಲ :- ಉರುಪೆರುಂ ಶೆಲ್ವಮುನ್ತಂದೆಯುಂ ತಾಯುಂ, ಉಯಿರ್ಗುರುವುಂ
ವೆರಿದರು ಪೂಮಕಳ್ ನಾದನುಂ, ಮಾರ್ಱ ವಿಳಂಗಿಯಶೀರ್
ನೆರಿದರುಂ ಶೆನ್ದಮಿಳಾರಣಮೇ ಯೆನ್ರಿನ್ನೀಣಿಲತ್ತೋರ್
ಅರಿದರನಿನ್ರ, ರಾಮಾನುಶನೆನಕ್ಕಾರಮುದೇ॥ 19

ಭಾವ :- ಶಿರಂದದುಂ ಪೆರುತ್ತದುಮಾನ ಸರ್ವಸಂಪತ್ತುಂ, ತಂದೈ, ತಾಯ್, ಸದಾಚಾರ್ಯ಼ ಮಿಕವುಂ ಮಣಕ್ಕುಂ ತಾಮರೈ ಯಿಲವತರಿತ್ತ ಪಿರಾಟ್ಟಿಕ್ಕು ವಲ್ಲಭನಾನ ನಾರಾಯಣನುಂ (ಎಲ್ಲಾರುಂ) ನಮ್ಮಾಳ್ವಾರ್ ತಮುಕ್ಕು ವಿಳಂಗಿನ ಪರಿಪೂರ್ಣ ಭಗವದ್ಗುಣಂಗಳೈ ಅಡ್ವೈವೇತಿರುವಾಯ್ ಮಲರಿನಶೆಂದಮಿಳ್ ವೇದಮೇ ಎನ್ರು ಇಂದ ಭೂಮಿಯಿಲ್ ಉಳ್ಳವರೆಲ್ಲಾರುಂ ಅರಿಯುಂಪಡಿ ನಿನ್ರ ರಾಮಾನುಜರೆನುಕ್ಕು ಅಮೃತಮೇ ಆರಾಕಪ್ಪೆರುಕಿಕ್ಕಿಡೈತ್ತಾಪ್ಪೋಲ್ ಪರಮಭೋಗ್ಯರ್.

ಅರ್ಥ :- ಉರು-ಪೆರುಂ-ಶೆಲ್ವಮುಂ = ಇಹಪರಗಳ ಸರ್ವ ಸಿರಿಯೂ, ತಂದೆಯುಂ-ತಾಯುಂ = ತಂದೆ ತಾಯಂದಿರೂ, ಉಯರ್‌ಗುರುವುಂ = ಆತ್ಮೋದ್ಧಾರಕಗುರುವೂ, ವೆರಿ = ಪರಿಮಳವನ್ನು, ತರುಂ = ಬೀರುವ, ಪೂ = ಹೂವಿನ, ಮಕಳ್ = ಮಗಳಾದ ಲಕ್ಷ್ಮಿಯ, ನಾದನುಂ = ಪತಿಯೂ (ಇವರೆಲ್ಲರೂ), ಮಾರ್ಱ = ನಮ್ಮಾಳ್ವಾರ್ರು (ತಮಗೆ) ವಿಳಂಗಿಯ = ಕಂಗೊಳಿಸಿದ, ಶೀರ್-ನೆರಿ = ಪೂರ್ಣ ಭಗವದ್ಗುಣಗಳನ್ನು, ತರುಂ = ತಿಳಿಸುವ, ಶೆಂ = ಸೊಗಸಾದ, ತಮಿಳ್ = ತಮಿಳಿನ, ಆರಣಮೇ = ವೇದಾಂತವೇ, ಎನ್ನು = ಎಂಬುದಾಗಿ, ಇನ್ನೀಳ್-ನಿಲತ್ತು = ಈ ವಿಶಾಲಭೂಮಿಯಲ್ಲಿರುವರೆಲ್ಲ, ಅರಿದರು = ತಿಳಿದುಕೊಳ್ಳುವಂತೆ, ನಿನ್ರ = ಇರುವ, ಇರಾಮಾನುಶ಼ = ರಾಮಾನುಜರು, ಎನಕ್ಕು = ನನಗೆ, ಆರ್-ಅಮುದು = ಅಮೃತದ ಹೊನಲು.

ತಾತ್ಪರ್ಯ :- ಇಹಪರ ಸಿರಿಗಳೂ, ತಂದೆ, ತಾಯಿ, ಆತ್ಮೋದ್ಧಾರಕ ಗುರು ಮತ್ತು ಘಮಘಮಿಸುವ ಕಮಲವಾಸಿನಿಯಾದ ಮಹಾಲಕ್ಷ್ಮಿಯ ರಮಣ, ಎಲ್ಲರೂ ನಮ್ಮಾಳ್ವಾರ್ರು ರಚಿಸಿದ ತಿರುವಾಯ್‌ಮೊಳಿಯೆಂಬ ಪ್ರಬಂಧವೇ, ಅದು ಭಗವಂತನ ಪೂರ್ಣ ಕಲ್ಯಾಣಗುಣಗಳನ್ನುಸ್ಪಷ್ಟವಾಗಿ ಬೋಧಿಸುತ್ತದೆ. ಉಪನಿಷತ್ತುಗಳು ಮಾಡುವುದನ್ನುಇದೇ ಮಾಡುವುದರಿಂದ ತಮಿಳಿನ ಮಧುರವಾದ ವೇದವೆಂದು ಖ್ಯಾತಿಗೊಂಡಿದೆ. ಈ ವಿಷಯವನ್ನು ಭೂಮಿಯಲ್ಲಿರುವವರೆಲ್ಲರೂ ತಿಳಿಯಲೆಂದು ಬಂದುನಿಂತ ಶ್ರೀ ರಾಮಾನುಜರು ನನಗೆ ಅಮೃತದ ನದಿಯೇ ಲಭಿಸಿದಂತೆ.

ऐश्वर्य त्वमितं प्रसू जनयिता श्रेयः प्रदाता गुरुः ।
सौरभ्याधिकपुष्पसम्भवरमाजानि श्च नारायणः ।
सर्वोदारगुणानुभूतिसुखदाः वाच श्शठारे रिति ।
क्षोण्यां यः प्रबुबोध मे ह्यमृतवद्रामानुजोऽतिप्रियः ॥ १९

ಮೂಲ : ಆರಪ್ಪೊಳಿಲ್ ತೆನ್ ಕುರುಹೈಪ್ಪಿರಾನ್, ಅಮುದತ್ತಿರುವಾಯ್
ಈರತ್ತಮಿಳಿನ್ ಇಶೈಯುಣರ್‌ನ್ದೋರ್‌ಹಳ್ಕು, ಇನಿಯವರ್ ತಂ
ಶೀರೈಪ್ಪಯಿನ್ರುಯ್ಯುಂ ಶೀಲಂಗೊಳ್ ನಾದಮುನಿಯೈ ನೆಂಜಾಲ್
ವಾರಿಪ್ಪರುಹುಂ, ರಾಮಾನುಶನ್ ಎನ್ ತನ್ ಮಾನಿದಿಯೇ ॥ 20

ಭಾವ :- ಚಂದನವನಂಗಳಿನ್ ನಡುವೆ ವಿಳಂಗುಂ ಅಳಹಾನ ತಿರುಕ್ಕುರುಹೂರಿಲೇ ಅವತರಿತ್ತು ಮಹೋಪಕಾರಕರಾನ ನಮ್ಮಾಳ್ವಾರ್ ಅಮೃತಂಪೋಲ್ ಪರಮ ಭೋಗ್ಯಮಾಯ್, ತಿರುವಾಯ್ಮಲರ್‌ನ್ದರುಳಿನ ಈರಚ್ಚೊಲ್ಲಾಕಿಯ ತಿರುವಾಯ್ಮೊಳಿಯಿನ್ ಇಶೈಯ್ಯೈ ಅನುಭವಿತ್ತವರ್ಹಳುಕ್ಕು ನಾದಮುನಿಕಳೈ ತನ್ನೆಂಜಾಲೆ ಮಿಹವುಂ ಅಭಿನಿವೇಶತ್ತುಡನ್ ಅನುಭವಿಪ್ಪವರಾನ ರಾಮಾನುಜರ್ ಎನ್ನುಡೈಯ ಪೆರಿಯ ನಿಧಿ.

ಅರ್ಥ :- ಆರಪ್ಪೊಳಿಲ್ = ಶ್ರೀಗಂಧದ ವನಗಳಿರುವ, ತೆನ್ = ಸುಂದರವಾದ, ಕುರುಹೈ = ಕುರುಕಾಪುರಿಯಲ್ಲಿ, (ಅವತರಿಸಿದ) ಪಿರಾನ್ = ಮಹೋಪಕಾರ ಮಾಡಿದ ನಮ್ಮಾಳ್ವಾರ್ರವರ, ಅಮುದ = ಅಮೃತಪೂರ್ಣವಾದ, ತಿರುವಾಯ್ = ಬಾಯಿಂದ ಹೊರಟ, ಈರಂ = ಸಂಸಾರತಾಪಹರವಾದ, ತಮಿಳ್ = ತಮಿಳಿನ ಪದ್ಯಗಳ, ಇಶೈ = ಗಾನವನ್ನು ಉಣರ್‌ನ್ದೋರ್‌ಹಳ್ಕು = ಅನುಭವಿಸಿದವರಿಗೆ, ಇನಿಯವರ್‌ತಂ = ಪ್ರಿಯರಾಗಿರುವವರ, ಶೀರೈ = ಗುಣಗಳನ್ನು, ಪಯಿನ್ರು = ಕಲಿತು, ಉಯ್ಯುಂ = ಉಜ್ಜೀವಿಸುವ, ಶೀಲಂಕೊಳ್ = ಸ್ವಭಾವವುಳ್ಳ, ನಾದಮುನಿಯೈ = ನಾಥಮುನಿಗಳನ್ನು, ನೆಂಜಾಲ್ = ಮನದಿಂದ್ದ, ವಾರಿ = ಗಾಢವಾಗಿ, ಪರುಹುಂ = ಅನುಭವಿಸುವ, ಇರಾಮಾನುಶನ್ = ರಾಮಾನುಜರು, ಎನ್ ತನ್ = ನನ್ನ, ಮಾನಿದಿಯೆ = ದೊಡ್ಡ ನಿಧಿಯಾಗಿರುವರು.

ತಾತ್ಪರ್ಯ :- ಶ್ರೀಗಂಧ ವನಗಳ ನಡುವೆ ಕಂಗೊಳಿಸುವ ಕುರುಕಾಪುರಿಯಲ್ಲಿ ಅವತರಿಸಿ, ಮಹೋಪಕಾರಿಗಳಾದ ನಮ್ಮಾಳ್ವಾರ್ರ ಅಮೃತ ತುಂಬಿದ ಬಾಯಿಂದ ಬಂದ ''ತಿರುವಾಯ್‌ಮೊಳಿ'' ಎಂಬ ದಿವ್ಯಪ್ರಬಂಧದ ಸವಿಯನ್ನು ಅನುಭವಿಸಿದವರಿಗೆ ಪ್ರಿಯರಾದವರ ಗುಣಗಳನ್ನು ಕಲಿತು ಉಜ್ಜೀವಿಸಬೇಕೆಂಬ ಸ್ವಭಾವವುಳ್ಳ ನಾಥಮುನಿಗಳನ್ನು ತಮ್ಮ ಮನದಲ್ಲಿ ಅತಿ ಲಾಲಸೆಯಿಂದ ಅನುಭವಿಸಿದ ಶ್ರೀರಾಮಾನುಜರು ನನಗೆ ಒಂದು ದೊಡ್ಡ ನಿಧಿಯೇ ಲಭಿಸಿದಂತೆ ಇರುವರು.

भद्रश्रीवनमध्यदीप्तकुरुकानेतु स्सुधास्यांबुजात्
हृद्या निर्गलिता महोपकृतिनः पीत्वा शठारे गिरः ।
अत्यानन्दमुपेयुषां प्रियतमा ये तत्प्रियो यो मुनिः ।
नाथ स्सोऽपि च यस्य चेतसि महान् रामानुजो मे निधिः ॥ २०

ಮೂಲ : ನಿದಿಯ್ಯೈ ಪ್ಪೊಳಿಯುಂ ಮುಹಿಲೆನ್ರು, ನೀಶರ್‌ತಂವಾಶಲ್‌ಪತ್ತಿ
ತ್ತುದಿಹತ್ತುಲಗಿಲ್ ತುವಳಿಹಿನ್ರಿಲೇನಿನಿ, ತೂಯ್‌ನೆರಿಶೇರ್
ಎದಿಹಳ್ಕಿರೈವರ್ ಯಮುನೈತ್ತುರೈವರ್ ಇಣೈಯಡಿಯಾಂ
ಕದಿಪೆತ್ತುಡ್ಡೈಯ, ರಾಮಾನುಶರ್ ಎನ್ನೈ ಕಾತ್ತನನೇ ॥ 21

ಭಾವ :- ನಲ್ಲನುಷ್ಠಾನಮುಳ್ಳ ಯತಿಹಳುಕ್ಕುತಲೈವರಾನಾರ್ ಆಳವಂದಾರ್ ಅವರ್ ತಿರುವಡಿಮಲರ್ಹಳೆನ್ನುಂ ಪ್ರಾಪ್ಯವಸ್ತುವೈಪ್ಪೆತ್ತದನಾಲೆಯೇ ಉಲಹತ್ತಾರ್‍ಕ್ಕು ಸ್ವಾಮಿಯಾನಾರ್ ಶ್ರೀರಾಮಾನುಜರ್, ಅಂದಮಹಾರ್ ಎನ್ನೈ ರಕ್ಷಿತ್ತರುಳಿನಾರ್. ಆನಪಿನ್ಬು ಇನಿಮೇಲ್ ''ನಿಧಿಕಳೈಯೇ ವರ್ಷಿಕ್ಕುಂ ಮೇಘಂಗಳ್ ನೀಂಗಳ್'' ಎನ್ರು ಸ್ತೋತ್ರಂಪಣ್ಣಿಕ್ಕೊಂಡು, ಇವ್ವುಲಹಿಲ್ ನೀಚಜನಂಗಳ್ ವಾಶಲಿಲ್ ಪೋಯ್ ವರುಂದಮಾಟ್ಟೇನ್.

ಅರ್ಥ :- ತೂಯ್ = ಶುದ್ಧವಾದ, ನೆರಿ = ಅನುಷ್ಠಾನವು, ಶೇರ್ = ಸೇರಿರುವ, ಎದಿಹಳ್ಕು = ಯತಿಗಳಿಗೆ, ಇರೈವರ್ = ಸ್ವಾಮಿಯಾದ, ಯಮುನೈತ್ತುರೈವರ್ = ಯಾಮುನಾಚಾರ್ಯರ, ಇಣೈ = ಎರಡು, ಅಡಿ = ಪಾದಗಳು, ಆಂ = ಎಂಬ, ಗತಿ = ಪಡೆಯತಕ್ಕ ವಸ್ತುವನ್ನು, ಪೆತ್ತ್ = ಪಡೆದು, (ಅದರಿಂದಲೆ) ಉಡೈಯ = (ಭೂ ನಿವಾಸಿಗಳಿಗೆಲ್ಲ) ಸ್ವಾಮಿಯಾಗಿರುವ, ರಾಮಾನುಶರ್ = ರಾಮಾನುಜರು, ಎನ್ನೈ = ನನ್ನನ್ನು, ಕಾತ್ತನರ್ = ರಕ್ಷಿಸಿದರು, ಇನಿ = ಇನ್ನುಮುಂದೆ, ನಿದಿಯ್ಯೆ = ನಿಧಿಗಳನ್ನೇ, ಪೊಳಿಯುಂ = ಸುರಿಸುವ, ಮುಹಿಲ್ = ಮೋಡಗಳು, ಎನ್ರು = ಎಂದು, ತುದಿಹತ್ತು = ಸ್ತೋತ್ರಮಾಡುತ್ತಾ, ಉಲಹಿಲ್ = ಲೋಕದಲ್ಲಿ, ನೀಶರ್‌ತಂ = ನೀಚರಾಗಿರುವವರ, ವಾಶಲ್-ಪತ್ತಿ = ಬಾಗಿಲುಹತ್ತಿನಿಂತು, ತುವಳ್‌ಹಿನ್ರಿಲೇರ್ = ಕ್ಲೇಶಪಡುವುದಿಲ್ಲ.

ತಾತ್ಪರ್ಯ :- ಯಾಮುನಾಚಾರ್ಯರು ಬಹಳ ಶುದ್ಧವಾದ ಅನುಷ್ಠಾನ ನಿಷ್ಠರಾದ ಯತಿಗಳಿಗೆ ಶಿರೋಮಣಿಗಳು. ಆ ಮಹನೀಯರ ಪಾದಕಮಲಗಳೇ ಪ್ರಾಪ್ಯವಸ್ತು ಎಂದು, ಅವನ್ನು ಪಡೆದುದರಿಂದಲೇ ಎಲ್ಲರಿಗೂ ಈ ಲೋಕದಲ್ಲಿ ಸ್ವಾಮಿಯಾದವರು ನಮ್ಮ ರಾಮಾನುಜರು. ನನ್ನನ್ನು ರಕ್ಷಿಸಿದವರು ಅವರೇ. ಹೀಗಾದಮೇಲೆ ಇನ್ನುಮುಂದೆ ನಾನು ನೀಚ ಜನರ ಬ್ಬಾಗಿಲಿಗೆ ಹೋಗಿ, ಅವರ ವೇಳೆ ಕಾದು, ಬೇಸತ್ತು, ಕಡೆಗೆ ನೋಡುವಂತಾದರೆ ''ಸ್ವಾಮಿ ! ನೀವೇ ನಿಧಿಗಳನ್ನು ಸುರಿಸುವ ಮೇಘಗಳು'' ಎಂದು ಹೊಗಳಿ ಕ್ಲೇಶಪಡುವುದಿಲ್ಲ. ''ಗುರೋರ್ವಾರ್ತಾಂಶ್ಚ ಕಥಯೇತ್ ಗುರೋರನ್ಯಂ ನ ಭಾವಯೇತ್।'' ಎನ್ನುವಂತಿರುವೆನು ಎಂದು ಭಾವ.

शुद्धानुष्ठानभाजः पदयुगमुपयातो मुने र्यामुनस्य
प्राप्यं रामानुज स्सन् यतिपतिरवनौ मां ररक्षानुकम्पी ।
तच्चेतो नूनमेत्याधमजननिलयं 'वार्षुकस्त्वं निधीनां
मेघोऽसी' त्यादिमोघोक्तिभि रतिकृपणाभि र्न याचे कदापि ॥ २१

ಮೂಲ : ಕಾರ್ತಿಹೈಯಾನುಂ ಕರಿಮುಹತ್ತಾನುಂ, ಕನಲುಂ ಮುಕ್ಕಣ್
ಮೂರ್ತಿಯುಂ ಮೋಡಿಯುಂ ವೆಪ್ಪುಂ ಮುದುಹಿಟ್ಟು, ಮೂವುಲಹುಂ
ಪೂತ್ತವನೇ ! ಎನ್ರುಪೋತ್ತಿಡ ವಾಣ್ಣಪಿಳ್ಳೆಪೊರುತ್ತ
ತೀರ್ತನ್ನೈಯೇತ್ತುಂ, ಇರಾಮಾನುಶ್ಶ ಎನ್ತನ್ ಶೇಮವೈಪ್ಪೇ ॥ 22

ಭಾವ :- ಆರುಮುಹನುಂ, ಯಾನೈಮುಹನುಂ, ಅನಲನಂ, ಶಿವನುಂ, ದುರ್ಗೈಯುಂ ಜ್ವರದೇವತ್ತೈಯುಂ ಪಿನ್ತಿರುಂಬಿ ಓಡಿನಪಿನ್ಬು (ಯುದ್ಧತ್ತಿಲ್) ವೇರೊರುಗತಿಯುಂ ಅಟ್ರು ಬಾಣಾಸುರನ್ ಶರಣ್ಯನ್ ಕಣ್ಣನೈಕ್ಕುರಿತ್ತು "ಮೂನ್ರುಲೋಕಂಗಳ್ಳೆಯುಂ ನಾಭಿ ಕಮತ್ತಿಲ್ ಉಂಡಾಕ್ಕಿ, ಕಾಪ್ಪಾತ್ತು ಹಿರಪೆರುಮಾನೆ ! ಎನ್ನೈ ರಕ್ಷಿತ್ತರುಳಾಯ್" ಎನ್ರು ವಿರುಂಬಿಕೂಪ್ಪಿಡುಮಳವಿಲೆ, ಅಂದ ಬಾಣನ್ಅಪರಾಂಧಗಳ್ಳೆ ಕ್ಷಮಿತ್ತರುಳಿನ ಭಗವಾನ್ನೈ ಎಪ್ಪೋದುಂ ಪುಹಳ್‌ಹಿನ್ರ ರಾಮಾನುಜರ್ ಅಡಿಯೇನುಕ್ಕು ಆಪನ್ನಿಧಿ.

ಅರ್ಥ :- ಕಾರ್ತಿಹೈಯಾನುಂ = ಷಣ್ಮುಖನೂ, ಕರಿಮುಹತ್ತಾನುಂ = ಗಣೇಶನೂ, ಕನಲುಂ = ಅಗ್ನಿಯೂ, ಮುಕ್ಕಣ್ಮೂರ್ತಿಯುಂ = ಈಶ್ವರನೂ, ಮೋಡಿಯುಂ = ದುರ್ಗೆಯೂ, ವೆಪ್ಪುಂ = ಜ್ವರದೇವತೆಯೂ, ಮುದುಹಿಟ್ಟು = ಬೆನ್ನುತೋರಿ ಓಡಲು, (ಆಗ) ಮೂವುಲಹುಂ = ಮೂರುಲೋಕಗಳನ್ನೂ (ಸೃಷ್ಟಿಸಲು ಕಾರಣವಾದ) ಪೂತ್ತವನೆ = (ನಾಭಿ) ಕಮಲವನ್ನರಳಿಸಿದ ದೇವನೇ! (ರಕ್ಷಿಸು) ಎನ್ರು = ಎಂದು, ಪೋತ್ತಿಡ = ಸ್ತುತಿಸಲು, ವಾಣ್ಣ = ಆ ಬಾಣನ, ಪಿಳ್ಳೆ = ತಪ್ಪನ್ನು, ಪೊರುತ್ತ = ಕ್ಷಮಿಸಿದ, ತೀರ್ತನ್ನೈ = ಪವಿತ್ರನಾದಭಗವಂತನನ್ನು, ಏತ್ತುಂ = ಸ್ತುತಿಸುವ, ಇರಾಮಾನುಶ್ಶ = ರಾಮಾನುಜರು, ಎನ್ ತನ್ = ನನ್ನ, ಶೇಮವೈಪ್ಪು = ಕ್ಷೇಮಕರವಾದನಿಧಿ.

ತಾತ್ಪರ್ಯ :- ಬಾಣನು ರುದ್ರನನ್ನೊಲಿಸಿಕೊಂಡು, ತನ್ನರಮನೆ ಕಾಯುವಂತೆ ಮಾಡಿದ್ದನು. ಆತನ ಮಗಳು ಉಷೆ ಪ್ರಾಪ್ತ ವಯಸ್ಕಳಾಗಿ ಅನಿರುದ್ಧನನ್ನು ಮೋಹಿಸಿ, ಕರೆತರಿಸಿ ತನ್ನರಮನೆಯಲ್ಲಿ ಸುಖವಾಗಿದ್ದುದನ್ನು ತಿಳಿದು ಬಾಣನು ಅವನನ್ನು ಎದುರಿಸಲು ಹೋಗಿ ಸೋತು ಕೃಷ್ಣನನ್ನು ಸ್ತುತಿಸಿದನು. ಇದು ಇಲ್ಲಿನ ಹಿನ್ನೆಲೆ ಕತೆ. ಷಣ್ಮುಖ ಮೊದಲಾದವರೆಲ್ಲರೂ ಓಡಲು ಬಾಣನು ಬೇರೆ ಬೇರೆ ದಾರಿಯಿಲ್ಲದೆ ಶ್ರೀ ಕೃಷ್ಣನನ್ನೇ "ಮೂರು ಲೋಕಗಳನ್ನೂ ನಾಭಿ ಕಮಲದಲ್ಲಿ ಕಾಪಾಡಿದ ದೇವನೇ ! ರಕ್ಷಿಸು" ಎಂದು ಮೊರೆಯಿಡಲು, ಆತನನ್ನು ಮನ್ನಿಸಿ, ರಕ್ಷಿಸಿದ ಪರಮಾತ್ಮನನ್ನು ಸದಾ ಸ್ತುತಿಸುವ ಶ್ರೀರಾಮಾನುಜರು ನನ್ನ ಆಪನ್ನಿವಾರಣ ನಿಧಿ.

**स्कन्दस्तम्बेरमास्यश्वसनसखमहादेवदुर्गाज्वरासु**
**प्रेत्यनीकं निवृत्तास्वनितरगतिकं संस्तुवन्तं च बाणम् ।**
**पूत ! श्रीकृष्ण ! पाहि त्रिभुवनपरिपालेत्यरक्षत् स यस्य**
**स्वान्ते रामानुजार्य स्स हि विपदपनोदं धनं मे समिन्धे ॥ २२**

ಮೂಲ : ವೈಪ್ಪಾಯವಾ ಪೊರುಳೆನ್ರು, ನಲ್ಲನ್ಬರ್ ಮನತ್ತಹತ್ತೇ
ಎಪ್ಪೋದುಂ ವೈಕ್ಕುಂ ಇರಾಮಾನುಶನ್ನೈ, ಇರುನಿಲತ್ತಿಲ್
ಒಪ್ಪಾರಿಲಾದ ವುರುವಿನ್ನೈಯೇ ವಂಜನೆಂಜಿಲ್ವೈತ್ತು
ಮುಪ್ಪೋದುಂ ವಾಳ್ತ್ತುವ, ಎನ್ನಾಮಿದು ಅವಮೊಯ್ಪುಹಳ್ಕ್ಕೇ ॥ 23

ಭಾವ :- ನಲ್ಲಭಕ್ತಿಯುಳ್ಳವರ್‌ಹಳ್ "ರಾಮಾನುಶನಮಕ್ಕು ಮಹಾವಿಪತ್ತೈ ಅಡಿಯೋಡು ಒಳಿಕ್ಕವಲ್ಲ ಅಕ್ಷಯಧನಂ" ಎನ್ರುಶೊಲ್ಲಿಕ್ಕೊಂಡು ತಂಗಳ್ ಮನತ್ತಿಲ್ ಎಪ್ಪೋದುಂ ನಿನ್ನೈಕ್ಕಪ್ಪಡುಮವರಾನ ರಾಮಾನುಜರ್ರೈ ಇಂದ ಪೆರಿಯ ವುಲಹತ್ತಿಲ್ ವೇರೊರುವರುಂ ಶೆಯ್ಯವುಡಿಯಾದದಾನ ಮಹಾಪಾಪಂಗಳ್ಳೈ ಶೆಯ್ದ ನಾ ವಂಚನ್ನೈಯೇಶೆಯ್ಯುಂ ಎನ್ನೆಂಜಿಲ್ ಎಪ್ಪೋದುಂ ವಾಳ್ತ್ತಾನಿನ್ರೇ. ಶಿರುಂ ತನ್ನೈಯಳ್ಳನಾ ಪೆರುಂತನ್ನೈಯುಳ್ಳ ಅಂದಮಹಾನ್ನೈವಾಳ್ತ್ತುಹೈಯಾನದು ಅವರ್ ಶಿರಂದಕೀರ್ತಿಕ್ಕು ಎನ್ನಾಹುಮೊ ?

ಅರ್ಥ :- ನಲ್-ಅನ್ಬರ್ = ಒಳ್ಳೆಯ ಭಕ್ತರು (ರಾಮಾನುಜರೇ ತಮ್ಮ) ವೈಪ್ಪು-ಆಯವಾ-ಪೊರುಳ್-ಎನ್ರು = ಆಪತ್ಕಾಲದಲ್ಲಿ ರಕ್ಷಿಸುವ ಸಂಪತ್ತು ಎಂದು, ಮನತ್ತಹತ್ತೆ = ಮನಸ್ಸಿನಲ್ಲಿ, ಎಪ್ಪೋದುಂ-ವೈಕ್ಕುಂ = ಸದಾ ಧ್ಯಾನಿಸಲು ವಿಷಯರಾದ, ಇರಾಮಾನುಶನ್ನೈ = ಶ್ರೀ ರಾಮಾನುಜರನ್ನು, ಇರು-ನಿಲತ್ತಿಲ್ = ವಿಶಾಲಭೂಮಿಯಲ್ಲಿ, ಒಪ್ಪಾರ್-ಇಲಾದ-ಉರುವಿನ್ನೈಯೇ = ಹೋಲುವವರೇ ಇಲ್ಲದಂತೆ ತುಂಬಾ ಪಾಪಮಾಡಿದವನಾಗಿ, ವಂಜ-ನೆಂಜಿಲ್ = ವಂಚಿಸುವ ಮನಸ್ಸಿನಲ್ಲಿ, ವೈತ್ತು = ಧ್ಯಾನಮಾಡಿನಿಲ್ಲಿಸಿಕೊಂಡು, ಮುಪ್ಪೋದುಂ = ಮೂರುಹೊತ್ತೂ (ಸದಾ) ವಾಳ್ತ್ತುವ = ಸ್ತುತಿಸುವೆನು, ಇದು = ಈ ರೀತಿಯಾದುದು, ಅವ-ಮೊಯ್-ಪುಹಳ್ಕ್ಕು = ಅವರ ಎಲ್ಲೆಡೆಯೂ ಆವರಿಸಿದ ಕೀರ್ತಿಗೆ, ಎ-ಆಂ = ಏನಾಗುವುದೋ ?

ತಾತ್ಪರ್ಯ :- ವಿಶೇಷಭಕ್ತಿಯುಳ್ಳವರು, "ನಮ್ಮ ಮಹಾವಿಪತ್ತನ್ನು ನಿರ್ಮೂಲ ಗೊಳಿಸಬಲ್ಲವರು ಶ್ರೀ ರಾಮಾನುಜರೊಬ್ಬರೇ. ಅವರೇ ದೊಡ್ಡ ನಿಧಿ". ಎನ್ನುತ್ತಾ ಮನಸ್ಸಿನಲ್ಲಿ ಸದಾ ಧ್ಯಾನಿಸುವರು. ಅಂತಹ ಮಹನೀಯರನ್ನು ನನ್ನ ವಂಚನೆಯೇ ರೂಪಗೊಂಡಿರುವ ಹೃದಯದಲ್ಲಿ ಯಾವಾಗಲೂ ನೆಲೆಯಾಗಿರುವಂತೆ ಮಾಡಿರುವೆನು. ನಾನಾದರೋ ಈ ವಿಶಾಲ ಮಹೀತಲದಲ್ಲಿ ಬೇರೆಯಾರೂ ಮಾಡದಷ್ಟು ಪಾಪಗಳನ್ನು ಮಾಡಿದವನು. ಹೀಗೆ ಆ ಮಹಾಮಹಿಮರನ್ನು ಮಹಾಧಮನಾದ ನಾನು ಸದಾಚಿತ್ತದಲ್ಲಿ ನೆಲೆಗೊಳಿಸುದುದು ಆ ಮಹಾತ್ಮರ ಅಪಾರ ಕೀರ್ತಿಗೆ ಏನಾಗುವುದೋ ?

सद्भक्तै र्यं विदित्वा विपदुपशमनं स्वीय मक्षय्यवित्तं
स्वान्तेष्वाराध्यमानं यतिकुलतिलकं ह्यत्र रामानुजार्यम् ।
चित्तेऽहं वञ्चनाढ्ये विविधदुरितकृत्तादृशं संनिवेश्या-
जस्रम् प्रध्याय जीवाम्यत इद मयशः किं नु तत्कीर्तिराशेः ॥ २३

ಮೂಲ : ಮೊಯ್‌ತ್ತವೆಂತೀವಿನ್ನೈಯಾಲ್ ಪಲ್ಲುಡಲ್ದೊರುಂಮೂತ್ತು, ಅದನಾಲ್
ಎಯ್‌ತ್ತೊಳಿಂದೇ಼ ಮುನನಾಳ್‌ಹಳೆಲ್ಲಾಂ, ಇನ್ರುಕಂಡುಯರ್‌ನ್ದೇ಼
ಪೊಯ್‌ತ್ತವಂಪೋತ್ತುಂ ಪುಲ್ಲೈಚ್ಚಮಯಂಗಳ್ ನಿಲತ್ತವಿಯ
ಕೈತ್ತಮ್ಮೈಜ್ಞಾನತ್ತು, ಇರಾಮಾನುಶನೆನ್ನುಂ ಕಾರ್‌ತನ್ನೈಯೇ॥ 24

ಭಾವ :- ಕಳಿಂದ ಕಾಲಮ್ಮೆಳುದುಂ ಪಲವಿದಶರೀರಂಗಳಿಲೆ ಆತ್ಮಾವೈ ಶುತ್ತಿಕ್ಕೊಂಡ ಕೊಡಿಯಾನ ಕರ್ಮಾವಾಲೆವಾಳಮಳವುಂಇರುಂದದಾಲ್ ಮಿಹವುಂ ಪರಿತಪಿತ್ತೇ಼. ಕಪಟಾಚಾರಂಗಳೈ ಶೆಯ್ಯುಂನೀಚಮತತ್ತಾರ್ ಇಂದನಾಟ್ಟಿಲೇ ಒರುವರುಂ ಇರಾಮಲ್ ಒಳಿಂದುಪೋಂಬಡಿ ನಿರಸನಂಶೆಯ್ದ, ಮೆಯ್ಯಾನ ಅರಿವುತ್ತ, ರಾಮಾನುಜರೆನ್ರುಂ ನೀಲಮೇಘತ್ತೈ ಇಪ್ಪೋದು ಸೇವಿಕ್ಕ ಅಡೈಂದು ಶಿರಂದವನಾಯ್‌ವಿಟ್ಟೇ಼.

ಅರ್ಥ :- ಮುನ-ನಾಳ್‌ಹಳೆಲ್ಲಾಂ = ಕಳೆದುಹೋದಕಾಲವೆಲ್ಲ, ಪಲ್-ಉಡಲ್-ದೊರುಂ = ಹಲವಾರು ಒಡಲುಗಳಲ್ಲಿ (ಆತ್ಮವನ್ನು) ಮೊಯ್‌ತ್ತ = ಸುತ್ತಿಕೊಂಡ, ವೆಂ-ತೀವಿನ್ನೈಯಾಲ್ = ಅತ್ಯುಗ್ರವಾದ ಪಾಪಗಳಿಂದ, ಮೂತ್ತು = ವಾಸಮಾಡಿ, ಅದನಾಲ್ = ಅದರಿಂದ, ಎಯ್‌ತ್ತು = ಬಹಳ, ಒಳಿಂದೇ಼ = ಪರಿತಪಿಸಿದೆನು. ಪೊಯ್-ತ್ತವಂ-ಪೋತ್ತುಂ-ಪುಲ್ಲೈಚ್ಚಮಯಂಗಳ್ = ಕಪಟವಾದ ತಪಸ್ಸನ್ನು ಆಚರಿಸುವ ನೀಚಮತದವರು, ನಿಲತ್ತು-ಅವಿಯ = ಈ ಭೂಮಿಯಲ್ಲಿಲ್ಲದೆ ನಶಿಸುವಂತೆ, ಕೈತ್ತ = ಖಂಡಿಸಿದ, ಮೆಯ್-ಜ್ಞಾನತ್ತು = ಸತ್ಯಜ್ಞಾನರಾದ, ಇರಾಮಾನುಶರ್-ಎನ್ನುಂ = ಶ್ರೀರಾಮಾನುಜರೆಂಬ, ಕಾರ್‌ತನ್ನೈ = ಕಾಳಮೇಘವನ್ನು, ಇನ್ರು = ಈದಿನ, ಕಂಡು = ನೋಡಿ (ಪಡೆದು), ಉಯರ್‌ನ್ದೇ಼ = ಶ್ರೇಷ್ಠನಾದೆನು.

ತಾತ್ಪರ್ಯ :- ಹಿಂದೆಲ್ಲಾ ಪರಿಪರಿಯಾದ ಶರೀರಗಳಲ್ಲಿ ಈ ಆತ್ಮನನ್ನು ಆವರಿಸಿದ್ದ ಕಡುತರ ಪಾಪಕರ್ಮಗಳಿಂದ ಜೀವಿಸಿದ್ದ ಕಾಲ ಪೂರ್ತಿ ಬಹಳ ತಾಪಗೊಂಡೆನು. ಕಪಟಾಚಾರವುಳ್ಳ ನೀಚಮತದವರೊಬ್ಬರೂ ಉಳಿಯದೆ ಅಳಿಯುವಂತೆ ಖಂಡಿಸಿದ, ಸತ್ಯಜ್ಞಾನರಾದ, ರಾಮಾನುಜರೆಂಬ ಕಾರ್ಮುಗಿಲನ್ನು ಇಂದು ಸೇವಿಸಲು ಪಡೆದು ಉತ್ಕೃಷ್ಟನಾದೆನು.

यातेकालेऽद्ययावत् धृतविविधतनुः कर्मभि र्दुष्कृतेद्वैः
तप्तोऽत्युग्रैश्च तापै रभवमहमितो डाम्भिकाचारनिष्ठाः ।
निश्शेषा स्स्युर्यथामी अधममतरताः खण्डिता येन सत्य-
ज्ञानं रामानुजं तं त्वभव मुपगतः कृष्णमेघं प्रकृष्टः ॥ २४

ಮೂಲ : ಕಾರೇಯ್‌ಕರುಣೈಯಿರಾಮಾನುಶ ! ಇಕ್ಕಡಲಿಡತ್ತಿಲ್
ಆರೇ ಅರಿಬವರ್ ನಿನ್ನರುಳಿ‌ ತನ್ಮೈ, ಅಲ್ಲಲುಕ್ಕು
ನೇರೇಯುರೈವಿಡಂ ನಾ‌ ವಂದು ನೀ ಎನ್ನೈ ಉಯ್‌ತ್ತಪಿ‌ ಉ‌
ಶೀರೇ ಉಯಿರ್ಕ್ಕುಯಿರಾಯ್, ಅಡಿಯೇರ್ಕ್ಕಿನ್ರುತಿತ್ತಿಕ್ಕುಮೇ॥ 25

ಭಾವ :- ಕಾರ್ಮುಹಿಲೊಪ್ಪಂ ಕರುಣೈಯುಳ್ಳ ರಾಮಾನುಜರೇ ! ನಾ‌ ದುಃಖಂಗಳುಕ್ಕು ನೇರಾಹ ಇಡಮಾಯಿರುಪ್ಪವ‌. ದೇವರೀರೇ ವಂದು ಎನ್ನೈ ಅಂಗೀಕರಿತ್ತಿರುಕ್ಕಿನ್ರೀರ್. ಇಪ್ಪಡಿಯಾನ ಪಿನ್ಬು ಉಮ್ಮುಡೈಯ ನಿತ್ಯಸಿದ್ಧಮಾನ ಕಲ್ಯಾಣಗುಣಂಗಳೇ ಎನ್ನಾತ್ಮಾವುಕ್ಕು ಧಾರಕಮಾಯುಂ, ಪರಮಭೋಗ್ಯಮಾಯುಂ ಇರುಕ್ಕಿನ್ರನ. ದೇವರೀರುಡೈಯ ಕೃಪೈಯಿ‌ ಸ್ವರೂಪ ಸ್ವಭಾವ ಪರಿಮಾಣಾದಿಹಳೈ ಇಂದ ಕಡಲಿಡಂ ಕೊಂಡ ಬುವಿಯಲ್ ಅರಿಯವಲ್ಲವರ್ ಯಾರ್ ?

ಅರ್ಥ :- ಕಾರೇಯ್-ಕರುಣೈ-ಇರಾಮಾನುಶ = ಮೇಘದಂತೆ (ಸಾರ್ವತ್ರಿಕ ದಯೆಯುಳ್ಳ ರಾಮಾನುಜರೇ ! ನಾ‌ = ನಾನು, ಅಲ್ಲುಲಕ್ಕು-ನೇರೇ-ಉರೈ-ಇಡಂ = ದುಃಖಗಳಿಗೆ ನೇರವಾದ ವಾಸಸ್ಥಾನವಾಗಿರುವವನು. ಎನ್ನೈ = (ಹೀಗಿರುವ) ನನ್ನನ್ನು, ನೀ-ವಂದ್-ಉಯ್‌ತ್ತ-ಪಿ‌ = ನೀವೇ ಬಂದು ಅಂಗೀಕರಿಸಿದಮೇಲೆ, ಉ‌-ಶೀರೇ = ನಿಮ್ಮ ಸದ್ಗುಣಗಳಿಗೇ, ಉಯಿರ್ಕ್ಕು = ಪ್ರಾಣಗಳಿಗೆ, ಉಯಿರಾಯ್ = ಪ್ರಾಣವಾಗಿ, ಅಡಿಯೇನುಕ್ಕು = ನನಗೆ, ಇನ್ರು = ಇಂದು, ತಿತ್ತಿಕ್ಕುಂ = ಹೆಚ್ಚು ರುಚಿಸುತ್ತವೆ. ನಿ‌-ಅರುಳಿ‌-ತನ್ಮೈ = ನಿಮ್ಮ ದಯೆಯ ಸ್ವರೂಪವನ್ನು, ಇಕ್ಕಡಲಿಡತ್ತಿಲ್ = ಸಮುದ್ರದವರೆಗಿನ ಭೂಮಿಯಲ್ಲಿ, ಆರೇ = ಯಾರುತಾನೇ. ಅರಿಬವರ್ = ಅರಿಯಬಲ್ಲರು ?

ತಾತ್ಪರ್ಯ :- ಓ ರಾಮಾನುಜರೇ ! ಮೇಘವು ಸಮದೃಷ್ಟಿಯಿಂದ ಮಳೆ ಸುರಿಸುವಂತೆ ಅವರಿವರೆನ್ನದೆ, ಅಂತಹವರಿಂತಹವರೆನ್ನದೆ ಎಲ್ಲರಲ್ಲೂ ದಯೆ ತೋರುವ ಉದಾರರು ನೀವು. ನಾನು ದುಃಖಗಳಿಗೆ ವಾಸಸ್ಥಾನ. ಇಂತಹ ನನ್ನನ್ನು ನೀವಾಗಿಯೇ ಬಂದು ಸ್ವೀಕರಿಸಿರುವಿರಿ. ನಿಮ್ಮ ಅನ್ಯಾದೃಶವಾದ ಸದ್ಗುಣಗಳೇ ನನ್ನ ಆತ್ಮನಿಗೆ ಪ್ರಾಣದಂತೆ ಅತಿ ಪ್ರಿಯವಾಗಿವೆ. ನಿಮ್ಮ ಕರುಣೆಯು ಇಂತಹುದು, ಇಂತಹ ಸ್ವಭಾವದ್ದು ಮತ್ತು ಇಷ್ಟೇ ಎಂಬುದನ್ನು ಕಡಲಿನವರೆಗೆ ಹರಡಿದ ಈ ಪೊಡವಿಯಲ್ಲಿ ಅರಿತಿರುವವರು ಯಾರಿವರು ? ಯಾರೂ ಇಲ್ಲ, ಅಷ್ಟು ವಿಲಕ್ಷಣವಾದುದು.

हे रामानुज ! नीलवारिद दयालोऽहं च दुःखालयः
मामेतादृशमात्मसात् यदकरोस्तन्मङ्गलास्ते गुणाः ।
जाता आत्मविधारका अनितरास्वाद्या ममातिप्रियाः
को वा वेत्ति धरातलेऽम्बुधिवृते भावं दयायास्तव ॥ २५

ಮೂಲ : ತಿಕ್ಕುತ್ತಕೀರ್ತಿಯಿರಾಮಾನುಶನ್ನೈ, ಎರ್ಶೆಯ್ವಿನ್ನೆಯಾಂ
ಮೆಯ್ಕ್ಕುತ್ತಂ ನೀಕ್ಕಿವಿಳಂಗಿಯಮೇಹತ್ತೈ, ಮೇವುಂನಲ್ಲೋರ್
ಎಕ್ಕುತ್ತವಾಳರ್ ಎದುಪಿರಪ್ಪೇದಿಯಲ್ವಾಹ ನಿನ್ರೋರ್
ಅಕ್ಕುತ್ತಮಪ್ಪಿರಪ್ಪು, ಅವ್ವಿಯಲ್ವೇ ನಮ್ಮೈ ಆಳ್ಹೊಳ್ಳುಮೇ ॥ 26

ಭಾವ :- ನಾಶೆಯ್ದ ವಿನ್ನೆಯೆನ್ನುಂನಿಲೈಪೆತ್ತದೋಷಂಗಳೈಪ್ಪೋಕ್ಕಿ ಪ್ರಕಾಶಿತ್ತ, ಮೇಘಗುಣಂಪೋನ್ರ, ದಿಶೈಕಳೆಂಗುಂಪರವಿನಕೀರ್ತಿಯುಳ್ಳರಾಮಾನುಶರೈ ಪ್ರಾಪ್ಯಪ್ರಾಪಕಂಗಳಾಹ ಚಿಂತಿಕ್ಕಿರಮಹಾಹಳ್ಯಾದೊರುಕುತ್ತ ಮಿಲ್ಲಾದಾರಾಯುಂ ಎವ್ವಿದಪಿರಪ್ಪುಳ್ಳವರಾಯುಂ, ಯಾದೊರುಚರಿತಮುಡ್ಡೈಯವರಾಯುಂ, ಇರುಂದಾರ್ ಹಳೋ, ಅವ್ವಿದಕುತ್ತಮುಂ, ಅಂದಪಿರಪ್ಪುಂ, ಅವ್ವಿದಚರಿತ್ರಮೇ ನಮ್ಮೈ ಅಡಿಮೈಪ್ಪಡುತ್ತಿ ಕ್ಕೊಳ್ಳುಂ

ಅರ್ಥ :- ಎರ್-ಶೆಯ್ವಿನ್ನೈ-ಆಂ = ನನ್ನಿಂದ ಮಾಡಲ್ಪಟ್ಟ ಪಾಪಕರ್ಮವೆಂಬ, ಮೆಯ್-ಕುತ್ತಂ = ಸ್ಥಿರವಾಗಿ ನಿಂತದೋಷವನ್ನು, ನೀಕ್ಕಿ = ಹೋಗಲಾಡಿಸಿ, (ಇವನ ದೋಷವನ್ನು ನೀಗಿದ ಕೀರ್ತಿಯಿಂದ) ವಿಳಂಗಿಯ = ಕಂಗೊಳಿಸುವ, ಮೇಘತ್ತೈ = ಮೋಡದಂತೆ, ದಿಕ್ಕು-ಉತ್ತ-ಕೀರ್ತಿ = ದಿಗಂತದವರೆಗೆ ಹಬ್ಬಿದ ಯಶಸ್ಸುಳ್ಳವರಾದ, ರಾಮಾನುಶನ್ನೈ = ರಾಮಾನುಜರನ್ನು, ಮೇವುಂ = (ಅವರಅಡಿಗಳೇಪ್ರಾಪ್ಯ + ಪ್ರಾಪಕಗಳೆಂದು) ತದೇಕಚಿತ್ತದಿಂದ ಧ್ಯಾನಿಸುವ, ನಲ್ಲೋರ್ = ಗುಣವಂತರು, ಎಕ್ಕುತ್ತವಾಳರ್ = ಯಾವ (ಜ್ಞಾನಸಂಕೋಚವೆಂಬ) ದೋಷವುಳ್ಳವರೂ, ಎದು-ಪಿರಪ್ಪು = ಯಾವ ಜನ್ಮತಾಳಿದವರೂ, ಏದಿಯಲ್ವಾಹ = ಯಾವ ಚರಿತವುಳ್ಳವರೂ (ಆಗಿ) ನಿನ್ರೋರ್ = ಹಿಂದಿದ್ದರೋ, ಅಕ್ಕುತ್ತಂ = ಆದೋಷವೇ, ಅಪ್ಪಿರಪ್ಪುಂ = ಆ ಜನ್ಮವೇ, ಅವ್ವಿಯಲ್ವೇ = ಆನಡತೆಯೇ, ನಮ್ಮೈ = ನಮ್ಮನ್ನು ಆಳ್ಕೊಳ್ಳುಂ = ಸೇವಕನನ್ನಾಗಿ ಮಾಡಿಕೊಳ್ಳುವುವು.

ತಾತ್ಪರ್ಯ :- ಶ್ರೀ ರಾಮಾನುಜರು ನನ್ನ ಹಿಂದಿನಪಾಪವನ್ನೆಲ್ಲಾ ಹೋಗಲಾಡಿಸಿದರು. ಅದರಿಂದಲೇ ಮತ್ತಷ್ಟು ಬೆಳಗಿದರು. ಮೇಘದಂತೆ ಉದಾರರು, ದಿಕ್ತಟಗಳಲ್ಲಿ ಪ್ರಸರಿಸಿದ ಕೀರ್ತಿವಂತರು. ಇಂತಹ ಮಹನೀಯರನ್ನು ತದೇಕಧ್ಯಾನದಿಂದ ಚಿಂತಿಸಿ ಆಶ್ರಯಿಸಿದ ಪುಣ್ಯಾತ್ಮರು ಅದೆಂತಹ ದೋಷವುಳ್ಳವರೂ, ಅದಾವವಿಧ ಜನ್ಮ ತಾಳಿದವರೂ, ಅದಾವಚರಿತವುಳ್ಳವರೂ ಆಗಿದ್ದರೋ ಆ ದೋಷವೇ ಆ ಜನ್ಮವೇ ಆ ನಡತೆಯೇ ನಮ್ಮನ್ನೂ ಅಡಿಯಾಳುಗಳುಗಳನ್ನಾಗಿ ಮಾಡುವುವು.

**दोषं मत्पापरूपं दृढममित मपोह्याशु राराजमानं**
**आसेदु र्व्याप्तकीर्तिं प्रकटितमहिमौदार्यरामानुजार्यम् ।**
**ये यादृक् तेषु दोषः क इह समभवन् कुत्र ते किंचरित्राः ।**
**तादृग्दोषश्च तादृक् जनुरपि चरितं किंकरान् कुर्वते नः ॥** २६

ಮೂಲ : ಕೊಳ್ಳಕ್ಕುರೈವತ್ತಿಲಂಗಿ, ಕೊಳುಂದು ವಿಟ್ಟೋಂಗಿಯ ವುರ್
ವಳ್ಳಲ್‌ತನತ್ತಿನಾಲ್ ವಲ್ವಿನ್ಯೆಯೇರ್ಮನಂ ನೀ ಪುಹುಂದಾಯ್,
ವೆಳ್ಳೈಚ್ಚುಡರ್‌ವಿಡುಮುರ್ಪೆರುಮೇನ್ಮೈಕ್ಕು ಇಳುಕ್ಕಿದೆನ್ರು
ತಳ್ಳುತ್ತಿರಂಗುಂ, ಇರಾಮಾನುಶಾ ! ಎರ್ತನಿನೆಂಜಮೇ ॥ 27

ಭಾವ :- ಓ ರಾಮಾನುಜರೆ ! ಕೊಳ್ಳ ಕೊಳ್ಳ ಕುರೈಯಾಮಲ್ ತಾನಾಹಮೇ ಒಳಿತ್ತು ಮೇನ್ಮೇಲುಂ ವಳರ್‌ನ್ದುವರುಂ ದೇವರೀರ್ ಔದಾರ್ಯಗುಣತ್ತಾಲೇ ವಂದು ಉಮ್ಮುಡೈಯ ಪೆರುಮ್ಮೈಯುಂ ಪಾರಾದೆ ಮಹಾಪಾಪಂಶೆಯ್ದ ಎನ್ನೆಂಜಿಲೇ ಪುಕುಂದೀರ್. ಶೆರಾದಶೇರ್ತಿಯಾಯಿತ್ತಿದು. ಇಂದ ಪುಹುದಲ್ ಅತಿ ನಿರ್ಮಲ ತೇಜಸ್ಸುಡೈಯ ದೇವರೀರ್ ಮಹತ್ತಾನ ವೈಭವತ್ತಿರ್ಕು ಎನ್ನ ಅವದ್ಯಂತರುಮೋ ! ಎನ್ರು ತುಣ್ಯೆಯತ್ತ ಎರ್ ಮನಂ ತಳರಾನಿನ್ರದು.

ಅರ್ಥ :- ಇರಾಮಾನುಶ = ಶ್ರೀ ರಾಮಾನುಜರೆ ! ಕೊಳ್ಳ-ಕುರೈವು-ಅತ್ತು = ಕೊಂಡಷ್ಟೂ ಸ್ವಲ್ಪವೂ ಇಳಿಮುಖವಾಗುವುದನ್ನು ಬಿಟ್ಟು, ಇಲಂಗಿ (ತಾನಾಗಿಯೇ) ಬೆಳಗಿ ಕೊಳಿಂದುವಿಟ್ಟು-ಓಂಗಿಯ = ಕುಡಿಬಿಟ್ಟು ಹೆಚ್ಚು ಹೆಚ್ಚಾಗಿ ಬೆಳೆಯುತ್ತಿರುವ ಉರ್-ವಳ್ಳಲ್-ತನತ್ತಿನಾಲ್ = ನಿಮ್ಮ ಅತ್ಯುದಾರತನದಿಂದ, ವಲ್-ವಿನ್ಯೆಯೇರ್-ಮನಂ = ಕಡುಪಾಪಿಯಾದ ನನ್ನ ಮನವನ್ನು , ನೀ = ನೀವಾಗಿಯೇ ಪುಕುಂದಾಯ್ = ಹೊಕ್ಕಿರುವಿರಿ, ಇದು-ವೆಳ್ಳೈ-ಚುಡರ್-ವಿಡುಂ-ಪೆರು-ಮೇನ್ಮೈಕ್ಕು = ನಿರ್ಮಲವಾಗಿ ಬೆಳಗುವ ನಿಮ್ಮ ಪ್ರಭಾವಕ್ಕೆ ಇಳುಕ್ಕು = ಕೊಳೆ(ಕಳಂಕ) ಎನ್ರು = ಎಂದು, ಎರ್-ತನಿ-ನೆಂಜಂ = ಯಾವನೆರವೂ ಇಲ್ಲದ ಕೇವಲ ನನ್ನ ಮನಸ್ಸನ್ನು, ತಳ್ಳುತ್ತಿರಂಗುಂ = ಕಳವಳಗೊಳ್ಳುತ್ತಿದೆ.

ತಾತ್ಪರ್ಯ :- ಓ ರಾಮಾನುಜರೆ ! ಹೆಚ್ಚಿದಷ್ಟೂ ಸ್ವಲ್ಪ ವೂ ಇಳಿಯದೆ ಬೆಳಗುತ್ತಾ ಮೇಲ್ಮೇಲೇ ಕುಡಿಯೊಡೆದು ಬೆಳೆಯುತ್ತಿರುವ ಔದಾರ್ಯವೆಂಬ ಗುಣದಿಂದ ಮಹಾಪಾಪ ಮಾಡಿದ ನನ್ನ ಮನದಲ್ಲಿ ''ಶ್ವಸಿತಾವಧೂತಪರವಾದಿವೈಭವಾಃ'' ಎಂದು ಹೆಸರಾಂತ ನಿಮ್ಮ ಹಿರಿಮೆ ಮಹಿಮೆಗಳನ್ನೂ ಲೆಕ್ಕಿಸದೆ ಬಂದು ಪ್ರವೇಶಿಸಿರುವಿರಿ. ನೀವು ಹೀಗೆ ಪ್ರವೇಶಮಾಡಿದುದು ''ನಿಗಮಜಲಧಿ ವೇಲಾಪೂರ್ಣಚಂದ್ರೋಯತೀಂದ್ರಃ'' ಎಂಬಂತೆ ಖ್ಯಾತರಾದ ನಿಮ್ಮ ತೇಜೋರಾಶಿಗೆ ಏನಾದರೂ ಸ್ವಲ್ಪ ದೋಷ ತಟ್ಟಬಹುದೋ ಎಂದು ನನ್ನ ಹೃದಯವು ತಳಮಳಗೊಳ್ಳುತ್ತಿದೆ.

श्रीमन् ! रामानुज ! त्वं निरवधिकरुणावार्धि रौदार्यशाली
स्वान्तं मे पापचर्याकलुषितमपि यत्प्राविश स्तव्द्यनक्ति ।
न्यूनाधिक्यादिशून्य स्तव धृतसमताभाव आत्मानुभावः
ज्ञात्वोद्विग्रं मनो मे भवदमलयशोराशि रित्यङ्किता स्यात् ॥ २७

ಮೂಲ : ನೆಂಜಿಲ್ ಕರೈಹೊಂಡಕಂಜನೈಕ್ಕಾಯ್‌ನ್ದನಿಮರ್ಲ, ನಂಗಳ್
ಪಂಜಿತ್ತಿರುವಡಿಪ್ಪಿನ್ನೈತ್ತರ್ಕಾದರ್ಲ, ಪಾದಂ ನಣ್ಣಾ
ವಂಜರ್ಕ್ಕರಿಯ ಇರಾಮಾನುರ್ಶ ಪುಕಳನ್ರಿಯರ್ವಾಯ್
ಕೊಂಜಿಪ್ಪರವಹಿಲ್ಲಾದು, ಎನ್ರವಾಳ್ವಿನ್ರು ಕೂಡಿಯದೇ ॥ 28

ಭಾವ :- ಮನತ್ತಿಲ್ ಕೆಡುದಲ್ ಎಣ್ಣಿನಕಂಸನೈ ಒಳತ್ತವನುಂ, ನಿರ್ಮಲನುಂ, ಅಡಿಯವರಿಲ್ ಅಭಿಮಾನವುಳ್ಳವಳಾಯ್, ಪಂಜುಪೋಲ್ ಮಿದುವಾನ ತಿರುವಡಿಕಳುಡೈಯ ನಪ್ಪಿನ್ನೈಪಿರಾಟ್ಟಿಕ್ಕು ನಲ್ಲವಾನ, ಕಣ್ಣಪಿರ್ರಾ ತಿರುವಡಿಕಳೈಪಣಿಯಾದ ಆತ್ಮಾಪಹಾರದೋಷಮುಳ್ಳತಿರುಡರ್‌ಹಳುಕ್ಕು ಕಿಡೈಕ್ಕಾದವರಾನ ಶ್ರೀ ರಾಮಾನುಜರ್ ಪುಹಳೈಪುಹಳ್ವದೊಳಿಯ ವೇರೊನ್ನೈಎನ್‌ವಾಯ್ ಅನ್ಬಾಲೆ ಪುಹಳಾದು. ಇಪ್ಪೋದು ನೇರ್‌ನ್ದಿರುಕ್ಕುಂ ವಾಳ್‌ಚಿ ಮಿಹವುಂ ಆಶ್ಚರ್ಯಕರಮಾನದು.

ಅರ್ಥ :- ನೆಂಜಿಲ್ = ಮನದಲ್ಲಿ, ಕರೈ-ಹೊಂಡ = ದೋಷವುಳ್ಳ, ಕಂಜನೈ = ಕಂಸನನ್ನು, ಕಾಯ್‌ನ್ದ = ಕೊಂದ, ನಿಮರ್ಲ = ದೋಷದೂರನಾದ, ನಂಗಳ್-ಪಂಜು-ತ್ತಿರುವಡಿ = ಆಶ್ರಿತರಲ್ಲಿರುವ ಪ್ರೇಮದಿಂದ ಅರಳೆಯಂತೆ ಮೃದುವಾದ ಪಾದಗಳುಳ್ಳ, ಪಿಳ್ಳೈತ್ತರ್-ಕಾದರ್ಲ = ಗೋಪಿಯವಲ್ಲಭನಾದ ಕೃಷ್ಣನ, ಪಾದಂ-ನಣ್ಣಾ = ಅಡಿಗಳನ್ನಾಶ್ರಯಿಸದ, ವಂಜರ್ಕ್ಕು = ವಂಚಕರಿಗೆ, ಅರಿಯ = ಸಿಕ್ಕದ, ಇರಾಮಾನುರ್ಶ = ರಾಮಾನುಜರ, ಪುಹಳ್-ಅನ್ರಿ = ಸದ್ಗುಣಗಳನ್ನು ಹೊರತು, (ಬೇರೆಯಾರನ್ನೂ) ಎರ್-ವಾಯ್ = ನನ್ನ ಬಾಯಿ, ಕೊಂಜಿ-ಪ್ಪರವಹಿಲ್ಲಾದು = ಪ್ರೀತಿಯಿಂದ ಪೊಗಳದು, ಇನ್ರು-ಕೂಡಿಯದು-ವಾಳ್‌ವು = (ನನಗೆ) ಇಂದೊದಗಿದಬಾಳು, ಎನ್ನ = ಎಂತಹ ಆಶ್ಚರ್ಯಕರವೋ ?

ತಾತ್ಪರ್ಯ :- ಪಾಪಭಾವನೆಯ ಕಂಸನನ್ನುಧ್ವಂಸಮಾಡಿದನು ಶ್ರೀ ಕೃಷ್ಣ, ನಿರ್ಮಲನು. ಆಶ್ರಿತರಲ್ಲಿ ಬಲು ಪ್ರೇಮವುಳ್ಳವನು. ಅರಳೆಯಂತೆ ಕೋಮಲ ಅಡಿಗಳುಳ್ಳವನು. ಗೋಪಿಯವಲ್ಲಭನು. ಆ ಪರಮಾತ್ಮನಡಿಗಳನ್ನು ಶರಣು ಹೊಂದದೆ, ಆತ್ಮವನ್ನೇ ಕದ್ದಂತಹವರಿಗೆ ಲಭಿಸರು ನಮ್ಮ ರಾಮಾನುಜರು. ಅವರ ಗುಣಗಳನ್ನು ಹೊಗಳುವುದನ್ನು ಬಿಟ್ಟು, ಮತ್ತಾವುದನ್ನೂ ನನ್ನ ಬಾಯಿ ವರ್ಣಿಸಿ ಹೇಳದು. ಈಗ ಒದಗಿರುವ ಬಾಳು ಆಶ್ಚರ್ಯಕರವಾದುದು.

भर्तुः कल्मषचित्तकंसदमनस्या त्यन्तशुद्धात्मनः
भक्तातिप्रियवल्लवीजनपतेः कृष्णस्य पादाब्जयोः ।
द्वेष्टणमतिदुर्लभस्य च गुणान् रामानुजस्यान्तरा
ब्रूते मद्वदन न चापर महो ! मेऽद्याद्भुतं जीवितम् ॥ २८

ಮೂಲ : ಕೂಟ್ಟುಂ ವಿದಿಯೆನ್ರು ಕೂಡುಂಗೊಲೋ, ತೆಕುರುಹೈಪ್ಪಿರಾ
ಪಾಟ್ಟೆನ್ನುಂ ವೇದಪ್ಪಶುಂತಮಿಳ್‌ತನ್ನೈ, ತಪತ್ತಿಯೆನ್ನುಂ
ವೀಟ್ಟಿ ಕಣ್‌ವೈತ್ತ ವಿರಾಮಾನುಶ ಪುಹಳ್‌ಮೆಯ್ಯುಣರ್‌ನ್ದೋರ್
ಈಟ್ಟಂಗಳ್‌ತನ್ನೈ, ಎನ್ನಾಟ್ಟಂಗಳ್‌ಕಣ್ಣಿನ್ನಮೆಯ್‌ದಿಡವೇ ॥ 29

ಭಾವ :- ನಮ್ಮಾಳ್ವಾರುಡೈಪಾಟ್ಟೆನ್ರು ಪೆಯರ್‌ಪೆತ್ತದುಂ, ವೇದತ್ತಿರ್ಕು ಈಡಾನದುಂ, ಶೆಂದಮಿಳಲಿರುಪ್ಪದುವಾನ ತಿರುವಾಯ್‌ಮೊಳಿಯ್ಯೆ ತ ಭಕ್ತಿಯಾ ಹಿರತಿರುಮಾಳಿಹೈಯಿಲ್ ನಿಲ್ಲೈನಿರ್ಕವೈತ್ತ ರಾಮಾನುಜರಿ ಗುಣಂಗಳ್ಳೈ ಉಳ್ಳಪಡಿ ಅರಿಂದಮಹಾಹಳ್ ಗೋಷ್ಠಿಹಳ್ಳೈ ಎಕಣ್ಣಾರಕ್ಕಂಡು, ಆನಂದಿಕ್ಕುಂಪಡಿ ಕೂಟ್ಟುಹಿರವಿದಿ (ಅವರ್‌ಕೃಪೈ) ಎಪ್ಪೋದುಕೂಟ್ಟವೈಕ್ಕುಮೊ ?

ಅರ್ಥ :- ತೆ-ಕುರುಹೈ-ಪ್ಪಿರಾ-ಪಾಟ್ಟು-ಎನ್ರುಂ = ನಮ್ಮಾಳ್ವಾರ ಹಾಡುಗಳೆಂದು ಹೆಸರಾಂತ, ವೇದ-ಪ್ಪಶುಂ-ತಮಿಳ್-ತನ್ನೈ = ವೇದಗಳಿಗೆ ಸಮಾನವಾಗಿ ರಸಭರಿತವಾದ ''ತಿರುವಾಯ್‌ಮೊಳಿ''ಯನ್ನು, ತ-ಪತ್ತಿ-ಎನ್ನುಂ-ವೀಟ್ಟಿಣ್-ಕಣ್-ವೈತ್ತ = ತಮ್ಮ ಭಕ್ತಿಯೆಂಬ ಆಲಯದಲ್ಲಿ ಸ್ಥಾಪಿಸಿದ, ಇರಾಮಾನುಶ = ಶ್ರೀ ರಾಮಾನುಜರ, ಪುಹಳ್ = ಸದ್ಗುಣಗಳನ್ನು, ಮೆಯ್-ಉಣರ್‌ನ್ದೋರ್ = ಇದ್ದದಿದ್ದಂತೆ ಅರಿತಮಹನೀಯರ, ಈಟ್ಟಂಗಳ್‌ತನ್ನೈ = ಗೋಷ್ಠಿಗಳನ್ನು, ಎ-ನಾಟ್ಟಂಗಳ್-ಕಂಡು = ನನ್ನ ಕಣ್ಣುಗಳು ನೋಡಿ, ಇನ್ಬಂ-ಎಯ್ದಿಡ = ಆನಂದಪಡುವಂತೆ, ಕೂಟ್ಟುಂ -ವಿದಿ = ಕೂಡಿಸಬಲ್ಲ ವಿಧಿಯು (ದಯೆಯು), ಎನ್ರು-ಕೂಡುಂಗೊಲ್ = ಯಾವಾಗ ಕೂಡಿಸುವುದೋ ?

ತಾತ್ಪರ್ಯ :- ನಮ್ಮಾಳ್ವಾರ್ರ ಹಾಡುಗಳೆಂದು ಪ್ರಸಿದ್ಧವಾದುದು ''ತಿರುವಾಯ್‌ಮೊಳಿ' ಎಂಬುದು. ಇದು ವೇದಕ್ಕೆ ಸರಿಸಾಟಿಯಾದುದು. ಸರಸವಾಗಿಯೂ, ಸರಳವಾಗಿಯೂ ಇದೆ. ಇದರಲ್ಲಿನಮ್ಮ ರಾಮಾನುಜರಿಗೆ ತುಂಬ ಪ್ರೀತಿ. ತಮ್ಮ ಭಕ್ತಿಯೆಂಬ ದೊಡ್ಡಸೌಧದಲ್ಲಿ ಎಂದೆಂದೂ ಇರುವಂತೆ ಸ್ಥಾಪಿಸಿಕೊಂಡರು. ಅಂತಹ ಮಹನೀಯರಾದ ರಾಮಾನುಜರ ಸದ್ಗುಣಗಳನ್ನು ಯಥಾರ್ಥವಾಗಿ ಅನುಭವಿಸಿ ಪೊಗಳುವ ಮಹಾತ್ಮರ ಗೋಷ್ಠಿಗಳನ್ನು ನನ್ನ ಕಣ್ಣಾರೆ ನೋಡಿ ಆನಂದಪಡುವಂತಹ ಸುಯೋಗವನ್ನು ಕೂಡಿಸುವ ವಿಧಿಯು (ಮುಖ್ಯವಾಗಿ ಅವರ ಕೃಪೆಯು) ಅದೆಂದು ಕೂಡಿಸುವುದೋ ?

**य स्सूक्तिं शठकोपयोगिवदनाम्भोजामृतस्यन्दिनीं**
**वेदान्तनुचरीं न्यवासयदहो ! आत्मीयभक्त्यालये ।**
**तद्रामानुजसद्गुणानुभवनानन्दं समासेदुषां**
**गोष्ठीं प्रीणयतः कदा मम दृशौ ? किं तद्दया यास्यति ?** २९

ಮೂಲ : ಇನ್ಬಂತರುಪೆರುವೀಡು ವನ್ದೆಯ್ದಿಲ್ಐ, ಎಣ್ಣಿರಂದ
ತುನ್ಬಂತರುನಿರಯಂ ಪಲಶೂಳಿಲ್ಐ, ತೊಲ್ಲುಲಹಿಲ್
ಮನ್ಬಲ್ಲುಯಿರ್ ಹಳ್ಕಿರೈಯವರ್ ಮಾಯನೆನಮೊಳಿಂದ.
ಅನ್ಬನನರ್, ಇರಾಮಾನುಶನೆನ್ನೈಯಾಣ್ಡನನೇ ॥ 30

ಭಾವ :- ''ಅನಾದಿಯಾನ ಇಂದಜಗತ್ತಿಲ್ ನಿತ್ಯಂಗಳಾಯುಂ ಶೇಷಂಗಳಾಯುಂ ಇರುಕ್ಕುಂ ಜೀವರ್‌ಹಳಕ್ಕ್ ಶೇಷಿಯಾನವರ್ ಆಶ್ಚರ್ಯಚೇಷ್ಟಿತನಾನ ಮಹಾವಿಷ್ಣುವೇ ತಾರ್'' ಎನ್ರು ಉರೈತ್ತವರುಂ, ಪರಮಕಾರುಣಿಕರುಂ, ದೋಷಮೆನ್ಬದೇ ಇಲ್ಲಾದವರುಮಾನ, ರಾಮಾನುಜರ್ ಎನ್ನೆಅಡಿಮೈಕ್ಕೊಂಡರುಳಿನಪಿನ್ಬು ಮಿಹವುಂ ಆನಂದಂ ಕೊಡುಕ್ಕುಂ ಪರಮಪದಮೋ ವಂದುಕಿಡೈತ್ತಾಲ್ ಎನ್ನ ? ಅಳವತ್ತ ದುಃಖಂಗಳ್ ತರುಂ ಪಲವಿದನರಕಂಗಳ್ ವಂದು ಶೂಳ್‌ನ್ದಾಲ್ ತಾನ್ ಎನ್ನ ?

ಅರ್ಥ :- ತೊಲ್-ಉಲಹಿಲ್ = ಅನಾದಿಯಾದ ಈ ಲೋಕದಲ್ಲಿ, ಮನ್-ಪಲ್-ಉಯಿರ್‌ಹಳುಕ್ಕು = ನಿತ್ಯವಾದ ಆತ್ಮಗಳಿಗೆಲ್ಲ, ಇರೈಯವರ್ = ಸ್ವಾಮಿಯಾದವನು, ಮಾಯರ್ = (ಆಶ್ಚರ್ಯವ್ಯಾಪಾರವುಳ್ಳ) ವಿಷ್ಣುವೇ, ಎನ = ಎಂದು, ಮೊಳಂದು = ಹೇಳಿದ, ಅನ್ಬರ್ = ಬಲುಪ್ರೀತಿಯುಳ್ಳ, ಅನಘರ್ = ದೋಷವಿಲ್ಲದ, ಇರಾಮಾನುಶರ್ = ಶ್ರೀ ರಾಮಾನುಜರು, ಎನ್ನೈ = ನನ್ನನ್ನು, ಆಂಡನರ್ = ಸೇವಕನನ್ನಾಗಿ ಮಾಡಿಕೊಂಡರು. (ಹೀಗಾದ ಮೇಲೆ) ಇನ್ಬಂ-ತರು = ಆನಂದವನ್ನೀವ, ಪೆರು-ವೀಡು = ಮೋಕ್ಷವು, ವಂದು = ಬಂದು, ಎಯ್ದಿಲ್ದರ್-ಎನ್ = ದೊರಕಿದರೆ ಏನು ? ಎಣ್-ಇರಂದ = ಎಣಿಸಲಾಗದ, ತುನ್ಬಂತರು = ದುಃಖಗಳನ್ನು ಕೊಡುವ, ಪಲ-ನಿರಯಂ = ಹಲವಾರು ನರಕಗಳು, ವಂದು = ಬಂದು, ಶೂಳಿಲ್-ಎನ್ = ಮುತ್ತಿಕೊಂಡರೆತಾನೆ ಏನು ?

ತಾತ್ಪರ್ಯ :- ''ಅನಾದಿಯಾದ ಈ ಲೋಕದಲ್ಲಿ ಎಲ್ಲ ಆತ್ಮಗಳಿಗೂ ಸ್ವಾಮಿ ಶ್ರೀ ಮಹಾವಿಷ್ಣುವೇ, ಬೇರೆಯವರಲ್ಲ'', ಎಂದು ಹೇಳಿದವರೂ, ಪರಮ ದಯಾಳುಗಳೂ, ಮತ್ತು ದೋಷದ ಸೊಲ್ಲಿಲ್ಲದವರೂ ನಮ್ಮ ರಾಮಾನುಜರು. ನನ್ನನ್ನು ತಮ್ಮ ಅಡಿಯಾಳನ್ನಾಗಿ ಮಾಡಿಕೊಂಡರು. ಹೀಗಾದ ಮೇಲೆ ಅತ್ಯಂತಾನಂದವಿರುವ ಮುಕ್ತಿಯೇ ಲಭಿಸಲಿ, ಅಥವಾ ಪರಿಪರಿಯಾದ ಯಾತನೆಗಳನ್ನು ಕೊಡುವ ಹಲವಾರು ನರಕಗಳೇ ಸಿಗಲಿ, ಹಿಗ್ಗೆನು ಮತ್ತು ಕುಗ್ಗೆನು. ಸದಾಚಾರ್ಯರಲ್ಲಿ ಭಕ್ತಿನಿಷ್ಠೆಯುಳ್ಳವರು ಅಂತಹ ಆಚಾರ್ಯರ ಆಶ್ರಯ ದೊರೆತಮೇಲೆ ಮತ್ತಾವುದನ್ನೂ ಲೆಕ್ಕಿಸರು.

नित्याना मखिलात्मनां च भवुने विष्णु र्हि शेषीति यः
प्राहा त्यन्तदयाळु रुत्तममती रामानुजार्योऽनघः ।
चक्रे मा मपि किङ्करं सति तथा किं मोक्षसिद्ध्यापि मे
किं वा दुःखसहस्रदैः परिवृतो नानाविधै र्नारकैः ॥ ३०

ಮೂಲ : ಅಣ್ಣುಹಳ್ ನಾಳ್‌ತಿಂಗಳಾಯ್, ನಿಹಳ್‌ಕಾಲಮೆಲ್ಲಾಂ ಮನಮೇ
ಈಣ್ಣುಪಲ್‌ಯೋನಿಹಳ್‌ತೋರುಳಲ್ವೋಂ, ಇನ್ರೋರೆಣ್ಣಿನ್ರಿಯೇ
ಕಾಣ್ಣುತೋಳಣ್ಣಲ್ ತೆನ್ನತ್ತಿಯೂರರ್‌ಕಳಲಿಣೈಕ್ಕೀಳ್
ಪೂಣ್ಣವನ್ಬಾಳ್ಹ, ಇರಾಮಾನುಶನ್ನೈ ಪೊರುಂದಿನ ಮೇ ॥ 31

ಭಾವ :- ಓ ಮನಮೇ ! ನಾಳ್‌ಹಳ್ ಮಾಸಂಗಳ್ ವರ್ಷಂಗಳ್ ಕಣಕ್ಕಾಹ ನಡಂದುವರುಂ ಕಾಲಂಗಳ್ಳುಳುದುಂ ತಿರಂಡು "ಮಾರಿಮಾರಿಪಲಪ್ಪಿರಪ್ಪುಂಪಿರಂದು" ಎನ್ನುಂಪೋಲ್ ಪಲವಹೈಯೋನಿಕಳಿಲ್ ತಟ್ಟಿತ್ತಾವಿತ್ತು ಇರುಂದನಾಂ ಇನಿಮೇಲ್ ಓರ್ ಎಣ್ಣಮುಂ ಎಲ್ಲಾದಿರುಕ್ಕಚ್ಚೈಯ್ದೇ ಆಳಹಾನ ತಹುಂತೋಳ್‌ಹಳುಡೈಯ ಸ್ವಾಮಿ ಪೇರರುಳಾಳರ್ ಅಡಿಯಿಣೈಯಿಲ್ ಮಿಹವುಂ ಭಕ್ತಿಯುಳ್ಳ ರಾಮಾನುಜರೈ ನಿಲೆಯಾಹಅಡೈಯಪ್ಪೆತ್ತೋಂ.

ಅರ್ಥ :- ಮನಮೇ = ಮನಸ್ಸೆ ! ನಾಳ್-ತಿಂಗಳ್-ಅಂಡುಹಳ್-ಆಯ್ = ದಿನ, ತಿಂಗಳು, ವರ್ಷಗಳಾಗಿ, ನಿಹಳ್ ಕಲಾಂ-ಎಲ್ಲಾಂ = ಕಳೆದ ಕಾಲದಲ್ಲೆಲ್ಲಾ, ಈಣ್ಣು-ಪಲ್-ಯೋನಿಹಳ್-ತೋರು = ಒಂದಾದಮೇಲೊಂದು ಜಾತಿಯಲ್ಲೆಲ್ಲಾ, ಉಳಲ್ವೋಂ = ತಿರಿದುಬಂದೆವು. ಇನ್ರು-ಓರ್-ಎಣ್-ಇನ್ರಿಯೆ = ಈಗ ಯಾವುದನ್ನೂ ನೆನೆಯದೆ ಇರಲು, ಕಾಣ್-ತಕು-ತೋಳ್ = ಸುದರ್ಶನೀಯವಾಗಿ (ಸುಂದರ) ಒಪ್ಪುವ ತೋಳುಗಳುಳ್ಳ, ಅಣ್ಣಲ್ = ಸ್ವಾಮಿಯಾದ, ತೆನ್ನತ್ತಿಯೂರರ್ = ಶ್ರೀ ವರದರಾಜನ, ಕಳಲ್-ಇಣೈ-ಕ್ಕೀಳ್ = ಅಡಿಗಳೆರಡರಡಿಯಲ್ಲಿ, ಪೂಂಡ-ಅನ್ಪು-ಆಳ್ಹ = ಪರಮಭಕ್ತಿಯುಳ್ಳ, ಇರಾಮಾನುಶನ್ನೈ = ಶ್ರೀ ರಾಮಾನುಜರನ್ನು, ಪೊರುಂದಿನಮೇ = ನೆಲೆಯಾಗಿ ಬಂದು ಸೇರಿದವು.

ತಾತ್ಪರ್ಯ :- ಓ ಮನಸ್ಸೆ ! ಕಳೆದಕಾಲದಲ್ಲೆಲ್ಲಾ ದಿನ, ತಿಂಗಳು, ವರ್ಷಗಳಗಟ್ಟಲೆ ಒಂದೇ ಸಮನೆ ಪರಿಪರಿಯಾದ ಶರೀರಗಳಲ್ಲಿ ಜನ್ಮ ತಾಳಿ ಸಾಕಾದೆನು. ಆಕಸ್ಮಾತ್ತಾಗಿ ನಮ್ಮ ಸ್ವಾಮಿ ರಾಮಾನುಜರನ್ನು ಸ್ಥಿರವಾದ ಆಶ್ರಯವನ್ನಾಗಿ ಪಡೆದೆನು. ಈ ಮಹನೀಯರು ಸಾಮಾನ್ಯರಲ್ಲ, ಚೆಲುವಿನ ನೆಲೆಯೆನಿಸಿ, ಮನೋಹರವಾದ ತೋಳುಗಳಿಂದ ಕಂಗೊಳಿಸುವ ಕರಿಗಿರಿಯ ಶಿಖರದಲ್ಲಿ ವಿರಾಜಿಸುವ ವರದರಾಜನ ಅಡಿದಾವರೆಗಳಲ್ಲಿ ಅಚಲವಾದ ಭಕ್ತಿಯಿಟ್ಟು ಸಿದ್ಧ ಪಡೆದವರು.

काले वासर-मास-वर्ष-गुणिते त्वद्यावधि स्वान्त ! भो:
नानायोनिषु तत्र चात्र जननात् नन्वन्वभूम व्यथा: ।
नास्तीत: पर मीदृशी गति रुतेषन्नापि चिन्ता च न:
प्रत्यक्षीकृतहस्त्यगेश मिह यद्रामानुजं संश्रिता: ॥ ३१

ಮೂಲ : ಪೊರುಂದಿಯದೇಶುಂ ಪೊರೈಯುಂ ತಿರಲುಂ ಪುಹಳುಂ, ನಲ್ಲ
ತಿರುಂದಿಯಜ್ಞಾನಮುಂ ಶೆಲ್ವಮುಂಶೇರುಂ, ಶೆರುಹಲಿಯಾಲ್
ವರುಂದಿಯಜ್ಞಾಲತ್ತೈ ವಣ್ಮೈಯಿನಾಲ್ ವಂದೆಡುತ್ತಳಿತ್ತ
ಅರುಂದವರ್, ಎಂಗಳಿರಾಮಾನುಶನ್ನೈ ಅಡೈಬವರಕ್ಕೇ ॥ 32

ಭಾವ :- ನಲ್ಲವಳಿಯ್ಯೆ ದ್ವೇಷಿಕ್ಕುಂ ಕಲಿಯಾಲೆ ವರುತ್ತಪ್ಪಡುಹಿರ ಮಾನಿಡತ್ತಾರ್ತ್ತೈ ಅರುಳ್ಮೂಲಮಾನ ಔದಾರ್ಯತ್ತಾಲೆ ವಂದು ಉದ್ಧರಿತ್ತು ರಕ್ಷಿತ್ತವರುಂ, ಅರಿಯದಾನ ತಪಸ್ಸೈ (ಶರಣಾಗತಿ) ಆಚರಿತ್ತ, ನಮ್ಮುಡೈಯಸ್ವಾಮಿ ರಾಮಾನುಜರೈ ಅಡೈಯುಮವರ್‌ಹಳುಕ್ಕು ಸ್ವರೂಪತ್ತಿರ್ಕ್ಕು ಅನುರೂಪಮಾನ ತೇಜಸ್ಸುಂ, ಜ್ಞಾನಮುಂ, ಭಕ್ತಿಯೆನ್ನುಂ ಸಂಪತ್ತುಂ ತಾಮಾಹವೇ ವಂದು ಶೇರುಂ ಕಾಣೀರ್.

ಅರ್ಥ :- ಶೆರು-ಕಲಿಯಾಲ್ = (ಧರ್ಮಾಧರ್ಮಗಳನ್ನು) ತಿರಸ್ಕರಿಸುವ ಕಲಿಯಿಂದ, ವರುಂದಿಯ = ಕ್ಲೇಶಪಡುವ ಜ್ಞಾಲತ್ತೈ = ಭೂಮಿಯನ್ನು (ಮಾನವರನ್ನು) ವಣ್ಮೈಯಿನಾಲ್ = (ಕರುಣೆಯಮೂಲವಾದ) ಔದಾರ್ಯದಿಂದ, ವಂದ್-ಎಡುತ್-ಅಳಿತ್ತ = ಬಂದು ಎತ್ತಿ ಸಂರಕ್ಷಿಸಿದ, ಅರುಂ-ತವರ್ = ಶರಣಾಗತಿ ಧರ್ಮವನ್ನಾಚರಿಸಿದ, ಎಂಗಳ್-ಇರಾಮಾನುಶನ್ನೈ = ನಮ್ಮ ಸ್ವಾಮಿರಾಮಾನುಜರನ್ನು, ಅಡೈಬವರ್ಕ್ಕು = ಆಶ್ರಯಿಸುವವರಿಗೆ, ಪೊರುಂದಿಯ-ದೇಶುಂ = ತಕ್ಕಂತಹತೇಜಸ್ಸೂ (ಶತ್ರುವನ್ನಡಗಿಸುವ ಶಕ್ತಿ) ಪೊರೈಯುಂ = ಕ್ಷಮೆಯು, ತಿರಲುಂ = ಮನಶ್ಶಕ್ತಿಯೂ, ಪುಹಳುಂ = ಕೀರ್ತಿಯೂ, ನಲ್ಲತಿರುಂದಿಯ-ಜ್ಞಾನಮುಂ = ಚೆನ್ನಾಗಿ ಶೋಧಿಸಿದ ಅರಿವೂ, ಶೆಲ್ವಮುಂ = (ಭಕ್ತಿ) ಸಿರಿಯೂ, ಶೇರುಂ = ಸೇರುವುವು.

ತಾತ್ಪರ್ಯ :- ಒಳ್ಳೆಯ ಧರ್ಮಮಾರ್ಗವನ್ನು ದ್ವೇಷಿಸಿ ಹಾಳುಮಾಡುವುದೇ ಕಲಿಪುರುಷನ ಸ್ವರೂಪ. ಈ ಮಾನವರು ಇದರಿಂದ ತುಂಬ ನೊಂದರು. ಅಂತಹ ಸಮಯದಲ್ಲಿನಮ್ಮ ಸ್ವಾಮಿ ರಾಮಾನುಜರು ಪರಮ ಕರುಣೆಯ ಫಲವಾದ ಔದಾರ್ಯದಿಂದ ಅವತರಿಸಿ ಉದ್ಧರಿಸಿ ಕಾಪಾಡಿದರು. ಅತ್ಯುತ್ತಮವಾದ ಶರಣಾಗತಿಯನ್ನು ಅನುಷ್ಠಿಸಿದರು. ಇಂತಹ ಮಹನೀಯಚರಿತರನ್ನು ಶರಣುಹೋದ ಭಾಗ್ಯವಂತರಿಗೆ ಅವರ ಯೋಗ್ಯತೆಗೆ ತಕ್ಕಂತೆ ತೇಜಸ್ಸು, ತಾಳ್ಮೆ, ಇಂದ್ರಿಯಗಳನ್ನು ಜಯಿಸುವ ಶಕ್ತಿ, ಯಶಸ್ಸು, ಶೋಧಿಸಿದ ಜ್ಞಾನ, ಮತ್ತು ಭಕ್ತಿರೂಪಸಂಪತ್ತು ಇವು ನೆಲೆಸುವುವು.

सद्धर्मद्वेषिणार्ता मघमयकलिना सानुकम्पं धरित्रीं
सम्भूयोद्धृत्य तत्रे श्रुतिगतशरणागत्यनुष्ठाननिष्ठः ।
य श्श्रीरामानुज स्तत्पदकमल मुपाशिश्रियु स्तेषु तेजः ।
क्षान्तिस्स्थैर्यं च कीर्तिर्धनममलपरज्ञानमायान्ति नूनम् ॥ ३२

ಮೂಲ : ಅಡೈಯಾರ್ ಕಮಲತ್ತಲರ್‌ಮಹಳ್‌ಕೇಳ್ವನ್, ಕೈಯ್ಯಾಳಿಯೆನ್ನುಂ
ಪಡೈಯೊಡು ನಾನ್ದಕಮುಂ ಪಡರ್‌ತಣ್ಡುಂ, ಒಣ್ ಶಾರ್ಙ್ಗವಿಲ್ಲುಂ
ಪುಡೈಯಾರ್ ಪುರಿಶಂಗಮುಂ ಇಂದಬ್ಬೂತಲಂ ಕಾಪ್ಪದರ್ಕೆನ್ರು
ಇಡೈಯೇ, ಇರಾಮಾನುಶಮುನಿಯಾಯಿನವಿನ್ನಿಲತ್ತೇ ॥ 33

ಭಾವ :- ದಳಂಗಳ್ ಒತ್ತಾಹವಿರುಕ್ಕುಂ ಕಮಲಪ್ಪೂಮಹಳಾಹಿಯ ಮಹಾಲಕ್ಷ್ಮಿಯಿನ್ ಕಣವರ್ನ್ ಶ್ರೀಮನ್ನಾರಾಯಣರ್ಕೈಹಳಿಲೇ ವಿಳಂಗುಹಿನ್ರ ಚಕ್ರಮುಂ, ನಂದಕಮುಂ, ರಕ್ಷಿಪ್ಪದರ್ಕ್ಕಾಹವೇಪಿಡಿತ್ತ ಗದೈಯುಂ, ಒಪ್ಪತ್ತಶಾರ್ಙ್ಗಮೆನ್ನುಂವಿಲ್ಲುಂ, ಒರುಪಕ್ಕತ್ತಿರ್ಕ್ಕು, ಅಣಿಂದಿರುಂದ ಪಾಂಚಜನ್ಯಮೆನ್ನುಂಶಙ್ಗಂ, ಆಹ ಇವ್ವೈಹಳೆಲ್ಲಾಂ ಇಂದಬುವಿಯಿಲುಳ್ಳಾರೈ ರಕ್ಷಿಪ್ಪದರ್ಕ್ಕು ಎನ್ರೇ ಶ್ರೀರಾಮಾನುಜರಿಡಂ ವಂದ್ ಕೈಯ್ಯಾಳಾಹ ಇರುಂದನ, ಇಂದ ಐಂದ್ ಆಯುಧಂಗಳುಂ ತಾಙ್ಗಳೇವಂದ್ ರಕ್ಷಿಕ್ಕೈಕ್ಕಾಹ ರಾಮಾನುಜರಾಯ್ ಅವತರಿತ್ತನ ಎನ್ನವುಮಾಂ.

ಅರ್ಥ :- ಅಡೈ = ಒತ್ತಾದ, ಆರ್ = ದಳಗಳುಳ್ಳ, ಕಮಲತ್ತಲರ್ = ತಾವರೆಹೂವಿನ, ಮಹಳ್ = ಮಗಳಾದ ಲಕ್ಷ್ಮಿಯ, ಕೇಳ್ವನ್ = ವಲ್ಲಭನಾದ ವಿಷ್ಣುವಿನ, ಕೈ = ಕೈಗಳಲ್ಲಿ, ಆಳಿಯೆನ್ರುಂ-ಪಡೈಯೊಡು = ಚಕ್ರವೆಂಬ ಆಯುಧದೊಂದಿಗೆ, ನಾಂದಕಮುಂ = ನಂದಕವೆಂಬ ಕತ್ತಿಯೂ, ಪಡರ್-ತಂಡುಂ = ರಕ್ಷಣೆಯಲ್ಲಿ ನೆರವಾಗುವ ಗದೆಯೂ, ಒಣ್-ಶಾರ್ಙ್ಗವಿಲ್ಲುಂ = ಅಂದವಾದ ಶಾರ್ಙ್ಗವೆಂಬ ಬಿಲ್ಲೂ, ಪುಡೈ-ಆರ್-ಪುರಿ-ಶಂಗಮುಂ = ಒಂದುಪಕ್ಕಕ್ಕೇ ಅಲಂಕಾರವಾದ ಶಂಖವೂ, (ಈ ಐದೂ) ಇಂದ-ಬೂತಲಂ-ಕಾಪ್ಪದರ್ಕು-ಎನ್ರುಂ = ಈ ಭೂಮಿಯನ್ನು ರಕ್ಷಿಸುವುದಕ್ಕಾಗಿ, ಇನ್ನಿಲತ್ತು = ಈ ಲೋಕದಲ್ಲಿ, ಇರಾಮಾನುಶ-ಮುನಿ-ಇಡೈಯೇ-ಆಯಿನ = ಶ್ರೀ ರಾಮಾನುಜರ ಪಕ್ಕದಲ್ಲೇ ಇದ್ದವು.

ತಾತ್ಪರ್ಯ :- ದಳಗಳೊತ್ತಾಗಿ ನೆರೆದು ಸೊಗಸಾದ ಕಮಲದಲ್ಲಿರುವ ಮಹಾಲಕ್ಷ್ಮಿಯ ಕಾಂತನ ಕರಗಳಲ್ಲಿ ಕಂಗೊಳಿಸುವ ಆಶ್ರಿತಸಂರಕ್ಷಣೆಗಾಗಿಯೇ ಇರುವ ಚಕ್ರ, ಕತ್ತಿ, ಗದೆ, ಬಿಲ್ಲು, ಶಂಖ ಈ ಐದೂ ಈ ಭೂಮಂಡಲವನ್ನು ರಕ್ಷಿಸುವುದಕ್ಕಾಗಿಯೇ ಎಂದು ಶ್ರೀ ರಾಮಾನುಜರ ಸನ್ನಿಧಿಯಲ್ಲೇ ಬಂದು ನಿಂತು ಬಿಟ್ಟವು. ಈ ಪಂಚಾಯುಧ ಧಾರಿಯಾದ ಭಗವಂತನೇ ಈ ಹೆಸರಿನಿಂದವತರಿಸಿದನೆಂದಾಗಲೀ ಹೇಳುವ ಸಂಪ್ರದಾಯವುಂಟು.

सान्द्रानेकदळोल्लसत्कमलजाकान्तस्य हस्तोज्वलं ।
चक्रं नन्दक आश्रितावनरता कौमोदकी सा गदा ।
शार्ङ्ग चाप्रतिमं विभूषितकर श्शङ्खश्च दिव्यायुधा- ।
न्येकीभूय सदा सुरक्षितु मिळां रामानुजं न्वाययुः ।। ३३

ಮೂಲ : ನಿಲತ್ತೈಚ್ಚೆರುತ್ತುಣ್ಣುಂ ನೀಶಕ್ಕಲಿಯೈ, ನಿನ್ನೈಪ್ಪರಿಯ
ಪ್ಪಲತ್ತೈಚ್ಚೆರುತ್ತುಂ ಪಿರಂಗಿಯದಿಲ್ಲೈ, ಎನ್‌ಪೆಯ್‌ವಿನ್ನೈತೆನ್
ಪುಲತ್ತಿಲ್‌ಪೊರಿತ್ತವಪ್ಪುತ್ತಹಚ್ಚುಮ್ಮೈ ಪೊರುಕ್ಕಿಯಪಿನ್
ನಲತ್ತೈಪ್ಪೊರುತ್ತದ್, ಇರಾಮಾನುಶನ್ ತನ್‌ನಯಪ್ಪುಹಳೇ ॥ 34

ಭಾವ :- ರಾಮಾನುಜರ್ ಶುಭಗುಣಂಗಳ್ ಇಂದ ಉಲಹತ್ತೈ ಪೀಡಿತ್ತ್ ತಿಂಗಿರ ನೀಚನಾನ ಕಲಿಯಿನ್ ಅಳವತ್ತ ಬಲತ್ತೈ ತೊಲೈತ್ತವಳವಿಲುಂ ವಿಳಂಗವಿಲ್ಲೈ (ಆನಾಲ್) ನಾನ್ ಶೆಯ್ದ ಮಹಾಪಾಪಂಗಳೈ ಯಮಲೋಕತ್ತಿಲ್ ಎಳುದಿವೈತ್ತ ಪುತ್ತಹಚ್ಚುಮ್ಮೈಹಳೈ ಕೊಳುತ್ತಿವಿಟ್ಟ ಪಿರಹು ಪ್ರಕಾಶಿತ್ತನ. ಸದಾಚಾರ್ಯರ್ ಆಶ್ರಯತ್ತಾಲ್ ನೇರಾಹ ಮುಕ್ತಿ ಕಿಡಕ್ಕಿರದ್.

ಅರ್ಥ :- ಇರಾಮಾನುಶನ್ ತನ್ = ಶ್ರೀ ರಾಮಾನುಜರ, ನಯಂ-ಪುಕಳ್ = ಕಲ್ಯಾಣಗುಣಗಳು, ನಿಲತ್ತೈ-ಶೆರತ್ತು-ವುಣ್ಣುಂ = ಭೂಲೋಕವನ್ನು ಹಿಂಸಿಸಿ ತಿನ್ನುವ ನೀಚ ಕಲಿಯೈ = ನೀಚ ಕಲಿಯ, ನಿನ್ನೈಪ್ಪು-ಅರಿಯ-ಪಲತ್ತೈ-ಶರುತ್ತ್ = ಇಷ್ಟೆಂದು ತಿಳಿಯಲಸದಳವಾದ ಬಲವನ್ನು ಹೋಗಲಾಡಿಸಿದರೂ, ಪಿರಂಗಿಯದ್-ಇಲ್ಲೈ = ಪ್ರಕಾಶಿಸಲಿಲ್ಲ. ಎನ್-ಪೆಯ್‌ವಿನ್ನೈ = ನಾನು ಮಾಡಿದ ಮಹಾಪಾಪಗಳನ್ನು, ತೆನ್‌ಪುಲತ್ತಿಲ್ = ಯಮಲೋಕದಲ್ಲಿ ಪೊರಿತ್ತ = ಬರೆದಿಟ್ಟ, ಅಪ್ಪುತ್ತಹಚ್ಚುಮ್ಮೈ = ಆ ಪುಸ್ತಕಗಳ ಕಂತೆಗಳನ್ನು, ಪೊರುಕ್ಕಿಯ-ಪಿನ್ = ಸುಟ್ಟುಹಾಕಿದಮೇಲೆ, ನಲತ್ತೈಪೊರುತ್ತದು = ಬೆಳಕಿಗೆ ಬಂದುವು.

ತಾತ್ಪರ್ಯ :- ಶ್ರೀ ರಾಮಾನುಜರ ಸದ್ಗುಣಗಳು ಈ ಭೂಮಂಡಲ ಪೀಡಿಸಿ ನಾಶಮಾಡುವ ನೀಚನಾದ ಕಲಿಪುರುಷನ ಆಳತೆಗೆ ಮೀರಿದ ಬಲವನ್ನು ಅಡಗಿಸಿದ ಮೇಲೂ ಬೆಳಗಲಿಲ್ಲ. ಆದರೆ ನಾನು ಮಾಡಿದ ಲೆಕ್ಕವಿಲ್ಲದಷ್ಟು ಮಹಾಪಾಪಗಳನ್ನು ಯಮಲೋಕದಲ್ಲಿ ಬರೆದಿಟ್ಟ ಪುಸ್ತಕಗಳ ಕಟ್ಟುಗಳನ್ನೆಲ್ಲಾ ಸುಟ್ಟುಹಾಕಿದಮೇಲೆ ಈ ಮಹನೀಯರ ಮಹಿಮೆಯನ್ನು ನಮ್ಮಾಳ್ವಾರ್ರೇ ಎಷ್ಟೋ ಹಿಂದೆ ''ಪೊಲಿಹ ಪೊಲಿಹ'' ಎಂಬ ಪಾಶುರದಲ್ಲಿ ''ನಮನುಕ್ಕು ಇಂಗುಯಾದೊನ್ರುಮಿಲ್ಲೈ,'' ಕಲಿಯುಂ ಕೆಡುಂ ಕಂಡುಹೊಣ್ಮಿನ್'' ಎಂದು ಹೇಳಿದ್ದರು.

श्रीरामानुजमङ्गलावहगुणाः धर्मोपरोद्धुः कलेः
निर्मूलाय सदोन्मुखा अपि तदा नैव प्रकाशं गताः ।
किन्त्वस्मद्विहिताघलेखनविधौ न्यायोक्तिलाभात् परं
दग्धान्यश्चितपुस्तकानि च यदा ते सर्वतो रेजिरे ॥ ३४

ಮೂಲ : ನಯವೇನ್ ಒರುದೆಯ್‌ವಂನಾನಿಲತ್ತೇ, ಶಿಲಮಾನಿಡತ್ತೈ
ಪ್ಪುಯಲೇ ಯೆನಕ್ಕವಿಪ್ಪೋತ್ತಿಶೆಯ್ಯೇನ್, ಪೊನ್ನರಂಗಮೆನ್ನಿಲ್
ಮಯಲೇ ಪೆರುಹುಂ ಇರಾಮಾನುಶನ್‌ಮನ್ನು ಮಾಮಲರ್‌ತ್ತಾಳ್
ಅಯರೇನ್, ಅರುವಿನ್ನೈಯೆನ್ನೈಯೆವ್ವಾರಿನ್ರಡರ್‌ಪ್ಪದುವೇ ॥ 35

ಭಾವ :- ಮತ್ತೊರು ದೈವತ್ತೈ ನಾನ್ ವಿರುಂಬುಹಿರದಿಲ್ಲೈ. ಇಂದ ವಿಶಾಲ ಭೂಮಿಯಿಲ್ ಶಿಲ ನೀಚಜನಂಗಳೈ ಕ್ಕುರಿತ್ತು "ಮುಕಿಲ್‌ಪೋಲ್ ವರ್ಷಿಕ್ಕಿರ ಪರಮೋದಾರರೇ !" ಎನ್ರು ಶೊಲ್ಲಿಕ್ಕೊಂಡು ಕವಿತ್ತೈಹಳೈ ಕಟ್ಟಿ ವರ್ಣಿಕ್ಕಮಾಟ್ಟೇನ್. "ಅಳಹಾನ ತಿರುವರಂಗಂ" ಎನ್ರು ಶೊನ್ನ ಉಡನೇ ಮಿಕುಂದ ಪ್ರೀತಿಯೋಡು ಕೂಡುಹಿರ ರಾಮಾನುಜರುಡೈಯ ನಿಲೆಯಾನ ಶಿರಂದ ಮಲರಡಿಹಳೈ ಮರೈಕ್ಕ ಮಾಟ್ಟೇನ್. ಆನ ಪಿನ್ಬು ಕೊಡಿಯದಾನ ಪಾಪಂಗಳುಂ ಇನಿಮೇಲ್ ಎನ್ನೈ ಎಪ್ಪಡಿ ತಾನ್ ಆಕ್ರಮಿಕ್ಕಕ್ಕೂಡುಂ ?

ಅರ್ಥ :- ಒರು ದೈವಂ = ಮತ್ತಾವ ದೇವರನ್ನೂ, ನಯವೇನ್ = ಯಾಚಿಸೆನು, ನಾನಿಲತ್ತೆ = ಈ ಲೋಕದಲ್ಲಿ, ಶಿಲ-ಮಾನಿಡತ್ತೈ = ಕೆಲವು ಜನರನ್ನು, ಪುಯಲೇಯೆನ = "ಮೇಘದಂತೆ ಸುರಿಸುವ ಉದಾರನೇ!" ಎಂದು, ಕವಿ-ಪೋತ್ತಿ-ಶೆಯ್ಯೇನ್ = ಕವನ ಮಾಡಿ ಹೊಗಳುವುದಿಲ್ಲ. ತೆನ್-ಅರಂಗಂ-ಎನ್ನಿಲ್ = "ಶ್ರೀರಂಗ" ಎಂದು ಹೇಳಿದೊಡನೆ, ಮಯಲ್-ಪೆರುಹುಂ = ಮಿತಿಮೀರಿದ ಪ್ರೀತಿಯುಳ್ಳ, ಇರಾಮಾನುಶನ್ ಶ್ರೀ ರಾಮಾನುಜರ ಮನ್ನು-ಮಾತಾಳ್-ಮಲರ್ = ನೆಲೆಯಾದ ತಾವರೆಯಂತಹ ಅಡಿಗಳನ್ನು, ಅಯರೇನ್ = ಮರೆಯಲಾರೆನು. ಅರುವಿನ್ನೈ = ಘೋರ ಪಾಪಗಳು, ಎನ್ನೈ = ನನ್ನನ್ನು, ಇನ್ರು = ಇನ್ನುಮೇಲೆ, ಎವ್ವಾರು-ಅಡರ್ಪದು = ಹೇಗೆತಾನೇ ಆವರಿಸಬಲ್ಲದು ?

ತಾತ್ಪರ್ಯ :- ಬೇರೆ ಯಾವ ದೇವರನ್ನೂ ಬೇಡುವುದಿಲ್ಲ. ಈ ವಿಶಾಲ ಲೋಕದಲ್ಲಿ ಹಲ ಕೆಲವು ನೀಚರನ್ನು "ಕಾರ್ಮುಗಿಲಂತೆ ಬೇಕಾದುದನ್ನು ಸುರಿಸುವ ಉದಾರರೇ!" ಎಂದು ಹೇಳಿಕೊಂಡು ಕವನ ಮಾಡಿ ಹೊಗಳುವುದಿಲ್ಲ. ಚೆಲುವಿನ ಶ್ರೀರಂಗ ಎಂದೊಡನೆ ಪ್ರೀತಿಯು ಉಕ್ಕೇರಿ ಬರುವಂತಹ ಶ್ರೀ ರಾಮಾನುಜರ ನೆಲೆಯಾದ ಮತ್ತು ಹಿರಿಮೆಯ ಅಡಿದಾವರೆಗಳನ್ನು ಮರೆಯುವುದಿಲ್ಲ. ಹೀಗಾದಮೇಲೆ ಕಡುತರ ಪಾಪಗಳು ಇನ್ನು ಮೇಲೆ ಹೇಗೆತಾನೇ ನನ್ನನ್ನು ಸೇರುವುವು ? ಖಂಡಿತ ಬರುವುದಿಲ್ಲ.

याचे नेतरदेवता मिह नरां श्चोद्दिश्य नीचानहं
'मेघोदार' इति प्रियोक्ति मफलां नैव ब्रुवे 'रङ्गयूः' ।
इत्युक्ते तु विसीममोहनजुषो रामानुजार्यस्य ते
पादाब्जे न हि विस्मराम्यथ च मां पापं कथं लिम्पति ? ॥ ३५

ಮೂಲ : ಅಡಲ್ ಹೊಂಡನೇಮಿಯರ್ ಅರುಯಿರ್‌ನಾದರ್, ಅನ್ರಾರಣಚ್ಚೊಲ್
ಕಡಲ್‌ಹೊಂಡವೊಣ್ ಪೊರುಳ್ ಕಣ್ಡಳಿಪ್ಪ, ಪಿನ್ನುಂ ಕಾಶಿನಿಯೋರ್
ಇಡರಿಲ್ ಕಣ್‌ವೀಳ್‌ನ್ದಿಡತ್ತಾನುಮವ್ವೊಣ್ಪೊರುಳ್‌ಹೊಂಡು ಅವರ್‌ಪಿ
ಪಡರುಂ ಗುಣರ್, ಎಮ್ಮಿ ರಾಮಾನುಶರ್ ತಪಡಿ ಇದುವೇ ॥ 36

ಭಾವ :- ಆಶ್ರಿತವಿರೋಧಿಹಳ್ಳೈ ಅಳಿಕ್ಕುಂ ತಿಣ್ಮೈಯುಳ್ಳ ತಿರುವಾಳಿಯ್ಯೈ ಏನ್ದಿನ, ಅನ್ನೈವರುಕ್ಕುಂ ಶೇಷಿಯಾನ, ಕಣ್ಣನ್ ಅರ್ಜುನನಕ್ಕು ಅಪ್ಪೋದ್ ವೇದಂಗಳೆನ್ನುಂ ಕಡಲಿಲ್ ಮರೈಂದಿರುಂದ ನಲ್ಲಪೊರುಳ್‌ಹಳ್ಳೈ (ಗೀತೈಯಾಹ) ಉಪದೇಶಿಕ್ಕ ಅದರ್ಕು ಪಿನ್ಬುಂ ಬುವಿಯಿಲುಳ್ಳಾರೆಲ್ಲಾರುಂ ಸಂಸಾರ ಶೋಕತ್ತಿಲೇ ಅಳುಂದಿಕ್ಕಿಡಕ್ಕ, ಮುನ್ಬು ಉಪದೇಶಿತ್ತಿರುಂದ ಅಂದ ಶಿರಂದಪೊರುಳ್ಹಳ್ಳೈಯೇಕೊಂಡು ವಿಡಾದೇ ಪಿತುಡರ್‌ನ್ದು ಉಜ್ಜೀವಿಪ್ಪಿಕ್ಕುಂ ಶೀಲಮುತ್ತವರ್ ನಮ್ಮುಡೈಯಸ್ವಾಮಿ ರಾಮಾನುಜರ್. ಇದುತಾ ಅವರ್ ಸ್ವಭಾವಂ.

ಅರ್ಥ :- ಅಡಲ್-ಹೊಂಡ-ನೇಮಿಯರ್ = (ವಿರೋಧಿಗಳನ್ನು) ಅಡಗಿಸಬಲ್ಲ ಚಕ್ರವನ್ನು ಪಿಡಿದ, ಅರ್-ಉಯಿರ್-ನಾದರ್ = ಎಲ್ಲಜೀವರಿಗೂ ಪ್ರಭುವಾದ, ಅನ್ರು = ಸಾರಥಿಯಾಗಿದ್ದಾಗ, ಆರಣ-ಚ್ಚೊಲ್-ಕಡಲ್-ಹೊಂಡ-ಒಣ್-ಪೊರುಳ್-ಕಂಡು-ಅಳಿಪ್ಪ = ವೇದಗಳೆಂಬ ಸಮುದ್ರದಲ್ಲಿ ಮರೆಯಾಗಿದ್ದ ಒಳ್ಳೆಯ ಅರ್ಥಗಳನ್ನು ಆರಿಸಿ ಉಪದೇಶಿಸಿದ, ಪಿನ್ಬು = ಅದಾದ ಮೇಲೆ, ಕಾಶಿನಿಯೋರ್ = ಭೂಮಿಯಲ್ಲಿರುವವರು, ಇಡರಿಲ್ ಕಣ್‌ವೀಳ್‌ನ್ದಿಡ = ಸಂಸಾರದಲ್ಲಿ ತೊಳಲಲು, ತಾನುಂ = ತಾವೂ, ಅವ್ವೊಣ್-ಪೊರುಳ್-ಕೊಂಡು = ಆ ಸಾರಾರ್ಥಗಳನ್ನೇ, ಅವರ್‌ಪಿಪಡರುಂಗುಣರ್-= ಆ ಸಂಸಾರಿಗಳನ್ನು ಬಿಡದೆ ಹಿಂಬಾಲಿಸುವ ಸ್ವಭಾವವುಳ್ಳವರಾದ, ಎಂ ಇರಾಮಾನುಜರ್ = ನಮ್ಮ ರಾಮಾನುಜರ, ಪಡಿ-ಇದು = ಸ್ವಭಾವ ಇದು.

ತಾತ್ಪರ್ಯ :- ಆಶ್ರಿತ ವಿರೋಧಿಗಳನ್ನಳಿಸುವ ಚಕ್ರವನ್ನು ಪಿಡಿದ, ಸರ್ವಸ್ವಾಮಿಯಾದ, ಶ್ರೀಕೃಷ್ಣನು ಅರ್ಜುನನಿಗೆ ವೇದ ಸಮುದ್ರದಲ್ಲಿ ಮರೆಯಾಗಿದ್ದ ಸಾರಾರ್ಥಗಳನ್ನು ಆರಿಸಿ ಗೀತೆಯಾಗಿ ಉಪದೇಶಿಸಿದ್ದರೂ, ಈ ಭೂ ವಾಸಿಗಳೆಲ್ಲ ಸಂಸಾರ ಕಡು ದುಃಖದಲ್ಲಿ ತೊಳಲುತ್ತಿರಲು, ಶ್ರೀ ರಾಮಾನುಜರಾಗಿ ಅವತರಿಸಿ, ಹಿಂದೆ ಉಪದೇಶಿಸಿದ್ದ ಆ ಹಿರಿಮೆಯುಳ್ಳ ಸಾರಾಮೃತವನ್ನೇ ಆ ಸಂಸಾರಿಗಳಾರನ್ನೂ ಬಿಡದೆ ಹಿಂಬಾಲಿಸಿ, ಎಲ್ಲರಿಗೂ ಪಾನಮಾಡಿಸಿ ಕಾಪಾಡಿದರು ನಮ್ಮ ಸ್ವಾಮಿ ಶ್ರೀ ರಾಮಾನುಜರು. ಇದೇ ಅವರ ಅವತಾರದ ಸಹಜವಾದ ಶೀಲವಲ್ಲವೆ ?

चक्री स्वाश्रितदु:खनाशनमना स्सर्वात्मशेषी विभु:
प्रीत्योपादिशदागमोदधिगतं सारांश मात्मोक्तिभि: ।
तत्सारोक्तिभिरेव संसृतिजुषो रामानुजो मानवान्
संरक्षत्यनुसृत्यताननुदिनं शीलं प्रभो मे न्विदम् ॥ ३६

ಮೂಲ : ಪಡಿಹೊಣ್ಡ ಕೀರ್ತಿಯಿರಾಮಾಯಣಮೆನ್ನುಂ ಪತ್ತಿವೆಳ್ಳಂ,
ಕುಡಿಹೊಂಡಕೋಯಿಲಿರಾಮಾನುರ್ಶ ಗುಣಂಕೂರುಂ, ಅನ್ಬರ್
ಕಡಿಹೊಂಡಮಾಮಲರ್‌ತ್ತಾಳ್ ಕಲನ್ದುಳ್ಳಂ ಕನಿಯುಂ ನಲ್ಲೋರ್
ಅಡಿಕಣ್ಡುಹೊಂಡುಹನ್ದು ಎನ್ನೈಯುಮಾಳವರ್‍ಕ್ಕಿನರೇ ॥ 37

ಭಾವ : ಬೂಮಿಯೆಂಗುಂ ಪರವಿನ ಕೀರ್ತಿಯುಡೈಯದಾನ ಶ್ರೀ ರಾಮಾಯಣಮೆನ್ನುಂ ಭಕ್ತಿಕ್ಕಡಲ್‌ಕುಡಿಹೊಂಡ ದಿವ್ಯಮಾನ ವಾಸಸ್ಥಾನ ಮಾಯಿರುಕ್ಕಿರವರ್ ರಾಮಾನುಜರ್. ಅವರುಡೈಯ ನಲ್ಲಗುಣಂಗಳೈಪ್ಪಾಡುಹಿರ ಭಕ್ತಿರ್ಮಾ ಹರ್ಳ್ ಪರಿಮಳಿಕ್ಕುಂ ಪದಪದ್ಮಂಗಳಿಲ್ ಮನಂ ಉಹನ್ದ್ಪೊರುಂದಿ ಪ್ರೀತಿಕ್ಕುಂ ಪೆರಿಯವರ್‌ಹಳ್ ಮೂಲ ಪ್ಪೊರುಳ್ಳೈ ಅರಿಂದು, ಮಿಹವುಂ ಉಹಂದ್, ಎನ್ನೈಯುಂ ಆಂದ ರಾಮಾನುಜರುಕ್ಕೇ ಆಳಾಕ ಆಕ್ಕಿನಾರ್‌ಹಳ್.

ಅರ್ಥ :- ಪಡಿ-ಕೊಂಡ-ಕೀರ್ತಿ = ಭೂಮಿಯಲ್ಲೆಲ್ಲಾ ಹರಡಿದ ಕೀರ್ತಿಯುಳ್ಳ ಇರಾಮಾಯಣಂ-ಎನ್ನುಂ = ರಾಮಾಯಣವೆಂಬ, ಪತ್ತಿ-ವೆಳ್ಳಂ = ಭಕ್ತಿಸಮುದ್ರವು ಕುಡಿಕೊಂಡ-ಕೋಯಿಲ್ = ನೆಲೆಸಿದ ಸ್ಥಳವಾದ, ಇರಾಮಾನುರ್ಶ = ಶ್ರೀ ರಾಮಾನುಜರ ಗುಣಂ-ಕೂರುಂ = ಸದ್ಗುಣಗಳನ್ನು ವರ್ಣಿಸುವ, ಅನ್ಬರ್ = ಭಕ್ತಿಯುಳ್ಳವರ, ಕಡಿ-ಕೊಂಡ = ಸುಗಂಧಿತವಾದ, ಮಾ-ತಾಳ್-ಮಲರ್ =ಉತ್ತಮವಾದ ಪಾಪಪದ್ಮಗಳನ್ನು, ಉಳ್ಳಂ-ಕಲಂದ್ = ಮನದಲ್ಲಿ ಸೇರಿಕೊಂಡು, ಕಣಿಯುಂ = ಪ್ರೀತಿಸುವ, ನಲ್ಲೋರ್ = ಸಜ್ಜನರು, ಅಡಿ-ಕಂಡು-ಹೊಂಡು = ಮೂಲಸಾರಾಂಶವನ್ನು ಅರಿತು, ಉಹಂದ್ = ಆದರಿಸಿ (ಸಂತೋಷಿಸಿ) ಎನ್ನೈಯುಂ = ನನ್ನನ್ನೂ, ಅವರ್‍ಕ್ಕ = ಅವರಿಗೆ ಆಳ್-ಆಕ್ಕಿನರ್ = ಸೇವಕನನ್ನಾಗಿ ಮಾಡಿದರು.

ತಾತ್ಪರ್ಯ :- ಶ್ರೀಮದ್ರಾಮಾಯಣವು ಭಕ್ತಿಯಕಡಲು. ಲೋಕದಲ್ಲೆಲ್ಲಾ ಅತ್ಯಂತ ಕೀರ್ತಿ ಪಡೆದಿದೆ. ಇದಕ್ಕೆ ದಿವ್ಯವಾದ ಆಶ್ರಯಸ್ಥಾನ ನಮ್ಮ ಶ್ರೀ ರಾಮಾನುಜರು. ಇವರ ಒಳ್ಳೆಯ ಗುಣಗಳನ್ನು ಕೊಂಡಾಡುವ ಭಕ್ತರ ಅಡಿದಾವರೆಗಳ ಸುಗಂಧಕ್ಕೆ ಮನವೊಪ್ಪಿ ಬಲು ಪ್ರೀತಿಯಿಂದಿರುವವರು ಮಹಾಮಹಿಮಶಾಲಿಗಳು. ಅವರು ಸಾರವಾದ ಮೂಲತತ್ವವನ್ನರಿತು, ಆದರಿಸಿ, ನನ್ನನ್ನೂ ಆ ಮಹನೀಯರಾದ ರಾಮಾನುಜರ ಅಡಿಯಾಳನ್ನಾಗಿ ಮಾಡಿದರು.

विश्वव्यापिन आत्तादिव्ययशसो रामायणस्यालय:
भव्यो भक्तिनदीपतेर नुपमो रामानुज स्तस्य च ।
ये वा श्लाघ्यगुणान् स्तुवन्ति सुधिय स्तेषां पदाब्जेषु ये
स्निग्धा श्क्रु स्वाप्य सारविषयान् तत्सेवकं मामपि ।। ३७

ಮೂಲ :- ಆಕ್ಕಿಯಡಿಮೈ ನಿಲೈಪ್ಪಿತ್ತನ್ನೈಯೆನ್ನೈಯಿನ್ರು, ಅವಮೇ
ಪೋಕ್ಕಿಪ್ಪುರತ್ತಿಟ್ಟದೆರ್ಪೊರುಳಾಮುನ್ಬು, ಪುಣ್ಣಿಯರ್‌ತಂ
ವಾಕ್ಕಿಲ್‌ಪ್ಪಿರಿಯಾ ವಿರಾಮಾನುಶ ! ನಿನ್ನರುಳಿರ್‌ವಣ್ಣಂ
ನೋಕ್ಕಿಲ್ ತೆರಿವರಿದಾಲ್, ಉರೈಯಾಯ್ ಇನ್ದನುಣ್‌ಪೊರುಳೇ ॥ 38

ಭಾವ : ಓ ರಾಮಾನುಜರೇ ! (ನೆಡುನಾಳಾಹ ಅಹಂಕಾರಪ್ಪೇಯ್‌ಪಿಡಿತ್ತಿರುಂದ) ಎನ್ನೈ ಇನ್ರು ಒರುಪೊರುಳಾಕ್ಕಿ ಅಡಿಮೈಯಿಲ್ ನಿಲೈ ನಿರುತ್ತರುಳಿನೀರ್. ಮುರ್ ಕಾಲಮೆಲ್ಲಾಂ ವೀಣಾಹಪೋಕ್ಕಿ, ಕೇವಲ ವಿಷಯಾನುಭವಂಗಳಿಲೇಯೇ ತಳ್ಳಿವಿಟ್ಟುವೈತ್ತದು ಎದರ್ಕ್ಕಾಹ ? ಉಮ್ಮೈ ಇಡೈವಿಡಾದೆ ಅನುಭವಿಕ್ಕುಂ ಪುಣ್ಯಶಾಲಿಹಳಿರ್ ವಾಕ್ಕೈವಿಟ್ಟು ಪ್ಪಿರಿಯಾದಿರುಪ್ಪವರಲ್ಲವಾ ನೀರ್. ದೇವರೀರ್ ತಿರುವರುಳಿನವಹೈ ಪ್ಪಲಾನದೆನ್ರು ವಿಮರ್ಶಿಕ್ಕುಮಳವಿಲ್ ತೆಳಿಯಮುಡಿಯಾದುದಾಯೇ ಇರಾನಿನ್ರದು. ಇಂದ ಸೂಕ್ಷ್ಮಸಂಗತಿಯೈ ದೇವರೀರ್‌ತಾನ್ ಸಾದಿತ್ತರುಳವಲ್ಲಕ್ಕಡವರ್.

ಅರ್ಥ :- ಎನ್ನೈ-ಇನ್ರು = ನನ್ನನ್ನಿಂದು, ಆಕ್ಕಿ = (ಒಂದು ವಸ್ತುವನ್ನಾಗಿ) ಮಾಡಿ, ಅಡಿಮೈ = ಸೇವೆಯಲ್ಲಿ, ನಿಲೈ-ಪಿತ್ತಿನ್ನೈ = ಸ್ಥಿರಗೊಳಿಸಿದಿರಿ. ಮುನ್ಬು = ಹಿಂದೆಲ್ಲಾ, ಅವಮೇ-ಪೋಕ್ಕಿ = ವ್ಯರ್ಥವಾಗಿಸಿ, ಪುರತ್ತು-ಇಟ್ಟದು = ಹೊರಗಿನ ವಿಷಯ ಸುಖದಲ್ಲಿ ತಳ್ಳಿದುದು, ಎರ್-ಪೊರುಳಾ = ಯಾವಕಾರಣಕ್ಕಾಗಿ ? ಪುಣ್ಣಿಯರ್‌ತ್ತಂ = (ತಮ್ಮನ್ನು ಬಿಡದ) ಭಾಗ್ಯವಂತರ, ವಾಕ್ಕಿಲ್-ಪಿರಿಯಾ = ಮಾತನ್ನು ಬಿಟ್ಟಿರದ, ಇರಾಮಾನುಶ ! = ಶ್ರೀ ರಾಮಾನುಜರೇ ! ನಿನ್ ಅರುಳಿರ್‌ವಣ್ಣಂ = ನಿಮ್ಮ ಮನದ ಅಭಿಪ್ರಾಯವನ್ನು, ನೋಕ್ಕಿಲ್ = ನೋಡಿದರೆ, ತಿರುವು-ಅರಿದು = ತಿಳಿಯದಾಗಿದೆ. ಇಂದ-ನುಣ್-ಪೊರುಳ್ = ಈ ಸೂಕ್ಷ್ಮವಿಚಾರವನ್ನು, ಉರೈಯಾಯ್ = (ದಯವಿಟ್ಟು) ಹೇಳಬೇಕು.

ತಾತ್ಪರ್ಯ :- ಸ್ವಾಮಿ, ರಾಮಾನುಜರೇ ! ಬಹುಕಾಲದಿಂದ ''ಅಹಂಕಾರ'' ಮದ ಮತ್ತನಾಗಿದ್ದ ನನ್ನನ್ನು ಇಂದು ಒಂದು ವಸ್ತುವನ್ನಾಗಿ ಮಾಡಿ, ನಿಮ್ಮಡಿಯ ಸೇವೆಯಲ್ಲಿ ನೆಲೆಗೊಳಿಸಿದಿರಿ. ಇದುವರೆಗೆ ವೃಥಾ ವಿಷಯಭೋಗಗಳಲ್ಲಿಯೇ ಪ್ರವೃತ್ತನನ್ನಾಗಿ ಮಾಡಿರಲು ಕಾರಣವೇನಿರಬಹುದು ? ನಿಮ್ಮ ಗುಣಗಳನ್ನು ಹೊಗಳುವ ಪುಣ್ಯವಂತರ ಮಾತುಗಳನ್ನೇ ನೆಲೆಮಾಡಿಕೊಂಡಿರುವಿರಿ. ನಿಮ್ಮ ಕರುಣೆಯ ರೀತಿ ಇಂತಹುದೆಂದು ತಿಳಿಯಲೆತ್ನಿಸಿದರೂ ತಿಳಿಯದು. ನೀವೇ ತಿಳಿಸಬೇಕು.

**यन्मां वस्त्वधुना विधाय भवत श्चोपासनायां स्थिरं**
**कालं चाक्षपयो वृथा नु विषयाभोगेषु किं कारणम् ? ।**
**धन्यानां वचनेषु सुस्थित मुने ! रामानुजार्य ! प्रभो !**
**तत्कारुण्य मवेद्यमेव तमिमं सूक्ष्मार्थ मावेदय ॥** ३८

ಮೂಲ :- ಪೊರುಳುಂ ಪುದಲ್ವರುಂ ಬೂಮಿಯುಂ, ಪೂಙ್ಗುಳಲಾರುಮೆನ್ರೇ
ಮರುಳ್ ಹೊಂಡಿಳ್ಳೈಕ್ಕುಂ ನಮಕ್ಕುನೆಂಜೇ, ಮತ್ತುಳಾರ್ ತರಮೋ
ಇರುಳ್ ಹೊಂಡವೆನ್ದುಯಿರ್ ಮಾತ್ತಿತ್ತನ್ನೀರಿಲ್ ಪೆರುಂ ಪುಹಳೇ
ತೆರುಳುಂ ತೆರುಳ್ ತನ್ದು, ಇರಾಮಾನುರ್ಶಶೆಯ್ಯುಂ ಶೇಮಂಗಳೇ ॥ 39

ಭಾವ :- ಪಣಂ, ಮಕ್ಕಳ್, ನೆಲಂ, ಅಳಹಾನ ಕುಳರ್ಲಿ ನಲ್ಲ್ಲ, ಎನ್ರುಶೊಲ್ಲಿಹೊಂಡೇ ಮತಿಕೆಟ್ಟುವರುಂದಿಕ್ಕೊಂಡಿರುಕ್ಕಿರ ಎಮ್ಮುಡೈಯ ಅಜ್ಞಾನತ್ತೈಯುಂ, ಅತ್ತೋಡುಕೂಡಿನ ಕೊಡಿಯದಾನ ತುನ್ಬಂಗಳ್ಳೆಯುಂ, ನೀಕ್ಕಿನಾರ್. ತಮ್ಮುಡೈಯ ಮುಡಿವತ್ತಶಿರಂದ ಗುಣಂಗಳ್ಳೆಯೇ ಶಿಂದಿಕ್ಕಕ್ಕಡವದಾನ ನಲ್ಲರಿವ್ವೈ ತಂದರುಳಿನಾರ್ ನಮ್ಮ ರಾಮಾನುಶರ್. ಓ ಮನವೇ ! ಇಂದ ಮರ್ಹಾಶೆಯ್ಯುಂ ಶೇಮಂಗಳಾನವೈ ಮತ್ತಪೇರ್‌ಹಳಾಲ್ ಶೆಯ್ಯಮುಡಿಯುಮಾ ? ಇವರರುಳೇ ತನಿ .

ಅರ್ಥ :- ಪೊರುಳುಂ-ದ್ರವ್ಯವೂ, ಪುದಲ್ವರ್ = ಮಕ್ಕಳೂ, ಭೂಮಿಯುಂ = ಹೊಲಗದ್ದೆಗಳೂ, ಪೂಂ-ಕುಳಲಾರುಮೆನ್ರೇ = ಮತ್ತುತುರುಬಿನಸೊಬಗಿನಕಾಮಿನಿಯರು ಎಂದು (ಹೇಳುತ್ತಾ) ಮರುಳ್-ಕೊಂಡು = ಬುದ್ದಿಗೆಟ್ಟು, ಇಳ್ಳೈಕ್ಕುಂ-ನಮಕ್ಕು = ಹಂಬಲಿಸುವ ನಮಗೆ, ಇರುಳ್-ಕೊಂಡ = ಅಜ್ಞಾನದೊಂದಿಗಿರುವ, ವೆಂ-ತುಯಿರ್ = ಉಗ್ರ ದುಃಖಗಳನ್ನು, ಮಾತ್ತಿ = ನಾಶಮಾಡಿ, ರ್ತ ಈರ್ ಇಲ್-ಪೆರುಂಪುಹಳೇ - ತೆರುಳುಂ-ತೆರುಳ್ = ತಮ್ಮ ಅಪಾರವಾದ ಉತ್ತಮ ಗುಣಗಳನ್ನೇ ಚಿಂತಿಸುವ ಜ್ಞಾನವನ್ನು, ತಂದ್ = ಕೊಟ್ಟು, ಇರಾಮಾನುರ್ಶ-ಶೆಯ್ಯುಂ, ಶೇಮಂಗಳ್ = ಶ್ರೀ ರಾಮಾನುಜರು ಮಾಡುವ ಕ್ಷೇಮಕರಕಾರ್ಯಗಳನ್ನು, ನೆಂಜೇ = ಮನಸ್ಸೆ ! ಮತ್ತು ಉಳಾರ್-ತರಮೋ = ಬೇರೆಯವರು ಮಾಡಬಲ್ಲರೇ ?

ತಾತ್ಪರ್ಯ :- ''ಐಶ್ವರ್ಯ, ಪುತ್ರ, ಕ್ಷೇತ್ರ, ಸುಕೇಶಿಯರು'' ಎಂದು ನಾವು ಮತಿಗೆಟ್ಟು ಹಂಬಲಿಸುವೆವು. ಹೀಗೆ ಬೇಡುವ ನಮ್ಮ ಅಜ್ಞಾನವನ್ನೂ, ಅದರಿಂದ ಬರುವ ಕಡುತರ ದುಃಖಗಳನ್ನೂ ಹೋಗಲಾಡಿಸಿ, ಅಪಾರವಾದ ತಮ್ಮ ಸದ್ಗುಣಗಳನ್ನೇ ಚಿಂತಿಸುವ ಒಳ್ಳೆಯ ಅರಿವನ್ನು ಕರುಣಿಸಿದರು ನಮ್ಮ ರಾಮಾನುಜರು. ಈ ಪರಮ ದಯಾಳುವಾದ ಮಹಿಮರು ಮಾಡುವ ಕ್ಷೇಮಕರಕಾರ್ಯದ ರೀತಿಯೇ ಅತಿ ವಿಲಕ್ಷಣವಾದುದು. ಎಲೈ ಮನಸ್ಸೆ! ಪರೀಕ್ಷಿಸಿ ನೋಡು. ಬೇರೆ ಯಾರಾದರೂ ಈ ರೀತಿ ಎಸಗುವವರಿರುವರೇ ?

द्रव्यं क्षेत्राणि पुत्रा स्सुरुचिरवरवर्णिन्य इत्युन्मतीनां
अस्माकं याचतां तद्दृढहृदयतमोयुक्तदुःखा न्यपोह्य ।
दत्वात्मासीमशोभावहसुगुणगणध्यानयोग्यं मनीषां
हे हृत् ! रामानुजो हि प्रभवति वद कः क्षेमकारीदृशोऽन्यः ॥ ३९

ಮೂಲ : ಶೇಮನಲ್ವೀಡುಂ ಪೊರುಳುಂದರುಮಮ್ಮುಂ, ಶೀರಿಯನಲ್
ಕಾಮಮುಂ ಎನ್ರಿವೈನಾನ್ಗೆನ್ಬರ್, ನಾನ್ಗಿನುಂಕಣ್ಣನುಕ್ಕೇ
ಆಮದುಕಾಮಮರಂ ಪೊರುಳ್ ವೀಡಿದರ್ಕೆನ್ರುರೈತ್ತಾ
ವಾಮನರ್ ಶೀಲ್, ಇರಾಮಾನುಶ‌ ಇನ್ದಮಣ್ಮಿಶೈಯೇ ॥ 40

ಭಾವ :- ಕ್ಷೇಮಮಾನ ಮೋಕ್ಷಂ, ಧನಂ, ಧರ್ಮಂ, ಮಿಹವುಂಪೆರುತ್ತ ಕಾಮಂ, ಆಹ ಇವೈನಾನ್ಗುಂ ಪುರುಷಾರ್ಥಂಗಳೆನ್ರು ಪೆರಿಯೋರ್ಹಳ್ ಶೊಲ್ಲುಹಿರಾರ್, ಇವೈಹಳಿಲ್ ಕಾಮಮಾನದ್ ಕಣ್ಣಪಿರಾನಿಡತ್ತಿಲೆಯೇ ಉಂಡಾಮದ್. ಮಿಕ್ಕ ಮೂನ್ರುಂ ಅಂದ ಕಾಮತ್ತಿರ್ಕ್ಕೇ ಶೇಷಭೂತಂಗಳಾಯಿರುಕ್ಕುಂ ಎನ್ರು ಮುನ್ಬು ವಾಮನನಾಹ ಅವತರಿತ್ತಿರುಂದ ಪೆರುಮಾಳ್ ತೆರಿಯವಿತ್ತಾರ್. ಅಂದ ಶೀಲಗುಣಮುಳ್ಳ ರಾಮಾನುಜರ್ ಇಂದ ಉಲಹತ್ತಾರ್ಕ್ಕ ಮಿಹವುಂ ನನ್ರಾಹ ಅದೈ ಉಪದೇಶಿತ್ತರುಳಿನಾರ್.

ಅರ್ಥ :- ಶೇಮ-ನಲ್ವೀಡುಂ = (ಎಲ್ಲರಿಗೂ) ಕ್ಷೇಮವಾಗುವ ಮೋಕ್ಷವೂ,— ಪೊರುಳುಂ = ಸಿರಿಯೂ, ದರುಮಮುಂ = ಧರ್ಮವೂ, ಶೀರಿಯ-ನಲ್-ಕಾಮಮುಂ-ಎನ್ರು-ಇವೈ = ಉತ್ತಮವಾದುದಲ್ಲಿ ಹೆಚ್ಚಾಗಿರುವ ಕಾಮವೂ, ಆದ ಇವು, ನಾನ್ಗೆನ್ಬರ್ = ನಾಲ್ಕು ಎನ್ನುವರು. ನಾನ್ಗಿನುಂ = ಈ ನಾಲ್ಕರಲ್ಲೂ, ಕಾಮಂ = ಕಾಮವು, ಕಣ್ಣನುಕ್ಕೇ-ಆಂ-ಅದ್ = ದೇವರ ವಿಷಯದಲ್ಲೇ ಆಗುವುದಾಗಿರಬೇಕು, ಅರಂ-ಪೊರುಳ್-ವೀಡ್ = ಧರ್ಮ-ಅರ್ಥ-ಮೋಕ್ಷಗಳು ಮೂರೂ, ಇದರ್ಕು-ಎನ್ರು = ಈ ಕಾಮಕ್ಕೇ ಅಧೀನವಾದವು ಎಂದು, ವಾಮನರ್-ಶೀಲ್-ಇರಾಮಾನುಶರ್ = ವಾಮನಾವತಾರ ಮಾಡಿದ್ದ ಪರಮಾತ್ಮನ ಶೀಲಗುಣವುಳ್ಳ ರಾಮಾನುಜರು, ಇಂದ-ಮಣ್-ಮಿಶೈ = ಈ ಲೋಕದ ಜನರಿಗೆ, ಉರೈತ್ತಾ = ತಿಳಿಸಿದರು.

ತಾತ್ಪರ್ಯ :- ಕ್ಷೇಮವಾಗುವ ಮೋಕ್ಷ, ಧರ್ಮ, ಅರ್ಥ ಮತ್ತು ಭಗವದ್ವಿಷಯಕವಾದ ಹೆಚ್ಚು ಆಸೆಯೆಂಬ ಕಾಮವೂ ಆಗಿ ನಾಲ್ಕು ಪುರುಷಾರ್ಥಗಳು. ಇದರಲ್ಲಿ ಕಾಮವು ಭಗವಂತನ ವಿಷಯದಲ್ಲೇ ಇರಬೇಕು. ಹಾಗಿರುವುದೇ ಉತ್ತಮ. ಉಳಿದ ಮೂರು ಕಾಮಕ್ಕೇ ಅಂಗವಾಗಿರಬೇಕು. ಇದನ್ನು ವಾಮನಾವತಾರವೆತ್ತಿದ ಪರಮಾತ್ಮನರುಹಿದ್ದನು. ಈ ಶೀಲವನ್ನೇ ಪಡೆದಿರುವ ನಮ್ಮ ಸ್ವಾಮಿ ರಾಮಾನುಜರು ಈ ಜನರಿಗೆ ಅದನ್ನೇ ಚೆನ್ನಾಗಿ ಉಪದೇಶಿಸಿದರು.

**क्षेमं मोक्षोऽर्थधर्मावुपचितसुगुणः काम एते पुमार्थाः ।**
**इत्याहुस्तत्र कामो मुररिपुविषयो ह्युत्तमो नान्यथा स्यात् ।**
**शेषा धर्मार्थमोक्षा अनितरविषया श्शेषभूतास्तु तस्यै-**
वेत्येतद्वामनोऽसाविति विदितगुणः प्राह रामानुजार्यः ।। ४०

ಮೂಲ : ಮಣ್ಮಿಶೈಯೋನಿಹಳ್‌ದೋರುಂಪಿರಂದ್, ಎಂಗಳ್ ಮಾದವನೇ
ಕಣ್ಣುರನಿರ್ಕಿಲುಂಕಾಣಹಿಲ್ಲಾ, ಉಲಹೋರ್‌ಹಳೆಲ್ಲಾಂ
ಅಣ್ಣಲಿರಾಮಾನುಶ‌ ವನ್ದುತೋನ್ರಿಯ ಅಪ್ಪೊಳುದೇ
ನಣ್ಣರುಜ್ಞಾನಂ ತಲ್ಯೆಕ್ಕೊಂಡು, ನಾರಣಾರ್ಕ್ಕಯಿನರೇ ॥ 41

ಭಾವ :- ನಮ್ಮುಡ್ಯೆಯ ಲಕ್ಷ್ಮೀನಾಥನೇತಾ‌ ತಾನಾಹವೇ ಇವ್ವುಲಹತ್ತಿಲ್ ಯೋನಿ ವಿಶೇಷಂಗಳಿಲ್ ಅವತರಿತ್ತೆಲ್ಲಾರುಡ್ಯೆಯ ಕಣ್‌ಹಳುಕ್ಕುಂ ಕಾಣುಂಪಡಿ ಇರುಂದಾಲುಂ, ಅವನ್ಯೆ, ''ತಂಗಳ್ ನಾರ್ದ ನಾರಾಯಣರ್ನತಾ‌ ಇಂದರೂಪತ್ತಾಲೆ ಅನುಗ್ರಹಿಕ್ಕವಂದಾನೆ'' ನ್ರು, ಕಂಡರಿಯಾದಿರುಂದ ಇಂದ ಲೋಕತ್ತಾರ್, ನಮ್ಮ ಸ್ವಾಮಿ ರಾಮಾನುಜರ್ ವಂದ್ ಇಂಗೆ ಅವತರಿತ್ತವುಡನೆ, ನಲ್ಲರಿವ್ಯೆ ಸುಲಭಮಾಹಪ್ಪೆತ್ತ್ ''ಶ್ರೀಮನ್ನರಾಯಣರ್ನತಾ‌ ನಮಕ್ಕ್ ಶೇಷೀ'' ಎನ್ರು ಅವನುಕ್ಕ್ ಶೇಷ ಭೂತರಾಯ್‌ವಿಟ್ಟಾರ್‌ಹಳ್.

ಅರ್ಥ :- ಎಂಗಳ್-ಮಾದವನೆ = ನಮ್ಮ ಲಕ್ಷ್ಮೀಕಾಂತನೇ, ಮಣ್ಮಿಶೈ-ಯೋನಿಹಳ್-ತೋರುಂ = ಈ ಭೂಮಿಯಲ್ಲಿ ಮನುಷ್ಯ ಮೊದಲಾದ ಯೋನಿಗಳಲ್ಲಿ, ಪಿರಂದ್ = ಅವತರಿಸಿ, ಕಣ್-ಉರ-ನಿರ್ಕಿಲುಂ = (ಎಲ್ಲರ) ಕಣ್ಣುಗಳಿಗೆ ಕಾಣುವಂತೆ ಬಂದು ನಿಂತರೂ, ಕಾಣಹಿಲ್ಲಾ = ಕಾಣದಿದ್ದ (ತಿಳಿಯದಿದ್ದ) ಉಲಹೋರ್‌ಹಳೆಲ್ಲಾಂ = ಭೂವಾಸಿಗಳೆಲ್ಲರೂ, ಅಣ್ಣಲ್-ಇರಾಮಾನುಶ‌ = ಸ್ವಾಮಿ ರಾಮಾನುಜರು, ವಂದ್-ತೋನ್ರಿಯ-ಅಪ್ಪೊಳುದೆ = ಇಂದು ಇಲ್ಲಿ ಅವತರಿಸಿದ ಕೂಡಲೆ, ನಣ್ಣರು-ಜ್ಞಾನಂ = ಉತ್ತಮೋತ್ತಮವಾದ ಜ್ಞಾನವನ್ನು, ತಲ್ಯೆಕ್ಕೊಂಡು = ಸಂಪಾದಿಸಿ, ನಾರಣರ್ಕ್ಕ = ನಾರಾಯಣನಿಗೇ, ಆಯಿನರ್ = ಶೇಷರಾದರು. (ಸೇವಕರಾದರು)

ತಾತ್ಪರ್ಯ :- ಲಕ್ಷ್ಮೀನಾರಾಯಣನೇ ನಮ್ಮ ಸ್ವಾಮಿ ಪರಮ ದಯಾಳು. ಅವನೇ ಪರಿಪರಿಯಾಗಿ ಅವತರಿಸಿ, ಜನರ ದೃಷ್ಟಿಗೆ ಕಾಣಿಸಿಕೊಂಡು, ತಾನಿಂತಹ ಮಹಿಮನೆಂಬುದನ್ನು ಅವರೆಲ್ಲ ಅರಿಯುವಂತೆ ಏನೇ ಮಾಡಿದರೂ, ಆಗ ಭಗವಂತನ ಹಿರಿಮೆ ಮಹಿಮೆಗಳನ್ನು ಯಾರೂ ಅರಿಯದವರಾದರು. ಅದೇ ನಮ್ಮ ರಾಮಾನುಜರು ಅವತರಿಸಲಾಗಿ, ಎಲ್ಲರೂ ಅವರ ದಯೆಗೆ ಪಾತ್ರರಾಗಿ ದುರವಗಾಹವಾದ ಜ್ಞಾನವನ್ನು ಸುಲಭವಾಗಿ ಪಡೆದು, ''ಶ್ರೀಮನ್ನಾರಾಯಣನೇ ಸರ್ವಶೇಷಿ, ಇತರರೆಲ್ಲ ಅವನಿಗೆ ಶೇಷ ಭೂತರು'' ಎಂದರಿತು ಹಿಗ್ಗಿದರು. ದೇವರಿಗಿಂತ ಸದಾಚಾರ್ಯರ ಪ್ರಭಾವ ವಿಲಕ್ಷಣವಾದುದು.

अस्माकीनरमाधवो जनि मजोऽप्यासाद्य चानेकधा
सर्वालोकपथं गतोऽपि विविदु र्नास्यानुभावं जनाः ।
श्रीरामानुज आगते भुवमिहाशेषा ययु श्शेषतां
श्रीनारायण एव शेषिपदभागित्युत्तमज्ञानिनः ॥ ४१

ಮೂಲ : ಆಯಿಳೈಯಾರ್ ಕೊಂಗೈತಂಗುಂ, ಅಕ್ಕಾದಲತ್ತಳುಂದಿ
ಮಾಯುಂ ಎನ್ನಾವಿಯೈ ವಂದೆಡುತ್ತಾರ್ ಇನ್ರು, ಮಾಮಲರಾಳ್
ನಾಯಹರ್ ಎಲ್ಲಾಪುಯಿರ್‌ಹಳುಕ್ಕುಂ ನಾದರ್ ಅರಂಗನೆನ್ನುಂ
ತೂಯವರ್, ತೀದಿಲಿರಾಮಾನುಶರ್ ತೊಲ್ಲರುಳ್‌ಶುರನ್ದೇ ॥ 42

ಭಾವ :- ಲಕ್ಷ್ಮೀವಲ್ಲಭನಾನ ಪೆರಿಯ ಪೆರುಮಾಳ್ ಎಲ್ಲಾ ಜೀವರ್‌ಹಳುಕ್ಕುಂ ಸ್ವಾಮಿ (ಶೇಷಿ) ಎನ್ರುಪದೇಶಿತ್ತರುಳಿನವರುಂ, ಪರಮಪವಿತ್ರರುಂ, ಯಾದೊರುಕುತ್ತ ಮುಮತ್ತವರಾನ ರಾಮಾನುಜರ್ ಅಳಹಿಯ ಒಡಮ್ಬೈಹಳಾಲ್ ಅಲಂಕಾರಂಕೊಂಡ ಸ್ತ್ರೀಹಳುಡೈಯ ಸ್ತನತಟಂಗಳಿಲ್ ತಂಗುಂ ಆಶೈಯಾಹಿರಶೇತ್ತಿಲ್ ಅಳುಂದಿನಶಿತ್ತ್‌ಪ್ಪೋಹುಂ ಎನ್ನಾತ್ಮಾವೈ ಪರಮಕೃಪೈಯಾಲ್ ಎಳುಂದರುಳಿ ಇನ್ರು ಉಜ್ಜೀವಿಪ್ಪಿತ್ತರುಳಿನಾರ್.

ಅರ್ಥ :- ಮಾ-ಮಲರಾಳ್-ನಾಯಹರ್ = ಮಹಾಲಕ್ಷ್ಮಿಯ ಕಾಂತನಾದ, ಅರಂಗರ್ = ಶ್ರೀರಂಗನಾಥನು, ಎಲ್ಲಾ-ಉಯಿರ್‌ಹಳುಕ್ಕುಂ = ಎಲ್ಲಾ ಆತ್ಮಗಳಿಗೂ, ನಾದರ್-ಎನ್ರುಂ = ಸ್ವಾಮಿಯೆಂದುಪದೇಶಿಸಿದವರೂ, ತೂಯವರ್ = ಪರಿಶುದ್ಧರೂ, ತೀದ್-ಇಲ್ = ಯಾವವಿಧ ದೋಷವೂ ಇಲ್ಲದವರೂ ಆದ, ಇರಾಮಾನುಶರ್ = ರಾಮಾನುಜರು (ಏನುಮಾಡಿದರೆಂದರೆ) ಆಯ್-ಇಳೈಯಾರ್-ಕೊಂಗೈ = ಅಂದವಾದ ಒಡವೆಗಳನ್ನು ಧರಿಸಿದ ತರುಣಿಯರ ಎದೆಗಳಲ್ಲಿ, ತಂಗುಂ = ಇದ್ದು ಅನುಭವಿಸಬೇಕೆಂಬ, ಅಕ್ಕಾದಲ್-ಅಳಿತ್ತ್ = ವಿಷಯರುಚಿಯಲ್ಲಿ ಆಸಕ್ತವಾಗಿ, ಅಳುಂದಿ-ಮಾಯುಂ = ನಶಿಸಿಹೋಗುವ, ಎರ್ ಆವಿಯೈ = ನನ್ನ ಆತ್ಮವನ್ನು, ತೊಲ್-ಅರುಳ್-ಶುರಂದ್ = ಸಹಜ ಶುದ್ಧವಾದ ಕರುಣೆತೋರಿ, ವಂದ್-ಬಂದು, ಇನ್ರು = ಇಂದು, ಎಡುತ್ತಾರ್ = ಉದ್ಧರಿಸಿದರು.

ತಾತ್ಪರ್ಯ :- ಕಮಲಾನಾಯಕನಾದ ಶ್ರೀ ರಂಗನಾಥನೇ ಎಲ್ಲ ಆತ್ಮಗಳಿಗೂ ನಾಥನೆಂದು ಉಪದೇಶಿಸಿದವರೂ, ಬಹುಶುದ್ಧರೂ, ನಿರ್ದೋಷರೂ ಆದ ರಾಮಾನುಜರು ಸೊಗಸಾದ ತೊಡಿಗೆಗಳನ್ನು ತೊಟ್ಟಿರುವ ಸ್ತ್ರೀಯರ ವಕ್ಷಸ್ಥಳದಲ್ಲೇ ನೆಲೆಸಿದ ಭಾವದಿಂದ ನಶಿಸಿಹೋಗುತ್ತಿರುವ ನನ್ನ ಜೀವಾತ್ಮನನ್ನು ತುಂಬ ದಯಾಳುಗಳಾಗಿ ಬಂದು ಉಜ್ಜೀವನಗೊಳಿಸಿ ರಕ್ಷಿಸಿದರು.

सरोजनिलयापति र्निखिलदेहिनामीश्वरः
सरङ्गपति रित्युपादिशदनाविलः पावनः ।
मनोहरविभूषिते युवतिवक्षसि स्थायिनं
घृणीह मम जीव मप्युदधरच्च रामानुजः ॥ ४२

ಮೂಲ : ಶುರಕ್ಕುಂ ತಿರುವುಂ ಉಣ್ವರುಂ, ಶೊಲಪ್ಪುಹಿಲ್ ವಾಯಮುದಂ
ಪರಕ್ಕುಂ ಇರುವಿನ್ನೈ ಪತ್ತರವೋಡುಂ, ಪಡಿಯಲುಳ್ಳೀರ್
ಉರೈಹಿನ್ರ್ರನ್ ಉಮಕ್ಕುಯಾನ್ ಅರಂಶೀಯ ಮುರುಹಲಿಯ್ಯೆ
ತುರಕ್ಕುಂ ಪೆರುಮ್ಮೈ, ಇರಾಮಾನುಶನೆನ್ರು ಶೊಲ್ಲುಮಿನೇ ॥ 43

ಭಾವ :- ಓ ಉಲಹತ್ತುಳ್ಳೀರೆ ! ನಾನ್ ಉಂಗಳುಕ್ಕು ಒರುಹಿತತ್ತೈ ಶೊಲ್ಲು ಹಿರೇನ್. ಕೇಳೀರ್, ಅದೆನ್ರವೆನ್ರಾಲ್, ಧರ್ಮ ವಿರೋಧಿಯುಂ ಮಿಹವುಂ ಬಲಮುಳ್ಳವನುಮಾನ ಕಲಿಯ್ಯೆ ಓಟ್ಟಿವಿಡವಲ್ಲಪೆರುಂ ತನ್ಮೈಯುಡ್ಯೆಯವರ್ ರಾಮಾನುಜರ್ ತಾನ್. ಅವರುಡ್ಯೆಯ ನಾಮಂಗಳೈ ಶೊಲ್ಲುಂಗಳ್. ಇಪ್ಪಡಿ ಶೊನ್ನೀರ್ ಆಹಿಲ್ ಭಕ್ತಿ ಅಡ್ಯೆಯುಂ ಶೆಲ್ವಮುಂ, ಜ್ಞಾನಮುಂ, ಪೊಂಗಿಪೊಂಗಿವರುಂ. ಅಂದತಿರುನಾಮತ್ತೈ ಶೊಲ್ಲ ತುತ್ತಂಗುಂಪೋದೇ ವಾಕ್ಕಿಲ್ ಅಮುದಂ ಪರವುಂ, ಮಹಾಪಾಪಂಗಳ್ ಅಡಿಯೋಡೇ ಪೋಯ್‌ವಿಡುಂ.

ಅರ್ಥ :- ಪಡಿಯಿಲ್ = ಭೂಮಿಯಲ್ಲಿ, ಉಳ್ಳೀರ್ = ಇರುವವರೆ ! ಯಾನ್ = ನಾನು-ಉಮಕ್ಕ್ = ನಿಮಗೆ, ಉರೈಹಿನ್ರೇನ್ = (ಹಿತವೊಂದನ್ನು) ಹೇಳುವೆನು. (ಅದೇನೆಂದರೆ) ಅರಂ = ಧರ್ಮವನ್ನು, ಶೀರುಂ = ದ್ವೇಷಿಸುವ, ಉರು-ಕಲಿಯ್ಯೆ = ಪ್ರಬಲನಾದ ಕಲಿಯನ್ನು, ತುರಕ್ಕುಂ = ಓಡಿಸಬಲ್ಲ, ಪೆರುಮ್ಮೈ-ಇರಾಮಾನುಶರ್ = ಪ್ರಭಾವವುಳ್ಳ ರಾಮಾನುಜರು, (ಎಂದು) ಶೊಲ್ಲುಮಿನ್ = ಹೇಳಿರಿ, (ಹೇಳಿದರೆ) ತಿರುವುಂ = ಭಕ್ತಿಯನ್ನುತರುವ ಸಿರಿಯೂ, ಉಣ್ವರುಂ = ಅನುಭವಪರ್ಯಂತ ಜ್ಞಾನವೂ, ಶುರಕ್ಕುಂ ಮೇಲೆ ಮೇಲೆ ಉಕ್ಕಿಬರುವುವು. ಶೊಲಪ್ಪುಹಿಲ್ = ಹೇಳಲು ತೊಡಗಿದೊಡನೆಯೇ, ವಾಯ್ = ಬಾಯಲ್ಲಿಅಮುದಂ = ಅಮೃತರಸವು, ಪರಕ್ಕುಂ = ಹರಿವುದು, ಇರು ವಿನ್ನೈ = ಕಡುತರ ಪಾಪಗಳು, (ಪುಣ್ಯ-ಪಾಪಗಳು) ಪತ್ತರ-ಓಡುಂ = ಬೇರುಸಹಿತ ಕಿತ್ತು ನಾಶವಾಗುವುದು.

ತಾತ್ಪರ್ಯ :- ಓ ಮಾನವರೇ ! ನಿಮಗೊಂದು ಹಿತವನ್ನರುಹೆವನು. ಕೇಳಿ, ಧರ್ಮಕ್ಕೆ ವೈರಿಯಾದ ಮತ್ತು ಮಹಾ ಬಲಶಾಲಿಯಾದ ಕಲಿಯನ್ನು ಓಡಿಸಬಲ್ಲವರು ನಮ್ಮ ರಾಮಾನುಜರೇ ! ಇವರ ನಾಮವನ್ನು ಸಂಕೀರ್ತನೆಮಾಡಿ, ಭಕ್ತಿಸಂಪತ್ತೂ ನಿರ್ಮಲ ಜ್ಞಾನವೂ ಚಿಲುಮೆಯಂತೆ ಮೇಲೆಮೇಲೆ ಬರುತ್ತಲೇ ಇರುತ್ತದೆ. ಹೇಳತೊಡಗಿದೊಡನೆ ನುಡಿಯಲ್ಲಿ ಅಮೃತರಸವಾವರಿಸುವುದು. ಮುಕ್ತಿವಿರೋಧಿ ಪಾಪ.

हे मर्त्याः ! वचनं हितं श्रुणुत वो वक्ष्यामि धर्मद्विषः
दुर्दान्तस्य कलेः परो दमयिता रामानुजो नन्वतः ।
नामान्यस्य च गायत प्रवहतो ज्ञानं च भक्तिर्दृढा
पापं मुक्तिविरोधि नश्यति सुधासिक्ता विवक्षो र्गिरः ॥ ४३

**ಶೊಲ್ಲಾರ್ ತಮಿಳ್ ಒರು ಮೂನ್ರುಂ, ಶುರದಿಹಳ್‌ನಾನ್ಗುಂ ಎಲ್ಲೈ**
**ಯಿಲ್ಲಾ ಅರನೆರಿಯಾವುಂತೆರಿಂದವರ್ಗ, ಎಣ್ಣರುಂಶೀರ್**
**ನಲ್ಲಾರ್‌ಪರವುಂ ಇರಾಮಾನುಶರ್ತ ತಿರುನಾಮಂನಂಬಿ**
**ಕ್ಕಲ್ಲಾರ್ ಅಹಲಿಡತ್ತೋರ್, ಎದುಪೇರೆನ್ರು ಕಾಮಿಪ್ಪರೇ ॥ 44**

**ಭಾವ** :- ಇಂದಹಲಮಾನವುಲಹಿಲ್ ಇರುಪ್ಪವರ್‌ಹಳ್ ಶೊಲ್‌ನಿರೈಂದ ಮೂನ್ರುವಿದತಮಿಳೈಯುಂ, ನಾಲು ವೇದಂಗಳೈಯುಂ, ಅಳವತ್ತ ಧರ್ಮಶಾಸ್ತ್ರಂಗಳೈಯುಂ ಅನ್ರಿಯೇ ಎಲ್ಲಾಕ್ಕಲೈಹಳೈಯುಂ ತೆರಿಂದವರಾಯುಂ, ಮಹಾರ್ಹಳಾಲ್ ಕೊಂಡಾಡಪ್ಪಡುಮವರುಮಾನ ರಾಮಾನುಜರುಡೈಯ ತಿರುನಾಮತ್ತಿ ಕೀರ್ತನಮೇ ಪರಮಪುರುಷಾರ್ಥಮೆನ್ಬದೈ ನಂಬಾದವರ್ಗಳಾಯ್, ತಮಕ್ಕು ಪುರುಷಾರ್ಥಂ ಎದ್ ಎನ್ರು ಕೇಳ್‌ಹಿನ್ರಾರ್‌ಹಳ್. ಅಯ್ಯೋ! ಎನ್ನ ಅನ್ಯಾಯಮಿದ್ !

**ಅರ್ಥ** :- ಅಹಲ್ ಇಡತ್ತೋರ್ = ವಿಶಾಲ ಭೂನಿವಾಸಿಗಳು, ಶೊಲ್-ಆರ್ = ನುಡಿಗಳಿಂದ ತುಂಬಿದ, ತಮಿಳ್-ಒರು-ಮೂನ್ರುಂ = ತಮಿಳಿನ ಅನುಪಮವಾದ ಮೂರು ವಿಧಗಳನ್ನೂ, ಶುರುದಿಹಳ್-ನಾನ್ಗುಂ = ನಾಲ್ಕು ವೇದಗಳನ್ನೂ, ಎಲ್ಲೈ-ಇಲ್ಲಾ = ಅಸಂಖ್ಯಾತವಾದ, ಅರ-ನೆರಿ = ಧರ್ಮಶಾಸ್ತ್ರಗಳನ್ನೂ (ಮತ್ತು) ಯಾವುಂ = ಎಲ್ಲಾ ಕಲೆಗಳನ್ನೂ, ತೆರಿಂದವರ್ಗ = ತಿಳಿದವರಾಗಿಯೂ, ಎಣ್-ಅರುಂ-ಶೀರ್ = ಎಣಿಸಲಾಗದಷ್ಟು ಸದ್ಗುಣಗಳುಳ್ಳವರೂ, ನಲ್ಲಾರ್-ಪರವುಂ = ಸಜ್ಜನರಿಂದ ಹೊಗಳಿಸಿಕೊಳ್ಳುವವರಾಗಿಯೂ ಇರುವ, ಇರಾಮಾನುಶರ್ತ = ರಾಮಾನುಜರ, ತಿರುನಾಮಂ = ಪಾವನಕರ ಹೆಸರನ್ನು, ನಂಬಿ-ಕ್ಕಲ್ಲಾರ್ = ನಂಬಿ ಕಲಿಯುವುದಿಲ್ಲ, ಎದ್-ಪೇರ್-ಎನ್ರೇ = ಪುರುಷಾರ್ಥವಾವುದೆಂದೇ, ಕಾಮಿಪ್ಪರ್ = ಆಸೆಯಿಂದ ಕೇಳುತ್ತಿರುವರು.

**ತಾತ್ಪರ್ಯ** :- ನಮ್ಮ ರಾಮಾನುಜರು ಲಲಿತವೂ, ಸರಸವೂ ಆದ ತಮಿಳು ಕಾವ್ಯ ಸಂಪತ್ತನ್ನೆಲ್ಲ ಉಳ್ಳವರು. ನಾಲ್ಕು ವೇದಗಳಲ್ಲೂ ಅಸಾಧಾರಣವಾದ ಜ್ಞಾನವುಳ್ಳವರು. ಅಸಂಖ್ಯಾತ ಸ್ಮೃತಿ, ಇತಿಹಾಸ, ಧರ್ಮಶಾಸ್ತ್ರಾದಿಗಳಲ್ಲಿ ಅನ್ಯಾದೃಶವಾದ ಅರಿವುಳ್ಳವರು. ಮಹಾತ್ಮರನೇಕರ ಪ್ರಶಂಸೆಗೆ ಪಾತ್ರರಾದವರು. ಪವಾಡ ಪುರುಷರು. ಇಂತಹ ಮಹನೀಯರ ನಾಮಸಂಕೀರ್ತನೆಯೇ ಪರಮಪುರುಷಾರ್ಥವೆಂದರಿಯದೆ, ಹೇಳಿದರೂ ನಂಬದೆ, ಈ ಭೂನಿವಾಸಿಗಳು, ''ತಮ್ಮ ಪುರುಷಾರ್ಥವೇನು?'' ಎಂದು ಕೇಳುತ್ತಲೇ ಇರುವರು. ನನ್ನ ಮಾತನ್ನೂ ಆಲಿಸರು. ಅಯ್ಯೋ ! ಏನನ್ಯಾಯ ! ಅದೇಕೆ ? ಹೀಗೆ ಮಾಡುವರೋ, ನಾನರಿಯೆ.

**लोका श्श्रद्दधते न मद्वचसि नः को वा पुमर्थो भवेत् ?**
**हन्तैवं त्वनुयुञ्जते कुत इदं ? सेव्यो हि रामानुजः ।**
**यो वेत्ति द्रविडोक्तिबन्धसरणिं त्रेधा विभक्तां तथा**
**प्राज्ञो वेदचतुष्टये स्मृतिशताभिज्ञश्च सत्कीर्तितः ॥ ४४**

ಮೂಲ : ವೇರೊನ್ರು ಮತ್ತಿಲ್ಲೈನಿ‌ಶರಣನ್ರಿ, ಅಪ್ಪೇರಳಿತ್ತರ್ಕ್ಕ
ಆರೊನ್ರುಮಿಲ್ಲೈಮತ್ತಚ್ಚರಣನ್ರಿ, ಎನ್ರಿಪ್ಪೊರುಳ್ಳೈ
ತೇರುಮವರ್ಕ್ಕುಂ ಎನಕ್ಕುಮುನ್ನೈತ್ತಂದಶೆಮ್ಮೈಶೊಲ್ಲಾಲ್
ಕೂರುಂಪರಮನ್ರು, ಇರಾಮಾನುಶ ! ಮೆಯ್‌ಮ್ಮೈಕ್ಕೂರಿಡಿಲೇ ॥ 45

ಭಾವ : ಓ ರಾಮಾನುಜರೇ ! "ದೇವರೀರ್ ತಿರುವಡಿಹಳ್‌ತವಿರ ಅಡಿಯೇನುಕ್ಕು ಅಡೈಯವೇಂಡಿಯದಾನ ವಸ್ತುಮತ್ತೊನ್ರಿಲ್ಲೈ. ಅದ್ಯೆ ಅಡೈಯವಿಕ್ಕ ಅಂದತ್ತಿರುವಡಿಹಳ್ ಒಳಿಯ ವೇರೊರು ಉಪಾಯಮುಂ ಇಲ್ಲೈ" ಎಂಗಿರ ಇಂದ ಮೆಯ್ಯಾನಪ್ಪೊರುಳ್ಳೈ ತೆಳುವಾಹ ಅರಿಂದ ಮಹಾ‌ಹಳಕ್ಕುಂ ಇಂದ ಅರಿವು ಶಿರುದಂ ಇಲ್ಲಾದ ಎನಕ್ಕುಂ (ಉಮ್ಮೈ) ಕ್ಕಾಟ್ಟಿಕೊಡುತ್ತ (ಉಮ್ಮುಡೈಯ) ಶೆಮ್ಮೈಗುಣಂ ದೇವರೀರ್ಯೆ ಶೊಲ್ಲಿಲ್ ವಾಯಾಲೇ ಶೊಲ್ಲತ್ತರಮನ್ರು.

ಅರ್ಥ :- ಇರಾಮಾನುಶ = ಶ್ರೀ ರಾಮಾನುಜರೇ ! ನಿ‌-ಶರಣನ್ರಿ = ನಿಮ್ಮಡಿಗಳಹೊರತು, ಮಟ್ರು-ಪೇರ್-ಒನ್ರುಂ-ಇಲ್ಲೈ = ಪಡೆಯಬೇಕಾದುದು ಮತ್ತೊಂದಿಲ್ಲ, ಅಪ್ಪೇರ್-ಅಳಿತ್ತರ್ = ಆ ಅಡಿಗಳನ್ನು ಹೊಂದಲು, ಅಚ್ಚರಣನ್ರಿ = ಆ ಪಾದಗಳ ಹೊರತು, ಮಟ್ರು-ಆರ್-ಒನ್ರುಂ-ಇಲ್ಲೈ = ಬೇರೆ ಉಪಾಯ ಯಾವುದೂ ಇಲ್ಲ, ಎನ್ರ-ಇಪ್ಪೊರುಳ್ಳೈ = ಎಂಬ ಈ ನಿಜಾಂಶವನ್ನು, ತೇರುಮವರ್ಕ್ಕುಂ = ಚೆನ್ನಾಗಿ ಅರಿತ ಮಹನೀಯರಿಗೂ, ಎನಕ್ಕುಂ = ಈ ಅರಿವಿನ ಸೊಲ್ಲೆ ಇಲ್ಲದ ನನಗೂ, ಉನ್ನೈ-ತಂದ = (ವ್ಯತ್ಯಾಸವಿಲ್ಲದೆ ಪಮನಾಗಿಯೇ) ನಿಮ್ಮನ್ನು ತೋರಿಸಿಕೊಟ್ಟ, ಶೆಮ್ಮೈ = ಆರ್ಜವವೆಂಬ ಗುಣವು, ಮೈಮ್ಮೈ-ಕ್ಕೂರಿಡಿಲ್ = ನಿಮ್ಮನ್ನು ವರ್ಣಿಸಲು, ಶೊಲ್ಲಾಲ್-ಕೂರುಂ = ಬಾಯಿ ಮಾತಿನಿಂದ ಹೇಳಲು, ತರಂ-ಅನ್ರು = ಆಗಲಾರದು.

ತಾತ್ಪರ್ಯ :- ಶ್ರೀ ರಾಮಾನುಜರೇ ! ನಾನು ಪಡೆಯಬೇಕಾದುದು ನಿಮ್ಮಡಿಗಳ ಹೊರತು "ಅತ್ರ ಪರತ್ರಚಾಪಿ ನಿತ್ಯಂ ಯದೀಯ ಚರಣೌ ಶರಣಂಮದೀಯಂ" ಎಂಬಂತೆ ಮತ್ತಾವುದೂ ಅಲ್ಲ, ಅದನ್ನು ಪಡೆಯಲು ಆ ಅಡಿಗಳೇ ಉಪಾಯವು ಬೇರೆಯಿಲ್ಲ. ಈ ಸಾರವಾದ ವಿಷಯವನ್ನು ಚೆನ್ನಾಗಿ ಅರಿತವರಿಗೂ, ಏನೂ ಅರಿಯದ ನನಗೂ ತೋರಿಸಿಕೊಟ್ಟಿದ್ದು ನಿಮ್ಮ ಆ "ಋಜುತನ" ಎಂಬ ಗುಣ. ವರ್ಣಿಸಲಸದಳವದು. ಅನುಭವಮಾತ್ರದಿಂದಲೇ ಅರಿಯತಕ್ಕುದು. ಬಾಯಿಂದ ಹೇಳಲಾಗುವುದಿಲ್ಲ.

नान्यत् प्राप्यं त्वदीयात् वरपदयुगळादद्य रामानुजार्य !
प्राप्यं तादृक् प्रदातुं प्रभवति भवदीयांघ्रियुग्मं हि नान्यत् ।
ईदृक्तत्वप्रवक्ता सकलमतिमतां चामते मे गुण स्ते
स्तोतुं तं क स्समर्थः पर मनुभवता वेद्यते त्वार्जवाख्यः ॥ ४५

ಮೂಲ : ಕೂರುಂ ಶಮಯಂಗಳಾರುಂ ಕುಲ್ಯೆಯ, ಕುವಲಯತ್ತೇ
ಮಾರ್ರ್ಪಣಿತ್ತಮರ್ಯೆಯುಣರ್‌ನ್ದೋನ್ನೈ, ಮದಿಯಿಲಿಯೇರ್
ತೇರುಂಬಡಿ ಎರ್ ಮನಂ ಪುಹುನ್ದಾನ್ನೈ ತ್ತಿಶ್ಶೆಯನ್ನೆತ್ತುಂ
ಏರುಂಗುಣನ್ನೈ, ಇರಾಮಾನುಶನ್ನೈ ಇರ್ರೆಂಜಿನಮೇ ‖ 46

ಭಾವ :- ತಾಂತೋನಿಯಾಹಶೊಲ್ಲುಂ ಬಾಹ್ಯಮತಂಗಳ್ ಆರುಂ ಅಡಿಯೋಡೇ ಒಳಿಯುಂಪಡಿ, ಇಂದ ಬುವಿಯಿಲ್ ನಮ್ಮಾಳ್ವಾರ್ ಶೊನ್ನ ತಮಿಳ್ ವೇದತ್ತೈ ತೆರಿಂದವರಾಯುಂ, ಮದಿಯಿಲ್ಲಾದ ಅಡಿಯೇನುಂ ಅರಿಯುಂಪಡಿಯಾಹ ಎರ್ಮನತ್ತಿಲೆ ಉಹಂದ್ ಪುಹುಂದವರಾಯುಂ, ದಿಶ್ಶೈಹಳೆಂಗುಂ ಪರವಿನ ಗುಣಂಗಳುಳ್ಳವರುಮಾನ ರಾಮಾನುಜರ್ರೈ ವಣಂಗಿನೋಂ. (ಆಶ್ರಯಿತ್ತೋಂ)

ಅರ್ಥ :- ಕೂರುಂ = (ತೋರಿದಂತೆ) ಹೇಳುವ, ಶಮಯಂಗಳ್-ಆರುಂ = ಆರು ಬಾಹ್ಯಮತಗಳೂ, ಕುಲ್ಯೆಯ = ನಾಶವಾಗುವಂತೆ, ಕುವಲಯತ್ತೇ = ಈ ಭೂ ಮಂಡಲದಲ್ಲಿ, ಮಾರ್ರ್ = ನಮ್ಮಾಳ್ವಾರ್ರು, ಪಣಿತ್ತ = ಹೊಗಳಿದ, ಮರ್ರೈ = ತಮಿಳು ವೇದವನ್ನು, ಉಣರ್‌ನ್ದೋನ್ನೈ = ಅಧ್ಯಯನ ಮಾಡಿ ಅರಿತವರೂ, ಮದಿಯಲಿ-ಯೇರ್-ತೇರುಂ-ಪಡಿ = ಅರಿವಿಲ್ಲದ ನಾನೂ ತಿಳಿದುಕೊಳ್ಳುವಂತೆ, ಎರ್-ಮನಂ-ಪುಹುಂದಾನ್ನೈ= ನನ್ನ ಮನದಲ್ಲಿ ಬಂದು ಹೊಕ್ಕವರೂ, ದಿಶ್ಶೈ-ಅನ್ನೆತ್ತುಂ = ಎಲ್ಲಾ ದಿಕ್ಕುಗಳಲ್ಲೂ, ಏರುಂ-ಗುಣನ್ನೈ = ಹರಡಿ ಹೆಚ್ಚುವ ಗುಣಗಳುಳ್ಳವರೂ, (ಆದ) ಇರಾಮಾನುಶನ್ನೈ = ರಾಮಾನುಜರನ್ನು, ಇರ್ರೆಂಜಿನಂ = ಆಶ್ರಯಿಸಿದೆವು.

ತಾತ್ಪರ್ಯ :- ನಮ್ಮಾಳ್ವಾರು ಕರುಣಿಸಿದ ತಮಿಳುವೇದವು ಕಿವಿಗೆ ಬಿದ್ದೊಡನೆ, ಮನಸ್ಸಿಗೆ ತೋರಿದಂತೆ ವಾದಿಸುತ್ತಿದ್ದ ಆರು ಬಾಹ್ಯ ಮತಗಳೂ ತಾವಾಗಿಯೇ ಚೆದುರಿ ಓಡಿಹೋಗುವುವು. ಅಂತಹ ಮಹತ್ತಾದ ತಮಿಳು ಪ್ರಬಂಧವನ್ನು ಚೆನ್ನಾಗಿ ಅರಿತು ನುರಿತವರು ನಮ್ಮ ರಾಮಾನುಜರು. ಕೇವಲ ಅಜ್ಞಾನಕ್ಕೆ ಬೀಡಾಗಿದ್ದ ನನ್ನನ್ನೂ ಒಬ್ಬ ಜ್ಞಾನಿಯನ್ನಾಗಿ ಮಾಡಲು, ನನ್ನ ಹೃದಯದಲ್ಲೆ ನೆಲೆಸಿದರು. ದಿಗಂತಗಳಲ್ಲಿ ಮೊಳಗುವ ಕೀರ್ತಿಯುಳ್ಳವರು. ಇಂತಹ ಮಹನೀಯರನ್ನು ಪ್ರಣಮಿಸಿ, ಆಶ್ರಯಿಸಿದೆವು

स्वच्छन्दानि मतानि षट् व्यपगतानि स्यु र्यथा भूतलात्
अभ्यस्तद्रविडागमाख्यशठजिद्गाथं हि रामानुजम् ।
आज्ञानावसथं च मां सुमनसं कर्तुं मदन्तस्स्थितं
सर्वाशापरिपूर्णभव्ययशसं सेव्यं प्रणम्याश्रिताः ॥ ४६

ಇರೈಂಜಪ್ಪಡುಂ ಪರ್ರ ಈರ್ಶ ಅರಂಗನೆನ್ರು, ಇವ್ವುಲಹ
ತ್ತರಂ ಶೆಪ್ಪುಂ ಅಣ್ಣಲ್ ಇರಾಮಾನುರ್ಶ, ಎನ್ನರುವಿನ್ನೈಯಿರ್
ತಿರಂ ಶೆತ್ತಿರವುಂ ಪಹಲುಂ ವಿಡಾದೆರ್ತ ಶಿಂದ್ದೈಯುಳ್ಳೇ
ನಿರೈಂದೊಪ್ಪರವಿರುಂದಾರ್,'ಎನಕ್ಕಾರುಂ ನಿಹರಿಲ್ಲೈಯೇ ॥ 47

ಭಾವ :- ಎಲ್ಲಾರಾಲುಂ ಸೇವ್ವೈಹೊಳ್ಳುಂ ಪರಂದೈವಂ ಏದೆನ್ರಾಲ್ ಸರ್ವೇಶ್ವರ್ರ ಶ್ರೀರಂಗನಾಥ್ರ ತಾರ್ ಎನ್ರು ಇವ್ವುಲಹತ್ತಿಲ್ ಅನ್ನೈವರುಕ್ಕುಂ ಧರ್ಮತ್ತೈ ನೇರಿಲ್ ಶೊನ್ನವರ್ ಎಂಗಳ್ ಸ್ವಾಮಿ ರಾಮಾನುಶರ್, ಯಾವರಾಲುಂ ನೀಕ್ಕು ಮುಡಿಯಾದವಡಿ ಎನ್ನುಳ್ ಇರುಂದ ಕರ್ಮತ್ತೈಯೆಲ್ಲಾಂ ಪೋಕ್ಕಡಿತ್ತ್, ಪಹಲುಂ ಇರುಳುಂ ಎನ್ನೈವಿಡಾಮಲ್ ಎರ್ಮನತ್ತಿನಿಲ್ ನಿರೈಂದಿರುಂದಾರ್. ಇವ್ವಿರುಪ್ಪಾನದ್ ಒಪ್ಪತ್ತದಾಯಿರುಕ್ಕುಂ, ಇಪ್ಪಡಿಕ್ಕಿ ಅವರರುಳೈಪ್ಪೆತ್ತವೆನಕ್ಕ್ ಇಂದಲೋಕತ್ತಿಲ್ ಒಪ್ಪುತ್ತವರ್ ವೇರಾರ್ ಇರುಪ್ಪಾರ್ ?

ಅರ್ಥ :- ಇರೈಂಜಪ್ಪಡುಂ = ಸೇವೆಗೊಳ್ಳುವ, ಪರ್ರ = ಪರದೈವವು, (ಯಾವುದೆಂದರೆ) ಈರ್ಶ-ಅರಂಗ್ರ = ಸರ್ವೇಶ್ವರನಾದ ಶ್ರೀರಂಗನಾಥನೇ, ಎನ್ರು = ಎಂದು, ಇವ್ವುಲಹತ್ತ್ = ಈ ಲೋಕದಲ್ಲಿ, ಅರಂ-ಶೆಪ್ಪುಂ = ಧರ್ಮವನ್ನುಪದೇಶಿಸುವ, ಅಣ್ಣಲ್ = ಸ್ವಾಮಿಯಾದ, ಇರಾಮಾನುರ್ಶ = ರಾಮಾನುಜರು, ಎರ್-ಅರು-ವಿನ್ನೈಯಿರ್-ತಿರಂ-ಶೆತ್ತ್ = ನನ್ನ ಪ್ರಬಲ ಕರ್ಮಗಳನ್ನು ನಾಶಮಾಡಿ, ಪಹಲುಂ-ಇರುವುಂ-ವಿಡಾದ್ = ಹಗಲುರಾತ್ರಿ ಬಿಡದೆ, (ಸದಾ) ಎರ್-ತರ್-ಶಿಂದ್ದೈಯುಳ್ಳೆ = ನನ್ನಹೃದಯದಲ್ಲಿ ನಿರೈಂದ್ = ಪೂರ್ಣವಾಗಿ, ಒಪ್ಪ್-ಅರ = ಹೋಲಿಕೆಯೇ ಇಲ್ಲದಂತೆ, ಇರುಂದಾರ್ = ಇದ್ದರು, ಎನಕ್ಕ್ = ನನಗೆ, ಆರುಂ = ಯಾರೂ, ನಿಹರ್-ಇಲ್ಲೈ = ಸಮಾನರು ಇಲ್ಲ.

ತಾತ್ಪರ್ಯ :- ''ಸರ್ವೇಶ್ವರನಾದ ಶ್ರೀ ರಂಗನಾಥನೇ ಸಕಲ ಜನರಿಂದಲೂ ಸೇವೆಗೊಳ್ಳುವ ಪರದೈವ'' ಎಂದು ಈ ವಿಶಾಲ ಮಹೀತಲದಲ್ಲಿ ನೇರವಾಗಿ ಬೋಧಿಸಿದವರು ನಮ್ಮ ಸ್ವಾಮಿ ರಾಮಾನುಜರು. ಮತ್ತಾರಿಂದಲೂ ಹೋಗಲಾಡಿಸದಂತಿದ್ದ ನನ್ನ ಪಾಪವನ್ನೆಲ್ಲ ನಾಶಗೊಳಿಸಿದರು. ಹಗಲಿರುಳೂ ನನ್ನ ಹೃದಯದಲ್ಲಿ ಬಿಡದೆ ಪೂರ್ಣವಾಗಿ ಬಿಜಯಗೈದರು. ಈ ಇರುವಿಕೆಗೆ ಹೋಲಿಕೆಯೇ ಇಲ್ಲವೆನ್ನುವಂತಾಗಿದೆ. ಇಂತಹ ಅತಿ ವಿಲಕ್ಷಣ ಕೃಪಾಳುಗಳ ದಯೆಗೆ ಪಾತ್ರನಾದ ನನಗೆ ಸಮಾನರು ಮತ್ತಾರಿರುವರು? ಯಾರೂ ಇಲ್ಲ.

श्रीरङ्गाधिपति स्समस्तफलद स्साक्षात्परं दैवतं
सर्वोपास्य इति ह्युपादिशदिह स्वामी च यो मेऽधुना ।
नान्यापास्य मघं विनाश्य हृदयं रामानुजोऽहर्निशं
त्वध्यास्ते यदिदं च तन्निरुपमं धन्यो मदन्योऽस्ति कः ? ॥ ४७

ಮೂಲ : ನಿಹರಿನ್ರಿನಿನ್ರ್ವರ್ಣ ನೀಶದ್ಯೈಕ್ಕು, ನಿನ್ನರುಳ್ಣಹಣನ್ನಿ
ಪ್ಪಹಲೊನ್ರುಮಿಲ್ಲೈ ಅರುಳ್ಕ್ಕುಂ ಅಹುದೇಪುಹಲ್, ಪುನ್ಮೈಯಿಲೋರ್
ಪಹರುಂ ಪೆರುಮೈ ಇರಾಮಾನುಶ ! ಇನಿನಾಂ ಪಳುದೇ
ಅಹಲುಂ ಪೊರುಳ್ಣ, ಪಯನಿರುವೋಮುಕ್ಕುಮಾನಪಿನ್ನೆ॥ 48

ಭಾವ :- ಸಂಸಾರ ದೂರರಾನ ನಿತ್ಯಸೂರಿಹಳಾಲೇ ಕೊಂಡಾಡಪ್ಪಡುಂ ರಾಮಾನುಜರೇ ! ಎನ್ನುಡೈಯತಾಳ್ಮೈಕ್ಕ್ ಇರುಪ್ಪಿಡಂ ದೇವರೀರ್ ಕೃಪೈತ್ತಾರ್ಣ. ವೇರೋರಿಡಂ ಇಲ್ಲೈ. ಅಪ್ಪಿದ ಕೃಪೈಕ್ಕುಂ ಎರ್ಣಪೋಲಿರುಕ್ಕುಮವರ್‌ತಾಳ್ಮೈ ತಾರ್ಣ ಇಡಂ. ಇಪ್ಪಾರಾಹ ದೇವರೀರಾಲೆ ಅಡಿಯೇನುಕ್ಕುಂ, ಎನ್ನಾಲೆ ಉಮಕ್ಕುಂ ಇಷ್ಟಾರ್ಥಂ ಸಿದ್ಧಿತ್ತದು. ಆನ ಪಿನ್ಬು ಇನಿಮೇಲುಂ ವೀಣಾಹ ಪಿರಂದಿರುಹೈಕ್ಕ್ ಕಾರಣಮೆನ್ನ ?

ಅರ್ಥ :- ಪುನ್ಮೆಯಿಲೋರ್ = ನಿತ್ಯಸೂರಿಗಳಿಂದ, ಪಹರುಂ-ಪೆರುಮೈ = ಸ್ತುತಿಸಲ್ಪಡುವ ಮಹಿಮೆಯುಳ್ಳ, ಇರಾಮಾನುಶ = ರಾಮಾನುಜರೇ ! ನಿಹರ್-ಇನ್ರಿ-ನಿನ್ರ-ಎರ್ಣ ನೀಶದ್ಯೈಕ್ಕ್ = ಹೋಲಿಕೆಯಿಲ್ಲದಂತಿರುವ ನನ್ನ ನೀಚಭಾವಕ್ಕೆ, ನಿರ್ಣ ಅರುಳ್ಣ = ನಿನ್ನ ದಯೆಯ, ಕಣ್-ಅನ್ರಿ = ಸ್ಥಳ ಹೊರತು, ಪುಹಲ್-ಒನ್ರುಂ-ಇಲ್ಲೈ = ಹೋಗಲು ಬೇರೆ ಸ್ಥಳವಿಲ್ಲ, ಅರುಳ್ಕ್ಕುಂ = ನಿಮ್ಮ ದಯೆಗೂ, ಅಹುದೇ-ಪುಹಲ್ = ಆ ನನ್ನ ನೀಚಭಾವವೇ ಆಶ್ರಯ, (ಹೀಗಾಗಿ) ಇರುವೋಮುಕ್ಕುಂ = ನಮ್ಮಿಬ್ಬರಿಗೂ, ಪಯರ್ಣ = ಫಲವು, ಆನ-ಪಿನ್ಬು = ದೊರತಮೇಲೆ, ಇನಿ = ಇನ್ನೂ, ಪಳುದೇ = ವ್ಯರ್ಥವಾಗಿ, ಅಹಲುಂ = ಅಗಲಿರಲು, ಪೊರುಳ್-ಎರ್ಣ = ಕಾರಣವೇನು ?

ತಾತ್ಪರ್ಯ :- ಓ ರಾಮಾನುಜರೇ ! ಜನ್ಮ ಜರಾದಿಗಳನ್ನರಿಯದ ನಿತ್ಯಸೂರಿಗಳು ನಿಮ್ಮನ್ನು ಸ್ತುತಿಸುವರು. ಅಷ್ಟು ಮಹಿಮರು ನೀವು. ಅನ್ಯಾದೃಶವಾದ ನನ್ನ ಕೀಳುತನಕ್ಕೆ ನಿಮ್ಮ ದಯೆಯೇ ಆಶ್ರಯವಲ್ಲದೆ ಮತ್ತಾವುದೂ ಬೇರೆಯಿಲ್ಲ. ಆ ನಿಮ್ಮ ದಯೆಗೂ ನನ್ನ ಕೀಳ್ಮೆಯೇ ಆಸರ, ನಿಮ್ಮಿಂದ ನನಗೂ, ನನ್ನಿಂದ ನಿಮಗೂ ಫಲವು ಸಿದ್ಧಿಸಿದಮೇಲೆಯೂ ಅದೇಕೆ ವೃಥಾ ಅಗಲಿಕೆಯುಂಟಾಗಿರುವುದು ? ಬೇರೆಯಾಗಿರಲು ಕಾರಣವಿಲ್ಲ. ''ಅನುತ್ತಮಂ ಪಾತ್ರಮಿದಂ ದಯಾಯಾಃ'' ಎನ್ನುವಂತೆ ನಾವೀರ್ವರು ಒಂದಾಗಿ ಸೇರಿರಬೇಕು.

भवाभावस्तुत्यस्थिरमहिमरामानुज ! परं
निहीनत्वस्याऽऽस्ते शरण मतुलस्यापि न मम ।
ऋते कारुण्यात्ते तदपि मम नैच्यं शरण मैत्
फले वा सिद्धे नौ किमिह विरहे कारण मितः ? ४७

ಮೂಲ : ಆನದು ಶೆಮ್ಮೈಯರನೆರಿ, ಪೊಯ್‌ಮ್ಮೈಯರುಶಮಯಂ
ಪೋನದ್‌ಪೊನ್ರಿ ಇರಂದದ್‌ವೆಂಕಲಿ, ಪೂಙ್ಕಮಲ
ತ್ತೇರ್ನದಿಪಾಯ್ ವಯಲ್‌ತೆನ್ನರಙ್ಗ್‌ಕಳಲ್ ಶೆನ್ನಿವೈತ್ತ್
ತಾನದಿಲ್‌ಮನ್ನುಂ, ಇರಾಮಾನುಶರ್ ಇತ್ತಲತ್ತುದಿತ್ತೇ ॥ 49

ಭಾವ :- ತಾಮರೈಪ್ಪೂಹಳಿಲ್‌ತೇನೇ ಆರಾಹಪ್ಪೆರುಹುಂ ವಯಲ್‌ಹಳಾಲ್ ಶೂಳಪಟ್ಟ ಶ್ರೀರಂಗತ್ತಿಲ್ ಎಳುಂದರುಳಿಯಿರಕ್ಕುಂ ಪೆರಿಯ ಪೆರುಮಾಳುಡೈಯ ತಿರುವಡಿಹಳೈ ತಮ್ಮುಡೈಯ ಮುಡಿಯಿಲೆ ಧರಿತ್ತ್, ಅವ್ವೈಹಳಿಲೇಯೇ ಅತಿ ಪ್ರವಣರಾಯ್ ಇರುಕ್ಕಿರ ರಾಮಾನುಜರ್ ಇಂದುಲಹತ್ತಿಲ್ ಅವತರಿತ್ತದನಾಲೇ ಉಣ್ಮೈಯಾನ ಧರ್ಮಂ ಸ್ಥಾಪಿಕ್ಕಪಟ್ಟದ್. ಪೊಯ್ಯಾನದ್ ಮುಡಿಂದ್‌ಪ್ಪೋಯಿಟ್ರು. ವಲಿಯದಾನ ಕಲಿಯುಂ ಉರುಪಡಾಮಲ್ ಅಳಿಂದ್‌ವಿಟ್ಟದ್.

ಅರ್ಥ :- ಪೂಂ-ಕಮಲ-ತೇರ್ = ತಾವರೆ ಹೂವಿನ ರಸವು, ನದಿ-ಪಾಯ್ = ಹೊಳೆಯಂತೆ ಹರಿಯುವ, ವಯಲ್ = ಗದ್ದೆಗಳಿರುವ, ತೆನ್-ಅರಂಗರ್ = ಶ್ರೀರಂಗದಲ್ಲಿರುವ ಶ್ರೀ ರಂಗನಾಥನ, ಕಳಲ್ = ಪಾದಗಳನ್ನು ಶೆನ್ನಿ-ವೈತ್ತ್ = ತಲೆಯಮೇಲೆ ಇರಿಸಿಕೊಂಡು, ತಾನ್=ಅದಿಲ್-ಮನ್ನುಂ = ತಾವೂ ಅಡಿಗಳಲ್ಲಿಯೇ ಪ್ರವಣರಾಗಿರುವ, ರಾಮಾನುಶರ್ = ಶ್ರೀ ರಾಮಾನುಜರು, ಇತ್ತಲತ್ತ್-ಉದಿತ್ತ್ = ಈ ಭೂಮಿಯಲ್ಲಿ ಅವತರಿಸಿದುದರಿಂದ, ತೆಮ್ಮೈ-ಅರ-ನೆರಿ = ಋಜುವಾದ ಧರ್ಮಮಾರ್ಗವು, ಆನದ್ = ಸ್ಥಿರವಾಗಿ ಉಳಿಯಿತು. ಪೊಯ್‌ಮ್ಮೈ-ಅರು-ಶಮಯಂ = ಸುಳ್ಳೇ ತುಂಬಿರುವುದೆಲ್ಲ, ಪೊನ್ರಿ-ಪ್ಪೋನದ್ = ನಾಶವಾಯಿತು. ವೆಂ-ಕಲಿ = ಪ್ರಬಲ ಕಲಿಯು, ಇರಂದದ್ = ಹಾಳಾಯಿತು.

ತಾತ್ಪರ್ಯ :- ತಾವರೆಯ ಮಕರಂದವು ಹೊನಲಾಗಿ ಹರಿಯುವ ಸುಕ್ಷೇತ್ರವಾಗಿರುವುದು ಶ್ರೀರಂಗ. ಅಲ್ಲಿರುವ ಶ್ರೀ ರಂಗನಾಥನ ಅಡಿದಾವರೆಗಳನ್ನು ತಲೆಯಲ್ಲಿ ಧರಿಸಿ, ಅದರಲ್ಲೇ ತತ್ಪರರಾದವರು ಶ್ರೀ ರಾಮಾನುಜರು. ಈ ಮಹಿಮರು ಅವತರಿಸಿದಮೇಲೆ ಇವರ ಪ್ರಭಾವದಿಂದ ಸದ್ಧರ್ಮ ಮಾರ್ಗವು ಕಂಟಕವಿಲ್ಲದಂತೆ ಸ್ಥಾಪಿಸಲ್ಪಟ್ಟಿತು. ಸುಳ್ಳಿನ ಕಂತೆಯ ಮತಗಳೆಲ್ಲ ನಾಶವಾದವು. ಕಡುದುರುಳ ಕಲಿಯ ಗರ್ವವು ಅಡಗಿತು. ಸತ್ಪುರುಷರ ಅವತಾರ ರಹಸ್ಯದ ಮಹಿಮೆಯಿದು.

अम्भोजातप्रसूनप्रसृतरसधुनीसिक्तसुक्षेत्रमध्य-
भ्राजच्छ्रीरङ्गनाथश्रितफलदपदद्वन्द्वधार्युत्तमाङ्गे ।
श्रीमद्रामानुजे भुव्युदितवति मुनौ स्थापितो धर्ममार्गः
मायाकृष्टं प्रणष्टमत मनृतचयं दृष्कलिश्च प्रभग्नः ।। ४९

ಮೂಲ : ಪೊಯ್ಯೈಚ್ಚುರಕ್ಕುಂ ಪೊರುಳೈತ್ತುರಂದ್, ಇಂದ ಬೂತಲತ್ತೆ
ಮೆಯ್ಯೈಪ್ಪುರಕ್ಕುಂ ಇರಾಮಾನುರ್ಶನಿರ್ಕ, ವೇರುನಮ್ಮೈ
ಉಯ್ಯಕ್ಕೊಳ್ಳವಲ್ಲದೆಯ್ವಂ ಇಂಗಿಯಾದೆನ್ರುಲರ್ನ್ದ್ ಅವಮೇ
ಐಯ್ಯಪ್ಪಡಾನಿರ್ಪರ್, ವೈಯ್ಯತ್ತುಳ್ಳೋರ್ ನಲ್ಲರಿವಿಳಿನ್ದೇ ॥ 79

ಭಾವ :- ಬುವಿಯಿಲ್ ಪೊಯ್ಯಾನ ಸಂಗತಿಹಳೈಯೇ ಶೊಲ್ಲುಂ ವಿಮತಸ್ಥರ್‌ಹಳುಡ್ಯೈಯ ಅರ್ಥಂಗಳೈ ಖಂಡಿತ್ತ್, ಉಲಹತ್ತಾರ್ ತಂಗಳೈ ಉಜ್ಜೀವಿಪ್ಪಿಕ್ಕುಮವರ್ ''ವೇರೇದಾವದೊರು ದೈವಂ ಇವ್ವಿಡಂ ಇರುಕ್ಕುಮೊ''? ಎನ್ರುವಿಚಾರಂ ಪಣ್ಣಿ ಉಲರ್ನ್ದ್ ಪೋಯ್ ನಲ್ಲ ಅರಿವುಂ ಪೆರಾಮಲ್, ವೀಣಾಹ ಸಂದೇಹಪ್ಪಟ್ಟ್‌ನಿರ್ಕ್ಕಾರ್‌ಹಳೇ ! ಅಯ್ಯೋ !

ಅರ್ಥ :- ಇಂದ ಬೂತಲತ್ತೇ = ಈ ಭೂತಲದಲ್ಲಿ, ಪೊಯ್ಯೈ = ಸುಳ್ಳಾದ ವಿಷಯಗಳನ್ನು. ಶುರುಕ್ಕುಂ = ಮೇಲೆ ಮೇಲೆ ಹೊರಪಡಿಸಿದ, ಪೊರುಳೈ = ಅರ್ಥಗಳನ್ನು, ತುರಂದ್ = ಖಂಡಿಸಿ, ಮೆಯ್ಯೈ = ಸತ್ಯವನ್ನು, ಪುರಕ್ಕುಂ = ರಕ್ಷಿಸುವ, ಇರಾಮಾನುರ್ಶ = ರಾಮಾನುಜರು, ನಿರ್ಕ = ಇರಲು, (ಲೆಕ್ಕಿಸದೆ) ವೈಯ್ಯತ್ತುಳ್ಳೋರ್ = ಈ ಲೋಗರು, ನಮ್ಮೈ = ನಮ್ಮನ್ನು, ಉಯ್ಯಕ್ಕೊಳ್ಳವಲ್ಲ = ಉಜ್ಜೀವನಗೊಳಿಸಬಲ್ಲ, ವೇರು-ದೈವಂ = ಬೇರೆ ದೈವವು, ಇಂಗ್ = ಇಲ್ಲಿ , ಯಾದ್ ಎನ್ರ್ = ಯಾವುದು ಎಂದು (ತಿರುಗಿ ತಿರುಗಿ ಸಾಕಾಗಿ ಮತ್ತಾವುದೂ ದೊರಕದೆ ಚಿಂತೆಯಿಂದ) ಉಲರ್ನ್ದ್ = ಕಂಗೆಟ್ಟು, ನಲ್-ಅರಿವ್ = (ಶ್ರೀ ರಾಮಾನುಜರೇ ಗತಿ ಎಂಬ) ಒಳ್ಳೆಯ ಜ್ಞಾನವು, ಇಳಂದ್ = ಪಡೆಯದೆ, ಅವಮೇ = ವ್ಯರ್ಥವಾಗಿ, ಐಯ್ಯ-ಪ್ಪಡಾ-ನಿರ್ಪರ್ = ಸಂಶಯಪಡುತ್ತಿರುವರಲ್ಲಾ! (ಅಯ್ಯೋ!)

ತಾತ್ಪರ್ಯ :- ಈ ಜಗತ್ತಿನಲ್ಲಿ ಮೇಲೆ ಮೇಲೆ ಸುಳ್ಳುಗಳನ್ನೇ ಪ್ರಕಟಿಸುವ ಅನ್ಯಮತೀಯರ ಅರ್ಥಗಳನ್ನೆಲ್ಲಾ ಖಂಡಿಸಿ, ಸತ್ಯವಾದುವುಗಳನ್ನು ಸಂರಕ್ಷಿಸುವವರು ನಮ್ಮ ರಾಮಾನುಜರು. ಇಂತಹ ಮಹನೀಯರಿದ್ದರೂ ಗಮನಿಸದೆ ಮಾನವರು ''ತಮ್ಮನ್ನು ಉಜ್ಜೀವನಗೊಳಿಸುವಂತಹ ದೇವತೆ ಬೇರಾವುದಾದರೂ ಇದೆಯೇ?'' ಎಂದು ಚಿಂತಿಸಿ, ಬೇಸತ್ತು, ಬಡವಾಗಿ, ಒಳ್ಳೆಯ ಅರಿವನ್ನೂ ಪಡೆಯದೆ ವೃಥಾ ಸಂಶಯಗ್ರಸ್ತರಾಗಿ ಅನ್ಯಾಯವಾಗಿ ಪೇಚಾಡುವರಲ್ಲಾ! ಅಯ್ಯೋ ! ಇದಕ್ಕಿಂತ ದಡ್ಡತನವುಂಟೆ ?

मिथ्याभूतान् जगत्यां प्रकटितविषयान् खण्डयित्वा दुरर्थान्
श्रीमद्रामानुजार्ये समवति शुभदं सत्य मर्थं महीष्ठाः ।
मान्या स्वोत्तारिकान्या जगति भवति वा स्वेष्टदा देवतेति
म्लानाः खिन्नाः कृशङ्गा अकृतसुमतयो द्वापरस्था वृथाहो ! ॥ ७९

ಮೂಲ : ನಲ್ಲಾರ್‌ಪರವುಂ ಇರಾಮಾನುಶರ್, ತಿರುನಾಮಂ ನಂಬ
ವಲ್ಲಾರ್‌ತಿರತ್ತೈಮರವಾದವರ್‌ಹಳ್‌ಯವರ್, ಅವರ್‌ಕ್ಕೇ
ಎಲ್ಲಾವಿಡತ್ತಿಲುಂ ಎನ್ರುಂ ಎಪ್ಪೋದಿಲುಂ ಎತ್ತುಳುಂಬುಂ
ಶೊಲ್ಲಾಲ್ಮನತ್ತಾಲ್, ಕರುಮತ್ತಿನಾಲ್‌ಶೆಯ್ವ‌ರ್ಶೋರ್ವಿನ್ರಿಯೇ ॥ 80

ಭಾವ :- ನಲ್ಲವರ್‌ಹಳಾಲೇ ಕೊಂಡಾಡಪ್ಪಡುಮವರಾನ ರಾಮಾನುಜರ್ರ್ ತಿರುನಾಮತ್ತೈಯೇ ನಂಬಿರುಕ್ಕುಮವರ್ ಹಳುಡ್ತೈಯ ಪಡಿಹಳ್ಳೈ ಮರವಾಮಲ್ ಎಪ್ಪೋದುಂ ಚಿಂತಿಪ್ಪವರ್ ಯಾರೋ ಅವರ್ಕ್ಕೇ ಎಲ್ಲಾ ಇಡಂಗಳಿಲುಂ, ಎಲ್ಲಾ ಸಮಯಂಗಳಿಲುಂ, ಎಲ್ಲಾ ಅವಸ್ಥೈಹಳಿಲುಂ, ಎಲ್ಲಾವಿಧಮಾನ ಕೈಂಕರ್ಯಗಳ್ಳೈಯುಂ ಮನೋವಾಕ್ಕಾಯಂಗಳಾಹಿರ ಮೂನ್ರುಕರಣಂಗಳಾಲುಂ ವಿಟ್ಟಪಿರಯಾಮಲಿರುಂದೇ ಶೆಯ್ಯಕ್ಕಡವೇರ್.

ಅರ್ಥ :- ನಲ್ಲಾರ್ = ಸತ್ಪುರಷರಿಂದ, ಪರವುಂ = ಕೊಂಡಾಡಲ್ಪಡುವ, ಇರಾಮಾನುಶರ್ = ರಾಮಾನುಜ, ತಿರುನಾಮಂ = ಹೆಸರನ್ನು, ನಂಬವಲ್ಲಾರ್ = ನಂಬಿರುವವರ, ತಿರತ್ತೈ = ರೀತಿಯನ್ನು, ಮರವಾದವರ್‌ಹಳ್ = ಮರೆಯದೆ (ಚಿಂತಿಸುವವರು) ಇರುವವರು, ಎವರ್ = ಯಾರೋ, ಅವರ್ಕ್ಕೇ = ಅಂತಹವರಿಗೇ (ರಾಮಾನುಜಮತಪ್ರವರ್ತಕರಿಗೆ) ಎಲ್ಲಾ-ಇಡತ್ತಿಲುಂ = ಎಲ್ಲಾಸ್ಥಳಗಳಲ್ಲೂ, ಎನ್ರುಂ = ಎಲ್ಲ ಅವಸ್ಥೆಗಳಲ್ಲೂ, ಎಪ್ಪೋದುಂ = ಎಲ್ಲಾಕಾಲಗಳಲ್ಲೂ, ಎತ್ತೊಳುಂಬುಂ = ಎಲ್ಲಾಕೈಂಕರ್ಯಗಳನ್ನೂ, ಶೊಲ್ಲಾಲ್ = ಮಾತಿನಿಂದಲೂ, ಮನತ್ತಾಲ್ = ಮನಸ್ಸಿನಿಂದಲೂ, ಕರುಮತ್ತಿನಾಲ್ = ದೇಹದಿಂದಲೂ, (ತ್ರಿಕರಣಗಳಿಂದಲೂ) ಶೋರ್ವಿನ್ರಿ = ಅಗಲಿರದೆ, ಶೆಯ್ವರ್ = ಮಾಡುವೆನು.

ತಾತ್ಪರ್ಯ :- ಸಜ್ಜನರಿಂದ ಸ್ತುತಿಗೊಳ್ಳುವ ನಮ್ಮರಾಮಾನುಜರ ಸುಗೃಹೀತ ನಾಮಧೇಯವನ್ನು ನಂಬಿರುವವರ ಸ್ಥಿತಿಗಳನ್ನು ಗಮನಿಸಿ, ಮರೆಯದೆ ಯಾರು ಸದಾ ಚಿಂತಿಸುವರೋ ಅಂತಹವರಿಗೇ ಎಲ್ಲಾ ಸ್ಥಳಗಳಲ್ಲೂ, ಎಲ್ಲಾಕಾಲಗಳಲ್ಲೂ, ಮತ್ತು ಎಲ್ಲಾ ಅವಸ್ಥೆಗಳಲ್ಲೂ ಸರ್ವವಿಧಸೇವೆಗಳನ್ನೂ, ''ಮನಸ್ಸು-ಮಾತು-ದೇಹ'' ಈ ಮೂರರಿಂದಲೂ ಒಂದನ್ನೊಂದು ಬಿಡದೆ ಒಟ್ಟಿಗೆ ಸೇರಿಸಿಕೊಂಡೇ ಮಾಡುವೆನು.

येऽविस्मृत्य स्थिती स्ता स्सुजनपरिणुतासीम रामानुजार्ये-
त्याख्याश्रद्धाधराणा मनवरत मनुध्यानसक्ता हि तेषाम् ।
कैङ्कर्याण्येव सर्वाण्यनिश मखिलदेशेषु कालेषु तद्वत्
सर्वावस्थास्वपीह त्रिभिरपि करणैः संविधास्येऽविहाय ॥ ८०

ಮೂಲ : ಶೋರ್ವಿನ್ರಿ, ಉರ್ ತರ್ ತುಣ್ಯೆಯಡಿಕ್ಕೀಳ್, ತೊಂಡುಪಟ್ಟವರ್‌ಪಾಲ್
ಶಾರ್ವಿನ್ರಿನಿನ್ರವೆನಕ್ಕ್, ಅರಂಗರ್‌ಶೆಯ್ಯತಾಳಿಣ್ಯೆಹಳ್
ಪೇರ್ವಿನ್ರಿಯಿನ್ರ್‌ಪೆರುತ್ತುಂ ಇರಾಮಾನುಶ ! ಇನಿಯುರ್
ಶೀರೊನ್ರಿಯಕರುಣ್ಯೆಕ್ಕ್, ಇಲ್ಲೈಮಾರು ತೆರಿವುರಿಲೇ ॥ 81

ಭಾವ :- ದೇವರೀರ್ ತಿರುವಡಿಮಲರ್‌ಹಳಿರಂಡಿರ್ ಕೀಳ್‌ಪಿರಿಯಾದೆ ಅಡಿಮೈಪ್ಪಟ್ಟವರ್‌ಹಳ್ ವಿಷಯತ್ತಿಲ್ ಕೊಂಚಮುಂ ಪೊರುತ್ತ ಮತ್ತ್ ಇರುಂದ ಎನಕ್ಕ್ ಇನ್ರ್ ಪೆರಿಯ ಪೆರುಮಾಳುಡೈಯ ಶೆವ್ವಡಿಮಲರ್‌ಹಳಿರಂಡೈಯುಂ ಒರುಕ್ಷಣಮುಂ ವಿಟ್ಟಿರಾದಪಡಿ ಮುಡಿಕ್ಕ್ ಒಡಮ್ಮೈಯಾಹ ತಂದರುಳಿಯಿರುಕ್ಕುಂ ಶ್ರೀ ರಾಮಾನುಜರೇ ; ಇಪ್ಪಡಿಯಾನ ಪಿನ್ಬ್ ಆರಾಯ್‌ನ್ದ್‌ಪಾರ್ತ್ತಾಲ್ ಉಮ್ಮುಡೈಯ ಶಿರಂದ ಅತ್ತಿರುವರುಳುಕ್ಕು ಒಪ್ಪಿಲ್ಲೈ, ಇದ್ ನಿಚ್ಚಯಂ.

ಅರ್ಥ :- ಉರ್-ತರ್ = ನಿಮ್ಮ, ತುಣ್ಯೆ-ಅಡಿ-ಕ್ಕೀಳ್ = ಎರಡಡಿಗಳ ಕೆಳಗೆ, ಶೋರ್ವಿನ್ರಿ = ಬಿಟ್ಟಿರದೆ, ತೊಂಡು-ಪಟ್ಟವರ್-ಪಾಲ್ = ಸೇವೆ ಮಾಡುವವರ ವಿಷಯದಲ್ಲಿ, ಶಾರ್ವಿನ್ರಿ = ಹೊಂದಿಕೆಯಿಲ್ಲದೆ, ನಿನ್ರ = ಇದ್ದ, ಎನಕ್ಕ್ = ನನಗೆ, ಇನ್ರ್ = ಇಂದು, ಅರಂಗರ್ = ಶ್ರೀ ರಂಗನಾಥನ, ಶೆಯ್ಯ-ತಾಳ್-ಇಣ್ಯೆಹಳ್ = ಕೆಂಪಾದಡಿಗಳೆರಡನ್ನೂ, ಪೇರ್ವಿನ್ರಿ = ಸ್ವಲ್ಪಹೊತ್ತೂ ಬಿಟ್ಟಿರದೆ, ಪೆರುತ್ತುಂ = ಫಲಿಸುವಂತೆ (ಶಿರೋಭೂಷಣವಾಗಿಸಿ) ಮಾಡಿದ, ಇರಾಮಾನುಶ = ರಾಮಾನುಜರೆ ! ಇನಿ = ಹೀಗಾದಮ್ಮೇಲೆ, ತೆರಿವುರಿಲ್ = ವಿಮರ್ಶಿಸಿ ನೋಡಿದರೆ, ಉರ್ = ನಿಮ್ಮ, ಶೀರ್-ಒನ್ರಿಯ = ಅತ್ಯಧಿಕವಾದ, ಕರುಣ್ಯೆಕ್ಕ್ = ದಯೆಗೆ, ಮಾರ್-ಇಲ್ಲೈ = ಹೋಲಿಕೆ ಇಲ್ಲ.

ತಾತ್ಪರ್ಯ :- ಶ್ರೀ ರಾಮಾನುಜರೆ ! ನಿಮ್ಮಡಿದಾವರೆಗಳೆರಡರ ಕೆಳಗೆ ಬಿಡದೆ ಸೇವೆ ಮಾಡಿದವರ ವಿಷಯದಲ್ಲಿ ಸ್ವಲ್ಪವೂ ಸರಿಹೊಂದದಂತಿದ್ದ ನನಗೆ ಈಗ ಶ್ರೀ ರಂಗನಾಥನ ದಿವ್ಯ ಪಾದಾರವಿಂದಗಳನ್ನು ಎಂದೆಂದಿಗೂ ತಲೆಯ ಒಡವೆಯನ್ನಾಗಿ ಮಾಡಿ ಕರುಣಿಸಿದಿರಿ: ಹಾಗೆಯೇ ವಿಮರ್ಶಿಸಿದರೆ ನಿಮ್ಮ ಗುಣಗಳಲ್ಲೊಂದಾದ ಆ ದಯೆಗೆ ಸಮಾನವಾದುದು ಮತ್ತಾವುದೂ ಇಲ್ಲ.

युष्मत्पादारविन्दादरपरिचरणानन्यवृत्तिष्वपेता
सक्ते मेऽप्यद्य रङ्गाधिपपदकमले मच्छिरस्स्थास्नुभूषे ।
कृत्वा रामानुजार्य ! स्त्वघटनघटनाशक्त ! मा मन्वगृह्णाः
सत्यामर्शे त्वदीयप्रविमलकरुणासन्निभोऽन्यो न भाति ॥ ८१

ಮೂಲ : ತೆರಿವುತ್ತಜ್ಞಾನಂ ಶೆರಿಯಪ್ಪೆರಾದ್, ವೆಂದೀವಿನ್ನೈಯಾಲ್
ಉರುವತ್ತಜ್ಞಾನತ್ತುಳಲ್‌ಹಿನ್ರವನ್ನೈ, ಒರುಪೊಳುದಿಲ್
ಪೊರವತ್ತಕೇಳ್ವಿಯನಾಕ್ಕಿನಿನ್ರಾ೯ ಎನ್ನಪುಣ್ಣಿಯನೋ
ತೆರಿವುತ್ತಕೀರ್ತಿ, ಇರಾಮಾನುಶನೆನ್ರುಂ ಶೀರ್ ಮುಹಿಲೆ ॥ 82

ಭಾವ :- ತೆಳಿವಾನ ಅರಿವ್ವೆ ಶೇರಪ್ಪೆರಾದೇ ಮಿಹಮಿಹವುಂ ಕೊಡಿದಾನ ಕರ್ಮತ್ತಿನಾಲ್ ಪ್ರಯೋಜನಮಿಲ್ಲಾದ ಜ್ಞಾನಮುಳ್ಳವನಾಯ್ ವೀಣಾಹ ಅಲೈಂದ್‌ಕ್ಕೊಂಡಿರುಕ್ಕಿರ ಎನ್ನೈ, ಒರುಕ್ಷಣಮಾತ್ರತ್ತಿಲ್ ಅಸಾಧಾರಣ ಬಹುಶ್ರುತ ನಾಕ್ಕಿನವರುಂ, ಎಲ್ಲಾವಿಡಂಗಳಿಲುಂ ನಲ್ಲಪೆಯರ್ ಪೆತ್ತವರುಂ, ಔದಾರ್ಯಗುಣತ್ತಿಲ್ ಮೇಘಗುಣಂ ಒತ್ತವರುಮಾನ ಸ್ವಾಮಿ ರಾಮಾನುಶರ್ ಅದೆನ್ನದಾಂ ಪುಣ್ಣಿಯಂ ಪಣ್ಣಿನವರೊ !

ಅರ್ಥ :- ತೆರಿವುತ್ತ = ತಿಳಿಯಾದ, ಜ್ಞಾನಂ = ಜ್ಞಾನವನ್ನು, ಶೆರಿಯ = ಪ್ರಕಾಶ ಪಡಿಸಲು ಪಡೆಯದೆ, ವೆಂ-ತೀ-ವಿನ್ನೈಯಾಲ್ = ಅತಿ ತೀವ್ರವಾದ ಕರ್ಮದಿಂದ, ಉರು ಅತ್ತ = ಉಪಯೋಗವಿಲ್ಲದ, ಜ್ಞಾನತ್ತ್ = ಜ್ಞಾನವುಳ್ಳವನಾಗಿ, ಉಳಲ್ ಹಿನ್ರ = ತಿರುಗುವ, ಎನ್ನೈ = ನನ್ನನ್ನು, ಒರು ಪೊಳುದಿಲ್ = ಒಂದುಗಳಿಗೆಯಲ್ಲಿ, ಪೊರುವ್ ಅತ್ತ = ಹೋಲಿಕೆಯಿಲ್ಲದ, ಕೇಳ್ವಿಯರ್ = ಬಹುಶ್ರುತನನ್ನಾಗಿ, ಆಕ್ಕಿನಿನ್ರಾ೯ = ಮಾಡಿ ಕರುಣಿಸಿದವರೂ, ತೆರಿವ್-ಉತ್ತ-ಕೀರ್ತಿ = ಪ್ರಸಿದ್ಧವಾದ ಕೀರ್ತಿಯುಳ್ಳವರೂ, ಶೀರ್-ಮುಹಿಲ್-ಎನ್ನುಂ = (ಔದಾರ್ಯದಲ್ಲಿ) ಅತ್ಯುತ್ತಮವಾದ ಮೇಘವೆಂಬ, ಇರಾಮಾನುಶರ್ = ರಾಮಾನುಜರು, ಎನ್ನ-ಪುಣ್ಣಿಯನೋ ! = ಅದೆಂತಹ ಧರ್ಮಿಷ್ಠರೋ!

ತಾತ್ಪರ್ಯ :- ಒಳ್ಳೆಯ ವಿವೇಕ ಜ್ಞಾನವನ್ನು ಪಡೆಯದೆ ಅತ್ಯುಗ್ರವಾದ ಕರ್ಮದಿಂದ ಪ್ರಯೋಜನವಾವುದೂ ಇಲ್ಲದ ಜ್ಞಾನವುಳ್ಳವನಾಗಿ, ವ್ಯರ್ಥವಾಗಿ ಅಲೆದಾಡುತ್ತಿದ್ದ ನನ್ನನ್ನು ಒಂದುಘಳಿಗೆಯೊಳಗೆ ಅಸಾಧಾರಣ ಜ್ಞಾನಿಯನ್ನಾಗಿ ಮಾಡಿ ಕರುಣಿಸಿದವರೂ, ಎಲ್ಲೆಡೆಯೂ ಹೆಸರಾಂತರಾದವರೂ, ಔದಾರ್ಯಗುಣದಲ್ಲಿ ಮೇಘವೆಂದು ಹೊಗಳಿಸಿಕೊಳ್ಳುವವರೂ, ಆದ ಶ್ರೀ ರಾಮಾನುಜರು ಅದೆಂತಹ ಪುಣ್ಯಶೀಲರೊ ? ಆಹಾ! ಅರಿಯೆ.

विज्ञानालाभहेतो रूपचितदुरितात् कर्मणोऽत्युग्ररूपात्
वीतार्थज्ञानवन्तं त्वधिभुवनतलं पर्यटन्तं वृथैव ।
कृत्वा चैकक्षणे मा मसमबहुविदं सद्यशा श्शंस्यमानः
पुण्यात्मा कीदृशोऽसौ जलद इव महोदाररामानुजार्यः ॥ ८२

ಮೂಲ : ಶೀರ್‌ಹೊಂಡು ಪೇರರಂಶೆಯ್ದ್ ನಲ್‌ವೀಡ್ ಶೆರಿದುಮೆನ್ನುಂ
ಪಾರ್‌ಹೊಂಡಮೇನ್ಮೈಯರ್ ಕೂಟ್ಟನಲ್ಲೇನ್, ಉನ್ ಪದಯುಗಮಾಂ
ಏರ್‌ಹೊಂಡವೀಟ್ಟೈಯೆಳಿದಿನಿಲೆಯ್‌ದುವನ್ ಉನ್ನುಡೈಯ
ಕಾರ್‌ಹೊಂಡವಣ್ಮೈ, ಇರಾಮಾನುಶ ! ಇದ್‌ಕಂಡುಹೊಳ್ಳೇ ॥ 83

ಭಾವ :- ಸ್ವಾಮಿ, ರಾಮಾನುಜರೆ ! ''ಶಮದಮಾದಿ ಗುಣಮುಳ್ಳವರಾಯ್ ಮಿಹವುಂ ಪೆಯರ್‌ಪೆತ್ತ ಶರಣಾಗತಿಯೆನ್ನುಂ ಶ್ಲಾಘ್ಯಮಾನ ಧರ್ಮತ್ತೈ ಅನುಷ್ಠಿತ್ತ್, ಅದಿನ್ ಪರಮಫಲಮಾನ ಮೋಕ್ಷತ್ತೈ ಅಡೆಂದ್‌ವಿಡುವೋಂ'' ಎನ್ರು ಇರುಕ್ಕುಂ ನಲ್ಲ ಮಹಿಮೈಯುಳ್ಳ ಪ್ರಪನ್ನರ್ ಹಳಿಲ್ ಅಡಿಯೇನ್ ಶೇರ್‌ನ್ದವನಲ್ಲೇನ್. ದೇವರೀರುಡೈಯ ತಿರುವಡಿಮಲರ್‌ಹಳಾಹಿರ ಅತಿ ವಿಲಕ್ಷಣಮಾನ ಮೋಕ್ಷತ್ತೈ ರೊಂಬವುಂ ಸುಲಭಮಾಹ ಅಡೈಂದ್‌ವಿಡುವೇನ್. ಮೇಘಗುಣಂ ಒಪ್ಪುಂ ಉಮ್ಮುಡೈಯ ಉಣ್ಮೈಯಾನ ಪ್ರಭಾವಂ ಇಪ್ಪಡಿಪ್ಪಟ್ಟದ್, ಎನ್ಬದೈ ದೇವರೇ ಅರಿಯವೇಣುಂ.

ಅರ್ಥ :- ಇರಾಮಾನುಜ = ರಾಮಾನುಜರೆ ! ಶೀರ್-ಕ್ಕೊಂಡು = ಸದ್ಗುಣಗಳನ್ನುಳ್ಳವರಾಗಿ, ಪೇರ್-ಅರಂ-ಶೆಯ್ದ್ = ಅತ್ಯುತ್ತಮ ಧರ್ಮವಾದ ಶರಣಾಗತಿಯನ್ನು ಆಚರಿಸಿ, ನಲ್-ವೀಡ್ = ಮೋಕ್ಷವನ್ನೂ, ತೆರಿದು-ಮೆನ್ನುಂ = ಪಡೆದುಬಿಡಬಹುದೆಂದಿರುವ, ಪಾರ್-ಕೊಂಡ = ಎಲ್ಲೆಡೆಯೂ ಹೆಸರಾಂತ, ಮೇನ್ಮೈಯರ್ = ಮಹಿಮೆಯುಳ್ಳವರ, ಕೂಟ್ಟನ್ = ಗೋಷ್ಠಿಗಳಲ್ಲಿ ಸೇರಿದವನು. ಅಲ್ಲೇನ್ = ಅಲ್ಲ. ಉನ್-ಪದ-ಯುಗ-ಮಾಂ = ನಿಮ್ಮಡಿಗಳೆರಡೆಂಬ, ಏರ್‌ಕೊಂಡ = ಅತಿ ವಿಲಕ್ಷಣವಾದ, ವೀಟ್ಟೈ = ಮೋಕ್ಷವನ್ನೂ, ಎಳಿದಿನಿಲ್ = ಸುಲಭವಾಗಿ, ಎಯ್ದುವನ್ = ಪಡೆಯುವೆನು. ಕಾರ್-ಹೊಂಡ = (ಔದಾರ್ಯದಲ್ಲಿ) ಮೇಘವನ್ನು ಹೋಲಿರುವ, ಉನ್ನುಡೈಯ = ನಿಮ್ಮ, ಉಣ್ಮೈ-ಇದ್ = (ಔದಾರ್ಯವು) ಈ ರೀತಿಯಾದುದು. ಕಂಡ್-ಹೊಳ್ = (ನೀವು) ತಿಳಿದುಕೊಳ್ಳಿ.

ತಾತ್ಪರ್ಯ :- ಸ್ವಾಮಿ, ರಾಮಾನುಜರೇ ! ''ಒಳ್ಳೆಯ ಗುಣಗಳುಳ್ಳವರಾಗಿ, ಹೆಸರಾಂತ ಶರಣಾಗತಿ ಧರ್ಮವನ್ನಾಚರಿಸಿ, ಅದರ ಪರಮ ಫಲವಾದ ಮೋಕ್ಷವನ್ನು ಪಡೆಯುವೆವು'' ಎಂದಿರುವ ಮಹಾಮಹಿಮರಲ್ಲಿ ಸೇರಿದವನಲ್ಲ ನಾನು. ಆದರೆ ನಿಮ್ಮಡಿದಾವರೆಗಳೆಂಬ ಮುಕ್ತಿಯನ್ನು ಸುಲಭವಾಗಿ ಪಡೆಯುವೆನು. ಔದಾರ್ಯದಲ್ಲಿ ಮೇಘವನ್ನೂ ಮೀರಿಸಿರುವಿರಿ. ಹೀಗಿರುವ ನಿಮ್ಮ ನಿಜವಾದ ಪ್ರಭಾವವು ಇಂತಹುದು ಮತ್ತು ಇಷ್ಟು ಎಂಬುದನ್ನು ನೀವೇ ತಿಳಿಯಬೇಕು. ನಾನು ನಿರೂಪಿಸಬೇಕೆ ?

श्रीमन् ! रामानुजार्य ! 'प्रथितशुभगुणान् प्राप्य विख्यातधर्म -
न्यासानुष्ठाननिष्ठाः परमपदजुष स्स्याम' सन्तीति सन्तः ।
नेदृग्गोष्ठीं प्रविष्टोऽस्म्यपि तु तव पदाम्भोजलाभैकमुक्तिं
प्राप्स्याम्यम्भोद ! विद्या इयदिद मनुभावत्व मित्यात्मनिष्ठम् ॥ ८३

ಮೂಲ : ಕಂಡುಹೊಂಡೇ್ ಎಮ್ಮಿರಾಮಾನುಶ್ ತನ್ನೈ, ಕಾಂಡಲುಮೇ
ತೊಂಡುಹೊಂಡೇ್ ಅವನ್ತೊಂಡಪ್ಪೊರ್ತಾಳಿಲ್, ಎನ್ತೊಲ್ಲೈವೆನ್ನೋಯ್
ಮಿಂಡುಹೊಂಡೇ್ ಅವ್ ಶೀರ್ ವೆಳ್ಳವಾರಿಯ್ಯೈ ವಾಯ್ ಮಡುತ್ತಿನ್ರು
ಉಂಡುಹೊಂಡೇ್, ಇನ್ನ ಮುತ್ತನವೋದಿಲ್ ಉಲಪ್ಪಿಲ್ಲೈಯೇ ॥ 84

ಭಾವ :- ಎಮ್ಮಿರಾಮಾನುಜರೈ ಇನ್ರು ನಾ್ ಉಳ್ಳಪಡಿ ಅರಿಂದುಹೊಂಡೇ್. ಇಪ್ಪಡಿ ಅರಿಯುಮಳವಿಲ್ ಅವರುಡ್ಯೆಯ ಅಡಿಯಾರ್‌ಹಳ್ ಅಳಹಾನ ತಿರುವಡಿ ಹಳಿಲ್ ಅಡಿಮ್ಯೆಯುಂಕೊಂಡೇ್. ಅದನಾಲ್ ಎನ್ ಪಳ್ಳೆಯದಾನ ಕೊಡುವಿನ್ಯೆ ಹಳ್ಳೆಯುಂ ನೀಕ್ಕಿಕ್ಕೊಂಡೇ್. ಏ್ ವಾಯಾರ ಅವರುಡ್ಯೆಯ ಕಲ್ಯಾಣ ಗುಣಂಗಳಾಹಿಯ ಕಡಲ್ಯೆ ಅನುಭವಿಕ್ಕಪ್ಪೆತ್ತೇ್. ಇವ್ವಹ್ಯೆಯಾವಹೇ ಇನ್ನಮುಂ ನಾ್ ಅವರಾಲ್ ಪೆತ್ತನನ್ಯೈಹಳ್ಳೆ ಶೊಲ್ಲ ಆರಂಭಿತ್ತಾಲ್ ಮುಡಿವತ್ತವ್ಯೆಯಾಹುಂ.

ಅರ್ಥ :- ಎಂ ರಾಮಾನುಶನ್-ತನ್ನೈ = ಸ್ವಾಮಿ ರಾಮಾನುಜರನ್ನು, ಇನ್ರು -ಈಗ, ಕಂಡು-ಕೊಂಡೇ್ = ಕಂಡುಕೊಂಡೆನು. ಕಾಂಡಲುಮೇ = ಹೀಗೆ ತಿಳಿದಾಗ, ಅವ್ = ಅವರ, ತೊಂಡರ್ = ಭಕ್ತರ ಪ್ಪೊ್-ತಾಳಿಲ್ = ಅಂದವಾದಡಿಗಳಲ್ಲಿ, ತೊಂಡು-ಕೊಂಡೇ್ = ಅಡಿಯಾಳಾಗಿ ಸೇವೆಮಾಡಿದೆನು. (ಅದರಿಂದ) ಏ್-ತೊಲ್ಲೈ-ವೆಂ-ನೋಯ್ = ನನ್ನ ಹಿಂದಿನಿಂದ ಬಂದ ಕಡುಪಾಪಗಳನ್ನೂ, ವಿಂಡು-ಹೊಂಡೇ್ = ನೀಗಿಕೊಂಡೆನು. ಅವ್-ಶೀರ್ = ಅವರ ಸದ್ಗುಣಗಳೆಂಬ, ವೆಳ್ಳ-ವಾರಿಯ್ಯೈ = ಪ್ರವಾಹದ ಕಡಲನ್ನು, ವಾಯ್-ಮಡುತ್ತ್ = ಬಾಯಾರುವಷ್ಟು, ಉಂಡು-ಹೊಂಡೇ್ = ಅನುಭವಿಸಿದೆನು. ಇನ್ರುಂ-ಉತ್ತನ = ಹೀಗೆ ಇನ್ನೂ ನಾನು ಪಡೆದ ಒಳಿತುಗಳನ್ನು, ಓದಿಲ್ = ಹೇಳತೊಡಗಿದರೆ, ಉಲಪ್ಪು = (ಅದಕ್ಕೆ) ಕೊನೆಗೊಳ್ಳುವಿಕೆ, ಇಲ್ಲೈ = ಇಲ್ಲ.

ತಾತ್ಪರ್ಯ :- ಸ್ವಾಮಿ, ರಾಮಾನುಜರನ್ನು ನಾನು ನಿಜವಾಗಿಯೂ ಈಗತಾನೆ ಅರಿತುಕೊಂಡೆನು. ಅವರನ್ನು ಹೀಗೆ ಅರಿಯುವಾಗ ಅವರ ಭಕ್ತರ ಸುಂದರವಾದ ಅಡಿದಾವರೆಗಳಿಗೆ ಅಡಿಯಾಳಾಗಿ ಸೇವೆ ಮಾಡಿದೆನು. ಆ ಮಹಿಮರ ಶುಭ ಗುಣಗಳೆಂಬ ಸಾಗರವನ್ನು ಬಾಯಿದಣಿಯೆ ಬಣ್ಣಿಸಿದೆನು. ಇದೇರೀತಿ ಅವರಿಂದ ಪಡೆದ ಒಳ್ಳೆಯತನವನ್ನು ಹೇಳತೊಡಗಿದರೆ ಅದಕ್ಕೆ ಕೊನೆಯಿಲ್ಲದಂತಾಗುವುದು. ಅಂತಹ ಗುಣವಂತರು ಆ ಮಹಾತ್ಮರು.

श्रीमद्रामानुजार्यं त्वह मवगतवा नद्य याथार्थ्यत स्तं
तत्पादासक्तपादूपरिचरणवशात् प्राक्तनाधै श्च मुक्तः ।
यावच्छक् यं तदीयप्रथितशुभगुणाम्भोधि मभ्यष्टवं च
प्राप्तानां सत्फलनां गणयितरि मयि त्वन्त एषां च नास्ति ॥ ८४

ಮೂಲ : ಓದಿಯ ವೇದತ್ತಿನುಳ್ಪೊರುಳಾಯ್, ಅದನುಚ್ಚಿಮಿಕ್ಕ
ಶೋದಿಯೈ ನಾದನೆನವರಿಯಾದುಳಲ್ ಹಿನ್ರತೊಂಡರ್
ಪೇದಮ್ಯೈ ತೀರ್ತ್ತ ವಿರಾಮಾನುಶನ್ನೈ ತೊಳುಂಪೆರಿಯೋರ್
ಪಾದಮಲ್ಲಾಲ್ ಎನ್ರನ್ನಾರುಯಿರ್ಕ್ಕ, ಯಾದೊನ್ರುಂ ಪತ್ತಿಲ್ಲೈಯೆ ॥ 85

ಭಾವ :- ''ಓದಪ್ಪಡುಹಿರವೇದಂಗಳ್ಳಿ ಉಳ್ಪೊರುಳಾಯುಂ, ಅವೈಹಳ್ಳಿ ತಲೈಹಳಾಹಿಯ ಉಪನಿಷತ್ತುಕ್ಕಳಿಲ್ ಮಿಹವುಂ ವಿಳಂಗುಹಿರ ಶ್ರೀಮನ್ನಾರಾಯಣ್ಣ ತಾ್ಣ ಸರ್ವರುಕ್ಕುಂ ಶೇಷೀ'' ಎನ್ರ್ ಅರಿಯಾಮಲೇ ಕಂಡಕಂಡ ವಿಡಂಗಳಿಲ್ ಅಡಿಮ್ಯೈಶ್ಯೈಯ್ಯಪ್ಪೋಹುಂ ಪಾಮರರ್‌ಹಳುಡ್ಯೆಯ ಅವಿವೇಕತ್ತೈ ನೀಕ್ಕಿವೈತ್ತ ರಾಮಾನುಶರ್ರೈ ಸೇವಿಕ್ಕುಂ ಪೆರಿಯೋರ್ಹಳ್ ತಿರುವಡಿಹಳ್ ತವಿರ ಎನ್ನರುಮ್ಯೆಯಾನ ಆತ್ಮಾವುಕ್ಕ ವೇರೆ ಯಾದೊರು ಪುಹಲಿಡಮುಂ ಇಲ್ಲ್ಯೆ.

ಅರ್ಥ :- ಓದಿಯ-ವೇದತ್ತಿ್ಣ-ಉಳ್-ಪೊರುಳ್-ಆಯ್ = ಪಠಿಸುವ ವೇದಗಳಲ್ಲಿರುವ ಸಾರವಾಗಿಯೂ, ಅದ್ಣ-ಉಚ್ಚಿ-ಮಿಕ್ಕ-ಶೋದಿಯುಂ = ಅವುಗಳ ತಲೈಯಾದ ಉಪನಿಷತ್ತುಗಳಲ್ಲಿ ಚೆನ್ನಾಗಿ ಪ್ರಕಾಶಿಸುವ ಶ್ರೀಮನ್ನಾರಾಯಣನನ್ನು, ನಾದ್ಣ-ಎನ = ಸ್ವಾಮಿ ಎಂದು, ಅರಿಯಾದ್ = ಅರಿಯದೆ, ಉಳಲ್ ಹಿನ್ರ = ಕಂಡಕಂಡಕಡೆ ಆಳಾಗಿ ತಿರುಗುವ, ಪೇದಮ್ಯೈ = ಅವಿವೇಕವನ್ನು, ತೀರ್‌ನ್ದ = ಹೋಗಲಾಡಿಸಿದ, ಇರಾಮಾನುಶನ್ನೈ = ರಾಮಾನುಜರನ್ನು, ತೊಳುಂ = ಸೇವಿಸುವ, ಪೆರಿಯೋಲ್ = ದೊಡ್ಡವರ, ಪಾದಂ-ಅಲ್ಲಾಲ್ = ಅಡಿಗಳ ಹೊರತು, ಎ್ಣರ್ತ್ಣ-ನನ್ನ, ಆರ್-ಉಯಿರ್ಕ್ಕ = ಶ್ರೇಷ್ಠವಾದ ಆತ್ಮಕ್ಕೆ, ಯಾದ್-ಒನ್ರುಂ = ಬೇರೆ ಯಾವ, ಪಟ್ರ್-ಇಲ್ಲ್ಯೆ = ಹೋಗುವ ಜಾಗವೂ ಇಲ್ಲ.

ತಾತ್ಪರ್ಯ :- ''ಅಧಿಕರಿಸುವ ವೇದಗಳ ಅಂತರಾರ್ಥವೂ, ಆ ವೇದಗಳ ಶಿರಸ್ಸುಗಳಾದ ಉಪನಿಷತ್ತುಗಳಲ್ಲಿ ಬೆಳಗುವ ಪರತತ್ವವೂ ಶ್ರೀಮನ್ನಾರಾಯಣನೇ. ಅವನೇ ಸರ್ವಸ್ವಾಮಿ, ರಂಗನಾಥ'' ಎಂದರಿಯದೆ ಕಂಡಕಂಡವರಲ್ಲಿ ಆಳಾಗಿ ಸೇವೆಮಾಡುವವರ ಅವಿವೇಕವನ್ನು ನೀಗಿದ ಶ್ರೀ ರಾಮಾನುಜರನ್ನು ಆದರದಿಂದ ಸೇವಿಸುವ ಸಜ್ಜನರ ಅಡಿದಾವರೆಗಳನ್ನು ಬಿಟ್ಟು ಈ ನನ್ನ ಪ್ರಿಯವಾದ ಆತ್ಮವು ಮತ್ತೆಲ್ಲಿಯೂ ಪ್ರವೇಶಿಸದು. ಮತ್ತಾವುದನ್ನೂ ಗಮನಿಸದು.

अध्येतव्यागमार्थ श्श्रुतिशिरसि विदीप्तो हरिस्सर्वशेषी
रङ्गेन्द्रो ही त्यबुध्वा क्वचिदपि परिचर्यावता मज्ञनृणाम् ।
प्रोज्झित्यैवाऽविवेकं लसति परिचरा स्तस्य रामानुजो ये
तेषां पादै र्विनात्मा मम विशति पदं नापरं किञ्चिदत्र ॥ ८५

ಮೂಲ : ಪತ್ತಾ ಮನಿಶರ್ರೈಪ್ಪತ್ತಿ, ಅಪ್ಪತ್ತು ವಿಡಾದವರೇ
ಉತ್ತಾರೆನ ಉಳನ್ರೋಡಿನ್ಯೆಯೇನಿನಿ, ಒಳ್ಳಿಯನೂಲ್
ಕತ್ತಾರ್ ಪರವು ಮಿರಾಮಾನುಶನ್ನೈಕ್ಕರುದು ಮುಳ್ಳಂ
ಪೆತ್ತಾರ್‌ಯವರ್, ಅವರೆಮ್ಮೈ ನಿನ್ರಾಳುಂ ಪೆರಿಯವರೇ ॥ 86

ಭಾವ :- ಯಾದೊರು ಪ್ರಯೋಜನಂ ಇಲ್ಲಾದವರ್ಗಳೈಯುಂ ವಿಡಾಮಲ್, ಅವರ್ಗಳೈಯೇ ನೆರುಂಗಿನ ಬಂಧುಕ್ಕಳೆನ್ರ್ ಪಿ ತುಡರ್‌ನ್ದೋಡಿನದ್ ಪೋದುಂ. ಇನಿಮೇಲ್ ಅಪ್ಪಡಿ ಶೆಯ್ಯೇ. ಶಿರಂದ ಶಾಸ್ತ್ರಂಗಳೈ ನನ್ರಾಹ ಅರಿಂದವರ್ಗಳಾಲ್ ಪುಹಳಪ್ಪಡುಂ ರಾಮಾನುಜರ್ರೈ ಅನುಸಂಧಿಕ್ಕುಂ ಮನಮುಳ್ಳವರ್ ಯವರೋ ಅವರೇ ನಮ್ಮಾಲೇ ಅಡಿಮೈಕ್ಕೊಳ್ಳುಂ ಮಹಾನ್ಗಳ್.

ಅರ್ಥ :- ಪತ್ತಾ = ಉಪಯೋಗವಿಲ್ಲದ , ಮನಿಶರ್ರೈ = ಜನರನ್ನು, ಪತ್ತಿ = ಆಶ್ರಯಿಸಿ, ಅ-ಪತ್ತು = ಆ ಆಶ್ರಯಿಸುವಿಕೆಯನ್ನು, ವಿಡಾದ್ = ಬಿಡದೆ, ಅವರೇ = ಅವರನ್ನೇ, ಉತ್ತಾರ್ = ಸರ್ವವಿಧಬಂಧುಗಳು, ಎನ = ಎಂದುಕೊಂಡು, ಉಳನ್ರ್ = (ಅವರ ಹಿಂದೆ) ಅಲೆದು, ಓಡಿ = (ಅವರ ಕೆಲಸಮಾಡಲು) ಓಡಿ, ಇನಿ = ಇನ್ನು, ನೈಯ್ಯೇ = ಶಿಥಿಲನಾಗೆನು. ಒಳ್ಳಿಯ = ಒಳಿತಾಗುವ, ನೂಲ್ = ಶಾಸ್ತ್ರಗಳನ್ನು, ಕತ್ತಾರ್ = ಕಲಿತವರಿಂದ, ಪರವುಂ = ಕೊಂಡಾಡಲ್ಪಡುವ, ಇರಾಮಾನುಶನ್ನೈ = ರಾಮಾನುಜರನ್ನು, ಕರುದುಂ = ಅನುಸಂಧಾನಮಡುವ, ಉಳ್ಳಂ = ಮನಸ್ಸನ್ನು, ಪೆತ್ತಾರ್ = ಪಡೆದಿರುವರು, ಯವರ್ = ಯಾರೋ, ಅವರ್ = ಆ ಮಹಾತ್ಮರೇ, ಎಮ್ಮೈ = ನಮ್ಮನ್ನು, ನಿನ್ರ್-ಆಳುಂ = ನೆಲೆಯಾಗಿ ಸೇವೆಗೊಳ್ಳುವ, ಪೆರಿಯವರ್ = ಮಹಾತ್ಮರು.

ತಾತ್ಪರ್ಯ :- ಯಾವ ಪ್ರಯೋಜನವೂ ಯಾರಿಂದ ಆಗದೋ ಅವರನ್ನೇ ಬಂಧುಗಳೆಂದು ಬಿಡದೆ, ಹಿಂಬಾಲಿಸಿ ಓಡಿದೆನು. ಇನ್ನು ಹಾಗೆ ಮಾಡುವುದಿಲ್ಲ. ಒಳ್ಳೆಯ ಶಾಸ್ತ್ರಗಳನ್ನು ಚೆನ್ನಾಗಿ ಅರಿತ ಮಹಿಮರಿಂದ ಹೊಗಳಿಸಿಕೊಳ್ಳುವ ನಮ್ಮ ರಾಮಾನುಜರನ್ನು ಧ್ಯಾನಮಾಡುವ ಮನಸ್ಸುಳ್ಳವರು ಯಾರೋ, ಅಂತಹ ಮಹನೀಯರೇ ನಮ್ಮಿಂದ ಶಾಶ್ವತವಾಗಿ ಸೇವೆಗೊಳ್ಳುವರು.

त्यागार्हान् निष्फला न्रव्यजहमपि नरा नुत्तमान् बान्धवां स्तान्
मत्वा नन्वन्वधावं पुनरपि न विधास्येऽथ रामानुजार्यम् ।
सच्छास्त्राभिज्ञवृन्दप्रणुत मिह हि यन्मानसानि स्मरन्ति
सेव्यन्तेऽस्मादृशै स्ते निरवधिमहिमानश्च नित्यं महान्तः ॥ ८६

ಮೂಲ : ಪೆರಿಯವರ್‌ಪೇಶಿಲುಂ ಪೇದೈಯರ್‌ಪೇಶಿಲುಂ, ತರ್ಗ ಗುಣಂಗಳ್ಕ್
ಉರಿಯ ಶೊಲ್ಲೆನ್ರು ಮುಡ್ಯೆಯವನೆನ್ರೆನ್ರ್, ಉಣರ್‌ವಿಲ್ ಮಿಕ್ಕೋರ್.
ತೆರಿಯುಂ ವಣ್‌ಕೀರ್ತಿ ಇರಾಮಾನುಜರ್ಗ ಮರ್ರೈತೇರ್‌ನ್ದ್ ಉಲಹಿಲ್
ಪುರಿಯುಂನಲ್ ಜ್ಞಾನಂ, ಪೊರುಂದಾದವರ್ರೈ ಪೊರುಂಕಲಿಯೇ ॥ 87

ಭಾವ :- ನಲ್ಲಶಿರಂದ ಜ್ಞಾನಮುಳ್ಳವರ್ ಪೇಶಿನಾಲುಂ, ಅರಿವತ್ತವರ್ ಪೇಶಿ ನಾಲುಂ, ''ತಮದ್ ಶುಭಗುಣಂಗಳೈ ಪುಹಳುಂ ಮೊಳಿಹಳೈ ಎಪ್ಪೋದುಂ ಉಡ್ಯೆಯವರ್ ತಾರ್ಗ ಇವರ್'' ಎನ್ರ್ ಪಲ ಸಮಯಂಗಳ್ ಶೊಲ್ಲಿ, ನಲ್ಲ ಜ್ಞಾನಿಹಳಾಲ್ ಕೊಂಡಾಡಪ್ಪಟ್ಟ ಕೀರ್ತಿಯುಡ್ಯೆಯವರ್ ರಾಮಾನುಜರ್. ವೇದಂಗಳೈ ಮುಳುಮ್ಯೆಯುಂ ನನ್ರಾಹ ವಿಮರ್ಶಿತ್ತ್ ಜ್ಞಾನತ್ತೈ ಉಪದೇಶಿತ್ತಾರ್. ಅಂದ ಜ್ಞಾನತ್ತೈಪ್ಪೆರಾದವರ್ಹಳೈತ್ತಾರ್ಗ ಕಲಿಪುರುಷರ್ಗ ಪೀಡಿಪ್ಪರ್ಗ.

ಅರ್ಥ :- ಪೆರಿಯವರ್ = ಹಿರಿಯರು (ಜ್ಞಾನಿಗಳು) ಪೇಶಿಲುಂ = ಹೇಳಿದರೂ, ಪೇದೈಯರ್ = ಪಾಮರರು, ಪೇಶಿಲುಂ = ಹೇಳಿದರೂ, ತರ್ಗ-ಗುಣಂಗಳುಕ್ಕ್ = ತಮ್ಮ ಸದ್ಗುಣಗಳಿಗೆ, ಉರಿಯ-ಶೊಲ್ = ಹೆಚ್ಚುವಳಿಕೆಯ ಮಾತನ್ನು, ಎನ್ರುಂ = ಯಾವಾಗಲೂ, ಉಡ್ಯೆಯವರ್ಗ = ಉಳ್ಳವರು, ಎನ್ರ್ = ಎಂದು, ಎನ್ರ್ = (ಹಲವಾರು ಸಲ) ಹೇಳಿ, ಉಣರ್ವಿಲ್-ಮಿಕ್ಕೋರ್ = ಒಳ್ಳೆಯ ಜ್ಞಾನಿಗಳು, ತೆರಿಯುಂ = ಅನುಸಂಧಾನಮಾಡುವ, ವಣ್-ಕೀರ್ತಿ = ದಿವ್ಯವಾದ ಕೀರ್ತಿಯುಳ್ಳ, ಇರಾಮಾನುಶರ್ಗ = ರಾಮಾನುಜರು, ಮರ್ರೈ = ವೇದಗಳನ್ನು, ತೇರ್‌ನ್ದ್ = ವಿಮರ್ಶಿಸಿ, ಉಲಹಿಲ್ = ಲೋಕದಲ್ಲಿ, ಪುರಿಯುಂ = ಉಪದೇಶಿಸಿದ, ನಲ್-ಜ್ಞಾನಂ = ಒಳ್ಳೆಯ ಅರಿವನ್ನು ಪೊರುಂದಾದವರ್ರೈ = ಹೊಂದದವರನ್ನು, ಕಲಿ-ಪೊರುಂ = ಕಲಿಪುರುಷನು ಪೀಡಿಸುವನು.

ತಾತ್ಪರ್ಯ :- ಜ್ಞಾನಿಗಳಾದ ಹಿರಿಯರೇ ಹೇಳಲಿ, ಅರಿವಿಲ್ಲದ ಪಾಮರರೇ ಹೇಳಲಿ ತಮ್ಮ ಸದ್ಗುಣಗಳನ್ನು ಹೊಗಳುವ ಮಾತುಗಳನ್ನು ಯಾವಾಗಲೂ ಪಡೆದಿರುವವರು ಇವರು'' ಎಂದು ಹಲವಾರು ವೇಳೆ ಹೇಳಿ, ಉತ್ತಮ ಜ್ಞಾನಿಗಳಿಂದ ಹೊಗಳಿಸಿಕೊಳ್ಳುವ ರಾಮಾನುಜರು ಶ್ರುತಿಗಳೆಲ್ಲವನ್ನೂ ವಿಮರ್ಶಿಸಿ, ಉಪದೇಶಿಸಿದ ಜ್ಞಾನವನ್ನು ಇಲ್ಲಿ ಪಡೆಯದಿರುವವರನ್ನು ಮಾತ್ರ ಕಲಿಯು ಪೀಡಿಸುತ್ತಾನೆ.

**वाणीभि र्ज्ञानिनां वाप्यमतियुतनराणां सदाप्यात्मगानां**
**स्तोत्रार्हाणां गुणानां स्तुति मुपरिचिता माप रामानुजार्यः ।**
**इत्यावेद्या सकृद्यं प्रणुनुवु रतुलं सूरयो वेदलब्धं**
**ज्ञानं तेनोपदिष्टं य इह च न विदु स्तान् कलिर्हन्ति नान्यान् ॥** ८७

ಮೂಲ : ಕಲಮಿಕ್ಕ ಶೆನ್ನೆಲ್ ಕಳನಿಕ್ಕುರೈಯಲ್, ಕಲೈಪ್ಪೆರುಮಾಳ್
ಒಲಿಮಿಕ್ಕ ಪಾಡಲೈ ಉಂಡು ತನ್ನುಳ್ಳನ್ದಡಿತ್ತ್, ಅದನಾಲ್
ವಲಿಮಿಕ್ಕ ಶೀಯಮಿರಾಮಾನುಶರ್ ಮರೈವಾದಿಯರಾಂ
ಪುಲಿಮಿಕ್ಕದೆನ್ರ್, ಇಬ್ಬುವನತ್ತಿಲ್‌ವನ್ದ ಮೈ ಪೋತ್ತುವನೇ ॥ 88

ಭಾವ :- ಮಿಹವುಂ ವಳರ್‌ನ್ದ ಶೆನ್ನಲ್ ಕಳಣಿಹರ್ಳ ನಡುವೆ ಇರುಕ್ಕುಂ ತಿರುಕ್ಕುರೈಯಲೂರಿಲ್ ಅವತರಿತ್ತವರುಂ, ಶಾಸ್ತ್ರಂಗಳ್ ಕಾಟ್ಟಿಲುಂ ಪೆರುಂತನ್ಮೈಯುಳ್ಳ ಪ್ರಬಂಧಗಳೈ ಅರುಳಿಚ್ಚೆಯ್ದವರುಮಾನ ತಿರುಮಂಗೈಯಾಳ್‌ವಾರುಡೈಯ ಇಶೈನಿರೈಂದ ಪಾಡಲೈ (ತಿರುಮೊಳಿಯೈ) ಅನುಭವಿತ್ತ್, ತಮ್ಮನಮುಹಂದ್, ಅದನಾಲೈಯೇ ಮಿಹವುಂ ಬಲಿಷ್ಠಮಾನ ಶಿಂಗಂಪೋನ್ರ ರಾಮಾನುಜರ್ "ಶ್ರುತಿಹಳೈ ಪ್ರಮಾಣಮಾಹ ಒಪ್ಪಿಯುಂ ದುರ್ವಾದಿಹಳಾಹಿರ ಪುಲಿಹಳ್ ಅಧಿಕಮಾಯ್ ವಿಟ್ಟನ"ಎನ್ರ್ ಅವತ್ತೈ ದಂಡಿಪ್ಪದರ್‌ಕ್ಕಾಹ ಇಂಗವತರಿತ್ತಪಡಿಯ್ಯೆ ವರ್ಣಿಪ್ಪೇ‌ನ್.

ಅರ್ಥ :- ಕಲಿ-ಮಿಕ್ಕ-ಶೆನ್ನಲ್ -ಕಳನಿ = ಫಲವತ್ತಾದ ನೆಲದಲ್ಲಿ ಬೆಳೆಯುವ ಉತ್ತಮ ಬತ್ತದ ಪೈರಿನ ಗದ್ದೆಗಳುಳ್ಳ, ಕುರೈಯಲ್ = ಕುರೈಯಲೂರಿನಲ್ಲಿ, (ಅವತರಿಸಿದ) ಕಲೈ-ಪೆರುಮಾಳ್ = ಶಾಸ್ತ್ರಗಳೆಂಬಂತಿರುವ ದಿವ್ಯ ಪ್ರಬಂಧವನ್ನು ರಚಿಸಿದ ಹಿರಿಮೆಯುಳ್ಳ ತಿರುಮಂಗೈಯಾಳ್‌ವಾರ್ರವರ, ಮಿಕ್ಕ = ಹೆಚ್ಚು, ಒಲಿ = ಇಂಪಾದ, ಪಾಡಲೈ = ಪದ್ಯಗಳನ್ನು (ತಿರುಮೊಳಿ) ಉಂಡು = ಅನುಭವಿಸಿ, ತನ್ನುಳ್ಳಂ = ತನ್ನ ಮನಸ್ಸನ್ನು, ತಡಿತ್ತ್ = ಪೂರ್ಣಗೊಳಿಸಿ, ಅದನಾಲ್ = ಅದರಿಂದ, ವಲಿ-ಮಿಕ್ಕ = ಹೆಚ್ಚು ಬಲವುಳ್ಳ, ಶೀಯಂ = ಸಿಂಹದಂತೆ, (ಇರುವ) ಇರಾಮಾನುಶರ್ = ರಾಮಾನುಜರು, ಮರೈ- ವಾದಿಯರ್ = ಆ ವೇದಗಳನ್ನೊಪ್ಪಿದರೂ ದುಷ್ಟವಾದಗಳನ್ನು ಮಾಡುವವರೆಂಬ, ಪುಲಿ = ಹುಲಿಗಳು, ಮಿಕ್ಕದ್ = ಹೆಚ್ಚಿದುವು, ಎನ್ರ್ = ಎಂದು, (ಅವನ್ನು ದಂಡಿಸಲು) ಇ-ಬುವನತ್ತಿಲ್ = ಈ ಲೋಕದಲ್ಲಿ, ವಂದಮ್ಮೆ = ಅವತರಿಸಿದ ರೀತಿಯನ್ನು, ಪೋತ್ತುವರ್ = ಹೊಗಳುತ್ತೇನೆ.

ತಾತ್ಪರ್ಯ :- ಸೊಂಪಾಗಿ ಬೆಳೆವ ಬತ್ತದ ಗದ್ದೆಗಳ ಮಧ್ಯೆ ಇರುವ ಕುರೈಯಲೂರಿನವರೂ, ಶಾಸ್ತ್ರಗಳಿಗಿಂತ ಮೇಲೆನಿಪ ದಿವ್ಯ ಪ್ರಬಂಧವನ್ನು ರಚಿಸಿದವರೂ ಆದ ತಿರುಮಂಗೈಯಾಳ್ವಾರ್ರ ಶ್ರುತಿ ಮನೋಹರವಾದ ಪ್ರಬಂಧವನ್ನು ಅನುಭವಿಸಿ, ಉಲ್ಲಾಸಗೊಂಡ ರಾಮಾನುಜರು ಬಲಿಷ್ಠ ಸಿಂಹದಂತಾಗಿ, ವೇದಗಳನ್ನು ಪ್ರಮಾಣವಾಗಿ ಒಪ್ಪಿಯೂ ದುರ್ವಾದ ಮಾಡುವವರೆಂಬ ಹುಲಿಗಳು ಹೆಚ್ಚಿದವೆಂದು, ಅವನ್ನು ಸದೆಬಡಿಯಲು ಬಂದರೆಂದು ಹೊಗಳುವೆನು.

संवृद्धोत्तमशालिभूपरिवृतश्रीपूर्वपूर्जन्मकृ-
च्छास्त्राभ्यहितादिव्यवागनुभवानन्दान्तरङ्गो बली ।
श्रीरामानुजसिंहराण्निगमवागर्थेषु दुर्वादिनः
व्याघ्रान् हन्तु मवातरत् यदवनौ तद्वर्णयाम्यादरात् ॥ ८८

ಮೂಲ : ಪೋತ್ತರುಂ ಶೀಲತ್ತಿರಾಮಾನುಶ, ನಿ಼ಪುಹಳ್‌ತೆರಿಂದ್
ಶಾತ್ತುವನೇಲ್ ಅದ್‌ತಾಳ್ವದ್‌ತೀರಿಲ್, ಉ಼ ಶೀರ್ ತನಕ್ಕೋರ್
ಏತ್ತಮೆನ್ರೇ ಕೊಂಡಿರುಕ್ಕಿಲುಂ ಎ಼ ಮನಮೇತ್ತಿಯನ್ರಿ
ಆತ್ತಹಿಲ್ಲಾದ್, ಇದರ್ಕೆನ್ನಿನ್ನೈವಾಯೆನ್ರಿಟ್ಟಂಜುವನೇ ॥ 89

ಭಾವ :- ವರ್ಣಿಕ್ಕಮುಡಿಯಾದದಾನ ಶಿರಂದ ಶೀಲಮುಳ್ಳ ರಾಮಾನುಜರೇ ! ಉಮ್ಮುಡೈಯ ನಲ್ಲ ಗುಣಂಗಳೈ ತೆರಿಂದ್ ಶೊಲ್ಲುವೇನಾಹಿಲ್, ಅಕ್ಕೂರುಹೈ ಉಮಕ್ಕ್‌ರೊಂಬವುಂ ಕುರೈವುರ್ಱ. ಶೊಲ್ಲಾದಿರುಂದಾಲ್ ಅದ್ ಉಮ್ಮುಡೈಯ ಶುಭಗುಣಂಗಳುಕ್ಕ್ ಪೆರುಂತನ್ಮೈಯಾಹುಂ. ಇಪ್ಪಡಿ ನಿನೈತ್ತಿರುಂದಾಲುಂ ಎ಼ ಮನಂ ತುದಿಕ್ಕಾಮಲ್ ಧರಿತ್ತಿರಾದ್, ಇಂದ ವಿಷಯತ್ತಿಲ್ ದೇವರೀರ್ ಎಣ್ಣಂ ಎನ್ರಿರುಕ್ಕುಮೊ ? ಎನ್ರ್, ಬಯಂದಿರುಕ್ಕಿನ್ರೇ಼.

ಅರ್ಥ :- ಪೋತ್ತ್-ಅರು = ವರ್ಣಿಸಲಾಗದ, ಶೀಲತ್ತ್ = ಸ್ವಭಾವವುಳ್ಳ. ಇರಾಮಾನುಶ = ರಾಮಾನುಜರೆ ! ನಿ಼-ಪುಹಳ್ = ನಿಮ್ಮ ಸದ್ಗುಣಗಳನ್ನು, ತೆರಿಂದ್ = ಅನುಭವಿಸಿ, ಶಾತ್ತುವನೇಲ್ = ಹೇಳುವೆನಾದರೆ, ಅದ್ = ಆರೀತಿ ಹೇಳುವುದು, ತಾಳ್ವ್ = (ನಿಮಗೆ) ಕಡಿಮೆಯಾದೀತು. ಅದ್-ತೀರಿಲ್ = ಹಾಗೆ ಹೇಳದೆ ಹೋದರೆ, ಉ಼-ಶೀರ್-ತನಕ್ಕ್ = ನಿಮ್ಮ ಸದ್ಗುಣಗಳಿಗೆ, ಓರ್-ಏತ್ತ = ಅಸದೃಶ ಮೇಲ್ಮೆಯಾಗುವುದು. ಎನ್ರೇ = ಹೀಗೆಂದೇ, ಕೊಂಡು = ತಿಳಿದು, ಇರುಕ್ಕಿಲುಂ = ಇದ್ದರೂ, ಎ಼-ಮನಂ = ನನ್ನ ಮನಸ್ಸು, ಏತ್ತ = (ನಿಮ್ಮ ಗುಣವನ್ನು) ವರ್ಣಿಸದೆ, ಆತ್ತಹಿಲ್ಲಾದ್ = ತಾಳಿರಲಾರದು. ಇದಕ್ಕ್ = ಈ ವಿಷಯದಲ್ಲಿ, ಎ಼-ನಿನ್ನೈವಾಯ್ = ನೀವು ಏನು ಭಾವಿಸುವಿರೋ ? ಎನ್ರಿಟ್ಟ್ = ಎಂದು, ಅಂಜುವ಼ = ಅಂಜುವೆನು.

ತಾತ್ಪರ್ಯ :- ಓ ರಾಮಾನುಜರೆ ! ನಿಮ್ಮ ಶೀಲವೆಂಬ ಗುಣವನ್ನು ವರ್ಣಿಸಲು ಯಾರಿಂದಲೂ ಆಗದು. ಅದನ್ನು ಚೆನ್ನಾಗಿ ಅನುಭವಿಸಿ ಹೇಳುವೆನಾದರೆ, ಆ ಹೇಳಿಕೆ ತುಂಬ ಕಡಿಮೆಯೇ, ಅದಕ್ಕಿಂತ ಹೇಳದೆಯೇ ಇದ್ದರೆ ಅದು ನಿಮ್ಮ ಗುಣಗಳಿಗೆ ಹಿರಿಮೆಯೇ ಆಗುವುದು. ಆ ರೀತಿ ನಾನು ತಿಳಿದಿದ್ದರೂ ನನ್ನ ಮನಸ್ಸು ಸ್ತುತಿಸದೆ ಧರಿಸಿರಲಾರದು. ಈ ವಿಚಾರದಲ್ಲಿ ನಿಮ್ಮ ಅಭಿಪ್ರಾಯವೇನಿರಬಹುದೋ ಎಂದು ಅಂಜಿರುವೆನು.

**श्रीमन् ! अवर्ण्यतमशीलाभिराम ! मुनिरामानुजार्य ! यदि ते**
**भाषेय भव्यगुणभावानुभूति मनुभावोनता ननु तदा ।**
**जोषं भवेय मविकौन्नत्य मुल्लसति चैवेति चिन्तितमपि**
**स्वान्तं न भे त्वनुव दुज्जीवतीह तव भावःक इत्युदितभीः ॥**

ಮೂಲ : ನಿನ್ನೈಯಾರ್ ಪಿರವಿಯ್ಯೈ ನೀಕ್ಕುಂ ಪಿರಾನ್ನೈ, ಇನ್ನೀಣಿಲತ್ತೇ
ಎನ್ನೈಯಾಳವಂದ ವಿರಾಮಾನುಶನ್ನೈ, ಇರುಂಕವಿಹಳ್
ಪುನ್ನೈಯಾರ್ ಪುನ್ನೈಯುಂ ಪೆರಿಯವರ್ ತಾಳ್‌ಹಳಿಲ್ ಪೂನ್ದೊಡೆಯಿಲ್
ವನ್ನೈಯಾರ್, ಪಿರಪ್ಪಿಲ್‌ವರುನ್ದವರ್ ಮಾನ್ದರ್ ಮರುಳ್ ಶುರನ್ದೇ ॥ 90

ಭಾವ :- ಪಿರವಿಯ್ಯೈ ನೀಕ್ಕ ಉಪಕರಿಕ್ಕುಮವರುಂ, ಇಂದ ಪೆರಿಯ ಧರೆಯಿಲ್ ಎನ್ನೈ ಆಳ್ವದರ್ಕ್ಕಾಹವೇ ವಂದವರುಮಾನ, ರಾಮಾನುಶರ್ರೈ ಮನತ್ತಾಲ್ ನಿನ್ನೈಯಾದವರುಂ, ಅವರ್ರೈಪ್ಪತ್ತಿನ ನಲ್ಲಪಾಡಲ್ಗಳ್ಳೈಪ್ಪಾಡದವರುಂ, ಏದೋ ಭಾಗ್ಯವಿಶೇಷತ್ತಾಲ್ ಕೀರ್ತನಂ ಪಣ್ಣುಂ ಮಹನೀಯರ್ರಿ ತಿರುವಡಿಹಳಿಲ್ ಪುಷ್ಪಂಗಳ್ಳೈ ಸಮರ್ಪಿಯಾದವರ್ಗ್ಳುಮಾನ, ಮನಿದರ್ ಮಿಹವುಂ ಅರಿವತ್ತ್, ಮರುಳ್ಳೈಯೇ ಪೆತ್ತ್, ಇಂದ ಪಿರಪ್ಪಿಲೇಯೇ ಪಡಾದ ಪೀಡೈಹಳ್ಳೈ ಪಡುವಾರ್, (ಮಹಾರ್ಹಹಳ್ಳೈ ತೆರಿಂದುಕೊಂಡಾಡಾದಿರುಪ್ಪದ್ ಮಹಾಪರಾಧಂತಾರ್ ಎನ್ರಪಡಿ).

ಅರ್ಥ :- ಪಿರವಿಯ್ಯೈ = ಹುಟ್ಟನ್ನು, ನೀಕ್ಕುಂ = ನೀಗಿಸುವುದರಲ್ಲಿ, ಪಿರಾನ್ನೈ = ಉಪಕಾರಿಗಳೂ, ಇ-ನೀಳ್-ನಿಲತ್ತೆ = ಈ ವಿಶಾಲ ಭೂಮಿಯಲ್ಲಿ, ಎನ್ನೈ-ಆಳ = ನನ್ನನ್ನಾಳಲು, ವಂದ = ಬಂದ, ಇರಾಮಾನುಶನ್ನೈ = ರಾಮಾನುಜರನ್ನು, ನಿನ್ನೈಯಾರ್ = ಚಿಂತಿಸಿದವರೂ, ಇರುಂ-ಕವಿಹಳ್ = ಒಳ್ಳೆಯ ಕವಿತೆಗಳನ್ನು, ಪುನ್ನೈಯಾರ್ = ಕೀರ್ತನ ಮಾಡದವರೂ, ಪುನ್ನೈಯುಂ = ಕೀರ್ತಿಸುವ, ಪೆರಿಯವರ್ = ಮಹಾತ್ಮರ, ತಾಳ್ಗಳಿಲೇ = ಅಡಿಗಳಲ್ಲಿ, ಪೂಂ-ತೊಡ್ಡೈಯಿಲ್ = ಹೂಹಾರಗಳನ್ನು, ವನ್ನೈಯಾರ್ = ಸಮರ್ಪಿಸಿದವರೂ ಆದ, ಮಾಂದರ್ = ಮಾನವರು, ಮರುಳ್-ಶುರಂದ್ = ಅಜ್ಞಾನವನ್ನೇ ಹೆಚ್ಚಾಗಿ ಪಡೆದು, ಪಿರಪ್ಪಿಲ್ = ಸಂಸಾರದಲ್ಲಿ, ವರುಂದವರ್ = ಪಾಡುಪಡುವರು.

ತಾತ್ಪರ್ಯ :- ಮಾನವರು ಮತ್ತೆ ಮತ್ತೆ ಜನ್ಮವೆತ್ತದಂತೆ ಉಪಕಾರ ಮಾಡಿದರು ನಮ್ಮ ರಾಮಾನುಜರು, ಮತ್ತು ಈ ವಿಶಾಲ ಭೂಮಂಡಲದಲ್ಲಿ ನನ್ನನ್ನು ಆಳುವುದಕ್ಕಾಗಿಯೇ ಬಂದವರು. ಈ ಮಹಿಮರನ್ನು ಮನದಲ್ಲೂ ನೆನೆಯದವರೂ, ಇವರ ವಿಷಯವಾದ ಕೀರ್ತನೆಗಳನ್ನು ಪಾಡದವರೂ, ಮತ್ತು ಯಾವುದೋ ಭಾಗ್ಯ ವಿಶೇಷದಿಂದ ಕೀರ್ತನೆ ಮಾಡುವ ಮಹನೀಯರ ಪಾದಗಳಿಗೆ ಪೂಜೆಮಾಡದವರೂ ಆದ ಜನರು ತೀರ ಮತಿಗೆಟ್ಟು ಪಡಬಾರದ ಕಷ್ಟಗಳನ್ನು ಪಡುವಂತಾಗುವರು.

मा मात्मीयपदाश्रयं कलयितुं जातं च रामानुजं
जन्मावर्तिनिवर्तनोपकृतिनं त्वीदृग्विशालावनौ ।
न ध्यायन्ति न चास्य कीर्तिकविता गायन्ति नार्चन्ति वा
भाग्यात् कीर्तयता मिहांध्रिषु सुमै रश्नन्ति तेऽज्ञां व्यथाः ॥ 90

ಮೂಲ : ಮರುಳ್‌ಶುರನ್ದಾಗಮವಾದಿಯರ್ ಕೂರುಂ, ಅವಪ್ಪೊರುಳಾಂ
ಇರುಳ್‌ಶುರನ್ದೆಯ್ದವುಲಹಿರುಳ್‌ನೀಙ್ಗ, ತನ್ನೀಂಡಿಯಶೀರ್
ಅರುಳ್‌ಶುರನ್ದೆಲ್ಲಾವುಯಿರ್‌ಹಳುಕ್ಕುಂ ನಾದನರಂಗನೆನ್ನುಂ
ಪೊರುಳ್‌ಶುರನ್ದಾರ್ನ್, ಎಮ್ಮಿರಾಮಾನುಶರ್ನ್ ಮಿಕ್ಕಪುಣ್ಣಿಯನೇ ॥ 91

ಭಾವ :- ಆಗಮ (ಶೈವಾಗಮ) ವಾದಿಯರ್ "ಶೈವಾಗಮಮೇ ಪ್ರಮಾಣಂ" ಎನ್ರ್ರು ಅರಿವತ್ತದಾಲೇ "ಶಿವನೇ ಪರರ್ನ್" ಎನ್ರುಂ ಕೇಳ್ವಟ್ಟಪೊರುಳಾಹಿರ ಇರುಳಾಲೇ ಕೆಟ್ಟುಪ್ಪೋನ ಉಲಹತ್ತಾರುಡೈಯ ಅರಿವತ್ತ ಇರುಟ್ಟೈ ತಮ್ಮುಡೈಯ ಅತಿವಿಲಕ್ಷಣಮಾನ ಕೃಪಾಶಕ್ತಿಯಾಲೇ ತೊಲೈತ್ತ್, "ಎಲ್ಲಾ ಜೀವರ್ಹಳುಕ್ಕುಂ ಶ್ರೀ ರಂಗನಾಥರ್ನ್‌ತಾರ್ನ್ ಸ್ವಾಮಿ" ಎಂಗಿರಪ್ಪೊರುಳ್ಳೈ ವಿಳಂಗಿವೈತ್ತ ನಮ್ಮ ರಾಮಾನುಶರ್ ಮಹಾಪುಣ್ಯಾತ್ಮಾ, ಅಲ್ಲವಾ !

ಅರ್ಥ :- ಆಗಮ-ವಾದಿಯರ್ = ಪಾಶುಪತರು, ಮರುಳ್-ಶುರಂದ್ = ಅಜ್ಞಾನವನ್ನು ಹೆಚ್ಚಾಗಿ ಪಡೆದು, ಕೂರುಂ = ಹೇಳುವ, ಅವಂ-ಪೊರುಳ್-ಆಂ = ನೀಚವಾದ ಅರ್ಥಗಳೆಂಬ, ಇರುಳ್-ಶುರಂದ್ = ಕತ್ತಲು (ಅಜ್ಞಾನ) ಹೆಚ್ಚಿ, (ಅದರಿಂದ) ಏಯ್ದ = ಕೆಟ್ಟುಹೋದ, ಉಲಹ್ = ಲೋಕದಲ್ಲಿರುವವರ, ಇರುಳ್ = ಅಜ್ಞಾನ ಕತ್ತಲೆ ಎಂಬುದು, ನೀಂಗ = ನೀಗುವಂತೆ, ತರ್ನ್ = ತಮ್ಮ, ಈಂಡಿಯ-ಶೀರ್-ಅರುಳ್ = ವಿಲಕ್ಷಣವಾದ ಕರುಣೆಯನ್ನು, ಶುರಂದ್ = ಹೆಚ್ಚಿಸಿ, ಎಲ್ಲಾ-ಉಯಿರ್ಹಳುಕ್ಕುಂ = ಎಲ್ಲಾ ಪ್ರಾಣಿಗಳಿಗೂ, ನಾದರ್ನ್ = ಸ್ವಾಮಿಯು, ಅರಂಗರ್ನ್-ಎನ್ರುಂ = ಶ್ರೀರಂಗನಾಥನೇ ಎಂಬ, ಪೊರುಳ್ = ಸಾರಾಂಶವನ್ನು, ಶುರಂದಾರ್ನ್ = ಪ್ರಕಾಶಪಡಿಸಿದವರಾದ, ಎಂ-ಇರಾಮಾನುಶರ್ನ್ = ಸ್ವಾಮಿ ರಾಮಾನುಜರು, ಮಿಕ್ಕ-ಪುಣ್ಣಿಯರ್ನ್ = ಮಹಾಪುಣ್ಯಶಾಲಿಗಳು.

ತಾತ್ಪರ್ಯ :- "ಆಗಮಗಳಲ್ಲೂ ಶೈವಾಗಮವೇ ಅತ್ಯಂತ ಪ್ರಮಾಣವು. ಶಿವನೇ ಪರದೈವ. ಶಿವನಿಗಿಂತ ಮೇಲೆನಿಸಿದವನಿಲ್ಲ" ಎಂದು ಹೇಳುವ ಅಜ್ಞಾನವೆಂಬ ಕತ್ತಲು ಕವಿದ ಈ ಭುವಿಯ ಜನರ ಅರಿವಿಲ್ಲವೆಂಬ ಕತ್ತಲನ್ನು ಅನ್ಯಾದೃಶವಾದ ತಮ್ಮ ಕರುಣೆಯ ಶಕ್ತಿಯಿಂದ ನಿವಾರಿಸಿ, "ಎಲ್ಲ ಜೀವರಿಗೂ ಶ್ರೀ ರಂಗನಾಥನೇ ಸ್ವಾಮಿ"ಎಂಬ ಸಾರವಾದ ವಿಷಯವನ್ನು ನಮ್ಮ ರಾಮಾನುಜರು ಬೆಳಗಿದರು. ಅದೆಂತಹ ಮಹಾ ಪುಣ್ಯಶಾಲಿಗಳು ಅವರು !

आहुः पाशुपताः प्रमाण मवनौ शैवागमः केवलं
हीत्यज्ञानतमो जगत्परिवृतं प्रोत्सार्य रामानुजः ।
कारुण्यप्रभया बुबोध च पति श्श्रीरङ्गराडात्मनां
सर्वेषा मिति तत्वसारविषयं स्वामी महापुण्यवान् ॥ ९१

ಮೂಲ : ಪುಣ್ಣಿಯನೋನ್ಬು ಪುರಿನ್ದುಮಿಲೇ‌ನ್, ಅಡಿಪೋತ್ತಿಶೆಯ್ಯುಂ
ನುಣ್ಣರುಂಕೇಳ್ವಿನುವನ್ರುಮಿಲೇ‌ನ್, ಶೆಮ್ಮೈನೂಲ್‌ಪುಲವರ್ಕ್ಕ್
ಎಣ್ಣರುಂಕೀರ್ತಿಯಿರಾಮಾನುಶ ! ಇನ್ರ್ನೀ ಪುಹುಂದ್, ಎನ್
ಕಣ್ಣುಳ್ಳುಂ ನೆಂಜುಳ್ಳುಂ, ನಿನ್ರವಿಕ್ಕಾರಣಂಕಟ್ಟುರೈಯೇ ॥ 92

ಭಾವ :- ಶಾಸ್ತ್ರಂಗಳೈಕ್ಕತ್ತ್ ತಹುದಿಯ ಕವಿತ್ತೈಹಳೈಕ್ಕಟ್ಟ ಶೊಲ್ಲವಲ್ಲವರಾಲುಂ, ಅಳಕ್ಕಮುಡಿಯಾದ ಕೀರ್ತಿಯುಡೈಯ ರಾಮಾನುಶರೇ ! ಪುಣ್ಯವಂತರುಂ ಕರ್ಮವೊನ್ರುಂ ನಾನ್ ಶೆಯ್ಯವಿಲ್ಲೈ. ದೇವರೀರ್ ತಿರುವಡಿಹಳೈ ಆಶ್ರಯಿಕ್ಕ ಉರುಪ್ಪಾಹವುಂ, ಸೂಕ್ಷ್ಮಮಾಯ್ ಇರುಕ್ಕುಂ ಯಾದೊನ್ರೈಯುಂ ಕೇಳ್ಕ್ಕವಿಲ್ಲೈಯನ್ರಿಕ್ಕೇ ಕೇಳ್ಕ ಅಪೇಕ್ಷಿಕ್ಕವುಂ ಇಲ್ಲೈ. ಇಪ್ಪಡಿಯಿರುಂದಾಲುಂ, ಎನ್ ಕಣ್ಣಿನುಳ್ಳುಂ, ಮನತ್ತುಳ್ಳುಂ ಪುಹುಂದ್‌ನಿನ್ರದರ್ಕ್ಕ್ ಕಾರಣಮೆನ್ರ ? ಸಾದಿತ್ತರುಳವೇಣುಂ

ಅರ್ಥ :- ಶೆಮ್ಮೈ-ನೂಲ್ = ಸಚ್ಛಾಸ್ತ್ರಗಳನ್ನು, ಪುಲವರ್ಕ್ಕ್ = (ಬಲ್ಲ) ವಿದ್ವಾಂಸರಿಗೂ, ಎಣ್ಣರುಂ = ಅಳೆಯಲಾಗದ, ಕೀರ್ತಿ = ಯಶಸ್ಸುಳ್ಳ, ಇರಾಮಾನುಶ = ರಾಮಾನುಜರೇ ! ಪುಣ್ಣಿಯಂ = ಪುಣ್ಯ ಕೊಡುವ, ನೋನ್ಬು = ವ್ರತವನ್ನು ಪುರಿಂದುಮಿಲೇ‌ನ್ = (ನಾನು) ಆಚರಿಸಲಿಲ್ಲ . ಅಡಿ-ಪೋತ್ತಿ-ಶೆಯ್ಯುಂ = ನಿಮ್ಮ ಪಾದಗಳನ್ನು ಹೊಂದಲು ಮಾಡಬೇಕಾದುದು, ನುಣ್-ಅರು-ಕೇಳ್ವಿ = ಸೂಕ್ಷ್ಮವಾದುದಾವುದನ್ನೂ ಕೇಳುವುದನ್ನು, ನುವನ್ರುಮಿಲೇ‌ನ್ = (ಮಾಡಬೇಕೆಂದು ಬಾಯಿಂದ) ಹೇಳಲೂ ಇಲ್ಲ. (ಹೀಗಿರಲು) ಇನ್ರ್ = ಇನ್ನು , ಎನ್ = ನನ್ನ , ಕಣ್ಣುಳ್ಳುಂ = ಕಣ್ಣಿನಲ್ಲೂ , ನೆಂಜುಳ್ಳುಂ = ಮನದಲ್ಲೂ , ಪುಹುಂದ್ = ಹೊಕ್ಕು , ನಿನ್ರ = ಇರುವ, ಇ-ಕ್ಕಾರಣಂ = ಈ ಕಾರಣವನ್ನು , ಕಟ್ಟುರೈ = (ನೀವು) ಹೇಳಬೇಕು.

ತಾತ್ಪರ್ಯ :- ಒಳ್ಳೆಯ ಶಾಸ್ತ್ರಗಳನ್ನು ಕಲಿತು, ವಿದ್ವಾಂಸರೆನಿಸಿದವರಿಗೂ ವರ್ಣಿಸಲು ನಿಲುಕದ ಮಹಿಮೆಯುಳ್ಳ ರಾಮಾನುಜರೆ ! ನಾನು ಪುಣ್ಯಕರವಾದುದಾವುದನ್ನೂ ಮಾಡಲಿಲ್ಲ. ನಿಮ್ಮಡಿಗಳನ್ನು ಆಶ್ರಯಿಸಲು, ಅತಿ ಸೂಕ್ಷ್ಮವಾಗಿ ಕೇಳಬೇಕಾದುದನ್ನೂ ಕೇಳಲಿಲ್ಲ. ಕೇಳಬೇಕಾಗಿತ್ತೆಂದು ಬಯಸಲೂ ಇಲ್ಲ . ಹೀಗಿದ್ದರೂ ನನ್ನ ಕಣ್ಣಿಗೆ ಕಾಣಿಸಿಕೊಂಡು ಮನದಲ್ಲಿ ಹೊಕ್ಕಿರಲು ಕಾರಣವೇನಿರಬಹುದು ? ನೀವೇ ಹೇಳಬೇಕು.

सच्छास्त्राभ्यासिविद्जनकृतकवितावर्ण्यकीर्ते ! मनीषिन् !
श्रीमन् ! रामानुजार्य ! व्रतमचर महं पुण्यदं नापि गुण्यम् ।
युष्मत्पादाश्रयार्थं वचनमश्रृणवं नैव नैच्छं कदाचित्
सत्येवं मेऽक्षिचित्तं न्यविश इह मुदा ब्रूहि किं तन्निदानम् ।। ९२

ಮೂಲ : ಕಟ್ಟಪ್ಪೊರುಳೈ ಮಱೈಪ್ಪೊರುಳೆನ್ರು, ಕಯವರ್ ಶೊಲ್ಲುಂ
ಪೆಟ್ಟೈ ಕೆಡುಕ್ಕುಂ ಪಿರಾನಲ್ಲನೇ, ಎನ್ ಪೆರುವಿನೈಯೈ
ಕಿಟ್ಟಿಕ್ಕಿಳಂಗೊಡು ತನ್ನರುಳೆನ್ನು ಮೊಳ್ ವಾಳುರುವಿ
ವೆಟ್ಟಿಕ್ಕಳೈಂದ, ಇರಾಮಾನುಶನೆನ್ನುಂ ಮೆಯ್ ತ್ತವನೇ ॥ 93

ಭಾವ :- ಅಡಿಯೇನೈ ಸಮೀಪಿತ್ತು, ತಮ್ಮರುಳಾಹಿರ ಒಳಿಯುಂ ಕತ್ತಿಯೈ ಉಱೈಯಿಲಿರುಂದ್ ವೆಳಿಯಿಲ್ ಎಡುತ್ತು, ಅದಿನಾಲೇ ಎನ್ ಪೆರುಂವಿನೈಹಳೈ ವೇರೋಡೇ ಅರುತ್ತು, ಒಳಿತ್ತ ರಾಮಾನುಶರ್ ಮೂಢರಾನ ಕುದೃಷ್ಟಿಹಳ್ ಪೇಶುಂ ''ನಾಂ ಶೊಲ್ಲುಂ ವೇದಂಗಳಿನ್ ಅರ್ಥಮೇ ಉಣ್ಮೈಯಾಯಿರಕ್ಕುಂ'' ಎನ್ರು ವಂಚಿತ್ತ ಶೊಲ್ಹಳೈ ಖಂಡಿತ್ತು ಜಯಿತ್ತು, ಪರಮೋಪಕಾರಕರಾನ ಮಹಾಮಹಿಮರಲ್ಲವಾ !

ಅರ್ಥ :- ಕಿಟ್ಟ = (ನನ್ನನ್ನು) ಸಮೀಪಿಸಿ, ತನ್-ಅರುಳ್-ಎನ್ನುಂ = ತನ್ನ ದಯೆಯೆಂಬ, ಒಳ್ = ಹೊಳೆಯುವ (ಹರಿತವಾದ) ವಾಳ್ = ಕತ್ತಿಯನ್ನು, ಉರುವಿ ( ಸಂಕಲ್ಪವೆಂಬ ಒರೆಯಿಂದ) ಹೊರಕ್ಕೆಳೆದು, (ಅದರಿಂದ) ಎನ್-ಪೆರು-ವಿನೈಯೈ = ನನ್ನ ಮಹಾಪಾಪಗಳನ್ನು, ಕಿಳಂಗೊಡು = ಬೇರುಸಹಿತ, ವೆಟ್ಟಿ = ತರಿದು, ಕಳೈಂದ = ನಾಶಮಾಡಿದ, ಇರಾಮಾನುಶನ್-ಎನ್ನುಂ = ರಾಮಾನುಜರೆಂಬ, ಮೆಯ್-ತವನ್ = ಮಹಾತಪಸ್ವಿ. (ಎಂತಹವರೆಂದರೆ) ಕಯವರ್ = ದುಷ್ಟರಾದ ಕುದೃಷ್ಟಿಗಳು, ಕಟ್ಟಪ್ಪೊರುಳೈ = ತಪ್ಪಾದರ್ಥಗಳನ್ನು, ಮಱೈ-ಪೊರುಳ್-ಎನ್ರು = ವೇದಗಳ ಅರ್ಥಗಳೆಂದು, ಶೊಲ್ಲುಂ = ಹೇಳುವ, ಪೆಟ್ಟೈ = ವಂಚನೆಯ ಮಾತುಗಳನ್ನು, ಕೆಡುಕ್ಕುಂ = ಖಂಡಿಸಿ, ನಾಶಮಾಡುವ ಪಿರಾನಲ್ಲನೆ ? = ಪರಮೋಪಕಾರನಲ್ಲವೇ ?

ತಾತ್ಪರ್ಯ :- ನನ್ನ ಬಳಿ ಬಂದು, ತಮ್ಮ ದಯೆಯೆಂಬ ಹರಿತವಾಗಿ ಹೊಳೆಯುವ ಕತ್ತಿಯನ್ನು ಸಂಕಲ್ಪವೆಂಬ ಒರೆಯಿಂದೆಳೆದು ನನ್ನ ಮಹಾ ಪಾಪಗಳನ್ನೆಲ್ಲಾ ಬೇರುಸಹಿತ ಕತ್ತರಿಸಿ, ನಾಶಮಾಡಿದ ಮಹಾ ತಪಸ್ವಿಗಳು ನಮ್ಮ ರಾಮಾನುಜರು. ದುರುಳರಾದ ಕುದೃಷ್ಟಿಗಳು ''ತಾವು ಹೇಳುವುದು ಅಪಾರ್ಥವಾದರೂ, ಅದೇ ಸರಿಯಾದರ್ಥ'' ಎಂದು ಆಡುತ್ತಿದ್ದ ವಂಚಿಸುವ ಮಾತುಗಳನ್ನು ಖಂಡಿಸಿ, ಅವರನ್ನು ಜಯಿಸಿದರು. ಮಹೋಪಕಾರ ಮಾಡಿದ ಪ್ರಭಾವಶಾಲಿಗಳಲ್ಲವೆ ! ಅವರು.

मत्सामीप्य मुपेत्य चात्मकरुणातीक्ष्णासिना कोशत-
स्त्वाकृष्टेन मदीयपापनिवहं रामानुज स्संयमी ।
निर्मूलं विददार वञ्चकजनान् 'स्वोक्ता अपार्था अपि
श्रुत्यर्था' इति वादिनो व्यजयत ख्यातोपकारी ननु ॥ ९३

ಮೂಲ : ತವಂದರುಂ ಶೆಲ್ವಂ ತಹವುಂತರುಂ,ಶರಿಯಾಪ್ಪಿರವಿ
ಪ್ಪವಂತರುಂ ತೀವಿನ್ನೈ ಪಾತ್ತಿತ್ತರುಂ, ಪರಂದಾಮಮೆನ್ನುಂ
ತಿವಂದರುಂ ತೀದಿಲಿರಾಮಾನುಶರ್ ತನ್ನೈಚ್ಚಾರ್‌ನ್ದವರ್‌ಹಳ್ಕ್
ಉವನ್ದರುನ್ದೇ, ಅವರ್ಶೀರನ್ರಿಯಾನೆನ್ರುಮುಳ್ಮಹಿಳ್‌ನ್ದೇ ॥ 94

ಭಾವ :- ಕುತ್ತಮತ್ತ ಶ್ರೀ ರಾಮಾನುಶರ್ ತಮ್ಮೈ ಆಶ್ರಯಿತ್ತವರ್ಹ್ಳುಕ್ಕ್ ನ್ಯಾಸವಿದ್ಯೆಯೆನ್ನುಂ ತಪೋನಿಷ್ಠೆಯ್ಯೈ ಸಾದಿತ್ತರುಳ್ವರ್. ತಮ್ಮರುಳ್ ಎನ್ನುಂ ಶೆಲ್ವತ್ತೈ ಕೊಡುಪ್ಪರ್. ಪೋಕ್ಕಡಿಕ್ಕಮುಡಿಯಾದ ಪಿರಪ್ಪ್ ಮುದಲಿಯೆವೈಹಳ್ಳೈ ಉಂಡಾಕ್ಕುಂ ಕೊಡಿಯವಿನ್ನೈಹಳ್ಳೈ ನೀಕ್ಕಿವೈಪ್ಪರ್. ಪರಮಪದಂ ಎನ್ನುಂ ವಾನುಲಹತ್ತೈ ತರುವರ್. ಆನ್ ಪಿನ್ಬ್ ಯ್ಯಾ ಅವರ್ ತಿರುಗ್ಗುಣಂಗಳ್ಳೈ ತ್ತವಿರಮತ್ತೊನ್ರೈಯುಂ ವಿರುಂಬಿ ಅನುಬವಿಯೇನ್.

ಅರ್ಥ :- ತೀದ್-ಇಲ್-ಇರಾಮಾನುಶರ್= ಯಾವವಿಧ ದೋಷವೂ ಇಲ್ಲದ ರಾಮಾನುಜರು, ಶಾರ್‌ನ್ದವರ್ಹ್ಳುಕ್ = ತಮ್ಮನ್ನಾಶ್ರಯಿಸಿದವರಿಗೆ, ತವಂ = ಶರಣಾಗತಿ ನಿಷ್ಠೆಯನ್ನು, ತರುಂ = ಕರುಣಿಸುವರು, ತಹವುಂ-ಶೆಲ್ವಂ = ತಮ್ಮ ಕರುಣೆಯೆಂಬ ಸಿರಿಯನ್ನು, ತರುಂ = ಕೊಡುವರು. ಶರಿಯಾ = ನೀಗಲಾಗದ, ಪಿರವಿ = ಜನ್ಮ, ಭವಂ = ಸಂಸಾರವನ್ನು, ತರುಂ = ಕೊಡುವ, ತೀವಿನ್ನೈ = ಉಗ್ರಕರ್ಮವನ್ನು, ಪಾತ್ತಿ-ತರುಂ = ಹೋಗಲಾಡಿಸುವರು. ಪರಂ-ಧಾಮಂ-ಎನ್ನುಂ = ಶ್ರೀವೈಕುಂಠವೆಂಬ, ದಿವಂ = ದೇವಲೋಕ ಸಂಪತ್ತನ್ನು, ತರುಂ = ಕೊಡುವರು. (ಆದಮೇಲೆ) ಯ್ಯಾ = ನಾನು, ಅವರ್ = ಅವರ, ಶೀರ್-ಅನ್ರಿ = ಕಲ್ಯಾಣಗುಣಗಳ ಹೊರತು, ಒನ್ರುಂ = ಮತ್ತಾವುದನ್ನೂ, ಉಳ್‌ಮಹಿಳ್‌ನ್ದು = ಮನಸ್ಸಂತೋಷದಿಂದ, ಉವಂದ್-ಅರುಂದೇನ್ = ಆದರಿಸಿ ಅನುಭವಿಸುವುದಿಲ್ಲ.

ತಾತ್ಪರ್ಯ :- ನಿರ್ಮಲರಾದ ರಾಮಾನುಜರು ತಮ್ಮನ್ನಾಶ್ರಯಿಸಿದವರಿಗೆ ಶರಣಾಗತಿಯೆಂಬ ತಪಸ್ಸಿನ ನಿಷ್ಠೆಯನ್ನುಪದೇಶಿಸುವರು. ತಮ್ಮ ದಯೆಯ ಸಿರಿಯನ್ನೀಯುವರು. ನೀಗಲಾರದಂತಿರುವ ಜನ್ಮಾದಿ ಸಂಸಾರವನ್ನೂ ಕೊಡುವ ಕಡುತರ ಪಾಪಗಳನ್ನೆಲ್ಲಾ ಹೋಗಲಾಡಿಸಿ ರಕ್ಷಿಪರು. ಮುಕ್ತಿಯೆಂಬ ಪರಿಪೂರ್ಣ ಬ್ರಹ್ಮಾನಂದವನ್ನು ಬೀರುವ ಮುಕ್ತರ ಲೋಕವನ್ನು ಕರುಣಿಪರು. ಹೀಗಾದಮೇಲೆ ನಾನು ಆ ಮಹಿಮರ ದಿವ್ಯ ಗುಣಗಳನ್ನು ಬಿಟ್ಟು ಮತ್ತಾವುದನ್ನೂ ಮನದಲ್ಲಿ ಅನುಭವಿಸಿ ಆನಂದಪಡುವುದಿಲ್ಲ.

व्येना रामानुजार्यः प्रपदनतपस स्स्वश्रितेभ्यः प्रदत्ते
निष्ठा मैश्वर्य मुर्व्यां वितरति निजकारुण्य मुत्पत्तिभावं ।
अव्यावर्त्यं ददानान्यपि कलिदुरितान्युजिहास्यन् समूलं
मुक्तेर्दाता हि चित्ते तदनघसुगुणेभ्योऽन्य दिच्छामि नैव ॥ ९४

ಮೂಲ : ಉಣ್ಣಿನ್ರುಯಿರ್‌ಹಳ್ಕುತ್ತನವೇ ಶೆಯ್ದ್‌ ಅವರ್ಕ್ಕುಯ್ಯವೆ
ಪಣ್ಣುಂಪರನುಂ ಪರಿವಿಲನಾಮ್ಪಡಿ, ಪಲ್ಲುಯಿರ್ಕ್ಕುಂ
ವಿಣ್ಣಿತಲ್ಲೈನಿನ್ರ್‌ವೀಡಳಿಪ್ಪಾರ್ ಎಮ್ಮಿರಾಮಾನುಶರ್
ಮಣ್ಣಿತಲತ್ತುದಿತ್ತ್‌ ಮರ್ರೈನಾಲುಂವಳರ್ತನನೇ ॥ 95

ಭಾವ :- '' ಸಕಲ ಜೀವರ್‌ಹಳುಕ್ಕುಂ ಅಂತರ್ಯಾಮಿಯಾಯ್, ಹಿತತ್ತೈಯೇ ಶೆಯ್ದ್‌ ಹೊಂಡು, ಉಜ್ಜೀವಿಪ್ಪಿತ್ತ್‌ಕ್ಕೊಂಡಿರುಕ್ಕುಂ ಎಂಬೆರುಮಾನುಂ ತನ್ನೈಪ್ಪೋಲ್ ಅಡಿಯಾರ್‌ಹಳಿಲ್ ವ್ಯಾಮೋಹಮುತ್ತರ್ವ ಅಲ್ಲರ್, ಎನ್ನುಂಪಡಿಯಾಯ್ ನಮ್ಮ ಸ್ವಾಮಿ ರಾಮಾನುಶರ್ ಪರಮಪದತ್ತೈ ಕೊಡುಪ್ಪದರ್ಕ್ಕಾಹ, ಪರಮಪದತ್ತಿಲ್ ನಿನ್ರುಂ ವನ್ದ್‌, ಅನೈವರುಕ್ಕುಂ ಉಜ್ಜೀವನ ಹೇತುವಾನ ನಾಲು ವೇದಂಗಳ್ಳೈಯುಂ, ವೇದಾರ್ಥಂಗಳ್ಳೈಯುಂ ಯಾದೊರುಕುರ್ರೈವುಂ ತಟ್ಟಾದಿರುಕ್ಕುಂಬಡಿ ಶೆಯ್ದರುಳಿನಾರ್.

ಅರ್ಥ:- ಉಯಿರ್‌ಹಳುಕ್ಕ್‌ = ಆತ್ಮಗಳ, ಉಳ್-ನಿನ್ರ್‌ = ಒಳಗಿದ್ದು, ಉತ್ತನವೇ = ಹಿತವನ್ನು, ಶೆಯ್ದ್‌ = ಮಾಡಿ, ಉಯ್ಯವೇ = ಉಜ್ಜೀವನವನ್ನೇ, ಪಣ್ಣುಂ = ಮಾಡುವ, ಪರನುಂ = ಭಗವಂತನೂ, ಪರಿವ್ = (ತನ್ನಂತೆ) ಪ್ರೀತಿಯುಳ್ಳವನೂ, ಇಲರ್ = ಆಗಿರುವುದಿಲ್ಲ. ಆಂ-ಪಡಿ = ಎನ್ನುವಂತೆ, ಪಲ್-ಉಯಿರ್ಕ್ಕುಂ = ಎಲ್ಲ ಆತ್ಮಗಳಿಗೂ, ವೀಡ್ = ಮೋಕ್ಷವನ್ನು. ಅಳಿಪ್ಪಾರ್ = ಕರುಣಿಸುವುದಕ್ಕಾಗಿ, ಎಂ-ಇರಾಮಾನುಶರ್ = ಸ್ವಾಮಿ, ರಾಮಾನುಜರು, ವಿಣ್ಣಿ-ತಲ್ಲೈ-ನಿನ್ರ್‌ = ವೈಕುಂಠದಿಂದ, ಮಣ್ಣಿನ್ತಲತ್ತ್‌ = ಭೂಲೋಕದಲ್ಲಿ, ಉದಿತ್ತ್‌ = ಅವತರಿಸಿ, ಉಯ್-ಮರ್ರೈ-ನಾಲುಂ = ಎಲ್ಲರೂ ಬಾಳಿ ಬದುಕಲು ಕಾರಣವಾದ ನಾಲ್ಕು ವೇದಗಳನ್ನೂ, ವಳರ್ತನರ್ = ಯಾವ ಕೊರತೆಯೂ ಇಲ್ಲದಂತೆ ಬೆಳೆಸಿದರು.

ತಾತ್ಪರ್ಯ :- ಎಲ್ಲ ಆತ್ಮಗಳಿಗೂ ಅಂತರ್ಯಾಮಿಯಾಗಿ, ಹಿತವಾದುದನ್ನೇ ಮಾಡುತ್ತಾ, ಉದ್ಧಾರಮಾಡುವ ಭಗವಂತನೂ ಸಹ ತಮ್ಮಂತೆ ಪ್ರೀತನಾಗಿಲ್ಲವೆನ್ನುವಂತೆ ಸಮಸ್ತರಿಗೂ ಮುಕ್ತಿ ದೊರಕಿಸಲು, ನಮ್ಮ ಸ್ವಾಮಿ ರಾಮಾನುಜರು ಬಂದು ಎಲ್ಲರೂ ಉಜ್ಜೀವನಗೊಳ್ಳಲು ಮುಖ್ಯಕಾರಣವಾದ ನಾಲ್ಕು ವೇದಗಳನ್ನೂ ಅದರರ್ಥಗಳನ್ನೂ ಯಾವ ಕೊರತೆಯೂ ಬಾರದಂತೆ ರಕ್ಷಿಸಿದರು. ವೇದ ವೇದಾಂತ ಪ್ರವರ್ತಕರಾದರು.

अन्तर्याम्य खिलात्मनां स भगवान्सर्वेश आत्मेप्सितं
कुर्वाण श्च समुज्जिजीवयिषु रप्यात्मेव नेति स्वयम् ।
सर्वेभ्यः परमं पदं वितरितुं स्वामीह रामानुजः
प्रादुर्भूय समस्तकारणचतुर्वेदान् ररक्षा नघान् ॥ ९५

ಮೂಲ : ವಳರುಂಪಿಣಿಹೊಂಡವಲ್ವಿನ್ಯೆಯಾಲ್, ಮಿಕ್ಕನಲ್ವಿನ್ಯೆಯಿಲ್
ಕಿಳರುಂತುಣಿವು ಕಿಡ್ಯೆತ್ತರಿಯಾದ್, ಮುಡ್ಯೆತ್ತಲ್ಯೆಯೂರ್
ತಳರುಮಳವುಂದರಿತ್ತುಂ ವಿಳುನ್ದುಂ ತನಿತಿರಿವೇರ್ಕ್ಕು
ಉಳರೆಮ್ಮಿರೈವರ್, ಇರಾಮಾನುಶರ್ ತನ್ನೈಯುತ್ತವರೇ ॥ 96

ಭಾವ :- ಮೇನ್ಮೇಲೇವಳರುಂ ದುಃಖಂಗಳ್ಯೆಯೇ ಉಂಡಾಕ್ಕವಲ್ಲ ಕೊಡಿಯದಾನ ಕರ್ಮಂಗಳಾಲೇ ಶಿರಂದ ಧರ್ಮಮಾನ ಶರಣಾಗತಿಯಿಲ್ ''ಮಹಾವಿಶ್ವಾಸಂ'' ಕಿಡ್ಯೆಕ್ಕಾದದನಾಲ್ ಕೆಡುದಿಯನಾತ್ತಂಗಳುಕ್ಕ್ ಇಡಮಾನ ಉಡಂಬು ಕೆಟ್ಟುಪ್ಪೋಯ್ ಕುಲ್ಯೆಯುಮಳವುಂ, ಒರತಡವ್ಯೆ ಧರಿತ್ತುಂ, ಮತ್ತೊರುಪೋದು ವಿಷಯಂಗಳಿಲೇ ವಿಳುಂದುಂ, ತುಣ್ಯೆಯತ್ತ್‌ತಿರಿಂದ್‌ಕ್ಕೊಂಡಿರುಕ್ಕಿರ ಎನುಕ್ಕ್ ಸ್ವಾಮಿಹಳ್, ಆರೆನ್ರಾಲ್, ನಮ್ಮ ರಾಮಾನುಶರ್ಯೆ ಆಶ್ರಯಿತ್ತವರ್ಗಳ್‌ತಾರ್.

ಅರ್ಥ :- ವಳರುಂ = ಹೆಚ್ಚುವ, ಪಿಣಿ = ದುಃಖಗಳನ್ನು, ಕೊಂಡ = ಹೊಂದಿರುವ (ಉಂಟುಮಾಡಬಲ್ಲ) ವಲ್-ವಿನ್ಯೆಯಾಲ್ = ಪ್ರಬಲವಾದ ಕರ್ಮದಿಂದ, ಮಿಕ್ಕ = ಶ್ರೇಷ್ಠವಾದ , ನಲ್-ವಿನ್ಯೆಯಲ್ = ಸುಕೃತದಲ್ಲಿ (ಶರಣಾಗತಿಧರ್ಮದಲ್ಲಿ) ಕಿಳರುಂ = ಅತ್ಯಧಿಕವಾದ, ತುಣಿವ್ = ನಂಬಿಕೆಯು (ಮಹಾವಿಶ್ವಾಸವು) ಕಿಡ್ಯೆತ್ತರಿಯಾದ್ = ದೊರಕದೆ ಇದ್ದುದರಿಂದ, ಮುಡ್ಯೆತ್ತಲ್ಯೆ = ದುರ್ಗಂಧಕ್ಕೆ ನೆಲೆಯಾದ, ಊರ್ = ಶರೀರವು, ತಳರುಂ-ಅಳವುಂ = ಕೆಟ್ಟು ಹಾಳಾಗುವತನಕ, ದರಿತ್ತುಂ = ಧರಿಸಿಯೂ (ಆಶ್ವಾಸನೆಗೊಂಡೂ) ವಿಳುಂದುಂ = (ವಿಷಯಸುಖದಲ್ಲೆ) ಬಿದ್ದೂ, ತನಿ = ಒಬ್ಬನೇ (ಸಹಾಯಕರಿಲ್ಲದೆ) ತಿರಿ-ವೇರ್ಕ್ = ತಿರುಗುತ್ತಿರುವ ನನಗೆ, ಇರೈವರ್ = ಸ್ವಾಮಿಗಳು, (ಯಾರೆಂದರೆ) ಎಂ-ರಾಮಾನುಶರ್-ತನ್ನೈ = ಸ್ವಾಮಿ ರಾಮಾನುಜರನ್ನು, ಉತ್ತವರ್ = ಆಶ್ರಯಿಸಿದ್ದ (ಮಹಾತ್ಮರು) ಉಳರ್ = ಆಗುವರು.

ತಾತ್ಪರ್ಯ :- ಮೇಲೆಮೇಲೆ ಹೆಚ್ಚುತ್ತಲೇ ಇರುವ ದುಃಖಗಳನ್ನುಂಟುಮಾಡುವ ದುಷ್ಕರ್ಮಗಳ ಕಾರಣದಿಂದ ಅತ್ಯುತ್ತಮವಾದ ಶರಣಾಗತಿಯಲ್ಲಿ ದೃಢವಾದ ನಂಬಿಕೆ ದೊರಕಲಿಲ್ಲ. ಆದುದರಿಂದಲೇ ದುರ್ಗಂಧಕ್ಕೆನೆಲೆಯೆನಿಸಿದ ಈ ಶರೀರರವು ನಾರಿ, ನಶಿಸುವವರೆಗೂ ಕೆಲವುವೇಳೆ ಧರಿಸಿಯೂ, (ಆಶ್ವಾಸನೆಗೊಂಡೂ) ಮತ್ತೆ ಕೆಲವುವೇಳೆ ಸುಖಾಭಾಸವಾದ ವಿಷಯದಲ್ಲೇ ತೊಳಲುತ್ತಲೂ, ಅಸಹಾಯನಾಗಿ, ಅಲೆಯುವ ನನಗೆ ರಕ್ಷಕರು (ಸ್ವಾಮಿಗಳು) ಆರೆಂದರೆ ನಮ್ಮ ರಾಮಾನುಜರನ್ನು ಆಶ್ರಯಿಸಿರುವ ಮಹನೀಯರೇ. ಅಂತಹವರು ವಿನಹ ಮತ್ತಾರೂ ಇಲ್ಲ.

शश्वद्वर्धिष्णुदुःखोद्भवकृदघवशालब्धनिक्षेपविद्या-
मुख्याङ्गादभ्रविस्रम्भणत इह च दुर्गन्धगेह स्स्वदेहः ।
याव न्नाशोन्मुख स्स्यात् तदवधि धरत श्चेन्द्रियास्वादगृध्नोः
नाथं मे रक्षितार श्शरण मुपागता स्सन्ति रामानुजार्यं ॥ ९६

ಮೂಲ : ತನ್ನೈಯುತ್ತಾಳ್‌ಚೆಯ್ಯುಂ ತನ್ಮೈಯಿನೋರ್, ಮನ್ನುತಾಮರೈತ್ತಾಳ್
ತನ್ನೈಯುತ್ತಾಳ್ಜೆಯ್ಯವೆನ್ನೈಯುತ್ತಾನಿನ್ರು, ತನ್‌ತಹವಾಲ್
ತನ್ನೈಯುತ್ತಾರನ್ರಿತ್ತನ್ನೈಯತ್ತಾರಿಲ್ಲೈಯೆನ್ರರಿಂದ್
ತನ್ನೈಯುತ್ತಾರೈ, ಇಮಾರಾನುರ್ಶ ಗುಣಂ ಶಾತ್ತಿಡುಮೆ ॥ 97

ಭಾವ :- ಶ್ರೀರಾಮಾನುಶರ್ "ತಮ್ಮೈಪ್ಪತ್ತಿನವರ್ ಇರುಪ್ಪಾರೇ ಒಳಿಯ ತಮ್ಮೈಪತ್ತಿಯಿರುಪ್ಪವರ್ಗಳುಡೈಯ ಗುಣಂಗಳೈ ಪುಹಳುಂ ತನ್ಮೆಯುಳ್ಳ ತಮ್ಮಡಿಯವರ್ಗಳ್ ಇಲ್ಲೈಯೇ ಎನ್ರು" ತಿರುವುಳ್ಳಂ ಪತ್ತಿ ಇನ್ರು ತಮ್ಮರುಳಾಲೇ ತಮ್ಮೈ ಅಡೈಂದ್ ಕೈಂಕರ್ಯಪರರಾಯ್ ವಿಳಂಗುಮವರುಡೈಯ ಒನ್ರುಕ್ಕೊನ್ರು ಅವ್ವೈಂದಿರುಕ್ಕುಂ ತಿರುವಡಿಮಲ್ಗರಳೈ ಆಶ್ರಯಿತ್ತ್ ಅಡಿಮ್ಮೈಶೈಯ್ಯುಂಪಡಿ ವೈತ್ತರುಳಿನಾರ್.

ಅರ್ಥ :- ಇರಾಮಾನುರ್ಶ = ರಾಮಾನುಜರು, ತನ್ನೈ = ತಮ್ಮನ್ನು, ಉತ್ತಾರ್ = ಆಶ್ರಯಿಸಿದವರು (ಇರುವರೇ) ಅನ್ರಿ = ಹೊರತು, ತನ್ನೈ-ಉತ್ತಾರೈ = ತಮ್ಮನ್ನು ಆಶ್ರಯಿಸಿದವರ, ಗುಣಂ = ಗುಣಗಳನ್ನು, ಶಾತ್ತ್-ಇಡುಂ = ಪ್ರಕಾಶ ಪಡಿಸುವ (ಹೊಗಳುವ) ತನ್ಮೈ = ಸ್ವಭಾವವನ್ನು, ಉತ್ತಾರ್ = ಹೊಂದಿರುವವರು, ಇಲ್ಲೈ-ಎನ್ರು = ಇಲ್ಲವಲ್ಲಾ ಎಂದು, ಅರಿಂದ್ = ಅರಿತು, ಎನ್ನೈ = ನನ್ನನ್ನು, ಇನ್ರು = ಈದಿನ, ತನ್-ತಹವಾಲ್ = ತಮ್ಮದಯೆಯಿಂದ, (ಏನುಮಾಡಿದರೆಂದರೆ) ತನ್ನೈ = ತಮ್ಮನ್ನು, ಉತ್ತ್ = ಆಶ್ರಯಿಸಿ, ಆಳ್-ಶೆಯ್ಯುಂ = ಸೇವೆಮಾಡುವ, ತನ್ಮೈಯಿನೋರ್ = ಸ್ವಭಾವವುಳ್ಳಭಕ್ತರ, ಮನ್ರು = ಒಂದಕ್ಕೊಂದು ಸೇರಿ ಒಪ್ಪುವ, ತಾಮರೈ-ತಾಳ್‌ತನ್ನೈ = ಅಡಿದಾವರೆಗಳನ್ನು, ಉತ್ತ್ = ಪಡೆದು, ಆಳ್-ಶೆಯ್ಯ = ಸೇವೆಮಾಡುವಂತೆ, ಉತ್ತಾನ್ = ಮಾಡಿ ಕರುಣಿಸಿದರು.

ತಾತ್ಪರ್ಯ :- ಶ್ರೀ ರಾಮಾನುಜರು "ತಮ್ಮ ವಿಷಯದಲ್ಲಿ ಭಕ್ತಿಯುಳ್ಳವರು ಇರುವರು. ಅದು ಹೊರತು ತಮ್ಮ ಭಕ್ತರ ವಿಷಯದಲ್ಲಿಯೂ ಭಕ್ತಿಯಿಟ್ಟು, ಅವರ ಭವ್ಯಗುಣಗಳನ್ನು ಕೊಂಡಾಡುವವರು ಯಾರೂ ಇಲ್ಲವಲ್ಲಾ" ಎಂದು ಚಿಂತಿಸಿ, ನನ್ನನ್ನು "ಇಂದು ತಮ್ಮದೇ ದಯೆಯಿಂದ ತಮ್ಮನ್ನೇ ಆಶ್ರಯಿಸಿ, ಸೇವೆ ಸಲ್ಲಿಸುವ ಭಕ್ತರ, ಬಲು ಚೆನ್ನಾಗಿ ಒಂದಕ್ಕೊಂದು ಒಪ್ಪಿ ಸೊಗಯಿಸುವ ಪಾದಕಮಲಗಳನ್ನು ನಾನು ಆಶ್ರಯಿಸಿ, ಸೇವೆಮಾಡುವಂತಹ ಅವಕಾಶವನ್ನು ಕಲ್ಪಿಸಿ", ಕರುಣಿಸಿರುವರು.

श्रीमान् रामानुजार्य 'स्स्वचरणशरणा स्सन्त्यथो ने तदीया
ये स्तुन्वन्त्यादरेणा नघसुगुणगणं तद्गतं चे' त्यवेक्ष्य ।
मा मद्यात्मानुकम्पाकलितनिजपदाराधकानां श्रितानां
अन्योन्यायत्तपादाम्बुजयुगपरिचर्यैकनिष्ठं ह्यकार्षीत् ॥ ९७

ಮೂಲ : ಇಡುಮೇ ಇನಿಯಶುವರ್ಗತ್ತಿಲ್, ಇನ್ನುಂ ನರಕಿಲಿಟ್ಟ್
ಚ್ಚುಡುಮೇಯವತ್ತೈ ತೊಡರ್‌ತರುತೊಲ್ಲ್ಯೆ, ಶುಳಲ್ ಪಿರಪ್ಪಿಲ್
ನಡುಮೇಯಿನಿ ನಮ್ಮಿರಾಮಾನುಶರ್ ನಮ್ಮೈನಂವಶತ್ತೇ
ವಿಡುಮೇ ಶರಣಮೆನ್ರಾಲ್, ಮನಮೇ ! ನೈಯಲ್ ಮೇವುದರ್ಕೆ ॥ 98

ಭಾವ : ನಮ್ಮ ರಾಮಾನುಜರ್ "ದೇವರೀರ್ ತಿರುವಡಿಹಳೇ ಶರಣಂ" ಎನ್ರು ಉರೈತ್ತೋಮಾನಾಲ್ ಮಿಹವುಂ ಇನಿದಾಹ ತೋನ್ರುಂ ಸ್ವರ್ಗತ್ತಿಲೇಯೇ ಶೇರ್ತ್ತು ವೈಪ್ಪರೊ? ಅಲ್ಲದ್ ನರಕತ್ತಿಲ್ ತಪ್ಪಿಕ್ಕುಂಬಡಿ ಶೆಯ್‌ವರೋ ? ಅಂದ ಸ್ವರ್ಗನರಕಂಗಳ್ ತೊಡರ್‌ನ್ದುಂ ಮುದಲತ್ತದಾಯುಂ, ಶುಳನ್ರುವರುವದಾಯುಮುಳ್ಳ ಪಿರಪ್ಪಿಲೇಯೇ ನಿರುತ್ತಿವಿಡುವರೊ ? ಅಲ್ಲದ್ ಇನಿಮೇಲ್ ನಾಂ ಪೋಹಿರವಳಿಯಿಲ್ ನಿನ್ರುಂ ನಮ್ಮೈ ವಿಡವಿತ್ತ್ವೈಪ್ಪರೋ ? ಇವ್ವಹೈಯಾಹ ಒನ್ರುಂ ಶೈಯ್ಯಾರಾಹೈಯಾಲ್, ಓ ಮನಮೆ ! ಪೇರುಪೆರುವದರ್ಕಾಹ ನೀ ಕರ್‌ೈಯವೇಂಡಾಂ .

ಅರ್ಥ :- ರಾಮಾನುಶರ್ = ನಮ್ಮರಾಮಾನುಜರು, ಶರಣಂ = (ನೀವೇ) ಶರಣು, ಎನ್ರಾಲ್ = ಎಂದರೆ, ಇನಿಯ = ಆನಂದಕೊಡುವ, ಶುವರ್ಗತ್ತಿಲ್ = ಸ್ವರ್ಗದಲ್ಲಿ ಇಡುಮೇ, ಇರಿಸುವರೊ, ಇನ್ನುಂ = ಅಲ್ಲದೆ, ನರಕಿಲ್ = ನರಕದಲ್ಲಿ, ಇಟ್ಟ್ = ಇರಿಸಿ, ಶುಡುಮೇ = ತಪಿಸುವಂತೆಮಾಡುವರೋ ? ಅವತ್ತೈ = ಅವು, ತೊಡರ್ = ಮೊದಲಾಗಿ, ತರು = ಸಿಕ್ಕುವ, ತೊಲ್ಲ್ಯೆ = ಅನಾದಿಯೂ, ಶುಳಲ್ = ತಿರುಗುತ್ತಲೂ (ಇರುವ) ಪಿರಪ್ಪಿಲ್ = ಜನನದಲ್ಲೇ, ನಡುಮೆ = ನಿಲ್ಲಿಸುವರೋ ! ಇನಿ = ಇನ್ನುಮೇಲೆ, ನಮ್ಮೈ = ನಮ್ಮನ್ನು, ನಂ-ವಂಶತ್ತೇ = ನಮ್ಮ ದಾರಿಯಿಂದ, ವಿಡುಮೇ = ಬಿಡಿಸುವರೋ ? (ಹೀಗೆ ಮಾಡಲಾರರಾದ್ದರಿಂದ) ಮನಮೆ = ಮನಸ್ಸೆ ! ಮೇವುದರ್ಕು= ಪಡೆಯಲು, ನೈಯಲ್ = ಕೊರಗಿ ಕುಗ್ಗಬೇಡ.

ತಾತ್ಪರ್ಯ :- ಓ ಮನಸ್ಸೇ ! "ನಮ್ಮ ರಾಮಾನುಜರು, 'ನೀವೇ ಶರಣು' ಎಂದು ಹೇಳಿದವರನ್ನು ಅತ್ಯಾನಂದಕರ ಸ್ವರ್ಗದಲ್ಲೇ ಇರಿಸುವರೋ ? ನರಕದಲ್ಲೇ ತಳ್ಳಿ, ದಹಿಸಿಹೋಗುವಂತೆ ಮಾಡುವರೋ ? ಹಾಗೂ ಇಲ್ಲದೆ ಆ ಸ್ವರ್ಗ ನರಕಗಳು ತೊಡಗಿಕೊಂಡು, ಅನಾದಿಯಾದ ಮತ್ತು ಮತ್ತೆ ಮತ್ತೆ ಅಲ್ಲೇ ಅಲೆಯುವಂತೆ ಮಾಡುವ, ಸಂಸಾರದಲ್ಲೇ ನೆಲೆಗೊಳಿಸುವರೋ ? ಅಥವಾ ಇನ್ನೂ ನಾವಿರುವ ಈ ದಾರಿಯಿಂದಲೆ ಬಿಡಿಸಿಬಿಡುವರೊ?" ಎಂದು ಬಗೆಬಗೆಯಾಗಿ ಚಿಂತಿಸಿ, ಕಾತರಿಸಿ, ಇಳಿದು ಹೋಗಬೇಡ. ನೀನು ಚಿಂತಿಸಿದಂತೆ ಎಂದೂ ಮಾಡರು. ನೆಮ್ಮದಿಯಾಗಿರು.

**श्रीमान् रामानुजो न श्शरण मिति वदेमाथ नाके सुखाग्रे**
**किं वा न्यस्ये द्रुताहो भयभरनिरये तापये द्वाथ ताभ्याम् ।**
**अन्वारब्धे ह्यनादौ धृतविविधजनावेव संस्थापयेद्वा**
**मार्गाद्वात्याजयेन्नस्त्वित इति हृदय ! त्वं न शैथिल्य मेयाः ॥ ९८**

ಮೂಲ : ತರ್ಕಚ್ಚಮಣರುಂ ಶಾಕ್ಕಿಯಪ್ಪೇಯ್‌ಹಳುಂ, ತಾಳ್‌ಶಡೈಯೋಸ್
ಶೊರ್ಕತ್ತಶೋಂಬರುಂಶೂನಿಯವಾದರುಂ, ನಾನ್ಮರೈಯುಂ
ನಿರ್ಕಕ್ಕುರುಂಬುಂಶೆಯ್‌ನೀಶರುಂ ಮಾಣ್ಡನರ್ ನೀಣಿಲತ್ತೇ
ಪೊರ್ಕರ್ಪಹಂ, ಎಮ್ಮಿರಾಮಾನುಶಮುನಿಪೋನ್ದ ಪಿನ್ನೇ॥ 99

ಭಾವ :- ಕಲ್ಪತರುವಿರ್‌ಪೋಲ್ ಅತ್ಯುದಾರರಾನ ಸ್ವಾಮಿ ರಾಮಾನುಶ ಮಾಮುನಿಹಳ್ ಇಂದ ವಿಶಾಲ ಮಹಿಯಿಲ್ ಅವತರಿತ್ತ್‌ಮೇಲ್, ತರ್ಕಂಪಣ್ಣುಂ ಶಮಣರುಂ, ಪಿಡಿತ್ತದ್ದೈ ವಿಡಾಮೇ ಪೀಡಿಕ್ಕಿರ ಪೇಯ್‌ಪೋಲಿರುಕ್ಕಂ ಬೌದ್ಧರುಂ, ಶಿವರ್ ಶೊಲ್ಲಾಹಿಯ ಶೈವಾಗಮತ್ತೈ ಕತ್ತ್ ತಮೋಗುಣಮೇಯುಳ್ಳ ಶೈವರುಂ, ಶೂನ್ಯವಾದಂ ಶೆಯ್ವರುಂ, ಮತ್ತುಂ ನಾಲು ವೇದಂಗಳುಂ ವಿಳಂಗಿ ನಿರ್ಕ ಅವತ್ತುಕ್ಕ್ ಅಪಾರ್ಥಂಗಳ್ಳೆ ಶೊನ್ನ ಕುಮತಿಹಳುಂ ಒಳಿಂದುವಿಟ್ಟನರ್.

ಅರ್ಥ :- ಪೊರ್-ಕರ್ಪಹಂ = ಶ್ರೇಷ್ಠವಾದ ಕಲ್ಪವೃಕ್ಷದಂತಿರುವ, ಎಂ-ಇರಾಮಾನುಶ-ಮುನಿ = ಸ್ವಾಮಿ ರಾಮಾನುಜ ಮುನಿಗಳು, ನೀಳ್-ನಿಲತ್ತೇ = ವಿಶಾಲಭೂಮಿಯಲ್ಲಿ, ಪೋಂದ-ಪಿನ್ = ಅವತರಿಸಿದ ಮೇಲೆ, ತರ್ಕ-ಚ್ಚಮಣರುಂ = ತರ್ಕವನ್ನೇ ಮಾಡುವ ಕ್ಷಪಣಕರೂ, ಶಾಕ್ಕಿಯ-ಪೇಯ್ಗಳುಂ = ದೆವ್ವದಂತೆ (ಹಿಡಿದುದನ್ನು ಬಿಡದೆ) ಇರುವ ಬೌದ್ಧರೂ, ತಾಳ್-ಶಡೈಯೋನ್ = ಈಶ್ವರನ, ಶೊಲ್-ಕತ್ತ = ಮಾತೆಂಬ ಆಗಮವನ್ನು ಕಲಿತ, ಶೋಂಬರುಂ = ಶೈವರೂ, ಶೂನಿಯ ವಾದರುಂ = ಶೂನ್ಯವಾದಿಗಳೂ, ಮರೈಯುಂ = ವೇದಗಳೂ, ನಾಲ್‌ನಿರ್ಕ = ನಾಲ್ಕು ಇದ್ದರೂ, (ಅವುಗಳಿಗೆ ಸಲ್ಲದ) ಕುರುಂಬು = ಅಪಾರ್ಥಗಳನ್ನು, ಶೈಯ್ = ಮಾಡುವ, ನೀಚರೂ, ಮಾಂಡನರ್ = ಅಳಿದರು.

ತಾತ್ಪರ್ಯ :- ಕೇಳಿದುದೆಲ್ಲವನ್ನೂ ಕೊಡಬಲ್ಲ ಕಲ್ಪವೃಕ್ಷದಂತೆ ಉದಾರರಾದ ನಮ್ಮ ಸ್ವಾಮಿ ರಾಮಾನುಜ ಮುನಿಗಳು ಈ ವಿಶಾಲ ಭೂಮಿಯಲ್ಲಿ ಅವತರಿಸಿದ ಮೇಲೆ, ಬರೀ ತರ್ಕಾಡಂಬರ ತೋರುತ್ತಿದ್ದ ಕ್ಷಪಣಕರೂ, ಹಿಡಿದುದನ್ನು ಬಿಡದೆ ಪೀಡಿಸುವ ಪಿಶಾಚಿಗಳಂತೆ ನಡೆಯುವ ಬೌದ್ಧರೂ, ಈಶ್ವರನು ಹೇಳಿರುವ ಶೈವಾಗಮದ ಮಾತುಗಳನ್ನಾಡುವುದರಲ್ಲಿ ಚತುರರಾದ ಶೈವರೂ, ಶೂನ್ಯವಾದಿಗಳೂ ಮತ್ತು ನಾಲ್ಕು ವೇದಗಳೂ ಬೆಳಗುತ್ತಿದ್ದರೂ, ಆ ವಾಕ್ಯಗಳಿಗೆ ಅಪಾರ್ಥ ಕಲ್ಪಿಸುವ ನೀಚರೂ ಹೀಗೆ ವಿರೋಧಿಗಳಾದವರೆಲ್ಲ ಅಳಿದರು.

श्रीमद्रामानुजार्ये मुनिवर उदिते कल्पवृक्षे पृथिव्यां
तर्कैकालम्बवादाः क्षपणकनिवहा बौद्धपान्थाः पिशाचाः ।
भौतेशा भूतनाथागमवचनचणा श्शून्यवादास्तथा ये
प्राहु र्नीचा अपार्था नतुमतचतुराम्नायवाचां प्रणेशुः ॥ ९९

ಮೂಲ : ಪೋನ್ದದೆನ್ನೆಂಜೆನ್ನುಂ ಪೊನ್ವಂಡ್, ಉನದಡಿಪ್ಪೋದಿಲೊಣ್ಶೀರ್
ಆನ್ದೆಳಿತೇನುಣ್ಡಮರ್ನ್ದಿಡವೇಣ್ಡಿ, ನಿನ್ಪಾಲದುವೇ
ಯೀನ್ದಿಡವೇಣ್ದುಮಿರಾಮಾನುಶ ! ಇದು ವನ್ರಿಯೊನ್ರುಂ
ಮಾನ್ದಹಿಲ್ಲಾದ್, ಇನಿ ಮತ್ತೊನ್ರುಕಾಟ್ಟಿಮಯಕ್ಕಿಡಲೇ ॥ 100

ಭಾವ : ಓ ರಾಮಾನುಜರೇ ! ಎನದ್ ಮನಮಾಹಿಯ ಅಳಹಾನವಣ್ಡ್ ಉಮದ್ ತಿರುವಡಿಮಲರ್ಹಳಿಲ್ ನಲ್ಲಗುಣಂಗಳೆನ್ನುಂ ತೇನೈ ಪರುಹಿ, ನಿತ್ಯವಾಸಂ ಪಣ್ಣ ಆಶೈಪ್ಪಟ್, ಉಮ್ಮಿಡತ್ತಿಲ್ ವಂದ್ ಶೇರ್ನ್ದದ್. ಅಂದ ಗುಣಂಗಳೈಯೇ ಸಾದಿತ್ತರುಳವೇಣುಂ. ಇಂದ ಗುಣಂಗಳೈತ್ತವಿರ ಮತ್ತೊನ್ರೈಯುಂ ಅನುಭವಿಕ್ಕಾದ್, ಇಪ್ಪಡಿಯಾನಪಿನ್ಪ್ ವೇರೊರು ವಿಷಯತ್ತೈಕ್ಕಾಟ್ಟಿ ಮಯಕ್ಕವೇಂಡಾಂ.

ಅರ್ಥ :- ಇರಾಮಾನುಶ = ರಾಮಾನುಜರೇ ! ಎನ್-ನೆಂಜ್-ಎನ್ನುಂ = ನನ್ನ ಮನಸ್ಸೆಂಬ, ಪೊನ್-ವಂಡ್ = ಸುಂದರವಾದ ದುಂಬಿಯ, ಉನದ್ = ನಿಮ್ಮ, ಅಡಿ-ಪೋದಿಲ್ = ಪಾದಕಮಲಗಳಲ್ಲಿ, ಒಣ್-ಶೀರ್-ಆಂ = ಮನೋಹರವಾದ ಗುಣಗಳೆಂಬ, ತೆಳಿ-ತೇನ್ = ಜೇನನ್ನು, ಉಂಡು = ಪಾನಮಾಡಿ, ಅಮರ್ನ್ದ್-ಇಡ = ಸದಾ ವಾಸಿಸಬೇಕೆಂದು, ವೇಂಡಿ = ಬೇಡಿಕೊಂಡು, ನಿನ್-ಪಾಲ್ = ನಿಮ್ಮಲ್ಲಿಗೆ, ಪೋಂದದ್ = ಬಂದುಸೇರಿತು. ಅದುವೇ = ಆ ಗುಣಗಳನ್ನೇ, ಈನ್ದ್-ಇಡ-ವೇಂಡುಂ = ಇತ್ತು ಕರುಣಿಸಬೇಕು. ಇದ್-ಅನ್ರಿ = ಇವುಗಳಲ್ಲದೆ, ಒನ್ರುಂ = ಬೇರೆ ಯಾವುದನ್ನೂ ಮಾಂದಹಿಲ್ಲಾದ್ = (ಮನವು) ಸವಿಯಲಾರದು, ಇನಿ = ಹೀಗಾದಮೇಲೆ, ಮತ್ತ್-ಒನ್ರು-ಕಾಟ್ಟಿ = ಬೇರೊಂದು ವಿಷಯವನ್ನು ತೋರಿ, ಮಯಕ್ಕಿಡಲ್ = ಮೋಹಗೊಳಿಸಬಾರದು.

ತಾತ್ಪರ್ಯ :- ಓ ರಾಮಾನುಜರೆ ! ನನ್ನ ಮನವೆಂಬ ಸೊಗಸಾದ ದುಂಬಿಯು ನಿಮ್ಮಡಿದಾವರೆಗಳಲ್ಲಿರುವ ಒಳ್ಳೆಯ ಗುಣಗಳೆಂಬ ಜೇನನ್ನು ಸವಿದು, ಸದಾ ಅಲ್ಲೇ ಇರಬೇಕೆಂಬ ಆಸೆಯಿಂದ ಬಂದುಸೇರಿತು. ಆ ಗುಣಗಳನ್ನೇ ಕರುಣಿಸಬೇಕು. ಅವನ್ನು ಹೊರತು ಮತ್ತಾವುದನ್ನೂ ಅನುಭವಿಸಲೊಲ್ಲದು. ಹೀಗಾದಮೇಲೆ ಮತ್ತಾವುದನ್ನಾದರೂ ತೋರಿಸಿಬಿಟ್ಟು, ಮೋಹಗೊಳ್ಳುವಂತೆ ಮಾಡಬಾರದು.

हे रामानुज ! मन्मनोहरमनोभृङ्ग स्त्वदङ्घ्र्यब्जयोः
चारुस्वादुगुणप्रसूनगरसं पीत्वोषितुं त्वां श्रितः ।
कारुण्येन तमेव देहि तमृते नान्योऽनुभूतो रसः
सत्येवं त्वपरं प्रदर्श्य विषयं मायावशं मा कृथाः ।। १००

ಮೂಲ : ಮಯಕ್ಕುಮಿರುವಿನ್ನೈ ವಲ್ಲಿಯಿಲ್ ಪೂಣ್ಡು, ಮದಿಮಯಂಗಿ
ತ್ತುಯಕ್ಕುಂ ಪಿರವಿಯಲ್ ತೋನ್ರಿಯವೆನ್ನೈ, ತುಯರಹತ್ತಿ
ಉಯಕ್ಕೊಂಡು ನಲ್ಹು ಮಿರಾಮಾನುಶವೆನ್ರದುನ್ನೈಯುನ್ನಿ
ನಯಕ್ಕುಮವರ್ಕ್ಕಿಳುಕ್ಕೆನ್ಬರ್, ನಲ್ಲವರೆನ್ರೈನ್ದೇ ॥ 101

ಭಾವ :- ''ವ್ಯಾಮೋಹತ್ತೈ ಉಂಡಾಕ್ಕಕ್ಕವದಾನ ಪುಣ್ಯ ಪಾಪಂಗಳೆನ್ರುಂ ಇರುಕರ್ಮಮಾಹಿರ ವಿಲಂಗಿಲ್ ಕಟ್ಟಪ್ಪಟ್ಟ್, ಬುದ್ಧಿಕೆಟ್ಟ್, ಅಲೈಯವಿಕ್ಕಿರ ಇಪ್ಪಿರಪ್ಪಿಲ್ ಪಿರಂದ ಎನ್ನೈ, ದುಃಖಗಳೈಯೆಲ್ಲಾಂ ನೀಕ್ಕಿವೈತ್ತ್, ಉಜ್ಜೀವಿಪ್ಪಿತ್ತರುಳುಹಿರ ರಾಮಾನುಜರೆ!'' ಎನ್ರು ಉಮ್ಮುಡೈಯ ಪವಿತ್ರತ್ತೈಯೇ ಶೊಲ್ಲುಂ ಶೊಲ್ಲುಹೈಯಾನ, ಇದು ಉಮ್ಮೈ ಅನುಸಂಧಿತ್ತ್, ಉರುಹಿ, ಎಪ್ಪೋದುಂ ಆಶೈಯೋಡಿರುಕ್ಕುಮವರ್ಹಳುಕ್ಕ್, ತಕ್ಕದನ್ರು ಎನ್ರು ಸಾತ್ವಿಕರ್ಹಳ್ ಶೊಲ್ಲುವರ್ವಳ್.

ಅರ್ಥ :- ಮಯಕ್ಕುಂ = ಅಜ್ಞಾನವನ್ನು ಹೆಚ್ಚಿಸಬಲ್ಲ, ಇರು ವಿನ್ನೈ = ಎರಡುವಿಧ ಪಾಪಗಳೆಂದು (ಪುಣ್ಯ-ಪಾಪ) ವಲ್ಲಿಯಿಲ್ = ಸಂಕೋಲೆಯಲ್ಲಿ, ಪೂಂಡು = ಸಿಕ್ಕಿಕೊಂಡು, ಮದಿ-ಮಯಂಗಿ = ಮತಿಗೆಟ್ಟು, ತುಯಕ್ಕುಂ = ಭ್ರಮಿಸುವಂತೆ ಮಾಡುವ, ಪಿರವಿಯಲ್ = ಸಂಸಾರದಲ್ಲಿ, ತೋನ್ರಿಯ = ಜನಿಸಿದ, ಎನ್ನೈ = ನನ್ನನ್ನು, ತುಯರ್ = ದುಃಖವನ್ನು ಅಹತ್ತಿ = ಹೋಗಲಾಡಿಸಿ, ಉಯ-ಕ್ಕೊಂಡು = ಉಜ್ಜೀವನಗೊಳಿಸಿ, ನಲ್ಹುಂ = (ನಲಿಸುವ) ಕರುಣಿಸುವ, ಇರಾಮಾನುಶ = ರಾಮಾನುಜರೇ ! ಎನ್ರು-ಅದ್-ಇದ್ = ಎಂದು (ನಿಮ್ಮ ಪಾವನತನವನ್ನು ಹೇಳುವ) ಆ ಈ ಮಾತು, ಉನ್ನೈ = ನಿಮ್ಮನ್ನು, ಉನ್ನಿ = ನೆನೆದು, ನೈಂದ್ = ಕರಗಿಹೋಗಿ, ಎನ್ರುಂ = ಸರ್ವದಾ ನಯಕ್ಕುಂ-ಅವರ್ಕ್ಕ = ಆಸೆಯಿಂದಿರುವವರಿಗೆ, ಇಳುಕ್ಕ್ = (ಕಳಂಕ) ತಕ್ಕುದಲ್ಲ, ಎನ್ಬರ್-ನಲ್ಲವರ್ = ಎಂದು ಸಜ್ಜನರು ಹೇಳುವರು.

ತಾತ್ಪರ್ಯ :- ''ಅಜ್ಞಾನವನ್ನೇ ಹೆಚ್ಚಿಸುವ ಎರಡು ವಿಧ ಕರ್ಮಗಳೆಂಬ ಪಾಶಕ್ಕೆ ಸಿಕ್ಕಿ ಮತಿಗೆಟ್ಟು, ಅಲೆಯುವಂತಾಗುವ ಜನ್ಮದಲ್ಲಿ ಜನಿಸಿದ ನನ್ನನ್ನು ದುಃಖಗಳಿಂದ ಬಿಡಿಸಿ, ಉಜ್ಜೀವಿಸುವಂತೆ ಕರುಣಿಸಿದ ರಾಮಾನುಜರೇ !'' ಎಂದು ನಿಮ್ಮ ಪವಿತ್ರತೆಯ ಈ ಮಾತು ನಿಮ್ಮನ್ನು ಧ್ಯಾನಿಸಿ, ತಲ್ಲೀನರಾಗಿ, ಸರ್ವದಾ ಆಸೆಯಿಂದಿರುವವರಿಗೆ ಸರಿಯಾದುದಲ್ಲವೆಂದು ಸಾತ್ವಿಕರು ಹೇಳಿರುವರು. (ಆಚಾರ್ಯರ ಸಹಜಸದ್ಗುಣವೇ ಇದು, ಎಂದು ಭಾವ)

**अज्ञानावहकर्मयुग्मनिगळाबद्धस्य धीभ्रंशत:**
**भ्राम्यत्संसृतिसंभवस्य कृपया मे दु:खतो मोचक !**
**श्रीरामानुज ! पूततोक्ति रिति ते ध्यानाशया तस्थुषां**
**अस्माकं विषये न चैव मुचितं त्वित्याहु रार्या ननु ॥ १०१**

ಮೂಲ : ನೈಯು ಮ್ಮನಮುರ್ಗುಣಂಗಳೈಯುನ್ನಿ, ಎನ್ನಾವಿರುಂದ್ ಎಮ್
ಐಯ್ಯ ನಿರಾಮಾನುಶನೆನ್ರಳೈಕ್ಕುಂ. ಅರುವಿನ್ನೈಯೇರ್
ಕೈಯುಂ ತೊಳುಂ ಕಣ್‌ಕರುದಿಡುಜ್ಞಾಣಕ್ಕಡಲ್ ಪುಡೈಶೂಳ್
ವೈಯಮಿದನಿಲ್, ಉನ್ವಣ್ಮೈಯೆನ್ಪಾಲ್ಲೆ ವಳರ್‌ನ್ದದುವೇ॥ 102

ಭಾವ :- ಎನ್ ಮನಂ ದೇವರೀರ್ ನಲ್ಲಗುಣಂಗಳೈ ಶಿಂದಿತ್ತ್ ಕರೈಂದ್‌ಪ್ಪೋಹಿನ್ರದ್. ಎನ್ ನಾಕ್ಕ್ ನಿಲೈಪೆತ್ತ್ "ನಮಕ್ಕುನಾಥರ್ ಶ್ರೀರಾಮನುರ್ಶ" ಎನ್ರ್ "ಓ ರಾಮಾನುಜರೇ!" ಎನ್ರ್ ಕೂಪ್ಪಿಡುಹಿರದ್. ಕೊಡಿಯ ಪಾವಂಶೆಯ್ದ ಎನ್ ಕೈಹಳುಂ ಅಂಜಲಿ ಇಡುಹಿನ್ರನ. ಎನ್ ಕಣ್‌ಹಳ್ ಉಮ್ಮೈಯೇ ಸೇವಿಕ್ಕವಿರುಂಬುಹಿನ್ರನ. ದೇವರೀರ್ ಔದಾರ್ಯಗುಣಮಾನದ್ ಕಡಲಿಡಂಕೊಂಡ ಇಂದ ಬುವಿಯಿಲ್ ಎನ್‌ಮೀದ್ ಇವ್ವಿದಮಾಹ ವಳರ್‌ನ್ದದರ್ಕ್ ಕಾರಣಂ ಎದೊ ?

ಅರ್ಥ :- (ರಾಮಾನುಜರೆ!) ಮನಂ = ನನ್ನ ಮನಸ್ಸು, ಉರ್-ಗುಣಂಗಳೈ = ನಿಮ್ಮ ಸದ್ಗುಣಗಳನ್ನು, ಉನ್ನಿ = ಚಿಂತಿಸಿ, ನೈಯುಂ = ಕರಗುವುದು, ಎನ್-ನಾ = ನನ್ನ ನಾಲಿಗೆಯು, ಇರುಂದ್ = ಒಂದೇ ಸಮನೆ, ಎಂ-ಐಯರ್ = ನಮಗೆ ಸ್ವಾಮಿ, ಇರಾಮಾನುರ್ಶ-ಎನ್ರ್ = ರಾಮಾನುಜರು ಎಂದು, ಅಳೈಕ್ಕುಂ = ಕರೆಯುವುದು, ಅರುವಿನ್ನೈಯೇನ್ = ತುಂಬ ಪಾಪಮಾಡಿದ ನನ್ನ, ಕೈಯುಂ = ಕೈಗಳು, ತೊಳುಂ = ಮುಗಿಯುವುವು, ಕಣ್ = ಕಣ್ಣುಗಳು, ಕಾಣ-(ನಿಮ್ಮನ್ನು) ನೋಡಲು, ಕರುತ್ತಿಡುಂ = ಆಸೆಪಡುವುವು. ಕಡಲ್ಲೈ-ಪುಡೈ-ಶೂಳ್ = ಸಮುದ್ರದಿಂದ ಸುತ್ತುಗಟ್ಟಲ್ಪಟ್ಟ, ವೈಯ್ಯಮಿದನಿಲ್ = ವಿಶಾಲಭೂತಲದಲ್ಲಿ, ಉರ್-ವಣ್ಮೈ = ನಿಮ್ಮ ಔದಾರ್ಯವು, ಎನ್-ಪಾಲ್ = ನನ್ನಲ್ಲಿ, ವಳರ್‌ನ್ದದ್ = ಬೆಳೆದುದು, ಎನ್ = ಯಾವಕಾರಣದಿಂದ ?

ತಾತ್ಪರ್ಯ :- ನನ್ನ ಮನಸ್ಸು ನಿಮ್ಮ ಸದ್ಗುಣಗಳಿಗೆ ಕರಗಿ, ಸದಾ ಅವುಗಳನ್ನೇ ಚಿಂತಿಸುತ್ತದೆ. ನಾಲಿಗೆ "ನಮಗೆ ಸ್ವಾಮಿ ರಾಮಾನುಜರು" ಎಂದು ತಿಳಿದು, "ಓ ರಾಮಾನುಜರೇ!" ಎಂದು ಗಟ್ಟಿಯಾಗಿ ಹೇಳುವುದು. ಕಡು ಪಾಪಿಯಾದ ನನ್ನ ಕೈಗಳು ಒಂದಾಗಿ ಕೂಡಿ ಕೈಮುಗಿಯುವುವು. ಕಣ್ಣುಗಳು ನಿಮ್ಮನ್ನೇ ಸಂದರ್ಶಿಸಲು ಆಸೆಪಡುತ್ತದೆ. ನಿಮ್ಮ ಔದಾರ್ಯಗುಣವು ಸಾಗರದವರೆಗೆ ಹಬ್ಬಿ ವಿಶಾಲವಾದ ಭೂಮಿಯಲ್ಲಿ ಈ ರೀತಿ ನನ್ನ ವಿಷಯದಲ್ಲಿ ಮಾತ್ರ ಬೆಳೆಯಲು ಕಾರಣವೇನಿರಬಹುದೋ ?

**स्वान्तं मे तव चिन्तयत् शुभगुणा नार्द्रीकृतं स्थेयसी**
**वाणी त्वां समुपाह्वय त्यतिमुदा रामानुजेति प्रभो ! ।**
**कुर्वातेऽञ्जलिबन्धनं दुरघिनः पाणी दिदृक्षू दृशौ**
**वारिध्यावृतभूतले मयि तवौदार्यं प्रवृद्धं कथम् ?** १०२

ಮೂಲ : ವಳರ್ನ್ದವೆಂಗೋಪಮಡಙ್ಗಲೊನ್ರಾಯ್, ಅನ್ರಾಳವುಣರ್
ಕಿಳರ್ನ್ದ ಪೊನ್ನಾಹಂಕಿಳಿತ್ತವರ್, ಕೀರ್ತಿಪ್ಪಯಿರೆಳುನ್ದು
ವಿಳೈಂದಿಡುಂ ಶಿನ್ದೈಯಿರಾಮಾನುಶನೆನ್ರ್ನಮೆಯ್ ವಿನೈನೋಯ್
ಕಳೈಂದ್ ನರ್ಜ್ಞಾನಮಳಿತ್ತನರ್, ಕೈಯಿಲ್ ಕನಿಯೆನ್ನವೇ ॥ 103

ಭಾವ :- ಮುನ್ಬು ಉಗ್ರಕೋಪಂಪೆತ್ತು, ಒಪ್ಪತ್ತ, ಒರು ನರಸಿಂಹ ರೂಪಮಾಯ್‌ವಂದ್, ವಾಳ್ಪಿಡಿತ್ತಿರುಂದ ಹಿರಣ್ಯಕಶಿಪುವಿನ್ ವಲಿತ್ತುಂ ಪೊರ್‌ಪೋಲ್ ಒಳಿತ್ತುಂ ಇರುಂದ ಮಾರ್ಬೈ ಕೀಂಡ ಭಗವಾನುಡೈಯ ಕೀರ್ತಿಯೆನ್ನುಂ ಪಯಿರ್ ಶೆಳುಂಬ ವಳರ್ನ್ದ್, ವಿಳೈಯಪ್ಪೆತ್ತ ತಿರುವುಳ್ಳಮುಳ್ಳ ರಾಮಾನುಶರ್ ಎನ್ ಉಡಲೈಪ್ಪತ್ತಿನ ಪಾಪಂಗಳೈಯೆಲ್ಲಾಂ ಒಳಿತ್ತು, ಕೈಯಿಲಿರುಕ್ಕುಂ ನೆಲ್ಲಿಕ್ಕನಿಪೋಲೇ ಸುಲಭಮಾಹ ಉತ್ತಮ ಜ್ಞಾನತ್ತೈ ತಂದರುಳಿನಾರ್.

ಅರ್ಥ :- ಮುನ್ಬು = ಹಿಂದೆ, ವಳರ್ನ್ದ = ಅತಿಯಾಗಿ ಹೆಚ್ಚಿದ, ವೆಂ-ಕೋಪಂ = ಉಗ್ರಕೋಪವುಳ್ಳ, ಮಡಂಗಲ್-ಒನ್ರ್-ಆಯ್ = ಒಂದು ಸಿಂಹದ ಆಕಾರವೆತ್ತಿ, ವಾಳ್ = ಕತ್ತಿಯನ್ನು (ಹಿಡಿದ) ಅವುಣರ್ = ರಾಕ್ಷಸನ (ಹಿರಣ್ಯಕಶಿಪುವಿನ) ಕಿಳರ್ನ್ದ = ಗರ್ವಿತವಾದ, ಪೊನ್ = ಚಿನ್ನದಹಾಗೆ ಹೊಳೆಯುತ್ತಿದ್ದ, ಆಹಂ = ಎದೆಯನ್ನು, ಕಿಳಿತ್ತವರ್ = ಸೀಳಿದ ದೇವರ, ಕೀರ್ತಿ-ಪಯಿರ್ = ಯಶಸ್ಸೆಂಬ ಪೈರು, ಎಳುಂದ್ = ಮೊಳೆತು, ವಿಳೈಂದ್-ಇಡುಂ-ಶಿಂದೈ = ಬೆಳೆಯುವ ಮನಸ್ಸುಳ್ಳ, ಇರಾಮಾನುಶರ್ = ರಾಮಾನುಜರು, ಎನ್-ತನ್-ನನ್ನ, ಮೆಯ್ = ಶರೀರಪ್ರಯುಕ್ತವಾದ, ವಿನೈ = ಕರ್ಮದ, ನೋಯ್ = ವ್ಯಥೆಯನ್ನು, ಕಳೈಂದ್ = ನಾಶಮಾಡಿ, ಕೈಯಿಲ್-ಕನಿ-ಎನ್ನುಂ = ಅಂಗೈಯ್ಯಲ್ಲಿನ ನೆಲ್ಲಿಹಣ್ಣಿನಂತೆ (ಸುಲಭವಾಗಿ) ನಲ್-ಜ್ಞಾನಂ = ಅತ್ಯುತ್ತಮ ಜ್ಞಾನವನ್ನು , ಅಳಿತ್ತನರ್ = ಕೊಟ್ಟು ಕರುಣಿಸಿದರು.

ತಾತ್ಪರ್ಯ :- ಹಿಂದೆ ಚಂಡಕೋಪವನ್ನು ತಾಳಿ, ಅತಿವಿಲಕ್ಷಣವಾದ ನರಸಿಂಹರೂಪದಿಂದ ಬಂದು, ಕತ್ತಿಹಿಡಿದ ಹಿರಣ್ಯಕಶುಪುವಿನ ದೃಢವಾದ ಚಿನ್ನದಂತೆ ಹೊಳೆವ ಎದೆಯನ್ನು ಸೀಳಿದ, ದೇವರ ಕೀರ್ತಿಯೆಂಬ ಪೈರು ಸೊಂಪಾಗಿ ಬೆಳೆದು ಹೆಚ್ಚುವ ಮನಸ್ಸುಳ್ಳ ರಾಮಾನುಜರು ಈ ನನ್ನ ದೈಹಿಕ ಪಾಪಗಳೆಲ್ಲವನ್ನೂ ನಾಶಗೊಳಿಸಿ ಅಂಗೈಯಿನ ಹಣ್ಣಿನಂತೆ, ಅನಾಯಾಸವಾಗಿ ಉತ್ತಮವಾದ ಅರಿವನ್ನಿತ್ತು ಕರುಣಿಸಿದರು.

प्राग् विष्णो र्धृतनारासिंहवपुष श्चात्युग्रकोपस्य यत्
प्रोद्यत्खड्गहिरण्यकर्बुरहृदुद्भेत्तु र्यशोव्रीहयः ।
संवृद्धा हृदि यस्य सोऽय मनघो रामानुजो नाशयन्
पापं मामक माशु पाणिफलवत् सुज्ञान मन्वग्रहीत् ॥ १०३

ಮೂಲ : ಕೈಯ್ಯಿಲ್ ಕನಿಯೆನ್ನ ಕಣ್ಣನ್ನೈ ಕಾಟ್ಟಿತ್ತರಿಲುಂ, ಉನ್ರ್ತನ್
ಮೆಯ್ಯಿಲ್ ಪಿರಂಗಿಯ ಶೀರನ್ರಿ, ವೇಣ್ಡಿಲ್ನ್ ಯಾನ್, ನಿರಯ
ತ್ತೊಯ್ಯಿಲ್ ಕಿಡಕ್ಕಿಲುಂ ಶೋದಿವಿಣ್ ಶೇರಿಲುಂ ಇವ್ವರುಳ್ ನೀ
ಶೆಯ್ಯಿಲ್ ದರಿಪ್ಪನ್, ಇರಾಮಾನುಶಾ ! ಎಂ ಶೆಳುಂಕೊಣ್ಡಲೇ ॥ 104

ಭಾವ :- ಔದಾರ್ಯತ್ತಿಲ್ ವಿಲಕ್ಷಣಮೇಘಂಪೋನ್ರ, ರಾಮಾನುಶರೇ ! ದೇವರೀರ್ ಭಗವಾನ್ನೈ ಕೈನೆಲ್ಲಿಪ್ಪೋಲೆ ಕಾಟ್ಟಿ ತಂದಾಲುಂ, ಉಮ್ಮುಡೈ ತಿರುಮೇನಿಯಿಲ್ ವಿಳಂಗುಂ ಅಳಹ್‌ಮುದಲಿಯಗುಣಂಗಳ್ಳೈ ತ್ತವಿರ ವೇರೊನ್ರೈಯುಂ ಅಪೇಕ್ಷಿಯೇನ್. ಪಿರವಿಯ ನಿರಯಕ್ಕುಳಿಯಿಲ್ ಕಿಡನ್ದೇನಾಹಿಲುಂ ಉಮ್ಮುಡೈಯ ವಿಗ್ರಹತ್ತಿನ್ ಅಳಹೈ ಅನುಭವಿಕ್ಕ ಉರುಪ್ಪಾನ ಇವ್ವರುಳ್ಳೈ ದೇವರೀರ್ ಶೈಯ್ದರುಳಿನಾಲ್‌ತಾನ್ ಪಿರಕ್ಕಮಿಡುತ್ತಿಲೋ ಪಿರಕ್ಕಾಡಿಡತ್ತಿಲೋ ಇರುಪ್ಪೇನ್.

ಅರ್ಥ :- ಶೆಳುಂ-ಕೊಂಡಲ್ = (ಔದಾರ್ಯದಲ್ಲಿ) ವಿಲಕ್ಷಣವಾದ ಮೇಘದಂತಿರುವ, ಎಂ-ರಾಮಾನುಶಾ = ನಮ್ಮ ರಾಮಾನುಜರೆ ! ಕಣ್ಣನ್ನೈ = ಕೃಷ್ಣನನ್ನು, ಕೈಯಿಲ್-ಕನಿ-ಎನ್ನ = ಅಂಗೈ ನೆಲ್ಲಿಯಹಣ್ಣಿನಂತೆ, ಕಾಟ್ಟತ್ತರಿಲುಂ = ತೋರಿಸಿ ಕೊಟ್ಟರೂ, ಉನ್-ತನ್ = ನಿಮ್ಮ ಮೆಯ್ಯಿಲ್ = ಮೈಯ್ಯಲ್ಲಿರುವ, ಪಿರಂಗಿಯ = ಬೆಳಗುವ, ಶೀರ್ = ಸೌಂದರ್ಯಾದಿಗುಣಗಳನ್ನು, ಅನ್ರಿ = ಹೊರತು, (ಬೇರೆ ಯಾವುದರಲ್ಲೂ) ಯಾನ್ = ನಾನು, ವೇಂಡಿಲ್ನ್ = ಕಣ್ಣಿಡೆನು, ನಿರಯ = (ಸಂಸಾರ) ನರಕವೆಂಬ, ತೊಯ್ಯಿಲ್ = ದೊಡ್ಡ ಹಳ್ಳದಲ್ಲಿ, ಕಿಡಕ್ಕಿಲುಂ = ಬಿದ್ದು, ಮುಳುಗಿದ್ದರೂ, ಇ-ಅರುಳ್ = (ನಿಮ್ಮ ಸೌಂದರ್ಯವನ್ನು ಅನುಭವಿಸಲು ಕಾರಣವಾದ) ಈ ದಯೆಯನ್ನು, ನೀ = ನೀವು, ಶೆಯ್ಯಿಲ್ = ಬೀರಿದರೇನೇ, ದರಿಪ್ಪನ್ = (ಎಲ್ಲಾದರೂ) ನಿಲ್ಲಬಲ್ಲೆ.

ತಾತ್ಪರ್ಯ :- ಔದಾರ್ಯಗುಣದಲ್ಲಿ ಮುಗಿಲಿಗಿಂತ ಮಿಗಿಲೆನಿಸಿದ ಸ್ವಾಮಿ ರಾಮಾನುಜರೇ! ಕೈಯಲ್ಲಿರುವ ಹಣ್ಣಿನಂತೆ ದೇವರನ್ನು ನೀವು ತೋರಿಸಿದರೂ, ನಿಮ್ಮೊಡಲಿನ ಸೌಂದರ್ಯ, ಮನೋವೈಶಾಲ್ಯ, ವಿದ್ಯಾಪ್ರಕರ್ಷ, ಮೊದಲಾದ ಗುಣಗಳನ್ನು ಬಿಟ್ಟು ಮತ್ತಾವುದನ್ನೂ ನೋಡದು ಈ ನನ್ನ ಕಣ್ಣು. ಸಂಸಾರ ನರಕಯಾತನೆ ಪಡುತ್ತಿದ್ದರೂ ನಿಮ್ಮನ್ನು ಸಂದರ್ಶಿಸಿ ಅನುಭವಿಸಲು ಬೇಕಾದುದು ಮುಖ್ಯವಾಗಿ ನಿಮ್ಮ ಕರುಣೆ. ಅದನ್ನು ನೀವು ನನ್ನಲ್ಲಿ ಬೀರಿದರೇನೇ ಇಲ್ಲೋ, ಪರದಲ್ಲೋ ನಿಲ್ಲಬಲ್ಲೆ.

औदार्येऽतिविलक्षणाभ्रसदृश । श्रीकृष्ण मन्तःकरे
श्रीरामानुज ! दर्शयन्नपि विना त्वत्कान् गुणान् भासुरान् ।
सौन्दर्यप्रमुखान् न किञ्चिदपरं वीक्षे भवैनोवटे
कारुण्याद्धि धरामि ते निपतितो प्युजीव्य तत्रात्र वा ॥ १०४

ಮೂಲ : ಶೆಳುನ್ದಿರೈ ಪಾರ್ಕಡಲ್ ಕಣ್ಣುಯಿಲ್ ಮಾಯ್ನ್, ತಿರುವಡಿಕ್ಕೀಳ್
ವಿಳುಂದಿರುಪ್ಪಾರ್ ನೆಂಜಿಲ್ ಮೇವುನ್ನಜ್ಞಾನಿ, ನಲ್ ವೇದಿಯರ್ಗಳ್
ತೊಳುಂ ತಿರುಪ್ಪಾದನ್ ಇರಾಮಾನುಶನ್ನೈ ತೊಳುಂಪೆರಿಯೋರ್
ಎಳುಂದಿರೈತ್ತಾಡುಮಿಡಂ, ಅಡಿಯೇನುಕ್ಕಿರುಪ್ಪಿಡಮೇ ॥ 105

ಭಾವ :- ಅಳಹಿಯ ಅಲೈಹಳಿರುಕ್ಕುಂ ತಿರುಪ್ಪಾರ್ಕಡಿಲಿಲ್ ಶಯನಿತ್ತಿರುಕ್ಕುಂ ಭಗವಾನುಡೈಯ ತಿರುವಡಿಕ್ಕೀಳ್ ವಿಳುಂದಿರುಪ್ಪವರ್ ಮನದಿಲ್ ಪೊರುಂದಿ ಇರುಕ್ಕುಂ ನಲ್ಲ ಜ್ಞಾನಿಯುಂ, ನನ್ರಾಹ ವೇದಂಗಳೈಯರಿಂದವರ್ಗಳಾಲೇ ಸೇವಿಕ್ಕಪ್ಪಡುಂ ತಿರುವಡಿಹಳುಳ್ಳವರುಮಾನ ರಾಮಾನುಶರ್ರೈ ಸೇವಿಕ್ಕುಂ ಮಹನೀಯರ್ ಎಳುಂದ್ ಹರ್ಷತ್ತಾಲ್ ಇರೈಂದ್ ನರ್ತಿಕ್ಕುಂ ಇಡಂತಾನ್ ಅವರ್ಗಳ್ ಅಡಿಯೇ ನಾನ ಎನಕ್ಕುಂ ಇರುಪ್ಪಿಡಂ.

ಅರ್ಥ :- ಶೆಳು = ರಮ್ಯವಾದ, ತಿರೆ = ಅಲೆಗಳಿರುವ, ಪಾಲ್-ಕಡಲ್ = ಹಾಲಿನ ಕಡಲಿನಲ್ಲಿ, ಕಣ್-ತುಯಿಲ್ = ಪವಡಿಸಿರುವ, ಮಾಯ್ನ್ = ಭಗವಂತನ, ತಿರುವಡಿಕ್ಕೀಳ್ = ಅಡಿಗಳಡಿಯಲ್ಲಿ, ವಿಳುಂದ್-ಇರುಪ್ಪಾರ್ = ಇರುವ ಮಹಾತ್ಮರ, ನೆಂಜಿಲ್ = ಮನದಲ್ಲಿ, ಮೇವುಂ = ಇಷ್ಟಪಟ್ಟು ನೆಲೆಸಿರುವ, ನಲ್-ಜ್ಞಾನಿ = ಉತ್ತಮ ಜ್ಞಾನಿಗಳಾಗಿಯೂ, ನಲ್-ವೇದಿಯರ್ಗಳ್ = ಚೆನ್ನಾಗಿ ವೇದಗಳನ್ನರಿತವರಿಂದ, ತೊಳುಂ = ಸೇವಿಸಲ್ಪಡುವ, ತಿರುಪ್ಪಾದನ್ = ಪಾದಗಳುಳ್ಳವರಾದ, ಇರಾಮಾನುಶನ್ನೈ = ರಾಮಾನುಜರನ್ನು, ತೊಳುಂ = ಸೇವಿಸುವ, ಪೆರಿಯೋರ್ = ಹಿರಿಯರು, (ಮಹಾತ್ಮರು) ಎಳುಂದಿರೈತ್ತ್ = ಎದ್ದೆದ್ದು ಅತಿಸಂತೋಷದಿಂದ ಮೈಮರೆತು ಘೋಷಿಸುತ್ತಾ, ಆಡುಂ-ಇಡಂ = ನರ್ತಿಸುವ ಸ್ಥಳವೇ, ಅಡಿಯೇನುಕ್ಕ್ = ನನಗೆ ಇರುಪ್ಪಿಡಂ ಇರುವ ಸ್ಥಳ.

ತಾತ್ಪರ್ಯ :- ಮನೋಹರ ತರಂಗಗಳಿರುವ ಕ್ಷೀರಸಾಗರದಲ್ಲಿ ಶಯನಿಸಿರುವವನೂ, ಆಶ್ಚರ್ಯ ವ್ಯಾಪಾರವುಳ್ಳವನೂ ಆದ ಸರ್ವೇಶ್ವರನ ಪಾದಗಳಡಿಯಲ್ಲಿ ಸರ್ವದಾ, ಇರುವವರ ಮನಸ್ಸಿನಲ್ಲಿ ಹೊಂದಿಕೊಂಡಿರುವ ಒಳ್ಳೆಯ ಜ್ಞಾನಿಗಳೂ, ಚೆನ್ನಾಗಿ ವೇದಗಳನ್ನರಿತ ಮಹಿಮರಿಂದ ಸೇವೆಗೊಳ್ಳುವ ಅಡಿಗಳುಳ್ಳ ರಾಮಾನುಜರನ್ನು ಸೇವೆ ಮಾಡುವವರೂ ಆದ ಮಹಾತ್ಮರು ಎದ್ದೆದ್ದು ಮೈಮರೆತು, ಕೊಂಡಾಡುತ್ತಾ ಸಂತೋಷದಿಂದ ನರ್ತಿಸುವ ಸ್ಥಳವೇ ನನಗೆ ವಾಸಸ್ಥಾನ.

रम्योर्मिविततदुग्धवार्धिशयितु श्चांघ्रो रध स्तस्थुषां
प्रीत्यान्तर्हृदये वसन्त ममलज्ञानाधिकं योगिनम् ।
आम्नायज्ञनिषेव्यमाणचरणं रामानुजं प्रार्चतां
स्यादेवाप्लुतिमत्तघोषनटनस्थानं ममावासभूः ॥ १०५

ಮೂಲ : ಇರುಪ್ಪಿಡಂ ವೈಹುಂದಂ ವೇಂಗಡಂ, ಮಾಲಿರುಂ ಶೋಲೈಯೆನ್ನುಂ
ಪೊರುಪ್ಪಿಡಂ ಮಾಯನುಕ್ಕೆನ಼್ರ್ ನಲ್ಲೋರ್, ಅವೈ ತನ್ನೊಡುಂ ವಂ-
ದಿರುಪ್ಪಿಡಂ ಮಾಯನಿ ರಾಮಾನುಶರ್ ಮನತ್ತಿನ್ರವರ್ ವಂ-
ದಿರುಪ್ಪಿಡಂ, ಎನ್ರನಿದಯತ್ತುಳ್ಳೇ ತನಕ್ಕಿನ್ಬುರವೇ ॥ 106

ಭಾವ :- ಪರಮಪುರುಷನುಕ್ಕ್ ವಾಸಸ್ಥಲಮಾನದ್ ಪರಮಪದಂ, ತಿರುವೇಗಂಡಮಲೈ, ತಿರುಮಾಲಿರುಂಶೋಲೈ, ಎನ್ರ್ ಪೆರಿಯೋರ್ ಶೊಲ್ಲುವರ್. ಅಂದ ಭಗವಾನ್ ವೈಹುದಂ ಮುದಲಿಯ ಇರುಪ್ಪಿಡಂಗಳೋಡು ವಂದ್ ಇರುಪ್ಪದ್ ಸ್ವಾಮಿ ರಾಮಾನುಶರ್ ಮನತ್ತಿಲ್‌ತಾನ್. ಅಂದ ಭಗವಾನೋಡುಕೂಡಿನ ಮಹಾನ್ ಇಪ್ಪೋದು ಮಿಹವುಂ ಆನಂದತ್ತುಡನ್ ಎಳುಂದರುಳಿಯಿರುಪ್ಪದ್ ಅಡಿಯೇನ್ ಮನತ್ತಿಲೇಯಾಂ.

ಅರ್ಥ :- ಮಾಯನುಕ್ಕ್ = ಸರ್ವೇಶ್ವರನಿಗೆ, ಇರುಪ್ಪ್-ಇಡಂ = ವಾಸಸ್ಥಳವು, ವೈಹುಂದಂ = ವೈಕುಂಠವೂ, ವೇಂಗಡಂ = ವೆಂಕಟಾಚಲವೂ, ತಿರುಮಾಲಿರುಂ ಶೋಲೈ = ಈ ಹೆಸರಿನ ದಿವ್ಯಸ್ಥಳವೂ, ಎನ್ನುಂ = ಎಂಬ, ಪೊರುಪ್ಪ್-ಇಡಂ = ಪರ್ವತಗಳು ವಾಸಸ್ಥಳಗಳು (ಎಂದು) ನಲ್ಲೋರ್ = ಜ್ಞಾನಿಗಳು, ಎನ್ಬರ್ = ಹೇಳುವರು. ಮಾಯನ್ = ಆ ಭಗವಂತನು, ಅವೈ-ತನ್ನೊಡುಂ = ಆ ದಿವ್ಯಸ್ಥಳಗಳ ಸಹಿತ, ವಂದ್ = ಬಂದು, ಇರುಪ್ಪ್-ಇಡಂ = ಇರುವ ಸ್ಥಳವು, ಇರಾಮಾನುಶರ್ = ಶ್ರೀರಾಮಾನುಜರ, ಮನತ್ತ್ = ಹೃದಯದಲ್ಲಿ, ಅವರ್ = ಆ ರಾಮಾನುಜರು, ಇನ್ರ್ = ಈಗ, ವಂದ್ = ಬಂದು, ತನಕ್ಕ್ = ತಮಗೆ, ಇನ್ಬ್-ಉರ = ಆನಂದವಾಗುವಂತೆ, ಇರುಪ್ಪ್-ಇಡಂ = ಬಿಜಯಮಾಡಿರುವುದು, ಎನ್-ತನ್ = ನನ್ನ, ಇದಯತ್ತುಳ್ಳೆ = ಹೃದಯದಲ್ಲಿಯೇ.

ತಾತ್ಪರ್ಯ :- ''ಭಗವಂತನಿಗೆ ವಾಸಸ್ಥಳಗಳು, ಶ್ರೀ ವೈಕುಂಠ, ತಿರುಪತಿ, ತಿರುಮಾಲಿರುಂಶೋಲೈ ಎಂಬ ಪರ್ವತಗಳು'' ಎಂದು ಜ್ಞಾನಿಗಳು ಹೇಳುತ್ತಾರೆ. ಆ ಪರಮಾತ್ಮನು ಆ ವೈಕುಂಠ ಮೊದಲಾದ ದಿವ್ಯಸ್ಥಳಗಳ ಸಮೇತ ಬಂದು, ನಮ್ಮ ರಾಮಾನುಜರ ಹೃದಯದಲ್ಲಿ ಬಿಜಯಮಾಡಿಸಿರುವನು. ಅಂತಹ ಭಗವಂತನೊಡಗೂಡಿದ ಆ ಮಹಾಮಹಿಮರು ಈಗ ಬಂದು ಬಹಳ ಆನಂದದಿಂದ ವಾಸಮಾಡುವುದು ಈ ನನ್ನ ಹೃದಯದಲ್ಲಿಯೇ ಆಗಿದೆ.

**श्रीशस्यावासभूमिं परमपद-वृषाहार्य-मालोल शैलान्**
**आहु स्सन्तः परेश स्सह निजनिलयै रागतो भाति चित्ते ।**
**श्रीमद्रामानुजस्य स्वय मधिवसति ह्यद्य तादृक् स योगी**
**नूनं संतुष्टचेता मम खलु हृदयं सर्वदा नन्दपूर्णः ॥ १०६**

ಮೂಲ : ಇನ್ಬುತ್ತ ಶೀಲತ್ತಿ ರಾಮಾನುಶ ! ಎನ್ರು ಮೆವ್ವಿಡತ್ತುಂ
ಎನ್ಬುತ್ತ ನೋಯುಡಲ್ ದೋರುಂ ಪಿರಂದಿರುಂದ್, ಎಣ್ಣರಿಯ
ತುನ್ಬುತ್ತು ವೀಯನುಂ ಶೊಲ್ಲುವದೊನ್ರುಣ್ಡು ಉನ್ ತೊಣ್ಡರ್ಗಳುಕ್ಕೇ
ಅನ್ಬುತ್ತಿರುಕ್ಕುಮ್ಪಡಿ, ಎನ್ನೈಯಾಕ್ಕಿಯಂಗಾಳ್ಪಡುತ್ತೆ ॥ 107

ಭಾವ :- ಆನಂದಪೂರ್ಣರಾಯುಂ, ಸೌಶೀಲ್ಯಗುಣಮುಳ್ಳವರುಮಾನ ರಾಮಾನುಜರೇ ! ದೇವರೀರಿಡಂ ಶೊಲ್ಲುಂ ಸಂಗತಿ ಒನ್ರುಂಡು, ಅದೆನ್ನೆನ್ನಿಲ್, ಎಲುಂಬಿಲೇ ಉರ್ರೆಂದ್ ನಲಿಯಕ್ಕಡವರೋಗಂಗಳುಕ್ಕ್ ಇರುಪ್ಪಿಡಮಾನ ಶರೀರಂಗಳಿಲ್ ಪಿರಪ್ಪದುಂ, ಇರಪ್ಪದುಂ ಆಹಿ ಎಣ್ಣಿರಂದ ದುಃಖಂಗಳೈ ಅನುಭವಿತ್ತ್ ಮುಡಿಂದ್‌ಪೋನಾಲುಂ ಎಪ್ಪೋದುಂ, ಎಲ್ಲಾ ವಿಡಂಗಳಿಲುಂ, ದೇವರೀರಡಿಯವರ್ ವಿಷಯತ್ತಿಲೇಯೇ ಭಕ್ತನಾಯಿರುಕ್ಕುಂಪಡಿ ಎನ್ನೈ ಪಣ್ಣಿವೈತ್ತ್, ಅವರಿಡಂ ಆಳ್ಪಡುತ್ತಿ ಅರುಳವೇಣುಂ. ಇದುತಾನ್ ವಿಣ್ಣಪ್ಪಂ.

ಅರ್ಥ :- ಇನ್ಬ್-ಉತ್ತ = ಆನಂದಪೂರ್ಣರಾದ, ಶೀಲತ್ತ್ = ಸೌಶೀಲ್ಯಗುಣವುಳ್ಳ, ಇರಾಮಾನುಶ = ರಾಮಾನುಜರೆ ! ಶೊಲ್ಲುವದ್ = ಅರಿಕೆಮಾಡಬೇಕಾದುದು, ಒನ್ರ್-ಉಂಡು = ಒಂದುಂಟು. (ಅದೇನೆಂದರೆ) ಎನ್ಬು-ಉತ್ತ = ಮೂಳೆಯಲ್ಲಿ ಸೇರಿ ನೋಯ್ = ವ್ಯಥೆಪಡಿಸುವ ವ್ಯಾಧಿಗಳಿರುವ, ಉಡಲ್-ತೋರಿ = ಮೈಗಳಲ್ಲಿ, ಪಿರಂದ್ = ಹುಟ್ಟಿ, ಇರುಂದ್ = ಇದ್ದು, ಎಣ್-ಅರಿಯ = ಎಣಿಸಲಾಗದಷ್ಟು, ತುನ್ಬ್-ಉತ್ತ್ = ದುಃಖಗಳನನ್ನನುಭವಿಸಿ, ವೀಯಿನುಂ = ನಶಿಸಿದರೂ, ಎನ್ರುಂ = ಯಾವಾಗಲೂ, ಎ-ಇಡತ್ತುಂ = ಎಲ್ಲೆಡೆಗಳಲ್ಲೂ, ಉನ್-ನಿಮ್ಮ, ತೊಡರ್ಗಳುಕ್ಕೇ = ಭಕ್ತರ ವಿಷಯದಲ್ಲೇ ಅನ್ಬ್-ಉತ್ತ್ = ಭಕ್ತನಾಗಿ, ಇರುಕ್ಕುಂ-ಪಡಿ = ಇರುವಂತೆ, ಎನ್ನೈ = ನನ್ನನ್ನು, ಆಕ್ಕಿ = ಮಾಡಿ, ಅಂಗ್ = ಆ ಭಕ್ತರಲ್ಲಿಯೇ, ಆಳ್-ಪಡುತ್ತ್ = ಸೇವಕನನ್ನಾಗಿ ಮಾಡಬೇಕು.

ತಾತ್ಪರ್ಯ :- ಆನಂದಭರಿತರೂ, ಸುಶೀಲರೂ ಆದ ರಾಮಾನುಜರೇ ! ತಮ್ಮಲ್ಲಿ ನನ್ನದೊಂದರಿಕೆ. ಆದೇನೆಂದರೆ, ಮೂಳೆಗಳೂ ಆವರಿಸಿರುವ ರೋಗಗಳಿಗೆ ನೆಲೆಯಾಗಿರುವ ಶರೀರಗಳಲ್ಲಿ ಜನಿಸುವುದೂ, ಇರುವುದೂ, ಎಣಿಸಲಾಗದಷ್ಟು ದುಃಗಳನ್ನನುಭವಿಸಿ, ಕೊನೆಗೊಂಡರೂ, ಎಲ್ಲಕಾಲದಲ್ಲೂ, ಎಲ್ಲಸ್ಥಳದಲ್ಲೂ, ನಿಮ್ಮ ಭಕ್ತರ ವಿಷಯದಲ್ಲೇ ಭಕ್ತಿಯುಳ್ಳವನಾಗಿರುವಂತೆ ಮಾಡಿ ಅವರಡಿಗಳಲ್ಲೇ ಸೇವಕನನ್ನಾಗಿ ಮಾಡಬೇಕು. ಇದೇ ನನ್ನ ಅರಿಕೆ.

पूर्णानन्द ! सुशील ! मामक मिदं विज्ञापनं वर्तते
श्रीरामानुज ! कैकसामयमये काये जनित्वाप्यहम् ।
स्थित्वान्तं विविधव्यथा अनुभवन् यातोऽपि मां संततं
सर्वत्रापि कुरु त्वदीयपदसाद्भक्तं च तत्सेवकम् ।। १०७

ಮೂಲ : ಅಂಗಯಲ್ ಪಾಯ್ ವಯಲ್ ತೆನ್ನರಂಗರ್ಕ, ಅಣಿಯಾಹಮನ್ನುಂ
ಪಂಗಯ ಪಾಮಲರ್ ಪಾವೈಯ್ಯೈಪ್ಪೋತ್ತದುಂ, ಪತ್ತಿಯೆಲ್ಲಾಂ
ತಂಗಿಯದೆನ್ನತ್ತಳ್ಳೈತ್ತ್ ನೆಂಜೇ ! ನಂ ತಲೈಮಿಶ್ಶೈಯೇ
ಪೊಂಗಿಯ ಕೀರ್ತಿ, ಇರಾಮಾನುಶನಡಿಪ್ಪೂಮನ್ನವೇ ॥ 108

ಭಾವ : ಓ ಮನಮೇ ! ಭಕ್ತಿ ಮುಳುಮ್ಮೈಯುಂ ತಮ್ಮಿಡತ್ತಿಲ್ ನಿಲೈಪೆತ್ತದೆನ್‍ಱು, ಶೊಲ್ಲುಂಪಡಿಯಾಹ ವೀರುಪೆತ್ತ್, ಪರವಿನ ಕೀರ್ತಿಯುಡೈಯ ರಾಮಾನುಶರ್ ತಿರುವಡಿಮಲರ್‌ಹಳ್ ನಂ ತಲೈಮೇಲೆಯೇ ಕುಡಿಹೊಂಡಿರುಕ್ಕುಂಪಡಿಯಾಹ, ಅಳಹಾನ ಕಯಲ್ಹಳ್ ಪಾಯ್‌ಹಿರ ವಯಲ್‌ಹಳ್ ಶೂಳ್‌ನ್ದ ಶ್ರೀರಂಗತ್ತಿಲ್ ಉರಂಗುಹಿನ್ಱ ಇರಂಗನಾದನುಡೈಯ ಅಳಹಿಯಮಾರ್ಬಿಲ್ ನಿಲೈನಿನ್‍ಱವಳಾಯುಂ, ಶಿರಂದ ತಾಮರೈಯಿಲ್ ಪಿರಂದವಳಾಯುಂ ಇರುಕ್ಕುಂ ಮಹಾಲಕ್ಷ್ಮಿಯ್ಯೈ ವಾಳ್‌ತುವೋಂ.

ಅರ್ಥ :- ನೆಂಜೇ = ಮನಸ್ಸೇ! ಪತ್ತಿ-ಎಲ್ಲಾಂ = ಭಕ್ತಿಯೆಲ್ಲ, ತಂಗಿಯದ್ = (ತಮ್ಮಲ್ಲಿ) ನೆಲೆಗೊಂಡಿದೆ, ಎನ್ = ಎಂದು, (ಹೇಳುವಂತೆ) ತಳೈತ್ತ್ = ಪರಿಪೂರ್ಣನಾದ, ಪೊಂಗಿಯ = ತುಂಬಿ ಹೊರಚೆಲ್ಲಿ ಹರಡಿದ, ಕೀರ್ತಿ = ಯಶಸ್ಸುಳ್ಳ, ಇರಾಮಾನುಶರ್ = ರಾಮಾನುಜರ, ಅಡಿ-ಪೂ = ಪಾದಕಮಲಗಳು, ನಂ = ನಮ್ಮ, ತಲೈ-ಮಿಶ್ಶೈಯ್ = ತಲೆಯಮೇಲೆಯೇ, ಮನ್ನ = ಸ್ಥಿರವಾಗಿ ವಾಸಮಾಡುವಂತೆ, (ನಾವುಮಾಡಬೇಕಾದುದೇನೆಂದರೆ) ಅಂ = ಅಂದವಾದ, ಕಯಲ್ = ಮೀನುಗಳು, ಪಾಯ್ = ಚಿಮ್ಮುವ, ವಯಲ್ = ಗದ್ದೆಗಳಿಂದ ಸುತ್ತುವರಿದ, ತೆ-ಅರಂಗರ್ = ದಕ್ಷಿಣದಲ್ಲಿರುವ ಶ್ರೀರಂಗದಲ್ಲಿರುವ ರಂಗನಾಥನ, ಅಣಿ = ರಮ್ಯವಾದ, ಆಹಂ = ಎದೆಯಲ್ಲಿ, ಮನ್ನುಂ = ನೆಲೆಯಾಗಿರುವ, ಪಂಗಯ-ಮಾ-ಮಲರ್ = ಉತ್ತಮವಾದ ತಾವರೆಹೂವಿನಲ್ಲಿ ಅವತರಿಸಿದ ಮಹಾಲಕ್ಷ್ಮಿಯನ್ನು , ಪೋತ್ತದುಂ = ಆಶ್ರಯಿಸಿ ಸ್ತುತಿಸೋಣ.

ತಾತ್ಪರ್ಯ :- ಓ ಮನವೆ : ಭಕ್ತಿಯು ಪೂರ್ಣವಾಗಿ ತಮ್ಮಲ್ಲಿ ನೆಲೆಮಾಡಿಕೊಂಡಂತೆ ಇರುವ, ಎಲ್ಲೆಡೆಯೂ ಕೀರ್ತಿಯು ಹರಡಿ ಪ್ರಖ್ಯಾತರಾದ, (ಮನಕ್ಕೂ ಅನ್ವಯಿಸಬಹುದು) ಶ್ರೀ ರಾಮಾನುಜರ ಅಡಿದಾವರೆಗಳು ನಮ್ಮ ಮುಡಿಗಳಿಗೆ ಒಡವೆಯಂತೆ ನೆಲೆಗೊಳ್ಳಬೇಕಾದರೆ ಮನೋಹರವಾದ ಮತ್ಸ್ಯಗಳು ಚಿಮ್ಮುತ್ತಿರುವ ಗದ್ದೆಗಳಿಂದ ಸುತ್ತುವರಿದ ಶ್ರೀರಂಗದಲ್ಲಿ ಫಣಿಶಾಯಿಯಾಗಿ ಕಂಗೊಳಿಸುವ ರಂಗನಾಥನ ಅತಿ ಸುಂದರವಾದ ವಕ್ಷಸ್ಥಳದಲ್ಲಿ ನೆಲೆಯಾಗಿರುವ, ಕಮಲದಲ್ಲಿ ಅವತರಿಸಿದ ಮಹಾಲಕ್ಷ್ಮಿಯಾದ ಶ್ರೀರಂಗನಾಯಕಿಯನ್ನು ಆಶ್ರಯಿಸಿ ಸ್ತುತಿಸುವ.

हे हृत् ! भक्ति स्समग्रा विलसति सततं यत्र हि व्याप्तकीर्तेः
श्रीमद्रामानुजस्याद्भुतपदकमले भूषणेऽस्मच्छिरोहे ।

**कर्तुं वैसारशालिन्यतिशयविभवे शालिभूश्रीतरङ्गे**
**लक्ष्मीं रङ्गेशरम्योरसि कृतवसतिं संश्रिता स्संस्तुम स्ताम् ॥ १०८**

*ಈ ಪ್ರಬಂಧದ ಸಾಮಂಜಸ್ಯ ಅನುಪಮವಾದುದು :*

ಮೊದಲನೆಯ ಪಾಶುರದಲ್ಲಿ ''ಪೂಮನ್ನಮಾದ್'' ಎಂದರು. ಇಲ್ಲಿ ''ಪಾಮಲರ್ ಪಾವೈ'' ಎಂದಿರುವರು. ಅಲ್ಲಿ ''ಪೆರುಂದಿಯ ಮಾರ್ಬ'' ಎಂದೂ, ಇಲ್ಲಿ ''ಅಣಿಯಾಹಮನ್ನುಂ'' ಎಂದೂ, ಅಲ್ಲಿ ''ಇರಾಮಾನುಶ ಶರಣಾರವಿಂದಂ ನಾಂ ಮನ್ನಿವಾಳ'' ಎಂದೂ ಇಲ್ಲಿ ''ನಂ-ತಲೈ-ಮಿಶೈಯೇ-ಇರಾಮಾನುಶನಡಿಪ್ಪೂಮನ್ನ್'' ಎಂದೂ ಅಲ್ಲಿಯೂ, ''ನೆಂಜೇ'' ಎಂದು ಹೃದಯದೊಂದಿಗೇ ಆರಂಭಿಸಿ, ಇಲ್ಲಿಯೂ, ''ನೆಂಜೇ'' ಎಂದೇ ಮುಗಿಸಿದರು. ಇದರಿಂದ ಪಡೆಯಬೇಕಾದುದರಲ್ಲಿ ಅಭಿರುಚಿಯ ಅಭಿವೃದ್ಧಿಗೊಂಡು, ಆ ಪ್ರಾಪ್ಯಸಿದ್ಧಿಗೆ ಸ್ವರೂಪಾನುರೂಪವಾದ ಈ ಸಂಪತ್ತು ಸಿದ್ಧಿಸಲೂ ಮುಖ್ಯ ಕಾರಣಗಳಾದ ಮಹಾಲಕ್ಷ್ಮಿಯಿಂದ ವಿಶೇಷ ಸಿದ್ಧಿಯನ್ನು ಪಡೆಯಲು ಆಶ್ರಯಿಸಿ, ಮಂಗಳಾಶಾಸನ ಮಾಡಬೇಕೆಂದು ಹೇಳಿರುವರು. ಭಕ್ತಿಯ ಚಿಲುಮೆಯು ಹೊರ ಹೊರಡುವಾಗಲೂ, ಹೀಗೆಯೇ ಪರಿಪರಿಯಾಗಿ ಹೊನಲಾಗಿ ಹರಿದು, ಕಡೆಗೊಳ್ಳುವಾಗಲೂ, ಅಸಾಧಾರಣವಾದ ಆನುರೂಪ್ಯವನ್ನು ಹೊಂದಿ ಭಕ್ತಿಯ ಪರಾಕಾಷ್ಠೆಯಿಂದ ಶ್ರೀಮದಾಚಾರ್ಯರ ಮೂಲಕ ಮಹಾಲಕ್ಷ್ಮಿಯ ಕಟಾಕ್ಷವಿಶೇಷದಿಂದಲೇ ಪರಮಪುರುಷಾರ್ಥ ಸಿದ್ಧಿಯಾಗಿ ಶ್ರೀಮನ್ನಾರಾಯಣನ ಸಂಪೂರ್ಣ ಪರಬ್ರಹ್ಮಾನುಭವಾನಂದಗಾಗುವುದೆಂದು ಪ್ರತಿಪಾದಿಸುವ ಈ ದಿವ್ಯ ಪ್ರಬಂಧವು ಭಕ್ತ ವಿಶೇಷ ನಿಬಂಧನ ಸುಧಾನಿಧಿಯಾಗಿಹುದು.

**श्रीमते रामानुजाय नमः**

**इति श्रीवेदान्तरामानुजमुनिकृपाहितवाग्विलासेन**
**विदुषा गोपालदासेन विरचिता**
**श्रीरामानुजनूत्तन्दादिविवरिणी**
**भावबोधिनीसमाख्या**
**चतुरूपा चतुराक्षरा**
**पूर्णतां ययौ**

**।। श्रीरस्तु ।।**

।। श्रीः ।।

## श्री भगवद्रामानुजनूत्तन्दादि-
## भावबोधिनीप्रकाशकस्य
## सविनयविज्ञप्तिः

श्रीमद्रामानुजार्यानघगुणमहिता द्राविडोक्त्या सुगाधाः
चक्रे प्रीत्या जगौ च श्रितगुरुकरुणः श्रीतरङ्गामृतार्यः ।
मोदायैता बुधानां हरिहरपुर-गोपालसूरि स्सुरोक्त्या
श्लोकीकृत्याखिलाश्च व्यवृणुत सुखबोधाय भाषाद्वयेन ।।

कौण्डिन्यंशतिलकस्य नृसिंहासूरेः
नप्ता बुधप्रवररङ्गधुरीणपौत्रः ।
गोपालसूरि रिह कृष्णसुधीतनूजः
रामानुजीय इति सन्त इमं इयन्ताम् ।।

श्रीमद्वेदान्तरामानुजगुरुकरणावेक्षणात्तात्मभाग्यः
श्रीमच्छ्रीवासयोगिप्रवरघनकृपालब्धवेदान्तभाग्यः ।
श्रीमच्छ्रीरङ्गनाथप्रथितगुरुपुनर्वीक्षणात्मीयभाग्यः
गोपालोऽनुग्रहार्हो ननु गुरुचरणत्राणसेवैकलोलः ।।

यतीन्द्र गुणपीयूष रसास्वाद समादराः ।
दासं सन्तोऽनुगृह्णन्तु प्रीयतां लक्ष्मणोमुनिः ।।

॥ಶ್ರೀಃ ॥

॥ ಶ್ರೀಮತೇ ನಿಗಮಾಂತಮಹಾದೇಶಿಕಾಯ ನಮಃ ॥

# ಅಮೃತರಂಜಿನೀ

**अन्वर्थामृतरंजिनीं रसभरां तत्वार्थसारां कृतिं**
**श्रीमद्वेदशिखागुरूत्तमकृतां तत्प्रेरितश्चादरात् ।**
**श्रीमद्वेदवतंसलक्ष्मणगुरोः व्याख्याति कारुण्यतः**
**श्लोकीकृत्य च मोदयत्यतितरां गोपालसूरि र्बुधान् ॥**

ಸಮಸ್ತ ಕಲ್ಯಾಣ ಗುಣನಿಧಿಯಾದ ಶ್ರೀ ವೆಂಕಟೇಶನ ಅಂಶಾವತಾರವಾಗಿ, ವೇಂಕಟನಾಥನೆಂದು ವಿಖ್ಯಾತರಾಗಿ, ಹಯಗ್ರೀವನನ್ನು ಪ್ರತ್ಯಕ್ಷಮಾಡಿಕೊಂಡು, ಕವಿತಾರ್ಕಿಕಸಿಂಹರೆಂದೂ, ಸರ್ವತ್ರಂತ್ರಸ್ವರೂಪರೆಂದೂ, ವೇದಾಂತಾಚಾರ್ಯರೆಂದೂ ವಿಶ್ವವಿದಿತರಾದ ದೇಶಿಕವರ್ಯರು ಮಣಿಪ್ರವಾಳರೂಪವಾಗಿ ಅನುಗ್ರಹಿಸಿದ ರಹಸ್ಯಗಳು 30. ಅವುಗಳಲ್ಲಿ (1) ತತ್ವಸಂದೇಶ, (2) ರಹಸ್ಯಸಂದೇಶ ವಿವರಣ, (3) ತತ್ವರತ್ನಾವಳಿ ಪ್ರತಿಪಾದ್ಯಸಂಗ್ರಹ ಇವುಗಳಲ್ಲಿ ಪಾಶುರಗಳಿಲ್ಲ. (1) "ಸಂಪ್ರದಾಯ ಪರಿಶುದ್ಧಿ" (2) ತತ್ವಪದವೀ, (3) ರಹಸ್ಯಪದವೀ, (4) ತತ್ವನವನೀತಂ (5) ರಹಸ್ಯನವನೀತಂ, (6) ತತ್ವಮಾತೃಕಾ, (7) ರಹಸ್ಯಮಾತೃಕಾ, (8) ರಹಸ್ಯ ಸಂದೇಶ, (9) ತತ್ವರತ್ನಾವಳೀ (10) ರಹಸ್ಯರತ್ನಾವಳೀ (11) ರಹಸ್ಯರತ್ನಾವಳೀ ಹೃದಯಂ, (12) ತತ್ವತ್ರಯಚುಳಕ, (13) ರಹಸ್ಯತ್ರಯಚುಳಕ, ಈ 13 ರಹಸ್ಯಗಳಲ್ಲಿ ಪಠಿಸಿರುವ 39 ಪಾಶುರಗಳನ್ನು ಸೇರಿಸಿ "ಅಮೃತರಂಜಿನೀ" ಎಂದು ಹೆಸರಿಟ್ಟು ಒಂದು ಪ್ರಬಂಧಭಾಗವನ್ನಾಗಿ ಮಾಡಿರುವರು. ಇವುಗಳನ್ನು ಒಳಗೊಂಡಿರುವುದೇ ಈ ಪುಸ್ತಕ.

ಇದುವರೆಗೆ ಕನ್ನಡ ಕನ್ನಡಿಯಲ್ಲಿ ಇದರ ಪ್ರತಿಕೃತಿಯು ಬಿದ್ದಿರದೆ, ಸಂಪ್ರದಾಯಾಭಿಮಾನಿಗಳ ನೆರವಿನಿಂದ ಬೆಳಕಿಗೆ ಬರುವಂತಾಗಿದೆ.

ಸಂಸ್ಕೃತ ಪ್ರತಿ ಶ್ಲೋಕವೂ ರಂಜಿನಿಯನ್ನು ಅನುರಂಜಿಸಬಹುದು. ಈ ಸೇವೆಯಲ್ಲಿ ಎಲ್ಲರ ನೆರವೂ, ಅಭಿಮಾನ ಎಂದಿಗಿಂತ ಹೆಚ್ಚಾಗಿರಬೇಕಾಗಿ ಕೋರುತ್ತೇನೆ.

ಮೈಸೂರು
ಶಾರ್ವರಿ ಆಶ್ವಯುಜ
1960

*ಶ್ರೀಮದಾಚಾರ್ಯಪಾದರೇಣುಃ*
**ವಿದ್ವಾನ್, ಹ. ಗೋಪಾಲಾಚಾರ್ಯಃ**

॥ಶ್ರೀಃ ॥

॥ ಶ್ರೀಮತೇ ನಿಗಮಾಂತಮಹಾದೇಶಿಕಾಯ ನಮಃ ॥

# ಅಮೃತರಂಜಿನೀ

ಮೂಲ : ತಂಪರಮೆನ್ರಿರಂಗಿತ್ತಳರಾಮನಂ ತನ್ದರುಳಾಲ್, ಉಂಬರ್
ತೊಳುಂ ತಿರುಮಾಲ್ ಉಹನ್ದೇರ್ಕ್ಕು ಮುಪಾಯ ಮೊನ್ರಾಲ್,
ನಂ ಪಿರವಿತ್ತುಯರ್ ಮಾತ್ತಿಯ ಞಾನಪ್ಪೆರುಂತಹವೋರ್,
ಶಂಪಿರದಾಯಮೊನ್ರಿಚ್ಚದಿರ್ಕ್ಕುಂ ನೆರಿಶಾರ್‌ನ್ದನಮೇ ॥ 1

(ಸಂಪ್ರದಾಯ ಪರಿಶುದ್ಧಿ)

ಅರ್ಥ :- ಅರುಳಾಲ್ = ದಯೆಯಿಂದ, ತಂ = ತಮ್ಮದೇ, ಪರಂ = ಭರವು, ಎನ್ರ್ = ಎಂದು, ಇರಂಗಿ = ವ್ಯಾಮೋಹಗೊಂಡು, (ತಮ್ಮಪಾದಗಳನ್ನು ಆಶ್ರಯಿಸಿ ಅಕಿಂಚನರಾದ ನಮ್ಮ ಭರವು ತಮ್ಮದೆಂದು ಸತ್ಸಂಪ್ರದಾಯಪ್ರವರ್ತಕರಾದ ಆಚಾರ್ಯರು ನಮ್ಮಲ್ಲಿ ವಾತ್ಸಲ್ಯಾತಿಶಯದಿಂದುಂಟಾದ ವ್ಯಾಮೋಹವುಳ್ಳವರಾಗಿ) ತಳರಾ = ಚಲಿಸದ, ಮನಂ = ಮನಸ್ಸನ್ನು, ತಂದ್ = ತಂದುಕೊಟ್ಟು, (ರಹಸ್ಯತ್ರಯವನ್ನೂ ಅದರರ್ಥವನ್ನೂ ಉಪದೇಶಿಸಿ, ಅದರಿಂದತತ್ವಹಿತಪುರುಷಾರ್ಥಗಳನ್ನು ಚೆನ್ನಾಗಿ ತಿಳಿಸಿ, ನಮ್ಮನ್ನು ಅತಿ ವಿಶ್ವಾಸವುಳ್ಳವರನ್ನಾಗಿಮಾಡಿ) ಉಂಬರ್ = ನಿತ್ಯಸೂರಿಗಳಿಂದ, ತೊಳುಂ = ಸೇವಿಸಲ್ಪಡುವ, ತಿರುಮಾಲ್ = ಶ್ರಿಯಃ ಪತಿಯಿಂದ, ಉಹನ್ದು = ಸಂತೋಷಿಸಿ, ಏರ್ಕ್ಕುಂ = ಯೋಗ್ಯವಾದ, ಉಪಾಯಂ-ಒನ್ರಾಲ್ = ಒಂದು ಉಪಾಯದಿಂದ, ನಂ = ನಮ್ಮ, ಪಿರವಿ = ಹುಟ್ಟಿನಿಂದ, (ಬರುವ) ತುಯರ್ = ದುಃಖವನ್ನು, ಮಾತ್ತಿಯ = ನಿವಾರಿಸುವ, ಪೆರುಂ = ಹೆಚ್ಚಾದ, ಞಾನ = ಜ್ಞಾನದಿಂದಲೂ, ತಹವ್ = ಕರುಣೆಯಿಂದಲೂ, ಓರ್ = ಅಧಿಕರಾದ, (ನಮ್ಮಾಚಾರ್ಯರ) ಶಂಪಿರದಾಯಂ = ಸಂಪ್ರದಾಯವನ್ನು, ಒನ್ರಿ = ಆಶ್ರಯಿಸಿ, ಶದಿರ್ಕ್ಕುಂ = ಚತುರವಾದ, ನೆರಿ = ಮಾರ್ಗವನ್ನು, ಶಾರ್‌ನ್ದನಮೇ = ಪಡೆದೆವು.

दत्वा चित्तं स्थिरं नः परमकरुणया सूरिसेव्यो रमेशः
तत्वज्ञानानुकम्पामहितसुमनसां सम्प्रदायेऽतिशुद्धे ।
योग्योपायेन तुष्टः स्वभर इति हि कारुण्यमस्मासु तन्वन्
जन्माद्युन्मूल्य दुःखं भवति मुदितहृत् प्राप्नुम श्लाध्यनिष्ठां ।। १

ಮೂಲ : ಕಡಲಮುದತ್ತೈ ಕ್ಕಡೈಂದು ಶೇರ್ತ್ತ ತಿರುಮಾಲಡಿ
ಕಾಟ್ಟಿಯನಂದೇಶಿಕರ್ ತನ್ನಿಲ್ಶೈ ಪತ್ತಿಚ್ಚೇರ್‌ನ್ದೋಮೇ ॥ 2

(ಸಂಪ್ರದಾಯ ಪರಿಶುದ್ಧಿ)

ಅರ್ಥ :- ಕಡಲ್ = ಕ್ಷೀರಸಮುದ್ರವನ್ನು, ಕಡೈನ್ದು = ಕಡೆದು, (ಅದರಿಂದ ಉಂಟಾದ) ಅಮುದತ್ತೈ = ಅಮೃತವನ್ನು, ಶೇರ್‌ತ್ತ = (ದೇವತೆಗಳಿಗೆ) ಸೇರುವಂತೆ ಮಾಡಿದ, ತಿರುಮಾಲ್ = ಶ್ರೀಪತಿಯ, ಅಡಿ = ಅಡಿಗಳನ್ನು, ಕಾಟ್ಟುಂ = (ಉಪಾಯ ಉಪೇಯ ಎಂದು) ತೋರಿಸುವ, ನಂ = ನಮ್ಮ, ದೇಶಿಕರ್ಶೈ = ಆಚಾರ್ಯರನ್ನು, ಶೇರ್‌ನ್ದೋಂ = ಸೇರಿದೆವು.

मथित्वाब्धिं देवताभ्य स्सुधां दत्तवतः श्रियः
पत्युः पदप्रदानस्मदाचार्यान् वयमाश्रिताः ॥ २

ಮೂಲ : ಮುತ್ತಿಕ್ಕರುಳ್ ಶೂಡ ಮೂನ್ರೈತ್ತೆಳಿಮುನ್ನಂ,
ಇತ್ತಿಕ್ಕಾಲೇರ್ರುಮಿತಂ ॥ 3

(ತತ್ವಪದವೀ)

ಅರ್ಥ :- ಮುತ್ತಿಕ್ಕ್ = ಮೋಕ್ಷ ಬರುವುದಕ್ಕೆ, (ಕಾರಣವಾದ) ಅರುಳ್ = ದಯೆಯನ್ನು, ಶೂಡ = ಶಿರಸಾವಹಿಸಲು, ಮುನ್ನಂ = ಮೊದಲು, ಮೂನ್ರೈ = (ಪರವರರೂಪವಾದ) ಮೂರು ತತ್ವವನ್ನು, ತೆಳಿ = ವಿವೇಕಿಸು, (ಓ ಮನವೆ ! ಎಂದು ಸೇರಿಸಿಕೊಳ್ಳಬೇಕು) ಇ-ತಿಕ್ಕಾಲ್ = ಈ ತತ್ವವಿವೇಚನದಿಂದ, ಇತಂ = ಹಿತವು, (ಉಪಾಯಾನುಷ್ಠಾನವು) ಏರ್ರುಂ = ಯೋಗ್ಯವಾಗುವುದು, (ಪೂರ್ಣ ವಾಗುವುದೆಂದು ಭಾವ)

मुक्ते र्निदानस्य हरेर्दयायाः शिरोऽवतंसीकरणाय पूर्वम् ।
जानीहि तत्वत्रय मेतयादिशा परं समीचीनहितं भवेत् ते ।। ३

ಮೂಲ : ಮೂನ್ರಿಲೊರುಮೂನ್ರು, ಮೂವಿರಣ್ಡು ಮುನ್ನಾಂಗುಂ,
ತೋನ್ರತ್ತೊಲ್ಶೈಯುಂ ತುಯರ್ ॥ 4

(ರಹಸ್ಯ ಪದವೀ)

ಅರ್ಥ :- ಮೂನ್ರಿಲ್ = (ಅಧ್ಯಾತ್ಮಶಾಸ್ತ್ರಸಾರಭೂತವಾದ) ರಹಸ್ಯತ್ರಯದಲ್ಲಿ, (ತತ್ವಹಿತಪುರುಷಾರ್ಥ ಪ್ರತಿಪಾದಕವಾದ ಪ್ರಣವಾದಿ ಮೂರು ಪದಗಳಾಗಿ)

ಒರು-ಮೂನ್ರುಂ = ಅದ್ವಿತೀಯವಾದ ಮೂಲಮಂತ್ರದ ಮೂರು ಅರ್ಥಗಳೂ, ಮೂವಿರಣ್ಡುಂ = (ಉಪಾಯೋಪೇಯ ಪ್ರತಿಪಾದಕವಾಗಿ ಎರಡು ಖಂಡಗಳಾಗಿರುವ ದ್ವಯ ಮಂತ್ರದ) 3 x 2 = 6, ಆರುಪದಗಳರ್ಥಗಳೂ, ಮುನ್ನಾಂಗುಂ = (ಅಧಿಕಾರಿಯ ಕೃತ್ಯಗಳನ್ನೂ ಶರಣ್ಯನ ಕೃತ್ಯಗಳನ್ನೂ ಎರಡು ಅರ್ಥಗಳಿಂದ ಪ್ರತಿಪಾದಿಸುವ ಚರಮ ಶ್ಲೋಕದ) 3 x 4 = 12 - ಹನ್ನೆರಡು ಪದಗಳರ್ಥಗಳೂ, (ಪದಸಂಖ್ಯೆಗಳನ್ನು ಹೇಳಿದುದು ಅರ್ಥಪರ್ಯಂತ ಅನುಮಾಡಬೇಕೆಂದು ಸೂಚಿಸುವುದು) ತೋನ್ರ = (ಸದಾಚಾರ್ಯ ಕಟಾಕ್ಷದಿಂದ ಮನದಲ್ಲಿ) ಚೆನ್ನಾಗಿ ಪ್ರಕಾಶಿಸಿದರೆ, ತುಯರ್ = ದುಃಖವೆಲ್ಲಾ, ತೊಲೈಯುಂ = ನಿವಾರಣೆಯಾಗುವುದು.

**त्रिषु त्रिकं त्रिद्विकं च त्रिचतुष्टयमेव च ।**
**ज्ञातेष्वेतेषु सम्यक् च प्रणश्येत् दुःखमत्र हि ॥ ४**

---

**ಮೂಲ : ಉಯಿರುಮುಡಲು ಮುಡಲಾಹ ಓಂಗಿ,**
**ತಯಿರ್ವೆಣ್ಣೈತ್ತಾರಣೆಯೋಡುಂಡಾನ್,**
**ಪಯಿರಿಲ್ ಕಳೈಪೋಲ್ ಅಶುರರೈಕಾಯ್ನ್ದಾ ರ್ತ**
**ಕೈಯಿಲ್ ವಳೈಪೋಲ್ ಎಮ್ಮಾಶಿರಿಯರ್ ವಾಕ್ಕು ॥ 5**

**(ತತ್ವ ನವನೀತಂ)**

ಅರ್ಥ :- ಉಯಿರುಂ (ಬದ್ಧ, ಮುಕ್ತ, ನಿತ್ಯರೂಪಾವಾದ) ಚೇತನವರ್ಗವನ್ನೂ, ಉಡಲುಂ = (ಶರೀರಗಳಾಗಿರುವ ತ್ರಿಗುಣ, ಕಾಲ, ಶುದ್ಧಸ್ವರೂಪವಾಗಿರುವ) ಅಚೇತನವರ್ಗವನ್ನೂ, ಉಡಲ್-ಆಹ = ಶರೀರವಾಗಿ, ಓಂಗಿ = ಸ್ವೀಕರಿಸಿ ಅಭಿವೃದ್ಧವಾಗಿರುವ, ತಯಿರ್ = ಮೊಸರನ್ನೂ, ವೆಣ್ಣೈ = ಬೆಣ್ಣೆಯನ್ನೂ, ತಾರಣೆಯೋಡು = ಪಾತ್ರಸಮೇತ, ಉಂಡಾನ್ = ತಿಂದವನಾದ, ರ್ತ = ತನಗಾಗಿ, ಪಯಿರಿಲ್-ಕಳೈ-ಪೋಲ್ = ಪಯಿರಿಗೆ ಕಳೆಗಿಡಗಳಂತೆ, ಅಶುರರೈ = (ಸಜ್ಜನರಿಗೆ ವಿರೋಧಿಗಳಾದ) ರಾಕ್ಷಸರನ್ನು, ಕಾಯ್ನ್ದಾನ್ = (ಮೇಲೆ ಬಿದ್ದುಕೋಪಿಸಿಕೊಂಡು) ನಾಶಮಾಡಿದವನಾದ, ಕೈಯಿಲ್‌ವಳೈ-ಪೋಲ್ = (ಭಗವಂತನ) ಕೈಯಲ್ಲಿರುವ ಬಳೆಗಳಂತೆ, ಎಂ = ನಮ್ಮ, ಆಶಿರಿಯರ್-ವಾಕ್ಕ್ = ಆಚಾರ್ಯರ ಮಾತುಗಳು (ವಿರೋಧಿಗಳನು ಸಂಹರಿಸಿ ಸಜ್ಜನರನ್ನು ಕಾಪಾಡಿದ ಪರಮಾತ್ಮನ ಕೈಯ್ಯಾಭರಣಗಳಂತೆ ನಮ್ಮ ಗುರುಗಳ ಮಾತುಗಳು ಒಡೆಯುವಂತಿವೆ ಎಂದು ಭಾವ) ಕಂಗೊಳಿಸುವುವು.

**यो वाचेतनचेतने सुकलयन् आत्मीयदेहं परः**
**य श्चोर्व्या सहितं चखाद नवनीतं चादरात् दध्यपि ।**

यो दैत्यान् कलमे जघान यवसोन्मूलैकनीत्योद्धतान्
अस्मद्देशिकसूक्तयो वलयवत् भान्त्यात्महस्ते सदा ।। ५

ಮೂಲ : ಅಲ್ಲೈಯತ್ತವಾರಮುದಕ್ಕಡಲ್ ಕಡಲುಣ್ಡಮುಗಿಲ್,
ವಿಲ್ಲೈಯತ್ತ ನನ್ಮಣಿವೆರ್ಪು ವೆಯಿನಿಲ ವೋಂಗುಪಹಲ್,
ತುಲ್ಲೈಯೊತ್ತನವೆನ್ಬರ್ ತೂಯ್ಮರೈಶೂಡುಂ ತುಳಾಯ್ಮುಡಿಯಾರ್ಕ್ಕ
ಇಲ್ಲೈಯೊತ್ತನವರ್ಣ ಪಾದಂ ಪಣಿಂದವರ್ ಎಣ್ಣುದರ್ಕ್ಕೇ ॥ 6

(ರಹಸ್ಯ ನವನೀತಂ)

**ಅರ್ಥ :-** ಅವರ್ಣ-ಪಾದಂ-ಪಣಿಂದವರ್ = ಆ ಪರಮಾತ್ಮನ ಪಾದಗಳನ್ನು ಆಶ್ರಯಿಸಿದ ನಮ್ಮ ಆಚಾರ್ಯರು, ತೂಯ್ = ಪರಿಶುದ್ಧವಾದ, ಮರೈ = ವೇದಗಳಲ್ಲಿ ಶೂಡುಂ = ಶಿರೋಭೂಷಣವಾಗಿರುವ, (ವೇದಾಂತ ಪ್ರತಿಪಾದ್ಯನಾದ) ತುಳಾಯ್-ಮುಡಿ ಯಾರ್ಕ್ಕು = ತುಲಸೀಮಾಲೆಯನ್ನು ತಲೆಯಲ್ಲಿ ಧರಿಸಿದ ಭಗವಂತನಿಗೆ, ಅಲ್ಲೈ-ಅತ್ತ = ಅಲೆಗಳಿಲ್ಲದ, ಆರ್-ಅಮುದ-ಕಡಲ್ = ಪೂರ್ಣವಾದ ಅಮೃತಸಮುದ್ರದಂತಿರುವವನು, ಕಡಲ್-ಉಂಡ = ಸಮುದ್ರವನ್ನು ಪಾನಮಾಡಿದ (ಸದ್ಯಃಫಲಪ್ರದವಾದ) ಮುಗಿಲ್ = ಮೇಘದಂತೆ ಇರುವವನು, ವಿಲ್ಲೈ-ಅತ್ತ = ಬೆಲೆಕಟ್ಟಲಾಗದ, ನಲ್ = ಒಳ್ಳೆಯ, ಮಣಿ-ವೆರ್ಪು = ನೀಲಮಣಿಪರ್ವತದಂತಿರುವವನು, ವೆಯಿಲ್ = ಬಿಸಿಲು, ನಿಲವು = ಬೆಳದಿಂಗಳು, ಓಂಗು = ಒಂದನ್ನೊಂದು ಒಪ್ಪುವಂತೆ ಸೇರಿರುವ, ಪಹಲ್ = ಹಗಲಂತಿರುವವನು, (ಎಂದು ಮೊದಲಾಗಿ) ತುಲ್ಲೈ-ಒತ್ತನ-ಎನ್ಬರ್ = ಸಮಾನತೆಯನ್ನು (ಹೋಲಿಕೆಯನ್ನು) ಹೊಂದಿವೆಯೆಂದು ಹೇಳುವರು. (ಒಂದೊಂದೂ ಒಂದೊಂದು ರೀತಿಯಲ್ಲಿ ಉಪಮಾನವಾಗುವುವು) ಎಣ್ಣುದರ್ಕ್ಕೇ = ಆಲೋಚಿಸಿ ನೋಡಿದರೆ, ಇಲ್ಲೈ-ಒತ್ತನನ್ = ತನ್ನ ಸಾಮಾನ್ಯವು ಮತ್ತಾವುದರಲ್ಲೂ ಇಲ್ಲದಂತಿರುವವನು, ನಿಸ್ಸಮಾಭ್ಯಧಿಕನೆಂದು ನಿಶ್ಚಿತವಾದುದು.

संशुद्धश्रुतिमस्तकस्य तुलसीमौळेः प्रपन्नाः पदोः
निर्वीचिं त्वमृतोदधिं जलधरं पीताम्बुधिं मण्यगं ।
मौल्यातीत महोऽब्रुवंस्तदुपमं ज्योत्स्नातपोद्भासितं
नेदं स्याच्च विमर्शने निरुपमो ह्यम्भोजवासापतिः ।। ६

ಮೂಲ : ಉತ್ತಿತಿಹಳುಮುರೈ ಮೂನ್ರಿಲ್ ಮುಮ್ಮೂನ್ರುಂ,
ಶಿತ್ತಮುಣರತ್ತೆಳಿವಿತ್ತಾರ್

ಮುತ್ತಿತರುಂ ಮೂಲಮರೈಯಿನ್ ಮುಡಿಶೇರ್
ಮುಗಿಲ್‌ವಣ್ಣರ್ ಶೀಲಮರಿವಾರ್ ಶಿಲರ್॥ 7

(ರಹಸ್ಯ ನವನೀತಂ)

ಅರ್ಥ:- ಮುತ್ತಿ-ತರುಂ = ಮುಕ್ತಿಯನ್ನು ಕೊಡುವ, ಮೂಲಮರೈಯಿನ್ = (ಸಕಲಶಾಸ್ತ್ರಗಳಿಗೂ) ಮೂಲವಾದ ವೇದಗಳ, ಮುಡಿ = ತಲೆಯ ಭಾಗದಲ್ಲಿ (ಉಪನಿಷತ್ತಿನಲ್ಲಿ) ಶೇರ್ = ಸೇರಿರುವ, ಮುಗಿಲ್-ವಣ್ಣರ್ = ನೀಲಮೇಘಶ್ಯಾಮನ, (ಮೂಲಮರೈ = ಪ್ರಣವದಲ್ಲಿಯಾಗಲೀ, ಮೂಲಮಂತ್ರದಲ್ಲಿಯಾಗಲೀ ಪ್ರತಿಪಾದ್ಯನಾದವನೆಂದೂ ಅರ್ಥಮಾಡಬಹುದು). ಶೀಲಂ = ಸ್ವಭಾವವನ್ನು, ಅರಿವಾರ್ = ಅರಿಯುವವರಾದ, ಶಿಲರ್ = ಕೆಲವರು (ನಮ್ಮ ಆಚಾರ್ಯರು) ಉತ್ತಿ = ಉಕ್ತಿಯಾಗಿ (ಅಪೌರುಷೇಯವಾಗಿ) ತಿಹಳುಂ = ಬೆಳಗುವ, ಉರೈ-ಮೂನ್ರಿಲ್ = ಮೂರು ರಹಸ್ಯೋಕ್ತಿಗಳಲ್ಲಿ, ಮುಮ್ಮೂನ್ರುಂ = (3 x 3 = 9) ಒಂಭತ್ತು ಅರ್ಥಗಳೂ, (ಮೂಲಮಂತ್ರದಲ್ಲಿ ಪ್ರಣವಾದಿ ವಾಕ್ಯತ್ರಯದ, ದ್ವಯದಲ್ಲಿರುವ ಮೂರು ವಾಕ್ಯಗಳು-ಚರಮ ಶ್ಲೋಕದಲ್ಲಿರುವ 3 ವಾಕ್ಯಗಳ ಅರ್ಥಗಳನ್ನು) ಚಿತ್ತಂ = ಮನಸ್ಸು, ಉಣರ-ಅರಿತು ಅನುಭವಿಸುವಂತೆ, (ಚೆನ್ನಾಗಿ) ಅರಿವಿತ್ತಾರ್ = ಉಪದೇಶಿಸಿದರು.

परमपदविदातु मूलवेदोदितस्य
जलधरगुणमूर्तेः तं स्वभावं विदन्तः ।
कतिचन गुरवश्चापौरुषेये रहस्ये
त्रय उपदिदिशुर्न स्त्रित्रिकार्थान् समस्तान् ।। ೭

ಮೂಲ : ಎನಕ್ಕುರಿಯನೆನದು ಪರಮೆನ್ವೇರೆನ್ನಾದಿವ್ವೈ,
ಯನ್ನೈತ್ತುಯಿರೈಯಿಲ್ಲಾವಿರೈಕ್ಕಡೈತ್ತೋಂ,
ತನಕ್ಕಿಣೈಯೊನ್ರಿಲ್ಲಾದ ತಿರುಮಾಲ್ ಪಾದಂ,
ಶಾದನಮುಂಪಯನು ಮೆನಚ್ಚಲಂಗಳ್ ತೀರ್ತ್ತೋಂ,
ಉನಕ್ಕಿದಮೆನ್ರೊರುಪಾಕನುರೈತ್ತದುತ್ತೋಂ,
ಉತ್ತಮನಾಮವನುದಿವಿಯೆಲ್ಲಾಂ ಕಂಡೋಂ,
ಇನಿಕ್ಕವರುಂ ವಹ್ವೈವರ ವಿಹಳ್‌ನ್ದೋಂ ಶೋಕಂ,
ಇಮ್ಮೈಯವರೋಡೊನ್ರಿನಾಮಿರುಕ್ಕುನಾಳೇ ॥ 8

## (ರಹಸ್ಯ ನವನೀತಂ)

**ಅರ್ಥ** :- ಎನಕ್ಕುರಿಯನ್ = ನನಗೆ ನಾನೇ ಸ್ವಾಮಿಯಾಗಿರುವೆನು. ಎನದ್-ಪರಂ = ನನ್ನ ರಕ್ಷಣೋಪಾಯವೂ ನನ್ನದೇ, ಎರ್-ಪೇರ್ = (ಆ ಉಪಾಯಾಚರಣೆಯಲ್ಲಿ ಬರುವ) ಫಲವೂ ನನ್ನದೇ, ಎನ್ನಾದು = ಹೀಗೆ ನೆನಯದೆ, ಇವ್ವೈ-ಅನೈತ್ತುಂ = (ಈ ಸ್ವರೂಪ, ಭರ, ಫಲಗಳು) ಇವೆಲ್ಲವನ್ನೂ, ಇರೈ-ಇಲ್ಲಾ = (ತನಗೆ) ಸ್ವಾಮಿಯಿಲ್ಲದ, ಇರೈಕ್ಕು = ಸ್ವಾಮಿಗೆ, (ಸರ್ವೇಶ್ವರನಾಗಿ ಸರ್ವಶರಣ್ಯನಾದ ಶ್ರೀವಲ್ಲಭನಿಗೆ) ಅಡೈತ್ತೋಂ = ಬರುವಂತೆ ಸ್ಥಾಪಿಸಿದೆವು, (ಅಹಂಮದ್ರಕ್ಷಣಭರಃ ... ಶ್ರೀ ಪತೇರೇವ॥) (ಅಡೈನ್ದೋಂ ಎಂದು ಪಾಠವೂವುಂಟು, = ಇವೆಲ್ಲಾ ಅವನದೇ ಎಂಬ ಅರಿವನ್ನು ಹೊಂದಿದೆವು ಎಂದರ್ಥ) ತನಕ್ಕು = ತನಗೆ, ಇಣೈ = ಸಮಾನವಾದುದು, ಒನ್ರು-ಇಲ್ಲಾದ = ಬೇರೊಂದು ಇಲ್ಲದ, ತಿರುಮಾಲ್-ಪಾದಂ = ಶ್ರೀಮನ್ನಾರಾಯಣನ ಪಾದಗಳು, ಶಾದನಮುಂ = ಉಪಾಯವೂ, ಪಯನುಂ-ಎನ = ಫಲವೂ ಎಂದು, (ತಿಳಿದೆವು). ಶಲಂಗಳ್ = ಅಡ್ಡಿಯಾಗುವುವೆಲ್ಲವನ್ನೂ, ತೀರ್ತ್ತೋಂ = ನಿವಾರಿಸಿದೆವು. ಒರು-ಪಾರ್ಕ = ಅಸಾಮಾನ್ಯವಾದ ಪಾರ್ಥಸಾರಥಿಯು, ಉನಕ್ಕ್-ಇತಂ-ಎನ್ರು = (ಭಕ್ತಿಯೋಗದಲ್ಲಿ ಅಶಕ್ತನಾದ) ನಿನಗೆ ಇದೇ ಹಿತಕರವಾದುದೆಂದು, ಉರೈತ್ತದ್-ಉತ್ತೋಂ = ಹೇಳಿದುದನ್ನು (ಚರಮಶ್ಲೋಕಾರ್ಥವನ್ನು) ಹೊಂದಿದೆವು (ಆಚರಿಸಿದೆವು). ಉತ್ತರ್ಮ = ಆಪ್ತನಾದ, ಅವನ್ = ಆಶರಣ್ಯನ, ಉದವಿ-ಎಲ್ಲಾಂ = ಉಪಕಾರಗಳೆಲ್ಲವನ್ನೂ, ಕಂಡೋಂ = ಚೆನ್ನಾಗಿ ತಿಳಿದೆವು. ಇನಿ = ಇನ್ನು ಮೇಲೆ, ಇಮ್ಮೈಯವರ್-ಓಡು-ಒನ್ರುನಾಂ-ಇರುಕ್ಕುಂ-ನಾಳ್ = ನಾವು ನಿತ್ಯಸೂರಿಗಳೊಂದಿಗೆರುವೆವೆಂದು ಹೇಳುವ ಒಳ್ಳೆಯ ಕಾಲವಾದುದು, ಕವರುಂ-ವಹೈ-ವರ = ನಮ್ಮನ್ನು ಸರಿಯಾಗಿ ಸೇರಿಸುವ ರೀತಿಯಲ್ಲಿ ಬರಲು, (ಪರಮಪದಪ್ರಯಾಣ ಸಮೀಪಿಸಿದ ಮೇಲೆ) ಶೋಕಂ-ಇಹಳ್ನ್ದೋಂ = ಶೋಕವೆಲ್ಲವನ್ನೂ ಬಿಟ್ಟು ಬಿಟ್ಟೆವು.

**शेषी मेऽहं भरो मे फलमिति च धियं संत्यजन् सर्व मेतत्**
**सर्वेशे सर्वशेषिण्यगमय मतुलश्रीशपादावुपायम् ।**
**ज्ञात्वोपेयं च विघ्नानहन मभिहितं यद्धितं तन्नियन्त्रा**
**लेभे श्रेष्ठोपकारानिह शुच मजहां नित्ययोगे ह्युपेते ।। ೮**

ಮೂಲ : ತತ್ತುವಂಗಳೆಲ್ಲಾಂ ತಹವಾಲರಿವಿತ್ತು,
ಮುತ್ತಿವಳಿತಂದಾರ್ ಮೊಯ್‌ಕಳಲೇ, ಅತ್ತಿವತ್ತಿಲ್

ಆರಮುದಮಾರಾಮಿರುನಿಲತ್ತಿಲೆನ್ರುರೈತ್ತಾರ್,
ತಾರಮುದಲೋದುವಿತ್ತಾರ್‌ತಾಂ ॥ 9

(ತತ್ವಮಾತೃಕಾ)

ಅರ್ಥ :- ತತ್ತುವಂಗಳ್-ಎಲ್ಲಾಂ = (ಪರಾವರರೂಪವಾದ) ತತ್ವಗಳೆಲ್ಲವನ್ನೂ, ತಹವಾಲ್ = ಅತಿಕೃಪೆಯಿಂದ, ಅರಿವಿತ್ತ್ = ಬೋಧಿಸಿದ, (ತತ್ವತ್ರಯ ವಿವೇಕಜ್ಞಾನವನ್ನುಂಟುಮಾಡಿ) ಮುತ್ತಿ-ವಳಿ-ತಂದಾರ್ = ಮೋಕ್ಷದ ಮಾರ್ಗವನ್ನು (ನಮಗೆ) ಕರುಣಿಸಿದ (ಭಕ್ತಿ ಪ್ರಪತ್ತಿಗಳೇ ಮುಖ್ಯೋಪಾಯಗಳೆಂದು ಉಪದೇಶಿಸಿದ) ಆಚಾರ್ಯರ, ಮೊಯ್ = ಒಂದಕ್ಕೊಂದು ಒಪ್ಪುವಂತಿರುವ (ಅಸದೃಶವಾದ), ಕಳಲೇ = ಪಾದಗಳೇ, ಇರು-ನಿಲತ್ತಿಲ್ = ಈ ವಿಶಾಲವುಹೀತಲದಲ್ಲಿ, ಆರ್-ಆಂ = ಉಪಾಯವಾಗುವುದು ಅ-ತಿವತ್ತಿಲ್ = ಆ ಪರಮಪದದಲ್ಲಿ, ಆರ್-ಅಮುದಂ = ಪರಿಪೂರ್ಣವಾದ ಅಮೃತವು (ಅತ್ಯಂತ ಭೋಗ್ಯವು), ಎನ್ರು = ಎಂದು, ಉರೈತ್ತಾರ್= ಉಪದೇಶಿಸಿದರು, ತಾಂ = ತಾವೇ (ಕೃಪೆಯಿಂದ) ತಾರ-ಮುದಲ್ = ಪ್ರಣವ ಮತ್ತು ಅದರಲ್ಲಿರುವ ಅರ್ಥವಿಶೇಷಗಳೇ ಮೊದಲಾದುವನ್ನು, ಓದು ವೈತ್ತಾರ್ = ಉಪದೇಶದ ಮೂಲಕ ಕಲಿಸಿದರು.

सर्वाण्येतानि तत्वान्यतिशयकृपया बोधयित्वा च सम्यक् ।
दातुर्मुक्त्येकपद्या असदृशचरणौस्तः पृथिव्यामुपायौ ।।
तस्मिन्नानन्दपूर्णेऽमृतमय मिति च प्राहुराचार्यवर्याः ।
अस्मानध्यापयंस्ते स्वय मिहकुशला स्तारमुख्यान् हितार्थान् ।। ९

ಮೂಲ : ತಿರುನಾರಣನೆನುಂ ದೈವಮುಂ ಶಿತ್ತುಮಶಿತ್ತುಮೆನ್ರು,
ಪೆರುನಾನ್ಮರೈಮುಡಿಪೇಶಿಯ ತತ್ತುವ ಮೂನ್ರುವೈಕೇಟ್ಟು,
ಒರುನಾಳುಣರ್‌ನ್ದವರುಯ್ಯುಂವಹೈಯಿನ್ರಿಯೊನ್ರುಹವಾರ್,
ಇರುನಾಲೆಳುತ್ತಿನಿದಯಂಗೋಳಿದಿಯ ವೇಣ್‌ಗುಣರೇ ॥ 10

(ತತ್ವಮಾತೃಕಾ)

ಅರ್ಥ :- ಪೆರು = ಹಿರಿದಾದ, ನಾಲ್-ಮರೈ = ನಾಲ್ಕು ವೇದಗಳ, ಮುಡಿ = ತಲೆಯಲ್ಲಿ (ಉಪನಿಷತ್ತುಗಳಲ್ಲಿ) ಪೇಶಿಯ = ಹೇಳಲ್ಪಟ್ಟ, ತತ್ತುವಂ = ತತ್ವಗಳನ್ನು, ತಿರು-ನಾರಣನ್-ಎನ್ನುಂ = ಶ್ರೀಮನ್ನಾರಾಯಣನೆಂಬ (ಪ್ರಸಿದ್ಧನಾದ) ದೈವಮುಂ =

ದೇವರು, ಶಿತ್ತುಂ = ಚೇತನವರ್ಗ, ಅಶಿತ್ತುಂ = ಅಚೇತನವರ್ಗ, ಎನ್ರು = ಎಂಬ, ಮೂನ್ರು = ಮೂರು ವಿಧವಾದ, ಇವ್ವೈ = ಇವನ್ನು, ಕೇಟ್ಟು = (ಆಚಾರ್ಯರ ಮೂಲಕ) ಕೇಳಿ, ಒರು-ನಾಳ್-ಉಣರ್ನ್ದವರ್ = ಒಂದು ಕಾಲದಲ್ಲಿ ಮನನ ಮಾಡಿದ ಉಯ್ಯುಂ-ವಹೈ-ಇನ್ರಿ = ಉಜ್ಜೀವಿಸುವ ರೀತಿಯನ್ನು ಬಿಟ್ಟು, ಒನ್ರು-ಉಹವಾರ್ = ಬೇರೆ ಒಂದನ್ನೂ ಅಂಗೀಕರಿಸರು, ಇರು-ನಾಲ್-ಎಳುತ್ತಿಲ್ = ಅಷ್ಟಾಕ್ಷರದಲ್ಲಿ, (ಇರುವ) ಇದಯಂಗಳ್-ಓದಿಯ = ಸಾರಾರ್ಥಗಳನ್ನು ತಿಳಿದಿರುವ, ಎಣ್-ಗುಣರೆ = ಅಷ್ಟಗುಣಪೂರ್ಣರೇ ಆಗುವರು.

श्रीमन्नारायणो नश्चिदचिदिति महाद्विर्द्विकाम्नायमौळौ ।
तत्वानि त्रीण्यमूनि क्वचिदहनि निशम्याथ नोज्जीवनार्थम् ।।
इच्छन्त्यंन्यं हि धीरा हृदयगमखिलं मूलमन्त्रस्य सारं ।
सम्यक् विज्ञाय चाष्टाक्षरमहितगुणाष्टाहितेष्टाश्श्रयन्ते ।। १०

ಮೂಲ : ಕಾರಣಮಾಯುಯಿರಾಹಿಯನ್ನೈತ್ತುಂ ಕಾಕ್ಕುಂ
ಕರುಣ್ಣೈಮುಗಿಲ್ ಕಮಲ್ಲೈಯುಡ ನಿಲಂಗುಮಾರುಂ,
ನಾರಣನಾರ್‌ವಡಿವಾನವುಯಿರ್‌ಹಳೆಲ್ಲಾಂ
ನಾಮೆನ್ರುನಲ್ಲಡಿಮ್ಮೈಕ್ಕೇರ್ಕುಮಾರುಂ,
ತಾರಣೆನೀರ್ಮುದಲಾನಮಾಯ್ಯೆಕಾಲಂ,
ತನಿವಾನೆನ್ರುವೈಯುರುವಾಂತನ್ನೈತಾನುಂ,
ಕೂರಣೆಶೀರ್‌ಮತಿಯುಡ್ಡೈಯ ಗುರುಕ್ಕಳ್‌ಕಾಟ್ಟ,
ಕುರಿಪ್ಪುಡನ್‌ನಾಂಕಂಡವಹೈಕ್ಕೂರಿನೋ ಮೇ ॥ 11

ಅರ್ಥ :- ಕಾರಣಮಾಯ್ = ಸರ್ವಕಾರಣನಾಗಿಯೂ, ಉಯಿರ್-ಆಹಿ = ಸರ್ವಕ್ಕೂ ಅಂತರ್ಯಾಮಿಯಾಗಿಯೂ, ಕರುಣ್ಣೈ-ಮುಗಿಲ್ = ದಯೆಯ ಮೇಘದಂತಿರುವ, ಕಮಲ್ಲೈ-ಉಡನ್ = ಶ್ರೀದೇವಿಯೊಡನಿರುತ್ತಾ, ಇಲಂಗುಂ = ಬೆಳಗುವ, ಮಾರುಂ = ಪ್ರಕಾರವನ್ನೂ, ನಾರಣನಾರ್ = ಶ್ರೀಮನ್ನಾರಾಯಣನ, ವಡಿವಾನ = ಶರೀರವಾಗಿರುವ, ಉಯಿರ್‌ಹಳ್-ಎಲ್ಲಾಂ = ಎಲ್ಲಾ ಜೀವರೂ, ನಾಂ = ನಾನು ಎಂಬ ಭಾವನೆಯನ್ನು (ಅಹಂಭಾವವನ್ನು) ವೆನ್ರು = ಜಯಿಸಿ, ನಲ್-ಅಡಿಮ್ಮೈಕ್ಕ್-ಏರ್ಕುಂ-ಮಾರುಂ = ನಿತ್ಯಸೂರಿಗಳು ಅನುಭವಿಸಲು ಯೋಗ್ಯವಾದ ಕೈಂಕರ್ಯಕ್ಕೆ ಅರ್ಹವಾದ ರೀತಿಯನ್ನೂ, ತಾರಣಿ = ಭೂಮಿ, ನೀರ್ = ನೀರು, ಮುದಲಾನ = ಮೊದಲಾದ, ಮಾಯ್ಯೆ = ಪ್ರಕೃತಿ, ಕಾಲಂ = ಕಾಲವೂ, ತನಿ-ವಾನ್ = ಅತಿವಿಲಕ್ಷಣವಾದ ಪರಮಾಕಾಶ, (ಶುದ್ಧಸತ್ವ)

ಎನ್ರ್-ಇವೈ = ಇವೆಲ್ಲವೂ, ಉರುವಾಂ-ತನ್ಮೈ-ತಾನುಂ = ಶರೀರವಾಗುವ ಸ್ವಭಾವವನ್ನೂ, ಕೂರ್ = ಸೂಕ್ಷ್ಮವಾಗಿಯೂ, ಅಣಿ = ಅಲಂಕಾರವಾಗಿಯೂ, (ಇರುವ) ಶೀರ್ = ಸದ್ಗುಣ, ಮತಿ = ಬುದ್ಧಿ, ಉಡೈಯ = ಇವುಗಳುಳ್ಳ, ಗುರುಕ್ಕಳ್ = ಆಚಾರ್ಯರು, ಕಾಟ್ಟ = ತೋರಿಸಲು, ಕುರಿಪ್ಪುಡನ್ = ಸಾವಧಾನವುಳ್ಳವರಾಗಿ, ನಾಂ-ಕಂಡ-ವಹ್ಹೆ = ನಾವು ನೋಡಿದ ರೀತಿಯನ್ನು ಕೂರಿನೋಂ = ಹೇಳಿರುವೆವು.

**हेतु र्विश्वान्तरात्माखिलजगदविता श्रीसहायो दयाभ्रः**
**भ्राजिष्णो रेव मात्मान इह च तनवस्तस्य नारायणस्य ।**
**जित्वाऽहन्तां सुसेवोचितविध मचलाम्बादि मायां च कालं**
**प्रत्येकाकाशरूपं त्विति धृतसहजाकारभूतस्वभावान् ।।**
**सूक्ष्मभूषागुणयुतैः गुरुभिर्दर्शितान् वयं ।**
**यथाद्राक्ष्म तथैवेह तानवच्मावधानतः ।।** ११

**ಮೂಲ : ಅಪ್ಪಡಿನಿನ್ರವಮಲನ್ ಪಡಿಯೆಲ್ಲಾಂ**
**ಇಪ್ಪಡಿಯೆಮ್ಮುಳ್ಳತ್ತೆಳುದಿನಾರ್ ಎಪ್ಪಡಿಯುಂ,**
**ಓರಾರ್ ಶುರುದಿಯೊಳಿಯಾಲಿರುಳ್‌ನೀಕ್ಕುಂ,**
**ತಾರಾಪತಿಯಣ್ಣೆಂದಾರ್‌ತಾಂ ॥** 12

**(ರಹಸ್ಯಮಾತೃಕಾ)**

ಅರ್ಥ :- ಎಪ್ಪಡಿಯುಂ = ಯಾವರೀತಿಯಾಗಿ, ಓರ್ = ವಿಮರ್ಶೆಮಾಡಿದರೂ (ಅದರಿಂದ) ಆರ್ = ಪೂರ್ಣವಾದ, ಶುರುದಿ = ವೇದದ, ಒಳಿಯಾಲ್ = ಜ್ಯೋತಿಯಿಂದ, ಇರುಳ್ = ಕತ್ತಲನ್ನು (ಅಜ್ಞಾನವನ್ನು) ನೀಕ್ಕುಂ = ನಿವಾರಿಸುವ, ತಾರಾಪತಿ = ಚಂದ್ರನನ್ನು, ಅಡೈಂದಾರ್ = ಆಶ್ರಯಿಸಿದವರು, ತಾಂ = ತಾವೇ, ಅಪ್ಪಡಿ-ನಿನ್ರ = ಆ ರೀತಿಯಾಗಿ ಇರುವ, ಅಮಲ = ನಿರ್ಮಲನ (ಪರಮಾತ್ಮನ) ಪಡಿ-ಎಲ್ಲಾಂ = ಸ್ವಭಾವಗಳೆಲ್ಲವನ್ನೂ, ಎಮ್ಮುಳ್ಳತ್ = ನಮ್ಮ ಹೃದಯದಲ್ಲಿ, ಎಳುದಿನಾರ್ = ಬರೆದರು. (ತಿಳಿಸಿದರು).

**अमलगा अखिला श्च तथाविधाः**
**हृदि न इत्थ मिहालिलिखु र्विधाः ।**
**श्रुतिरुचा बहुधा सुविमृश्य तं**
**तिमिरनाशिनमिन्दुमुपाश्रिताः ॥** १२

ಮೂಲ : ಶೆಂಬೊರ್ಕಳಲಿಣ್ಞೈ ಚ್ಚೆಯ್ಯಾಳಮರುಂ ತಿರುವರಂಗರ್,
ಅನ್ಬರ್ಕ್ಕಡಿಯವರಾಯ್ ಅಡಿಶೂಡಿಯನಾಮುರೈತ್ತೋಂ,
ಇನ್ಬತ್ತೊಹೈಯೆನವೆಣ್ಣಿಯ ಮೂನ್ರಿನೆಳುತ್ತಡೈವೇ,
ಐಂಬತ್ತೊರು ಪೊರುಳಾಲುಯಿರ್ಕಾಕ್ಕುಮಮುದೆನವೇ ॥ 13

(ತತ್ವಮಾತೃಕಾ)

ಅರ್ಥ :- ಶೆಂ = ಕೆಂಪಾದ, ಪೊನ್ = ಚಿನ್ನದಂತೆ (ಆಸೆಪಡುವಂತೆ) ಇರುವ, ಕಳಲ್-ಇಣ್ಞೈ = ಎರಡು ಪಾದಗಳನ್ನುಳ್ಳ, ಶೆಯ್-ಆಳ್ = ಕೆಂಪಾದ ವರ್ಣದ ಮಹಾಲಕ್ಷ್ಮಿಯಿಂದ, ಅಮರುಂ = ವಾಸಮಾಡಲ್ಪಟ್ಟ ವಕ್ಷಸ್ಥಳವುಳ್ಳ, ತಿರು-ಅರಂಗರ್ = ಶ್ರೀರಂಗನಾಥನ, ಅನ್ಬರ್ಕ್ = ಭಕ್ತರಿಗೆ (ಶ್ರೀರಂಗನಾಥನಲ್ಲಿ ಪ್ರೀತಿಯುಳ್ಳವರ) ಅಡಿಯವರಾಯ್ = ಪಾದಸೇವಕರಾಗಿ, ಅಡಿ-ಶೂಡಿಯ-ನಾಂ = (ಅವರ) ಅಡಿಗಳನ್ನು ಮುಡಿಗಳಲ್ಲಿ ಧರಿಸಿದ ನಾವು, (ಭಾಗವತರ ನಿಯಮನದಿಂದ ಈ ರಹಸ್ಯಾರ್ಥವು ಹೊರಬಂದಿತೆಂದರ್ಥ) ಮೂನ್ರಿಲ್ = ರಹಸ್ಯತ್ರಯದಲ್ಲಿ, ಎಳುತ್-ಅಡೈವೇ = ಪ್ರತಿಯೊಂದು ಅಕ್ಷರಗಳಲ್ಲಿಯೂ ಇರುವ ಅರ್ಥಕ್ರಮದಲ್ಲಿ ಇನ್ಬ-ತೊಹೈ-ಎನ = ಆನಂದಸಮೂಹವೊ ಎಂಬಂತೆ, ಎಣ್ಣಿಯ = ಎಣಿಸಲ್ಪಡುವ, ಐಂಬತ್ತೊರು ಪೊರುಳಾಲ್ = 51 ಅರ್ಥಗಳಿಂದ (ಮೂಲಮಂತ್ರದಲ್ಲಿ 30, ದ್ವಯ ದಲ್ಲಿ 10, ಚರಮಶ್ಲೋಕದಲ್ಲಿ 11 = ಒಟ್ಟು 51 ಎಂದರ್ಥ) ಉಯಿರ್-ಪ್ರಾಣ ಭೂತವಾದುವನ್ನು, ಕಾಕ್ಕುಂ = ರಕ್ಷಿಸುವ, ಅಮುದ್-ಎನ = ಅಮೃತವೆಂಬಂತೆ (ಈ ರಹಸ್ಯದಲ್ಲಿ ಅರ್ಥಗಳನ್ನು). ಉರೈತ್ತೋಂ = ಹೇಳಿದೆವು.

रक्तस्वर्णाभपादद्वयमहितसुवर्णाब्जवासेप्सितश्री-
रङ्गेशप्रेमशाल्याश्रितजनचरणाब्जोत्तमाङ्गावतंसाः ।
आनन्दस्तोमगण्यान् पफणिम सकलानेकपञ्चाशदर्थान्
वर्णस्थान् आत्मरक्षामृतमिव कलितान् तान् रहस्यत्रयेऽत्र ॥ १३

ಮೂಲ : ಯಾನರಿಯುಂ ಶುಡರಾಹಿನಿನ್ರೇ಼ ಮತ್ತುಂ ಯಾದುಮಲ್ಲೇ಼,
ವಾನಮರುಂತಿರುಮಾಲಡಿಯೇ಼ ಮತ್ತೋರ್ಪತ್ತುಮಿಲ್ಲೇ಼,
ತಾನಮುದಾಮರ್ವರ್ತ಼ ಶರಣೇ ಶರಣೆನ್ರಡೈನ್ದೇ಼,
ಮಾನಮಿಲಾವಡಿಮೈಪ್ಪಣಿಪೂಣ್ಡಮನತ್ತಿನನೇ ॥ 14

(ರಹಸ್ಯ ಸಂದೇಶ)

**ಅರ್ಥ** :- ಯಾ್ನ = ನಾನು ಎಂಬ ಪದದರ್ಥದ ನಾನು, ಅರಿಯುಂ = ಅರಿಯಲು ಯೋಗ್ಯವಾದ, ಶುಡರಾಹಿ = ಪ್ರಕಾಶವಾಗಿ (ಜ್ಯೋತಿಯಾಗಿ), ನಿನ್ರೇನ್ = ಇರುವೆನು (ಜ್ಞಾನಸ್ವರೂಪನೂ ಜ್ಞಾನಗುಣಕನೂ ಆಗಿರುವೆನೆಂದರ್ಥ) ಮತ್ತುಂ -ಯಾದುಂ = ಬೇರೆ ಯಾವ ಪದಾರ್ಥವಾಗಿಯೂ, ಇಲ್ಲೇನ್ = ಆಗಿರುವುದಿಲ್ಲ, (ದೇಹ, ಇಂದ್ರಿಯಾದಿ ಗಳಾಗುವುದಿಲ್ಲವೆಂದರ್ಥ) ವಾ್ನ = ಪರಮಪದದಲ್ಲಿ, ಅಮರುಂ = ನಿತ್ಯವಾಸಮಾಡುವ, ತಿರುಮಾಲ್ = ಲಕ್ಷ್ಮೀವಲ್ಲಭನಿಗೆ, ಅಡಿಯೇ್ನ = ದಾಸನಾಗಿಹೆನು, ಮತ್ತು ಓರ್ = ಬೇರೆಯಾರನ್ನೂ, ಪತ್ತುಂ-ಇಲೇನ್ = ಅವಲಂಬಿಸಿದವನಾಗಿರುವುದಿಲ್ಲ, ತಾ್ನ = ತಾನೇ, ಅಮುದ್-ಆಂ = ಭೋಗ್ಯವಾದ ಅಮೃತದಂತಿರುವ, ಅವ್ನ-ತ್ನ = ಆ ಶ್ರೀಮನ್ನಾರಾಯಣನ ಚರಣಗಳೇ, ಶರಣೆನ್ರ = ಶರಣು ಎಂದು, ಅಡೈಂದೇನ್ = ಹೊಂದಿದೆನು, ಮಾನಂ-ಇಲಾ = ಇಷ್ಟೇಯೆಂದು ಹೇಳಲಾಗದಷ್ಟು ಅಡಿಮೈ = ಸೇವೆಗಳೆಂಬ, ಅಣಿ = ಭೂಷಣಗಳಲ್ಲಿ, ಪೂಂಡ = ಆಸಕ್ತಿಯುಳ್ಳ, ಮನತ್ತಿನನೇ = ಮನಸ್ಸುಳ್ಳವನಾಗಿಯೇ ಆಗುವೆನು.

**ज्ञाता ज्योतिस्स्वपोऽस्म्यह मिह न पुनर्देहरूपादिरन्यः**
**दिव्यास्थानस्थितश्रीपतिचरणनिषेव्येव नान्यं ह्युपेयाम् ।**
**पीयूषाभस्य पादौ शरणमिति ययावुज्वलामेयसेवा-**
**लङ्कारै र्भूषितान्तः करणमहिमवानेव भूयास मद्य ॥ १४**

**ಮೂಲ** : **ಶೀಲಂಕವರ್ನ್ದಿಡುಂ ದೇಶಿಕರ್‌ತೇರ್ಶಿ ಪೆರುಮೈಯಿನಾಲ್,**
**ತೂಲಂಗಳನ್ನ ದುರಿತಂಗಳ್ ಮಾಯ್‌ನ್ದನತುಂಜಲ್‌ತರುಂ,**
**ಕೋಲಂಕಳಿನ್ದಿಡಕ್ಕೂರಿಯಕಾಲಂಕುರಿತ್ತುನಿನ್ರೋಂ,**
**ಮೇಲ್ ಇಂಗ್ ನಾಂಪಿರವೋಂವೇಲೈವಣ್ಣನೈಮೇವುದುಮೇ॥ 15**

(ರಹಸ್ಯ ಸಂದೇಶ)

**ಅರ್ಥ** :- ಶೀಲಂ-ಕವರ್ನ್ದ-ಇಡುಂ = ಆತ್ಮಗುಣಗಳನ್ನೂ, ಆಚಾರಗಳನ್ನೂ (ಚೆನ್ನಾಗಿ ನಿರೂಪಿಸಿ) ಅಂಗೀಕರಿಸುವ (ಅನುಷ್ಠಾನದಲ್ಲಿರಿಸಿಕೊಂಡಿರುವ), ದೇಶಿಕರ್ = (ಆಶ್ರಿತರನ್ನು ದಾರಿತಪ್ಪಿಹೋಗದಂತೆ ಮಾಡಿ ಒಳ್ಳೆಯದಾರಿಯಲ್ಲೇ ಇರುವಂತೆ ಮಾಡುವ) ಆಚಾರ್ಯರ ತೇರ್ಶಿ-ಪೆರುಮೈಯಿನಾಲ್ = (ಆತ್ಮ ಮತ್ತು ಆತ್ಮೀಯವಾದ) ತೇಜಸ್ಸುಳ್ಳ ಭರನ್ಯಾಸದ ಪ್ರಭಾವದಿಂದ, (ಅದರ ಪ್ರಭಾವವೆಂದರೆ ಪ್ರಾರಬ್ಧವನ್ನೂ ಪೂರ್ಣವಾಗಿ

ನಾಶಮಾಡುವ ಶಕ್ತಿ ಎಂದು ಭಾವ) ತೂಲಂಗಳ್ - ಅನ್ನ = ಹತ್ತಿಯಂತೆ, (ಅಷ್ಟು ಹಗುರವಾದುದಾಗಿ) ದುರಿತಂಗಳ್ = ಪಾಪಗಳೆಲ್ಲವೂ, ಮಾಯ್‌ನ್ದನ = ನಾಶವಾದವು. ("ಪೋಯ್‌ಪಿಳ್ಳೈಯುಂ ಪುಹತರುವಾನಿನ್ರವುಂ ತೀಯಿನಿಲ್‌ತೂಶಾಹುಂ" ಎಂದು ಹೇಳಿದಂತೆ ಉತ್ತರ ಪೂರ್ವಪಾಪಗಳು ಸಂಪೂರ್ಣ ತೊಲಗುವುದೆಂದರ್ಥ), ತುಂಜಲ್-ತರುಂ-ಕೋಲಂ = ನಿದ್ರೆಯನ್ನು ತರುವ ಶರೀರವನ್ನು), ಕಳಿಂದ್-ಇಡ = ಹೋಗಲಾಡಿಸಲು, ಕೂರಿಯ = ಸಂಕಲ್ಪಿಸಿದ, ಕಾಲಂ = ಸಮಯವನ್ನು, ಕುರಿತ್ತು = ಉದ್ದೇಶಿಸಿ, ನಿನ್ರೋಂ = ನಿಂತೆವು, (ಇದಕ್ಕೆ ತನ್ನ ಯತ್ನದ ಅಪೇಕ್ಷೆಯಿಲ್ಲದೆ, ದಾಟಲು ದೋಣಿ ಪಡೆವಂತೆ) ಮೇಲ್ = ಇನ್ನುಮುಂದೆ, ಇಂಗ್ = ಈ ಪ್ರಕೃತಿಮಂಡಲದಲ್ಲಿ, ನಾಂ = ನಾವು, ಪಿರವೋಂ = ಹುಟ್ಟೆವು, ವೇಲೈ-ವಣ್ಣನೈ = ಸಮುದ್ರದ ಬಣ್ಣ ಗುಣಗಳುಳ್ಳ ಆ ಪರಮಪದವಾಸಿಯಾದ ಶ್ರೀಮನ್ನಾರಾಯಣನನ್ನು (ಸಂಸಾರತಾಪಹರವಾದ ದಿವ್ಯದೇಹವುಳ್ಳ ಭಗವಂತನನ್ನು) ಮೇವುದುಮೇ = ಸೇರಿದವರಾದೆವು.

**आत्माचारसुशीलदेशिककृतोपायप्रभावात् यथा**
**तूलानामिह राशि राशु दहनात् पापानि दग्धानि नः ।**
**निद्रागात्रनिवृत्तये च नियतं कालं प्रतीक्षामहे**
**प्राप्स्यामो न पुनर्जनिं त्विह महोदन्वद्वर्णं संश्रिताः ।। १५**

ಮೂಲ : **ವಣ್ಮೈಯುಹನ್ದವರುಳಾಲ್‌ವರಂತರುಂ ಮಾದವನಾರ್,**
**ಉಣ್ಮೈಯುಣರ್‌ನ್ದವರೋದು ವಿಕ್ಕಿನ್ರ ಉರೈವಳಿಯೇ,**
**ತಿಣ್ಮೈತರುಂ ತೆಳಿವೊನ್ರಾಲ್ ತಿಣಿಯಿರುಳ್ ನೀಂಗಿಯನಾಂ,**
**ತಣ್ಮೈಕಳಿನ್ದನಂ ತತ್ತುವಂಕಾಣುಂತರತ್ತಿನಮೇ ॥ 16**

**(ತತ್ವರತ್ನಾವಳಿ)**

**ಅರ್ಥ** :- ವಣ್ಮೈ = ಔದಾರ್ಯದಿಂದ, ಉಹನ್ದ = ಸಂತೋಷಿಸಿದ, ಅರುಳಾಲ್ = ಕೃಪೆಯಿಂದ ವರಂ = (ಅವರಿಗೆ ಬೇಕಾದ) ಇಷ್ಟಾರ್ಥಗಳನ್ನು, ತರುಂ = ಕೊಡುವ, ಮಾದವನಾರ್ = ಶ್ರೀವಲ್ಲಭನ, ಉಣ್ಮೈ = ಸ್ವರೂಪ, ಗುಣ, ವಿಭೂತಿಮೊದಲಾದ ನಿಜವಾದ ಸ್ಥಿತಿಯನ್ನು, ಉಣರ್‌ನ್ದವರ್ = ಚೆನ್ನಾಗಿ ಅರಿತವರ (ಆಚಾರ್ಯರ), ಓದುವಿಕ್ಕಿನ್ರ = ಉಪದೇಶಮಾಡುವ, ಉರೈ-ವಳಿಯೇ = (ರಹಸ್ಯತ್ರಯ) ಶಬ್ದರೂಪವಾದ ಗ್ರಂಥಮಾರ್ಗವಾಗಿ, ತಿಣ್ಮೈ = ದೃಢತೆಯನ್ನು, ತರುಂ = ಕೊಡುವ, ತೆಳಿವ್-ಒನ್ರಾಲ್ = ಉತ್ತಮವಾದ ಜ್ಞಾನವೊಂದರಿಂದ, ತಿಣಿ = ನಿಬಿಡವಾದ (ಒತ್ತಾದ), ಇರುಳ್ = ಕತ್ತಲನ್ನು,

ನೀಂಗಿಯ = ನಿವಾರಿಸಕೊಂಡ, ನಾಂ = ನಾವು (ಹೆಚ್ಚಾಗಿದ್ದ ಅಜ್ಞಾನಾಂಧಕಾರವನ್ನು ಹೋಗಲಾಡಿಸಿಕೊಂಡ ನಾವು) ತಣ್ಮೈ = ಕೀಳುತನವನ್ನು (ಅಜ್ಞತೆ, ಪಾಷಂಡಿತನ ಮೊದಲಾದ ಅಪಕರ್ಷವನ್ನು) ಮಹಿಳ್ನ್ದನಂ = ಹೋಗಲಾಡಿಸಿಕೊಳ್ಳುವೆವು (ಪೂರ್ವದೆಶೆಯನ್ನು ಬಿಟ್ಟು ಉತ್ತರ ದೆಶೆಯನ್ನು ಹೊಂದುವೆವು), ತತ್ತುವಂ-ಕಾಣುಂ = ತತ್ತ್ವಾರ್ಥಗಳನ್ನು ಇದ್ದುದಿದ್ದಂತೆ ಅರಿಯುವ ಮೇಲ್ಮೆಯನ್ನು , ತರತ್ತನಂ = ಹೊಂದುವೆವು (ನಿಕರ್ಷತೆಯನ್ನು ಬಿಟ್ಟು ತತ್ತ್ವಾರ್ಥಗಳನ್ನರಿಯುವಂತಾಗುವೆವು ಎಂದು ಭಾವ).

**औदार्योत्कर्षहर्षप्रगुणकरुणया माधवस्येष्टदातुः**
**याथार्थ्यं जानतां तै रनुपमवचनै र्जातया दार्ढ्यमत्या ।**
**मत्या प्रोत्सारयाम स्तिमिर मतिततं चापकर्षं जहीमः**
**याथातथ्यं यथा वा वयमखिल मवाप्स्यामईदृक्प्रकर्षम् ।। १६**

ಮೂಲ : ನಾರಾಯಣ್ ಪರಂನಾಮವನುಕ್ಕು ನಿಲ್ಯೆಯಡಿಯೋಂ,
ಶೋರಾದನೈತ್ತುಮವನುಡುಮ್ಬೆನ್ನುಂಶುರುದಿಹಳಾಲ್,
ಶೀರಾರ್ ಪೆರುನ್ತಹೈತ್ತೇಶಿಕರೆಮ್ಮೈತ್ತಿರುತ್ತದಲಾಲ್,
ತೀರಾಮಯಲಹತ್ತುಂ ತಿರಂಬಾತ್ತೆಳಿವುತ್ತನಮೇ ।। 17

(ತತ್ವರತ್ನಾವಳೀ)

ಅರ್ಥ :- ಶೀರ್-ಆರ್ = ಕಲ್ಯಾಣಗುಣಗಳಿಂದ ತುಂಬಿದ, ಪೆರುಂ-ತಹೈ = ಅತ್ಯಧಿಕವಾದ ದಯೆಯುಳ್ಳ, ದೇಶಿಕರ್ = ಆಚಾರ್ಯರು, ನಾರಾಯಣ್ = ನಾರಾಯಣನೇ, ಪರನ್ = ಪರತತ್ವವು, ನಾಂ = ನಾವು, ಅವನಕ್ಕು = ಆ ನಾರಾಯಣನಿಗೆ, ನಿಲ್ಯೆ = ಸಾರ್ವಕಾಲಿಕರಾದ, ಅಡಿಯೋಂ = ಸೇವಕರು, (ಆತ್ಮವರ್ಗವೆಲ್ಲ ಅವನಿಗೆ ನಿರುಪಾಧಿಕವಾದ ದಾಸವರ್ಗಗಕ್ಕೆ ಸೇರಿದುದು), ಅನೈತ್ತುಂ = (ಚೇತನಾಚೇತನವಾದ ವಸ್ತು) ಎಲ್ಲವೂ, ಶೋರಾದು = ಬಿಡದೆ, ಅವನ್-ಉಡಂಬು = ಅವನಶರೀರವು, ಎನ್ನುಂ = ಹೀಗೆ, ಶುರುದಿಹಳಾಲ್ = (ಪ್ರತಿಪಾದಿಸುವ) ವೇದಗಳಿಂದ, ಎಮ್ಮೈ = (ಎಲ್ಲೆಲ್ಲೋ ಅಲೆದಾಡುತ್ತಿರುವ) ನಮ್ಮನ್ನು, ತಿರುತ್ತದಲಾಲ್ = ಶಿಕ್ಷಿಸಿದ್ದರಿಂದ, ತೀರಾಮಯಲಹತ್ತುಂ = ಯಾವುದರಿಂದಲೂ ಹೋಗಲಾಡಿಸಲಾಗದ ಅಜ್ಞಾನವನ್ನು ಹೋಗಲಾಡಿಸುವ, ತಿರಂಬಾ = ಮರೆಯದಂತಹ, ತೆಳಿವು = ಜ್ಞಾನವನ್ನು, ಉತ್ತನಂ = ಪಡೆದೆವು.

**नारायणो हि परमो वय मेतदीयाः**
**शेषा अशेषभुवनं वपु रस्य चेति ।**

वेदै र्गुणाढ्यकरुणाळुगुरूपदेशात्
अज्ञान माजिहि मतिं त्वचला मवापम् ।। १७

ಮೂಲ : ಒನ್ರೇ ಪುಹಲೆನ್ರುಣರ್ನ್ದವರ್ ಕಾಟ್ಟತ್ತಿರುವರುಳಾಲ್,
ಅನ್ರೇ ಅಡೈಕ್ಕಲಂಕೊಣ್ಡನಮ್ಮತ್ತಿಗಿರಿತ್ತಿರುಮಾಲ್,
ಇನ್ರೇಯಿಶೈಯಿಲಿಣೈಯಡಿಶೇರ್ಪರ್ ಇನಿಪ್ಪಿರವ್ವೋಂ,
ನನ್ರೇವರುವದೆಲ್ಲಾಂ ನಮಕ್ಕು ಪ್ಪರಮೊನ್ರಿಲದೇ ॥ 18

(ರಹಸ್ಯ ರತ್ನಾವಳೀ)

ಅರ್ಥ :- ತಿರು-ಅರುಳಾಲ್ = ಮಹಾಲಕ್ಷ್ಮಿಯ ಕರುಣೆಯಿಂದ, ಒನ್ರೇ = ಒಬ್ಬನೇ (ಶ್ರೀಮನ್ನಾರಾಯಣನೊಬ್ಬನೇ) ಪುಹಲ್ = ಉಪಾಯವು (ಸಿದ್ಧೋಪಾಯವು) ಎನ್ರು = ಎಂದು, ಉಣರ್ನ್ದವರ್ = (ಚೆನ್ನಾಗಿ ಅನುಭವಕ್ಕೆ ತಂದುಕೊಂಡಿರುವ) ಅರಿತ ಆಚಾರ್ಯರ, ಕಾಟ್ಟ = ತೋರಿಸಿಕೊಡಲು (ಉಪದೇಶಿಸಲು), ಅನ್ರೇ = ಆಗಲೇ (ಭರನ್ಯಾಸದ ಮರುಘಳಿಗೆಯಲ್ಲೇ) ಅಡೈಕ್ಕಲಂ-ಕೊಂಡ = ರಕ್ಷಿಸಬೇಕಾದ ವಸ್ತುವಿದೆಂದು ಸ್ವೀಕರಿಸಿದ, ನಂ = ನಮ್ಮ, ಅತ್ತಿಗಿರಿ-ತಿರುಮಾಲ್ = (ಪ್ರಭುವಾದ) ಹಸ್ತಿಗಿರಿಯಲ್ಲಿ (ವಿರಾಜಮಾನನಾಗಿರುವ ವರದರಾಜನು)ರುವ ಶ್ರೀಕಾಂತನು, ಇನ್ರೇ = ಪ್ರಪತ್ತಿಯ ಉತ್ತರಕ್ಷಣದಲ್ಲೇ, ಇಶೈಯಿಲ್ = (ಸಂಸಾರ ನಿವೃತ್ತಿಯಾಗಬೇಕೆಂದು) ಕೋರಿದರೆ, ಇಣೈ-ಅಡಿ = (ತನ್ನ) ಪಾದಗಳೆರಡನ್ನೂ, ಶೇರ್ಪರ್ = ಪಡೆಯುವಂತೆ ಮಾಡುವನು. ಇನಿ = ಈ ಶರೀರ ತ್ಯಾಗಮಾಡಿದಮೇಲೆ, ಪಿರವ್ವೋಂ = ಮತ್ತೆ ಜನ್ಮ ತಾಳುವುದಿಲ್ಲ, ವರುವದೆಲ್ಲಾಂ = ಈ ದೇಹ ಬಿಡುವತನಕ ಇರುವ ಕಾಲದಲ್ಲಿ ಬರುವ ಸುಖದುಃಖಗಳೆಲ್ಲಾ, ನನ್ರೇ = (ಅವನ ಅನುಗ್ರಹದ ಫಲವೇ ಆದುದರಿಂದ) ಒಳ್ಳೆಯದಾಗಿಯೇ ಇರುವುವು, ನಮಕ್ಕು = ನಮಗೆ, ಪರಂ-ಒನ್ರು = ಭರವು ಒಂದೂ, (ಭಗವಂತನಲ್ಲಿ ನಮ್ಮ ಭಾರವನ್ನು ಒಪ್ಪಿಸಿದಮೇಲೆ ಈ ಆತ್ಮಯಾತ್ರೆಯಲ್ಲಾಗಲೀ, ಈ ದೇಹಯಾತ್ರೆಯಲ್ಲಾಗಲೀ ನಮ್ಮದಾದ ಕರ್ತವ್ಯ ಲೇಶವೂ) ಇಲದೇ = ಇಲ್ಲವೇ ಇಲ್ಲವಲ್ಲವೇ !

सिद्धोपाय स्स एवेत्यवगमयितृषु श्रीदयैकाश्रयेषु
रक्ष्यत्वेनैव गृह्णन् सपदि करिगिरिश्रीधरो न स्तदैव ।
मुक्ता वभ्यर्थितायां निजपदयुगळीं प्रापयत्येव भूयः
नैवोत्पत्ति र्यदास्मं शुभकर मखिलं नास्ति नो ह्यात्मभारः ।। १८

ಮೂಲ : ಶಿರುಪಯನಿಲ್‌ಪಡಿಯಾದತಹವ್ರೋರೆಮ್ಮೈ,
ಚ್ಚೇರ್ಕವಡೈಕ್ಕಲಂಕೊಂಡತಿರುಮಾಲ್‌ತಾನೇ,
ಮರುಪಿರವಿಯರುತ್ತಳಿಯಾವಾನಿಲ್‌ವೈಕ್ಕುಂ
ಮನಮೇ ! ನೀಮಹಿಳಾದೇಯಿರುಪ್ಪದೆನ್‌ಕೊಲ್,
ಉರುವದುನಕ್ಕುರೈಕ್ಕೇನಿಂಗಿರುಂದಕಾಲಂ,
ಒರುಪಿಳ್ಳೈಯುಂ ಪುಹುದಾದವುಣರ್ತ್ತಿವೇಣ್ಡಿ,
ಪ್ಪೆರುವದೆಲಾಂ ಇಂಗೇನಾಂ ಪೆತ್ತುವಾಳ,
ಪೇರಡಿಮ್ಮೈಯಾಲೇತೆನ್ರಿಹಳೇಲ್‌ನೀಯೇ ॥ 19

(ರಹಸ್ಯ ರತ್ನಾವಳೀ)

ಅರ್ಥ :- ಶಿರು-ಪಯನಿಲ್ = ಅಲ್ಪ ಫಲದಲ್ಲಿ, ಪಡಿಯಾದ = ಪಡಿಯದ (ಆಸಕ್ತರಾಗದ) ತಹವ್ರೋರ್ = ದಯಶಾಲಿಗಳಾದವರು (ಆಚಾರ್ಯರು) ಎಮ್ಮೈ = (ಅಕಿಂಚನರಾದ) ನಮ್ಮನ್ನು, ಶೇರ್ಕ = ಒಪ್ಪಿಸಲು, (ನಮ್ಮ ಅಕಿಂಚನತೆಯನ್ನು ನಿವೇದಿಸಿ ಆ ಭಗವಂತನ ಪಾದಗಳಲ್ಲಿ ಅರ್ಪಿಸಲು) ಅಡೈಕ್ಕಲಂ-ಕೊಂಡ = ರಕ್ಷಿಸುವಂತೆ ಸ್ವೀಕರಿಸಿದ, ತಿರುಮಾಲ್ = ಶ್ರೀ ವಲ್ಲಭನು, ತಾನೇ = ತಾನಾಗಿ, ಮರುಪಿರವಿ-ಅರುತ್ತ್ = ಮತ್ತೆ ಜನಿಸುವಂತೆ ಮಾಡಿದ್ದ ಪಾಪವೆಲ್ಲವನ್ನೂ ಸಂಪೂರ್ಣವಾಗಿ ನಾಶಮಾಡಿ, ಅಳಿಯಾ = ಅಳಿವಿಲ್ಲದ (ನಾಶವಾಗದೆ ಶಾಶ್ವತವಾಗಿರುವ) ವಾನಿಲ್ = ಶ್ರೀ ವೈಕುಂಠದಲ್ಲಿ, ವೈಕ್ಕುಂ = ಕೊಂಡಿರಿಸುವೆನು. ಮನಮೇ ! = (ಎಲ್ಲಕ್ಕೂ ಕಾರಣವಾದ) ಮನಸ್ಸೇ ! ನೀ = ನೀನು, ಮಹಿಳಾದೇ = ಸಂತೋಷಪಡದೆ. ಇರುಪ್ಪದ್ = ಇರುವುದು, ಎನ್‌ಕೊಲ್ = ಏತರಿಂದ? (ಎಂಬುದನ್ನು ಅರಿತೆಯಾ ?) ಇಂಗ್-ಇರುಂದ-ಕಾಲಂ = (ಎಲ್ಲಾ ತೊಂದರೆಗಳನ್ನುಂಟುಮಾಡುವ) ಈ ಲೋಕದಲ್ಲಿ ಇರಬಹುದಾದ ಕಾಲದಲ್ಲೆಲ್ಲಾ, ಉರುವದ್ = ಹೇಳಬೇಕಾದ ಯೋಗ್ಯವಾದಕಾರ್ಯವನ್ನು ಉನಕ್ಕ್ = (ಸಂಶಯಪಡದೆ ದೃಢವಾಗಿರುವ) ನಿನಗೆ, ಉರೈಕ್ಕೇನ್ = ಹೇಳುವೆನು. ಒರು-ಪಿಳ್ಳೈಯುಂ = ಯಾವೊಂದು ಉಪದ್ರವವೂ, ಪುಹುದಾದ = ಬರದಂತಿರುವ, ಉಣರ್ತಿ-ವೇಂಡಿ = ಅನುಭವಜ್ಞಾನವನ್ನು ಅಪೇಕ್ಷಿಸಿ, (ಭಗದ್ಭಾಗವತಾಪಚಾರಾದಿಗಳು ಬರದಂತೆ ಭಕ್ತಿಜ್ಞಾನಗಳನ್ನು ಬೇಡಿಕೊಂಡು) ನಾಂ = (ಪ್ರಸನ್ನರಾದ) ನಾವು, ಪೆರುವದೆಲ್ಲಾಂ = (ಪರಮ ಪದದಲ್ಲಿ) ಪಡೆಯ ಬಹುದಾದ ಸೇವೆಗಳೆಲ್ಲವನ್ನೂ, ಇಂಗೇ = ಈ ಭೂಮಿಯಲ್ಲೇ, ಪೆತ್ತು-ವಾಳ = ಪಡೆದು ಬಾಳುತ್ತಿರುವಾಗ, ಪೇರ್-ಅಡಿಮ್ಮೈಯಾಲ್ = ಹಿರಿಯದಾದ ಸೇವೆಯಿಂದ, ಏದ್ = ಏನು ಫಲ ? ಎನ್ರ್ = ಎಂದು, ನೀ = ನೀನು, ಇಹಳೇಲ್ = ಚಿಂತಿಸಬೇಡ.

श्रीशेऽस्मां श्च समर्पयत्सु गुरुषु क्षुद्रे फलेऽसङ्गिषु
रक्ष्यत्वेन गृहीतवत्यथ जगन्मातुः प्रिये न स्स्वयम् ।
भूयोजन्म निवार्य शाश्वतपरव्योम्नि प्रतिष्ठापयेत्
स्वान्तानन्दि कुतो न चासि ? कथयाम्यत्यन्तयुक्तं वचः ।।
यावत्स्थिति स्स्यादिह ते निरागसं संप्राथ्य बोधं निखिलं च लब्ध्वा ।
प्राप्तव्य मस्मास्विह तुष्टिमत्सु त्वमेव नोदास्व हि शेषवृत्तौ ।। १९

ಮೂಲ : ಶಾಕ್ಕಿಯರ್ ಶೈನರ್‌ಹಳ್‌ಶಾರ್ವಾಕರ್‌ಶಾಂಕಿಯರ್‌ಶೈವರ್‌ಮತ್ತುಂ,
ತಾಕ್ಕಿಯರ್‌ನೂಲ್‌ಹಳ್‌ಶಿದೈಯತ್ತನಿಮರೈಯಿನ್‌ಕರುತ್ತೈ,
ವಾಕ್ಕಿಯಂ ಮುಪ್ಪದಿನಾಲ್ ವಹೈಶೆಯ್‌ದುವಿಯಾಕರಿತ್ತೋಂ,
ತೇಕ್ಕಿಮನತ್ತುಳ್ಳಿತನೈತ್ತಿಣೆಯಿರುಳ್ ನೀಂಗುಮಿನೇ ॥ 20

(ರಹಸ್ಯರತ್ನಾವಳೀ ಹೃದಯಂ)

ಅರ್ಥ :- ತನಿ-ಮರೈಯಿನ್ = ಅಸಮಾನವಾದ ವೇದಗಳ, ಕರುತ್ತೈ = ಅಭಿಪ್ರಾಯವನ್ನು, ವಾಕ್ಕಿಯಮುಪ್ಪದಿನಾಲ್ = ಮೂವತ್ತು ವಾಕ್ಯಗಳಿಂದ, ವಹೈ-ಶೆಯ್ದು = (ಚಿತ್-ಅಚಿತ್-ಈಶ್ವರತತ್ವಗಳ ಸ್ವರೂಪ ಸ್ವಭಾವಾದಿಗಳೆಲ್ಲವನ್ನೂ) ವಿಶದವಾಗಿ ಬೇರ್ಪಡಿಸಿ, ಶಾಕ್ಕಿಯರ್ = ಬೌದ್ಧರು, ಶೈನರ್‌ಹಳ್ = ಜೈನರು, ಶಾರ್ವಾಕರ್ = ಚಾರ್ವಾಕರು, ಶಾಂಕಿಯರ್ = ಸಾಂಖ್ಯರು (ಕಾಪಿಲರು), ಶೈವರ್ = ಪಾಶುಪತದವರು, ಮತ್ತುಂ = ಇವರಲ್ಲದೆ, ತಾಕ್ಕಿಯರ್ = ತಾರ್ಕಿಕರು (ಕಣಾದಾದಿಗಳು) ನೂಲ್‌ಹಳ್ = (ಇವರ) ಶಾಸ್ತ್ರಗಳನ್ನು, ಶಿದೈಯ = ಸದೆಬಡಿಯಲು, (ನಾಶಮಾಡಲು) ವಿಯಾಕರಿತ್ತೋಂ = ವ್ಯಾಖ್ಯಾನಮಾಡಿದೆವು, ಇದನ್ನೈ = ಈ ಅರ್ಥವನ್ನು, ಮನದಿಲ್ = ಮನಸ್ಸಿನಲ್ಲಿ, ತೇಕ್ಕ = ಸ್ಥಿರವಾಗಿಟ್ಟುಕೊಂಡು, ತಿಣಿ-ಇರುಳ್ = ದೃಢವಾದ (ಅಜ್ಞಾನವೆಂಬ) ಅಂಧಕಾರವನ್ನು, ನೀಂಗುಮಿನೇ = ಹೋಗಲಾಡಿಸಿದಿರಿ, (ತಾವು ಹೇಳಿರುವ ತತ್ವಾರ್ಥಗಳನ್ನು ಚೆನ್ನಾಗಿ ಅರಿತು ಮನಸ್ಸಿನಲ್ಲಿಟ್ಟುಕೊಂಡಿದ್ದರೆ ಮೇಲೆ ಹೇಳಿದ ಮತಗಳ ದುರ್ಬೋಧನೆಗಳೆಲ್ಲಾ ತೊಲಗಿ ಯಥಾರ್ಥವು ತಾನಾಗಿಯೇ ತಿಳಿಯುವುದು. ಆಯಾ ಮತದ ವಾದ ವೈಖರಿಯಿಂದುಟಾಗುವ ಭ್ರಾಂತಿಯು ಹೋಗುವುದೆಂದು ಭಾವ).

चार्वाकार्हतसांख्यशैवकणभुक् दुस्तर्कबौद्धाद्यसत्-
तन्त्रोन्मूलकृते निगूढमतुलं भावं श्रुते स्त्रिंशता ।

**वाक्यै र्व्याकृतवान् विविच्य विशदं त्वेतच्च चिते बुधाः**
**ऐकाग्र्येण दृढं निधाय निबिडं मोहान्धकारं हत ॥ २०**

ಮೂಲ : **ತಳ್ಳತ್ತುಣೆಯಿನುಂ ತಾಯ್‌ಪೋಲಿರಂಗುಂ ತನಿತ್ತಹವಾಲ್,**
**ಉಳ್ಳತ್ತುರೈಹಿನ್ರ ಉತ್ತಮ್ಮ‌ತನ್ಮೈ ಉಣರ್‌ನ್ದುರೈತ್ತೋಂ,**
**ಮುಳ್ಳೊತ್ತವಾದಿಯರ್ ಮುನ್ನೇವರಿಲ್ ಎಂಗಳ್‌ಮುಕ್ಕಿಯರ್ ಪಾಲ್,**
**ವೆಳ್ಳತ್ತಿಡೈಯಿಲ್ ನರಿಪೋಲ್ ವಿಳಿಹಿನ್ರವೀಣರ್‌ಹಳೇ ॥ 21**

(ರಹಸ್ಯರತ್ನಾವಳೀ ಹೃದಯಂ)

ಅರ್ಥ :- ತಳ್ಳ = (ನಾವು ಭಗವಂತನನ್ನು ಅಂಗೀಕರಿಸದೆ ಅವನನ್ನು) ಬಿಟ್ಟು ಬಿಡಲು, ತುಣೆಯಿನುಂ = ತೊಡಗಿದರೂ, (ಹಿಂಜರಿಯದೆ ಉದ್ಯಮಿಸಿದರೂ) ತನಿ-ತಹವಾಲ್ = ಅಸಾಧಾರಣವಾದ ಕರುಣೆಯಿಂದ, ತಾಯ್-ಪೋಲ್ = (ಮಗುತಾಯಿಯನ್ನು ಒದ್ದು ತಳ್ಳಿದರೂ ತಾಯಿ ತಾನು ಆ ಮಗುವನ್ನು ದಯೆ ಮತ್ತು ವಾತ್ಸಲ್ಯದಿಂದ ಅನುಸರಿಸುವಂತೆ) ತಾಯಿಯ ಹಾಗೆ, ಇರಂಗುಂ = ದಯೆಯಿಡುವವನಾದ, ಉಳ್ಳತ್ತ್ = ಹೃದಯದಲ್ಲಿ, ಉರೈಹಿನ್ರ = ವಾಸಿಸುವ, ಉತ್ತಮ್ಮ = ಪರಮಾತ್ಮನ (ಶ್ರೀ ಹಯಗ್ರೀವನ) ತನ್ಮೈ = ಸ್ವಭಾವವನ್ನು, ಉಣರ್‌ನ್ದ್ = ಅನುಭವಿಸಿ (ಆಚಾರ್ಯರ ಮೂಲಕ ಅರಿತು) ಉರೈತ್ತೋಂ = (ಅರಿತುದನ್ನು ಹಾಗೆಯೇ ಈ ಗ್ರಂಥದಲ್ಲಿ) ಹೇಳಿರುವೆವು. ಮುಳ್ಳೊತ್ತ-ವಾದಿಯರ್ = ಮುಳ್ಳಿನಂತಿರುವವಾದಿಗಳು, ಎಂಗಳ್ = ನಮ್ಮ, ಮುಕ್ಕಿಯರ್-ಪಾಲ್ = ಪ್ರಧಾನವಾಗಿರುವ (ನಮಗೆ ಸ್ವಾಮಿಗಳಾಗಿ ವಾದಿಗಳ ವಿಜಯದಲ್ಲಿ ಪ್ರಧಾನರಾದ ಆಚಾರ್ಯರ) ರ ಸನ್ನಿಧಿಯಲ್ಲಿ, ಮುನ್ನೇ-ವರಿಲ್ = (ವಾದಮಾಡಲು) ಎದುರಿಗೆ ಬಂದದ್ದೇ ಆದರೆ, (ಆ ವಾದಿಗಳು) ವೆಳ್ಳತ್ತ-ಇಡೈಯಿಲ್ = ಪ್ರವಾಹದ ಮಧ್ಯದಲ್ಲಿ, (ಸಿಕ್ಕಿ ಕೊಂಡಿರುವ), ನರಿಪೋಲ್ = ನರಿಯಂತೆ, ವಿಳಿಕಿನ್ರ = ಚಿಮ್ಮಿ ಚಿಮ್ಮಿ ಕೆಳಕ್ಕೆ ಬಿದ್ದು, ಕೊಚ್ಚಿಕೊಂಡು ಹೋಗುವ, ವೀಣರ್‌ಹಳ್ = ವ್ಯರ್ಥಪ್ರಯಾಸವುಳ್ಳವರಾಗುವರು, (ದೇಶಿಕ ಸಿದ್ಧಾಂತವೇ ಸಿದ್ಧಾಂತ. ಇಂತಹ ಸಿದ್ಧಾಂತನಿಷ್ಠರ ಯುಕ್ತಿಯ ಮುಂದೆ ಯಾರದೂ ಏನೂ ಸಾಗದು. ವಾದಿಸಿದರೆ ಅದು ನರಿಯಂತೆ ವೃಥಾಯಾಸವೆಂದು ಭಾವ).

**सार्वैश्वर्यनिराचिकीर्षुपुरुषानप्यात्मजान् मातृवत्**
**कारुण्यैकतनो र्मनोनिवसते स्तस्य स्वभावं हरेः ।**
**विज्ञायोचिम देशिकाग्रत उपायाता गिरो वादिनां**
**मोघाः कण्टकवर्तिनां झरपरीवाहस्थफेरूपमाः ॥ २१**

ಮೂಲ : ಶೆಯ್ಯೇಲ್ ಮರಮೆನ್ರು, ದೇಶಿಕರ್ತಾದೈಯವನುರೈತ್ತ,
ಮೆಯ್ಯೇಯರುಳ್‌ಪೊರುಳ್‌ಶೂಡಿಯವೆಣ್ಮದಿಕಾದಲಿಯಾಂ,
ಪೊಯ್ಯೇಪ್ಪಹೈಪ್ಪುಲರ್ ಐಯಿರಂಡೊನ್ರುಪೊರುಂಗರುವಿ,
ಕೈಯೇರುಶಕ್ಕರಕ್ಕಾವಲರ್ಕಾವಲಡೈನ್ದವರ್ಕ್ಕೇ ॥ 22

(ರಹಸ್ಯ ರತ್ನಾವಳೀ ಹೃದಯಂ)

ಅರ್ಥ :- ಕೈ-ಏರು-ಶಕ್ಕರ್ = ಕೈಯಲ್ಲಿ ಚಕ್ರವನ್ನು ಪಿಡಿದಿರುವ, ಕಾವಲರ್ = ಸರ್ವ ಸಂರಕ್ಷಕನಾದ, ದೇಶಿಕರ್-ತಾದೈ = ಆಚಾರ್ಯರಿಗೆ ತಂದೆಯೆನಿಸಿ (ಆದಿಗುರುವಾದ), ಅವರ್ = ಆ ಭಗವಂತನು, ಮರಂ = ಅಧರ್ಮವನ್ನು, (ಆಚಾರ್ಯರ ಮತ್ತು ಪರಮಾಚಾರ್ಯನ ಉಪಕಾರಗಳನ್ನು) ಶೆಯ್ಯೇಲ್ = ಮಾಡಬೇಡ, (ಮರೆಯಬೇಡ) ಎನ್ರ್ = ಎಂದು, ಮೆಯ್ಯೇ-ಅರುಳ್ = ಯಥಾರ್ಥವಾಗಿಯೂ ಕರುಣೆಯಿಂದಲೂ, ಉರೈತ್ತ = ಉಸುರಿದ (ಹೇಳಿದುದನ್ನು) ಶೂಡಿಯ = ತಲೆಬಾಗಿ ಒಪ್ಪಿಕೊಂಡವರ, ವೆಣ್-ಮದಿ = ಪರಿಶುದ್ಧವಾದ ಬುದ್ಧಿಯು, ಪೊಯ್ಯೇ = ಮಿಥ್ಯಾಭೂತವಾದ, ಪಹೈ = ಶತ್ರುವಾದ, ಗರುವಿ-ಪೊರುಂ = ಪಗಡೆದಾಳದ ಗರದಂತೆ ಮತ್ತೆ ಮತ್ತೆ ಬದಲಾಗಿಬರುವ, ಐ-ಇರಂಡ್+ಒನ್ರು = (2 x 5+1) ಹನ್ನೊಂದು ಇಂದ್ರಿಯಗಳೂ, ಕಾದಲಿ-ಆಂ = ಭಗವಂತನಲ್ಲೂ ಆಚಾರ್ಯರಲ್ಲೂ ಅಚಲವಾದ ಪ್ರೇಮವುಳ್ಳದ್ದಾಗಿ ಆಗುವುವು) (ಭಗವಂತನ ಪ್ರೀತಿಯಿಲ್ಲದವರಿಗೆ ಇಂದ್ರಿಯಗಳೆಲ್ಲಾ ಶತ್ರುಗಳಂತಾಗಿ ವರ್ತಿಸುವುವು. ಭಗವತ್ ಪ್ರೇಮವುಳ್ಳವರ್ರು ಆ ಶತ್ರುತನವನ್ನು ಬಿಟ್ಟು ಇಂದ್ರಿಯ ಶುದ್ಧಿಯುಳ್ಳವರಾಗಿ ಪರಮಾತ್ಮನಲ್ಲೂ ಅವನ ದಾಸರಲ್ಲೂ ಪ್ರೀತಿಯುಳ್ಳವರಾಗುತ್ತಾರೆ.

सर्वत्रातु गुरूणां पितु रधिचरणाम्भोरुहं चक्रपाणेः
तेषामेव प्रिया ये गुरुभि रभिहितं सत्यकारुण्यभावाम् ।
मा कार्षी स्त्वं ह्यधर्मं त्विति निजशिरसाऽलंकृता धी र्विशुद्धा
मिथ्यावैयक्षशारोपमकरणदशैकं प्रियत्वं समेयुः ।। २२

ಮೂಲ ಅಂತಮಿಲಾತ್ತೇವನಳಿಶ್ಶೈಯಡ್ಡೈನ್ದವಳವೇಲ್ಶೈಯೋದಮುಡೈಯ,
ಶೆನ್ದಮಿಳ್‌ನೂಲ್‌ವಹುತ್ತಶಿರುಮಾಮನಿಶರ್‌ಶಿರುಕ್ಕೈಚ್ಚಿರಾಂಗೈಪೋಲ್
ಶನ್ದಮೆಲಾಮುರೈಪ್ಪದಿದುವೆನ್ರು, ತಂಗಳಿದಯತ್ತಡಕ್ಕಿಯಡ್ಡೈಯುಂ,
ನಮ್ಬನ್ದಮೆಲಾವರುತ್ತುಹಕ್ಕಅರುಳ್‌ತನ್ದುಹನ್ದಪರವುಂಪೊರುಳ್‌ಹಳಿವೈಯೇ ॥

(ತತ್ವತ್ರಯಚುಳಕಂ)

ಅರ್ಥ :- ಅಂತಂ-ಇಲಾ = ಕೊನೆಯಿಲ್ಲದ, ದೇವರ್ = ಕ್ರೀಡಾಲೋಲನಾದ ಶ್ರೀವಲ್ಲಭನಿಂದ, ಅಳ್-ಶೆಯ್ದ್ = (ಸಂಹಾರದಲ್ಲಿ) ಅಳಿಸಿ, (ಮತ್ತೆ ಸೃಷ್ಟಿಯಲ್ಲಿ) ಅಡೈಂದ = ಪಡೆಯಲಾದ, ವಳವೇಲೈ-ಓದಂ-ಉಡೈಯ = ತೀರಮೀರಿ ತುಂಬಿದ ಸಮುದ್ರವು, ಶೆಂ-ತಮಿಳ್-ನೂಲ್ = ರಮ್ಯವಾದ ತಮಿಳುಶಾಸ್ತ್ರವನ್ನು, ವಹುತ್ತ = (ಇತರ ಶಾಸ್ತ್ರಗಳಿಂದ) ಬೇರ್ಪಡಿಸಿ, ವಿಶದಪಡಿಸಿದ, ಶಿರು = ಆಕಾರದಲ್ಲಿ ಚಿಕ್ಕವರಾದರೂ, ಮಾ-ಮನಿಶರ್ = ಕೀರ್ತಿಯಲ್ಲಿಬಹಳ ದೊಡ್ಡವರೆನಿಸಿದ ಅಗಸ್ತ್ಯ ಋಷಿಗಳ, ಶಿರು = (ಆಕೃತಿಗೆ ತಕ್ಕಂತೆ) ಚಿಕ್ಕದಾದ, ಕೈ-ಚಿರಾಂಗೈ-ಪೋಲ್ = ಅಂಗೈಯಲ್ಲಿ (ಅಡಗಿ ಹೋದಂತೆ) ಶಂದಂ-ಎಲಾಂ-ಉರೈಪ್ಪದು = ಎಲ್ಲಾ ವೇದಗಳೂ ಹೇಳುವ ಅರ್ಥಗಳು, ಇದು-ಎನ್ರು = (ನಾನು ಹೇಳಿರುವ) ಈ ತತ್ವಗಳು ಎಂದು, ತಂಗಳ್-ಇದಯತ್ತ್-ಅಡಕ್ಕಿ = ತಮ್ಮ ಹೃದಯದಲ್ಲಿ ತಂದುಕೊಂಡು, ಅಡೈಯುಂ = ಹೊಂದುವೆ, ನಂ-ಬಂದಂ-ಎಲಾಂ-ಅರುತ್ತ್-ಉಹಕ್ಕ = ನಮ್ಮ ಬಂಧನಗಳೆಲ್ಲವನ್ನೂ ಹೋಗಲಾಡಿಸಿ (ಅದೇ ತಮ್ಮ ಸಂತೋಷ) ಸಂತೋಷಿಸುತ್ತಾ, ಅರುಳ್ = ಕರುಣೆಯಿಂದ, ತಂದುಹುಂದ = ಕೊಟ್ಟ, (ಉಪದೇಶಿಸಿದ) ಪರವುಂ = ವಿಸ್ತಾರವಾಗಿ ಅನುಸಂಧಾನಮಾಡುವ, ಪೊರುಳ್‌ಹಳ್ = ತತ್ವಗಳ, ಇವೈಯೇ = ಇವನ್ನೇ ( ಈ ರಹಸ್ಯದಲ್ಲಿ ಹೇಳಿರುವುದು).

**देवेनानन्तपुंसा विहत उदित उद्वेलवाराशि रासीत्**
**ह्रस्वाकारस्य हस्ते चुळक इव मुनेः कीर्तिमूर्तेः प्रणेतुः ।**
**शास्त्रस्य द्राविडस्य श्रुतिनिकरनिगूढार्थ माधाय चित्ते**
**वाचोऽस्मद्बन्धनाशप्रमुदितगुरुकारुण्यलब्धाः किलैताः ।। २३**

ಮೂಲ : **ಮುಕ್ಕುಣಮಾಯೈಯಿನ್ ಮೂವೆಟ್ಟಿನ್ಕೀಳ್‌ವರುಂ ಮೂವಹೈಯುಂ,**
**ಇಕ್ಕುಣಮಿನ್ರಿಯಿಲಂಗಿಯ ಕಾಲಚ್ಚುಳಿಯಿನಮುಂ,**
**ನರ್ಕುಣಮೊನ್ರುಡೈನಾಕಮುಂ ನಾರಣನಾರುಡಂಬಾಯ್,**
**ಶಿರ್ಕುಣಮತ್ತವೈಯೆನ್ರುರೈತ್ತಾರ್ ಎಂಗಳ್ ದೇಶಿಕರೇ ॥ 24**

(ತತ್ವತ್ರಯಚುಳಕಂ)

ಅರ್ಥ :- ಎಂಗಳ್ = ನಮ್ಮ, ದೇಶಿಕರ್ = (ಆಶ್ರಿತರನ್ನು ದಾರಿಬಿಟ್ಟು ಹೋಗದಂತೆ ಮಾಡಿ ಒಳ್ಳೆಯ ಮಾರ್ಗದಲ್ಲಿ ನೆಲೆಗೊಳಿಸುವ), ಆಚಾರ್ಯರೇ, ಮು-ಗುಣ-ಮಾಯೈಯಿನ್ = ಮೂರುಗುಣಗಳುಳ್ಳ ಪ್ರಕೃತಿತತ್ವದಲ್ಲಿ, ಮೂ-ಎಟ್ಟ್-ಕೀಳ್ = (3 x 8 = 24)

ಇಪ್ಪತ್ತುನಾಲ್ಕು ತತ್ತ್ವಗಳಲ್ಲಿ ಕೆಳಗಿರುವ, ಮೂ-ವಹೈಯುಂ = ಮೂರುವಿಧವೂ, (ತಮಸ್ಸು, ಅಕ್ಷರತ್ವ, ಅವ್ಯಕ್ತತ್ವರೂಪವೋ ಕೇವಲ ಪ್ರಕೃತಿ, ಕೇವಲ ವಿಕೃತಿ ಮತ್ತು ಪ್ರಕೃತಿವಿಕೃತಿಯೋ) ಇ-ಗುಣಂ-ಇನ್ರಿ-ಇಲಂಗಿಯ = (ಸತ್ವಾದಿ) ಈ ಗುಣಗಳಿಲ್ಲದೆ ಬೆಳಗುವ, ಕಾಲ-ಶುಳ-ಇನಮುಂ = ಕಾಲದಲ್ಲಿ (ಉಂಟಾಗುವ ಕ್ಷಣ-ಗಂಟೆ-ದಿನ ಮೊದಲಾದವುಗಳೆಂಬ) ಸುಳಿಗಳೆಲ್ಲದರ ಸಮೂಹವೂ ನಲ್-ಗುಣಂ-ಒನ್ರು-ಉಡೈಯ=(ಪ್ರಾಕೃತ ಸತ್ವಗುಣವಿಲಕ್ಷಣವಾದ) ಸತ್ವಗುಣವೊಂದೇ ಇರುವ, ನಾಕಮುಂ = ಪರಮಪದವೂ ಸಹ, ನಾರಣನಾರ್ = ಶ್ರೀಮನ್ನಾರಾಯಣನ, ಉಡಂಬಾಯ್ = ದೇಹಗಳಾಗಿ, ಚಿರ್-ಗುಣ-ಅತ್ತವೈ = ಚಿತ್ತಿನ ಗುಣವಾದ ಜ್ಞಾನರಹಿತವಾದವು. (ಅರಿವಿಲ್ಲದಿರುವುದರಿಂದ ಕರ್ತೃತ್ವ ಭೋಗ್ಯತ್ವಗಳಿಲ್ಲವೆಂದರ್ಥ.) ಎನ್ರು = ಎಂದು, ಉರೈತ್ತಾರ್ = ಉಪದೇಶಿಸಿದರು.

आचार्या अस्मदीया स्त्रिगुणमयविचित्रा चतुर्विंशतिश्च
प्रोक्तं तत्र त्रिधैतद्गुणरहितलसत्कालिकावर्तचक्रम् ।
नाक स्सत्वैकगुण्यो निरवधि विभवश्चेत्यमी देहभूता:
श्रीमन्नारायणस्येत्यपितु विधुरिता श्चिद्गुणेनेत्यवोचु: ॥ २४

ಮೂಲ : ಎನದೆನ್ಬದುಮನ್ರಿಯಾನೆನ್ಬಾನದನ್ರಿ,
ತನದೆನ್ರು ತ‌ನ್‌ತನ್ಮೈಯುಂಕಾಣಾದ್,
ಉನದೆನ್ರುಮಾತವತ್ತಾಲ್ ಮಾದವರ್ಕ್ಕೇರ್ವ ಪರಮಾಯ್ ಮಾಯ್-
ಪದನಿಲ್‌ಕೈತವತ್ತಾಲ್ ಕೈವಳರಾನ್ ಕಾಣ್ ॥ 25

(ತತ್ವತ್ರಯಚುಳಕಂ)

ಅರ್ಥ :- ಎನದ್ = (ಎಲ್ಲವೂ) ನನ್ನದು, ಎನ್ಬದುಂ-ಅನ್ರಿ = ಎಂದು ಹೇಳುವುದೂ ಅಲ್ಲದೆ, ಯಾನ್-ಎನ್ಬಾನ್ = ನಾನು ಎನ್ನುವನು, ಅದನ್ರಿ = ಅದೂ ಅಲ್ಲದೆ, ತನದೆನ್ರು = ತನ್ನದೆಂದು ತನ್ = ತನ್ನ (ಆತ್ಮನ) ತನ್ಮೈಯುಂ = ಸ್ವಭಾವವನ್ನೂ, (ಜ್ಞಾನಸ್ವರೂಪನೆಂದೂ, ಭಗವಚ್ಛೇಷನು ತಾನೆಂದೂ) ಕಾಣಾದ್ = ಅರಿಯದೇ ಮಾ-ತವತ್ತಾಲ್ = (ನ್ಯಾಸವೆಂಬ) ಮಹತ್ತಾದ ತಪಸ್ಸಿನಿಂದ, ಮಾದವರ್ಕ್ಕೇ = (ಸರ್ವಶರಣ್ಯನಾದ) ಶ್ರೀಪತಿಗೇ, ಉನದೆನ್ರುರ್ವ ಪರಮಾಯ್ = ನನ್ನ ಸ್ವರೂಪ ಭರಫಲಗಳು ನಿಮ್ಮವು ಎಂಬ, ಮಾಯ್‌ಪದನಿಲ್ = ದೃಢವಾದ ಭಾವನೆಯಲ್ಲಿ, ಕೈತವತ್ತಾಲ್ = ವಂಚನೆಯಿಂದ, ಕೈವಳರಾನ್ = (ಜೀವನು) ಅಭಿವೃದ್ಧಿ ಹೊಂದುವುದಿಲ್ಲ,

ಕಾಣ್ = (ಅಲ್ಲವೇ) ನೋಡಿ, (ನಾನೇನೂ ಇದನ್ನು ಹೇಳಬೇಕಿಲ್ಲ ಪ್ರತ್ಯಕ್ಷ ಸಿದ್ಧವಾದುದು ಇದು.)

**मदीय मिति नैव किन्त्वह मिति ब्रुवन् आत्मनः**
**प्रभाव मविदत् परं मम भरस्तु ते श्रीमते ।**
**इतीह महतां दृढं स्वतपसापि निर्धारिते**
**परिभ्रमति कैतवात् जगति पश्य वृद्धिं न चैत् ॥** २५

**ಮೂಲ :** **ಪಲ್ವಿನ್ವೈವನ್ಕಯಿತ್ತಾಲ್ ಬಂದಮುತ್ತುಳಲ್‌ಹಿನ್ರನರುಂ,**
**ನಲ್ವಿನ್ವೈಮೂಟ್ಟಿಯನಾರಣನಾರ್‌ಪದಂಪೆತ್ತವರುಂ**
**ತೊಲ್ವಿನ್ವೈಯೊನ್ರುಮಿಲ್ಲಾಚ್ಚೋದಿವಾನವರುಂ ಶುರುದಿ,**
**ಶೆಲ್ವಿನ್ವೈಯೋರ್‌ನ್ದವರ್ ಶೀವರೆನ್ರೋದಚ್ಚಿರನ್ದನರೇ ॥** 26

**(ತತ್ವತ್ರಯಚುಳಕಂ)**

ಅರ್ಥ :- ಪಲ್ = ಹಲವು ಬಗೆಯಾದ, ವಿನ್ವೈ = ಪಾಪಗಳೆಂಬ, ವಲ್ = ಬಲವಾದ, ಕಯಿತ್ತಾಲ್ = ಹಗ್ಗದಿಂದ, ಬಂದಂ = ಬಂಧನವನ್ನು, ಉತ್ತು = ಹೊಂದಿ, ಉಳಲ್‌ಹಿನ್ರನರುಂ = ಅಲೆದಾಡುತ್ತಿರುವವರೂ (ಬದ್ಧಚೇತನರೂ) ನಲ್ = ಒಳ್ಳೆಯ, ವಿನ್ವೈ = ಕರ್ಮದಲ್ಲಿ, ಮೂಟ್ಟಿಯ = ತೊಡಗಿಸಿದ, ನಾರಣಾರ್ = ಶ್ರೀ ಮನ್ನಾರಾಯಣನ, ಪದಂ = ಅಡಿಗಳನ್ನು ಪೆತ್ತವರುಂ = ಪಡೆದವರೂ, (ಪರಮ ಪದಹೊಂದಿದ ಮುಕ್ತ ಜೀವರೂ) ತೊಲ್ = ಅನಾದಿಯಾಗಿ, ವಿನ್ವೈ-ಒನ್ರುಂ = ಆವ ಕರ್ಮವೂ, ಇಲ್ಲಾ = ಇಲ್ಲದಿರುವ, ಶೋದಿ-ವಾನವರುಂ = ಜ್ಯೋತಿರ್ಮಯವಾದ ಪರಮಪದದಲ್ಲಿರುವ, (ಅನಂತ, ಗರುಡ, ವಿಷ್ವಕ್ಸೇನಾದಿಗಳಾದ) ನಿತ್ಯ ಸೂರಿಗಳೂ, ಶುರುದಿ = ವೇದದಲ್ಲಿ, ಶೆಲ್-ವಿನ್ವೈ = ವಿಧಿಸಿರುವ ಕರ್ಮಗಳನ್ನು, ಓರ್‌ನ್ದವರ್ = ಪಡೆಯುವವರಾದರೂ, (ಶೊಲ್ವಿನ್ವೈ = ಎಂದಿದ್ದರೆ = ಹೇಳಲ್ಪಟ್ಟಕರ್ಮಗಳೆಂದರ್ಥ) ಶೀವರ್-ಎನ್ರ್-ಓದ = ಜೀವ ಶಬ್ದದ ಅರ್ಥವಾಗಿರುವವರೇ ಎಂದು ಹೇಳುವ, ಶಿರನ್ದನರೇ = ಶ್ರೇಷ್ಠತೆಯುಳ್ಳವರಾಗಿಯೇ ಆದೆವು.

**ये नानाविधकर्मभि र्दृढगुणै र्बद्धा स्तथा ये पुनः**
**सत्कृत्येषु नियोजकस्य सुपदं नारायणस्याश्रिताः ।**
**ये वानादिभवात्मकृत्यविधुराः नित्या विदीप्ता स्सुराः**
**आम्नायोक्तकरान् विदन्त इह तान् जीवान् वयं चोन्नताः ॥** २६

ಮೂಲ : ಆರಣಂಗಳೆಲ್ಲಾ ಮಡಿಶೂಡಮೇಲ್‌ನಿನ್ರ
ಕಾರಣಮಾಯೊನ್ರಾಲ್‌ಕಲಂಗಾದಾರ್, ನಾರಣನೇ,
ನಮ್ಮೇಲ್‌ವಿನ್ಯೆಕಡಿಯುಂ ನಲ್ವಳಿಯಿಲ್ ತಾನ್ನಿನ್ರು,
ತನ್ಮೇನಿತನ್ದರುಳುಂ ತಾರ್ ॥ 27

(ತತ್ತ್ವತ್ರಯಚುಳಕಂ)

ಅರ್ಥ :- ಆರಣಂಗಳ್-ಎಲ್ಲಾಂ = ಉಪನಿಷತ್ತುಗಳೆಲ್ಲವೂ, ಅಡಿ = (ಭಗವಂತನ) ಪಾದಗಳನ್ನು, ಶೂಡ = (ತಲೆಯಲ್ಲಿ) ಅಲಂಕರಿಸಿಕೊಳ್ಳಲು, (ಭಗವಚ್ಚರಣಗಳು ಸಕಲ ವೇದಾಂತ ಪ್ರತಿಪಾದ್ಯವಾದುವೆಂದು ಭಾವ) ಮೇಲ್-ನಿನ್ರ = ಆ ಉಪನಿಷತ್ತುಗಳಮೇಲೆ ಪ್ರತಿಪಾದಿತವಾದ, ಕಾರಣಮಾಯ್ = (ಜಗತ್ತಿಗೆ) ಕಾರಣವಾಗಿಯೂ, ಒನ್ರಾಲ್ = ಒಂದರಿಂದಲೂ, ಕಲಂಗಾದಾನ್ = ಕಲಕಲ್ಪಡದವನಾಗಿಯೂ, (ಕಾರಣತ್ವಾವಸ್ಥೆಯಲ್ಲಿ ಶರೀರಗಳಾಗಿ ವಿಶೇಷಣಗಳಾದ ಚಿತ್-ಅಚಿತ್‌ಗಳ ದೋಷಗಳೆಂದೂ ತಟ್ಟದಂತಿರುವ ಎಂದರ್ಥ) ನಾರಣ್ = ನಾರಾಯಣನು, ನಂ-ಮೇಲ್ = ನಮ್ಮಮೇಲಿರುವ, ವಿನ್ಯೆ = ಪಾಪಗಳೆಲ್ಲವನ್ನೂ, ಕಡಿಯುಂ = ಕಡಿದು ಹಾಕುವ, (ನಾಶಮಾಡುವ) ನಲ್-ವಳಿಯಿಲ್ = ಒಳ್ಳೆಯಮಾರ್ಗದಲ್ಲಿ (ಉಪಾಯದಲ್ಲಿ) ತಾರ್-ನಿನ್ರು = (ಸರ್ವಲೋಕಶರಣ್ಯನಾದ) ತಾನೇ ನಿಂತು, ತರ್-ಮೇನಿ = ತನ್ನ ದಿವ್ಯದೇಹವನ್ನು, ತಾನ್ = ತಾನೇ, ತಂದ್-ಅರುಳುಂ = ತಂದುಕೊಟ್ಟು ಕರುಣಿಸುವನು. (ನಾವು ಅನುಭವಿಸುವಂತೆ ಕೃಪೆಮಾಡುವವನೂ, ಸರ್ವಫಲಪ್ರದನೂ ಅವನೇ ಎಂದರ್ಥ.)

आरण्येष्वखिलेषु यत्पदयुगोत्तंसीकृतेषु स्वतः
उच्चस्थौ जगतां निदानमपि संक्षुब्धो न केनापि नः ।
अंहस्संहरणस्स्वयं सुसरणौ नारायण स्सन् स्थितः
कारुण्येन सुदर्शयत्यसदृशीं दिव्याकृतिं स्वां शुभाम् ।। २७

ಮೂಲ : ಕುಡನ್ಮಿಶೈಯೊನ್ರಿಯುಂ ಕೂಡಿಯುಂ ನಿನ್ರಕೊಡುಂತುಯರುಂ,
ಉಡನ್ಮಿಶೈತೋನ್ರುಮುಯಿರುಮುಯಿರ್ಕ್ಕುಯಿರಾಮಿರ್ಶೆಯುಂ,
ಕಡನ್ಮಿಶೈಕ್ಕಂಡವೈತಾನತ್ತಿರಳನ್ನೈಪೋತ್ತಪೊನ್ನೂಲ್,
ಮಡನ್ಮಿಶೈವಾರ್‌ತ್ತೈಯಿದನ್ಪೊರುಳೆನ್ನವಹುತ್ತನಮೇ ॥ 28

(ತತ್ವತ್ರಯಚುಳಕುಂ)

ಅರ್ಥ :- ಕುಡಲ್ = (ದೇಹದಲ್ಲಿರುವ ಮಾಂಸವಿಶೇಷ) ಹೃದಯದ ಮಾಂಸದ (ಶರೀರದ ಎಂದರ್ಥ) ಮಿಶೈ = ಮೇಲೆ, ಒನ್ರಿಯ = ಒಂದಾಗಿ, ಕೂಡಿಯುಂ-ನಿನ್ರ-ಸೇರಿಕೊಂಡು ಇರುವ, ಕೊಡುಂ = ಉಗ್ರವಾದ ತುಯರುಂ = ಪಾಪಗಳೂ, ಉಡಲ್ (ಆ ರೀತಿಯಾದ) ಶರೀರದ, ಮಿಶೈ = ಮೇಲೆ, ತೋನ್ರುಂ = ತೋರುವ, ಉಯಿರುಂ ಜೀವನೂ, (ಶರೀರದೊಳಗೇ ಇದ್ದರೂ ಬೇರೆಯಾಗಿ ಕಾಣಿಸಿಕೊಳ್ಳುವ ಎಂದರ್ಥ). ಉಯಿರ್ಕ್ಕು = ಆ ಜೀವನಿಗೆ, ಉಯಿರ್-ಆಯ್ = ಆತ್ಮನಾಗಿರುವ, ಇರೈಯುಂ = ಸ್ವಾಮಿಯೂ (ಪರಮಾತ್ಮನೂ) ಇದಿನ್-ಪೊರುಳ್ = ಇವುಗಳ ಅರ್ಥವು, (ನಾನು ಹೇಳಿದ ಅರ್ಥ ಎಂದರೆ, ಅಚಿತ್, ಜೀವ, ಈಶ್ವರರು ಕ್ರಮವಾಗಿ ಪೂರ್ವಸಂಶ್ಲಿಷ್ಟರಾಗಿ ಉತ್ತರೋತ್ತರ ಪದಾರ್ಥಗಳಲ್ಲಿ ಅಂತರ್ಗತಗಳಾಗಿ, ಇರುವ ಅರ್ಥಗಳೆಂದರ್ಥ) ಕಡಲ್-ಮಿಶೈ = ಸಮುದ್ರದಲ್ಲಿ, ಕಂಡವೈ = ಕಾಣಿಸಿಕೊಳ್ಳುವ, ತಾನ = ಸ್ಥಾನವಾದ ಮುತ್ತಿನ ಚಿಪ್ಪುಗಳ, ತಿರಳ್ = ಸಮೂಹವು, (ತಾನೆಂಬುದು ಸ್ಥಾನವೆಂದಾಗಿ ಮುತ್ತುಗಳಿಗೆ ಸ್ಥಾನವೆನಿಸಿರುವ ಮುತ್ತಿನ ಚಿಪ್ಪುಗಳೆಂದರ್ಥ) ಅಂದರೆ ಸಮುದ್ರದಲ್ಲಿರುವ ಮುತ್ತಿನ ಚಿಪ್ಪುಗಳ ರಾಶಿ ಎಂದರ್ಥ) ಅವೈ-ಪೋತ್ತ = ಅವುಗಳಂತಿರುವ, ಪೊನ್ = ಸ್ಪೃಹಣೀಯವಾದ, (ಸಮುದ್ರದಂತೆ ಅಚಿದ್ವರ್ಗ, ಅದರೊಳಗಿನ ಮುತ್ತಿನ ಚಿಪ್ಪುಗಳಂತೆ ಆತ್ಮವರ್ಗ, ಅದರೊಳಗಿನ ಮುತ್ತುರತ್ನಗಳಂತೆ ಈಶ್ವರನೆಂದು ಭಾವ). ನೂಲ್ = ಶಾಸ್ತ್ರದ, ಮಡಲ್ = ಶಬ್ದದ, ಮಿಶೈ = ಒಳಗಡೆ ಇರುವ, ವಾರ್ತೈ = ವಿಷಯವನ್ನು (ಶಾಸ್ತ್ರವು = ದೇಹ, ಅದರೊಳಗಿನ ಶಾಖಾಂತರಗಳ ಶಬ್ದ, ಅದರಲ್ಲಿರುವ ಮಂತ್ರಾದಿಗಳು ಈಶ್ವರವೆಂದರ್ಥ) ಹೀಗೆ ಹೇಳುವಂತೆ, ವಹುತ್ತನಮೇ = ವಿವರಿಸಿರುವೆನು. (ಇದನ್ನೇ ಗೋಕ್ಷೀರ, ಘೃತ ದೃಷ್ಟಾಂತದಿಂದ ಉಪನಿಷತ್ತುಗಳು ಹೇಳಿದುವೆಂದರ್ಥ).

**क्रूरांहः कारिणी सा प्रकृति रिह तदन्तर्वर्तिजीवात्मवर्गः**
**अन्तर्यन्ता तदन्त स्सकलमनुगतो भाति नारायण स्सः ।**
**आम्नायान्तार्थ एषो जलनिधिगतशुक्तिस्थमुक्तोपमोऽर्थः**
**नानाशास्त्रार्थशाखास्वधिगतमनुविज्ञेय इत्यभ्यधाम ।।** २८

ಮೂಲ ತತ್ತುವಂ ತನ್ನಿಲ್ ವಿರಿತ್ತಿಡ ಇವ್ವಿರಂಡುತನ್ನಿಲ್,
ಪತ್ತಿಲವಿಕ್ಕಿಯ ಪಾಶಂಡರ್ ವೀಶುಂ ಪಾಶಮುರಾರ್,
ಎತ್ತಿಶೈಯುಂ ತೊಳುದೇತ್ತಿಯ ಕೀರ್ತಿಯರೆಣ್ದಿಶೈಯಾರ್,
ಶುತ್ತರುರೈತ್ತಶುಳಕಮರುನ್ದಿತೂಯನರೇ ॥ 29

(ತತ್ವತ್ರಯಚುಳಕಂ)

ಅರ್ಥ :- ಎತ್ತಿಶ್ಯೆಯುಂ = ಎಲ್ಲಾ ಕಡೆಗಳಲ್ಲೂ, ತೊಳುದು = ಸೇವೆಗೊಂಡು, ಏತ್ತಿಯ = ಹೊಗಳಿಸಿಕೊಳ್ಳುವ, ಎಣ್-ದಿಶ್ಯೆ = ಕೀರ್ತಿಯರ್-ಆಲ್ = ಎಂಟು ದಿಕ್ಕುಗಳಲ್ಲೂ ಯಶಸ್ಸನ್ನು ಪಡೆದಿರುವುದರಿಂದಲೇ ಬಲುಮೇಲಾದವರೆಂದೂ, ಶುದ್ಧರುಂ = ಪರಿಶುದ್ಧರೂ ಆದ ಆಚಾರ್ಯರು, ಉರೈತ್ತ = ಉಪದೇಶಿಸುವ, ಚುಳಕಂ = ಈ ಸಂಕ್ಷೇಪವಾದ ತತ್ವಗಳ (ಸಂಗ್ರಹವೆಂಬ ಅಂಗೈಯಲ್ಲಿನ ಅಮೃತರಸವನ್ನು) ಅರುನ್ದಿ = ಪಾನಮಾಡಿ, (ಪರಿಶೀಲಿಸಿ, ಅರಿತ) ತೂಯನರೇ = ಪರಿಶುದ್ಧಾತ್ಮರಾಗಿ ಆದವರೇ, ತತ್ತುವಂ-ತನ್ನಿಲ್ = ತತ್ವದ ವಿಷಯದಲ್ಲಿ, ವಿರಿತ್ತ್-ಇಡ = ವಿಶದವಾಗಿ ತಿಳಿದುಕೊಳ್ಳಲು ಇ-ಇರಂಡ್-ತನ್ನಿಲ್ = (ತತ್ವತ್ರಯದಲ್ಲಿರುವ) ಈ ಎರಡು ತತ್ವಗಳಲ್ಲಿ, ಪತ್ತಿ = ವಿಶ್ವಾಸವನ್ನು, ವಿಲಕ್ಕಿಯ = ಹೋಗಲಾಡಿಸಿರುವ, ಪಾಶಂಡರ್ = ಪಾಷಂಡಿಗಳೂ, ವೀಶುಂ = ಬೀಸುವ, ಪಾಶಂ = ಬಲೆಯನ್ನು (ಕುಯುಕ್ತಿಯನ್ನು) ಉರಾರ್ = ಹೊಂದಲಾರರು. (ಚಿತ್, ಅಚಿತ್, ಈಶ್ವರ, ಎಂಬ ಈ ಮೂರು ತತ್ವಗಳಲ್ಲಿ ಶಂಕರಾದಿಗಳು ಚಿತ್-ಅಚಿತ್ತುಗಳನ್ನೂ, ಚಿತ್-ಈಶ್ವರರನ್ನು ಚಾರ್ವಾಕಾದಿಗಳೂ, ಅಚಿತ್ = ಈಶ್ವರರನ್ನು ಯೋಗಾಚಾರಾದಿಗಳೂ, ಹೀಗೆ ಮೂರರ ಪೈಕಿ ಎರಡನ್ನು ಅಪಲಾಪಮಾಡುವುದರಿಂದ ಎರಡರಲ್ಲಿ ಪ್ರೀತಿಯನ್ನು ನಿವಾರಿಸುವರೆಂದು ಹೇಳಿದುದು) ಪೂರ್ವಾಚಾರ್ಯರ ಉಪದೇಶಕ್ರಮವಾಗಿ ಬಂದ ಈ ತತ್ವತ್ರಯಜ್ಞಾನ ವಿವೇಕಜ್ಞಾನದಿಂದ ಇದಕ್ಕೆ ವಿರೋಧಿಗಳಾಗಿರುವವರನ್ನು ಖಂಡಿಸಿ ತತ್ವತ್ರಯಮತವನ್ನು ಸ್ಥಾಪಿಸುವಷ್ಟು ಸಮರ್ಥರಾಗುತ್ತಾರೆಂದು ತಾತ್ಪರ್ಯ.

**काष्ठास्वष्टासु सर्वत्र च वरिवसिता आत्तकीर्तिप्रकर्षा:**
**शुद्धा स्तत्वार्थसारप्रदचुळकरसं प्रादु रेनं पिबन्ति ।**
**पूता स्ते ह्येव तत्वत्रयगतयुगळत्यागिपाषण्डिपाशान्**
**छित्वा निर्दुष्टतत्वत्रय मतिशयितं प्राक्तनं स्थापयन्ति ॥ २९**

ಮೂಲ : ವಿನ್ಯೆತ್ತಿರಳ್ ಮಾತ್ತಿಯ ವೇದಿಯರ್ ತಂದ ನಲ್‌ವಾಶಕತ್ತಾಲ್,
ಅನ್ಯೆತ್ತುಮರಿಂದಪಿನ್ ಆರುಂಪಯನುಮೆನವಡ್ಯೆಂದೋಂ,
ಮನತ್ತಿಲಿರುನ್ದುಮರುತ್ತಮುದಾಹಿಯ ಮಾದವನಾರ್,
ನಿನ್ಯೆತ್ತಲ್ ಮನತ್ತಿಲರಿದಾಹಿಯ ನನ್ನಿಳಲ್ ನೀಳ್‌ಕಳಲೇ ॥ 30

(ತತ್ವತ್ರಯಚುಳಕಂ)

ಅರ್ಥ :- ವಿನ್ಯೆ-ತಿರಳ್ = ಪಾಪಗಳ ಗುಂಪನ್ನು, ಮಾತ್ತಿಯ = ("ಸುಹೃದಃ

ಸಾಧುಕೃತ್ಯಾಂ ದ್ವಿಷಂತಃ ಪಾಪಕೃತ್ಯಾಂ'' ಎಂಬಂತೆ) ನಿವಾರಿಸಿದ, ವೇದಿಯರ್ = (ಸಕಲ ವೇದಾಂತಗಳನ್ನೂ) ಚೆನ್ನಾಗಿ ಅರಿತವರು, ತಂದ = ಕೊಟ್ಟ, (ಉಪದೇಶದ ಮೂಲಕವೂ ಹೇಳಿದ) ನಲ್-ವಾಶಕತ್ತಾಲ್ = ಶ್ರೇಷ್ಠವಾದ ವಾಚಕ (ಶಬ್ದ ಸಮುದಾಯ)ಗಳಿಂದ, ಅನ್ನೈತ್ತುಂ = ಎಲ್ಲವನ್ನೂ, ಅರಿಂದ-ಪಿನ್ = ತಿಳಿದುಕೊಂಡಮೇಲೆ, ಮನತ್ತಿಲ್ = ಹೃದಯದಲ್ಲಿ, ಇರುಂದ್ = ಇರುತ್ತಾ, ಮರುತ್ತ್-ಅಮುದ್-ಆಹಿಯ = ಔಷಧವೂ ಅಮೃತವೂ ಆಗಿರುವ, (ಪಾಪವನ್ನು ನಿವಾರಿಸುವುದರಿಂದ ಔಷಧದಂತೆಯೂ, ಫಲವಾದುದರಿಂದ ಅಮೃತದಂತೆಯೂ ಹೇಳಿದ ಉಪಾಯವೂ ಆದ ಎಂದು ಸಾರಾರ್ಥ) ಮಾದವನಾರ್ = ಲಕ್ಷ್ಮೀಕಾಂತನ, ಮನತ್ತಿಲ್ = ಮನದಲ್ಲಿ, ನಿನ್ನೈತ್ತಲ್ = ನೆನೆಯುವುದು, ಅರಿದಾಹಿಯ = ಆಗದಂತಿರುವ, (ಅವಶ್ಯಕವಾದ ಅವಾಙ್ಮನಸಗೋಚರವಾದ) ನಲ್-ನಿಳಲ್ = ಒಳ್ಳೆಯ ನೆರಳಾಗಿರುವ, (ಅನನ್ಯ ಪ್ರಯೋಜನವಾದ) ನೀಳ್-ಕಳಲ್ = ನೀಳವಾದ ಅಡಿಗಳನ್ನು, (ತ್ರಿವಿಕ್ರಮನ ಪಾದಗಳನ್ನು) ಆರುಂ = ಉಪಾಯವು, ಪಯನುಂ = ಫಲವು, ಎನ = ಎಂದು (ಅರಿತು) ಅಡ್ಡೈಂದೋಂ = ಹೊಂದಿದೆವು, (ಸದಾಚಾರ್ಯಕಟಾಕ್ಷದಿಂದ ಅಕಿಂಚನರಾದ ನಾವು ಶ್ರೀಮನ್ನಾರಾಯಣನ ಅಡಿದಾವರೆಗಳೇ ಪ್ರಾಪ್ಯವೂ, ಪ್ರಾಪಕವೂ ಎಂದು ನಿರ್ಧರಿಸಿ ಪಡೆದೆವು ಎಂದು ಭಾವ).

**अंहस्संहतिनाशिनां श्रुतिविदां सर्वे वयं सूक्तिभिः**
**विज्ञायाथ मनोनिवासिकमलाकान्तस्य पादद्वयम् ।**
**दुर्ज्ञेयात्मगुणं महौषधसुधामूर्तेः महत् भाग्यदम्**
**सुच्छायं तदुपाय माप्नुम फलं चेति द्विधेव स्थितम् ॥ ३०**

**ಮೂಲ :** ಓದುಮುರೈನಾನ್ಗದನಿಲೋಂಗುಮೊರುಮೂನ್ರಿನುಳ್ಳೇ,
ನೀದಿನೆರಿವಳುವಾಮಲ್, ನಿರ್ಕಿನ್ರೋಂ,
ಪೋದಮರುಂಪೇರಾಯಿರಮುಂತಿರುವುಂಪಿರಯಾದ,
ನಾರಾಯಣನರುಳಾಲ್ ನಾಮ್ ॥ 31

(ರಹಸ್ಯತ್ರಯಚುಳಕಂ)

ಅರ್ಥ :- ಓದುಂ = ಓದುವಂತಹ (ಅಧ್ಯಯನ ಮಾಡುವ) ಉರೈ = ಶಬ್ದಮಯವಾದ, ನಾನ್ಗ್-ಅದನಿಲ್ = ನಾಲ್ಕರಲ್ಲೂ, (ನಾಲ್ಕುವೇದಗಳಲ್ಲೂ ಎಂದರ್ಥ) ಓಂ ಗುಂ = ಅತ್ಯುತ್ತಮವಾದುದೆಂದು ಪ್ರತಿಪಾದಿತವಾದ, ಒರು-ಮೂನ್ರಿನ್-ಉಳ್ಳೇ = ಮೂರು ರಹಸ್ಯಗಳಲ್ಲಿ ಅಂತರ್ಗತವಾದ, (ಅಥರ್ವಣದ ಕೊನೆಯಲ್ಲಿ ಮೂಲಮಂತ್ರವೂ ಕಂಠಶ್ರುತಿಯಲ್ಲಿ ದ್ವಯವೂ, ಇದಕ್ಕೆ ಸಮಾನವಾದ ಗೀತೋಪನಿಷತ್ತಿನಲ್ಲಿ ಶ್ರೀಕೃಷ್ಣನ

ದಯೆಯಿಂದ ಅನುಗ್ರಹಿಸಲ್ಪಟ್ಟ ಚರಮ ಶ್ಲೋಕವೂ ಮೂರು ರಹಸ್ಯಗಳು, ಇವು ಸರ್ವೋಪನಿಷತ್ಸಾರಗಳು) ನೀದಿ = ನ್ಯಾಯವಾದ, (ಮೂಲಮಂತ್ರದಲ್ಲಿರುವ ಶೇಷ ಶೇಷಿಭಾವವನ್ನು ಅರಿತು ನಡೆಯುವುದು) ನೆರಿ = ಮಾರ್ಗವು, (ದ್ವಯದಲ್ಲಿ ಅಕಿಂಚನನಿಗೆ ಹೇಳಿದ ಉಪಾಯಾನುಷ್ಠಾನ) ಇವುಗಳಿಂದ, ವಳುವಾಮಲ್ = ಜಾರಿಕೊಳ್ಳದಂತೆ, ಪೋದು-ಅಮರುಂ = ಎಲ್ಲಾಕಾಲದಲ್ಲೂ ಅನುಸಂಧಾನಮಾಡುವ (ಹೂವಿನಲ್ಲೇ ನೆಲಸಿದ ಎಂದೂ ಅರ್ಥ) ಪೇರ್ ಆಯಿರಮುಂ = ಸಾವಿರ ಹೆಸರುಗಳೂ, ತಿರುವುಂ = ಮಹಾಲಕ್ಷ್ಮಿಯೂ, ಪಿರಿಯಾದ = ಅಗಲದಿರುವ, ನಾರಾಯಣ್ = ಭಗವಂತನ ಅರುಳಾಲ್ = ದಯೆಯಿಂದ, ನಾಂ = (ಆ ಅರ್ಥಗಳನ್ನೆಲ್ಲಾ ಅರಿತ) ನಾವು, ನಿರ್ಕಿನ್ರೋಂ = ನಿಂತಿರುವೆವು, (ಶ್ರೀಮದಾಚಾರ್ಯರ ಉಪದೇಶದಿಂದ ರಹಸ್ಯತ್ರಯನಿಷ್ಠರಾಗಿರುವೆವು ಎಂದು ಭಾವ).

**अध्येतव्यश्रुतिषु चतसृष्वग्रमन्त्रत्रयार्थे**
**नीते मार्गात् च्युति रकलिता स्यात्तथा स्थापिताः स्मः ।**
**यं नामान्यप्यनुगुणयुतान्यन्वहं श्रीः सहस्रम्**
**पद्मा जुष्टाय मतिकृपया तस्य नारायणस्य ॥** ३१

ಮೂಲ : ಊರ್‌ತನ್ದುನಿಲೈನಿನ್ರವುಯಿರುಂತನ್ದು, ಓರುಯಿರಾಹಿ ಯುಳ್ಳೊಳಿಯೋಡುರೈನ್ದನಾರ್,ತಾರ್‌ತನ್ದವೆನ್ನುಯಿರ್ರೈ ಯೆನ್ನದೆನ್ನಾಮಲ್ ನಲ್ಲರಿವುಂ ತನ್ದಹಲಾನ ಲಮುಂ ತನ್ದು, ತಾರ್‌ತನ್ದನಲ್ವಳಿಯಾಲ್ ತಾಳ್‌ನ್ದವೆನ್ನೈ ತನ್‌ತನಕ್ಕೇ ಪರಮಾಹತ್ತಾನೇ ಯೆಣ್ಣಿ, ವಾರ್‌ತನ್ದು ಮಲರಡಿಯುಂತನ್ದುವಾನೋರ್ ವಾಳ್‌ಚ್ಚಿತ್ತರ ಮನ್ನರುಳಾಲ್ ವರಿತ್ತಿಟ್ಟಾನೇ ॥ **31**

(ರಹಸ್ಯತ್ರಯಚುಳಕಂ)

ಅರ್ಥ :- ಊನ್ = ಶರೀರವನ್ನೂ, ತಂದ್ = ಕೊಟ್ಟು, ನಿಲೈ-ನಿನ್ರ = ಸ್ಥಿರವಾಗಿರುವಂತಹ, ಉಯಿರುಂ = ಆತ್ಮನನ್ನೂ, ತಂದ್ = ಕೊಟ್ಟು ಓರ್ = ಅಸದೃಶವಾದ, ಉಯಿರ್-ಆಹಿ = ಅಂತರಾತ್ಮನಾಗಿ, ಉಳ್-ಒಳಿ-ಓಡು = ಒಳಗಿರುವ ಬೆಳಕಿನೊಂದಿಗೆ, (ಚೇತನ ಮತ್ತು ಅಚೇತನಗಳಿಗೆ ತೇಜಸ್ಸಾದ ಧರ್ಮಭೂತಜ್ಞಾನದೊಂದಿಗೂ, ತನ್ನ ಕಾಂತಿಯೊಂದಿಗೂ, ''ಒಳಿ'' ಶಬ್ದವು ತೇಜೋವಾಚಕವಾಗಿ ಜ್ಞಾನವನ್ನೂ, ಜ್ಞಾನಾನಂದ ಸ್ವರೂಪವಾದ ವಿಗ್ರಹವನ್ನೂ, ತನ್ನ ಪ್ರಭೆಯಂತಿರುವ ಶ್ರೀದೇವಿಯನ್ನೂ ತಿಳಿಸುವುದು) (ಇದರಿಂದ ಲುಪ್ತಚತುರ್ಥಿಯೊಡನೆ ಕೂಡಿದ ''ಅ''ಕಾರದಲ್ಲಿ ಫಲಿತವಾದ ಸ್ವಾಮಿತ್ವವೂ,

ಶ್ರೀಪತಿತ್ವವೂ, ಸರ್ವಶರೀರಿತ್ವವೂ ತಿಳಿಸಿದಂತಾಯಿತು) ಉರ್ರೈನ್ದ-ನಾರ್ದ = ಹೇಳಿದ ಪ್ರಭುವಾದ, ತಾರ್ = ತಾನು, ತಂದ = ಕೊಟ್ಟ, ಎನ್ನುಯಿರ್ರೈ = ಈ ನನ್ನ ಆತ್ಮನನ್ನು, ಎನದ್-ಎನ್ನಾಮಲ್ = ನನ್ನದು ಎನ್ನದೇ (ತನಗೆ ಶೇಷ ಎನ್ನದೆ) ನಲ್-ಅರಿವುಂ-ತಂದ್ = ಒಳ್ಳೆಯ ಜ್ಞಾನವನ್ನೂ ಕೊಟ್ಟು, (ಪ್ರಣವದ ''ಮ''ಕಾರದೊಡನೆ ಸೇರಿದ ನಮಶ್ಶಬ್ದಾರ್ಥವಾದ ಸ್ವಸ್ವಾಮಿತ್ವ ನಿವೃತ್ತಿಯು ಇಲ್ಲಿ ತೋರುತ್ತದೆ) ಅಹಲಾ = ಸರ್ವದಾ ಇರುವ, ನಲಮುಂ = ಆನಂದವನ್ನೂ, ತಂದ್ = ಕೊಟ್ಟು, (ಭಗವತ್ಪಾರತಂತ್ರ್ಯವೂ ಅದರಿಂದ ಬರುವ ಭಾಗವತ ಶೇಷತ್ವರೂಪ ಆನಂದವೂ ತೋರುವುದು) ತಾರ್-ತಂದ-ನಲ್-ವಳಿಯಾಲ್ = ತಾನು ಕೊಟ್ಟ ಒಳ್ಳೆಯ ಮಾರ್ಗದಿಂದ (ಶರಣಾಗತಿ ಮಾರ್ಗದಿಂದ) ತಾಳ್‌ನ್ದ-ಎನ್ನೈ = (ಭಗವಂತನ) ತನ್ನಡಿಯಲ್ಲಿ ನಮಿಸಿದ ನನ್ನನ್ನು, ತನಕ್ಕೇ ತಾರ್ = ತನಗೇನೇ, ಪರಂ-ಆಹ-ತಾನೇ = ಭರವೆಂದು, (ಹೊಣೆ) ಎಣ್ಣಿ = ತಿಳಿದು, (ಇದರಿಂದ ''ನಮಃ'' ಎಂಬಲ್ಲಿ ಸ್ಥೂಲವಾದ ಶರಣಾಗತಿಯು ತೋರುವುದು.) ವಾರ್ = ಪರಮ ಪದವನ್ನು, ತಂದ್ = ಕೊಟ್ಟು, ಮಲರ್-ಅಡಿಯಂ-ತಂದ್ = ಹೂವಿನಂತಿರುವ ಪಾದಗಳನ್ನೂ ತಂದು, ವಾನೋರ್ = ನಿತ್ಯಸೂರಿಗಳ, ವಾಳ್‌ಚ್ಚಿ = ಬಾಳನ್ನು (ಸೇವೆಯನ್ನು) ತರ = ತರಲು, ಮರ್-ಅರುಳಾಲ್ = ಪ್ರಬಲವಾದ ದಯೆಯಿಂದ, ವರಿತ್ತ್-ಇಟ್ಟಾನೇ = ಪ್ರೀತಿಯಿಂದ ನಮ್ಮನ್ನು ಅಂಗೀಕರಿಸಿರುವನು. (ಇದರಿಂದ ಅಯನ ಶಬ್ದಾರ್ಥವೂ ಚತುರ್ಥ್ಯರ್ಥವೂ ತಿಳಿದಂತಾಯಿತು) (ಮೂಲ ಮಂತ್ರದ ರಹಸ್ಯಾರ್ಥವು ವ್ಯಕ್ತವಾಗಿ ತಿಳಿಸಿದಂತಾಯಿತು.)

देहं जीवं स्थिरं तं दददतिदययाऽधिष्ठितोऽन्तस्त्विषेशः ।
स्वेनैवात्मा प्रदत्तोऽप्यथ सुमति मयं मामको नेति यच्छन् ।
नित्यानन्दं वितीर्य स्वचरितसुपथो मां स्वभारं विदित्वा ।
दत्वा दिव्यं स्वं सुमसम मवृणोत् सूरिसेवां हि दातुम् ॥ ३२

ಮೂಲ : ತಿರುಮಾಲಡಿಯಿಣ್ಯೈಯೈತಿಣ್‌ಶರಣಾಹಕ್ಕೊಂಡು,
ತಿರುಮಾಲಡಿಯಿಣ್ಯೈಯೇಶೇರ್‌ವಾರ್, ಒರುಮಾಲ್
ಅರುಳಾಲುರುಳಾದವಾನೋರ್‌ಹಳ್‌ವಾಳ್‌ಚ್ಚಿ,
ಅರುಳಾಲ್ ನಮಕ್ಕಳಿತ್ತಾರಾಯ್‌ನ್ದು ॥ 33

(ರಹಸ್ಯತ್ರಯಚುಳುಕುಂ)

ಅರ್ಥ :- ತಿರುಮಾಲ್-ಅಡಿ-ಇಣ್ಯೈಯೈ = ಶ್ರೀಮನ್ನಾರಾಯಣನ ಪಾದ

ಗಳೆರಡನ್ನೂ, ತಿಣ್ = ದೃಢವಾದ, ಶರಣ್-ಆಹ-ಕೊಂಡು = ಉಪಾಯವೆಂದು ನಿರ್ಧರಿಸಿಕೊಂಡು, ತಿರುಮಾಲ್-ಅಡಿ-ಇಣ್ಯೆಯೇ = ಆ ಶ್ರೀಮನ್ನಾರಾಯಣನ ಪಾದಗಳೆರಡರನ್ನೇ, ಶೇರ್‌ವಾರ್ = ಸೇರುವಂತಹವರು (ನಮ್ಮ ಆಚಾರ್ಯರು), ಒರು = ಅಸಮಾನವಾದ, ಮಾಲ್ = ಸ್ವಾಮಿಯ (ನಾರಾಯಣನ) ಅರುಳಾಲ್ = ದಯೆಯಿಂದ, ಉರುಳಾದ = ನಾಶವಾಗದ, ವಾನೋರ್‌ಹಳ್ = ನಿತ್ಯಸೂರಿಗಳ, ವಾಳ್‌ಚ್ಚಿ = ನಿತ್ಯಕೈಂಕರ್ಯಗಳನ್ನು, (ಆ ರೂಪವಾದ ಐಶ್ವರ್ಯವನ್ನು) ಅರುಳಾಲ್ = ದಯೆಯಿಂದ, ಆಯ್‌ನ್ದು = ಶೋಧಿಸಿ, ನಮಕ್ಕ್ = (ಆಚಾರ್ಯರ ಪಾದಗಳನ್ನಾಶ್ರಯಿಸಿದ) ನಮಗೆ, ಅಳಿತ್ತಾರ್ = ಕೊಟ್ಟರು.

**लक्ष्मीशस्य पदद्वयं शरण मित्याश्रित्य गाढं परम् ।**
**लक्ष्मीशस्य पदारविन्दयुगळी मेवोपयन्तो बुधाः ॥**
**लक्ष्मीशैककृपावशादविपदं नित्यैकलभ्यां श्रियम् ।**
**कारुण्यातिशयाद्विमृश्य सकलां नो देशिकाः प्राददुः ॥ ३३**

**ಮೂಲ :** ಶೇರ್‍ಕುಂ ತಿರುಮಗಳ್‌ಶೇರ್ತಿಯಿನ್ಮನ್ನುದಲ್‌ಶೀರ್‌ಪೆರಿಯೋರ್‍ಕ್ಕು,
ಏರ್‍ಕುಂಗುಣಂಗಳಿಲಕ್ಕಾಂವಡಿವಿಲಿಣ್ಯೆಯಡಿಯ್ಯೆ,
ಪಾರ್‍ಕುಂಶರಣತ್ತಿಲ್‌ಪತ್ತುದಲ್ ನನ್ನಿಲ್ಯೆನಾಂ ಪೆರುಂಪೇರು,
ಏರ್‍ಕಿನ್ರವಹೈಗಳೆಲ್ಲಾಂ ಕಳ್ಯೆಯರವೆಣ್ಣಿನಮೇ ॥ 34

(ರಹಸ್ಯತ್ರಯಚುಳಕುಂ)

**ಅರ್ಥ :-** ಶೇರ್‍ಕುಂ = ಸೇರಿಸುವಂತಹ (ಚೇತನರನ್ನು ಭಗವಂತನೊಂದಿಗೆ ಸೇರಿಸುವ) ತಿರು-ಮಗಳ್ = ಮಹಾಲಕ್ಷ್ಮಿಯ, ಶೇರ್ತಿಯಿಲ್ = ಹೊಂದಿಕೆಯಲ್ಲಿ (ಸಂಶ್ಲೇಷದಲ್ಲಿ) ಮನ್ನುದಲ್ = ದೃಢಪಡಿಸುವಿಕೆಯು, (ಪರಮಾತ್ಮನ ಪುರುಷಾಕಾರ ಭೂತೆಯಾದ ಲಕ್ಷ್ಮಿಯೊಡನಿರುವ ನಿತ್ಯಸಂಬಂಧವು) ಶೀರ್-ಪೆರಿಯೋರ್‍ಕ್ಕು = ಸಮಸ್ತ ಕಲ್ಯಾಣಗುಣನಾಗಿಯೂ, ಸರ್ವ ಪ್ರಭುವಾಗಿಯೂ ಇರುವ ಭಗವಂತನಿಗೆ, ಏರ್‍ಕುಂ = ತಕ್ಕಂತೆ ಇರುವ, ಗುಣಂಗಳ್ = ಗುಣಗಳಿಗಿಂತ, ಇಲಕ್ಕಾ-ಆಂ = ಕಣ್ಣಿಗೆ ಕಟ್ಟಿದಂತಿರುವ (ಗುರಿಯಾದ) ವಡಿವಿಲ್ = (ದಿವ್ಯಮಂಗಳ) ವಿಗ್ರಹದಲ್ಲಿ, ಇಣ್ಯೆ = ಒಂದಕ್ಕೊಂದು ಒಪ್ಪುವಂತಿರುವ, ಅಡಿಯ್ಯೆ = ಪಾದಗಳನ್ನು, ಪಾರ್‍ಕುಂ = ಪರೀಕ್ಷಿಸಿ ನೋಡಿದ್ದರಲ್ಲಿ, ಶರಣತ್ತಿಲ್ = ಉಪಾಯದಲ್ಲಿ (ರಕ್ಷಣೆಯಲ್ಲಿ) ಪತ್ತುದಲ್ = ಅವಲಂಬಿಸುವುದು, ನಲ್-ನಿಲ್ಯೆ = ಒಳ್ಳೆಯ ಸ್ಥಿತಿಯು (ಅಕಿಂಚನ ಅವಸ್ಥೆ) ನಾಂ = ನಾವು, ಪೆರುಂ-ಪೇರು = ಪಡೆಯುವ ಪುರುಷಾರ್ಥವು, (ಇವುಗಳಿಗೆ) ಏರ್‍ಕಿನ್ರ = ತಕ್ಕಂತಿರುವ, ವಹೈಹಳ್-ಎಲ್ಲಾಂ

= ಪ್ರಕಾರಗಳೆಲ್ಲವೂ (ಸ್ವರೂಪಭಾವಾದಿಗಳೆಲ್ಲಾ) ಕಳ್ಳೆ-ಅರ = ಅಜ್ಞಾನರೂಪವಾದ ತಡೆಗಳೆಲ್ಲಾ ಹೋಗುವಂತೆ, ಎಣ್ಣಿನಮೇ = ಪರಿಗಣಿಸಿರುವೆವು (ಅನುಷ್ಠಾನ ಸಮಯದಲ್ಲಿ ಇದಕ್ಕೆ ಸಂಬಂಧಿಸಿದ್ದು ಯಾವುದೂ ಬಿಟ್ಟುಹೋಗದಂತೆ ಅನುಸಂಧಾನ ಮಾಡಬೇಕೆಂಬುದು ವ್ಯಕ್ತವಾಗಿ ತೋರುವುದು).

**लक्ष्म्या योगान्नियोक्त्या दृढतरसुगुणश्रीनिधे स्सद्गुणस्य ।**
**स्वार्हेभ्यो लक्ष्यलक्ष्ये ह्यतिशयसुगुणे दिव्यकायेऽङ्घ्रियुग्मम् ।।**
**प्रत्यक्षेणेक्षणीये स्वशरणवरणं स्थास्नुगत्याप्तिलाभः ।**
**पुंसामेते प्रकारा इह परिगणिता ह्यज्ञतानाशनाय ।।** ३४

ಮೂಲ : ತಿರುಮಾಲ್ ಅಡಿಯಿಣೈಶೇರ್‌ನ್ದು ತಿಹಳ್‌ನ್ದವಡಿಮೈಪ್ಪೆರ್ರ,
ತಿರುನಾರಣನ್ ಶರಣೇ ಶರಣಾಹತ್ತುಣಿಂದಡೈವೋರ್,
ಒರುನಾಳುರೈಕ್ಕ ಉಯಿರ್‌ತರುಂಮನ್ತಿರಮೋದಿಯನಾಂ,
ವರುನಾಳ್‌ಪಳುದತ್ತ್‌ವಾಳುಂ ವಹೈಯದಿಲ್‌ಮನ್ನುವಮೇ ॥ 35

(ರಹಸ್ಯತ್ರಯಚುಳಕಂ)

ಅರ್ಥ :- ತಿರು-ಮಾಲ್ = ಲಕ್ಷ್ಮೀನಾಯಕನ, ಅಡಿ-ಇಣೈ = ಪಾದಗಳೆರಡನ್ನೂ, ಶೇರ್‌ನ್ದು = (ಸಂಸಾರದಿಂದ ನಿವೃತ್ತಿಹೊಂದಿ) ಪಡೆದು, ತಿಹಳ್‌ನ್ದ = ಸಂತೋಷಪಡುವ, ಅಡಿಮೈ = ದಾಸ್ಯವೃತ್ತಿಯನ್ನು (ಸೇವೆಯನ್ನು) ಪೆರ = ಪಡೆಯುವುದಕ್ಕಾಗಿಯೇ, ತಿರು-ನಾರಣನ್ = ಶ್ರೀಮನ್ನಾರಾಯಣನ, ಶರಣೇ = ಚರಣಗಳನ್ನೇ, ಶರಣ್-ಆಹ = ಪರಮೋಪಾಯವೆಂದು, ತುಣಿನ್ದು = ವಿಶ್ವಾಸ ಹೊಂದಿ (ನಂಬಿ) ಅಡೈವೋರ್ = ಆತ್ಮರಕ್ಷೆಯ ಭರವನ್ನು ಒಪ್ಪಿಸಿದ ಆಚಾರ್ಯರ ಸನ್ನಿಧಿಯಲ್ಲಿ, ಒರುನಾಳ್ = ಒಂದುಸಲ, ಉರೈಕ್ಕ = ಹೇಳುವುದೇ ತಡ, ಉಯಿರ್ = (ಯಥಾವಸ್ಥಿತವಾದ) ಆತ್ಮ ಸ್ವರೂಪವನ್ನು, ತರ = (ಉಂಟುಮಾಡಿ) ಕೊಡಬಲ್ಲ, ಮನ್ತಿರಂ = ಮಂತ್ರವನ್ನು (ದ್ವಯವನ್ನು) ಓದಿಯ = ಅಧ್ಯಯನಮಾಡಿದ, ನಾಂ = ನಾವು, ವರು-ನಾಳ್ = ಮುಂದೆ ಬರುವ ದಿನಗಳಲ್ಲಿ, ಪಳುದ್-ಅತ್ತ್ = (ಸ್ವಾವರತ್ವಾದಿ ಬುದ್ಧಿಯಾದ) ದೋಷಗಳಿಲ್ಲದೆ, ವಾಳುಂ-ವಹೈಯದಿಲ್ = ಬಾಳುವ ರೀತಿಗಳಲ್ಲಿ, ಮನ್ನುವಮೇ = ದೃಢವಾಗಿ ಪ್ರತಿಷ್ಠಿತರಾಗುವವರಾಗಿರುವೆವು.

(ಇಲ್ಲಿ ಮಂತ್ರಾರ್ಥವನ್ನು ವಿವರಿಸುವ ಯೋಜನೆಗಳಲ್ಲೊಂದಾದ ವಾಕ್ಯಯೋಜನೆಯೂ, ಮಂತ್ರದ ಪ್ರಭಾವವೂ ಮತ್ತು ಉಪದೇಶಕರ ಪ್ರಭಾವವೂ ಸಂಕ್ಷೇಪವಾಗಿ ತಿಳಿದುಬರುವುದು).

लक्ष्मीनायकपादपद्मयुगळीं प्रीत्यैत्य सेवाप्तये ।
श्रीनारायणपादमेव शरणं संप्राप्तवत्स्वादरात् ।।
सन्मन्त्रं सकृदुक्त मात्मद मधीयाना द्वयाख्यं वयं ।
स्वायत्यां निरघाग्र्यजीवनविधौ याता स्थितिं स्थेयसीम् ।। ३५

ಮೂಲ : ಮತ್ತೋರ್‌ಪತ್ತಿನ್ರಿ, ಅಡ್ಟೆನ್ದಾರ್‌ಕ್ಕೆಲ್ಲಾಂ,
ಕುತ್ತಮರಿಯಾದಕೋವಲನಾರ್,
ಮುತ್ತುಂವಿನ್ಯೆವಿಡುತ್ತುವಿಣ್ಣವರೋಡೊನ್ರವಿರೈಹಿನ್ರಾರ್,
ನಿನ್ಯೆವುಡೈತ್ತಾಯ್‌ನೀ ಮನಮೇ ! ನಿಲ್ಲು ॥ 36

(ರಹಸ್ಯತ್ರಯಚುಳಕಂ)

ಅರ್ಥ :- ಮತ್ತ್-ಓರ್ = ಮತ್ತೆ ಯಾರೊಬ್ಬರನ್ನೂ, ಪತ್-ಇನ್ರಿ = ಅವಲಂಬಿಸದೆ, (ರಕ್ಷಕರನ್ನಾಗಿ ಕಣ್ಣೆತ್ತಿ ನೋಡದೆ) ಅಡ್ಟೆಂದಾರ್ಕು-ಎಲ್ಲಾಂ = (ಶ್ರೀಮನ್ನಾರಾಯಣನ ಪಾದಗಳೇ ಸತ್ಯವಾದ ಉಪಾಯ ಎಂದು) ಅವನ ಚರಣಗಳನ್ನೇ ಹೊಂದಿದವರಿಗೆಲ್ಲಾ, ಕುತ್ತಂ = (ಶರಣಾಗತರಲ್ಲಿರುವ) ದೋಷವಾವುದನ್ನೂ, ಅರಿಯಾದ = ಅರಿಯದ (ಗಮನಿಸದ) ಕೋವಲನಾರ್ = ಗೋಪಾಲನು (ಜ್ಞಾನವಿಹೀನವಾದ ಪಶುಗಳಿಗೂ ಮತ್ತು ಅವುಗಳಂತೆಯೇ ಇದ್ದ ಗೊಲ್ಲರಿಗೂ ದಯೆ ತೋರಿ, ಸರ್ವಸುಲಭನೆನಿಸಿಕೊಂಡಿರುವ ಕೃಷ್ಣರೂಪಿ ಪರಮಾತ್ಮನು) ಮುತ್ತುಂ-ವಿನ್ಯೆ = ಆವರಿಸುವ ಪಾಪವೆಲ್ಲವನ್ನೂ, ವಿಡುತ್ತು = ಬಿಡಿಸಿ, (ನಾಶಮಾಡಿ) ವಿಣ್ಣವರ್-ಓಡು-ಒನ್ರ = ನಿತ್ಯಸೂರಿಗಳೊಂದಿಗೆ ಸೇರಿ ಪರಿಪೂರ್ಣಾನಂದವನ್ನು ಪಡೆಯುವಂತೆ ಶರಣಾಗತರನ್ನು ಮಾಡಲು, ವಿರೈಹಿನ್ರಾರ್ = ತ್ವರೆಗೊಳ್ಳುತ್ತಿರುವನು, ಮನಮೆ ! (ತಿಳಿಯುವ ಶಕ್ತಿಯಿರುವ) ಓ ಮನಸ್ಸೆ ! ನೀ = ನೀನು (ಭಗವದ್ವಿಷಯದಲ್ಲೂ ಅದರನುಭವಾದಿರೂಪ ಪುರುಷಾರ್ಥದಲ್ಲೂ ತ್ವರೆಪಡುವ ನೀನೂ) ನಿನ್ಯೆವು-ಉಡೈತ್ತಾಯ್ = ಈ ವಿಚಾರವನ್ನು ನೆನಪಿನಲ್ಲಿಟ್ಟು, ನಿಲ್ = ಇರು, (ಧೈರ್ಯವಾಗಿರು, ತರುವನೋ, ತಾರನೋ ಎಂದು ಸಂಶಯಪಡಬೇಡ ಎಂದು ಭಾವ).

अनितरशरणेषु स्वैकनिष्ठेषु दोषं ।
कमपि न गणयन् सन्नत्र गोपाल आस्ते ।।
निखिलदुरितमुन्मूल्याथ सूरीन्द्रबृन्दैः ।
सह कलयितुकामः त्वं मनः ! स्तात् सुखेन ।। ३६

ಮೂಲ : ಎಲ್ಲಾತ್ತರುಮಮುಂ ಎನ್ನೈಯಿಹಳ್‌ನ್ದಿಡತ್ತಾನಿಹಳಾದೇ,
ಎಲ್ಲಾಂತನದೆನ ಎಲ್ಲಾಂ ಉಹುನ್ದರುಳ್ ತನ್ದಪಿರಾನ್,
ಕಲ್ಲಾರ್‌ಮದಕ್ಕಳಿರೊತ್ತವಿನ್ನೈತ್ತಿರಳ್‌ಮಾಯ್‌ಪ್ಪನೆನ್ರು,
ಶೊಲ್ಲಾಲಿನಿಯೊರುಕ್ಕಾಲ್ ಶೋಕಿಯಾತ್ತುಣಿವುತ್ತನಮೇ ॥ 37

(ರಹಸ್ಯತ್ರಯಚುಳಕಂ)

ಅರ್ಥ :- ಎಲ್ಲಾ-ತರುಮಮುಂ = ಎಲ್ಲಾ ಧರ್ಮಗಳೂ, ಎನ್ನೈ = ನನ್ನನ್ನು, ಇಹಳ್‌ನ್ದಿಡ = ಬಿಟ್ಟಿರಲು ತಾರ್ = ಪ್ರಧಾನನಾದ ತಾನು, ಇಹಳಾದೇ = ನನ್ನನ್ನು ಬಿಡದೇ ಎಲ್ಲಾಂ-ತನದ್-ಎನ = (ನಾನು ಆಚರಿಸತಕ್ಕ)ಎಲ್ಲಾ ಧರ್ಮಗಳನ್ನೂ ತನ್ನವು ಎಂದು ತಿಳಿದುಕೊಂಡು, (ಆ ಭಕ್ತಿಯ ಸ್ಥಾನದಲ್ಲಿ ತಾನಿರುತ್ತಾ) ಅರುಳ್ = (ತನ್ನ) ದಯೆಯಿಂದ, ಎಲ್ಲಾಂ = ಆ ಉಪಾಯವಾದ ಭಕ್ತಿಯ ಕಾರ್ಯವಾದ ಫಲವೆಲ್ಲವನ್ನೂ, ಉಹನ್ದು = ಸಂತೋಷಪಟ್ಟು, ತಂದ = ತಂದು ಕೊಟ್ಟ, ಪಿರಾ = ಉಪಕಾರಮಾಡುವವನಾದ ಶ್ರೀ ಕೃಷ್ಣನ, ಕಲ್-ಆರ್ = ಕಲ್ಲುಗಳಿಂದಾದ, (ಪರ್ವತಾಕಾರವಾದ) ಮದ-ಕಳಿರು = ಮದಿಸಿದ ಆನೆಗೆ, ಒತ್ತ = ಸದೃಶವಾದ, ವಿನ್ನೈ-ತ್ತಿರಳ್ = ಪಾಪ ಸಮೂಹವನ್ನು, ಮಾಯ್‌ಪ್ಪ = ಹೋಗಲಾಡಿಸುವೆನು, (ನಾಶ ಮಡುವೆನು). ಎನ್ರು-ಶೊಲ್ಲಾಲ್ = ಎಂದು ಹೇಳಿದ ಮಾತಿನಿಂದ (ಚರಮ ಶ್ಲೋಕದಿಂದ) ಇನಿ = ಇನ್ನು ಮುಂದೆ, ಒರು-ಕ್ಕಾಲ್ = ಎಂದಿಗೂ, (ಯಾವ ಕಾಲದಲ್ಲೂ) ಶೋಕಿಯಾ = ಶೋಕಪಡುವಂತಹ, ತುಣಿವು = ದೃಢವಾದ ನಂಬಿಕೆಯನ್ನು, ಉತ್ತನಂ = ಪಡೆದೆವು.

धर्मा स्सर्वे जहु र्मा मपि तु न विजहन्नित्यधर्मःस्वयं मां ।
मत्वात्मीयान् मुकुन्द स्त्वखिलद उपकृन्मोदमाने दयाळुः ।।
त्वां शैलोन्मत्तदन्तावळदुरितचयान्मोक्षयिष्यामि मा भीः ।
इत्युक्त्या तस्य चेतो विशुच इह भवेमैव विश्वासभूम्ना ।। ३७

ಮೂಲ : ವಿನ್ನೈತ್ತಿರಳ್ ಮಾತ್ತಿಯ ವೇದಿಯರ್‌ತನ್ದರುಳ್‌ವಾಶಕತ್ತಾಲ್
ಅನ್ನೈತ್ತುಮರಿಂದಪಿನ್ ಆರುಂಪಯನುಮೆನವಡೈನ್ದೋಂ,
ಮನತ್ತಿಲಿರುನ್ದುಮರುತ್ತಮುದಾಹಿಯಮಾದವನಾರ್,
ನಿನ್ನೈತ್ತನ್‌ಮನತ್ತಿಲರಿದಾಹಿ ನಿನ್ರನೀಳ್‌ಕಳಲೇ ॥ 38

(ರಹಸ್ಯತ್ರಯಚುಳಕಂ)

ಅರ್ಥ :- ಇದೇ ಪಾಶುರವು ಹಿಂದೆ ''ತತ್ವತ್ರಯಚುಳಕ'' ಕ್ಕೆ ಸೇರಿದ್ದೆಂದು ಆ ಸಂದರ್ಭದಲ್ಲಿ ಅರ್ಥ ವಿವರಿಸಲಾಗಿದೆ. ಅದು 30ನೆಯದು. ಈ ''ರಹಸ್ಯತ್ರಯಚುಳಕ''ದಲ್ಲೂ ಅದೇ ಬಂದಿದೆ. ಅಲ್ಲಿನ ಅರ್ಥವೇ ಇಲ್ಲಿಯೂ, ಆದರೆ 'ತಂದರುಳ್ ವಾಶಕತ್ತಾಲ್' ಎಂಬುದಕ್ಕೆ ಚರಮಶ್ಲೋಕದಿಂದ ಎಂದು ಹೇಳಬೇಕು.

ಅನಾಶ್ರಿತರಿಗೆ ಅತ್ಯಂತ ದುರ್ಲಭನಾಗಿಯೂ, ಆಶ್ರಿತರ ಸಮಸ್ತ ಪಾಪನಿವರ್ತಕನಾಗಿಯೂ, ಸಮಸ್ತ ವೇದ ವೇದಾಂತ ವೇದ್ಯವಾಗಿಯೂ, ಶ್ರೀಮನ್ನಾರಾಯಣನ ದಿವ್ಯಸೂಕ್ತಿಯಿಂದ ಸರ್ವ ಶಾಸ್ತ್ರಗಳನ್ನೂ ಯಥಾವತ್ತಾಗಿ ಅರಿತ ಆಶ್ರಿತರಿಗೆ ಅತ್ಯಂತ ಸುಲಭವಾಗಿಯೂ ಇರುವ ಶ್ರೀಕೃಷ್ಣನ ಪಾದಗಳನ್ನೇ ಪ್ರಾಪ್ಯವನ್ನಾಗಿಯೂ, ಪ್ರಾಪಕವನ್ನಾಗಿಯೂ ಪಡೆದೆವು.

अहस्संहतिनाशिनां श्रुतिविदां सर्वं वयं सूक्तिभिः ।
विज्ञायाथ मनोनिवासिकमलाकान्तस्य पादद्वयम् ।।
दुर्ज्ञेयात्मगुणं महौषधसुधामूर्तेः महत् भाग्यदम् ।
सुच्छायं तदुपाय माप्तुम फलं चेति द्विधेवस्थितम् ।। ३८

ಮೂಲ : ಎಟ್ಟಿಲಾರಿರಣ್ಡಿಲೊನ್ರಿಲೆಂಗುಮಾರಿಯಂಬುವಾರ್,
ವಿಟ್ಟವಾರುಪತ್ತುಮಾರುವೀಡುಕಣ್ಡುಮೇವುವಾರ್,
ಶಿಟ್ಟರಾನತೇಶುಯರ್ನ್ದ ದೇಶಿಕರ್ಕ್ಕುರಿನ್ದುಮೇಲ್,
ಎಟ್ಟುಮೂನ್ರುಮೂಡರುತ್ತದೆಂದ್ಯೆ ಮಾಲಿರಕ್ಕುಮೇ ॥ 39

(ರಹಸ್ಯತ್ರಯಚುಳಕಂ)

ಅರ್ಥ :- ಎಟ್ಟಿಲ್ = ಅಷ್ಟಾಕ್ಷರದಲ್ಲಿ, ಆರ್ ಇರಣ್ಡಿಲ್ = (6 x 2 = 12, ''ಷಟ್ಪದೋಯಂ ದ್ವಿಖಂಡ'' ಎನ್ನುವಂತೆ ಆರುಪದಗಳಾಗಿ ಎರಡು ಖಂಡಗಳಾಗಿರುವ) ಮಂತ್ರರತ್ನವಾದ ದ್ವಯದಲ್ಲಿ, ಒನ್ರಿಲ್ = ಒಂದೇ ಒಂದು ಶ್ಲೋಕವೆನಿಸಿದ ಚಮಶ್ಲೋಕದಲ್ಲೂ, ಎಂಗುಂ = ಹೀಗೆ ಒಟ್ಟು ಈ ಮೂರು ರಹಸ್ಯಗಳಲ್ಲಿಯೂ, (ಇದೇ ಅರ್ಥವನ್ನು ಹೇಳುವ ಕಡೆಗಳಲ್ಲೆಲ್ಲಾ ಎಂದೂ ಅರ್ಥವಾಗುವುದು) ಆರು-ಉಪಾಯವನ್ನು, (ಅಕಿಂಚನಾಧಿಕಾರವಾದ ಪ್ರಪತ್ತಿಯನ್ನು) ಇಯಂಬುವಾರ್ = ನಿರ್ಧರಿಸಿ ಘಂಟಾಘೋಷವಾಗಿ) ಹೇಳುತ್ತಿರುವ, ವಿಟ್ಟ-ಆರು = (ತನ್ನ ಅಧಿಕಾರಕ್ಕೆ ತಕ್ಕಂತೆ) ಬಿಟ್ಟು ಬಿಟ್ಟ ಇತರ ಉಪಾಯಗಳನ್ನೂ, ಪತ್ತುಂ = (ತಮಗೆ ಫಲಸಾಧನವಾಗಿ) ಹೊಂದುವ, ಆರುಂ

= ಪ್ರಪತ್ತಿರೂಪ ಉಪಾಯವನ್ನೂ, ವೀಡು = ಮೋಕ್ಷವನ್ನೂ, ಕಂಡು = (ನಿಪುಣಮತಿಯಿಂದ) ಆಲೋಚಿಸಿ ನೋಡಿ, ಮೇವುವಾರ್ = ಆದರಿಸುವವರಾದ, ಶಿಟ್ಟರಾನ = ಶಿಷ್ಟರಾದ, ತೇಶ್ = ತೇಜಸ್ಸಿನಿಂದ, ಉಯರ್ನ್ದ = ಮೇಲ್ಮೆಯುಳ್ಳ, ದೇಶಿಕರ್ಕು = ಆಚಾರ್ಯರಿಗೆ, ಉರಿನ್ದು = ಯೋಗ್ಯನಾಗಿ (ಶೇಷನಾಗಿ), ಮೇಲ್ = (ಇಷ್ಟೇ ಅಲ್ಲದೆ) ಅದಕ್ಕೂ ಮೇಲೆ, ಎಂದೈ-ಮಾಲ್ = ನಮ್ಮ ಸ್ವಾಮಿಯಾದ ಭಗವಂತನ, ಇರಕ್ಕಂ = ದಯೆಯು, ಎಟ್ಟು-ಮೂನ್ರಿಂ = (8 x 3 = 24 ತತ್ವವಾದ) ಪ್ರಕೃತಿಯ, ಊಡು = ಸಂಬಂಧವನ್ನೂ, ಅರುತ್ತದ್ = ಕತ್ತರಿಸಿಹೋಯಿತು, (ಸರ್ವಾನಿಷ್ಟವೂ ಕಳೆದುಹೋಗುವಂತೆ ಭಗವತ್ಸಂಕಲ್ಪವುಂಟಾಯಿತು).

मन्त्रे चाष्टाक्षरे षड्द्विकमहितमनौ श्लोकमन्त्रेऽसमाने ।
सर्वत्र क्काप्युपायं ह्यभिदधति तथा साधनत्यागिनो ये ।।
निक्षेपैकावलम्बाः परमपददृशो देशिका स्तेजसाग्र्याः ।
शिष्टां स्तत्सेवकोऽहंदलति विभुकृपा त्र्यष्टके मेऽनुबन्धम् ।। ३९

श्रीमते निगमान्तमहादेशिकाय नमः
श्रीदेशिकप्रबन्धधिष्ठिता सामृतरंजिनी ।
श्लोकीकृता व्याकृता च गोपालार्येण सन्मुदे ।।

॥ ಶ್ರೀಃ ॥

॥ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ॥

# ಅಧಿಕಾರಸಂಗ್ರಹಃ

## ಗುರುಪರಂಪರಾಸಾರ

ಮೂಲ : ಪೊಯ್‌ಹೈಮುನಿ ಪೂದತ್ತಾರ್ ಪೇಯಾಳ್ವಾರ್ ತಣ್‌ಪೊರು ನಲ್‌ವರುಂ ಕುರುಕೇಶರ್ ವಿಟ್ಟುಶಿತ್ತನ್, ತುಯ್ಯಕುಲಶೇಖರನ್ ನಂ ಪಾಣನಾದನ್ ತೊಂಡರಡಿಪ್ಪೊಡಿ ಮಳಿಶೈ ವಂದಶೋದಿ, ವೈಯ್ಯಮೆಲ್ಲಾಂ ಮರೈವಿಳಂಗ ವಾಳ್‌ವೇಲೇಂದುಂ ಮಂಗೈ ಯರ್‌ಕೋನೆನ್ರಿವರ್‌ಹಳ್ ಮಹಿಳ್‌ನ್ದು ಪಾಡುಂ, ಶೆಯ್ಯತಮಿಳ್ ಮಾಲೈಹಳ್ ನಾಂ ತೆಳಿಯವೋದಿ ತೆಳಿಯಾದ ಮರೈನಿಲಂಗಳ್ ತೆಳಿಹಿನ್ರೋಮೆ ॥ 1

ಅರ್ಥ :- ಪೊಯ್‌ಹೈ = 'ಪೊಯ್‌ಹೈ' ಎಂಬ ಸರಸ್ಸಿನಲ್ಲಿ ಅವತರಿಸಿದ, ಮುನಿ = ಮುನಿಯು, (ಸರೋಮುನಿ) ಪೂದತ್ತಾರ್ = ಪೂದತ್ತಾಳ್ವಾರ್‍ರು (ಭೂತಮುನಿ) ಪೇಯಾಳ್ವಾರ್ = ಮಹಾಗಾಹ್ವಯರು, ತಣ್ = ಶೀತಲವಾದ, ಪೊರುನಲ್ = ತಾಮ್ರಪರ್ಣಿಯ ತೀರದಲ್ಲಿ, ವರುಂ = ಬಂದವತರಿಸಿದ, ಕುರುಕೇಶರ್ = ಕುರುಕಾಪುರಿಯ ಒಡೆಯನು, (ನಮ್ಮಾಳ್ವಾರ್‍ರು) ವಿಟ್ಟುಶಿತ್ತನ್ = ವಿಷ್ಣುಚಿತ್ತರು, (ಪೆರಿಯಾಳ್ವಾರ್‍ರು) ತುಯ್ಯ = ಶುದ್ಧರಾದ, ಕುಲಶೇಖರರ್ = ಕುಲಶೇಖರಾಳ್ವಾರ್‍ರು, ನಂ-ಪಾಣನಾದನ್ = ನಮ್ಮ ತಿರುಪ್ಪಾಣಿಯಾಳ್ವಾರ್‍ರು, (ಶ್ರೀರಂಗನಾಥನ ವಿಶೇಷ ಕೃಪೆಯು ಈ ಆಳ್ವಾರಲ್ಲೂ ತನ್ನಲ್ಲೂ ಮಿಕ್ಕೆಲ್ಲರಿಗಿಂತ ಹೆಚ್ಚಾಗಿದೆ. ಇವರಿಗೆ ''ಮುನಿವಾಹನ'' ಎಂದೂ ತನಗೆ ''ವೇದಾಂತಾಚಾರ್ಯ'' ಎಂದೂ ಬಿರುದಿನ ಹೆಸರನ್ನು ದೇವರೇ ಕರುಣಿಸಿದನು. ಆದ್ದರಿಂದಲೇ ''ನಮ್ಮ'' ಎಂದು ಸಮಾನತೆಯನ್ನು ತೋರುವ ಅಭಿಮಾನವು ವ್ಯಕ್ತವಾಗಿದೆ). ತೊಂಡರ್ = ಭಕ್ತರ, ಅಡಿ = ಪಾದಗಳ, ಪೊಡಿ = ಧೂಳಿನಂತಿರುವ, (ಭಕ್ತಾಂಘ್ರಿರೇಣು) ಮಳಿಶೈ ''ತಿರುಮಳಿಶೈ'' ಎಂಬಲ್ಲಿ, ವಂದ = ಬಂದು ತೋರಿದ, ಶೋದಿ = ಜ್ಯೋತಿಯ ರೂಪಿನ, (ತಿರುಮಳಿಶೈಯಾಳ್ವಾರ್‍ರೂ, ಯಾಗದಲ್ಲಿ ಇವರಿಗೆ ಅಗ್ರ ಮರ್‍ಯಾದೆ ಮಾಡಲು ಕೆಲವರು ಆಕ್ಷೇಪಿಸಿದರು. ಅಂತಹವರ ಕಣ್ಣಿಗೆ ಪರಮಾತ್ಮನ ತೇಜಸ್ಸಿನಂತೆ ಕಾಣಿಸಿಕೊಂಡರು. ಅದರಿಂದ ಈ ಹೆಸರು) ವೈಯ್ಯಂ-ಎಲ್ಲಾಂ = ಲೋಕದಲ್ಲೆಲ್ಲಾ, ಮರೈ = ವೇದಗಳು, ವಿಳಂಗ = ಬೆಳಗುವಂತೆ, ವಾಳ್ = ಕತ್ತಿ, ವೇಲ್ = ಕುಂತ, (ಇವನ್ನು) ಏಂದಿ = ಪಿಡಿದು, ಮಂಗೈಯರ್

= "ತಿರುಮಂಗೈ" ಎಂಬ ಊರಿನವರಿಗೆಲ್ಲಾ, ಕೋನ್ = ಸ್ವಾಮಿ (ತಿರುಮಂಗೈಯಾಳ್ವಾರ್ರು) ಇವರ್‌ಹಳ್ = (ಹೀಗೆ) ಇವರೆಲ್ಲ, ಮಹಿಳ್‌ನ್ದು = ಆನಂದವಾಗಿ, ಪಾಡುಂ = ಹಾಡುವ, ಶೆಯ್ಯ = ಅತಿ ಸರಳವಾದ, ತಮಿಳ್-ಮಾಲೈಹಳ್ = ತಮಿಳಿನ ಪದ್ಯಮಾಲೆಗಳನ್ನು, ನಾಂ = ನಾವು, ತೆಳಿಯ = ಚೆನ್ನಾಗಿ ಅರ್ಥವಾಗುವಂತೆ, ಓದಿ = ಓದಿ (ಕಲಿತು) ತೆಳಿಯಾದ = ತಿಳಿಯದ, ಮರೈ-ನಿಲಂಗಳ್ = ವೇದ ಭಾಗಗಳನ್ನು, ತೆಳಿಹಿನ್ರೋಮೇ = ವಿಶದವಾಗಿ ತಿಳಿಯುವೆವು.

सरोमुनिर्भूतमुनिर्महामुनिः सुशीतलाताम्रदलापगापुरः ।
ईशश्शठारिर्मुनिविष्णुचित्त स्संशुद्धचित्तः कुलशेखराह्वय : ॥ १

अस्मन्मुनिः श्रीमुनिवाहनाख्यो भक्तांघ्रिरेणु स्स च भक्तिसारः ।
सर्वत्र लोके श्रुतयो यथा स्यु र्दीप्ता स्तथा कुन्तकृपाणपणिः ॥ २

मङ्गापुरीशः कलिवैरिसूरि रित्यादिभिः पूर्वतनै र्मुनीन्द्रैः ।
सङ्गीयमाना द्रविडोक्तिमाला ऋज्वीर्वयं सम्यगधीत्य पश्चात् ॥ ३

वेदान्तभागानतिदुर्गमार्थान् निगूढभावानुपबृम्हणै स्तैः ।
प्रबन्धभागै र्विशदार्थनिश्चयं जानीमहे तन्मुनिवृन्द माश्रिताः ॥ ४

ಮೂಲ : ಇನ್ಬತ್ತಿ ಲಿರೈಂಜುದಲಿಲಿಶೈಯುಂಪೇತ್ತಿಲ್ ಇಹಳಾದ ಪಲ್ಲುರ ವಿಲಿರಾಗಂ ಮಾತ್ತಿಲ್, ತನ್ಪತ್ತಿಲ್ ವಿನ್ನೈವಿಲೈಕ್ಕಿಲ್ ತಹವೋಕ್ಕತ್ತಿಲ್, ತತ್ತುವತ್ತೈಯುಣರ್‌ತ್ತುದಲಿಲ್ ತನ್ಮೈಯಾಕ್ಕಿಲ್, ಅನ್ಬರ್ಕ್ಕೇಯ ವತರಿಕ್ಕುಮಾಯನ್ನಿರ್ಕ, ಅರುಮರೈಹಳ್ ತಮಿಳ್‌ಶೆಯ್ದಾ ತಾಳೆಕೊಂಡು, ತುನ್ಬತ್ತ ಮದುರಕವಿತೋನ್ರಕ್ಕಾಟುಂ ತೊಲ್ವಳಿಯೇ ನಲ್ವಳಿಹಳ್ ತುಣಿವಾರ್‌ಹಳ್ಕ್ಕೇ ॥ 2

ಅರ್ಥ :- ಇನ್ಬತ್ತಿಲ್ = ಆನಂದಾನುಭವದಲ್ಲಿ, ಇರೈಂಜುದಲಿಲ್ = ಶರಣನನ್ನಾಗಿ ವರಿಸುವುದರಲ್ಲಿ, ಇಶೈಯುಂ = ಸಮ್ಮತಿಸುವಂತಹ, ಪೇತ್ತಿಲ್ = ಪುರುಷಾರ್ಥದಲ್ಲೂ, ಇಹಳಾದ = (ಯಾವಕಾಲದಲ್ಲೂ) ಚ್ಯುತಿಹೊಂದದ, ಪಲ್-ಉರವಿಲ್ = ಹಲವಾರು ಬಂಧುತನದಲ್ಲೂ, ಇರಾಗಂ-ಮಾತ್ತಿಲ್ = (ಭಗವದಿತರವಾದ ಅನುಚಿತ ವಿಷಯಗಳಲ್ಲಿ) ಆಸೆ ತೊರೆಯುವುದರಲ್ಲೂ, ತರ್ ಪತ್ತಿಲ್ = ತನ್ನ ಸಂಶ್ಲೇಷ ವಿಷಯದಲ್ಲಿ (ಸೇರುವಿಕೆಯಲ್ಲಿ) ವಿನ್ನೈ-ವಿಲಕ್ಕಿಲ್ = ಪಾಪನಿವಾರಣೆಯಲ್ಲೂ, ತನ್ಮೈ = (ಆತ್ಮನ ಸಹಜವಾದ) ಸ್ವಭಾವವನ್ನು,

ಆಕ್ಕಿಲ್ = ಉಂಟುಮಾಡುವುದರಲ್ಲೂ, ಅನ್ಬರ್ಕ್ಕೇ = ಭಕ್ತರಿಗಾಗಿಯೇ, ಅವತರಿಕ್ಕುಂ = ಅವತಾರಮಾಡಿ ಕರುಣಿಸುವ, ಆರ್ಯ = ಗೋಪಾಲನು, ಇರ್ಕ = ಇದ್ದರೂ, (ಬಿಟ್ಟು) ಅರು = ಅರಿಯಲು ಕಷ್ಟವಾದ, ಮರ್ರೈಹಳ್ = ವೇದಾಂತಗಳನ್ನು, ತಮಿಳ್ = ತಮಿಳಿನಲ್ಲಿ, ಶೆಯ್ದಾರ್ = ರಚಿಸಿದವರ (ನಮ್ಮಾಳ್ವಾರ್ರ) ತಾಳೇ = ಅಡಿಗಳನ್ನೇ, ಕೊಂಡು = ಆಶ್ರಯಿಸಿ, ತುನ್ಬ್-ಅತ್ತ = ದೋಷವಿಲ್ಲದ, ಮದುರಕವಿ = ಮಧುರಕವಿಯಾಳ್ವಾರು, (ಭಗವದ್ವಿಯಷಯವನ್ನೂ ಬಿಟ್ಟು ಪರಮಪುರುಷಾರ್ಥದಲ್ಲಿಯೂ ಆಚಾರ್ಯ ಕೀರ್ತನೆ ಮಾಡಿದ್ದರಿಂದಲೇ ಅವರಿಗಿದ್ದ ಹೆಸರು ಅನ್ವರ್ಥವಾಯಿತು), ತೋನ್ರ-ಕಾಟ್ಟುಂ = ಚೆನ್ನಾಗಿ ತಿಳಿಯುವಂತೆ ತೋರಿಸಿಕೊಟ್ಟ, ತೊಲ್-ವಳಿಯೇ = ಶುದ್ಧವಾದ ಅನಾದಿಮಾರ್ಗವೇ, ತುಣಿವಾರ್ಹಳ್ಕ್ = ಧೈರ್ಯವಾಗಿ ಮುಂದುವರಿಯುವವರಿಗೆ, ನಲ್-ವಳಿಹಲ್ = ಮೋಕ್ಷಮಾರ್ಗಗಳು. (ಭಕ್ತಿ-ಪ್ರಪತ್ತಿಗಳೇ ಮೋಕ್ಷಸಾಧನಗಳು. ಕೊನೆಗೆ ಭಗವದ್ಭಕ್ತಿಯಿಂದಲೂ, ಶಾಸ್ತ್ರಜ್ಞಾನದ ಬೆಂಬಲದಿಂದಲೂ ಸರ್ವಾರ್ಥಗಳನ್ನರಿಯ ಬಹುದಾದರೂ, ಮುಮುಕ್ಷುಗಳೆಲ್ಲರಿಗೂ ಆಚಾರ್ಯ ಕೃಪೆಯೇ ಅತ್ಯಾವಶ್ಯಕ. ಅದಿಲ್ಲದೆ ಯಾವುದೂ ಸಿದ್ಧಿಸದು).

भोग्यत्वे सेव्यतायां अनुमतपुरुषार्थत्वदुस्त्याज्यनाना-
बान्धव्यस्वानुरागप्रविहतिविषयेष्वात्मसंश्लेषकार्ये ॥
पापौघोन्मूलकृत्ये निरवधिकरुणायां च तत्वोपदेशे ।
जीवस्वाभाविकाकृत्यधिगतिविषये स्वाश्रयैकाश्रयेभ्यः ॥ १

सर्वं लीलाफलं तद्वितरितु ममले गोपबाले स्थितेऽपि ।
श्रुत्यन्तानां विधातुं सकलविषयतां द्राविडोक्त्याकृतित्वं ॥
योऽभूत्तस्यैव पादौ मधुरकविसमाख्योऽनघो यश्श्रित स्सन् ।
मार्गे यं नो ददर्श प्रभवति हि स एवातिविश्वासभाजाम् ॥ २.

ಮೂಲ : ಎನ್ನುಯಿರ್ ತಂದಳಿತ್ತವರೈ ಚ್ಚರಣಂಪುಕ್ಕು, ಯಾನಡೈವೇಯವರ್ ಗುರುಕ್ಕಳ್ ನಿರೈವಣಂಗಿ, ಪಿನ್ನರುಳಾಲ್ ಪೆರಂಬೂದೂರ್ ವಂದವಳ್ಳಲ್ ಪೆರಿಯನಂಬಿಯಾಳವಂದಾರ್ ಮಣಕ್ಕಾಲ್ ನಂಬಿ, ನನ್ನೆರಿಯ್ಯೆಯವರ್ಕ್ಕುರೈತ್ತ ವುಯ್ಯಕ್ಕೊಂಡಾರ್, ನಾದಮುನಿ ಶಡಗೋಪನ್ ಶೇನ್ನೈನಾದನ್, ಇನ್ನಮುದತ್ತಿರುಮಕಳೆನ್ರಿ ವರೈಮುನ್ನಿಟ್ಟೆಂಬುರುಮಾನ್ ತಿರುವಡಿಹಳಡೈಹಿನ್ರೇನೇ ॥ 3

ಅರ್ಥ:- ಯಾನ್ = ( ಆಚಾರ್ಯಕೃಪೆಗೆ ಪಾತ್ರನಾದ) ನಾನು, ಎನ್-ಉಯಿರ್ = ನನ್ನ ಆತ್ಮನನ್ನು, ತಂದ್ = (ಅದರ ನಿಜವಾದರಿವನ್ನುಂಟುಮಾಡಿ) ತೋರಿಸಿಕೊಟ್ಟು, ಅಳಿತ್ತವರ್ರೈ = ರಕ್ಷಿಸಿದವರನ್ನು (ಆಚಾರ್ಯರನ್ನು) ಶರಣಂ-ಪುಕ್ಕು = ಶರಣುಹೋಗಿ, ಅವರ್-ಗುರುಕ್ಕಳ್ = ಆ (ಸ್ವಾಚಾರ್ಯರ) ಗುರುಗಳ, ನಿರ್ರೈ = ಪರಂಪರೆಯನ್ನು (ಸಾಲನ್ನು), ವಣಂಗಿ = ನಮಿಸಿ (ಶರಣುಹೋಗಿ), ಪಿನ್-ಅರುಳಾಲ್ = ಮೇಲೆಮೇಲೆ ಬರುವ (ಗುರುಗಳ) ಅನುಗ್ರಹದಿಂದ, ಪೆರುಂಬೂದೂರ್ = ಶ್ರೀಪೆರುಂಬೂದೂರಿನಲ್ಲಿ, ವಂದ = ಅವತಾರಮಾಡಿದ, ವಳ್ಳಲ್ = ಉದಾರರಾದ (ಶ್ರೀರಾಮಾನುಜಾಚಾರ್ಯರು), ಪೆರಿಯನಂಬಿ = (ಅವರಗುರು) ಪೆರಿಯನಂಬಿಗಳು (ಮಹಾಪೂರ್ಣರು) (ಅವರುಗುರು) ಆಳವಂದಾರ್ = ಯಾಮುನಾಚಾರ್ಯರು, (ಅವರ ಗುರು) ಮಣಕ್ಕಾಲ್‌ನಂಬಿ = (ಶ್ರೀರಾಮಮಿಶ್ರರು), ಅವರ್ಕ್ = ಅವರಿಗೆ, ನಲ್-ನೆರಿಯ್ಯೈ = ಸನ್ಮಾರ್ಗವನ್ನು, (ಭಕ್ತಿಪ್ರಪತ್ತಿಗಳಲ್ಲಿ ಪ್ರಪತ್ತಿಯೇ ಅತ್ಯತಿಶಯವಾದುದುದೆಂದು) ಉರ್ರೈತ್ತ = ಉಪದೇಶಿಸಿದವರು, ಉಯ್ಯಕ್ಕೊಂಡಾರ್ = ಶ್ರೀ ಪುಂಡರೀಕಾಕ್ಷರು, (ಅವರ ಗುರು) ನಾದಮುನಿ = ನಾಥಮುನಿಗಳು, (ಅವರಿಗೆ) ಶಡಗೋಪರ್ = ನಮ್ಮಾಳ್ವಾರ್‍ರು, (ಅವರಿಗೆ), ಶೇನೈನಾದನ್ = (ಸೇನಾಪತಿ) ವಿಷ್ವಕ್ಸೇನರು, (ಅವರಿಗೆ), ಇನ್-ಅಮುದ-ತಿರು-ಮಹಳ್ = ಭೋಗ್ಯತೆಯಲ್ಲಿ ಅಮೃತಕ್ಕಿಂತ ಭೋಗ್ಯತಮಳಾದ ಮಹಾಲಕ್ಷ್ಮಿ (ಹೀಗಿರುವ) ಇವರ್ರೈ = (ಮೇಲೆ ಹೇಳಿದ ಕ್ರಮದಲ್ಲಿ) ಇವರನ್ನು, ಮುನ್-ಇಟ್ಟ್-ಮುಂದಿರಿಸಿಕೊಂಡು (ಧ್ಯಾನಿಸಿ), ಎಂಬೆರುಮಾರ್ = ಶ್ರೀಮನ್ನಾರಾಯಣನ, ತಿರುವಡಿಹಳ್ = ಪಾದಗಳನ್ನು, ಅಡೈಹಿನ್ರೇನ್ = ಪಡೆಯುತ್ತೇನೆ. (ಮುಮುಕ್ಷುಗಳಿಗೆ ಸರ್ವಾವಸ್ಥೆಯಲ್ಲೂ ಗುರುಪಂಕ್ತಿ ಭಜನೆಯು ಅತ್ಯಗತ್ಯವಾದುದು).

दत्वात्मानं म आवत्तमिह शरण मेत्यैतदाचार्यवर्य-<br>
श्रेणिं नत्वाथ कारुण्यत उदित मुदारं महाभूतपुर्याम् ।<br>
श्रीमद्रामानुजार्यं महितमुनिमहापूर्णकं यामुनार्यं<br>
श्रीमन्तं राममिश्रं सुपथ मुपदिशन्तं सरोजेक्षणं च ॥ १

नाथं तं योगिवर्यं कृतभरजनताकूटनिष्ठं शठारिं<br>
विष्वक्सेनं च लक्ष्मीं अतिशयितसुधामेवमादीन् पुरस्तात् ।<br>
कृत्वा कारुण्यपूर्णानथ जगदुदयाद्यादिहेतोर्दयाळो:<br>
श्रीमन्नारायणस्योत्तमपदकमले संश्रयेऽनन्यभक्त्या ॥ २

ಮೂಲ : ಆರಣನೂಲ್ವಳಿಚ್ಚೆವ್ವೈಯಳಿತ್ತಿಡುಮೈದುಕರ್ಕೋರ್,
ವಾರಣಮಾಯವರ್ ವಾದಕ್ಕದಲಿಹಳ್ ಮಾಯ್ತ್ತಪಿರಾನ್,
ಏರಣಿಕೀರ್ತಿಯಿರಾಮಾನುಶಮುನಿಯಿನ್ನುರೈಶೇರ್,
ಶೀರಣಿ ಶಿಂದೈಯಿನೋಂ ಶಿಂದಿಯೋಮಿನಿತ್ತೀ ವಿನ್ಶೈಯೇ ॥ 4

ಅರ್ಥ :- ಆರಣನೂಲ್ = ವೇದಾಂಶಾಸ್ತ್ರದ (ವ್ಯಾಸರ ಬ್ರಹ್ಮಸೂತ್ರದ), ವಳಿ = ಮಾರ್ಗದ, ಶೆವ್ವೈ = ಋಜುತನವನ್ನು (ಸೂತ್ರಾಕ್ಷರಗಳ ಸ್ವಾರಸ್ಯಕ್ಕೆ ಅನುಗುಣವಾದ ಪ್ರವರ್ತನೆಯನ್ನು), ಅಳಿತ್ತಿಡುಂ = ಕೆಡಿಸಿ ನಾಶಪಡಿಸುವಂತಹ, ಐತುಕರ್ಕ್ = ಕುವಾದಿಗಳಿಗೆ, ಓರ್ = ಅಸದೃಶವಾದ, ವಾರಣಮಾಯ್ = ಮತ್ತಗಜವಾಗಿ, ಅವರ್ = ಅವರ, ವಾದ = ವಾದಗಳೆಂಬ, ಕದಲಿಹಳ್ಳೈ = ಬಾಳೆಯ ಗಿಡಗಳನ್ನು, ಮಾಯ್ತ್ತ = ನಾಶಮಾಡಿದ (ಆದುದರಿಂದಲೆ) ಪಿರಾನ್ = ಉಪಕಾರಮಾಡಿದವರಾದ, ಏರ್ = (ಲೋಕಗಳೆಲ್ಲೆಲ್ಲಾ) ಬಹಳ ಚೆನ್ನಾಗಿ ಒಪ್ಪುವಂತಹ, ಅಣಿ = ಅಲಂಕಾರವಾದ, ಕೀರ್ತಿ = ಯಶಸ್ಸುಳ್ಳ, ಇರಾಮಾನುಶಮುನಿ = ಶ್ರೀ ರಾಮಾನುಜಾಚಾರ್ಯರ, ಇನ್ = (ಶಬ್ದಾರ್ಥಗಳಲ್ಲಿರುವ ಗುಣಗಳಿಂದ) ಬಲು ಇಂಪೆನಿಸಿದ, ಉರೈ = ಉತ್ತಮವಾದ ನುಡಿಗಳನ್ನು, ಶೇರ್ = ಸೇರಿಸಿಕೊಂಡ, ಶೀರ್ = ಸದ್ಗುಣಗಳಿಂದ, ಅಣಿ = ಅಲಂಕೃತವಾದ, ಶಿಂದೈಯಿನೋಂ = ಚಿಂತೆಯಿರುವ (ಸರ್ವದಾ ಧ್ಯಾನವಿರುವ) (ನಾವು), ಇನಿ = ಇನ್ನುಮೇಲೆ (ಯತಿಸಾರ್ವಭೌಮರ ಗ್ರಂಥಗಳ ಸವಿಯನ್ನನುಭವಿಸಿ ರಸಿಕರೆನಿಸಿದ ಮೇಲೆ) ತೀ-ವಿನ್ಶೈ = (ದೇವರಿಗೆ ಅಭಿಮತವಲ್ಲದ) ಉಗ್ರವಾದ ಕರ್ಮಗಳನ್ನು, ಶಿಂದಿಯೋಂ = ಮನಸ್ಸಿನಲ್ಲೂ ನೆನೆಯುವುದಿಲ್ಲ, ಹೀಗಾದ ಮೇಲೆ ಮಾಡುವುದೆಂತು ? ಖಂಡಿತ ಮಾಡುವುದಿಲ್ಲ).

**वेदान्ताध्वार्जवादिप्रगुणितमथने हैतुका ये प्रवृत्ताः**
**ध्वंसीचक्रे तदुत्थाः कुवचनकदलीः साह्यकृत् यः करीशः ।**
**लोकालङ्कारकीर्तिः यतिकुलतिलकः तस्य रामानुजस्य**
**श्रीसूक्त्यानन्दितानां कथमपि न भवेत् नोऽघचिन्तं हि चित्तम् ॥ ४**

ಮೂಲ : ನೀಳವಂದಿನ್ರು ವಿದಿವಹೈಯಾಲ್ ನಿನ್ಶೈವೋನ್ರಿಯನಾಂ,
ಮೀಳವಂದಿನ್ನುಂ ವಿನ್ಶೈಯುಡಂಬೊನ್ರಿ ವಿಳುಂದುಳಲಾದ್,
ಆಳವಂದಾರೆನ ವೆನ್ನರುಳ್‌ತಂದು ವಿಳಂಗಿಯಶೀರ್,
ಆಳವಂದಾರಡಿಯೋಂ ಪಡಿಯೋಂ ಇನಿಯಲ್ವಳಕ್ಕೇ ॥ 5

ಅರ್ಥ :- ನೀಳ-ವಂದ್ = ಬಹುಕಾಲದಿಂದ (ಸಂಸಾರದಲ್ಲಿ ತೊಳಲಿ ಬಳಲಿ) ಬಂದು, ಇನ್ರ್ = ಈ ಜನ್ಮದಲ್ಲಿ, ವಿದಿ-ವಶೈಯಾಲ್ = ದೇವರ ಕರುಣೆಯ ಮೂಲಕವಾದ ಭಾಗ್ಯದಿಂದ, ನಿನ್ನೈವ್ = (ಉಜ್ಜೀವಿತನಾಗಲೆಂಬ) ಬಯಕೆಯನ್ನು, ಒನ್ರಿಯ = ಪಡೆದಿರುವ, ನಾಂ = ನಾವು, ಮೀಳ = ಮತ್ತಷ್ಟು ಹೆಚ್ಚಾಗಿ, ವಿನ್ಯೆ = ಪಾಪದಿಂದ ಬರುವ, ಉಡುಂಬ್ = ದೇಹಸಂಬಂಧವನ್ನು, ಒನ್ರಿ = ಪಡೆದು, ವಿಳುಂದ್ = (ಕೀಳುಗತಿಯನ್ನು ಹೊಂದಿ) ಬಿದ್ದು, ಉಳಲಾದ = ಪಡಬಾರದ ಯಾತನೆಯನ್ನು ಪಡೆದಂತೆ, ''ಆಳ = (ನಮ್ಮನ್ನು) ಆಳಿ ರಕ್ಷಿಸಲು, ವಂದಾರ್ = ಬಂದರು'', ಎನ = ಎಂದು ಎಲ್ಲರೂ ಕೊಂಡಾಡುವಂತೆ, ವೆನ್ರ್ = (ದುರ್ವಾದಿಗಳನ್ನು) ಜಯಿಸಿ, ಅರುಳ್-ತಂದ್ = ಕರುಣಿಸಿ, ವಿಳಂಗಿಯ = ಬೆಳಗುತ್ತಿರುವ, ಶೀರ್ = ಶುಭಗುಣಗಳುಳ್ಳ, ಆಳವಂದಾರ್ = ಯಾಮುನಾಚಾರ್ಯರ, ಅಡಿಯೋಂ = ದಾಸರಾದ ನಾವು, ಇನಿ = ಇನ್ನುಮುಂದೆ, ಅಲ್-ವಳಕ್ಕೇ = ನ್ಯಾಯವಲ್ಲದುದನ್ನು (ಅಸಚ್ಛಾಸ್ತ್ರಗಳನ್ನು) ಪಡಿಯೋಂ = ಪಠಿಸೆವು (ಓದುವುದಿಲ್ಲ).

आयाता श्चिरकालतो जनिपथे दैवात् विदन्तो हितं
भूयोऽपीह यथा पतेम न वयं दुष्कर्मदेहै र्युताः ।
दूयेमापि तथोपयात इव संज्ञायेत वा वादिनः
जित्वास्मासु दयालु राहितयशाः श्रीयामुनेयो मुनिः ॥ १

तादृक्षदेशिकपदद्वन्द्वसेवारता वयम् ।
न पठाम स्त्वपन्यायग्रन्थान् अन्यान् इतः परम् ॥ ५

ಮೂಲ : ಕಾಳಂ ವಲಂಬುರಿಯನ್ನ ನರ್ಕ್ಕಾದಲಡಿಯವರ್ಕ್ಕ,
ತಾಳಂ ವಳಂಗಿತ್ತಮಿಳ್‌ಮರ್ರೈ ಇನ್ನಿಶ್ಶೈತಂದವಳ್ಳಲ್,
ಮೂಳುಂತವನೆರಿ ಮೂಟ್ಟಿಯ ನಾದಮುನಿಕ್ಕಳಲೇ,
ನಾಳುಂತೊಳುದೆಳುವೋಂ ನಮಕ್ಕಾರ್ ನಿಹರ್ ನಾನಿಲತ್ತೇ ॥ 6

ಅರ್ಥ :- ಕಾಳಂ = ಕಹಳೆ (ಅಥವಾ ಚಕ್ರ) ವಲಂಬುರಿ = ಬಲಮುರಿ ಶಂಖ ಇವುಗಳಿಗೆ (ಇವುಗಳ ಧ್ವನಿಯು ವಿಜಯಸೂಚಕವಾಗಿ ಯಜಮಾನನ ಮೇಲ್ಮೆಯನ್ನು ತಿಳಿಸುವಂತೆ) ಅನ್ನ = ಸದೃಶರಾದ, ನಲ್-ಕಾದಲ್ = ಒಳ್ಳೆಯ ಭಕ್ತಿಯುಳ್ಳ, ಅಡಿಯವರ್ಕ್ಕ = ಭಕ್ತರಿಗೆ, ತಾಳಂ-ವಳಂಗಿ = ತಾಳವಿದ್ಯೆ (ಗಾನವಿದ್ಯೆ)ಯನ್ನು ಉಪದೇಶಿಸಿ, ತಮಿಳ್‌ಮರ್ರೈ = ದ್ರಾವಿಡ ವೇದದ, ಇನ್-ಇಶೈ = ಇಂಪಾದ ಗಾನವನ್ನು, ತಂದ-ವಳ್ಳಲ್ = ಉಪದೇಶಮಾಡಿ ಕರುಣಿಸಿದ, ಮೂಳುಂ = ಆದರದಿಂದ ಸ್ವೀಕರಿಸಲ್ಪಡುವ, ತವ-ನೆರಿ =

ತಪೋಮಾರ್ಗಗಳನ್ನು, ಮೂಟ್ಟಿಯ = (ಲೋಕದಲ್ಲೆಲ್ಲಾ) ಪ್ರವರ್ತಿಸುವಂತೆ ಮಾಡಿದ, ನಾದಮುನಿ = ನಾಥಮುನಿಗಳ, ಕಳಲೇ = ಪಾದಗಳನ್ನೇ, ನಾಳುಂ = ನಿತ್ಯವೂ, ತೊಳುದು = ಸೇವಿಸಿ, ಎಳುವೋಂ = ಉಜ್ಜೀವಿಸೋಣ, ನಮಕ್ಕ್ = ನಮಗೆ, ನಾನಿಲತ್ತೇ = ನಾಲ್ಕು ಕಡೆಯೂ (ಎಲ್ಲೆಲ್ಲೂ) ನಿಹರ್ = ಸಮಾನರಾದವರು, ಆರ್ = ಯಾರು ? (ನಮ್ಮಂತಹ ಭಾಗ್ಯವಂತರು ಎಲ್ಲೂ ಇಲ್ಲ)

काहळस्वनशंखनादसमाश्रितामलभक्तयोः
ताळयुग्द्रविडोक्तिगीतिकलोपदेष्टुरुदारिणः ।
आदरेण तयो स्तपोऽयनदर्शिनाथमुनेः पदौ
नित्यमेव निषेव्य वृद्धिमुपैम नो भुवि के समाः ॥ ६

ಉಪೋದ್ಘಾತಾಧಿಕಾರ

ಮೂಲ : ಆಳುಮಡೈಕ್ಕಲಮೆನ್ರೆಮ್ಮೈ ಯಂಬುಯತ್ತಾಳ್‌ಕಣವನ್,
ತಾಳಿಣೈಶೇರ್‌ನ್ದೆಮಕ್ಕುಮವೈತಂದ ತಹವುಡೈಯಾರ್,
ಮೂಳುಮಿರುಳ್ಗಳ್ ವಿಳಮುಯನ್ರೋದಿಯ ಮೂನ್ರಿನುಳ್ಳಂ,
ನಾಳುಮುಹಕ್ಕವಿಂಗೇ ನಮಕ್ಕೋರ್‌ವಿದಿವಾಯ್‌ಕ್ಕಿನ್ರದೇ ॥ 7

ಅರ್ಥ :- ಅಂಬುಯತ್ತಾಳ್ = ಅಂಬುಜವಾಸಿನಿಯಾದ ಮಹಾಲಕ್ಷ್ಮಿಯ, ಕಣವನ್ = ವಲ್ಲಭನು, ಎಮ್ಮೈ = ನಮ್ಮನ್ನು, ಅಡೈಕ್ಕಲಂ = ರಕ್ಷಣೀಯ ವಸ್ತುವೆಂದು, ಆಳುಂ = ಸ್ವೀಕರಿಸಬೇಕೆಂದು, ತಾಳ್-ಇಣೈ = ಪಾದಗಳೆರಡನ್ನೂ, ಶೇರ್‌ನ್ದ್ = ಆಶ್ರಯಿಸಿ, ಎಮಕ್ಕುಂ = ನಮಗೂ, ಅವೈ = ಆ ಭಗವಂತನ ಅಡಿಗಳನ್ನು , ತಂದ = ಕೊಡುವ, ತಹವ್-ಉಡೈಯಾರ್ = ದಯೆಯುಳ್ಳವರಾದ (ಆಚಾರ್ಯರು), ಮೂಳುಂ = ಅಭಿವೃದ್ಧಿಯಾಗುತ್ತಿರುವ, ಇರುಳ್‌ಹಳ್ = ಅಜ್ಞಾನಗಳು, ವಿಳ = ತೊಲಗುವಂತೆ, ಮುಯನ್ರ್ = ಅಭಿನಿವೇಶದಿಂದ, ಓದಿಯ = ಉಪದೇಶಿಸಿದ, ಮೂನ್ರಿನ್ = ಮೂರು ರಹಸ್ಯಗಳ, ಉಳ್ಳಂ = ತಾತ್ಪರ್ಯವನ್ನು, ನಾಳುಂ = ಪ್ರತಿನಿತ್ಯವೂ (ಅನುಸಂಧಾನಮಾಡಿ) ಉಹಕ್ಕ = ಉಲ್ಲಾಸಗೊಳ್ಳಲು, ನಮಕ್ಕ್ = ನಮಗೆ, ಇಂಗೇ = ಇಲ್ಲಿಯೇ, ಓರ್ = ಅಸಾಧಾರಣವಾದ, ವಿದಿ = ಭಾಗ್ಯವು, ವಾಯ್‌ಕ್ಕಿನ್ರದ್ = (ಪರಿಪಕ್ವವಾಗಿ) ಫಲೋನ್ಮುಖವಾಗಿದೆ.

स्वीकुर्वस्मान् स्वरक्ष्यान् इति कमलगृहावल्लभांघ्री प्रपद्य
तद्दानैकानुकम्पैः गुरुभि रभिहिते सादरं वीतदोषे ।

तात्पर्यार्थो रहस्यत्रय इह च यथा नोऽभिवर्धेत सम्यक्
सन्तुष्यामश्च तद्वन्निरुपमविधि रागत्य पद्मः समिन्धे ॥ ७

ಮೂಲ : ತಿರುವುಡನ್‌ವಂದ ಶೇಳುಮಣಿಪೋಲ್ ತಿರುಮಾಲಿದಯಂ,
ಮರುವಿಡಮೆನ್ನ ಮಲರಡಿಶೂಡುಂವಹೈ ಪೆರುನಾಂ,
ಕರುವುಡನ್‌ವಂದ ಕಡುವಿನ್ನೈಯಾತ್ತಿಲ್ ವಿಳುಂದೊಳುಹಾದ್,
ಅರುವುಡನ್ನೈಂದರಿವಾರ್ ಅರುಳ್‌ಶೆಯ್ಯ ವಮ್ಮೈಂದನರೇ ॥ 8

( ಈ ಪಾಶುರದಿಂದ ನಲವತ್ತನೆಯ ಪಾಶುರದವರೆಗೆ ಅಂತಾದಿ ಪದ್ಯಗಳಾಗಿವೆ)

ಅರ್ಥ :- ತಿರು-ಉಡನ್ = (ಸಮುದ್ರಮಥನ ಕಾಲದಲ್ಲಿ) ಮಹಾಲಕ್ಷ್ಮಿಯ ಜೊತೆಯಲ್ಲಿ, ವಂದ = ದೊರಕಿದ, ಶೆಳು = ಶ್ಲಾಘ್ಯವಾದ, ಮಣಿಪೋಲ್ = ಕೌಸ್ತುಭಮಣಿಯಂತೆ, ತಿರು = ಲಕ್ಷ್ಮಿಯಲ್ಲಿ, ಮಾಲ = ವ್ಯಾಮೋಹವುಳ್ಳವನ (ಲಕ್ಷ್ಮೀಕಾಂತನ) ಇದಯಂ = ಹೃದಯವು, ಮರು-ಇಡಂ-ಎನ್ನ = ಪ್ರೇಮದಿಂದ ಬಂದು ಆಶ್ರಯಿಸಿರುವ ಸ್ಥಳವೆಂದು ಹೇಳುವಂತೆ, ಮಲರ್-ಅಡಿ = ಸುಮಮೃದುಪದಗಳನ್ನು ಶೂಡುಂ-ವಹೈ = ತಲೆಯಮೇಲೆ ಇರಿಸಿಕೊಳ್ಳುವ ರೀತಿಯನ್ನು, ಪೆರ = ಹೊಂದಲು, (ಅರ್ಹರಾದ) ನಾಂ = ನಾವು, ಕರುವುಡನ್ = ಗರ್ಭದಿಂದಲೇ ತೊಡಗಿ, ವಂದ = ಬಂದ, ಕಡು-ವಿನ್ನೈ = ಕ್ರೂರ ಪಾಪಗಳೆಂಬ, ಆತ್ತಿಲ್ = ನದಿಯಲ್ಲಿ, ವಿಳುಂದ್ = ಬಿದ್ದು, ಒಳುಹಾದ್ = ಕೊಚ್ಚಿಕೊಂಡು ಹೋಗದಂತೆ, ಅರುಳ್ = ದಯೆಯನ್ನು, ಶೆಯ್ಯ = ತೋರಲು, ಅಮ್ಮೈಂದನರೆ = ಪೂರ್ಣ ಸಾಮರ್ಥ್ಯವಂತರಾಗಿರುವರೇ (ಅವರು ಯಾರೆಂದರೆ) ಅರುವುಡನ್ = ಸೂಕ್ಷ್ಮಾರ್ಥಗಳ ಸಹಿತ (ಅರಿಯಲು ಕಷ್ಟವಾದ ಶೇಷ-ಶೇಷಿ ಭಾವವೇ ಮೊದಲಾದ ಸಂಬಂಧಜ್ಞಾನಸಹಿತ) ಐಂದ್ = ಐದನ್ನು (ಅರ್ಥಪಂಚಕವೆಂದು ಪ್ರಸಿದ್ಧವಾದ, ಪರಮಾತ್ಮ, ಜೀವಾತ್ಮಸ್ವರೂಪ, ಪ್ರಾಪ್ತಿಗೆ ಉಪಾಯ, ಫಲ ಮತ್ತು ಪ್ರಾಪ್ತಿಗೆ ವಿರೋಧಿಯಾದುವುಗಳನ್ನು) ಅರಿವಾರ್ = ತಿಳಿಯತಕ್ಕವರು (ಅಂದರೆ ವಿಶದ ಪ್ರಜ್ಞರಾದ ಆಚಾರ್ಯರು ಕರುಣಿಸಲು ಸಮರ್ಥರು. ಅವರನ್ನು ಆಶ್ರಯಿಸಿದ ಬಳಿಕ ಜ್ಞಾನಕ್ಕಾಗಿ ಮತ್ತ್ಯಾವುದನ್ನೂ ಅಪೇಕ್ಷಿಸಬೇಕಿಲ್ಲ ಎಂದು ಭಾವ).

सार्धं लक्ष्म्योपयातः प्रवरमणि रिव श्रीशवक्षस्स्थलं हि
तच्चास्काम निवासस्थलमिति पदपद्मार्हशीर्षा वयं च ।
गर्भायातोग्रपापव्रजसरिति निपत्य व्रजामो न यद्वत्
सूक्ष्मार्थान् पञ्च तद्वत् विदुरिह गुरवोऽस्मास्वलं ये दयन्ते ॥ ८

ಮೂಲ : ಅಮ್ಮೈಯಾದಿವ್ವೈಯೆನ್ನುಮಾಶೈಯಿನಾಲ್ ಅರುಮೂನ್ರುಲಹಿಲ್,
ಶುಮ್ಮೈಯಾನ ಕಲ್ವಿಹಳ್ ಶೂಳವಂದಾಲುಂ ತೊಹೈಯಿವ್ವೈಯೆನ್ರ್,
ಇಮ್ಮೈಯಾ ವಿಮ್ಮೈಯವರೇತ್ತಿಯ ಎಟ್ಟಿರಂಡೆಣ್ಣಿಯ, ನಂ
ಶಮ್ಮೈಯಾಶಿರಿಯರ್ ಶದಿರ್ಕ್ಕುಂ ತನಿನಿಲೈ ತಂದನರೇ ॥ 9

(ಸಾರನಿಷ್ಕರ್ಷಾಧಿಕಾರ - 2)

ಅರ್ಥ :- ಇವ್ವೈ = ಕಲಿತ ಮತ್ತು ಕಲಿಯುತ್ತಿರುವ ಈ ವಿದ್ಯೆಗಳು, ಅಮ್ಮೈಯಾದ್ = ಸಾಲದು, ಎನ್ರುಂ = ಎಂಬ, ಆಶೈಯಿನಾಲ್ = ಆಸೆಯಿಂದ, ಉಲಹಿಲ್ = ಲೋಕದಲ್ಲಿ, (ಕಲಿಯಬಹುದಾದ) ಆರು-ಮೂನ್ರುಂ = (6 x 3 -= 18) ಹದಿನೆಂಟು, ಶುಮ್ಮೈಯಾನ = ಬರೀಭಾರವಾಗಿರುವ, ಕಲ್ವಿಹಳ್ = ವಿದ್ಯೆಗಳು, ಶೂಳ್ = ಸುತ್ತುಗಟ್ಟಿಕೊಂಡು, ವಂದಾಲುಂ = ಬಂದರೂ, ಇವ್ವೈ = ಇವು, ತೊಹೈ-ಎನ್ರ್ = ಬರೀ ಸಂಖ್ಯೆಯನ್ನು ಪೂರ್ತಿಮಾಡಲು ಬಂದಿರತಕ್ಕವು ಎಂದು, ಇಮ್ಮೈಯಾನ = ಎವೆಯಿಕ್ಕದವರಾದ, ಇಮ್ಮೈಯವರ್ = ನಿತ್ಯಸೂರಿಗಳು, ಏತ್ತಿಯ = ಕೊಂಡಾಡುವಂತಹ, ಎಟ್ಟ್ = ಅಷ್ಟಾಕ್ಷರ ಮಂತ್ರವನ್ನೂ, ಇರಂಡ್ = ಎರಡು ಮಂತ್ರಗಳನ್ನೂ, (ದ್ವಯ ಮತ್ತು ಚರಮ ಶ್ಲೋಕಗಳು) ಎಣ್ಣಿಯ = (ಅರ್ಥಾನುಸಂಧಾನದೊಡನೆ) ಜಪಿಸುವ, ನಂ = ನಮ್ಮ, ಶಮಯ-ಆಶರಿಯರ್ = ದರ್ಶನ ಪ್ರವರ್ತಕರಾದ ಆಚಾರ್ಯರು, ಶದಿರ್ಕ್ಕುಂ = ಚತುರತೆಯೊಡಗೂಡಿದ, ತನಿ-ನಿಲೈ = ತನ್ನದೇ ಆದ ಸ್ಥಿತಿಯನ್ನು, ತಂದನರ್ = ತಂದುಕೊಟ್ಟು ಕರುಣಿಸಿದರು.

नैता अभ्यस्यमाना अल मिति च कला आशयाष्टादशोर्व्यां
सर्वा भारायमाणा गणश उपगता श्चापि संख्यासमाप्त्यै ।
मत्वैवं निर्निमेषैःपरमपदगतैः संस्तुतं चाष्टवर्णं
मन्त्रं संशीलयन्तो द्वय मिह समयाचार्यराजोऽस्मदीयाः ॥
सारासारविवेकज्ञाः सर्वोज्जीवनदां स्थितिम् ।
कृपया चोपदेशेन दुष्प्रापां इतरैः ददुः ॥ ९

ಮೂಲ : ನಿಲೈತಂದದಾರಕನಾಯ್ ನಿಯಮಿಕ್ಕುಮಿರೈವನುಮಾಯ್ ।
ಇಲದೊನ್ರೆನಾವಹೈಯೆಲ್ಲಾಂ ತನದೆನುಮೆಂದ್ವೈಯುಮಾಯ್ ।
ತುಲೈಯೊನ್ರಿಲ್ಲೈಯೆನ ನಿನ್ರ ತುಳಾಯ್ ಮುಡಿಯಾನುಡಂಬಾಯ್ ।
ವಿಲೈಯಿನ್ರಿ ನಾಮಡಿಯೋಮೆನ್ರ್ ವೇದಿಯರ್ ಮೆಯ್‌ಪ್ಪೊರುಳೇ ॥

(ಪ್ರಧಾನಪ್ರತಿತಂತ್ರಾಧಿಕಾರ - 3)

**ಅರ್ಥ** :- ನಿಲೈ = ಸ್ಥಿತಿಯನ್ನು, ತಂದ = ಕೊಟ್ಟಿರುವ, ದಾರಕನಾಯ್ = ಧಾರಕನಾಗಿಯೂ, ನಿಯಮಿಕ್ಕುಂ = ನಿಯಮಿಸುವಂತಹ, ಇರೈವನುಂ ಆಯ್ = ಸ್ವಾಮಿಯಾಗಿರುವ, ಒನ್ರು = ಒಂದೂ, ಇಲದ್ = ತನ್ನದಲ್ಲವೆಂದು, ಎನಾವಹ್ಯೆ = ಹೇಳಸಿಕೊಳ್ಳದ ರೀತಿಯಲ್ಲಿ, ಎಲ್ಲಾಂ = ಎಲ್ಲವೂ, ತನದ್ = ತನ್ನದೇ, ಎನುಂ = ಎಂದು ಹೇಳಿಸಿಕೊಳ್ಳುವ, ಎಂದೈಯುಂ-ಆಯ್ = ನಮ್ಮ ತಂದೆಯೂ ಆದ, ತುಲ್ಯೆ = ಸಮಾನವಾದುದು, ಒನ್ರು = ಒಂದೂ, ಇಲ್ಲೈ-ಎನ = ಇಲ್ಲದಂತೆ (ಸ್ವೇತರ ಸಮಸ್ತ ವಿಲಕ್ಷಣನಾದ) ನಿನ್ರ = ಇರುವ, ತುಳಾಯ್-ಮುಡಿಯಾನ್ = ತುಲಸೀಮಾಲೆಯನ್ನು ಕಿರೀಟದಲ್ಲಿ ಧರಿಸಿದ, ಪರಮಾತ್ಮನ, ಉಡಂಬಾಯ್ = ಶರೀರಗಳಾಗಿರುವ, ನಾಂ = ನಾವು (ಅವನಿಗೆ) ವಿಲೈ = ಬೆಲೆ, ಇನ್ರಿ = ಇಲ್ಲದ, (ನಿರುಪಾಧಿಕವಾದ) ಅಡಿಯೋಂ = ದಾಸರು, ಎನ್ರೇ = ಎಂಬುದೇ, ವೇದಿಯರ್ = ವೇದಗಳನ್ನು ಚೆನ್ನಾಗಿ ಅರಿತ ಜ್ಞಾನಿಗಳ, ಮೆಯ್ = ಸತ್ಯವಾದ, ಪೊರುಳ್ = ತಾತ್ಪರ್ಯ, (ತೀರ್ಮಾನವಾದ ಅರ್ಥ).

**सत्तादातु र्विधर्तु र्निरुपधिकनियन्तु स्समस्तेशितु श्च**
**नोच्येतेदं च नास्ये त्यपितु पितु रशेषस्य शेष्येश एव ।**
**इत्युक्तस्यास्थितस्य त्वनितरसमतां श्रीतुलस्यात्तमोळे:**
**देहा दासा वयं ही त्यनघनिगमसंवेदिनां तात्विकोऽर्थः ॥** १०

**ಮೂಲ :** **ಪೊರುಳೊನ್ರೆನನಿನ್ರ ಪೂಮಹಳ್‌ನಾದನವನಡಿಶೇರ್‌ನ್ದ್**
**ಅರುಳೊನ್ರು ಮನ್ಬನವನ್ಕೊಳುಪಾಯಮಮ್ಯೆಂದಪಯನ್,**
**ಮರುಳೊನ್ರಿಯ ವಿನ್ಯೆವಲ್ವಿಲಂಗೆನ್ರಿ ವೈಯ್ಯೆಂದರಿವಾರ್,**
**ಇರುಳೊನ್ರಿಲಾವಹ್ಯೆ ಯೆಮ್ಮನಂತೇರ ವಿಯಂಬಿನರೇ ॥** **11**

(ಅರ್ಥಪಂಚಕಾಧಿಕಾರ - 4)

**ಅರ್ಥ** :- ಪೊರುಳ್ = ಪುರುಷಾರ್ಥವು, ಒನ್ರು = ಒಂದೇ, ಎನ = ಎನ್ನುವಂತೆ, ನಿನ್ನ = ಇರುವ, ಪೂ-ಮಕಳ್-ನಾದನ್-ಅವನ್ = ಪೂವಿನ ಕುವರಿಯಾದ ಮಹಾಲಕ್ಷ್ಮಿಯ ವಲ್ಲಭನ, ಅಡಿ = ಪಾದಗಳನ್ನು, ಶೇರ್‌ನ್ದ = ಶರಣು ಹೊಂದಿ, ಅರುಳ್-ಒನ್ರುಂ = ದಯೆಯೊಂದಿಗೊಂದಾಗಿ, ಅನ್ಬನ್ = ಪ್ರೇಮದಿಂದ ಕೂಡಿದ ಭಕ್ತನೂ, ಅವನ್ = ಅವನಿಂದ, ಕೊಳ್ = ಸ್ವೀಕರಿಸಲ್ಪಡುವ, ಉಪಾಯಂ = ಮಾರ್ಗಗಳು (ಭಕ್ತಿ-ಪ್ರಪತ್ತಿಗಳು) ಅಮ್ಯೆಂದ = ಹೊಂದಿಕೊಂಡಿರುವ, ಪಯನ್ = ಫಲವೂ, (ಪರಿಪೂರ್ಣ

ಬ್ರಹ್ಮಾನುಭವವು) ಮರುಳ್ = ಅಜ್ಞಾನವನ್ನು, ಒನ್ರಿಯ = (ಬಿಡದೆ) ಉಂಟುಮಾಡುವ, ವಿನ್ಯೈ = ಪಾಪಗಳೆಂಬ, ವಲ = ಬಲವಾದ, ವಿಲಂಗ್ = ಸಂಕೋಲೆ, ಎನ್ರ್ = ಎಂಬ, ಇವ್ವೈ-ಐಂದುಂ = ಈ ಐದನ್ನೂ, (ಅರ್ಥ ಪಂಚಕಗಳನ್ನು) ಅರಿವಾರ್ = ವಿಶದವಾಗಿ ಬಲ್ಲವರಾದ (ನಮ್ಮ ಆಚಾರ್ಯರು) ಇರುಳ್ = ಅಜ್ಞಾನವು, ಒನ್ರು = ಸ್ವಲ್ಪವೂ, ಇಲಾ-ವಹ್ಯೆ = ಉಳಿಯದೆ ನಾಶವಾಗುವಂತೆ, ಎಂ = ನಮ್ಮ, ಮನಂ = ಮನಸ್ಸು, ತೇರ = ತಿಳಿಗೊಂಡು ಉಜ್ಜೀವನಗೊಳ್ಳುವಂತೆ, ವಿಯಂಬಿನರೇ = ಉಪದೇಶಿಸಿ, ಕರುಣಿಸಿದರಲ್ಲವೇ.

**पुमर्थ स्त्वेक स्सन्निव कुसुमाजाजानिचरणौ**
**प्रपद्यैकीभूतः परमकृपया भक्तरसिकः ।**
**तदादेयोपायः फल मनुभवान्तं त्वपमति-**
**प्रदात्रंहोरूपप्रबलनिगळ श्चेति विशदम् ॥**
**पश्चैतानि विजानन्तो गुरवो मन्मनो यथा ।**
**आज्ञानगन्धरहितं स्यात्प्रसन्नं उपादिशन् ॥** **११**

**ಮೂಲ :** **ತೇರವಿಯಂಬಿನರ್ ಶಿತ್ತು ಮಶಿತ್ತು ಮಿರ್ರೈಯುಮೆನ,**
**ವೇರುಪಡುಂ ವಿಯನ್‌ತತ್ತುವ ಮೂನ್ರುಂ ವಿನ್ಯೈಯುಡಂಬಿಲ್,**
**ಕೂರುಪಡುಂ ಕೊಡುಮೋಹಮುಂ ತಾನಿರೈಯಾಂ ಕುರಿಪ್ಪುಂ**
**ಮಾರನಿನ್ಯೆಂದರುಳಾಲ್ ಮರ್ರೈನೂಲ್ ತಂದ ವಾದಿಯರೇ ॥ 12**

**(ತತ್ವತ್ರಯಾಧಿಕಾರದಪಾಶುರ - 5)**

ಅರ್ಥ :- ಮರ್ರೈ-ನೂಲ್ = ವೇದಶಾಸ್ತ್ರವನ್ನು (ಉಪನಿಷತ್ತುಗಳನ್ನು) ತಂದ = (ತಮಿಳಿನಲ್ಲಿ) ತಂದುಪದೇಶಿಸಿದ, ಆದಿಯರ್ = ಹಿಂದಿನವರು (ಪೂರ್ವಾಚಾರ್ಯರು) ಅರುಳಾಲ್ = ಕರುಣೆಯಿಂದ, ವಿನ್ಯೈ = ಪಾಪದಿಂದ ಆರಂಭವಾದ, ಉಡಂಬಿಲ್ = (ಕರ್ಮಕೃತ) ದೇಹದಲ್ಲಿ, ಕೂರುಪಡುಂ = ದಿನದಿನಕ್ಕೂ ಪ್ರಬಲವಾಗುವ, ಕೊಡು = ಕ್ರೂರವಾದ, ಮೋಹಮುಂ = ಅಜ್ಞಾನವೂ, (ಭ್ರಮವೂ) ತಾರ್= ತಾನು, ಇರೈ-ಆಂ = (ಸ್ವತಂತ್ರ) ಸ್ವಾಮಿಯಾಗಿರುವ, ಕುರಿಪ್ಪುಂ = ನಿರೂಪಣೆಯು, ಮಾರ = ಹೋಗಬೇಕೆಂದು, ನಿನ್ಯೆಂದ್ = ನೆನೆದು (ಸಂಕಲ್ಪಿಸಿ), ಶಿತ್ತುಂ = ಚೇತನ ತತ್ವವೂ, ಅಶಿತ್ತುಂ = ಅಚೇತನತತ್ವವೂ, ಇರೈಯುಂ = ಈಶ್ವರತತ್ವವೂ, ಎನ = ಎನ್ನುವಂತೆ, ವೇರುಪಡುಂ = ಬೇರ್ಪಡುವ, ವಿಯಂ = ವಿಸ್ಮಯಪಡುವಂತಹ, ತತ್ತುವಂ-ಮೂನ್ರುಂ = ಮೂರು ತತ್ವಗಳನ್ನೂ, ತೇರ = (ನಾವು) ತಿಳಿಯುವಂತೆ, ಇಯಂಬಿನರ್ = ಹೇಳಿದರು, (ಉಪದೇಶಿಸಿದರು)

कर्मानुबन्धिनि विलक्षणबन्धदेहे आत्मभ्रमः प्रतिकलं परिवृद्ध उग्रः ।
स्वात्मा स्वतन्त्र धीश्च यथा निवृत्य वर्धेत सन्मति रिहेत्यनुकम्पया ये
आद्या स्त्रयीमकुटबोधनदानदक्षाः तत्वत्रयं चिदचिदीश इति प्रभिन्नम्।
अत्यन्तविस्मयकरं स्वगतस्वभावात् विद्मो यथा
सुविशदं समुपादिशन् नः ॥ १२

ಮೂಲ : ವಾದಿಯರ್ ಮನ್ನುಂ ತರುಕ್ಕಚ್ಚೆರುಕ್ಕಿನ್ಮರೈಕುಲೈಯ,
ಶಾದುಶನಂಗಳಡಂಗ ನಡುಂಗ ತ್ತನಿತ್ತನಿಯೇ,
ಆದಿಯೆನಾವಹೈ ಯಾರಣದೇಶಿಕರ್ ಶಾತ್ತಿನರ್ ನಂ,
ಪೋದಮರುಂ ತಿರುಮಾದುಡನ್ನಿನ್ರ ಪುರಾಣನ್ನೈಯೇ ॥ 13

(ಪರದೇವತಾಪಾರಮಾರ್ಥ್ಯಾದಿಕಾರ)

**ಅರ್ಥ** :- ವಾದಿಯರ್ = ದುರ್ವಾದಿಗಳು, ಮನ್ನ್ = ಬಲವಾದ, ತರುಕ್ಕ = ತರ್ಕದ, ಶೆರುಕ್ಕಿಲ್ - ಗರ್ವದಿಂದ, ಮರೈ = ವೇದಗಳು, ಕುಲೈಯ = ಹೆದರುವಂತೆ, ಶಾದುಶನಂಗಳ್ = ಸಾಧುಜನರು, ಅಡಂಗ = ಪೂರ್ಣವಾಗಿ, ನಡುಂಗ = ನಡುಗುವಂತೆ, ತನಿ-ತನಿಯೇ-ಆದಿ = (ಜಗತ್ತಿಗೆ) ಕಾರಣವಾದ ವಸ್ತು, (ತಮತಮಗೆ ತೋರಿದಂತೆ ಇಂದ್ರ, ರುದ್ರ, ಬ್ರಹ್ಮ, ಆದಿತ್ಯ, ಹೀಗೆ ತೋರಿದವರಲ್ಲಿ ಒಬ್ಬನೇ ಕಾರಣ ಮತ್ತು ಪರದೇವತೆಯೆಂದು) ಎನಾವಹೈ = ಎಂದು (ವಾದಮಾಡಿ) ಹೇಳದ ಹಾಗೆ, ಆರಣ-ದೇಶಿಕರ್ = ವೇದಾಂತಗಳಿಗೇ ಆಚಾರ್ಯರಾದವರು, (ಗುರುವರ್ಯರು) ನಂ = ಪ್ರಸಿದ್ಧವಾದ, ಪೋದು-ಅಮರುಂ = ಕಮಲದಲ್ಲಿ-ನೆಲೆಗೊಂಡಿರುವ, ತಿರು-ಮಾದ್-ಉಡನ್ = ಲಕ್ಷ್ಮೀಯೆಂಬ ತರುಣಿಯ ಸಹಿತನಾಗಿ, ನಿನ್ರ = ಇರುವ, (ಸರ್ವರಿಗೂ ಯಾವಾಗಲೂ, ಪ್ರಾಪ್ಯನೂ, ಶರಣ್ಯನೂ, ಆಗಿನಿಂತಿರುವ) ಪುರಾಣನ್ನೈಯೇ = ಅನಾದಿಯಾಗಿ ''ಪುರಾಣಪುರುಷ''ನೆಂದೇ ಹೇಳಿಸಿಕೊಳ್ಳುವ ಶ್ರೀಮನ್ನಾರಾಯಣನನ್ನೇ, ಶಾತ್ತಿನರ್ = ಘೋಷಿಸಿರುವರು. (ಇವನೇ ಜಗತ್ಕಾರಣನು, ಪರದೇವತೆಯೆನಿಸುವವನು, ಮತ್ತಾರೂ ಇಲ್ಲ, ಉಳಿದುವೆಲ್ಲ ಇವನಿಗೇ ಒಳಪಟ್ಟವು, ಎಂದು ಸಿಂಹನಾದಮಾಡಿ, ಎಲ್ಲರಿಗೂ ತಿಳಿಸಿರುವರು).

दुर्वादिस्थिरतर्कगर्वभरतो भीता त्रयी कृत्स्नशः ।
त्रस्तास्स्यु स्सुजना यथा च जगतः प्रत्येकशः कारणम् ।

न ब्रूयु र्विमुखा स्तथोपनिषदाचार्या जुघोषुः परः
पुष्पावासरमेश एव पुरुषो मूलं पुराणस्त्विति ॥ १३

ಮೂಲ : ನಿನ್ರ ಪುರಾಣನಡಿಯಿಣ್ಣೈಯೇನ್ದುಂ ನೆಡುಂ ಪಯನುಂ,
ಪೊನ್ರುದಲೇ ನಿಲೈಯೆನ್ರಿಡಪ್ಪೊಂಗುಂ ಬವಕ್ಕಡಲುಂ,
ನನ್ರಿದ್ ತೀಯದಿದೆನ್ರ್ ನವಿನ್ರರ್ ನಲ್ಲರುಳಾಲ್,
ವೆನ್ರ್ ಪುಲರ್ಗಳೈ ವೀಡಿನ್ನೈವೇಂಡುಂ ಪೆರುಂಪಯನೇ ॥ 14

(ಮುಮುಕ್ಷುತ್ವಾಧಿಕಾರದಲ್ಲಿರುವಪಾಶುರ)

ಅರ್ಥ :- ನಿನ್ರ = (ಲಕ್ಷ್ಮೀಸಮೇತನಾಗಿ) ಇರುವ, ಪುರಾಣನ್ = ಪುರಾಣ ಪುರುಷನಾದ ಶ್ರೀಮನ್ನಾರಾಯಣನ, ಅಡಿ-ಇಣೈ = ಪಾದಗಳೆರಡನ್ನು, ಏಂದುಂ = ಧರಿಸಿ ಸೇವೆ ಮಾಡುವುದೆಂಬ, ನೆಡುಂ = ಬಹುಕಾಲ ಮುಂದುವರಿಯುವ, ಪಯನುಂ = ಫಲವನ್ನು (ಪುರುಷಾರ್ಥವನ್ನು) ಪೊನ್ರುದಲೇ = ನಾಶವಾಗುವಿಕೆಯೇ, ನಿಲೈ = ಸ್ವಭಾವವಾಗಿದೆ, ಎನ್ರಿಡ = ಎಂದು ಹೇಳುವಂತೆ, ಪೊಂಗುಂ = ಉಕ್ಕೇರಿ ಬರುವ, ಬವ-ಕಡಲುಂ = ಸಂಸಾರವೆಂಬ ಸಮುದ್ರವನ್ನು, ನನ್ರ್-ಇದ್ = ಇದು ಉತ್ತಮವಾದುದು, ತೀಯದ್-ಇದ್ = ಇದು ಪ್ರತಿಕೂಲವಾದುದು, ಎನ್ರ್ = ಎಂದು, ನವಿನ್ರವರ್ = ಉಪದೇಶಮಾಡಿದ ಆಚಾರ್ಯರ, ನಲ್-ಅರುಳಾಲ್ = ಶುದ್ಧವಾದ ದಯೆಯಿಂದ, ಪುಲರ್ಹಳೈ = ಇಂದ್ರಿಯಗಳನ್ನು, ವೆನ್ರ್ = ಜಯಿಸಿ, ಪೆರುಂ-ಪಯನ್ = ಹಿರಿದಾದ ಫಲವೆನಿಸಿದ, ವೀಡಿನ್ನೈ = ಮೋಕ್ಷವನ್ನು, ವೇಂಡುಂ = ಬೇಡುವುದು, (ಇದೇ ಪರಾವರ ತತ್ವ ವಿವೇಕವನ್ನು ಪಡೆದ ಚೇತನ ಬೇಡುವಿಕೆ).

लक्ष्म्याश्लिष्टपुराणपुम्पदयुगोद्वाहैकशश्वत्फलं
ह्येतत्स्यात् अनुकूलं एष तु भवाम्भोधि विनश्यद्गुणः ।
उद्वीचिः प्रतिकूल इत्युपदिशत्सद्देशिकानुग्रहात्
निर्जित्येन्द्रियसंहतिं फल मपेक्ष्यं चैव मुक्तिर्महत् ॥ १४

ಮೂಲ : ವೇಂಡುಂಪೆರುಂಪಯನ್ ವೀಡೆನ್ರರಿಂದ್ ವಿದಿವಹೈಯಾಲ್,
ನೀಂಡುಂ ಕುರುಹಿಯುಂ ನಿರ್ಕುಂ ನಿಲೈಹಳುಕ್ಕೇರ್ಕುಮನ್ಬರ್,
ಮೂಂಡೊನ್ರಿಲ್ ಮೂಲವಿನ್ನೈ ಮಾತ್ತುದಲಿಲ್ ಮುಕುಂದನಡಿ
ಪೂಂಡನ್ರಿ, ಮತ್ತೋರ್ ಪುಹಲೊನ್ರಿಲೈಯೆನ ನಿನ್ರನರೇ ॥ 15

(ಅಧಿಕಾರಿವಿಭಾಗಾಧಿಕಾರಿ)

ಅರ್ಥ :- ವೇಂಡುಂ = ಬೇಡುವಂತಹ, ಪೆರುಂ-ಪಯನ್ = ಮಹತ್ತಾದ ಫಲವು, ವೀಡ್ = ಮೋಕ್ಷವು, ಎನ್ರು = ಎಂದು, ಅರಿಂದ್ = ಅರಿತು, ವಿದಿ = (ದೇವರ ಸಂಕಲ್ಪ ರೂಪವಾದ) ಭಾಗ್ಯದ, ವಹೈಯಾಲ್ = (ಪರಿಪಾಕದ) ಪ್ರಕಾರದಿಂದ, ನೀಂಡುಂ = ನೀಳವಾಗಿಯೂ, ಕುರುಹಿಯಂ = ಕಿರಿದಾಗಿಯೂ, ನಿರ್ಕುಂ = ಇರುವ, ನಿಲೈಹಳುಕ್ಕ್ = ಸ್ಥಿತಿಗಳಿಗೆ (ಉಪಾಯಗಳಿಗೆ), ಏರ್ಕುಂ = ತಕ್ಕುದಾದ ಅಧಿಕಾರವುಳ್ಳ, ಅನ್ಬರ್ = ಭಕ್ತರು (ಮುಮುಕ್ಷುಗಳಿಗೆ), ಒನ್ರಿಲ್ = (ಈ ಎರಡರಲ್ಲಿ) ಯಾವುದಾದರೊಂದುಪಾಯದಲ್ಲಿ ಮೂಂಡು = ತೊಡಗಿದವರಾಗಿ, ಮೂಲ-ವಿನೈ = ಕಾರಣವಾದ ಪಾಪವನ್ನು (ಉಪಾಯ ವಿರೋಧಿಯಾದ ಅಥವಾ ಪ್ರಾಪ್ತಿವಿರೋಧಿಯಾದ ಭಗವತ್ಸಂಕಲ್ಪವನ್ನು) ಮಾತ್ತುದಲಿಲ್ = ನಿವಾರಿಸಿಕೊಳ್ಳುವುದಕ್ಕಾಗಿ, ಮುಕುಂದನ್ = ಶ್ರೀಮನ್ನಾರಾಯಣನ, ಅಡಿ = ಪಾದಗಳನ್ನು, ಪೂಂಡು-ಅನ್ರಿ = ಆಶ್ರಯಿಸದೆ, ಮತ್ತ್ = ಬೇರೆ, ಓರ್ = ಯಾವ ಒಂದು, ಪುಹಲ್ = ಕಾಪಾಡುವ ಉಪಾಯವೂ, ಇಲ್ಲೈ = ಇಲ್ಲವೇ ಇಲ್ಲ, ಎನ = ಎನ್ನುವಂತೆ, ನಿನ್ರಾರ್‌ಹಳ್ = ಇದ್ದರಲ್ಲವೆ ! (ಸಕಿಂಚನನಿಗೆ ಭಕ್ತಿಯೋಗವು ಪರಮಪುರುಷಾರ್ಥ ಸಾಧನವಾಗಿದ್ದರೂ, ಉಪಾಯವಿರೋಧಿಪಾಪವನ್ನು ನಿವಾರಿಸಿಕೊಳ್ಳುವ ಅಂಶದಲ್ಲಿ ಬೇರೆ ನಿರಪೇಕ್ಷೆಯಾದ ಸಾಧನವಿಲ್ಲದಿರುವುದರಿಂದ ಅಕಿಂಚನನಿಗೆ ಪ್ರಾಪ್ತಿವಿರೋಧಿನಿವೃತ್ತಿಗಾಗಿ ಪ್ರಪತ್ತಿಯು ಬೇಕಾಗಿರುವಂತೆ, ಸಕಿಂಚನನಿಗೂ ಉಪಾಯವಿರೋಧಿ ನಿವೃತ್ತಿಗಾಗಿ ಪ್ರಪತ್ತಿ ಬೇಕೇ ಬೇಕೆಂದು ತಾತ್ಪರ್ಯ).

**मोक्षोऽपेक्ष्यमहाफलं त्विति विनिश्चित्यैव भाग्यात्तथा**
**दीर्घाल्पावसरैकसाध्यसुपथावाप्त्यर्हभक्त्याश्रिताः ।**
**तत्रैकं परिगृह्य संसृतिनिदानैनोनिवृत्तौ विना**
**श्रीनाथांघ्रिसमाश्रयं न च पर स्त्राते त्यतिष्ठन्निह ॥** १५

ಮೂಲ : ನಿನ್ರನಿಲೈಕ್ಕುರ ನಿರ್ಕುಂ ಕರುಮಮುಂ ನೇರ್ ಮದಿಯಾಲ್,
ನನ್ರೆನನಾಡಿಯಞಾನಮುಂ ನಲ್ಲುಮುಳ್ಕಣ್ಣುಡೈಯಾರ್,
ಒನ್ರಿಯ ಪತ್ತಿಯು ಮೊನ್ರುಮಿಲಾ ವಿರೈವಾರ್ಕ್ಕರುಳಾಲ್,
ಅನ್ರು, ಪಯನ್‌ತರುಮಾರು ಮರಿಂದವರಂದಣರೇ ॥ 16

(ಉಪಾಯವಿಭಾಗಾಧಿಕಾರ)

ಅರ್ಥ :- ನಿನ್ರ = (ಅವರವರ ವರ್ಣಾಶ್ರಮಗಳಿಗೆ ತಕ್ಕಂತೆ) ಸ್ಥಿರವಾಗಿ ನಿಂತ, ನಿಲೈಕ್ಕ್ = ಸ್ಥಿತಿಗೆ (ನಿಷ್ಠೆಗೆ) ಉರ-ನಿರ್ಕುಂ = ಯೋಗ್ಯವಾಗಿರುವಂತಹ, ಕರುಮಮುಂ =

ಕರ್ಮಯೋಗವೂ, ನೇರ್-ಮತಿಯಾಲ್ = ಸೂಕ್ಷ್ಮವಾದ ಬುದ್ಧಿಯಿಂದ, ನನ್ರು-ಎನ = ಇದು ಬಲು ಒಳ್ಳೆಯದೆಂದು, ನಾಡಿಯ = ಹುಡುಕಿ (ವಿವೇಚಿಸಿ) ಸ್ವೀಕರಿಸುವ, ಜ್ಞಾನಮುಂ = ಜ್ಞಾನಯೋಗವೂ, ನಲ್‌ಹುಂ = ಬಹಳ ಪ್ರೀತಿಸುವ, ಉಳ್-ಕಣ್-ಉಡೈಯಾರ್ = ಒಳನೋಟ (ಆತ್ಮಾವಲೋಕನ) ವುಳ್ಳವರೊಡನೆ, ಒನ್ರಿಯ = ಒಂದಾಗಿಹೋಗುವ, ಪತ್ತಿಯುಂ = ಭಕ್ತಿಯೋಗವೂ, ಇವೆ-ಒನ್ರುಂ ಇಲಾ = (ಮೇಲಿನ-ಮೂರು ವಿಧಗಳಲ್ಲಿ ಯಾವುದೊಂದನ್ನೂ) ಆಚರಿಸಲು ಶಕ್ತಿಯಿಲ್ಲದೆ, ವಿರೈವಾರ್ಕ್ಕೆ = ಪ್ರಾರ್ಥಿಸುವವರಿಗೆ, ಅನ್ರು = ಆಗ (ಕೋರಿದ ಕಾಲದಲ್ಲಿ) ಅರುಳಾಲ್ = ಕೇವಲಪರಮ ದಯೆಯಿಂದ, ಪಯನ್ = ಫಲವನ್ನು, ತರುಂ = ಕೊಡುವ, ಆರುಂ = ಶರಣಾಗತಿಯೆಂಬುಪಾಯವನ್ನು, ಅರಿಂದವರ್ = ತಿಳಿದಿರುವವರು, ಅಂದಣರ್-ಏ = ಬ್ರಾಹ್ಮಣರೇ ಅಲ್ಲವೇ (ವೇದಗಳನ್ನು ಚೆನ್ನಾಗಿ ಬಲ್ಲವರೇ ಅಲ್ಲವೇ).

**स्थेयस्स्थित्यर्हकर्म त्वतिकुशलधिया मार्गितं ज्ञान मात्तम्**
**स्निह्यत्स्वान्तर्दृगङ्गीकरणसमुचिता भक्तिरप्यत्र सन्ति ।**
**एवं कर्माद्यशक्त्या स्वहितकृतिविळम्बाक्षमाणां कृपातः**
**काले तस्मिन्नुपायं विदु रिह फलदं ब्राह्मणा एव नान्ये ॥ १६**

**ಮೂಲ : ಅಂದಣರಂದಿಯರೆಲ್ಲೈಯಿಲ್ ನಿನ್ರವನೈತ್ತುಲಹುಂ ।**
**ನೊಂದವರೇ ಮುದಲಾಹ ನುಡಂಗಿಯನನ್ನಿಯರಾಯ್ ॥**
**ವಂದಡೈಯುಂ ವಹೈವಣ್‌ತಹವೇಂದಿವರುಂದಿಯ, ನಂ ।**
**ಅಂದಮಿಲಾದಿಯೈ ಅನ್ಬರರಿಂದರಿವಿತ್ತನರೇ ॥ 17**

**(ಪ್ರಪತ್ತಿಯೋಗ್ಯಾಧಿಕಾರ)**

ಅರ್ಥ :- ಅಂದಣರ್ = (ವೇದಗಳನ್ನರಿತ) ಬ್ರಾಹ್ಮಣರು, ಅಂದಿಯರ್ = ಕೊನೆಯವರು, ಎಲ್ಲೈ-ಇಲ್-ನಿನ್ರ = ಇವರ ನಡುವೆ ಇರುವ, ನೊಂದವರೇ-ಮುದಲಾಹ = (ಸಂಸಾರದಲ್ಲಿ) ನೊಂದವರೇ ಮೊದಲಾಗಿರುವ, ಅನೈತ್ತ್-ಉಲಹುಂ = ಸರ್ವಜನರೂ, ನುಡಂಗಿ = ಆಕಿಂಚನರಾಗಿ, ಅನನ್ನಿಯರಾಯ್ = ಬೇರೆ ಸಹಾಯಕರಾಗಲೀ ಪ್ರಯೋಜನವಾಗಲೀ, ಇಲ್ಲದವರಾಗಿ, ವಂದ್ = ಬಂದು, ವನ್-ತಹವ್ = ಅತಿಶಯವಾದ ದಯೆಯನ್ನು, ಏಂದಿ = (ತಾನಾಗಿಯೇ ಒದಗಿದ ಪುಣ್ಯದಿಂದ) ಹೊಂದಿ, ವರುಂದಿಯ = ಚೇತನರನ್ನುದ್ಧರಿಸಲು ಪ್ರಯಾಸಪಡುವ, ನಂ = ನಮ್ಮ, ಅಂತಂ-ಇಲ್ = ಅನಂತನಾಗಿಯೂ, ಆದಿಯೈ = ಜಗತ್ತಿಗೇ ಆದಿಕಾರಣನಾಗಿಯೂ, ಆದ ಭಗವಂತನನ್ನು, ಅಡೈಯುಂ = ಶರಣು ಹೋಗುವ, ವಹೈ = ರೀತಿಯನ್ನು, ಅನ್ಬರ್ = ಪ್ರೀತಿಯುಳ್ಳವರು,

(ಗುರು ಮತ್ತು ದೇವರಲ್ಲಿ ಪೂರ್ಣ ಭಕ್ತಿಯುಳ್ಳ ಆಚಾರ್ಯರು) ಅರಿಂದ್ = (ತಾವೂ) ಅರಿತು, ಅರಿವಿತ್ತನರೇ = (ನಮಗೆ) ಉಪದೇಶ ಮಾಡಿದರು.

**अविप्रादान्त्यजातं भुवि सकलजनाः पूर्णशोका अनन्याः**
**आयाता आश्रयेयुः कृतनतिततयः स्यु र्यथेद्धानुकम्पाः ।**
**धृत्वात्मोज्जीवकार्ये स्वय मभियतमानं त्वनन्तं निदानं**
**श्रीमन्नारायणं नो गुरव इह विदन्तश्च भक्ता न्यबोधन् ॥ १७**

**ಮೂಲ : ಅರಿವಿತ್ತನರನ್ಬರ್ ಐಯ್ಯಂಪರ್ಯೆಯುಮುಪಾಯಮಿಲ್ಲಾ ।**
**ತುರ್ರವಿತ್ತುನಿಯಲ್ ತುಣ್ಯೆಯಾಂಪರನ್ಯೆವರಿಕ್ಕುಂವಹ್ಯೆ ॥**
**ಉರವಿತ್ತನ್ಯೆಯಿನ್ರಿಯೊತ್ತಾರೆನ ನಿನ್ರವುಂಬರ್ಯೆ ನಾಂ ।**
**ಪಿರವಿತ್ತುಯರ್ ಶೆಹುಪ್ಪೀರೆನ್ರಿರಕ್ಕುಂ ಪಿಳ್ಯೆಯರವೇ ॥ 18**

**(ಪರಿಕರವಿಭಾಗಾಧಿಕಾರ)**

ಅರ್ಥ :- (ಭಕ್ತಿಯೋಗಾದಿಗಳನ್ನು ಮಾಡುವುದು ಬಲು ಕಷ್ಟವಾದ್ದರಿಂದ ಫಲಾಂಶದಲ್ಲಿ) ಐಯ್ಯಂ = ಸಂದೇಹವನ್ನು, ಪರ್ಯೆಯುಂ = ಸೂಚಿಸುವ (ಉಂಟು ಮಾಡುವ) ಉಪಾಯಂ = ಭಕ್ತ್ಯಾದಿಗಳು, ಇಲ್ಲಾತ್ತುರವಿ = ಇಲ್ಲದಿರುವ ಆಕಿಂಚನತೆಯಿಂದ (ದರಿದ್ರತನದಿಂದ, ಉಂಟಾದ) ತುನಿಯಿಲ್ = ದುಃಖದೆಸೆಯಲ್ಲಿ, ತುಣ್ಯೆ-ಆಂ = ಸಹಾಯವಾಗುವ ಸ್ವಭಾವವುಳ್ಳ, ಪರನ್ಯೆ = (ಸರ್ವೋತ್ಕೃಷ್ಟನಾದ) ಭಗವಂತನನ್ನು, ವರಿಕ್ಕುಂ = (ಉಪಾಯಾಂತರ ಸ್ಥಾನದಲ್ಲಿ) ವರಿಸುವಂತಹ, ವಹ್ಯೆ = ರೀತಿಯನ್ನು, ಉರವ್-ಇತ್ತನ್ಯೆ-ಇನ್ರಿ = (ಸ್ವಾಮಿತ್ವಾದಿ) ಸಂಬಂಧ ಸ್ವಲ್ಪವೂ ಇಲ್ಲದಿದ್ದರೂ, ಒತ್ತಾರ್-ಎನ-ನಿನ್ರ = (ಕರ್ಮವಶಿಗಳಾದ್ದರಿಂದ) ಸದೃಶರು ಎಂದು ಹೇಳುವಂತೆ ನಿಂತ, ಉಂಬರ್ಯೆ = ದೇವತೆಗಳನ್ನು (ಬ್ರಹ್ಮಾದಿಗಳನ್ನು) ನಾಂ = (ಮೋಕ್ಷಾಕಾಂಕ್ಷಿಗಳಾದ) ನಾವು, ಪಿರವಿ-ತುಯರ್ = ಸಂಸಾರ ದುಃಖವನ್ನು, ಶಹುಪ್ಪೀರ್ = ನಿವಾರಿಸಿರಿ, ಎನ್ರ = ಎಂದು, ಇರಕ್ಕುಂ = ಯಾಚಿಸುವ, ಪಿಳ್ಯೆಯ್ಯೆ = ಸಲ್ಲದ ಕೆಲಸದ, ಅರ = (ಸೊಲ್ಲೆ ಇಲ್ಲದಂತೆ) ಹೋಗುವಂತೇ, ಅನ್ಬರ್ = (ನಮ್ಮಲ್ಲಿ) ಬಲು ಪ್ರೀತಿಯುಳ್ಳವರಾದ ಆಚಾರ್ಯರು, ಅರಿವಿತ್ತನರ್ = (ನಮಗೆ) ಉಪದೇಶಿಸಿದರು.

**सन्देहास्पदत स्सुदुष्करतया भक्त्याद्यभावात् फले**
**आकिंचन्यकृतातिदुःखसमये नारायणं श्रीसखम् ।**
**वृत्वोपायतयाथ किंचिदनुबन्धाभाववत्त्वेऽपि तान्**

ब्रह्मादीन् स्वनिभांश्च कर्मवशिनो न प्रार्थयामो यथा ।। १
यूयं संसारदुःखं नो निवारयत भो इति ।
तथा स्माकं प्रीतिमन्तः कृपया समुपादिशन् ।। १८

ಮೂಲ : ಅರವೇಪರಮೆನ್ರಡೈಕ್ಕಲಂವೈತ್ತನರನ್ರುನಮ್ಮೈ ।
ಪೆರವೇಕರುದಿಪೆರುಂತಹವುತ್ತಪಿರಾನಡಿಕ್ಕೀಳ್ ॥
ಉರವೇ ಇವನುಯಿರ್ ಕಾಕ್ಕಿನ್ರವೋರುಯಿರುಣ್ಮೈಯೈ, ನೀ ।
ಮರವೇಲೆನ ನಮ್ಮರೈಮುಡಿಶೂಡಿಯಮನ್ನವರೇ ॥ 19

(ಸಾಂಗಪ್ರಪದನಾಧಿಕಾರ)

**ಅರ್ಥ** :- ನಂ = ನಮ್ಮ, ಮರೈ = ವೇದವೆಂಬ, ಮುಡಿ = ಕಿರೀಟವನ್ನು, ಶೂಡಿಯ = ಧರಿಸಿದ, (ಅಥವಾ ಮರೈ = ವೇದದ, ಮುಡಿ = ತಲೆಯಾದ ಉಪನಿಷತ್ತುಗಳನ್ನು, ಶೂಡಿಯ = ಅಲಂಕರಿಸುವ) ಮನ್ನವರ್ = ರಾಜರಂತಿರುವ, ಆಚಾರ್ಯರು, ಉರವೇ = (ಸ್ವಾಮಿತ್ವಾದಿ) ಸಂಬಂಧದಿಂದ, ಇವನ್-ಉಯಿರ್ = ಈ ಜೀವಾತ್ಮನನ್ನು, ಕಾಕ್ಕಿನ್ರ = ಕಾಪಾಡುವ, ಓರ್ = ಏಕಮಾತ್ರನಾದ, ಉಯಿರ್ = ಪ್ರಾಣನೆಂದು ಕರೆಸಿಕೊಳ್ಳುವ (ಅಂತರ್ಯಾಮಿಯಾಗಿರುವ) ಪರಮಾತ್ಮನ, ಉಣ್ಮೈಯೈ = (ಸಕಲ ಚೇತನರನ್ನೂ ಉಜ್ಜೀವನಗೊಳಿಸುವ ಸಹಜವಾದ ಕಾರುಣ್ಯರೂಪವಾದ) ಸ್ವಭಾವವನ್ನು, ನೀ = ನೀನು, ಮರವೇಲ್ = ಮರೆಯಬೇಡ, ಎನ = ಎಂದು ಉಪದೇಶಿಸಿ, ಅನ್ರ = ಆಗ, (ಮೊದಮೊದಲು) ನಮ್ಮೈ = ನಮ್ಮನ್ನು, ಪೆರವೇ = ಪಡೆಯುವುದಕ್ಕಾಗಿಯೇ (ತನ್ನ ಬಳಿ ಸೇರಿಸಿಕೊಳ್ಳುವುದಕ್ಕಾಗಿಯೇ) ಕರುದಿ = ಸಂಕಲ್ಪಿಸಿ, (ಚೇತನೋದ್ಧಾರಕಾರ್ಯದಲ್ಲಿ ಮೂಡಿ) ಪೆರುಂ = ಹೆಚ್ಚಾದ, ತಹವು = ದಯೆಯನ್ನು, ಉತ್ತ = ಹೊಂದಿರುವ, ಪಿರಾನ್ = (ಕರಣ ಕಳೇಬರಾದಿಗಳನ್ನು ಕೊಟ್ಟು) ಉಪಕರಿಸುವ ಪರಮಾತ್ಮನ, ಅಡಿ-ಕೀಳ್ = ಅಡಿಗಳ ಕೆಳಗೆ, ಪರಂ-ಅರವೇ = (ನಾನು ನಿರ್ಭರ) ಕಾಪಾಡುವ ಭಾರ ನಿನ್ನದೇ, ನನ್ನದಲ್ಲ ಎಂಬಂತೆ, ಅಡೈಕ್ಕಲುಂ = (ನನ್ನನ್ನು) ರಕ್ಷಿಸಬೇಕಾದ ವಸ್ತುವಾಗಿ, ವೈತ್ತನರ್ = ಇಟ್ಟರು, (ಸಮರ್ಪಿಸಿದರು).

वेदोत्तंसावतंसा गुरव इह नृपा न स्स्वसंबन्धतोऽस्य
जीवस्यान्तर्नियन्तु स्सहज मवनतत्वं च मा विस्मर स्स्म ।
इत्यस्मान् संग्रहीतुं प्रथम मुरुदयस्योपकर्तुः परस्य
पुंस स्त्वंघ्रो रधस्तात् भवति भर इति न्यक्षिपन् मां च रक्ष्यम् ।। १९

ಮೂಲ : ಮನ್ನವರ್ ವಿಣ್ಣವರ್ ವಾನೋರಿರೈಯೊನ್ರುಂ ವಾನ್ಕರುತ್ತೋರ್
ಅನ್ನವರ್‌ವೇಳ್ವಿಯನೈತ್ತುಂ ಮುಡಿತ್ತನರನ್ಬುಡೈಯಾರ್ಕ್ಕ್,
ಎನ್ನವರಂತರವೆನ್ರ, ನಮ್ಮತ್ತಿಗಿರಿತ್ತಿರುಮಾಲ್,
ಮುನ್ನಂವರುಂದಿ ಅಡೈಕ್ಕಲಂಕೊಂಡ ನಮ್ಮುಕ್ಕಿಯರೇ ॥ 20

(ಕೃತಕೃತ್ಯಾಧಿಕಾರ)

ಅರ್ಥ = ಅನ್ಬ್-ಉಡೈಯಾರ್ಕ್ಕ = (ತನ್ನಲ್ಲಿ) ಪ್ರೇಮ (ಭಕ್ತಿ)ವುಳ್ಳವರಿಗೆ, ಎನ್ನ-ವರಂ-ತರವೆನ್ರ = (ಮೋಕ್ಷಪರ್ಯಂತವಾದ ಫಲಕೊಟ್ಟಿದ್ದರೂ) ಇನ್ನೂ ಎಂತಹವರನ್ನು ಕೊಡೋಣ ಎಂದು. ನಂ = ನಮ್ಮ, ಅತ್ತಿ-ಗಿರಿ-ತ್ತಿರುಮಾಲ್ = ಹಸ್ತಿಗಿರಿಯ ಶ್ರೀಲೋಲನಾದ ವರದರಾಜನಿಂದ, ಮುನ್ನಂ = ಮೊದಲೇ, ವರುಂದಿ = (ಇವನನ್ನು ಉದ್ಧರಿಸಬೇಕೆಂದು ಸಂಕಲ್ಪಮಾಡಿ) ಬಹಳ ಪ್ರಯಾಸಪಟ್ಟ, ನಂ = ನಮ್ಮ ಮುಕ್ಕಿಯರ್ = ಮುಖ್ಯರಾದವರೂ, ಮನ್ನವರ್ =(ರಾಜರಂತೆ ರಕ್ಷಕರಾದ) ಮುಕ್ತರೂ, ವಿಣ್ಣವರ್ = ನಿತ್ಯರೂ, ವಾನೋರ್ = ನಿತ್ಯಸೂರಿಗಳಿಗೆ, ಇರೈ = ಸ್ವಾಮಿಯಾದ ನಾರಾಯಣನು, ಒನ್ರುಂ = ನಿತ್ಯ ವಾಸಮಾಡುವ, ವಾನ್-ಕರುತ್ತೋರ್ = ಪರಮ ಪದದಲ್ಲೇ ಇರಬೇಕೆಂದು ಮನಸ್ಸುಳ್ಳವರೊಂದಿಗೆ (ಅಥವಾ ಹಂಸರು) ವೇಳ್ವಿ-ಅನೈತ್ತುಂ = ಸರ್ವ ಯಜ್ಞಗಳನ್ನೂ (ಸಂಪೂರ್ಣವಾಗಿ), ಮುಡಿತ್ತನರ್ = ಮುಗಿಸಿರುವರು, (ಪ್ರಪನ್ನರಾದವರು ಕೃತಕೃತ್ಯರಾಗಿರುವುದರಿಂದ ಮತ್ತಾವುದನ್ನೂ ಮಾಡಬೇಕಾಗಿ ಉಳಿಸಿಕೊಂಡಿರುವುದಿಲ್ಲ.)

किं दद्यां भक्तिभाजां वर मिति वदतां हस्त्यगश्रीप्रियेण
प्रागेवाङ्गीकृता ये स्वकृतयतनतो रक्षणीयत्वतो नः ।
मुख्या मुक्ताश्च नित्याः परमपदपति नित्यवासैकचित्ताः
नीकाशा स्तैः प्रपन्नाः कृतसकलमखा स्स्वामिन स्सर्व एव ॥ २०

ಮೂಲ : ಮುಕ್ಕಿಯ ಮಂತಿರಂ ಕಾಟ್ಟಿಯ ಮೂನ್ರಿಲ್ ನಿಲೈಯುಡೈಯಾರ್,
ತಕ್ಕವೈಯನ್ರಿ, ತ್ತಹಾದವೈಯೊನ್ರುಂ ತಮಕ್ಕಿಶೈಯಾರ್,
ಇಕ್ಕರುಮಂಗಳೆಮಕ್ಕುಳವೆನ್ನು ಮಿಲಕ್ಕಣತ್ತಾಲ್,
ಮಿಕ್ಕವುಣರ್ತ್ತಿಯರ್ ಮೇದಿನಿಮೇವಿಯವಿಣ್ಣವರೇ ॥ 21

(ಸ್ವನಿಷ್ಠಾಭಿಜ್ಞಾನಾಧಿಕಾರ)

ಅರ್ಥ :- ಮುಕ್ಕಿಯ = ಮುಖ್ಯವಾದ, ಮಂತಿರಂ = ಮಂತ್ರವು (ಅಷ್ಟಾಕ್ಷರವು)

ಕಾಟ್ಟಿಯ = ತೋರಿಸಿಕೊಟ್ಟಿರುವ, ಮೂನ್ರಿಲ್ = ಮೂರರಲ್ಲಿ (ಸ್ವರೂಪ ಉಪಾಯ-ಪುರುಷಾರ್ಥಗಳಲ್ಲಿ), ನಿಲೈ-ಉಡೈಯಾರ್ = ನಿಷ್ಠೆಯುಳ್ಳವರು, ತಕ್ಕವೈ = ಉಚಿತವಾದುವನ್ನು (ನಿತ್ಯ ನೈಮಿತ್ತಿಕಗಳನ್ನು), ಅನ್ರಿ = ಬಿಟ್ಟು (ಹೊರತು), ತಹಾದವೈ = ಅನುಚಿತವಾದವುಗಳನ್ನು, ನಿಷಿದ್ಧವಾದವುಗಳನ್ನು, ''ಒನ್ರುಂ'' = ಯಾವುದನ್ನೂ, ತಮಕ್ಕ್ = ತಮಗೆ (ಇರಲೆಂದು), ಇಶೈಯಾರ್ = ಇಚ್ಛಿಸರು, ಇ-ಕ್ಕರುಮಂಗಳ್ = (ಪ್ರವೃತ್ತಿ ರೂಪವಾದ) ಇಂತಹ ವ್ಯಾಪಾರಗಳು, ಎಮಕ್ಕ್ = ನಮಗೆ, ಉಳದ್ = ಇವೆ, ಎನ್ರ್ = ಎಂದು, ಇಲಕ್ಕಣತ್ತಾಲ್ = ಲಕ್ಷಣದಿಂದ, ಮಿಕ್ಕ = ಹೆಚ್ಚಾಗಿ, ಉಣರ್ತಿಯರ್ = ಅನುಭವಿಸಿದವರು (ತಿಳಿದವರು) ಮೇದಿನಿ = ಭೂಮಿಯಲ್ಲಿ, ಮೇವಿಯ = ಇವೆಲ್ಲ ಭಗವದ್ವಿಭೂತಿಯೆಂಬ ಪ್ರೀತಿಯಿಂದ, ವಿಣ್ಣವರೇ = ನಿತ್ಯಸೂರಿಗಳೇ ಹೌದು. (ಇಲ್ಲಿದ್ದರೂ ಪರಮ ಪದದಲ್ಲಿರುವಂತೆಯೇ ಇರುವರು. ಮುಕ್ತಿಗಿಂತ ಮಿಗಿಲಾದ ತಮ್ಮ ನಿಷ್ಠೆಯ ಪೂರ್ಣ ಜ್ಞಾನದ ಫಲವುಳ್ಳವರಿಗೆ ಅಲ್ಪವಾದ ವಿಷಯ ಭೋಗದಲ್ಲಿ ಆಸೆಯೂ, ಅದಕ್ಕಾಗಿ ಪ್ರವೃತ್ತಿಯೂ, ಅದು ಸಫಲವಾಗದಿರುವುದರಿಂದಾಗುವ ಭೀತಿಯೂ ಇಲ್ಲದೆ, ಅವರು ನಿರ್ಭಯರಾಗಿಯೂ, ನಿರ್ಭರರಾಗಿಯೂ ಇಹರು.)

**मुख्येन प्रकटीकृते च मनुना मूलेन निष्ठा स्त्रये**
**कैङ्कर्यं तु विनोचितं ह्यनुचितं नेच्छन्ति किंचित् क्वचित् ।**
**जानाना श्च भवन्ति लक्षणत इत्येतानि कर्माणि नः**
**नित्या एव हि सूरयो भगवतः प्रीत्या विभूतौ भुवि ॥ २१**

**ಮೂಲ :** ವಿಣ್ಣವರ್ ವೇಂಡಿ ವಿಲಕ್ಕಿನ್ರ ಮೇವುಮಡಿಮ್ಮೈಯೆಲ್ಲಾಂ ।
ಮಣ್ಣುಲಹತ್ತಿಲ್ ಮಕಿಳ್‌ನ್ದಡೈಹಿನ್ರನರ್‌ವಣ್ದು ವರೈ ॥
ಕಣ್ಣನಡೈಕ್ಕಲಂ ಕೊಳ್ಳಕ್ಕಡನ್ಗಳ್‌ಕಳತ್ತಿಯನಂ ।
ಪಣ್ಣಮರುಂ ತಮಿಳ್‌ವೇದಮರಿಂದಬಗವರ್‌ಹಳೇ ॥ 22

(ಉತ್ತರಕೃತ್ಯಾಧಿಕಾರ)

**ಅರ್ಥ :-** ವಣ್ = ಸುಂದರವಾಗಿರುವ, ತುವರೈ = ದ್ವಾರಕೆಯಲ್ಲಿ (ನಿತ್ಯವಾಸ ಮಾಡುವ) ಕಣ್ಣನ್ = ಶ್ರೀ ಕೃಷ್ಣನು, ಅಡೈಕ್ಕಲಂ ಕೊಳ್ಳ = ಸಂರಕ್ಷಿಸಬೇಕಾದ ವಸ್ತುವಾಗಿ ಸ್ವೀಕರಿಸಲು, ಕಡನ್ಗಳ್ = ಸಾಲಗಳನ್ನು (ದೇವ, ಋಷಿ, ಪಿತೃ ಋಣಗಳು), ಕಳತ್ತಿಯ = ತೀರಿಸಿದ, ನಂ = ನಮ್ಮ, ಪಣ್ = ಮಧುರಗಾನ ವಿಶೇಷಗಳಿಂದ, ಅಮರುಂ = ಕೂಡಿರುವ, ತಮಿಳ್ ವೇದಂ = ತಮಿಳಿನ ವೇದವನ್ನು, ಅರಿಂದ = ಚೆನ್ನಾಗಿ ತಿಳಿದಿರುವ, ಬಗವರ್ಹಳ್ = (ಭಗವತ್ ಶಬ್ದದಿಂದ ಸೂಚಿತವಾದ ಗುಣಗಳುಳ್ಳ) ಪ್ರಪನ್ನರು, ವಿಣ್ಣವರ್ =

ಪರಮಪದವಾಸಿಗಳು (ನಿತ್ಯರು, ಮುಕ್ತರು), ವೇಂಡಿ = ಬೇಡಿಕೊಂಡು, ವಿಲಕ್ಕಿ-ಇನ್ರಿ = ಯಾವ ವಿಘ್ನವೂ ಇಲ್ಲದೆ. ಮೇವುಂ = (ಪ್ರೀತಿಯಿಂದ) ಮಾಡುವ, ಅಡಿಮ್ಮೈ-ಎಲ್ಲಾಂ = ಸೇವೆಗಳೆಲ್ಲವನ್ನೂ, ಮಣ್-ಉಲಹತ್ತಿಲ್ = ಈ ಭೂಮಂಡಲದಲ್ಲೇ (ಇದ್ದುಕೊಂಡು) ಮಹಿಳ್ನ್ದ್ = ಸಂತೋಷವಾಗಿ, ಅಡ್ಯೆಹಿನ್ರನರ್ = ಪಡೆಯುತ್ತಿಹರು.

(ಸ್ವನಿಷ್ಠಾಭಿಜ್ಞರಾಗಿ ಬೆಳಸುವ ಪ್ರಪನ್ನರು ತಮ್ಮ ಪ್ರತ್ಯುತ್ತರಕಾಲದ ಕೃತ್ಯದಲ್ಲೂ ಪೂರ್ಣಾಧಿಕಾರಿಗಳಾಗಿ, ಪರಮಪದದಲ್ಲಿ ನಿತ್ಯಸೂರಿಗಳು ಅತಿಶಯವಾದ ಭಗವತ್ಸೇವಾಗುಣಾನುಭವಾನಂದವನ್ನು ಅತಿಪ್ರೀತಿಯಿಂದ ಹೊಂದುವಂತೆ ಈ ಲೋಕದಲ್ಲೇ ಸದ್ಯಃ ಭಗವನ್ಮುಖೋಲ್ಲಾಸಕರವಾಗಿಯೂ, ನಾನಾ ವಿಧಾನಗಳಿಂದ ಕೂಡಿದ ತಮಿಳು ವೇದಾಂತಗಳಲ್ಲಿ ರಸಿಕರಾಗಿ ಸಕಲ ವಿಧವಾದ ಭಗವತ್ಕೈಂಕರ್ಯಗಳನ್ನೂ, ಅವುಗಳ ಫಲಗಳನ್ನೂ ಖಂಡಿತ ಪಡೆಯುವವರು ಎಂದು ಭಾವ).

**श्रीकृष्णो द्वारकापूरधिपति रभिसंरक्ष्यवस्तुत्वबुध्या**
**मुक्तान् यांश्चाकृतर्णैः त्रिभिरपि मधुरै र्गानभेदैः प्रकॢप्ते ।**
**वेदान्ते द्राविडीये निपुणतमधियो ह्यस्मदीयाः प्रपन्नाः**
**नित्यैः प्रार्थ्या मुदाप्ता अविहति सकलाश्चैव यान्त्यत्र सेवाः ॥ २२**

ಮೂಲ : **ವೇದಮರಿಂದಬಗವರ್ ವಿಯಕ್ಕ ವಿಳಂಗಿಯಶೀರ್**
**ನಾದನ್‌ವಹುತ್ತವಹೈ ಪೆರುನಾಮವನ್ನಲಡಿಯಾರ್ಕ್ಕು,**
**ಆದರ ಮಿಕ್ಕವಡಿಮ್ಮೈಯಿಶೈನ್ದ್ಳಿಯಾಮರೈನೂಲ್,**
**ನೀತಿನಿರುತ್ತನಿಲೈಕುಲೈಯಾವಹೈ ನಿನ್ರನಮೇ ॥ 23**

**(ಪುರುಷಾರ್ಥಕಾಷ್ಠಾಧಿಕಾರ)**

ಅರ್ಥ :- ವೇದಂ-ಅರಿಂದ = (ಅನುಷ್ಠಾನಪರ್ಯಂತವಾಗಿ ವೇದಾಂತ ಸಾರಾರ್ಥವನ್ನು ಅರಿತವರಿಂದ, ಬಗವರ್ = ಭಾಗವತರು (ಪ್ರಪನ್ನರು), ವಿಯಕ್ಕ = ಆಶ್ಚರ್ಯಭರಿತರಾಗುವಂತೆ, ವಿಳಂಗಿಯ = ಪ್ರಕಾಶಪಡಿಸಿದ, ಶೀರ್ = ಕಲ್ಯಾಣಗುಣಗಳುಳ್ಳ, ನಾದನ್ = ನಾಥನಾದ ಭಗವಂತನು, ವಹುತ್ತ = ಸಂಕಲ್ಪಿಸಿದ, ವಹೈ = ಪ್ರಕಾರವನ್ನು (ಭಾಗವತ ಶೇಷತ್ವವನ್ನು) ಪೆರುಂ = ಪಡೆಯದವರಾದ, ನಾಂ = ನಾವು, ಅವನ್ = ಆ ಪರಮಾತ್ಮನ, ನಲ್ = ದೋಷರಹಿತರಾದ, ಅಡಿಯಾರ್ಕ್ = ಭಕ್ತರಿಗೆ, ಆದರಂ-ಮಿಕ್ಕ = ಹೆಚ್ಚು ಆದರದಿಂದ, ಅಡಿಮ್ಮೈ = ಸೇವೆಯನ್ನು, ಇಶೈಂದ್ = ಅಂಗೀಕರಿಸಿ, ಆಳಿಯಾ = ನಾಶವಿಲ್ಲದ, ಮರೈ-ನೂಲ್ = ವೇದಶಾಸ್ತ್ರಗಳ, ನೀತಿ = ನ್ಯಾಯಗಳೊಡನೆ,

ನಿರುತ್ತ = ಸ್ಥಾಪಿತವಾದ, ನಿಲ್ಯೆ = ಸ್ಥಿತಿಯು, ಕುಲ್ಯೆಯಾ = ನಾಶವಾಗದಂತಹ, ವಹ್ಯೆ = ರೀತಿಯಲ್ಲಿ, ನಿನ್ರನಮೇ = ಇರುವೆವು.

यद्वद्भागवता स्त्रयीमकुटिन स्तेस्यु विलक्षा स्तथा ।
नाथेनाश्रित सद्गुणेन विहितां रीतिं त्ववाप्ता वयम् ।
तद्भक्तैकनिषेवणं प्रियतमं स्वीकृत्य चात्यादरात्
निर्णाशागमशास्त्रनीति रविचाल्या स्या तथा स्म स्थिताः ॥ २३

ಮೂಲ : ನಿನ್ರನಮನ್ಬುಡ್ಡೈವಾನೋರ್ ನಿಲ್ಯೆಯಿಲ್ ನಿಲಮಳಂದಾನ್,
ನನ್ರಿದ್ ತೀಯದಿದೆನ್ರ್ ನಡತ್ತಿಯ ನಾನ್ಮರ್ಯೆಯಾಲ್,
ಇನ್ರ್ನಮಕ್ಕಿರವಾದಲಿನ್ ಇಮ್ಮದಿಯಿನ್ನಿಲವೇ,
ಅನ್ರಿಯಡಿಕ್ಕಡಿ ಆರಿರುಳ್ ತೀರ್ಕ್ಕವಡಿಯುಳದೇ ॥ 24

(ಶಾಸ್ತ್ರೀಯನಿಯಮನಾಧಿಕಾರ)

ಅರ್ಥ :- ನಿಲಂ = ಭೂಮಿಯನ್ನು, ಅಳಂದಾನ್ = (ತ್ರಿವಿಕ್ರಮಾವತಾರಮಾಡಿ) ಅಳೆದ ಭಗವಂತನಿಂದ, ಇದ್ = ಇದು, ನನ್ರ್ = ಒಳ್ಳೆಯದು, ಇದ್ = ಇದು, ತೀಯದ್ = ನಿಂದಿತವಾದುದು, ಎನ್ರ್ = ಎಂದು (ಜನರಿಗೆ ಸರಿಯಾದ ಜ್ಞಾನವನ್ನುಂಟುಮಾಡುವುದಕ್ಕಾಗಿಯೇ) ನಡತ್ತಿಯ = ಪ್ರವರ್ತಿಸಲ್ಪಟ್ಟ, ನಾಲ್-ಮರ್ಯೆಯಾಲ್ = ನಾಲ್ಕು ವೇದಗಳಿಂದ, ಅನ್ಬ್-ಉಡ್ಡೈ = ಮಿಗಿಲಾದ ಭಕ್ತಿಯುಳ್ಳ, ವಾನೋರ್ = ಪರಮಪದವಾಸಿಗಳಾದ ನಿತ್ಯ ಸೂರಿಗಳ, ನಿಲ್ಯೆಯಿಲ್ = ಸ್ಥಿತಿಯಲ್ಲಿ (ಪ್ರೀತಿಯ ಹೊನಲಿನಂತಿರುವ, ಪ್ರಯೋಜನವಾದ, ಕೈಂಕರ್ಯದಲ್ಲಿ) ನಿನ್ರನಂ = ನಿಂತವರಾದೆವು. ಇನ್ರ್ = ಈಗ (ಈ ಸಂಸಾರ ದೆಶೆಯಲ್ಲಿ ನಾವು ಕೃತಕೃತ್ಯರಾಗಿದ್ದರೂ ಶಾಸ್ತ್ರಾಧೀನವಾದ ವರ್ಣಾಶ್ರಮಾದಿ ಸಂಬಂಧವಾದ ಪ್ರಾಕೃತ ದೇಹದಲ್ಲಿರುವಾಗ) ನಮಕ್ಕ್ = ನಮಗೆ, ಇರವ್. ಆದಲಿನ್ = ರಾತ್ರಿಯಾಗಿರುವುದರಿಂದ (ಅಜ್ಞಾನಾಂಧಕಾರ ವಿರುವುದರಿಂದ), ಇ-ಮತಿಯಿರ್-ನಿಲವೇ-ಇನ್ರಿ = ಈ (ವೇದವೆಂಬ) ಚಂದ್ರನ ಬೆಳದಿಂಗಳಂತಿರುವ ಶಾಸ್ತ್ರಗಳನ್ನು ಬಿಟ್ಟರೆ, ಅಡಿಕ್ಕಡಿ = ಪ್ರತಿಗಳಿಗೆಯಲ್ಲೂ, ಆರ್ = ಹೆಚ್ಚಿ ಎಲ್ಲೆಡೆಯೂ ಆವರಿಸಿಕೊಳ್ಳುವ, ಇರುಳ್ = ಕತ್ತಲನ್ನು (ಅಜ್ಞಾನವನ್ನು), ತೀರ್ಕ್ = ನಾಶಮಾಡಲು, ಅಡಿ = ಮೂಲಕಾರಣವಾದುದು (ಬೇರೆ ಯಾವುದಾದರೂ), ಉಳದೇ? = ಇರುವುದೇ ?, (ಅಜ್ಞಾನವೆಂಬ ಕತ್ತಲು ಹೋಗಬೇಕಾದರೆ ವೇದವೆಂಬ ಚಂದ್ರನಿಂದ ಬರುವ ಸ್ಮೃತ್ಯಾದಿಗಳೆಂಬ ಬೆಳದಿಂಗಳೇ ಆಗಬೇಕು. ಬೇರೆ ಯಾವುದೂ ನಾಶಮಾಡಲಾರದು. ಶಾಸ್ತ್ರಜ್ಞಾನವು ಅತ್ಯಗತ್ಯವೆಂದು ಭಾವ).

क्षोणी माक्रमता प्रवर्तित चतुर्वेदेन सञ्चासदि-
त्याम्नानादतिभक्तिजुष्टपरमव्योमस्थरीतौ वयम् ।
सुस्था स्त्वद्य निशा हि न स्तदमलां श्रौतीं विना चन्द्रिकां
किं वानुक्षणवर्धमानतिमिरोन्मूले निदानं परम् ॥ २४

ಮೂಲ : ಉಳದಾನವಲ್ವಿನ್ಯೈಕ್ಕುಳ್ಳಂ ವೆರುವಿಯುಲಹಳನ್ದ ।
ವಳರ್‌ತಾಮರೈಯಿಣ್ಯೆವನ್ ಶರಣಾಹವರಿತ್ತವರ್ ತಾಂ ॥
ಕಳೈತಾನೆನವೆಳುಂ ಕನ್ಮಂತುರಪ್ಪರ್ ತುರಂದಿಡಿನುಂ ।
ಇಳೈತಾನಿಲ್ಲೆಶೆಹವೆಂಗಳ್ ಪಿರಾನರುಳ್‌ತೇನೆಳುಮೇ ॥ 25

(ಅಪರಾಧ ಪರಿಹಾರಾಧಿಕಾರ)

ಅರ್ಥ :- ಉಳದಾನ = ಇರುವಂತಹ, ವಲ್ = ಬಲವಾದ, ವಿನ್ಯೆಕ್ಕ್ = (ಪ್ರಾರಬ್ಧವಾದ) ಪಾಪಗಳಿಗಾಗಿ, ಉಳ್ಳಂ = ಮನಸ್ಸಿನಲ್ಲಿ, ವೆರುವಿ = (ಮರುಗಿ) ಬಹಳ ಪರಿತಪಿಸಿ, ಉಲಹ್-ಅಳಂದ = ಭೂಮಿಯೆಲ್ಲವನ್ನೂ ಅಡಿಯಿಂದಳೆದ ಭಗವಂತನ, (ಮೊದಲು ವಾಮನನಾಗಿ ಬಂದು ನಿಗ್ರಹಿಸಿ, ಕೂಡಲೇ ತ್ರಿವಿಕ್ರಮನಾಗಿ ಜಗತ್ತನ್ನೇ ಅನುಗ್ರಹಿಸಿದವನ) ವಳರ್ = ಮೇಲೆಮೇಲೆ ಬೆಳೆಯುತ್ತಿರುವ, ತಾಮರೈ-ಇಣೈ = ಪಾದಕಮಲಗಳೆರಡನ್ನೂ, ವಣ್ = ದೃಢವಾದ, ಶರಣ್-ಆಹ = ರಕ್ಷಕ (ಉಪಾಯ)ವೆಂದು, ವರಿತ್ತವರ್-ತಾಂ = ಆಶ್ರಯಿಸಿದವರೇ (ಪ್ರಪನ್ನರೇ), ಕಳೈ-ತಾರ್-ಎನ = ಬೆಳೆಯುವ ಪೈರನ್ನು ನಾಶಮಾಡುವ ಕಳೆಯಂತೆ (ಭಗವದ್ಗುಣಾನುಭವಕ್ಕೆ ತಡೆಯಾಗಿ ಬರುವ) ಎಳುಂ = ಉಂಟಾಗುವ, ಕನ್ಮಂ = ದುಷ್ಕರ್ಮಗಳನ್ನು, ತುರಪ್ಪರ್ = ತೊರೆದುಬಿಡುವರು, ತುರಂದಿಡಿನುಂ = ತೊರೆದುಬಿಡುವುದರಲ್ಲೂ, ಇಳೈ-ತಾ-ನಿಲ್ಲೈ = ಅಲ್ಪಬುದ್ಧಿತನದ ಅವಿವೇಕದ ಸ್ಥಿತಿಯು, ಶೆಹ = ನಾಶವಾಗುವಂತೆ, (ಬುದ್ಧಿಬಲವಿಲ್ಲದೆ ಕೆಟ್ಟ ಮಾರ್ಗದಲ್ಲಿ ಪ್ರವರ್ತಿಸದಂತೆ) ಎಂಗಳ್ = ನಮ್ಮ, ಪಿರಾ್ = ಉಪಕಾರಮಾಡಿದ ಲಕ್ಷ್ಮೀಕಾಂತನ, ಅರುಳ್ = ದಯೆಯೆಂಬ, ತೇನ್ = ಜೇನು, (ಮಧು) ಎಳುಮೇ = ಮೇಲೆಮೇಲೆ ದೊರಕುವುದು, (ಮಧುಸೇವನೆಯಿಂದ ಬುದ್ಧಿಮಾಂದ್ಯವು ಹೋಗಿ ಸಾತ್ವಿಕಬುದ್ಧಿ ತಿಳಿಗೊಳ್ಳುವುದು, ಸರ್ವಶರಣ್ಯನ ಕರುಣೆ ಹೆಚ್ಚಿ ಕಾಪಾಡುವುದು ಎಂದು ಭಾವ.)

क्रूराघेभ्य स्स्थितेभ्यो मनसि च परिसन्तप्य विक्रान्तभूमेः
श्रीनेतुः पादपद्मे दृढशरणतया संश्रिता स्सन्त्यजन्ति ।

उद्यत्सस्यप्रहाणं तृणमिव दुरघं वर्जने बुद्धिमान्द्यम् ।
न स्यात् संवर्धते नो मधु च बहुकृपारूप मस्योपकर्तुः ॥ २५

ಮೂಲ : ತೇನಾರ್‌ಕಮಲತ್ತಿರುಮಹಳ್‌ನಾದನ್ ತಿಹಳ್‌ನ್ದುರೈಯುಂ ।
ವಾನಾಡುಹಂದವರ್ ವೈಯ್ಯತ್ತಿರುಪ್ಪಿಡಂವನ್‌ತರುಮ ॥
ಕ್ಕಾನಾರಿಮಯಯಮುಂ ಗಂಗೈಯುಂ ಕಾವಿರಿಯುಂ ಕಡಲುಂ ।
ನಾನಾನಗರಮುಂ ನಾಕಮುಂ ಕೂಡಿಯ ನನ್ನಿಲಮೇ ॥ 26

(ಸ್ಥಾನವಿಶೇಷಾಧಿಕಾರ)

ಅರ್ಥ :- ತೇನ್ = ಮಕರಂದರಸವು, ಆರ್ = ಪೂರ್ಣವಾಗಿರುವ, ಕಮಲ = ತಾವರೆಯಲ್ಲಿ ವಾಸಿಸುವ, ತಿರು-ಮಹಳ್ = ಮಹಾಲಕ್ಷ್ಮಿಯ, ನಾದನ್ = ನಾಥನಾದ ಶ್ರೀಮನ್ನಾರಾಯಣನು, ತಿಹಳ್‌ನ್ದು = ಪ್ರಕಾಶಮಾನವಾಗಿ, ಉರೈಯುಂ = ನಿತ್ಯವಾಸಮಾಡುವ, ವಾನ್-ನಾಡ್ = ಪರಮಪದವನ್ನು, ಉಹಂದವರ್ = (ಬೇರೆ ಪ್ರಯೋಜನವನ್ನಪೇಕ್ಷಿಸದೆ) ಪೂರ್ಣಬ್ರಹ್ಮಾನುಭವಾನಂದವನ್ನನುಭವಿಸಲು) ಮನನೆಚ್ಚಿ ಆಸೆಪಡುವವರು (ಪ್ರಪನ್ನರು), ವೈಯತ್ತ್ = ವಿಶಾಲವಾದ ಈ ಲೋಕದಲ್ಲಿ, ಇರುಪ್ಪ್-ಇಡಂ = ವಾಸಮಾಡುವ ಸ್ಥಳವೇ, ವನ್ = ದೃಢವಾದ, ದರುಮ = ಧರ್ಮಪ್ರಚಾರವಾದ, (ಕರ್ಮಾನುಷ್ಠಾನಕ್ಕೆ ಅರ್ಹವಾದ) ಕಾನ್-ಕಾಡುಗಳಿಂದ, ಆರ್ = ಪರಿಪೂರ್ಣವಾದ, ಇಮಯಮುಂ = ಹಿಮವತ್ಪರ್ವತದ ಪುಣ್ಯಸ್ಥಳಗಳೂ ಅದೇ, ಗಂಗೆಯುಂ = ಲೋಕಪಾವನವಾದ ಗಂಗಾತೀರವೂ ಅದೇ, ಕಾವಿರಿಯುಂ = ಕಾವೇರಿ ತೀರವೂ ಅದೇ, ಕಡಲುಂ = ಕಡಲಿನ ತಡಿಯೂ ಅದೇ, ನಾನಾ ನಗರಮುಂ = ವಿವಿಧಪುಣ್ಯಕರವಾದ ದಿವ್ಯ (ಕಾಂಚೀ-ಅಯೋಧ್ಯಾದಿ) ನಗರಗಳೂ ಅವೇ, ನಾಕುಮುಂ = (''ವೈಕುಂಠವಾಸೇಽಪಿ ನ ಮೇಽಭಿಲಾಷಃ'' ಎಂಬಂತೆ) ವೈಕುಂಠವೂ ಅದೇ, ಕೂಡಿಯ = (ಮೇಲೆ ಹೇಳಿದ ಪುಣ್ಯಸ್ಥಳಗಳೆಲ್ಲಾ) ಸೇರಿದ, ನಲ್ = ಅತ್ಯುತ್ತಮವಾದ, ನಿಲಮೇ = ಸ್ಥಳವೇ ಆಗುವುದು, (ಪ್ರಪನ್ನರಾದ ಭಾಗವತೋತ್ತಮರು ವಾಸಿಸುವ ಸ್ಥಳವೇ ಸಕಲ ಪುಣ್ಯಕ್ಷೇತ್ರಗಳೂ ಒಂದೆಡೆ ಸೇರಿರುವಷ್ಟು ಬಹಳ ಪಾನಕರವಾದುದೆಂದು ಭಾವ).

माध्वीपूर्णाब्जवासारमरणरुचिकराप्राकृतावासकामाः
क्षोण्यां कुत्रापि वा स्युः दृढविधिकरणारण्यपूर्णो हिमाद्रिः ।
गङ्गाकूलं कवेरप्रभववरसरित्तीर मम्भोधिरोधः
पूता नानापुर श्चाप्यमरपदमिह श्रेष्ठदेश स्स एव ॥ २६

ಮೂಲ : ನನ್ನಿಲಮಾಮದ್ ನರ್ಪಹಲಾಮದ್ ನನ್ನಿಮಿತ್ತಂ,
ಎನ್ನಲುಮಾಮದ್ ಯಾತಾ ನುಮಾಮಙ್ಗಡಿಯವರ್ಕ್ಕು,
ಮಿನ್ನಿಲೈ ಮೇನಿ ವಿಡುಂ ಪಯಣತ್ತು ವಿಲಕ್ಕಿಲದೋರ್,
ನನ್ನಿಲೈಯಾಂ ನಡುನಾಡಿವಳಿಕ್ಕ್ ನಡೈಪೆರವೇ ॥ 27

(ನಿರ್ಯಾಣಾಧಿಕಾರ)

ಅರ್ಥ :- ವಿಲಕ್ಕ್-ಇಲದ್ = ಪ್ರಾರಂಭವಾಗಿರುವುದು ಮುಗಿಯಲೇಬೇಕೆಂಬ ಕಡ್ಡಾಯವಿಲ್ಲದೆ, ಈ ಸ್ಥೂಲಶರೀರವು ತಡೆಯಾಗಿ ಕಳೆಯುವುದು ಹೊರತು, ಉತ್ತಮದೇಶ, ಕಾಲಾದಿಗಳನ್ನು ಕಾಯದಿರುವ, ಓರ್ = (ಇಂಥದು) ಮತ್ತೊಂದಿಲ್ಲದಂತಿರುವ, ನಲ್ = ಒಳ್ಳೆಯ, ನಿಲೈಯಾನ = ಸ್ವಭಾವವುಳ್ಳ, ನಡು-ನಾಡಿ-ವಳಿಕ್ಕ್ = ನೂರೊಂದು ನಾಡಿಗಳ ನಡುವೆ ಇರುವ ಬ್ರಹ್ಮನಾಡಿಯ (ಸುಷುಮ್ನಾ ನಾಡಿ, ಮೂರ್ಧನ್ಯನಾಡಿ, ಇವು ನಾಮಾಂತರಗಳು) ಮಾರ್ಗಕ್ಕೆ. (ಅಥವಾ ಮಧ್ಯನಾಡಿಯ ಮೂಲಕ ಅರ್ಚಿರಾದಿ ಮಾರ್ಗಕ್ಕೆ) ನಡೈ-ಪೆರವೇ = ಪ್ರಯಾಣ ಮಾಡಲು, ಮಿರ್ = ಮಿಂಚಿನ, ನಿಲೈ = ಸ್ವಭಾವದ, (ಕ್ಷಣದಲ್ಲಿ ನಾಶವಾಗುವ) ಮೇನಿ = ಶರೀರವನ್ನು, ವಿಡುಂ-ಪಯಣತ್ತ್ = ಬಿಡುವುದೆಂಬ ಪ್ರಯಾಣಕ್ಕೆ, ಅದ್ = ಅದು, ಅಡಿಯವರ್ಕು = ಪ್ರಪನ್ನರಿಗೆ, ಅಂಗು = ದೇಶ ಕಾಲ ನಿಮಿತ್ತ ಇವುಗಳಲ್ಲಿ, ಆ ಪ್ರಪನ್ನರು ಹೊರಡುವ ದೇಶವು, ಯಾದಾನುಂ-ಆಂ = ಯಾವುದಾಗಿದ್ದರೂ ಸರಿಯೇ, ಅದ್ = ಅದೇ, ನಲ್-ನಿಲಂ-ಆಂ = ಉತ್ತಮವಾದ ಸ್ಥಳವಾಗುವುದು, ಅದ್ = ಅದೇ, ನಲ್-ಪಹಲ್-ಆಂ = ಶ್ರೇಷ್ಠವಾದ ಕಾಲವಾಗುವುದು, ಅದ್ = ಅದೇ, ನಲ್-ನಿಮಿತ್ತಂ = ಮಂಗಳಕರವಾದ ಶಕುನವಾಗುವುದು, (ಎಂದು) ಎನ್ನಲುಂ-ಆಂ = (ನಿಶ್ಶಂಕೆಯಿಂದ) ಹೇಳುವಂತಾಗುವುದು.

रङ्गाधीशाश्रितानां अनितरशुभकृन्मध्यनाड्यार्चिराद्या
मोक्षावाप्त्यै तटिद्वद्विलयकरतनुत्यागरूपप्रयाणे ।
देशो य स्स्यात् स एवोत्तम इति समयो य स्स एव प्रशस्तः
कीदृग्वा स्यान्निमित्तं तदपि शुभकृदेवेति शक्यं हि वक्तुम् । २७

ಮೂಲ : ನಡೈ ಪೆರವಂಗಿಪ್ಪಹಲೊಳಿನಾಳುತ್ತರಾಯಣಮಾಂಡ್,
ಇಡೈವರುಕಾತ್ತಿ ರವಿಯಿರವಿನ್‌ಪತಿ ಮಿನ್‌ವರುಣನ್,
ಕುಡೈಯುಡೈವಾನವರ್ಕ್ಕೋನ್ ಪಿರಶಾಪತಿಯೆನ್ರಿವರಾಲ್,
ಇಡೈಯಿಡೈಬೋಗಂಗಳೆಯ್ದಿ ಎಳಿಲ್ಪದಮೇರುವರೇ ॥ 28

(ಗತಿಚಿಂತನಾಧಿಕಾರ)

**ಅರ್ಥ** :- ನಡೈ-ಪೆರ = (ಸ್ಥೂಲ ದೇಹವನ್ನು ಬಿಟ್ಟು ಸೂಕ್ಷ್ಮ ಶರೀರದೊಂದಿಗೆ) ಪ್ರಯಾಣಮಾಡುವಾಗ, ಅಂಗಿ = ಅಗ್ನಿ, (ಅರ್ಚಿರ್ದೇವತೆ) ಪಹಲ್ = ಹಗಲು, ಒಳಿ-ನಾಳ್ = ಬೆಳಕನ್ನು ಕೊಡುವ ದಿನಗಳು, (ಶುಕ್ಲಪಕ್ಷ) ಉತ್ತರಾಯಣಂ = ಉತ್ತರಾಯಣವು, ಆಂಡ್ = ವರ್ಷ, ಇಡೈ = ನಡುವೆ, (ಸೂರ್ಯನಿಗಿಂತ ಮೊದಲು) ವರುವ = ಬರುವ, ಕಾತ್ತು = ವಾಯು, ಇ-ರವಿ = ಸೂರ್ಯ, ಇರವಿನ್-ಪತಿ = ರಾತ್ರಿಯ ಒಡೆಯ (ಚಂದ್ರ) ಮಿನ್ = ಮಿಂಚು, ವರುಣನ್ = ವರುಣದೇವನು, ಕುಡೈ-ಉಡೈ = ಛತ್ರಧರನಾದ, ವಾನವರ್-ಕೋರ್ = ದೇವತೆಗಳ ಅಧಿಪತಿ, (ಇಂದ್ರ) ಪಿರಜಾಪತಿ = ಪ್ರಜಾಪತಿ, (ಬ್ರಹ್ಮ) ಎನ್ರು-ಇವರಾಲ್ = ಎಂಬೀ ನಿಯಮಿತರಾದ ದೇವತೆಗಳಿಂದ, ಇಡೈ-ಇಡೈ = ತಮ್ಮ ಎಲ್ಲೆಯ ಪ್ರತಿ ಸ್ಥಳದಲ್ಲೂ, ಬೋಗಂಗಳ್ = (ತಾನಾಗಿ ದೊರಕುವ) ಸುಖಗಳನ್ನು, ಎಯ್ದಿ = ಪಡೆದು, ಎಳಿಲ್-ಶೋಭಿಸುವ, ಪದಂ = ಪರಮಪದವನ್ನು, ಏರುವರೇ = ಹತ್ತಿ ಹೋಗಿ ಸೇರುವರಲ್ಲವೆ ?

**संप्रस्थाने हुतवहदिने पूर्वपक्षायनेऽब्दः**
**वातः पौर्वो रविशशितटित्पाशिन श्छत्रधारी ।**
**देवाधीशो विधि रिति कृतानेभि रासाद्य मध्ये**
**मध्ये भोगान् द्युतिमदधिरोहन्ति मुक्ताः पदं तत् ।।** २८

**ಮೂಲ :** **ಏರಿಯೆಳಿಲ್ಪದಮೆಲ್ಲಾವುಯಿರ್ಕ್ಕುಮಿತಮುಹಕ್ಕುಂ,**
**ನಾರುತುಳಾಯ್‌ಮುಡಿ ನಾದನ್ನೈ ನಣ್ಣಿಯಡಿಮೈಯಿಲ್ ನಂ,**
**ಕೂರು ಕವರ್‌ನ್ದ್ ಗುರುಕ್ಕಳ್ ಕುಳಾಂಗಳ್ ಕುರೈಕಳರ್ಕ್ಕೀಳ್,**
**ಮಾರುದಲಿನ್ರಿ ಮಹಿಳ್‌ನ್ದೆಲುಂ ಬೋಗತ್ತು ಮನ್ನುವಮೇ ॥** 29

(ಪರಿಪೂರ್ಣಬ್ರಹ್ಮಾನುಭವಾಧಿಕಾರ)

ಅರ್ಥ :- ಎಳಿಲ್ = ಪ್ರಜ್ವಲಿಸುವ, ಪದಂ = ಸ್ಥಾನವನ್ನು, (ಪರಮ ಪದವನ್ನು) ಏರಿ = (ಅರ್ಚಿರಾದಿ ಮಾರ್ಗದಿಂದ) ಹತ್ತಿಪಡೆದು, ಎಲ್ಲಾ-ಉಯಿರ್ಕ್ಕುಂ = ಎಲ್ಲಾ ಜೀವಾತ್ಮರಿಗೂ, ಇತಂ = ಹಿತವನ್ನು, ಉಹಕ್ಕುಂ = (ಉಂಟು ಮಾಡುವ) ಹರ್ಷಿಸುವ, ನಾರು - ತುಳಾಯ್-ಮುಡಿ = ಪರಿಮಳಿಸುವ ತುಳಸೀಮಾಲಿಕೆಯನ್ನು ತಲೆಯಲ್ಲಿ ಮುಡಿದಿರುವ, ನಾದನ್ನೈ = ಸ್ವಾಮಿಯಾದ-ಶ್ರೀಮನ್ನಾರಾಯಣನನ್ನು, ನಣ್ಣಿ = ಬಹಳ ಹತ್ತಿರಸೇರಿ, ಅಡಿಮೈಯಿಲ್ = (ನಾವು ಮಾಡುವ) ಕೈಂಕರ್ಯದಲ್ಲಿ, ನಂ = ನಮ್ಮ, ಕೂರು =

ಪಾಲನ್ನು, ಕವರ್‌ನ್ದ್ = ಆಸೆಪಟ್ಟ, (ಈ ಜೀವರಿಗೂ ದಾಯಭಾಗ ಪುರುಷಾರ್ಥ ದೊರಕಬೇಕೆಂದು ಆಸೆಪಟ್ಟ) ಗುರುಕ್ಕಳ್ = ಗುರುಗಳ, ಕುಳಾಂಗಳ್ = (ಸಮೂಹಗಳ) ಗೋಷ್ಠಿಗಳ, ಕುರೈ-(ಕಾಲಂದಿಗೆಗಳ ಧ್ವನಿಗಳಿಂದ) ಹರ್ಷೋದ್ಗಾರ ಮಾಡುವ, ಕಳಲ್ = ಪಾದಗಳ, ಕೀಳ್ = ಕೆಳಗಡೆ, ಮಾರುದಲ್-ಇನ್ರಿ = ಮತ್ತೆ ಹಿಂತಿರುಗಿದ, ಎಳುಂ = ಮೇಲೆ ಮೇಲೆ ಹೆಚ್ಚುವ, ಭೋಗತ್ತ್ = (ಕೈಂಕರ್ಯವೆಂಬ) ಸುಖದಲ್ಲಿ, (ಪರಿಪೂರ್ಣ ಬ್ರಹ್ಮಾನುಭವಾನಂದದಲ್ಲಿ) ಮಹಿಳ್‌ನ್ದ್ = ಬಹಳ ಹರ್ಷಗೊಂಡವರಾಗಿ, ಮನ್ನುವಮೇ = ನೆಲೆಯಾಗಿ ನಿಲ್ಲುವವರಾಗುವೆವು, (ಪ್ರಪನ್ನರಿಗೆ ದೊರಕುವ ಪುರುಷಾರ್ಥವೂ ಇದೇ, ಪೂರ್ಣವಾದ ಆನಂದವೂ ಇದೇ, ಇತರರಿಗೆ ಇದು ಲಭಿಸಲು. ಪರಿಪೂರ್ಣವಾದ ಪರಬ್ರಹ್ಮನ ಆನಂದವೂ ಇದೇ, ಇತರರಿಗೆ ಇದು ಲಭಿಸದು. ಪರಿಪೂರ್ಣವಾದ ಪರಬ್ರಹ್ಮನ ಅನುಭವಾನಂದವನ್ನು ಪಡಲು ಅಧಿಕಾರಿಗಳು ಶರಣಾಗತಿ ಧರ್ಮವನ್ನು ಅನುಷ್ಠಿಸಿದ ಭಾಗವತರೇ ಹೊರತು ಬೇರೆಯವರಲ್ಲವೆಂದು ಭಾಹ)

**अध्यारुह्योज्वलं तत् परमपद मथो सर्वजीवेष्टसिद्ध्या**
**प्रीतं प्राप्योपकण्ठं परिमळतुलसीदाममौळिं स्वनाथम् ।**
**कैङ्कर्येऽशं न आप्त्वा स्वगुरुपरिषदां मञ्जुमञ्जीरशिञ्जत् -**
**पादाब्जाना मधस्तात् सुदृढ मविरहा स्स्याम भोगे प्रहृष्टाः ॥ २९**

ಮೂಲ : ಮನ್ನುಮನ್ನೈತ್ತುರವಾಯ್ ಮರುಳ್ ಮಾತ್ತರಳಾಳಿಯುಮಾಯ್
ತನ್ನಿನ್ನೈವಾಲನ್ನೈತ್ತುಂ ದರಿತ್ತೋಂಗುಂ ತನಿಯಿರೈಯಾಯ್,
ಇನ್ನಮುದತ್ತಮುದಾಲ್ ಇರಂಗುಂ ತಿರುನಾರಣನೇ,
ಮನ್ನಿಯವನ್‌ಶರಣ್ ಮತ್ತೋರ್‌ಪತ್ತಿನ್ರಿ ವರಿಪ್ಪವರ್ಕ್ಕೇ ॥ 30

(ಸಿದ್ಧೋಪಾಯಶೋಧನಾಧಿಕಾರ)

ಅರ್ಥ :- ಮನ್ನುಂ = (ನಿತ್ಯವಾದ) ಸ್ಥಿರವಾದ, ಅನ್ನೈತ್ತ್ = ಸರ್ವವಿಧವಾದ, ಉರವಾಯ್ = ಬಂಧುವಾಗಿಯೂ, ಮರುಳ್ = ಅಜ್ಞಾನವನ್ನು, ಮಾತ್ತ್ = ನಾಶಮಾಡುವ, ಅರುಳ್ = ಕೃಪೆಗೆ, ಆಳಿಯುಂ-ಆಯ್ = ಸಮುದ್ರದಂತಾಗಿಯೂ, ತನ-ನಿನ್ನೈವಾಲ್ = ತನ್ನ ಸಂಕಲ್ಪದಿಂದಲೇ, ಅನ್ನೈತ್ತುಂ = ಎಲ್ಲವನ್ನೂ, ದರಿತ್ತ್ = ಧರಿಸಿ, ಓಂಗುಂ = ಅಭಿವೃದ್ಧಿಯಾಗುವ, ತನಿ = ಅದ್ವಿತೀಯವಾದ, ಇರೈಯಾಯ್ = ಸ್ವಾಮಿಯಾಗಿಯೂ, ಇನ್ = ಭೋಗ್ಯವಾದ, ಅಮುದತ್ತ್ = ಅಮೃತಕ್ಕಿಂತಲೂ, ಅಮುದಾಲ್ = (ಮೇಲಾದ) ಅಮೃತರೂಪಿಣಿಯಾದ ಮಹಾಲಕ್ಷ್ಮಿಯಿಂದ, ಇರಂಗುಂ = ಕೃಪೆಗೈಯ್ಯುವ, ತಿರು-ನಾರಾಣನೇ = ಲಕ್ಷ್ಮೀಸಮೇತನಾದ ನಾರಾಯಣನೇ, (ನಮಗೆ) ಮತ್ತ್ = ಬೇರೆ,

ಓರ್ = ಯಾರೊಬ್ಬರೂ, ಪತ್ತ್ = ರಕ್ಷಕರು, ಇನ್ರಿ = ಇಲ್ಲದೆ, ವರಿಪ್ಪವರ್ಕ್ಕೇ = (ಭಗವಂತನನ್ನೇ) ವರಿಸುವವರಿಗೇನೆ, (ಮೇಲೆಹೇಳಿದ ಶ್ರೀಮನ್ನಾರಾಯಣನು), ಮನ್ನಿಯ = ಶಾಶ್ವತವಾದ, ವನ್ = ಬಲವಾದ, ಶರಣ್ = (ರಕ್ಷಕನಾಗುವನು) ಉಪಾಯವು.

(ಸಕಲವಿಧ ಬಂಧುವೂ, ಅಪಾರ ಕಾರುಣ್ಯನೂ, ಸರ್ವಶಕ್ತನೂ, ಆಗಿದ್ದರೂ ಏನಾದರೊಂದು ವ್ಯಾಜವನ್ನು ಬಯಸಿಯೇ ಉಪಾಯಾಂತರ ಸ್ಥಾನದಲ್ಲಿ ತಾನಿದ್ದು ಮೋಕ್ಷವನ್ನುಕೊಡುವನು, ಆ ವ್ಯಾಜವಾದರೂ ''ನೀನೇ ಶರಣು ನಿನ್ನ ಹೊರತು ಮುತ್ತಾರೂ ಇಲ್ಲ'' ಎಂದು ಕೇಳಿಕೊಳ್ಳುವುದೇ ಆಗುವುದು, ಕ್ರಮುವರಿತು ಅದೇ ಪ್ರಪತ್ತಿಯೆಂದೆನಿಸುವುದು, ಪ್ರಪತ್ತಿಗೈಯ್ಯದವನಿಗೆ ದೇವರು ಮುಕ್ತಿಕೊಡನು, ಎಂದು ಭಾವ).

**नित्यो बन्धु ससमस्त स्त्वमतिविहतिकृत् पूर्णकारुण्यवार्धिः**
**संकल्पेनैव सर्वप्रभु रखिलधरो वर्धमानोऽद्वितीयः ।**
**लक्ष्म्या भोग्यामृतादप्यधिकमधुरयैवानुकम्पी दृढो नः**
**स श्रीनारायणो न त्वितर इति विदामेव नित्योऽस्त्युपायः ॥ ३०**

**ಮೂಲ : ವರಿಕ್ಕಿನ್ರನನ್ ಪರ್ರ ಯಾವರ್ರೈಯೆನ್ರ್, ಮರ್ರೈಯದನಿಲ್,**
**ವಿರಿಕ್ಕಿನ್ರದುಂ ಕುರಿಯೊನ್ರಾಲ್ ವಿನ್ನೈಯರ್ರೈ ಯಾದಲಿನ್ ನಾಂ,**
**ಉರೈಕ್ಕಿನ್ರ ನನ್ನೆರಿ ಓರುಂಪಡಿಹಳಿಲೋರ್‌ನ್ದುಲಹಂ,**
**ದರಿಕ್ಕಿನ್ರ ತಾರಕನಾರ್ ತಹವಾಲ್ ದರಿಕ್ಕಿನ್ರನಮೇ ॥ 31**

**(ಸಾಧ್ಯೋಪಾಯಶೋಧನಾಧಿಕಾರ)**

**ಅರ್ಥ** :- ಪರನ್ = ಸರ್ವೋತ್ತಮನಾದ ಲಕ್ಷ್ಮೀಕಾಂತನು, ಯಾವರ್ರೈ = ಯಾರನ್ನು, ವರಿಕ್ಕಿನ್ರನನ್ = ವರಿಸುವನು, ಎನ್ರ್ = ಎಂದು, ಮರ್ರೈಯದನಿಲ್ = ವೇದದಲ್ಲಿ, ಮಿರಿಕ್ಕಿನ್ರದುಂ = ವಿಸ್ತರಿಸಿದುದೂ (ಸ್ಪಷ್ಟೀಕರಿಸಿ ಹೇಳಲಾಗಿರುವ ಆ ವರಣವು,) ವಿನ್ನೈಯರ್ರೈ = ಪಾಪಮಾಡಿರುವವರನ್ನು (ಅನಾದಿ ಕರ್ಮಪ್ರವಾಹದಿಂದ ನಿಗ್ರಹಕ್ಕೆ ವಿಷಯರಾದವರನ್ನು) ಕುರಿ-ಒನ್ರಾಲ್ = (ಯಾವುದಾದರೂ) ಒಂದು ವ್ಯಾಜದಿಂದ, (ನೆಪವೇಕೆಯೆಂದರೆ, ಎಲ್ಲರಿಗೂ ಮುಕ್ತಿ ಬರಬೇಕಾಗುವುದೆಂದು ಭಾವ) ಆದಲಿಲ್ = ಆದುದರಿಂದ, ನಾಂ = ನಾವು, ಉರೈಕ್ಕಿನ್ರ = (ಶಾಸ್ತ್ರಗಳಲ್ಲಿ) ಹೇಳಲ್ಪಡುವ, ನಲ್-ನೆರಿ = ಒಳ್ಳೆಯ ಮಾರ್ಗವು, (ಭಕ್ತಿಪ್ರಪತ್ತಿ ರೂಪವಾದ ಉಪಾಯಗಳು) ಓರುಂಪಡಿಹಳಿಲ್ = (ನಿರ್ಣಯಮಾಡಬೇಕಾದ) ಪ್ರಕಾರಗಳಲ್ಲಿ, (ಶಾಸ್ತ್ರಗಳಲ್ಲಿ ಹೇಳಿರುವಂತೆ) ಓರ್‌ನ್ದ =

(ಚೆನ್ನಾಗಿ ವಿಮರ್ಶಿಸಿ) ತಿಳಿದುಕೊಂಡು (ಭಕ್ತಿಪ್ರಪತ್ತಿಗಳೇ ವಶೀಕರಣವೆಂದು ಅವುಗಳಿಂದ ವಶೀಕೃತನಾದ ಭಗವಂತನೇ) ಶ್ರೀವಲ್ಲಭನೇ ಸಾಕ್ಷಾತ್ತಾಗಿ ಪ್ರಧಾನವಾದ ಉಪಾಯವೆಂದೂ ಚೆನ್ನಾಗಿ ತಿಳಿದು) ಉಲಹಂ = ಲೋಕಗಳನ್ನು (ಅಂತರ್ಯಾಮಿಯಾಗಿದ್ದುಕೊಂಡು), ದರಿಕ್ಕಿನ್ರ = ಧರಿಸುವ, ತಾರಕನಾರ್ = (ಸಂಸಾರವನ್ನು ದಾಟಿಸುವ) ಉದ್ಧಾರಮಾಡುವ ಭಗವಂತನ, ತಹವಾಲ್ = ಕರುಣೆಯಿಂದ, ದರಿಕ್ಕಿನ್ರನಮ್ = ಧರಿಸಲ್ಪಟ್ಟಿರುವೆವು, (ಉಜ್ಜೀವಿತರಾದೆವು), ಪ್ರಪತ್ತಿಧರ್ಮದಲ್ಲಿ ನೆಲೆಗೊಂಡಿರುವೆವು, (ಪರಮಪುರುಷವರಣವೂ ಸಹ ಪ್ರೀತಿರೂಪವಾದ ಭಕ್ತಿಪ್ರಪತ್ತಿಗಳೆಂಬ ವ್ಯಾಜವಿಶೇಷಗಳ ಅಧೀನವಾಗಿರುವುದರಿಂದ ಸಿದ್ಧೋಪಾಯದ ವಶೀಕರಣದ ಮೂಲಕ ಇವೇ ಮೋಕ್ಷೋಪಾಯಗಳು. ಇವುಗಳೆಲ್ಲವೂ ಪ್ರಪತ್ತ್ಯುಪಾಯವೇ ಸರ್ವಸಾಧಾರಣವಾಗಿಯೂ, ತಪ್ಪದೆ ಪೂರ್ಣ ಫಲ ಕೊಡುವುದೂ ಆಗಿದೆ. ಆದುದರಿಂದಲೇ ಆಚಾರ್ಯರಿಗೂ ಇದರಲ್ಲೇ ಅಭಿರುಚಿ ಎಂಬುದು ಸ್ಪಷ್ಟವಾಗಿವೆ.)

त्रय्यन्ते 'वृणुते य मेव पर' इत्येतत् प्रपञ्चीकृतं
व्याजेनैव च केनचित् तदधिन स्तस्मात् वयं सत्पथम् ।
निर्धार्यासु च रीतिषूदित मिमं विज्ञाय विश्वस्य च ।
धर्तु स्तारयितु र्धृताः करुणायाऽभूम प्रतिष्ठापिताः ॥ ३१

ಮೂಲ : ತಹವಾಲ್ ದರಿಕ್ಕಿನ್ರ ತನ್ನಡಿಯಾರ್‌ಹಳ್ಳೆ ತನ್ತರತ್ತಿಲ್,
ಮಿಹವಾದರಂಶೆಯ್ಯುಂ ಮೆಯ್ಯರುಳ್ ವಿತ್ತರ್ಹ ಮೆಯ್ಯುರೈಯಿರ್ನ್,
ಅಹವಾಯರಿಂದವರ್ ಆರಣನೀತಿ ನೆರಿಕುಲೈದಲ್,
ಉಹವಾರೆನವೆಂಗಳ್ ದೇಶಿಕರುಣ್ಣೈಯುರೈತ್ತನರೇ ॥ 32

(ಪ್ರಭಾವವ್ಯಸ್ಥಾಧಿಕಾರ)

ಅರ್ಥ :- ತಹವಾಲ್ = ದಯೆಯಿಂದ, (ಭಗವಂತನ ಕೃಪೆಯನ್ನವಲಂಬಿಸಿ) ದರಿಕ್ಕಿನ್ರ = ಆತ್ಮಧಾರಣೆ ಮಾಡಿಕೊಂಡಿರುವ, (ಉಪಾಯವನ್ನು ಅನುಷ್ಠಿಸಿದವರ) ತನ್-ಅಡಿಯಾರ್‌ಹಳ್ಳೆ = ತನ್ನ ಆಶ್ರಿತರನ್ನು (ಪ್ರಪನ್ನರನ್ನು) ತನ್-ತರತ್ತಿಲ್ = ತನ್ನ ಸ್ವಭಾವವನ್ನು ಕೊಡುವುದರಲ್ಲಿ, (ಅವರಿಗೆ ತನ್ನ ಸಾಮ್ಯತೆಯನ್ನುಂಟುಮಾಡುವುದರಿಂದ ಎಂದು ಭಾವ). ಮಿಹ = ಹೆಚ್ಚು, ಆದರಂ = ಆದರಣೆಯನ್ನು, ಶೆಯ್ಯುಂ = ಮಾಡುವ, ಮೆಯ್-ಅರುಳ್ = ಅಮೋಘವಾದ ಕರುಣೆಯುಳ್ಳವನಾದ, ವಿತ್ತರ್ಹ = ಆಶ್ಚರ್ಯಕರವಾದ ವ್ಯಾಪಾರವುಳ್ಳ (ಶ್ರೀಕೃಷ್ಣನ), ಮೆಯ್-ಉರೈಯಿನ್ = ಸತ್ಯವಚನವಾದ ಚರಮಶ್ಲೋಕದ

(ಅತಿ ದಯೆಯಿಂದ ಭಗವಂತನು ಉಪದೇಶಿಸಿದ "ಸರ್ವಧರ್ಮಾನ್ .... ಮಾಶುಚಃ" (ಎಂಬುದರ ಅರ್ಥವನ್ನು) ಅಹವಾಯ್-ಅರಿಂದವರ್ = ತಾತ್ಪರ್ಯಸಹಿತ ಅರಿತವರು (ವ್ಯಾಸಾದಿಗಳು), ಆರಣ = ಉಪನಿಷತ್ತಿನ, ನೀತಿ-ನೆರಿ = ನೀತಿಮಾರ್ಗದ, ಕುಲೈದನ್ = ಭಂಗವನ್ನು, ಉಹವಾರ್ = ಅಂಗೀಕರಿಸರು, ಎನ = ಎಂದು, ಎಂಗಳ್ ದೇಶಿಕರ್ = ನಮ್ಮ ಆಚಾರ್ಯರುಗಳು, ಉಣ್ಮೈ = ನಿಜವಾದ ಅರ್ಥವನ್ನು, ಉರೈತ್ತನರ್ = ಉಪದೇಶಿಸಿದರು.

(ಏಕದೇಶಿಗಳಾದ ಕೆಲವರಂತಲ್ಲದೆ, ಸ್ವತಃ ಕಲ್ಪಿಸಿಕೊಂಡಂತೆ ಕಲ್ಪನೆ ಮಾಡದೆ, ಶ್ರೀ ವೇದವ್ಯಾಸರೇ ಮೊದಲಾದವರು ಒಪ್ಪುವಂತೆ ಹೇಳಿದುದನ್ನು ಸ್ಥಿರೀಕರಿಸುವದರಿಂದ, ನಮ್ಮ ಸಂಪ್ರದಾಯವೇ ಪ್ರಾಮಾಣಿಕವಾದುದೆಂಬುದು ಸಾರಾರ್ಥ.)

**कारुण्येनात्तसत्तान् स्वपदपरिचरान् स्वस्वभावप्रदाने**
**आधिक्येनादरं कुर्वत ऋतकरुणस्याद्भुतेहस्य शौरेः ।**
**सत्योक्ते स्सार्थभावप्रविद उपनिषन्नीतिमार्गस्य भङ्गं**
**नैवाङ्गीकुर्वते हीत्युपदिदिशु रिदं देशिकेन्द्रा यथार्थम् ॥ ३२**

ಮೂಲ : ಉಣ್ಮೈಯುರೈಕ್ಕು ಮರೈಹಳಿಲೋಂಗಿಯ ವುತ್ತಮನಾರ್,
ವಣ್ಮೈಯಳಪ್ಪರಿದಾದಲಿಲ್ ವಂದ್ ಕಳಲ್‌ಪಣಿವಾರ್,
ತಣ್ಮೈಕಿಡಕ್ಕತ್ತರಮಳವೆನ್ರ, ವಿಯಪ್ಪಿಲದಾಂ,
ಉಣ್ಮೈಯುರೈತ್ತನರೋರನ್ದವಿರ ವುಯರ್‌ನ್ದವರೇ ॥ 33

(ಪ್ರಭಾವರಕ್ಷಾಧಿಕಾರ)

ಅರ್ಥ :- ಉಣ್ಮೈ = ಇದ್ದದಿದ್ದಹಾಗೆಯೇ (ನಿಜಾಂಶವನ್ನು) ಉರೈಕ್ಕುಂ = ಸತ್ಯವಾಗಿ ಹೇಳುವ, ಮರೈಹಳಿಲ್ = ವೇದಗಳಲ್ಲಿ (ವೇದಾಂತಗಳಲ್ಲಿ), ಓಂಗಿಯ = (ನಿಸ್ಸಮಾಭ್ಯಾದಿಕನಾಗಿ) ಪ್ರತಿಪಾದಿಸಲ್ಪಡುವ, ಉತ್ತಮನಾರ್ = ಪುರುಷೋತ್ತಮನ (ಶ್ರೀಮನ್ನಾರಾಯಣನ) ವಣ್ಮೈ = ವೈಲಕ್ಷಣ್ಯವೂ (ಪ್ರಭಾವವೂ), ಅಳಪ್ಪ್-ಅರಿದ್ = ಅಳೆಯಲಾಗದದು, ಆದಲಿಲ್ = ಆದುದರಿಂದ (ಸಿದ್ಧೋಪಾಯದ ಮಹಿಮೆ ಇಷ್ಟೆಎಂದು ಹೇಳಲಾಗದಿರುವುದರಿಂದ), ವಂದ್ = ಬಂದು (ಅಕಿಂಚನರಾಗಿಯೂ, ಅನನ್ಯಗತಿಕರಾಗಿಯೂ ಬಂದು), ಕಳಲ್-ಪಣಿವಾರ್ = ಪಾದಗಳನ್ನು ಆಶ್ರಯಿಸುವವರ (ಪ್ರಪನ್ನರ), ತಣ್ಮೈ = ಕೀಳುತನವು (ಜಾತ್ಯಾದಿಗಳಿಂದರಬಹುದಾದ ಕೀಳುತನ), ಕಿಡಕ್ಕ = ಇದ್ದರೂ ಸಹ (ಇದರಿಂದ ಅವರಿಗೆ ಪುರುಷಾರ್ಥಹಾನಿಯಿಲ್ಲದಿರುವುದರಿಂದಲೂ, ಪ್ರಭಾವದ ನಿಮಿತ್ತವಾಗಿ ಭಗವಂತನಭಿಮಾನದಲ್ಲಿ ಕೊರತೆಯಿಲ್ಲದಿರುವುದರಿಂದಲೂ,

ಪ್ರಭಾವಕ್ಕೆ ನ್ಯೂನತೆ ಇಲ್ಲವೆಂದು ಭಾವ) ತರಂ = ಪ್ರಭಾವವು, ಅಳವ್-ಎನ್ರ = ಅಳತೆಗೆ ಒಳಪಟ್ಟಿದ್ದು ಎಂಬ, ವಿಯಪ್ಪ್ = ಮಾತು (ಶಬ್ದವು), ಇಲದಾಂ = ಇಲ್ಲದಂತಾಗುವುದು (ಅಪರಿಚ್ಛಿನ್ನವಾದುದು), ಉಣ್ಮೈ = (ಭಾಗವತರ ಪ್ರಭಾವವು ಅಳೆಯಲಾಗದು ಎಂಬ) ಸತ್ಯವಾದುದನ್ನು, ಉಯರ್ನ್ದನರ್ = (ಜ್ಞಾನಾನುಷ್ಠಾನವೈರಾಗ್ಯಗಳಿಂದ) ಅಧಿಕಾರದ ನಮ್ಮ ಆಚಾರ್ಯರುಗಳು, ಓರಂ-ತವಿರ = ಪಕ್ಷಪಾತವಿಲ್ಲದೆ (ದೋಷವುಳ್ಳ ಭಾಗವತರು, ದೋಷವಿಲ್ಲದ ಭಾಗವತರೆಂದಾಗಲೀ, ಈತ ಮಂದಾಧಿಕಾರಿ, ಈತ ಪೂರ್ಣಾಧಿಕಾರಿ ಎಂದಾಗಲೀ ಪಕ್ಷಪಾತವಿಡದೆ ಕೇವಲ ವಾತ್ಸಲ್ಯದಿಂದ) ಉರೈತ್ತನರ್ = ಉಪದೇಶಮಾಡಿ ಕರುಣಿಸಿದರು.

**वेदान्तेषु यथार्थवादिषु परस्योक्तस्य पुंसोऽपरि-**
**च्छेद्यं तन्महिमेत्युपागतवतां पादाश्रितानां सताम् ।**
**नैच्ये सत्यपि मेयताविरहितो भाति प्रभावस्त्विति**
**स्वाचार्या इह पक्षपातरहिता स्तत्वं महान्तोऽब्रुवन् ॥ ३३**

ಮೂಲ : ಉಯರ್ನ್ದನನ್ ಕಾವಲನಲ್ಲಾರ್ಕ್ಕುರಿಮೈ ತುರಂದುಯಿರಾಯ್ ಮಯರ್ನ್ದಮೈ ತೀರ್ನ್ದ್ ಮತ್ತೋರ್ವಳಿಯಿನ್ರಿ, ಯಡೈಕ್ಕಲ ಮಾಯ್, ಪಯನ್ದವನ್ನಾರಣನ್ ಪಾದಂಗಳ್ಶೇರ್ನ್ದ್ ಪಳವಡಿಯಾರ್, ನಯನ್ದಕುತ್ತೇವಲೆಲ್ಲಾಂ ನಾಡು ನರ್ಮನುವೋದಿನಮೇ ॥ **34**

**(ಮೂಲಮಂತ್ರಾಧಿಕಾರಿ)**

**ಅರ್ಥ** :- ಉಯರ್ನ್ದರ್ನ = (ಸರ್ವಜಗತ್ಕಾರಣತ್ವದಿಂದಲೂ) ನಿಸ್ಸಮಾಭ್ಯಧಿಕ ತನದಿಂದಲೂ), ಸರ್ವೋತ್ತಮನಾದ, ಕಾವಲನ್ = ರಕ್ಷಕನಾದ (ಸರ್ವಸಂರಕ್ಷಕನಾದ ನಾರಾಯಣನಿಗಿಂತ) ಭಗವಂತನಿಗಿಂತ, ಅಲ್ಲಾರ್ಕ್ = ಅನ್ಯರಿಗೆ, ಉರಿಮೈ = ಶೇಷನಾಗಿರುವಿಕೆಯನ್ನು, ತುರನ್ದ್ = ಬಿಟ್ಟುಬಿಟ್ಟು (ಶ್ರಿಯಃಪತಿಗೇ ಶೇಷನಾಗಿ ಅನ್ಯರಿಗಲ್ಲವೆಂದಿದ್ದು) (ಇದರಿಂದ ಅಕಾರಾರ್ಥ ಮಕಾರಾರ್ಥಗಳನ್ನು ತಿಳಿಸಿದಂತಾಯಿತು), ಉಯಿರಾಯ್ = ದೇಹೇಂದ್ರಿಯಾದಿಗಳಿಗಿಂತ ವಿಲಕ್ಷಣವಾಗಿ (ಅಣುಪರಿಮಾಣತ್ವ, ಜ್ಞಾನತ್ವ, ಜ್ಞಾನ ಗುಣಕತ್ವಾದಿರೂಪವಾದ ಮಕಾರಾರ್ಥದ ಪರಾಮರ್ಶದಿಂದ ದೇಹೇಂದ್ರಿಯಾದಿಗಳಿಗಿಂತ ಬೇರೆಯವನಾಗೆಂಬ ಮಕಾರಾರ್ಥ ತಿಳಿದಂತಾಯಿತು) ಮಯರ್ನ್ದಮೈ = (ಅಹಂಕಾರಮಮಕಾರಗಳಾದ) ಅಜ್ಞಾನವನ್ನು,

ತೀರ್ನ್ದ = ಹೋಗಲಾಡಿಸಿ, ಮತ್ತ್-ಓರ್-ವಳಿ-ಇನ್ರಿ = ಬೇರೆ ಒಂದು ದಾರಿಯಿಲ್ಲದೆ (ಅತ್ಯಂತ ಪಾರತಂತ್ರ್ಯದಿಂದಲೂ, ಅತ್ಯಂತಾಶಕ್ತಿಯಿಂದಲೂ ಬೇರೊಂದುಪಾಯವಿಲ್ಲದೆ) ಅಡೈಕ್ಕಲಂ-ಆಯ್ = ರಕ್ಷಿಸಲ್ಪಡಬೇಕಾದ ವಸ್ತುವೆಂದು ಸಮರ್ಪಿಸಲ್ಪಟ್ಟು (ನಮಃ ಎಂಬುದರ ಮೂರರ್ಥಗಳನ್ನು ತಿಳಿಸಲಾಯಿತು), ಪಯನ್ದವನ್ = ಜಗತ್ತನ್ನು ಸೃಷ್ಟಿಸಿದ, ನಾರಣ೯ = ನಾರಾಯಣನ, ಪಾದಂಗಳ್ = ಅಡಿಗಳನ್ನು, ಶೇರ್ನ್ದ = ಸೇರಿ (ಉಪಾಯವನ್ನಾಗಿ ಆಶ್ರಯಿಸಿ), ಪಳವಡಿಯಾರ್ = ನಿತ್ಯಸೂರಿಗಳು, ನಯನ್ದ = ಪ್ರೀತಿಯಿಂದ ಮಾಡುವ, ಕುತ್ತೇವಲೆಲ್ಲಾಂ = ಸರ್ವವಿಧವಾದ ಕೈಂಕರ್ಯಗಳೆಲ್ಲವನ್ನೂ, ನಾಡು = ಪ್ರಾರ್ಥಿಸುವ ರೀತಿಯನ್ನು ವಿಶದವಾಗಿ ಪ್ರತಿಪಾದಿಸುವ, ನಲ್-ಮನು = ಉತ್ತಮವಾದ ಮಂತ್ರವನ್ನು, ಓದಿನಮೇ = (ಸದಾಚಾರ್ಯರ ಮುಖದಿಂದ) ಅರ್ಥವತ್ತಾಗಿ ಓದಿ ಅರಿತಿರುವೆವಲ್ಲವೆ ?

(ಶ್ರೀಮನ್ನಾರಾಯಣನಿಗೇ ನಾವು ದಾಸರು, ಇತರರಿಗಲ್ಲ ಎಂಬರಿವಿನಿಂದ ಅಹಂಕಾರಮಮಕಾರಗಳನ್ನು ತೊರೆದವರಾಗಿ ಬೇರೆ ಮಾರ್ಗವಿಲ್ಲದೆ ಭಗವಂತನ ಅಡಿದಾವರೆಗಳೇ ಶರಣು ಎಂದು ಅವನ್ನೇ ಆಶ್ರಯಿಸಿ, ನಿತ್ಯಸೂರಿಗಳ ಸಂಗಡ ಪರಮಪದದಲ್ಲಿ ಸರ್ವವಿಧ ಕೈಂಕರ್ಯಸಾಮ್ರಾಜ್ಯವನ್ನನುಭವಿಸುವರೆಂಬರ್ಥವನ್ನು ಕೊಡುವ ಅತ್ಯುತ್ತಮ ಮಂತ್ರವಾದ ಅಷ್ಟಾಕ್ಷರಿಯನ್ನು ಸದಾಚಾರ್ಯರ ಕೃಪೆಯಿಂದ ಅವರ ಮುಖದಿಂದಲೇ ಅರ್ಥಸಮೇತ ಅರಿತೆವು ಎಂದು ಭಾವ. ಇಲ್ಲಿ ಉಪಾದಿತವಾದ ಅನೇಕಾರ್ಥಗಳಲ್ಲಿ ವಾಕ್ಯತ್ರಯಪಕ್ಷದಲ್ಲೇ ತಮಗೆ ಅಭಿಮತವಾದ ತತ್ವ ಹಿತ ಪುರುಷಾರ್ಥಗಳೆಂಬ ಯೋಜನೆಯ ಸಂಗ್ರಹವಿದು).

**श्रेष्ठात् त्रातुः परेषां परिचरण मिहापास्य लब्धात्मबोधाः**
**धूताहंताभिमाना अनितरगतयो रक्ष्यभूताः प्रपन्नाः ।**
**स्रष्टु र्नारायणस्य स्थिरफलदपदौ नित्यसूर्याप्तसेवाः ।**
**प्रीत्या सर्वा लभन्ते त्विति नु विशदयन्तं मनुं ह्यभ्यसिष्म ॥ ३४**

ಮೂಲ : ಓದುಮಿರಂಡೈ ಯಿಶೈನ್ದ್ ಅರುಳಾಲುದವುಂತಿರುಮಾಲ್,
ಪಾದಮಿರಂಡುಂ ಶರಣೆನಪ್ಪತ್ತಿ ನಂಪಂಗಯತ್ತಾಳ್,
ನಾದನ್ನೈ ನಣ್ಣಿನಲಂ ತಿಹಳ್ ನಾಟ್ಟಲಡಿಮೈಯೆಲ್ಲಾಂ,
ಕೋದಿಲುಣತ್ತಿಯುಡನ್ ಕೊಳ್ಳುಮಾರು ಕುರಿತ್ತನಮೇ ॥ 35

(ದ್ವಯಾಧಿಕಾರ)

ಅರ್ಥ :- ಓದುಂ = (ಕಠವಲ್ಲಿಯಲ್ಲಿ) ಓದಲ್ಪಡುವ, ಇರಂಡೈ = (ಪೂರ್ವಖಂಡ, ಉತ್ತರಖಂಡ) ಎರಡನ್ನೂ, ಇಶೈಂದ್ = ಒಂದಾಗಿ ಕೂಡಿಸಿ, ಅರುಳಾಲ್ = ದಯೆಯಿಂದ, ಉದವುಂ = ಒದಗುವಂತಹ (ಒಂದು ಸಲ ಉಚ್ಚರಿಸಿ ಎಂದು ದಯವಿಟ್ಟು ವಿಧಿಸುವ), ತಿರು-ಮಾಲ್ = ಮಹಾಲಕ್ಷ್ಮಿಯಲ್ಲಿ ವ್ಯಾಮೋಹವುಳ್ಳ ಶ್ರಿಯಃಪತಿಯ, ಪಾದಂ-ಇರಂಡುಂ = ಎರಡಡಿಗಳನ್ನೂ, ಶರಣ್-ಎನ-ಪತ್ತಿ = ಶರಣು ಎಂದು ಆಶ್ರಯಿಸಿ (ಉಪಾಯವೆಂದು ತಿಳಿದು), (ಇದಿಷ್ಟೂ ಪೂರ್ವಖಂಡದರ್ಥ) ನಂ = ನಮ್ಮ, ಪಂಗಯತ್ತಾಳ್ = ಕಮಲವಾಸಿನಿಯಾದ ಲಕ್ಷ್ಮಿಯ, ನಾದನ್ಯೆ = ವಲ್ಲಭನನ್ನು (ನಾರಾಯಣನನ್ನು) ನಣ್ಣಿ = (ದೇಶವಿದೇಶದಲ್ಲಿ) ಸಮೀಪಿಸಿ, ನಲಂ = ಆನಂದವು, ತಿಹಳ್ = ಮೇಲೆಮೇಲೆ ಹೆಚ್ಚುತ್ತಿರುವ, ನಾಟ್ಟಿಲ್ = ನಾಡಿನಲ್ಲಿ (ಪರಮಪದದಲ್ಲಿ) ಅಡಿಮೈಯೆಲ್ಲಾಂ = (ಮಾಡುವ) ಎಲ್ಲಾ ಕೈಂಕರ್ಯಗಳನ್ನೂ, ಕೋದು-ಇಲ್ = ದೋಷವಿಲ್ಲದಂತೆ, (ಸ್ವಾರ್ಥಕರ್ತೃತ್ವಭೋಕ್ತೃತ್ವ ಭ್ರಾಂತಿರೂಪದೋಷರಹಿತವಾದ) ಉಣರ್ತಿ-ಉರ್ದ = ನಿಶ್ಚಯವಾದ ಅನುಭವಸಹಿತ (ಪರಿಪೂರ್ಣ ಬ್ರಹ್ಮಾನುಭದೊಂದಿಗೆ) ಕೊಳ್ಳುಮಾರು = ಮಾಡುವ ರೀತಿಯನ್ನು, ಕುರಿತ್ತನಂ = (ದ್ವಯದಲ್ಲಿರುವ ಪದಗಳಲ್ಲಿ ಅಡಗಿರುವುದನ್ನು ಅನುಸಂಧಾನಮಾಡಲು) ಪಡೆದೆವು (ತಿಳಿದೆವು).

**एकीकृत्य त्वधीतं द्वय मतिकरुणालभ्यलक्ष्मीप्रियाळो:**
**पादावेवा वितारा विति शरण मुपेत्याऽस्मदब्जालयाया: ।**
**नाथं संप्राप्य चानन्दधुभरितपरव्योम्नि कैङ्कर्यपूर्तिं**
**निर्दुष्टां ब्रह्मपूर्णानुभवनसहितां चाप्तिरीतिं ह्यवैम ॥** ३५

**ಮೂಲ : ಕುರಿಪ್ಪುಡನ್ ಮೇವುಂ ದರುಮಂಗಳಿನ್ರಿಯಕ್ಕೋವಲನಾರ್,**
**ವೆರಿತ್ತುಳವಕ್ಕಳಲ್ ಮೆಯ್ಯರಣೆನ್ರ್, ವಿರೈಂದಡ್ಡೈಂದ್,**
**ಪಿರಿತ್ತವಿನ್ಯೆತ್ತಿರಳ್ ಪಿನ್ ತೊಡರಾವಹೈ ಅಪ್ಪೆರಿಯೋರ್,**
**ಮರಿಪ್ಪುಡ್ಡೈ ಮನ್ನರುಳ್ ವಾಶಕತ್ತಾಲ್ ಮರುಳತ್ತನಮೇ ॥** 36

(ಚರಮಶ್ಲೋಕಾಧಿಕಾರ)

ಅರ್ಥ :- ಕುರಿಪ್ಪ್-ಉಡನ್ = ಸಾವಧಾನದಿಂದ, ಮೇವುಂ = ಅನುಷ್ಠಿಸತಕ್ಕ, ದರುಮಂಗಳ್-ಇನ್ರಿ = (ಕರ್ಮ-ಜ್ಞಾನ-ಭಕ್ತಿಯೋಗರೂಪಗಳಾದ) ಉಪಾಯಾಂತರ ಗಳಿಲ್ಲದೆ (ಅಕಿಂಚಿನರಾಗಿರುವವರನ್ನು ಬಿಡದೆ ರಕ್ಷಿಸುವನೆಂದು ಖ್ಯಾತನಾದ),

ಅ-ಕೋವಲನಾರ್ = (''ಪರಿತ್ರಾಣಾಯ ಸಾಧೂನಾಂ ...'' ಎಂದು ಅವತರಿಸಿಬಂದ) ಆ ಗೋಪಾಲವೇಷಧರಿಸಿದ್ದ ಶ್ರೀ ಕೃಷ್ಣನ, ವೆರಿ = ಸುವಾಸನೆಯುಳ್ಳ, ತುಳವ = ತುಲಸಿಯ ಸಹಿತವಾದ, ಕಳಲ್ = ಪಾದಗಳು, ಮೆಯ್ = ಸತ್ಯವಾಗಿ, ಅರಣ್ = ರಕ್ಷಿಸತಕ್ಕವು, ಎನ್ರು = ಎಂದು (ಪ್ರಧಾನವಾದ ಉಪಾಯವೆಂದು), ವಿಶ್ವೆಂದ್ = ನಂಬಿ (ಪೂರ್ಣವಾಗಿ) ಅಡೈಂದ್ = (ಅವನ್ನೇ) ಶರಣುಹೊಂದಿ, ಪಿರಿತ್ತ = ನಮ್ಮಿಂದ ಬಿಡಿಸಲ್ಪಟ್ಟ (ನಾಶಗೊಳಿಸಲ್ಪಟ್ಟ) ವಿನ್ಯೆ-ತಿರಳ್ = ಪಾಪವೆಲ್ಲವನ್ನೂ, ಪಿರ್-ತೊಡರಾವಹೈ = ತಿರುಗಿಯೂ ಬಂದು ಸೇರದಂತೆ (ಮಾಡಿ), ಅ-ಪೆರಿಯೋರ್ = ಆ ಸರ್ವೋತ್ತಮನಾದ ಶ್ರೀ ಕೃಷ್ಣನ, ಮರಿಪ್ಪ-ಉಡೈ = ವಶೀಕರಿಸಿಕೊಳ್ಳುವ ಸಾಮರ್ಥ್ಯವುಳ್ಳ, ಮನ್ = ದೃಢವಾದ, ಅರುಳ್ = (ಭಗವಂತನ) ದಯೆಯ, (ಪ್ರವಾಹದಂತಿರುವ) ವಾಶಕತ್ತಾಲ್ = (''ಮೋಕ್ಷಯಿಷ್ಯಾಮಿ ಮಾ ಶುಚಃ'') ಎಂಬ ಶ್ಲೋಕರೂಪವಾದ ವಾಣಿಯಿಂದ, ಮರುಳ್ = ಅಜ್ಞಾನವೇ, ಅತ್ತನಂ = ಇಲ್ಲದವರಾದೆವು, (ಅಜ್ಞಾನವು ತೊಲಗಿ, ಆದರಿಂದ ಶೋಕವನ್ನು ಬಿಟ್ಟು, ಸಂಶಯವಿಲ್ಲದವರಾಗಿಯೂ, ನಿರ್ಭರರಾಗಿಯೂ, ಸದಾ ಸಂತುಷ್ಟರಾಗಿಯೂ ಆದೆವು ಎಂದು ಭಾವ).

**कर्मानुष्ठेय मेकायनसहित मृते गोपरूपस्य विष्णोः**
**विश्वस्ता रक्षितारौ सुरभिततुलसीयुवपदा वित्युपेत्य ।**
**कृत्स्नं पापं विनष्टं पुनरपि च यथा नानुगच्छेत् परस्य**
**धूताज्ञाना वशीकृत्यतिकुशलकृपापूर्णवाचा ह्यभूम ॥ ३६**

ಮೂಲ : **ಮರುಳತ್ತದೇಶಿಕರ್ ವಾನುಹಪ್ಪಾಲಿನ್ದ ವೈಯಮೆಲ್ಲಾಂ,**
**ಇರುಳತ್ತಿರೈವನಿಣ್ಯೆಯಡಿ ಪೂಣ್ಡವೆಣ್ಣುದಲಾಲ್,**
**ತೆರಳುತ್ತ ಶೆನ್ನೊಳಿಲ್ ಶೆಲ್ವಂ ಪೆರುಹಿಚ್ಚಿರಂದವರ್ ಪಾಲ್,**
**ಅರಳುತ್ತ ಶಿಂದ್ಯೆಯಿನಾಲಳಿಯಾ ವಿಳಕ್ಕೇತ್ತಿನರೇ ॥ 37**

**(ಆಚಾರ್ಯಕೃತ್ಯಾದಿಕಾರ)**

ಅರ್ಥ :- ಮರುಳ್ = ಅಜ್ಞಾನವು, ಅತ್ತ = ಇಲ್ಲದ, ದೇಶಿಕರ್ = ಆಚಾರ್ಯರು (ಶ್ರೀನಾಥಮುನಿ ಮೊದಲಾದವರು), ವಾನ್-ಉಹಪ್ಪಾಲ್ = ಪರಮಪದದಲ್ಲಿ ಆಸೆಯಿಂದ, ಇಂದ = ಈ, ವೈಯ್ಯಮೆಲ್ಲಾಂ = (ಲೀಲಾವಿಭೂತಿಯಲ್ಲಿರುವ) ಲೋಕದ ಚೇತನರೆಲ್ಲಾ, ಇರುಳ್-ಅತ್ತ = ಅಜ್ಞಾನವನ್ನು ತೊರೆದು, ಇರೈಯವನ್ = ಪರಮಶೇಷಿಯಾದ ಶ್ರೀಕಾಂತನ, ಇಣ್ಯೆ-ಅಡಿ = ಅನ್ಯೋನ್ಯ ಸುಂದರವಾದ ಪಾದಗಳನ್ನು,

|| ಶ್ರೀಃ ||

||ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ||

# ಪರಮಪದಸೋಪಾನಂ

ಮೂಲ : ಅಡರ್‌ಪುಳ್ಳರಶಿಲುಮನ್ದಣರ್ ಮಾಟ್ಟಿಲುಮಿನ್ನಮುದ
ಕ್ಕಡರ್‌ಪ್ಪಳ್ಳಿ ತನ್ನಿಲುಂಕಾವಿರಿಯುಳ್ಳಮುಹಂದಪಿರಾನ್
ಇಡೈಪ್ಪಿಳ್ಳೈಯಾಹಿಯುರೈತ್ತದುರೈಕ್ಕುಮೆತಿವರನಾರ್
ಮಡೈಪ್ಪಳ್ಳಿವನ್ದಮಣಮೆಂಗಳ್ ವಾತ್ತೈಯುಳ್‌ಮನ್ನಿಯದೇ ||

ಅರ್ಥ :- ಅಡಲ್ = ಪರಾಕ್ರಮವುಳ್ಳ, ಪುಳ್-ಅರಶಿಲುಂ = ಪಕ್ಷಿರಾಜ (ಗರುಡ)ನಲ್ಲಿಯೂ, ಅಂದಣರ್ = ಬ್ರಾಹ್ಮಣೋತ್ತಮರ, ಮಾಟ್ಟಿಲುಂ = ಸಮೀಪದಲ್ಲೂ, (ಶ್ರೀ ವೈಷ್ಣವರ ಗೋಷ್ಠಿಯಲ್ಲೂ) (ಇನ್-ಅಮುದ-ಕಡಲ್-ಪಳ್ಳಿ-ತನ್ನಿಲುಂ) ಇನ್ = ಭೋಗ್ಯವಾದ, ಅಮುದ = ಅಮೃತವು, (ದೊರಕಿದ) ಕಡಲ್ = ಸಮುದ್ರವೆಂಬ, (ಕ್ಷೀರಸಮುದ್ರವೇ) ಪಳ್ಳಿ-ತನ್ನಿಲುಂ = ಹಾಸಿಗೆಯ ಮೇಲೂ, (ಕಾವಿರಿ-ಉಳ್ಳಂ-ಉಹನ್ದ-ಪಿರಾ್) ಕಾವಿರಿ = ಕಾವೇರೀ ನದಿಯ, ಉಳ್ಳಂ = ನಡುವೆ, ಉಹನ್ದ = ಒಲಿದು ನಿತ್ಯವಾಸ ಮಾಡುವ, ಪಿರಾ್ = ಪರಮೋದಾರನಾದ ಶ್ರೀರಂಗನಾಥನು, ಇಡೈ-ಪಿಳ್ಳೈ-ಆಹಿ = ಶ್ರೀಕೃಷ್ಣನರೂಪದಿಂದವತರಿಸಿ, ಉರೈತ್ತದ್ = ಉಪದೇಶಿಸಿದ ಗೀತೆಯನ್ನು, ಉರೈಕ್ಕುಂ = ವ್ಯಾಖ್ಯಾನಮಾಡಿದ, ಯತಿ-ವರನಾರ್ = ಯತಿಶ್ರೇಷ್ಠರಾದ ಶ್ರೀರಾಮಾನುಜಾಚಾರ್ಯರ, ಮಡೈ-ಪಳ್ಳಿ -ವಂದಮಣಂ = (ಅಡಿಗೆಯ ಕೈಂಕರ್ಯವನ್ನು ಮಾಡುತ್ತಿದ್ದ) ಕಿಡಾಂಬಿ ಆಚ್ಚಾ್ ಎಂಬುವರ ವಂಶದಲ್ಲಿ ನಡುವೆನಿಂತು ಹೋಗದೆ ಕ್ರಮವಾಗಿ ಲಬ್ಧವಾದ ಸಂಪ್ರದಾಯ ಪರಿಮಳವು, (ಶ್ರೀ ಭಾಷ್ಯಕಾರರು ಕಿಡಾಂಬಿ ಆಚ್ಚಾನ್ರವರಿಗೆ ಉಪದೇಶಿಸಿದುದು ಅಪ್ಪುಳ್ಳಾರ್‌ರವರಿಗೆ ಲಭಿಸಿದ ಸತ್ಸಂಪ್ರದಾಯ ಸಿದ್ಧವಾದ ರಹಸ್ಯಾರ್ಥ ವಿಶೇಷಗಳೆಂದರ್ಥ), ಎಂಗಳ್ = ನಮ್ಮ, (ಅವರ ಶಿಷ್ಯವರ್ಗದಲ್ಲಿ ಕ್ರಮವಾಗಿ ಬಂದವನಾದ ನನ್ನ) ವಾತ್ತೈಯುಳ್ = ಪ್ರಬಂಧಗಳಲ್ಲಿ, ಮನ್ನಿಯದೇ = ಸ್ಥಿರವಾಗಿರುವುದಲ್ಲವೇ

पक्षीशेऽत्यन्तवीरे द्विजवरसमितौ भोग्यपीयूषवार्धौ
तल्पीभूते वदान्यः प्रमुदित उदित स्सह्यकान्यान्तरीपे ।
गोपाल स्सन् स्वगीतां विवरितु मिह तां लक्ष्मणार्यात्मना यः
तस्यायं सौदगन्धः किल फणितिषु न स्सुस्थिर स्संप्रवाति ॥ १

ಮೂಲ : ಕಳ್ಳಮನತ್ತುರ್ದ್ದಕಣ್ಡು ಮುಯನ್ರಕಡುವಿನ್ನೈಯಾಲ್,
ನಳ್ಳಿರುಳಾಳಿಯಿಲ್ ನರ್ಚುವೈಯ್ಯೆನ್ದೆನನಾಡಿಯವ್ವೋರ್,
ಅಳ್ಳಲಿಲ್‌ನಾಳುಂ ವಿಳುನ್ದಳ್‌ಯಾವಹೈಯಾರಣನೂಲ್,
ವಳ್ಳಲ್‌ವಳಂಗಿಯ ವಾನ್ಪಡಿಯಾನವಯಿದುವೇ ॥ 2

ಅರ್ಥ :- ಕಳ್ಳಂ = ಅಹಂಕಾರ, ಮಮಕಾರಗಳಿಂದ ಕೂಡಿ, ಮನತ್ತು-ಉರ್ದ್ದ = ಮನಸ್ಸಿನಿಂದ, ಕಂಡು = (ತತ್ವಗಳನ್ನು ವಿಪರೀತವಾಗಿ) ಅರಿತು, ಮುಯನ್ರ = ಆರಂಭಿಸಲ್ಪಟ್ಟ, ಕಡು-ವಿನ್ನೈಯಾಲ್ = ಉಗ್ರವಾದ ಪಾಪಗಳಿಂದ, ನಲ್-ಇರುಳ್ -ಆಳಿಯಿಲ್ = ಗಾಢವಾದ ಅಜ್ಞಾನವೆಂಬ ಕಗ್ಗತ್ತಲೆಯ ಚಕ್ರದಲ್ಲಿ, ಐಂದುಂ = ಶಬ್ದಾದಿ ವಿಷಯಗಳೈದೂ (ಅತ್ಯಲ್ಪ ಸಾರಗಳಾಗಿದ್ದರೂ) ನಲ್-ಶುವೈ-ಎನ = (ಆತ್ಮನಿಗೆ ಉಪಭೋಗ್ಯವಾದ) ಒಳ್ಳೆಯ ರಸಗಳೆಂದು ಭ್ರಮಿಸಿ, ನಾಡಿಯದ್ = ಹುಡುಕಲ್ಪಡುವ, ಓರ್-ಅಳ್ಳಲಿಲ್ = (ಶಬ್ದಾದಿ ವಿಷಯಗಳೆಂಬ) ಸರಿಸಾಟಿಯೆನಿಸದ ಕೆಸರಿನ ದೊಡ್ಡ ಹಳ್ಳದಲ್ಲಿ, ನಾಳುಂ = ಯಾವಾಗಲೂ, ವಿಳುಂದ್ = ಬಿದ್ದು, ಅಳಿಯಾ = ನಾಶವಾಗದ, ವಹೈ = ರೀತಿಯಲ್ಲಿ, (ಭಗವದ್ಗುಣಾನುಭವವೇ ಜೀವಾತ್ಮನಿಗೆ ಸತ್ತಾಪಾದಕವಾದುದರಿಂದ ಶಬ್ದಾದ್ಯನುಭವವು ಆತ್ಮನಿಗೆ ನಾಶಕರವೆಂದು ಭಾವ) ಆರಣನೂಲ್ = ಉಪನಿಷತ್ತುಗಳಿಂದಲೂ, ವಳ್ಳಲ್ = ಉದಾರವಾಗಿ (ಅಥವಾ ವಳ್ಳಲ್ = ಪರಮೋದಾರನಾದ ಶ್ರೀ ಕೃಷ್ಣನಿಂದಲೂ) ವಳಂಗಿಯ = ಉಪಕಾರ ಮಾಡಲ್ಪಟ್ಟ (ಹೇಳಲ್ಪಟ್ಟ) ('ತೇಽರ್ಚಿಷಮಭಿಸಂಭವತಿ ..... ಪಕ್ಷಂ'' ಎಂದೂ, 'ಅಗ್ನಿರ್ಜ್ಯೋತಿರಹಶ್ಶುಕ್ಲಃ ....ಜನಾಃ ।।'' ಎಂದೂ ಎಂದರ್ಥ) ನಾನ್ = ಪರಮಪದದ ಪಡಿಯಾನ = ಸೋಪಾನದ, ವಳಿ = ಮಾರ್ಗವು, ಇದುವೇ = ಇದೇನೆ. (ಈ ಪ್ರಬಂಧದಲ್ಲಿ ಹೇಳಿರುವ ವಿವೇಕಾದಿ ನವಸೋಪಾನಗಳಿಂದ ಭೂಷಿತವಾದ ಮಾರ್ಗವೇ ಉಪನಿಷತ್ತುಗಳಿಂದಲೂ, ಅವುಗಳಿಂದ ಪ್ರತಿಪಾದ್ಯಮಾನನಾದ ಶ್ರೀ ಕೃಷ್ಣನಿಂದಲೂ ಸ್ಪಷ್ಟವಾಗಿ ಹೇಳಲ್ಪಟ್ಟ ಅರ್ಚಿರಾದಿ ಮಾರ್ಗವು ಎಂದು ತಾತ್ಪರ್ಯ).

प्रारब्धै दुरितै विलोक्य मनसा चोरेण दुर्दारुणै:
गाढाज्ञानतमिस्रचक्रवशग श्शब्दादयो भोगदा: ।
इत्येवासमपङ्कगर्तपतितो न स्यात्तथैषा किल
प्रोक्त दिव्यपदाधिरोहणसृति: वेदावतंसोक्तिभि: ॥ २

ಮೂಲ : ಅರುವುರುವಾನವೈಯನ್ನೆತ್ತುಮರಿವಾರೇಲುಂ
ಅರುಂಕಲೈಹಳ್ ಕತ್ತುರೈಕ್ಕವಲ್ಲಾರೇಲುಂ

ದರುಮವಳಿಯಳಿಯಾಮಲ್‌ಕಾಪ್ಪಾರೇಲುಂ
ತನಿಮರ್ರೈಯಿನ್ ತಾತ್‌ಪರಿಯಂತರುವಾರೇಲುಂ
ಇರುವಿನ್ನೈಯಿನೊಳುಕ್ಕತ್ತಾಲ್ ಏವಲೋರಾದು
ಇಂಗೇನಾಂಶಿರೈಯಿರುಂದ ಈನಂ ತೀರ್ಕ್ಕುಂ
ತಿರುಮಗಳಾರ್ ಪಿರಿಯಾದ ದೇವನ್ ತಿಣ್ಣಂ
ತೇರಾದಾರ್ ತಿಣ್‌ಪಡಿಯಿಲೇರಾದಾರೇ ॥ 3

ಅರ್ಥ :- ಅರು-ಉರು-ಆನವೈ = ಸೂಕ್ಷ್ಮವೂ, ಸ್ಥೂಲವೂ, ಆದ ವಿಷಯಗಳು, (ಸಮಸ್ತ ಶಾಸ್ತ್ರತಾತ್ಪರ್ಯಾರ್ಥಗಳು) ಅನ್ನೈತ್ತುಂ = ಎಲ್ಲವನ್ನೂ, ಅರಿವಾರ್-ಏಲುಂ = ಅರಿತವಳಾಗಿದ್ದರೂ, ಅರುಂ = ಅತಿ ಸೂಕ್ಷ್ಮವಾಗಿ (ಅವಶ್ಯ ತಿಳಿಯಬೇಕಾದ) ಕಲೈಹಳ್ = ವೇದಶಾಸ್ತ್ರಾದಿ 64 ವಿದ್ಯೆಗಳನ್ನೂ, ಕತ್ತು = ಅಭ್ಯಾಸಮಾಡಿ, ಉರೈಕ್ಕ = ಆಶ್ರಿತರಿಗೆ ಉಪದೇಶಿಸಲು, ವಲ್ಲಾರ್-ಏಲುಂ = ಬಲ್ಲವರಾಗಿದ್ದರೂ, ದರುಮ-ವಳಿ = ಶ್ರುತಿಸ್ಮೃತಿಗಳಲ್ಲಿ ಹೇಳಿರುವ ನಿತ್ಯನೈಮಿತಿಕಾದಿ ಕರ್ಮಮಾರ್ಗವನ್ನು, ತನಿ-ಮರ್ರೈಯಿನ್ = ವೇದಾಂತಗಳ, ತಾತ್‌ಪರಿಯರಿ = ತಾತ್ಪರ್ಯಾರ್ಥಗಳನ್ನು, ತರುವಾರ್-ಏಲುಂ = ಆಶ್ರಿತರಿಗೆ ಉಪದೇಶಮಾಡುವವರಾಗಿದ್ದರೂ, ಅಳಯಾಮಲ್ = ಸಂಪ್ರದಾಯ ವಿಚ್ಛೇದವಿಲ್ಲದಂತೆ, ಕಾಪ್ಪಾರ್-ಏಲುಂ = (ತಾವೂ ಅನುಷ್ಠಿಸಿ ಆಶ್ರಿತರಿಂದಲೂ ಅನುಷ್ಠಾನಮಾಡಿಸಿ ಕಾಪಾಡಿಕೊಂಡು ಬರುವವರಾದರೂ) (ಇರು-ವಿನ್ನೈಯಿನ್-ಒಳುಕ್ಕತ್ತಾಲ್-ಏವಲ್-ಓರಾದು) = ಇರು-ವಿನ್ನೈಯಿನ್ = (ಅನಾದಿಪುಣ್ಯರೂಪವಾದ) ಎರಡು ವಿಧಪಾಪಕರ್ಮಗಳ, ಒಳುಕ್ಕತ್ತಾಲ್ = ಪ್ರವಾಹದಿಂದ, ಏವಲ್ = (ಮಾಡಬೇಕೆಂದು ಆಸೆಪಡದೆ) (ಇಂಗೇ-ನಾಂ-ಶಿರೈ-ಇರುಂದ-ಈನಂ-ತೀರ್ಕ್ಕುಂ =) ಇಂಗೇ = ಈ ಸಂಸಾರದಲ್ಲಿ, ನಾಂ = ನಾವು, ಶಿರೈ-ಸೆರೆಯಲ್ಲಿ (ಬದ್ಧರಾಗಿ) ಇರುಂದ = ಇದ್ದ, ಈನಂ = ಹೀನತೆಯನ್ನು, ತೀರ್ಕ್ಕುಂ = ನಿವಾರಿಸುವ, (ನಿತ್ಯಸಂಸಾರಿಗಳನ್ನು ನಿತ್ಯಸೂರಿ ಪದವಿಯಲ್ಲಿ ಇರಿಸುವ) ತಿರುಮಗಳಾರ್-ಪಿರಿಯಾದ-ದೇವನ್ = ಮಹಾಲಕ್ಷ್ಮಿಯನ್ನೆಂದಿಗೂ ಅಗಲಿರದ ಶ್ರೀಮನ್ನಾರಾಯಣನ, ತಿಣ್ಣಂ = (ನಿರುಪಾಧಿಕವಾದ ಸರ್ವೇಶ್ವರತ್ವರೂಪ) ದೃಢತೆಯನ್ನು, ತೇರಾದಾರ್ = ನಿರ್ಧರಿಸಿಕೊಳ್ಳದವರು (ನಂಬದವರು), ತಿಣ್-ಪಡಿಯಿಲ್ = ದೃಢವಾದ ಪರಮಪದಸೋಪಾನದಲ್ಲಿ, ಏರಾದಾರೇ = ಹತ್ತಲಾರರು, (ಅದಕ್ಕೆ ಬಹಿರ್ಭೂತರಂತಹವರೆಂದರ್ಥ). (ಇದು ವಿವೇಕಪರ್ವವು, ಸರ್ವಶರಣ್ಯನಾದ ಶ್ರಿಯಃಪತಿಯ ಸರ್ವೇಶ್ವರತ್ವವನ್ನು ಸಕಲ ಶಾಸ್ತ್ರ ನಿಪುಣನಾಗಿದ್ದರೂ, ನಂಬದೆ ಹೋದರೆ ಅವನು ಮೋಕ್ಷಾಧಿಕಾರಿಯಲ್ಲ, ವಿವೇಕ ಹೀನನೆಂದರ್ಥ).

शास्त्रार्थान् स्थूलसूक्ष्मान् विदु रपि च कला स्ता श्च सर्वा विबोद्धुम्
दक्षा धर्माध्वरक्षाचरणपटुधियोऽप्यागमान्तार्थदाश्च ।
पापद्वन्द्वौघमुक्ता भगवदभिमतेप्साविहीना यदि स्यु:
अत्रत्यास्मद्भवस्थित्यभिहतिनिपुणस्येह नारायणस्य ।। १

सदैव लक्ष्मीसहितस्य जात्वपि श्रियाविनानास्थितदैवतस्य ।
सर्वेशतायां दृढतानभिज्ञाः सोपानमार्गा च्च दृढात् बहिष्ठाः ।। ३

ಮೂಲ : ಮರುತ್ತಾರ್ ತಿರುವುರ್ಡ ಮಾರ್ಬಿಲ್‌ದರಿತ್ತರ್ವ ವಾಶಕತ್ತೈ
ಮರುತ್ತಾರ್‌ಮಯಕ್ಕಮುಂ ಮತ್ತದನಾಲ್‌ವನ್ದಮಾನರಹುಂ
ನಿರುತ್ತಾರ್ ಬವತ್ತಿಲ್ ನೆಡುನಾಳುಳನ್ರಮೈ ಕಂಡದನಾಲ್
ವೆರುತ್ತಾರಣನೆರಿಯೇ ವೆಳ್ಕಿಹಿಯೋಡ ವಿರೈವರ್‌ಹಳೇ ॥ 4

ಅರ್ಥ :- ವಕ್ಷಸ್ಥಳದಲ್ಲಿ, ತಿರು-ಉರ್ಡ = ಮಹಾಲಕ್ಷ್ಮಿಯೊಂದಿಗೆ, ಮರು = (ಗುರುತಾದ) ಶ್ರೀವತ್ಸಚಿಹ್ನವನ್ನೂ, ತಾರ್ = ಮಾಲೆಯಾದ ವೈಜಯಂತಿಯನ್ನೂ, ದರಿತ್ತವನ್ = ಧರಿಸಿದ ಶ್ರೀಕೃಷ್ಣನ, ವಾಶಕತ್ತೈ = ವಾಕ್ಯವನ್ನು (''ಭಜಸ್ವಮಾಂ'' ಎಂದೂ ''ಮಾಮೇಕಂ ಶರಣಂವ್ರಜ'' ಎಂದು ಹೇಳಿದುದನ್ನು) ಮರುತ್ತಾರ್ = ಮೀರಿದವರು (ಭಕ್ತಿ ಪ್ರಪತ್ತಿಮಾರ್ಗಗಳಲ್ಲಿ ಪ್ರವೇಶಿಸಿದವರು ಎಂದರ್ಥ) ಮಯಕ್ಕಮುಂ = ಅವಿದ್ಯೆಯೂ, ಮತ್ತ್ = ಅಷ್ಟೇ ಅಲ್ಲದೆ, ಅದನಾಲ್ = ಆ ಅವಿದ್ಯೆಯಿಂದ, ವಂದ = ಬಂದ, ಮಾ-ನರಕುಂ = ತೀವ್ರವಾದ ನರಕಯಾತನೆಯನ್ನೂ, ನಿರುತ್ತು = ತನ್ನಲ್ಲಿಯೇ ನಿಲ್ಲಿಸಿಕೊಳ್ಳುವ ಶಕ್ತಿಯುಳ್ಳ, ಆರ್ = ಅತಿ ವಿಸ್ತಾರವಾದ ಸಂಸಾರದಲ್ಲಿ, ನೆಡು-ನಾಳ್ = ಬಹಳ ಹಿಂದಿನಿಂದ, ಉಳನ್ರಮೈ = ಅಲೆದಾಡಿದುದನ್ನೂ, ಕಂಡು = (ನೋಡಿದಂತೆ) ವಿಮರ್ಶಿಸಿ, ಆದನಾಲ್ = ಅದರಿಂದ, ವೆರುತ್ತು = ಮರುಗಿ (ನಿರ್ವೇದಗೊಂಡು) ಇರುವವರು, ವೆಳ್‌ಹಿ = (ಹಿಂದೆ ಅಲೆದಾಡಿದುದಕ್ಕೆ) ನಾಚಿಕೆಗೊಂಡು, (ಮುಂದೆ) ಆರಣ-ನೆರಿಯೇ = ವೇದಾಂತಗಳು ಹೇಳುವ ಭಕ್ತಿ ಪ್ರಪತ್ತಿಮಾರ್ಗಗಳಲ್ಲೇ, ಓಡ-ವಿರೈವರ್‌ಹಳ್ = ತಡಮಾಡದೆ ಬೇಗೆ ಪ್ರವರ್ತಿಸುವರು, (ನಿರ್ವೇದಪರ್ವವು ಮೊದಲಾಯಿತು. ನಿರ್ವೇದ ಬಂದರೇನೇ ಉಪಾಯದಲ್ಲಿತೊಡಗುವನು. ಉಪಾಯಾನುಷ್ಠಾನಮಾಡಿದರೇನೇ ಮುಕ್ತಿ. ಅದು ಖಂಡಿತ ದೊರಕುವುದೆಂದು ನಂಬಿದರೇನೇ ಪೂರ್ಣಫಲವನ್ನು ಬೇಗನೇ ಅನುಭವಿಸಬಹುದೆಂದು ಭಾವ.)

श्रीवत्सं वैजयन्ती मपि सह रमया वक्षसाऽलंकरिष्णोः
वाचो ये वावमन्यन्त इह पुन रविद्यां तदीया व्यथाश्च ।

भुक्त्वात्र स्थापयत्तद्भ्रमण मतिचिरात् संसृतौ वीक्ष्य चाथो
निर्विण्णा लज्जमाना उपनिषदुदितोपाय एवाशु यान्ति ॥ ४

ಮೂಲ : ವಾನ್ಪಟ್ಟಮನ್ನಿರುಳಿಲ್ ಮಯಂಗುಮಾರುಂ
ಮರಿತ್ತೊರು ಕಾಲೆನ್ನೈಯೂಳಿಶೆನ್ರಾಲನ್ರೋರ್
ಊನ್ಪಟ್ಟವುಡಲಾಳಿವಿನ್ನೈಯೊಳುಕ್ಕಿಲ್
ಒರುಕರ್ರೈಯುಂ ಕಾಣಾದೇಯೊಳುಕುಮಾರುಂ
ತೇನ್ಪಟ್ಟವಿಡಂಪೋಲತಿತ್ತಿಕ್ಕಿನ್ರ
ಶಿರುಪಯನೇಯುರುಪಯನೆನ್ರರುನ್ದುಮಾರುಂ
ತಾನ್ಪಟ್ಟಪಡಿಯಿನ್ನೇರ್ ತಾನೇ ಕಂಡು
ತಳರ್ನ್ದಿಡುಮೇಲ್ ವಳರ್ನ್ದಿಡುಮೇತಕ್ಕವಾರೇ ॥ 5

ಅರ್ಥ :- ವಾನ್ = ಆಕಾಶ, (ಚಿರಸ್ಥಾಯಿಯಾದುದು) ಪಟ್ಟ = (ಬಹಳ ಕಾಲ ಇರುವಿಕೆಯನ್ನು) ಪಡೆದ, ಮನ್-ಇರುಳಿಲ್ = (ಪ್ರಾಕೃತ ಪ್ರಳಯವಾದ) ಗಾಢಾಂಧಕಾರದಲ್ಲಿ, ಮಯಂಗುಮಾರುಂ = ಅರಿವಿಲ್ಲದಂತೆ ಬಹಳ ಕಾಲ ಮೋಹಿತನಾಗಿರುವ ರೀತಿಯನ್ನೂ, ಮರಿತ್ತು = ಮತ್ತೆ, ಒರು-ಕಾಲ್-ಎನ = ಒಂದೇ ಕಾಲದಂತೆ ಒಂದೇ ಸಮನಾಗಿ ಬಹಳ ಕಾಲ, ಊಳಿ = ಪ್ರಳಯವು, ಶೆನ್ರಾಲ್ = ಕಳೆದ ಮೇಲೆ, ಅನ್ರು = ಆಗ (ಸೃಷ್ಟಿ ಕಾಲವು ಬಂದಾಗ) ಊನ್ = ಮಾಂಸಾದಿಗಳು, ಪಟ್ಟ = ಇರುವ, ಉಡಲ್-(ದೇವಾದಿ) ಶರೀರದ, ಆಳಿ = ಚಕ್ರದಂತೆ ಮತ್ತೆ ಮತ್ತೆ ತಿರುಗಿ ಬರುವ ಜನ್ಮವುಳ್ಳವರು, ವಿನ್ನೈ = (ಪುಣ್ಯಪಾಪರೂಪಗಳಾದ) ಕರ್ಮಗಳ, ಒಳುಕ್ಕಿಲ್ = ಪ್ರವಾಹದಲ್ಲಿ (ಸಿಕ್ಕಿಕೊಂಡು) ಒರು-ಕರ್ರೈಯುಂ-ಕಾಣಾದೇ = ಮೋಕ್ಷವೆಂಬ ಪ್ರಧಾನವಾದ ಮಾರ್ಗವನ್ನು ಕಾಣದೆಯೇ, ಒಳುಕುಮಾರುಂ = (ಕರ್ಮಪ್ರವಾಹದಲ್ಲೇ) ತೇಲಿಹೋಗುವ ಪ್ರಕಾರವನ್ನೂ, ತೇನ್ = ಜೇನು, ಪಟ್ಟ = ಕೂಡಿರುವ, ವಿಡುಂಪೋಲ = ವಿಷದಂತೆ, ತಿತ್ತಿಕ್ಕಿನ್ರ = ರುಚಿಸುವ (ಮೇಲಕ್ಕೆ ಸ್ವಾದುವಾಗಿ ತೋರುವ) ಶಿರು-ಪಯನೇ = ಅಲ್ಪ ಫಲವಾದ ಶಬ್ದಾದಿ ವಿಷಯಗಳನ್ನೇ, ಉರು-ಪಯನ್ = ದೊಡ್ಡ ಫಲವು (ಆತ್ಮನಿಗೆ ಪರಮಭೋಗ್ಯವೆಂದು), ಎನ್ರು = ಎಂದು, ಅರುಂದುಮಾರುಂ = ಅರಿತು ಆಸ್ವಾದಿಸುವ ರೀತಿಯನ್ನೂ), ತಾನ್-ಪಟ್ಟ-ಪಡಿ = ತಾನು ಅನುಭವಿಸಿದ ಪ್ರಕಾರವನ್ನು, ಇನ್ನೇರ್ = ಈ ರೀತಿಯಲ್ಲಿ, ತಾನೇ = ತಾನೇ, ಕಂಡು = (ಶಾಸ್ತ್ರೋಪದೇಶದ ಬಲದಿಂದ) ಪರಾಮರ್ಶಿಸಿ, ತಳರ್ನ್ದ-ಇಡು = ತಳಮಳಗೊಂಡ (ನಿರ್ವೇದಗೊಂಡ) (ಅವನಿಗೆ), ಮೇಲ್ = ನಿರ್ವೇದಬಂದ ಬಳಿಕ, ತಕ್ಕವಾರೇ = ಆತ್ಮನಿಗೆ ಹಿತಕರವಾದ ಪ್ರವೃತ್ತಿಗಳೇ, ವಳರ್ನ್ದಿಡುಮೇ = ದಿನದಿನಕ್ಕೂ ಹೆಚ್ಚುತ್ತಾಬರುವುವು.

व्योमेव स्थायितावत्तिमिरततिगताचित्प्रकारं चिरेण
काले भूयोऽपि चैकीकृत इव सति कल्पान्त एवान्तमेते ।
मांसासृक्कायचक्रभ्रमणनिपततां पुण्यपापात्मकर्म
स्रोतस्सम्प्लावितानां कमपि तट मनालोकितानां च रीतिम् ॥ १

क्ष्वेड स्वाद्यो यथा स्यान्मधुसहित इहाल्पार्थ एवात्मभोग्यः
ज्यायानर्थ स्तथैवं ह्यवगतविषयाणां स्वतश्च प्रकारं ।
एवं ह्यात्मानुभूतिं स्वय मभिविमृशन् यस्तु निर्वेद मेयात्
तस्मैवात्मप्रयत्ना श्शुभफलमहिता नित्य मेधन्त एव ॥ ५

ಮೂಲ : ಉಲಹತ್ತುಯರ್ನ್ದವರೊನ್ರುಂ ಪಯನಿಲುರುನ್ದುಯರುಂ
ಅಲಗಿಲ್‌ಪಡಾದವಬ್ಬೋಗಂ ಕವರ್ನ್ದೆಳುಮಂಬುಯತ್ತೋನ್
ಕಲಹತ್ತೊಳಿಲ್‌ಮದುಕ್ಕೈಟಬರಾಲ್‌ಪಡುಂಕಟ್ಟಮೆಣ್ಣುಂ
ಪಲಕತ್ತಮೆಯ್ಯಡಿಯಾರ್ ಪಡಿಯಾರ್ ಇಕ್ಕಡುಂಬವತ್ತೈ ॥ 6

ಅರ್ಥ :- ಉಲಹತ್ತು = ಈ ಭೂಲೋಕದಲ್ಲಿ, ಉಯರ್ನ್ದವರ್ = ಉನ್ನತರಾಗಿದ್ದವರು, (ರಾಜ್ಯ, ಧನ, ವೀರ್ಯಾದಿಗಳಿಂದ ಬಲುಮೇಲಾಗಿದ್ದ ನಳ, ನೃಕ, ನಹುಷಾದಿರಾಜಾಧಿರಾಜರು) ಒನ್ರುಂ = ಅನುಭವಿಸುವ, ಪಯನಿಲ್ = ಫಲದಲ್ಲಿ, (ಸಾಮ್ರಾಜ್ಯ ಪದವಿಯಲ್ಲಿ) ಉರುಂ = ಒಂದೇಸಮನಾಗಿ ಬರುತ್ತಿದ್ದ, ತುಯರುಂ = ದುಃಖಗಳನ್ನೂ, (ನಳ ಹುಂಚ್ಚನಾದನು, ನೃಕ ಹೆಂಟೆಗೊದ್ದನಾದನು, ನಹುಷ ಅಜಗರನಾದನು, ಹೀಗೆ ಪಡಬಾರದ ಕಷ್ಟವನ್ನನುಭವಿಸಿದರಲ್ಲವೆ?) ಅಲಹ್-ಇಲ್‌ಪಡಾದ = ಅವಧಿಯಿಲ್ಲದ (ಅಮಿತವಾದ), ಅ-ಬೋಗಂ = ಎಲ್ಲೆಯಿಲ್ಲದ ಆನಂದವನ್ನು, ಕವರ್ನ್ದ್ = ಪಡುವವನಾಗಿ, ಎಳುಂ-ಅಂಬುಯತ್ತೋನ್ = ಬಹಳ ಮೇಲೆನಿಸಿದ ಬ್ರಹ್ಮನೂ ಕೂಡ, ಕಲಹ-ತೊಳಿಲ್ = ಜಗಳವೇ ಕೃತ್ಯವಾಗಿದ್ದ, ಮದು-ಕೈಟಬರಾಲ್ = ಮಧು, ಕೈಟಭ ಎಂಬ ರಾಕ್ಷಸರಿಂದ, ಪಡುಂ = ಪಡುವ, ಕಟ್ಟಂ = ಕಷ್ಟವನ್ನೂ, (ಎಲ್ಲಕ್ಕೂ ಮೂಲವಾದ ವೇದವನ್ನೇ ಅಪಹರಿಸಿಕೊಂಡು ದಿಕ್ಕುತೋಚದಂತಾಗಿ ಬ್ರಹ್ಮನು ಮೊರೆಯಿಡುವಂತೆ ಮಾಡಿದ ಕಷ್ಟವೆಂದರ್ಥ) ಎಣ್ಣುಂ = ಪರಾಮರ್ಶಿಸುವವರೂ, ಪಲ = ಹಲವಾರು ಶಾಸ್ತ್ರಾರ್ಥಗಳನ್ನೂ, ಕತ್ತ = ಕಲಿತವರೂ, ಮೆಯ್ಯ-ಅಡಿಯಾರ್ = (ಭಗವಂತನ ಪರತ್ವವನ್ನೂ, ಇತರರ ಅಪರತ್ವವನ್ನೂ, ನಿತ್ಯವಿಭೂತಿಯ ವೈಲಕ್ಷಣ್ಯವನ್ನೂ, ಲೀಲಾ ವಿಭೂತಿಯ ಹೇಯತೆಯನ್ನೂ, ಅರಿತು

ನಿರ್ವೇದವುಳ್ಳವರೂ) ಡಂಬಾದಿಗಳಿಲ್ಲದ ಪರಮೈಕಾಂತಿಗಳು, ಇ-ಕಡುಂ-ಬವತ್ತೈ = ಈ ಕ್ರೂರವಾದ ಸಂಸಾರದಲ್ಲಿ, ಪಡಿಯಾರ್ = ಒಗ್ಗರು, (ಆಸಕ್ತರಾಗುವುದಿಲ್ಲ).

**लोके ह्यत्युन्नतानां सुकृतवति फलेऽप्यास्तदुःखाधिकत्वं**
**तादृग्भोगं समश्नन् निरवधि मुदितो नीरजातासनोऽपि ।**
**कष्टं जन्यैकनित्यक्रियमधुमुखरक्षःकृतं प्राप तादृक्**
**ज्ञात्वा शास्त्रप्रवीणाः पदजुष ऋजवो नेयु रुग्रं भवं तु ।।** ६

ಮೂಲ : ತಂತಿರಂಗಳಳವಿಲರಾಯ್ ದನತ್ತಾಲ್‌ಮಿಕ್ಕ
ತಾರ್‌ವೇನ್ದರ್‌ತೊಳವೈಯ್ಯಮಾಂಡಾರ್ ಮಾಂಡಾರ್
ಶಂದಿರನುಂ ಶೂರಿಯನುಂ ವೀಯುಂಕಾಲಂ
ತಾರಕೈಯಿನ್‌ವಡಮತ್ತು ಮತ್ತುತ್ತನಿವಾನಾಹುಂ
ಇಂದಿರನುಮೇರುಯರ್‌ತ್ತವೀಶನ್ತಾನುಂ
ಈರಿರಂಡು ಮುಹತ್ತಾನುಮಿಲ್ಲಾವನ್ನಾಳ್
ನನ್ದಿರುಮಾಲ್ ನಿಲೈಕಂಡಾರ್ ನಾಕಮೆಲ್ಲಾಂ
ನರಕೆನ್ರುನರ್ದಮೇ ನಾಡುವಾರೇ ॥ 7

ಅರ್ಥ :- ತಂತಿರಂಗಳ್ = ಚತುರಂಗ ಬಲವನ್ನು, (ರಥ, ಗಜ, ತುರಗ, ಪದಾತಿ) ಅಳವು-ಇಲರ್-ಆಯ್ = ಅಪರಿಮಿತವಾಗಿ ಪಡೆದಿರುವ, ದನತ್ತಾಲ್-ಮಿಕ್ಕ = ಧನಧಾನ್ಯಾದಿ ಸಂಪತ್ತಿನಿಂದ ಅಧಿಕರೆನಿಸಿದ, ತಾರ್ = (ಶಿರೋಮಾಲಿಕೆ, ಕೊರಳು ಮಾಲಿಕೆ) ಹಾರವನ್ನು ಧರಿಸಿದ, ವೇನ್ದರ್ = (ಚಂದ್ರ ಸೂರ್ಯ ವಂಶೋತ್ಪನ್ನರಾದ) ರಾಜಾಧಿರಾಜರು, ತೊಳ = (ನಮಿಸಿ) ಸೇವೆ ಮಾಡಲು, ವೈಯಂ = ಭೂಮಂಡಲವನ್ನು, ಆಂಡಾರ್ = ಆಳಿದ ಸಾರ್ವಭೌಮರೆಲ್ಲ, ಮಾಂಡಾರ್ = ಹೆಸರೇ ಉಳಿಯದಂತೆ ಅಳಿದರು, (ಅಷ್ಟೇ ಅಲ್ಲದೆ) ಚಂದಿರನುಂ = ಚಂದ್ರನೂ, ಸೂರಿಯನುಂ = ಸೂರ್ಯನೂ, ವೀಯುಂ = ನಶಿಸುವ, ಕಾಲಂ = ಕಾಲದಲ್ಲಿ, ತಾರಕೈಯಿನ್ = ನಕ್ಷತ್ರಗಳ, ವಡಂ = ಮಂಡಲವು, ಅತ್ತು = ಅಳಿದು, ತನಿ-ವಾನ್-ಆಹುಂ = ಪರಮಾಕಾಶವೇ ಉಳಿಯುವುದು, (ಸೂಕ್ಷ್ಮ ಪ್ರಕೃತಿಯೇ ಉಳಿಯವುದೆಂದೂ ಹೇಳಬಹುದು) ಇಂದಿರುನುಂ = ಇಂದ್ರನೂ, ಏರ್ = ವೃಷಭವು, ಉಯರ್‌ತ್ತ = ಮೇಲೆ ಕಾಣುವ ಧ್ವಜವುಳ್ಳ, ಈಶ್ರ-ತಾನುಂ = ಈಶ್ವರನೂ, ಈರ್-ಇರಂಡು-ಮುಹತ್ತಾನುಂ = ನಾಲ್ಕು ಮುಖದವನೂ (ಬ್ರಹ್ಮನೂ), ಇಲ್ಲಾ-ಅನ್ನಾಳ್ = ಇವರು ಯಾರೂ ಇಲ್ಲದ ಬ್ರಹ್ಮ ಪ್ರಳಯದಲ್ಲಿ, ನಂ = ನಮ್ಮ, ತಿರುಮಾಲ್ =

ಶ್ರೀಮನ್ನಾರಾಯಣನ, ನಿಲೈ = (ಸರ್ವ ಕಾರಣತ್ವವನ್ನು ತೋರಿಸುವ) ಸ್ಥಿತಿಯನ್ನು, ಕಂಡಾರ್ = ನೋಡಿದವರು (ಶಾಸ್ತ್ರದಿಂದ ತಿಳಿದವರು) ನಾಕಂ-ಎಲ್ಲಾಂ-ನರಕು-ಎನ್ರು = ಸ್ವರ್ಗವೇ ಮೊದಲಾದ ಲೀಲಾ ವಿಭೂತಿಯೆಲ್ಲಾ ನರಕಪ್ರಾಯವೆಂದು, (ತಿಳಿದು ವೈರಾಗ್ಯ ಪಡದು) ನಲ್-ಪದವೇ = ಸರ್ವೋತ್ತಮವಾದ ಪರಮ ಪದವನ್ನೇ, ನಾಡುವಾರೇ = ಹುಡುಕುವವರಾಗುತ್ತಾರೆ. (ವಿಮರ್ಶಿಸಿ, ಕೊನೆಗೆ ಪಡೆಯುತ್ತಾರೆ ಎಂದರ್ಥ)

मानातीतपरिच्छदा स्समधिका वित्तेशतादित्वत:
नेमु र्दामधरा धराधिपतयो यान् सार्वभौमांश्च ते ।
याता नन्वमृतद्युतिग्रहपती यातौ च तारागण:
नाशं यात्यथ शिष्यते च परमाकाश स्स सूक्ष्म: पर: ॥ १

वृषा च वृषभध्वजो द्विगुणितद्वयास्य श्च ते
न सन्ति हि यदा तदा सकलकारणत्वं च न: ।
रमेशितु रवेक्ष्य तं नरक मेव नाकं त्विति
प्रियं च परमं पदं किल गवेषयन्ते बुधा: ॥ २

ಮೂಲ : ತುರವರಮೇ ತುಣಿವಾರ್ ತುಣಕ್ಕತ್ತ ವಿಳನ್ದುಣಿವೋರ್,
ಉರವಿಲರಾದಲಿಲ್ ನಾಮುಯರ್‌ನ್ದಾರುಡನ್ ಒನ್ರಿನಿನ್ರೋಂ
ಮರವಳಿಮಾತ್ತಿ ಎಮ್ಮೈಯಲೈತ್ತೀರ್ತವರ್ ಮನ್ನರುಳಾಲ್,
ಕರವೈಯುಹನ್ದಪಿರಾನ್‌ಕಳಲ್‌ಶೂಡುಂಕರುತ್ತಿನಮೇ ॥ 8

ಅರ್ಥ :- ತುರ-ಅರಮೇ = ತ್ಯಾಜ್ಯವಾದ ಧರ್ಮವನ್ನೇ (ಆತ್ಮಾಪಹಾರವಾಗುವ ಧರ್ಮದಲ್ಲೇ), ತುಣಿವಾರ್ = (ಹಿಂಜರಿಯದೆ) ಮಾಡುವವರೂ (ದೇಹಾತ್ಮಾಭಿಮಾನಿಗಳು) ತುಣುಕ್ಕು = ಮೋಕ್ಷೈಕಪ್ರವಣತೆಯು, ಅತ್ತ = ಇಲ್ಲದೆ, (ಮುಕ್ತಿಯಲ್ಲಿ ಆಸೆಯಿಲ್ಲದ) ಇಳಂ = ಅಲ್ಪವಾದವು (ಐಶ್ವರ್ಯ ಕೈವಲ್ಯಾದಿಗಳಲ್ಲಿ) ಗಳಲ್ಲಿಯೇ, ತುಣಿವೋರ್ = ಆಸೆಪಟ್ಟು ಯತ್ನಿಸುವವರೂ, ಉರವು-ಇಲರ್ = (ಮುಮುಕ್ಷುಗಳಿಗೆ) ಬಂಧುಗಳಲ್ಲ, ಆದಲಿಲ್-ನಾಂ = ಮೋಕ್ಷವೇ ಮುಖ್ಯ ಪ್ರಯೋಜನವುಳ್ಳನಾವು, ಉಯರ್‌ನ್ದಾರ್-ಉಡನ್ = (ಮುಕ್ತಿಯೇ ಪ್ರಧಾನ ಫಲವೆಂದಿರುವ ಮುಮುಕ್ಷುಗಳೊಡನೆ, ಒನ್ರಿ-ನಿನ್ರೋಂ = ಒಮ್ಮತರಾಗಿ ಕಲೆತು ನಿಂತರಾದೆವು, (ಅಷ್ಟೇ ಅಲ್ಲದೆ) (ಮರ-ವಳಿ-ಮಾತ್ತಿ) = ಮರಂ = ಕೋಪವೇ (ಕಾಮಾದಿಗಳೂ ತೋರುತ್ತವೆ) ಮುಂತಾದ, ವಳಿ = ಮಾರ್ಗವನ್ನು, ಮಾತ್ತಿ = ಹೋಗಲಾಡಿಸಿ, (ವಿವೇಕ, ನಿರ್ವೇದ, ವಿರಕ್ತಿ, ಭೀತಿ,

ಇವುಗಳನ್ನುಂಟುಮಾಡಿ), ಎಂ = ನಮ್ಮ, ಮ್ಮೆ = ದೇಹದ, ಅಲ್ಲೈ = ಅಲೆದಾಟವನ್ನು, ತೀರ್ತ್ತವರ್ = ಕೊನೆಗಾಣಿಸಿದವರಾದ (ಮತ್ತೆ ಮತ್ತೆ ಹಲವಾರು ಜನ್ಮವೆತ್ತುವುದನ್ನು ನಿವಾರಿಸಿದ) ಸದಾಚಾರ್ಯರ, ಮನ್-ಅರುಳಾಲ್ = ದೃಢವಾದ ಕರುಣೆಯಿಂದ, ಕರವ್ವೈ = ಹಸುಗಳನ್ನು, ಉಹನ್ದ = ಸಂತೋಷವಾಗಿ ರಕ್ಷಿಸಿದ, ಪಿರಾರ್ = ಮಹೋಪಕಾರಮಾಡಿದ ಶ್ರೀ ಕೃಷ್ಣನ, ಕಳಲ್ = ಪಾದಾರವಿಂದಗಳನ್ನು, ಶೂಡುಂ = ತಲೆಯಮೇಲೆ ಧರಿಸುವ, (ಶ್ರೀಮನ್ನಾರಾಯಣನನ್ನು ಆಶ್ರಯಿಸುವ) ಕರುತ್ತಿನಂ = ಅಭಿಪ್ರಾಯವುಳ್ಳರಾದೆವು. (ಎ = ಅಲ್ಲವೇ !)

**सक्ता स्त्याज्येषु धर्मेष्वविरत मरता मुक्त्युपायेऽल्पकेऽर्थे**
**व्या ये बन्धवस्ते न हि तदिह सहैकेप्सुभि स्समोऽथ किं च ।**
**कोपाद्यध्वापनेतुः विविधतनुपरिभ्रान्तिहर्तु र्गुरो र्नः**
**कारुण्यात् गोप्रियस्येशितु रमलपदं धारयाम श्शिरस्सु ॥** ೮

**ಮೂಲ :** **ವನ್ದನಪೋಲ್‌ವರುವನವು ಮನಂತಮಾಹಿ ಮಾಳಾದ**
**ತುಯರ್ ತರುವಲ್‌ವಿನ್ಯೆನೆರುಪ್ಪುಕ್ಕು**
**ಇಂದನಮಾಯೆಣ್ಣಿರಂದ ಕಾಲಮೆಲ್ಲಾಮಿನ್ನು ಮುಮಿಬವ**
**ಕ್ಕುಳಿಕ್ಕೇಯಿಳಿಯಾವಣ್ಣಂ, ವೆಂದದೊರುಕುಳವಿಯ್ಯೆ**
**ನರ್ರುಮರನಾಕ್ಕುಂವೆರಿತ್ತುಳಬವಿತ್ತಹನಾರ್ ವಿದಿಯೇ**
**ಕೊಂಡಾರ್, ಬಂದನಮಾಮವ್ವೈಯನ್ಯೆತ್ತುಂಪಾರುಕ್ಕೈಕ್ಕುಂ**
**ಪಳಮರ್ರೈಯಿನ್ ಪದಮೊನ್ರೈಪಯಿಲುವಾರೇ ॥** 9

**ಅರ್ಥ :-** ವಂದನ-ಪೋಲ್ = ಬಂದ ದುಃಖಗಳಂತೆಯೇ, ವರುವನವುಂ = ಇನ್ನು ಮೇಲೆ ಬರುವ ದುಃಖಗಳೂ, ಅನಂತಂ-ಆಹಿ = ಕೊನೆಯೇ ಇಲ್ಲದಾಗಿ, ಮಾಳಾದ = (ಅನುಭವ ಮತ್ತು ಪ್ರಾಯಶ್ಚಿತ್ತಗಳಿಂದ) ಕಳೆದುಕೊಳ್ಳುವುದಕ್ಕಾಗದ, ತುಯರ್ = ದುಃಖವನ್ನು, ತರು = ಕೊಡುವ, ವಲ್-ವಿನ್ಯೆ = ಕ್ರೂರವಾದ ಪಾಪಗಳೆಂಬ, ನೆರುಪ್ಪುಕ್ಕ್ = ಕಾಡುಕಿಚ್ಚಿಗೆ, ಎಣ್ ಇರುಂದ -ಕಾಲಂ - ಎಲ್ಲಾಂ = ಎಣಿಸಲಾಗದ ಹಿಂದಿನ ಕಾಲವೆಲ್ಲಾ, ಇಂದನಮಾಯ್ = ಕಟ್ಟಿಗೆ (ಸೌದೆ)ಯಾಗಿ, ಇನ್ನು ಮುಂ = ಇನ್ನುಮುಂದೆಯೂ, (ಎಣಿಸಲಾಗದಷ್ಟು ಕಾಲ) ಇ-ಬವ-ಕುಳಕ್ಕೇ = ಈ ಸಂಸಾರವೆಂಬ ಹಳ್ಳದಲ್ಲಿ, ಇಳಯಾ-ವಣ್ಣಂ = ನಾಶವಾಗದಂತೆ (ಅಸತ್ಕಲ್ಪನಾಗಿ ಆಗದಂತೆ ತಿಳಿದು) ವೆಂದದ್-ಒರು-ಕುಳವಿಯ್ಯೆ = (ಅಶ್ವತ್ಥಾಮಾಸ್ತ್ರದಿಂದ ಗರ್ಭದಲ್ಲೇ) ಬೆಂದುಹೋಗಿ

ಜನಿಸಿದ ಮಗುವನ್ನು, (ಪರೀಕ್ಷಿತ್ತನ್ನು) ನಲ್-ಕುಮಾರನ್-ಆಕ್ಕುಂ = ಒಳ್ಳೆಯ ಶಿಶುವನ್ನಾಗಿ ಮಾಡಿದ, ವೆರಿ-ತುಳಬ-ವಿತ್ತಹನಾರ್ = ಪರಿಮಳಿಸುವ ತುಲಸೀಮಾಲೆಯುಳ್ಳ ಮತ್ತು ವಿಸ್ಮಯಪಡಿಸುವ ಶ್ರೀಕೃಷ್ಣನ, ವಿದಿಯೇ-ಕೊಂಡಾರ್ = (ಭಜಸ್ವ-ಶರಣಂವ್ರಜ ಎಂಬ) ವಾಕ್ಯಗಳನ್ನೇ (ತಮಗೂ) ತಂದುಕೊಡುವರು, ಬಂದನಂ-ಆಂ-ಅವೈ-ಅನೈತ್ತುಂ = ಮುಕ್ತಿಗೆ ತಡೆಯಾಗಿರುವ ಎಲ್ಲಾ ಪಾಪಗಳನ್ನೂ, ಪಾರು = ದೂಳಿಯಾಗುವಂತೆ, ಕೈಕ್ಕುಂ = ನಾಶಮಾಡುವ, ಪಳಮರೈಯಿರ್-ಪದಂ-ಒನ್ರೇ = ಅನಾದಿಯಾದ ವೇದಾಂತದಲ್ಲಿ ಹೇಳಿರುವ ಪ್ರಪತ್ತಿಮಾರ್ಗವೊಂದನ್ನೇ, ಪಯಿಲುವಾರ್ = ಅಭ್ಯಾಸಮಾಡಲು ನೋಡುವರು.

**प्राप्तानीवागमिष्यन्त्यपि मितिरहितानीह भोगादिना न ।**
**क्षय्याणीदृशि दुःखान्युपरि च ददतो तीव्रपापौघवन्हेः ॥**
**एधीभूतं च कालं सकलमपि गतं वीक्ष्य भूयोऽपि तद्वत् ।**
**न स्यु स्संसारगर्ते निखिलमवसरं यापयन्तो यथा न ॥** १

**दग्धं गर्भगतार्भकं कमपि यो मुग्धं शिशुं निर्ममे ।**
**धत्ते य स्तुलसीस्रजं सुरभितां तस्याद्भुतेहावतः ॥**
**विध्युक्तिप्रविदश्च मुक्तिविहतिक्षोदीकरिष्यत्त्रयी-**
**चूडावाक्षु गिरं प्रपत्तिमहिता मेकां हितेऽधीयते ॥** २

**ಮೂಲ : ಕರುಮಾಲೈಯಲ್‌ವರುಂಕಟ್ಟಂಕಳಿಕ್ಕುಂಕರುತ್ತುಡೈಯಾರ್,**
**ಒರುಮಾಲ್ ಪೆರುಹುಂ ಉಯೋಗಿನ್ಮುಯನ್ರುಮದನ್ರಿಯುಂನಂ**
**ತಿರುಮಾಲಡಿಯಿಣೈತಿಣ್‌ಶರಣಾಹುಮೆನವರಿತ್ತುಂ,**
**ತರುಮಾಲಿನಯವೈತಾನೇ ಎನತ್ತಹವೇಣ್ಣುವರೇ ॥** **10**

ಅರ್ಥ :- ಕರು-ಮಾಲೈಯಿಲ್ = ಗರ್ಭ ಪರಂಪರೆಯಲ್ಲಿ, (ಗರ್ಭ-ಜನ್ಮ-ಜರಾ ಮರಣಾದಿಗಳಲ್ಲಿ) ವರುಂ = ಬರುವ, (ಒದಗುವ) ಕಟ್ಟಂ = ಕಷ್ಟಗಳನ್ನು, ಕಳಿಕ್ಕುಂ = ಕಳೆದಕೊಳ್ಳಬೇಕೆಂಬ, ಕರುತ್ತ = ಅಭಿಪ್ರಾಯವನ್ನು, ಉಡೈಯಾರ್ = ಹೊಂದಿರುವವರು (ಮುಮುಕ್ಷುಗಳು) ಒರು-ಮಾಲ್-ಪೆರುಹುಂ = ಒಂದೇಸಮನಾಗಿ (ನಡುವೆ ನಿಲ್ಲದೆ) ಭಕ್ತಿರೂಪವಾದ ಜ್ಞಾನವು ಧಾರಾಕಾರವಾಗಿ ಹರಿಯುವ, ಯೋಗಿಲ್ = ಭಕ್ತಿಯೋಗದಲ್ಲಿ, ಮುಯನ್ರ = ಉದ್ಯಮಿಸಿ (ಪ್ರವೇಶಿಸಿ), ಅದ್-ಆ ಭಕ್ತಿಯೋಗವನ್ನೂ, ಅನ್ರಿಯುಂ = ಬಿಟ್ಟವರು (ಅಕಿಂಚನರಾಗಿಯೂ, ವಿಳಂಬವನ್ನು ಸಹಿಸದವರಾಗಿಯೂ ಇರುವ

ಅಧಿಕಾರಿಗಳು), ನಂ-ತಿರು-ಮಾಲ್ = ಪ್ರಸಿದ್ಧನಾದ ಶ್ರೀಮನ್ನಾರಾಯಣನ, ಅಡಿ-ಇಣೈ = ಅಡಿಗಳೆರಡೇ, ತಿಣ್-ಶರಣ್-ಆಹುಂ-ಎನ = ಅಮೋಘವಾದ ಉಪಾಯವಾಗಬೇಕೆಂದು, ವರಿತ್ತುಂ = (ಸಾಂಗವಾದ ಆತ್ಮರಕ್ಷಾಭರ ಸಮರ್ಪಣವನ್ನು) ಮಾಡಿಯೂ, ಇನಿ = ಇದಾದಮೇಲೆ, ಅವ್ವೈ = ಅವುಗಳನ್ನು (ಅನಿಷ್ಟ ನಿವೃತ್ತಿ, ಇಷ್ಟ ಪ್ರಾಪ್ತಿಗಳನ್ನು), ತಾನೇ-ತರುಂ-ಎನ = (ನಮ್ಮನ್ನೂ ಬೇರೆ ಸಹಾಯವನ್ನು ಅಪೇಕ್ಷಿಸಿದೆ) ತಾನಾಗಿಯೇ ಫಲವನ್ನು ಕೊಡುವನೆಂದು (ನಂಬಿ) ಮಾಲ್ = ಆ ಪರಮಾತ್ಮನ, ತಹವು-ಏ = ದಯೆಯನ್ನೇ, ಎಣ್ಣುವರ್ = (ಚಾತಕ ಪಕ್ಷಿಯು ಮೇಘವನ್ನು ಎದುರುನೋಡುವಂತೆ) ಎದುರುನೋಡುತ್ತಿರುವರು, (ಇದು ಪ್ರಸಾದ ಪರ್ವದ ವಿಭಾಗವೆಂದರಿಯಬೇಕು).

**गर्भाविर्भूयदुःस्वाद्यपसृतिनिरता मुक्तिसक्ताः प्रवृत्ताः ।**
**अच्छेद्ये भक्तियोगे तदनु च चिरसाध्येऽक्षमा स्तं विहाय ॥**
**श्रीमन्नारायणस्यैव हि चरणयुगं ये शरण्यं प्रपन्नाः ।**
**स प्रीत स्सर्वदायी स्वयमिति करुणां संप्रतीक्ष्यासतेऽत्र ॥** १०

ಮೂಲ : ಮುನ್‌ಶೆಯ್ದವಿನೈತ್ತಿರಳಿಲ್‌ಮುಳೈತ್ತದನ್ರಿ,
ಮತ್ತುಳ್ಳಮುದಲರಿನ್ದ್‌ಮುಳೈತ್ತಕೂತ್ತಿಲ್,
ತನ್‌ಶೆಯ್ಯತಿರುವರುಳಾಲಿಶೈವು ಪಾರ್ತ್ತು,
ತಳಲ್‌ಶೇರ್‌ನ್ದತೂಲಮೆನತ್ತಾನೇತೀರ್ತ್ತು,
ಪಿನ್‌ಶೆಯ್ಯುವಿನೈಯಿಲ್‌ನಿನೈವೊನ್ರಾದೊನ್ರುಂ
ಪಿಳೈಪ್ಪೊರುತ್ತುವೇರುಳದು ವಿರಹಾಲ್‌ಮಾತ್ತುಂ
ಎನ್‌ಶೆಯ್ಯತಾಮರೈಕ್ಕಣ್‌ಪೆರುಮಾನೆಣ್ಣಂ
ಎಣ್ಣಾದಾರೆಟ್ಟಿರಂಡುಮೆಣ್ಣಾದಾರೇ, ॥ 11

ಅರ್ಥ :- ಮುನ್-ಹಿಂದೆ, ಶೆಯ್ದ = ಮಾಡಿದ, ವಿನೈ = ಪಾಪಗಳ, ತಿರಳಿಲ್ = ಸಮೂಹದಲ್ಲಿ, ಮುಳೈತ್ತು = ಫಲೋನ್ಮುಖವಾಗಿರುವ, ಅದ್-ಅನ್ರಿ = ಆ ಪ್ರಾರಬ್ಧಕರ್ಮವನ್ನು ಹೊರತು, ಮತ್ತುಳ್ಳಂ = ಉಳಿದುದನ್ನು (ಪಾರಬ್ಧೇತರವಾದ ಸರ್ವಪಾಪವನ್ನೂ) ಮುದಲ್ = ಉಪಾಯ ಪ್ರಾರಂಭದ ಕ್ಷಣದಲ್ಲಿಯೇ, (ಉಭಯಾದಿಕಾರಿಗಳಿಗೂ) ಅರಿನ್ದ್ = ನಾಶಮಾಡಿ, (ಸಹಿಸಿ) (ಇನ್ನುಮುಂದೆ ಸ್ವತಂತ್ರ ಪ್ರಪನ್ನವನ್ನು ಕುರಿತು ಹೇಳಲಾಗುವುದು) ಮುಳೈತ್ತ-ಕೂತ್ತಿಲ್ = ಪ್ರಾರಬ್ಧವಾದುದರಲ್ಲೂ ಕೆಲವು ಅಂಶಗಳನ್ನು, ಇಶೈವು = (ಪ್ರಪನ್ನನ ಆರ್ತಿಯ) ತಾರತಮ್ಯವನ್ನು, ಪಾರ್ತ್ತು =

ನೋಡಿ, (ಅದಕ್ಕೆ ಸರಿಹೋಗುವಂತೆ) ತನ್ = ನನ್ನ (ಭಗವಂತನ) ಶೆಯ್ಯ = ಋಜುವಾದ, ತಿರು-ಅರುನಾಳ್ = ಶ್ರೀ ಕೃಪೆಯಿಂದ, ತಳಲ್ = ಬೆಂಕಿಯು, ಶೇರ್ನ್ದ = ಸೇರಿದ, ತೂಲಂ -ಎನ = ಹತ್ತಿಯರಾಶಿಯಂತೆ, ತಾನೇ = ತಾನಾಗಿಯೇ, ತೀರ್ತ್ = ನಾಶಮಾಡಿ, ಪಿ್ = (ಉಪಾಯವನ್ನಾಚರಿಸಿದ) ಅನಂತ ಕಾಲದಲ್ಲಿ, ಶೆಯ್ಯುಂ = ಮಾಡುವ, ವಿನ್ನೈಯಿಲ್ = ಪಾಪದಲ್ಲಿ, ನಿನ್ನೈವು-ತಿಳಿದು (ಜ್ಞಾನಪೂರ್ವಕವಾಗಿ) ಒನ್ರಾದ = ಮಾಡದ, ಒನ್ರುಂ-ಪಿಳೈ = (ಅಜ್ಞಾನದಿಂದ ಮಾಡಿದ) ಪಾಪವನ್ನು, ಪೊರುತ್ತು = (ಕ್ಷಮಿಸಿ) ನಾಶಮಾಡಿ, (ಉಪಾಯ ಪರಿಗ್ರಹಕಾಲದಲ್ಲೇ ಸಂಬಂಧಿಸಿದದಂತೆ ಸಂಕಲ್ಪಿಸಿ) ವೇರ್-ಉಳದ್ = ಬೇರೆ ಉಳಿದಿರುವ ಪಾಪವನ್ನು, (ಉತ್ತರಾಘದಲ್ಲಿ ಜ್ಞಾನಪೂರ್ವಕವಾದುದನ್ನು) ವಿರಹಾಲ್ = (ಚತುರತೆಯಿಂದ) ಮತ್ತೆಪ್ರಾಯಶ್ಚಿತ್ತ ಪ್ರಪತ್ತಿ ಅನುತಾಪ ಮೊದಲಾದ ಲಘೂಪಾಯದಿಂದ, ಮಾತ್ತುಂ = ನಿವಾರಿಸುವ, (ಕ್ರೋಢೀಕರಿಸುವ) ಎನ್-ನನ್ನ, ಶೆಯ್ಯ = ಕೆಂಪಾದ, ತಾಮರೈ = ತಾವರೆಯಂತೆ, ಕಣ್ಣ್ = ಕಣ್ಣುಗಳುಳ್ಳ, ಪೆರುಮಾನ್ = ಪರಮಾತ್ಮನ, ಎಣ್ಣಂ = (ಸಂಕಲ್ಪವನ್ನು) ಜೀವೋಜ್ಜೀವನ ಚಿಂತನೆಯನ್ನು, ಎಣ್ಣಾದಾರ್ = ಪರಾಮರ್ಶಿಸದವರು, ಎಟ್ಟ್-ಇರಂಡುಂ = (8+2= 10) ಹತ್ತು ಎನ್ನಲೂ ತಿಳಿಯದ (ಪಶುಪ್ರಾಯ) ಪಾಮರರೇ ಹೌದಲ್ಲವೆ ! (ಅಥವಾ : 8 ಅಷ್ಟಾಕ್ಷರಗಳನ್ನೂ, 2 = ದ್ವಯವನ್ನೂ, ಅವುಗಳ ತತ್ತ್ವಾರ್ಥವನ್ನೂ ತಿಳಿಯದವರಲ್ಲವೆ ! ಎಂದು ಭಾವ).

प्रारब्धे पापसङ्घे फलमुखदुरितं चान्तरान्यद्यदंहः ।
प्रारब्धात् पूर्वपापात् प्रथममखिलमप्युज्जिहायाथ तत्र ।।
प्रारब्धांशेऽपि किंचित् विहितभरनरार्तिप्रकारं विमृश्यै- ।
तत्साम्यात्मानुकम्पात इह दहनयुक्तूलवत् संप्रदग्ध्य ।। १

त्यक्त्वैवं चोत्तराघे मतिकृतमथ विश्लिष्टमज्ञानपूर्वं ।
कर्तुं संकल्प्य चांशं मतिकृतमितरं चानुतापादिनाऽत्र ।।
क्रोडीकृत्याभिगोप्तु स्त्वरुणितकमलाक्षस्य संकल्परीतिं ।
येवा सम्यङ् न जानन्त्यथ च पशव एवाष्ट च द्वौ च ते हि ।। ११

ಮೂಲ : ಉರೈಯಿಟ್ಟವಾಳೆನ ವೂನುಳುರೈಹಿನ್ರಯೋಗಿಹಳ್ಳೆ,
ನರುಮಟ್ಟೆಳಿಲುತ್ತ ನತ್ತುಳವೇಂದಿಯನಾಯಕನಾರ್,
ನಿರೈಮಟ್ಟಲಾದ ನೆಡುಂಪಯನ್‌ಕಾಟ್ಟ ನಿನ್ನೈತ್ತುಡಲ-
ಚ್ಚಿರೈವೆಟ್ಟಿವಿಟ್ಟ್‌ವಳಿಪ್ಪಡುತ್ತುಂವಹೈಶೆಯ್ದಿಡುಮೇ ॥ 12

ಅರ್ಥ :- ಉರ್ೈ-ಇಟ್ಟ-ವಾಳ್-ಎನ = ಒರೆಯಲ್ಲಿಟ್ಟಿರುವ ಕತ್ತಿಯಂತೆ, (ಒಳಗಡೆ ನಿರ್ಮಲವಾಗಿದ್ದು, ಹೊರಗಡೆ ಕೊಳೆಯಾದ ಮೈಯಿಂದ ಮುಚ್ಚಲ್ಪಟ್ಟಿರುವಂತೆ) ಊನುಳ್ = ಮಾಂಸಾದಿ ಮಯವಾದ ಶರೀರದಲ್ಲಿ, ಉರ್ೈಹಿನ್ರ = ವಾಸಮಾಡುವ, ಯೋಗಿಹಳ್ಳೆ = ಯೋಗಿಗಳನ್ನು, (ಅಷ್ಟಾಂಗಯೋಗಯುಕ್ತರಾದ ಭಕ್ತರನ್ನೂ, ಪ್ರಪನ್ನರನ್ನೂ) ನರು = ಪರಿಮಳವೂ, ಮಟ್ಟ್ = ಮಧುರಸವೂ, ಎಳಿಲ್ = ಪ್ರಕಾಶವೂ. ಉತ್ತ = ಪೂರ್ಣವಾಗಿರುವ, ('ನರುಮಟ್ಟೊಳಿವತ್ತ' ಎಂದೂ ಪಾಠವುಂಟು, ಆಗ ಪರಿಮಳವೂ ಮಧುವೂ ಎಡಬಿಡದಿರುವ ಎಂದರ್ಥ), ನಲ್-ತುಳವ್ = ಅತ್ಯುತ್ತಮವಾದ ತುಲಸಿಯ ಮಾಲೆಯನ್ನು, ಏಂದಿಯ = ಧರಿಸಿರುವ, ನಾಯಕನಾರ್ = ಸರ್ವೇಶ್ವರನಾದ ಶ್ರೀಮನ್ನಾರಾಯಣನು, ನಿರೈ = ಪರಿಪೂರ್ಣವಾದ, ಮಟ್ಟ್ = ಅವಧಿ, ಇಲಾದ = ಇಲ್ಲದ, ನೆಡುಂ = ಸಂಪೂರ್ಣವಾದ, ಪಯನ್ = ಫಲವನ್ನು, (ನಿರವಧಿಕಾತಿಶಯ ಪರಿಪೂರ್ಣ ಬ್ರಹ್ಮಾನುಭವ ಕೈಂಕರ್ಯವನ್ನು), ಕಾಟ್ಟ = (ಪರಮಪದಕ್ಕೆ ಕರೆದುಕೊಂಡು, ಅಲ್ಲಿ ಪೂರ್ಣ ಬ್ರಹ್ಮಾನಂದವನ್ನು) ಅನುಭವಿಸುವಂತೆ ಮಾಡಲು, ನಿನ್ನೈತ್ತ್ = ಸಂಕಲ್ಪಿಸಿ, ಉಡಲ = ಸ್ಥೂಲಶರೀರವೆಂಬ, ಶಿರೈ = ಸೆರೆಯನ್ನು, ವೆಟ್ಟಿ-ವಿಟ್ಟ್ = ಸಂಪೂರ್ಣವಾಗಿ ನಾಶಮಾಡಿ, (ಪ್ರಾಕೃತಿಕಶರೀರದಿಂದ ಜೀವವನ್ನು ಹೊರಹೊರಡಿಸಿ) ವಳಿ-ಪಡುತ್ತಂ = ಅರ್ಚಿರಾದಿ ಮಾರ್ಗದಲ್ಲಿ ಹೋಗುವ, ವಹೈ = ರೀತಿಯನ್ನು, ಶೆಯ್ದಿಡುಮೇ = ಮಾಡಿ ಕರುಣಿಸುವನಲ್ಲವೆ !

ಉತ್ಕ್ರಾಂತಿಪರ್ವವಿದು. ಪ್ರಪನ್ನರನ್ನು ಸರ್ವಶರಣ್ಯನು ಪರಮಪದಕ್ಕೆ ಕರೆದುಕೊಳ್ಳುವನು. ಈ ಪ್ರಾಕೃತಶರೀರದಿಂದ ಬಿಡುಗಡೆಮಾಡಿ, ಅರ್ಚಿರಾದಿ ಮಾರ್ಗವಾಗಿ ಬಂದು ಸೇರುವಂತೆ ಪರಮ ದಯೆಯಿಂದ ಮಾಡುವನು.

**कोशावास्यसिवच्च मांसमयकायान्तर्वसद्योगिनः ।**
**कर्तुं पूर्णनिरन्तसद्गुणपरब्रह्मानुभूत्यात्मनः ॥**
**सौरभ्यामृतकान्तिपूर्णतुलसीमालोऽखिलाधीश्वरः ।**
**कारेवात्तवपु विनाश्य कुरुते रीतिं सुमार्गान्वितााम् ॥** १२

ಮೂಲ : ಮುನ್‌ಕರುವಿಯೀರ್ೈಂದುಂಮನತ್ತಿಲ್‌ಕೂಟ್ಟ
ಮುಕ್ಕಿಯಮಾಂ ಮರುತ್ತಿಲವೈಶೇರ್‌ತ್ತದೆಲ್ಲಾಂ,
ನನ್ಗುಣರುಮುಯಿರಿಲ್ ಶೇತ್ತ್ೈಂಬೂತತ್ತೈ
ನಣ್ಣುವಿತ್‌ತ್ತಾರ್ತನ್ನಾಲ್‌ವೈಕ್ಕುಂನಾತನ್,
ಒನ್ಬದುಡನ್‌ವಾಶಲಿರಂಡುಡೈತ್ತಾಯುಳ್ಳೇ
ಒರುಕೋಟಿತ್ತುಯರ್‌ವಿಳೈಕ್ಕು ಮುಡಂಬಾಯೊನ್ರುಂ,

ವನ್‌ಶಿರೈಯಿನ್‌ತಲೈವಾಶಲ್‌ತಿರನ್ದುನಮ್ಮೈ
ವಾನೇರವಳಿಪ್ಪಡುತ್ತಮನಮುತ್ತಾನೇ ॥ 13

ಅರ್ಥ :- ಮುನ್ = ಮೊದಲು, ಈರ್-ಐಂದ್-ಕರುವಿ-ಉಂ = (2 x5) ಹತ್ತು ಇಂದ್ರಿಯಗಳನ್ನೂ ಕೂಡ, ಮನತ್ತಿಲ್ = ಮನಸ್ಸಿನಲ್ಲಿ, ಕೂಟ್ಟ = ಮನಸ್ಸಿನೊಂದಿಗೆ ಸೇರಿಸಿ, ಅವ್ವೈ = ಮನಸ್ಸಿನೊಡನೆ ಕೂಡಿದ ಆ ಇಂದ್ರಿಯಗಳನ್ನು, ಮುಕ್ಕಿಯಂ-ಆಂ-ಮರುತ್ತಿಲ್ = ಮುಖ್ಯವಾದ ಪ್ರಾಣವಾಯುವಿನಲ್ಲಿ, ಶೇರ್ತ್ತು = ಸೇರಿಸಿ, ಅದೆಲ್ಲಾಂ = ಅವುಗಳೆಲ್ಲವನ್ನೂ, ನಲ್-ಗುಣರುಂ-ಉಯಿರಿಲ್ = ಒಳ್ಳೆಯ ಜ್ಞಾನವುಳ್ಳ ಆತ್ಮನಲ್ಲಿ, ಶೇರ್ತ್ತು = ಸೇರಿಸಿ (ಆ ಆತ್ಮನನ್ನು), ಐಂ-ಬೂತತ್ತೈ = ಐದುಸೂಕ್ಷ್ಮಭೂತಗಳೊಂದಿಗೆ, ನಣ್ಣುವಿತ್ತು = ಸೇರುವಂತೆಮಾಡಿ, ತಾ = ತಾನು, ತನ್-ಪಾಲ್. ವೈಕ್ಕುಂ = ತನ್ನವಶದಲ್ಲೇ ಇರಿಸಿಕೊಳ್ಳುವ, ನಾತನ್ = ಸ್ವಾಮಿಯಾದ ಪರಮಾತ್ಮನು, ಒನ್ಬದ್-ಉಡನ್-ಇರಂಡ್ (9+2 = 11) ವಾಶಲ್-ಉಡೈತ್ತಾಯ್ = (ಮೂಗುಹೊಳ್ಳೆ 2, ಕಿವಿ 2, ಕಣ್ಣು 2, ಬಾಯಿ 1, ಮೂತ್ರದ್ವಾರ 1, ಪಾಯು 1, ನಾಭಿ 1, ಬ್ರಹ್ಮನಾಡಿ 1 = 11) ಪ್ರಾಣ ಹೋಗುವ ಹನ್ನೊಂದು ಬಾಗಿಲುಗಳುಳ್ಳದ್ದಾಗಿ, ಉಳ್ಳೆ = ಒಳಗೆ, ಒರು-ಕೋಟಿ-ತುಯರ್ = ಲೆಕ್ಕವಿಲ್ಲದಷ್ಟು ದುಃಖಗಳನ್ನು, (ಜೀವನಿಗೆ) ವಿಳೈಕ್ಕುಂ = ಹೆಚ್ಚಿಸುವಂತಹ, ಉಡಂಬಾಯ್ = ಶರೀರವಾಗಿರುವ, ಒನ್ರುಂ = (ಯಾವುದಾದರೊಂದು) ಒಂದು, ವನ್ = ಬಲವಾದ, ಶಿರೈಯಿನ್ = ಸೆರೆಮನೆಯ, (ಶರೀರದ) ತಲೈ-ವಾಶಲ್ = ತಲೆಬಾಗಿಲನ್ನು, (ಬ್ರಹ್ಮರಂಧ್ರವನ್ನು) ತಿರಂದ್ = ತೆರಿಸಿಕೊಟ್ಟು, ನಮ್ಮೈ = (ಪ್ರಪನ್ನರಾದ) ನಮ್ಮನ್ನು, ವಾನ್-ಏರ = ಪರಮಪದಕ್ಕೆ ಸೇರಿಸುವ, ವಳಿ-ಪಡುತ್ತ = (ಅರ್ಚಿರಾದಿ) ಮಾರ್ಗದಲ್ಲಿ ಹೋಗಗೊಳಿಸುವ, ಮನಂ-ಉತ್ತಾನ್ = ಮನಸ್ಸುಳ್ಳವನಾದನು. (ಸಂಕಲ್ಪಿಸುವನು).

अक्षाण्यादौ द्विपश्च स्वमनसि कलयन् प्राणवायौ तत स्ता- ।
न्येकीकुर्वंश्च जीवे सुगुणवति तत स्सूक्ष्मभूतै स्सहाथो ॥
सर्वाण्येतानि तानि स्वयमवितुमधिष्ठाय हार्दःप्रभुस्सन् ॥
द्वारै रभ्यन्तरे च द्वययुतनवभिः वर्ष्मणो निर्मितस्य ॥ १

दृढबन्धनस्य मूर्धद्वारां चोद्घाटयन्नस्मान् ।
परमपदवर्त्म नेतुं संकल्पितवान् हि करुणालुः ॥ १३

ಮೂಲ : ತೆರುಳಾರ್ ಪಿರಮಪುರತ್ತಿರೈಶೇರ್‌ನ್ದಿಡವಂದವರ್ ತಾಂ,
ಅರುಳಾಲ್ ಪಿರಮಪುರಚ್ಚಿರೈತೀರ್‌ನ್ದಪಿನ್‌ವನ್ದೆದಿರ್‌ಕೊಂಡು,

ಅರುಳಾಲಮರರ್‌ನಡತ್ತ ವಿಮ್ಮಾಯ್ಯೆ ಕಡಂದದರ್‌ಪಿನ್,
ಶುರುಳಾರ್ ಬವನರಕಚ್ಚುಳಲಾತ್ತಿನ್ ತನ್‌ಶೂಳ್‌ಚ್ಚಿಯಿಲೇ ॥ 14

ಅರ್ಥ :- ತೆರುಳ್-ಆರ್ = ಜ್ಞಾನ ಪರಿಪೂರ್ಣನಾದ, ಪಿರಮಪುರತ್ತು = (ಬ್ರಹ್ಮಪುರವೆಂಬ ಹೆಸರಿನ) ಜೀವಶರೀರಕ್ಕೆ, ಇರೈ = ಸ್ವಾಮಿಯಾದ, (ಅಂತರ್ಯಾಮಿಯಾಗಿರುವ ಪರಮಾತ್ಮನನ್ನು) ಶೇರ್‌ನ್ದಿಡ = ಸೇರಿ ಹೊರಟ, ವಂದವರ್‌ತಾಂ = (ಶ್ರೀ ವೈಕುಂಠಕ್ಕೆ ಪ್ರಯಾಣ ಹೊರಟು) ಬಂದವರು, ಅರುಳಾಲ್ = (ಹಾರ್ದಸ್ವಾಮಿಯ) ಕೃಪೆಯಿಂದ, ಪಿರಮ-ಪುರ-ಚಿರೈ = ಬ್ರಹ್ಮಪುರವೆಂದು ಹೆಸರಾಂತ ಸ್ಥೂಲಶರೀರವೆಂಬ ಬಂಧವು, ತೀರ್‌ನ್ದ-ಪಿನ್ = ನೀಗಿಹೋದಮೇಲೆ, (''ಹಾರ್ದಾನುಗ್ರಹಲಬ್ಧ ಮಧ್ಯದಮನಿದ್ವಾರಾತ್ ಬಹಿರ್ನಿರ್ಗತಃ'' ಎಂಬುದನ್ನು ಸ್ಮರಿಸಬೇಕು) ಅಮರರ್ = (ಅರ್ಚಿರಾದಿಗಳು) ಆತಿವಾಹಿಕಪುರುಷರಾದ ದೇವತೆಗಳು, ಅರುಳಾಲ್ = ಅತ್ಯಂತ ಆದರದಿಂದ, ನಡತ್ತ = ತಮ್ಮತಮ್ಮ ಎಲ್ಲೆಯವರೆಗೆ ಕರೆದುಕೊಂಡು ಹೋಗಲು, ಇ-ಮಾಯ್ಯೆ = ಈ ಪ್ರಕೃತಿಮಂಡಲವನ್ನು, ಕಡಂದ-ತನ್-ಪಿನ್ = (ಅರ್ಚಿರಾದಿಮಾರ್ಗದಿಂದ) ಪರಮಪದಕ್ಕೆ ಹೋದವರು ಮತ್ತೆ, ಬವ-ನರಕ-ಶುಳಲ್-ಆತ್ತಿಲ್-ತನ್-ಶೂಳ್‌ಚ್ಚಿಯಿಲೆ = ಸಂಸಾರ ನರಕವೆಂಬ ಸುಳಿಗಳಿರುವ ನದಿಯ ಸುಳಿಯಲ್ಲಿ, ಶುರುಳಾರ್ = ಸಿಕ್ಕಿ ನರಳುವುದಿಲ್ಲ, (ಅರ್ಚಿರಾದಿ ಮಾರ್ಗದಿಂದ ಪರಮಪದ ಸೇರಿದವರು ತಿರುಗಿಯೂ ಈ ಭವಸಾಗರದಲ್ಲಿ ಸಿಕ್ಕಿಕೊಳ್ಳುವಂತೆ ಜನನವನ್ನು ಹೊಂದುವುದಿಲ್ಲ) (ಇದು ಅರ್ಚಿರಾದಿ ಪರ್ವದ ಪದ್ಯ.)

**साधे ब्रह्मपुरेशजीववपुषा सर्वज्ञहार्देन ये**
**बन्धात् ब्रह्मपुरात् तदीयकृपया प्रस्थापिता देहिनः ।**
**एतां सादरं अर्चिरादिविबुधै र्मायां समुत्तारिताः**
**मुक्तिस्था न पुनर्भवाघनिलयावर्तापगावर्तिनः ।। १४**

ಮೂಲ : ವಿಳಿಯಲ್ಲಾಲ್ ವೇಲಿಲ್ಲೈ ವಿಣ್ಣನ್‌ಮಾದರ್,
ಮೇನಿಯಲ್ಲಾಲ್ ವಿಲ್ಲಿಲ್ಲೈ ಮೀನವರ್ಕ್ಕ
ಮೊಳಿಯಲ್ಲಾಲಮುದಿಲ್ಲೈಯೆನ್ರುಮುನ್ನಾಳ್,
ಮುತ್ತಿವಳಿಮುನಿನ್ದದ್ವೈಂದಮೋಹಂತೀರ್ ನ್ದೋಂ,
ಕಳಿಯಲ್ಲಾಲ್‌ಕಡಲಿಲ್ಲೈ ಯೆನ್ಬಾರ್‌ಪೋಲ,
ಕಾರಿಯಮೇಕಾರಣಮೆನ್ರುರೈಪ್ಪಾರ್‌ಕಾಟ್ಟುಂ,

ವಳಿಯಲ್ಲಾವಳಿಯೆಲ್ಲಾಂ ಕಡನ್ದೋಂ ಮತ್ತುಂ,
ವಾನೇರುಂವಳಿಕಂಡೋಂ ಮಹಿಳ್ನ್ದಿಟ್ಟೋಮೇ ॥ 15

ಅರ್ಥ :- ಮುನ್ನಾಳ್ = ಹಿಂದೆಲ್ಲಾ (ನಾವು), ಮುತ್ತಿ-ವಳಿ = ಮುಕ್ತಿಯ ದಾರಿಯನ್ನು, ಮುನಿಂದ್ = ಅನಾದರಿಸಿ, ಮೀನವರ್ಕ್ = ಮೀನಕೇತನವಾದ ಮನ್ಮಥನಿಗೆ, ವಿಣ್ಣನ್-ಮಾದ್ = ದೇವಲೋಕ ಸ್ತ್ರೀಯರ, (ಅಂದರೆ ಅಷ್ಟು ಚೆಲುವೆಯರ), ವಿಳಿ-ಅಲ್ಲಾಲ್ = ಕಡೆಗಣ್ಣೋಟವನ್ನು ಬಿಟ್ಟರೆ, ವೇಲ್-ಇಲ್ಲೈ = (ಬೇರೆ) ಆಯುಧವೇ ಇಲ್ಲ, ಮೇನಿ-ಅಲ್ಲಾಲ್ = ಅವರ ಮಧುರವಾದ ಮಾತುಗಳು ಹೊರತು, ಅಮುದ್-ಇಲ್ಲೈ = ಬೇರೆ ಅಮೃತವನ್ನು ಸುರಿಸುವ ವಸ್ತು ಇಲ್ಲ, (ಇವೆಲ್ಲಾ ಮೋಕ್ಷಕ್ಕಿಂತ ಹೆಚ್ಚಿನವು) ಎನ್ರು = ಎಂದುಕೊಂಡು, ಅಡೈಂದ ಮೋಹಂ = ಬಹಳ ಹಿಂದಿನಿಂದ ಹೊಂದಿದ್ದ ವ್ಯಾಮೋಹವನ್ನು, ತೀರ್‌ನ್ದೋಂ = ಈಗತಾನೇ ಬಿಟ್ಟವರಾದೆವು, (ಅಷ್ಟೇ ಅಲ್ಲದೆ) ಕಳಿ-ಅಲ್ಲಾಲ್ = (ಸಮುದ್ರದ ಏಕದೇಶವಾದ) ನದೀಮುಖದ ಹೊರತು, ಕಡಲ್-ಇಲ್ಲೈ = ಸಮುದ್ರವೆಂಬುದು ಬೇರೊಂದಿಲ್ಲ, ಎನ್ಬಾರ್-ಪೋಲ = ಎಂದು ಹೇಳುವವರಂತೆ, ಕಾರಿಯಮೇ = ಭಗವಂತನ ಕಾರ್ಯವಾದ ಈ ಜಗತ್ತೇ, ಕಾರಣಂ = ಕಾರಣನಾದ ಪರಬ್ರಹ್ಮ, (ಜಗತ್ತು ಹೊರತು ಬೇರೆ ದೇವರೆಂಬ ವಸ್ತುವಿಲ್ಲ), ಎನ್ರು = ಎಂದು, ಉರೈಪ್ಪಾರ್ = (ಪ್ರಮಾಣವಿರುದ್ಧವಾಗಿ ಹೇಳುವ ಈಶ್ವರಾಪಲಾಪಿಗಳು), ಕಾಟ್ಟುಂ = (ತಮಗೆ ತೋರಿದಂತೆ) ತೋರಿಸುವ, ವಳಿ-ಅಲ್ಲಾ = ದಾರಿಯಲ್ಲದ, ವಳಿ-ಎಲ್ಲಾಂ = ಮಾರ್ಗಗಳನ್ನೆಲ್ಲಾ, ಕಡಂದೋಂ = ಬಿಟ್ಟುದಾಟಿಬಂದೆವು, (ಅಲ್ಲದೆ) ಮತ್ತ = ಅವಕ್ಕಿಂತ ಬೇರೆಯದಾದ, ವಾನ್-ಏರುಂ-ವಳಿ = (ಶ್ರೀ ವೈಕುಂಠಕ್ಕೆ ಹೋಗುವ) ಅರ್ಚಿರಾದಿ ಮಾರ್ಗವನ್ನು, ಕಂಡೋಂ = ನೋಡಿದವರಾದೆವು, (ಅಷ್ಟೇ ಅಲ್ಲದೆ) ಮಹಿಳ್ನ್ದ್-ಇಟ್ಟೋಂ = (ಆತಿವಾಹಿಕರಿಂದ ಸತ್ಕರಿಸಲ್ಪಟ್ಟು) (ಹಿಂದೆ ಪಟ್ಟ ಸಂಸಾರ ದುಃಖವೆಲ್ಲಾ ತೀರಿ ಅದಕ್ಕೆ ಬದಲಾಗಿ ಅತ್ಯಾನಂದ ಪಟ್ಟವರಾದೆವು.)

मोक्षं चोपेक्ष्य पूर्वं वय मिह विबुधस्त्रीकटाक्षं विनान्यत्
शस्त्रं नो मीनकेतो र्धनुरपि न विना तत्तनूभिः परं स्यात् ।
पीयूषं देवयोषिन्मधुरवचनतो नान्यदित्येव मत्या
व्यामोहं प्राप्तवन्त स्त मखिल मसहं प्राजहामातिशुद्धाः ॥ १

संभेदो जलधि र्न चापर इतीवेह ब्रुवाणै र्जनैः
कार्यं चैव हि कारणंत्विति वदद्भिर्दर्शितानध्वनः ।
सर्वानर्हपथोऽपि तेरिम वयं किंच प्रशस्तं पदं
गन्तुं सत्पथ मीक्षिषीमहि परं चानान्दिनोऽभूम च ॥ १५

ಮೂಲ : ವನ್‌ಪತ್ತುಡನ್‌ಮಯಲ್‌ಪೂಣ್ಡು ಮತ್ತೋರ್‌ಗತಿಯಾಲಿನನಾಳ್
ಎನ್‌ಪೆತ್ತದ್‌ಪೆರುನ್ದಾನಮು ಮೆತ್ತನೈಪೋದುಳದಾಂ,
ತುನ್‌ಬತ್ತತನ್‌ತುಣಿವಾಲ್ ತುಯರ್‌ತೀರ್‍ಕ್ಕುಂ
ತುಳಾಯ್‌ಮುಡಿಯಾನ್,
ಇನ್‌ಬುತ್ತನಲ್‌ವಳಿಯಾಲ್ ಏರುನರ್ ಪದಮೆಣ್ಣುವಮೇ ॥ 16

ಅರ್ಥ :- ವನ್-ಪತ್-ಉಡನ್ = ಪ್ರಬಲವಾದ ಆಯಾಕರ್ಮವಾಸನೆಯೊಂದಿಗೆ, ಮಯಲ್=ಸಂಸಾರ ಭ್ರಮಣದಲ್ಲೇ, ಪೂಂಡು = ಬಿಡದೆ ಹೊಂದಿಕೊಂಡು, ಮತ್-ಓರ್-ಗತಿಯಾಲ್ = ಬೇರೆ ಉಪಾಯದಿಂದ, ಇನ-ನಾಳ್ = ಇಷ್ಟು ಕಾಲವೂ, ಎನ್-ಪೆತ್ತದ್ = ಯಾವ ಪದವಿಯನ್ನು ಪಡೆಯಲಾಯಿತು ? (ಯಾವುದೂ ಇಲ್ಲ) ಪೆರುಂ-ತಾನವಮುಂ = ಹಿರಿದಾದ ಸ್ಥಾನವೂ (ಬ್ರಹ್ಮಾದಿ ಸ್ಥಾನವೂ) ಎತ್ತನೈ-ಪೋದು-ಉಳದಾಂ = ಅದೆಷ್ಟುಕಾಲ ಸ್ಥಿರವಾಗಿರಬಲ್ಲುದು ? (ಇದೆಲ್ಲವನ್ನೂ ಬಿಟ್ಟು ಈಗ) ತುನ್ಬ್-ಅತ್ತ = ದುಃಖ ಸಂಬಂಧವಿಲ್ಲದ, ತನ್-ತುಣಿವಾಲ್ = ತನ್ನನ್ನೇ (ಪರಮಾತ್ಮನನ್ನೇ) ಉಪಯೋಪೇಯವಾಗಿ ಆಶ್ರಯಿಸುವಂತಹ ವಿಶ್ವಾಸದಿಂದ (ಭಕ್ತಿ ಪ್ರಪತ್ತಿ ವಿಶೇಷ ಜ್ಞಾನದಿಂದ) ತುಯರ್-ತೀರ್‍ಕ್ಕುಂ = ದುಃಖವನ್ನು ವಿನಾಶ ಮಾಡುವ, ತುಳಾಯ್ ಮುಡಿಯಾನ್ = ತುಲಸೀ ಮಾಲೆಯನ್ನು ತಲೆಯಲ್ಲಿ ಧರಿಸಿ ಶ್ರೀಕೃಷ್ಣನ, ಇನ್ಬ್-ಉತ್ತ = ಪರಮ ಭೋಗ್ಯವಾದ, ನಲ್-ವಳಿಯಾಲ್ = ಒಳ್ಳೆಯ ಮಾರ್ಗದಿಂದ, (ಅರ್ಚಿರಾದಿ ಮಾರ್ಗದಿಂದ) ಏಡು = ಹೋಗಿ ಸೇರಬಹುದಾದ, ನಲ್-ಪದಂ = ಅತಿ ವಿಲಕ್ಷಣವಾದ ಪರಮ ಪದವನ್ನು ಎಣ್ಣುವಮೇ = ನೆನೆಯುವವರಾದೆವು ಅಲ್ಲವೇ ? (ಇದು ಪರಮಪದಾರೋಹಣದ ಪರ್ವವು)

तत्तत्संस्कृतिभि र्दृढै र्भवरतै रन्यै रुपायैः पदं
किं वाऽद्यावधि साधितं ? ह्यजपमदाद्येतत् कियत्कालिकम् ।
निर्दुःखात्मभरार्पणेन तुलसीमौलेः अघोन्मूलिनः
भोग्येनोत्तमवर्त्मनाप्यमतुलं ध्यायेम विष्णोः पदम् ॥ १६

ಮೂಲ : ಪಣ್ಡೈಯಿರುವಿನೈಯಾತ್ತಿಲ್ ಪಡಿನ್ದು ಪಾರಂ,
ಕಾಣಾದೇಯೊಳುಹಿಯನಾಂ ಬಾಗ್ಗಿಯತ್ತಾಲ್,
ವಣ್ಡಮರುಮಲರ್‌ಮಾದರ್ ಮಿನ್ನಾಯ್‌ಮನ್ನ,
ವೈಶಯನ್ತಿಮಣಿವಿಲ್ಲಾಯ್ ವಿಳಂಗವಾನ್‌ಶೇರ್,

ಕೊಣ್ಡಲರುಳ್‌ಮಳ್ಳೈಪ್ಪೊಳಿಯವನ್ದದೊಪ್ಪಾಂ,
ಕುಳಿರ್‌ನ್ದುತೆಳಿನ್ದಮುದಾಯ ವಿರಶ್ಯೆಯಾತ್ತ್ಯೈ,
ಕಣ್ಡಣುಹಿಕ್ಕರುತ್ತಾಲೇ ಕಡನ್ದುಮೀಳಾ,
ಕ್ಕರೈಕ್ಕಣ್ಡೋರ್ ಗತಿಯೆಲ್ಲಾಂಗತಿತ್ತಿಟ್ಟೋಮೇ ॥ 17

ಅರ್ಥ :- ಪಣ್ಡೈ-ಇರು-ವಿನ್ಯೈ-ಆತ್ತಿಲ್ = ಅನಾದಿಯಾದ ಪುಣ್ಯ ಪಾಪ ರೂಪವಾದ ಪ್ರವಾಹದಲ್ಲಿ, ಪಡಿನ್ದು = ಬಿದ್ದು, ಪಾರಂ-ಕಾಣಾದೇ = ದಡವನ್ನು ಕಾಣದೇ, ಒಳುಹಿಯ = ಕೊಚ್ಚಿಕೊಂಡು ಹೋಗುತ್ತಿರುವ, ನಾಂ = ನಾವು, ಬಾಗ್ಗಿಯತ್ತಾಲ್ = ಅದೃಷ್ಟವಶದಿಂದ, (ದೇವರ ದಯೆಯಿಂದ) ವಂಡ್-ಅಮರುಂ-ಮಲರ್-ಮಾದರ್ = ಭ್ರಮರಗಳು ರಸಪಾನಕ್ಕಾಗಿ ಮುತ್ತಿಕೊಂಡಿರುವ ತಾವರೆಯಲ್ಲಿ ವಾಸಮಾಡುವ ಮಹಾಲಕ್ಷ್ಮಿಯು, ಮಿನ್ನಾಯ್-ಮನ್ನ = ಕಾಳ ಮೇಘದ ನಡುವೆ ಸ್ಥಿರವಾಗಿ ಬೆಳಗುತ್ತಿರಲು, ವೈಶಯಂತೀ = ವೈಜಯಂತಿಯೆಂಬ ವನಮಾಲೆಯು, ಮಣಿ-ವಿಲ್-ಆಯ್ = ಮಣಿ ಮಯವಾದ ಇಂದ್ರ ಧನುಸ್ಸಿನಂತೆ, ವಿಳಂಗ = ಬೆಳಗಲು, ವಾನ್-ಶೇರ್-ಕೊಂಡಲ್ = ಪರಮಾಕಾಶದಲ್ಲಿರುವ ಶ್ರೀ ಪತಿಯೆಂಬ ನೀಲ ಮೇಘವು, ಅರುಳ್-ಮಳ್ಳೈ-ಪ್ಪೊಳಿಯ = ಕರುಣೆಯೆಂಬ ಮಳೆಯನ್ನು ಸುರಿಸಲು, ವಂದದ್-ಒಪ್ಪಂ-ಆಂ = ಬಂದಿತೋ ಎಂಬಂತಿರುವ, ಕುಳಿರ್ನ್ದು = (ಸಂಸಾರತಾಪವಾರುವಂತೆ) ಶೀತಳವಾದ, ತೆಳಿನ್ದ್ = ನಿರ್ಮಲವಾದ, ಅಮುದಾಯ = ಅಮೃತರೂಪವಾದ, ವಿರಶ್ಯೆ-ಆತ್ತೈ = ವಿರಜಾ ನದಿಯನ್ನು, ಕಣ್ಡು = ನೋಡಿ, ಅಣುಹಿ = ಸಮೀಪಿಸಿ, ಕರುತ್ತಾಲೆ = (ಭಗವತ್ಸಂಕಲ್ಪಾಧೀನವಾದ) ತನ್ನ ಸಂಕಲ್ಪದಿಂದ-ಕಡಂದು = ದಾಟಿ, ಮೀಳಾ-ಕರೈ-ಕಣ್ಡೋರ್ = ಹಿಂತಿರುಗಿ ಬರದಂತಿರುವ ಆಚೆಯ ದಡವನ್ನು ನೋಡುವ ಮುಕ್ತರ, ಗತಿ-ಎಲ್ಲಾಂ = ಮಾರ್ಗ ಸತ್ಕಾರವನ್ನೆಲ್ಲಾ, ಗತಿತ್ತಿಟ್ಟೋಮೇ = ವಿಸ್ತಾರವಾಗಿ ಹೇಳುವಂತೆ ಪಡೆದೆವು.

स्रोतस्विन्यामनादिद्विविधदुरितरूपापगायां पतित्वा
यातेष्वस्मास्वदृष्ट्वा निजनियतिवशात् चञ्चलायां स्थिरायाम् ।
माध्वीलिण्मानितेन्दीवरसुमविहरन्त्यां तथैवेन्दिरायां
राजन्त्यां वैजयन्त्यां मणिमयधनुराकारवत्यां च सत्यम् ॥ १

आकाशे परमे प्रवर्षति कृपां पाथोमुचीवागतां
स्वच्छां तां विरजां विलोक्य शिशिरां श्रीशस्य संकल्पतः ।
सन्तीर्याऽमृतवाहिनीं त्वपुनरावृत्त्यातपारेक्षिणां
मुक्तानां गतिसत्क्रिया श्च विशदीकर्तुं ह्यभूम क्षमाः ॥ १७

ಮೂಲ : ಪೂವಳರುಂ ತಿರುಮಾದುಪುಣರ್‌ನ್ದನಂ ಪುಣ್ಣಿಯನಾರ್,
ತಾವಳಮಾನತನಿತ್ತಿವಂ ಶೇರ್‌ನ್ದು ತಮರುಡನೇ,
ನಾವಳರುಂ ಪೆರುನಾನ್ಮರೈಯೋದಿಯಗೀತಮೆಲ್ಲಾಂ,
ಪಾವಳರುಂ ತಮಿೞ್‌ಪ್ಪಲ್ಲಾಂಡಿಶೈಯುಡನ್‌ಪಾಡುವಮೇ ॥ 18

ಅರ್ಥ :– ಪೂ-ವಳರುಂ-ತಿರು-ಮಾದು = ಕಮಲದಲ್ಲಿ ಬೆಳೆಯುವ ಶ್ರೀದೇವಿಯು, ಪುಣರ್‌ನ್ದ = ಆಲಂಗಿಸಿಕೊಂಡ, ನಂ-ಪುಣ್ಣಿಯನಾರ್ = ನಮ್ಮ ತಿಳಿಯದ ಸುಕೃತ ವಿಶೇಷಕ್ಕೆ ಮೂಲಕಾರಣಾದ ಶ್ರೀಮನ್ನಾರಾಯಣನಿಗೆ, ತಾವಳಮಾನ-ತನಿ-ತಿವಂ = ನಿತ್ಯವಾಸಸ್ಥಾನವಾಗಿಯೂ, ಆಪ್ಯಾಯಮಾನವಾಗಿಯೂ, ಅನುಪಮವಾಗಿಯೂ ಇರುವ ಪರಮಪದವನ್ನು, ಶೇರ್‌ನ್ದು = ಸೇರಿ, ತಮರ್-ಉಡನೇ = ನಿತ್ಯಸೂರಿಗಳೂ, ಮುಕ್ತರೂ ಆದವರೊಂದಿಗೆ, ನಾವಳರುಂ-ಪೆರುಂ-ನಾಲ್-ಮರೈ = ನಾಲಿಗೆಯಿಂದ ಉಚ್ಚರಿಸಲ್ಪಟ್ಟು ಶ್ಲಾಘ್ಯವಾದ ಉಪನಿಷತ್ತಿನಲ್ಲಿ, ಓದಿಯ-ಗೀತಂ-ಎಲ್ಲಾಂ = ಪಠಿಸುವ ಸಾಮಗಾನ ವಿಶೇಷವೆಲ್ಲವನ್ನೂ, ಪಾ-ವಳರುಂ-ತಮಿೞ್ = ಛಂದಸ್ಸಿನಲ್ಲಿ ರಚಿತವಾದ ತಮಿಳಿನ ವೇದದಲ್ಲಿ ಅಧ್ಯಯನ ಮಾಡಲ್ಪಡುವ, ಪಲ್-ಆಂಡ್-ಇಶೈ-ಉಡನ್ = ಪಲ್ಲಾಂಡೆಂದು ಪಾಡುವ ಕೆಲವು ಮಂಗಳಪದ್ಯಗಳೊಂದಿಗೆ, ಪಾಡುವಮೇ = ಕೀರ್ತನೆ ಮಾಡೋಣ, (ಯಥೇಚ್ಛವಾದ ಕೈಂಕರ್ಯ ಸೇವಾವೃತ್ತಿ ವಿಶೇಷವನ್ನು ಮಾಡಲು ಸಮರ್ಥರಾಗಿರುವೆವು.) ಇದು ಪರಿಪೂರ್ಣಾನುಭವಪರ್ವದ ಪದ್ಯ.

यस्याश्लिष्टोरसि श्रीरुपचितसुमना स्तस्य नः पुण्यहेतोः ।
नित्यावासप्रधानं निरुपमतिभोग्यं गता स्सम्मिलन्तः ।
मुक्तैः र्नित्यै रसज्ञापरिचितनिगमान्तस्थसामानुगानं
सर्वं छन्दोनिबद्धं द्रविडकृतिशुभाशासनं कीर्तयाम ।। १८

ಮೂಲ : ಅಡಲುರಗಮುಂಡುಮಿೞ್‌ನ್ದವರುಕ್ಕನ್ರೋಲ
ಅಳುಕ್ಕಡೈನ್ದುಕಳುವಿಯ ನಲ್‌ತರಳಂಪೋಲ,
ಕಡಲೊಳುಕಿಕ್ಕರೈಶೇರ್‌ನ್ದಕಲಮೇಪೋಲ
ಕಾಟ್ಟುತ್ತೀಕ್ಕಲನ್ರೊಳಿನ್ದಕಳಿರೇಪೋಲ,
ಮಡಲ್‌ಕವರುಂಮಯಲ್‌ಕಳಿನ್ದ ಮಾದರ್‌ಪೋಲ
ವನ್‌ಶಿರೈಪೋಯ್ ಮನ್ನರ್‌ಪದಂ ಪೆತ್ತಾರ್‌ಪೋಲ,
ಉಡನ್ಮುದಲಾವುಯಿರ್ ಮರೈಕ್ಕುಮಾಯೈನೀಂಗಿ
ಉಯರ್‌ನ್ದಪದಮೇರಿಯುಣರ್‌ನ್ದೊನ್ರಿನೋಮೆ ॥ 19

ಅರ್ಥ :- ಅಡಲ್-ಉರಗಂ = ಪ್ರಬಲವಾದ ಹಾವಾದ ರಾಹು ಗ್ರಹದಿಂದ, ಉಂಡು = ಗ್ರಸ್ತನಾಗಿ (ನುಂಗಲ್ಪಟ್ಟು) ಉಮಿಳ್‌ನ್ದ = ಮುಕ್ತನಾದ, (ಬಿಡಲ್ಪಟ್ಟ) ಅರುಕ್ಕನ್‌ಪೋಲ = ಅರ್ಕ (ಸೂರ್ಯ) ನಂತೆಯೂ, ಅಳುಕ್ಕ್-ಅಡ್ಯೆಂದ್ = (ಮೊದಲು) ಕೊಳೆ ಹಿಡಿದು, ಕಳುವಿಯ = (ಅನಂತರ) ಚೆನ್ನಾಗಿ ತೊಳೆಯಲ್ಪಟ್ಟ, ನಲ್-ತರಳಂ-ಪೋಲ = ಉತ್ತಮವಾದ ಮುತ್ತಿನಂತೆಯೂ, ಕಡಲ್ = ಸಮುದ್ರದಲ್ಲಿ, ಒಳುಹಿ = (ಚಂಡಮಾರುತದಿಂದ) ವಿಷಮಸ್ಥಿತಿಯಲ್ಲಿದ್ದು, ಕರೈ-ಶೇರ್‌ನ್ದ = ದಡವನ್ನು ಸೇರಿದ, ಕಲಂ-ಏ-ಪೋಲ = ನಾವೆಯಂತೆಯೂ, ಕಾಟ್ಟ್-ತೀ-ಕಲನ್ದ್ = ಕಾಡುಕಿಚ್ಚಿನಲ್ಲಿ ಸಿಕ್ಕಿಕೊಂಡು, ಒಳಿಂದ = ಬದುಕಿ ಹೊರಕ್ಕೆ ಬಂದ, ಕಳಿರೇ-ಪೋಲ = ಆನೆಯಂತೆಯೂ, ಮಡಲ್-ಕವರುಂ-ಮಯಲ್-ಕಳಿಂದ = (ನಾಯಕನನ್ನು ಆಗಲಿ ಅವನನ್ನು ವಶಪಡಿಸಿಕೊಳ್ಳಲು ಪಡುವ) ಅವಸ್ಥೆಗೆ ಸಿಲುಕಿ, ನೊಂದು, ನಾಯಕನನ್ನು ಪಡೆದು ಆ ಸ್ಥಿತಿಯನ್ನು ಕಳೆದ, ಮಾದರ್-ಪೋಲ = ಯುವತಿಯಂತೆಯೂ, ವನ್-ಶಿರೈ = ಕಷ್ಟತರವಾದ ಸೆರೆಯು, ಪೋಯ್ = ಹೋಗಿ, ಮನ್ನರ್-ಪದಂ = ರಾಜಪದವಿಯನ್ನು, ಪೆತ್ತಾರ್-ಪೋಲ = ಪಡೆದ ರಾಜಕುಮಾರನಂತೆಯೂ, (ಕಾರಣಾಂತರದಿಂದ ಸೆರೆಯಲ್ಲಿದ್ದು ಬಿಡುಗಡೆಯಾದ ರಾಜಕುಮಾರನು ಮತ್ತೆ ರಾಜ್ಯವನ್ನು ಪಡೆಯುವಂತೆ ಎಂದು ಭಾವ) ಉಡಲ್-ಮುದಲಾ = ಶರೀರ ಮೊದಲಾದವುಗಳಿಂದ ! ಉಯಿರ್ = ಜೀವವನ್ನು, ಮರೈಕ್ಕುಂ = ಮರೆಮಾಡುವ, ಮಾಯೈ - ಮಾಯೆಯನ್ನು, (ಪ್ರಕೃತಿಯನ್ನು), ನೀಂಗಿ = ಬಿಟ್ಟುಬಂದು, ಉಯರ್‌ನ್ದ-ಪದಂ = ಉತ್ತಮಪದವಿಯಾದ ಪರಮಪದವನ್ನು, ಏರಿ = ಹತ್ತಿ, (ಸೇರಿ) ಉಣರ್‌ನ್ದ್ = ಸಮಸ್ತಾನಂದನುಭವವನ್ನು ಪಡೆದು, ಒನ್ರಿನೋಮೇ = ಶ್ರೀಮನ್ನಾರಾಯಣನೊಂದಿಗೆ ಅವನಲ್ಲಿ ಅಂತರ್ಭೂತನಾಗುವುದನ್ನು ''ಅವಿಭಾಗೇನದೃಷ್ಟಾತ್'' ಎಂಬಂತೆ ಸೇರಿರುವವರಾದೆವಲ್ಲವೆ ? (ಸಂಸಾರವನ್ನು ನೀಗಿ ಪರಮಪದ ಸೇರಿ, ಪರಮಾನಂದ ನಿರ್ಭರರಾಗುವುದನ್ನು ಹಲವಾರು ದೃಷ್ಟಾಂತಗಳೊಡನೆ ವಿವರಿಸಿದೆ.)

**दुर्वारोरुपराक्रमोरगनिगीर्णोऽर्को विमुक्तो यथा**
**मालिन्यात्तविशोधितातिविमला मुक्ताऽतिमूल्येव च ।**
**पारावारविपत्पराहतिमती नौकेव पारं गता**
**निर्मुक्तो वनवह्निना परिवृतो दन्तीव सन्तापितः ॥ १**

**कान्तेवाश्लिष्टकान्ता वशयितुमवशं क्लेशिताप्त्याऽथ हृष्टा**
**बन्धादुग्राद्विमुक्तो धरणिपतिसुतो लब्धराज्यो यथा वा ।**
**आत्मानं छादयन्तीं प्रकृतिमिह विहायैव देहादिरूपां**
**धाम प्राप्यानुभूयोन्नतमतिसुखदं चैकतां प्राप्नवाम ॥ ११**

ಮೂಲ : ಮಣ್ಣುಲಹಿಲ್‌ಮಯಲ್‌ತೀರ್‌ನ್ದು ಮನಂತಳುಂ(ದುಂ)ಬಿ
ಮನ್ನಾದಪಯನಿಹಳ್‌ನ್ದುಮಾಲೇಯನ್ರಿ,
ಕಣ್ಣಲತೆನ್ರಂಜಿಯವನ್‌ಕಳಲೇಪ್ಪೊಣ್ಣು
ಕಡುಂ ಶಿರೈಪ್ಪೋಯ್‌ಕರೈಯೇರುಂಗತಿಯೇಶೆನ್ರು,
ವಿಣ್ಣುಲಹಿಲ್ ವಿಯಪ್ಪೆಲ್ಲಾಂ ವಿಳಂಗಕ್ಕಂಡ್
ವಿಣ್ಣವರ್‌ತಂಕುಳಾಂಗಳುಡನ್ ವೇದಂಪಾಡಿ,
ಪಣ್ಣುಲಹಿಲ್‌ಪಡಿಯಾದ ವಿಶ್ಶೈಯಾಲ್ಪಾಡುಂ
ಪಲ್ಲಾಂಡೇ ಪಲ್ಲಾಂಡುಂ ಪಾಡುವ್ವೋಮೇ ॥ 20

ಅರ್ಥ :- ಮಣ್-ಉಲಹಿಲ್ = ಭೂಲೋಕದಲ್ಲಿ, ಮಯಲ್ = ವ್ಯಾಮೋಹವನ್ನು (ಸ್ವಪರಸ್ವರೂಪಗಳಲ್ಲಿ ಅನ್ಯಥಾ ಜ್ಞಾನವನ್ನು) ತೀರ್‌ನ್ದು = ಬಿಟ್ಟು ವಿವೇಕಹೊಂದಿ, (ಆಚಾರ್ಯರು ಉಪದೇಶಿಸಿದ ಶಾಸ್ತ್ರದ ಮೂಲಕ ಸ್ವಪರಸ್ವರೂಪಜ್ಞಾನವೆಂಬ ವಿವೇಕವನ್ನು ಪಡೆದು ಎಂದರ್ಥ. ಈ ಪರಮಪದ ಸೋಪಾನದ ಮೊದಲನೆಯ ವಿವೇಕಪರ್ವ ಸೂಚಿತವಾಯಿತು) ಮನಂ = ಮನಸ್ಸು, ತಳುಂಬಿ = ತತ್ತಳಿಸಿ (ವಿವೇಕವು ಬಂದಮೇಲೆ ತಾನು ಅನಾದಿಕಾಲದಿಂದ ಸಂಸಾರದಲ್ಲಿ ಪಾಡುಪಟ್ಟುದನ್ನು ನೋಡಿ ದುಃಖಿಸುವುದು, ಇದೇ ನಿರ್ವೇದವೆಂಬುದು. ಇದರಿಂದ 2ನೆಯ ನಿರ್ವೇದಪರ್ವದ ವಿಷಯಸೂಚಿತವಾಗುತ್ತದೆ) ಮನ್-ಆದ-ಪಯನ್-ಇಹಳ್‌ನ್ದು = ಸ್ಥಿರವಲ್ಲದ ಫಲಗಳನ್ನು ಬಿಟ್ಟು, (ನಿರ್ವೇದ ಬಂದಮೇಲೆ ಐಶ್ವರ್ಯಾದಿ ಪ್ರಯೋಜನಾಂತರಗಳ ಅಲ್ಪತನವನ್ನೂ, ಅಸ್ಥಿರತೆಯನ್ನೂ, ಇತರ ದೋಷಗಳನ್ನೂ ಪರಾಮರ್ಶಿಸಿ, ಪೂರ್ತಿಯಾಗಿ ತ್ಯಜಿಸಿ ಎಂದರೆ ವಿರಕ್ತಿಗೊಂಡು ಎಂದರ್ಥ. ವಿರಕ್ತಿಪರ್ವತೋರುತ್ತೆ.) ಮಾಲೇ-ಅನ್ರಿ-ಕಣ್ಣಲದ್-ಎನ್ರು = (ಮೋಕ್ಷವನ್ನು ಕೊಡಲು ಸಮರ್ಥನಾದವನು) ಶ್ರೀವಲ್ಲಭನೊಬ್ಬನೇ ಹೊರತು ಬೇರೆ ಯಾರೂ ಇಲ್ಲವೆಂದು, ಅಂಜಿ = ಹೆದರಿ, ಅವನ್-ಕಳಲೇ-ಪ್ಪೊಂಡು = (ಸ್ವಾಧಿಕಾರಾನುರೂಪವಾಗಿ ಭಕ್ತಿ ಪ್ರಪತ್ತಿಗಳಿಂದ, ಆ ಶರಣ್ಯನ ಪಾದಾರವಿಂದಗಳನ್ನೇ ಆಶ್ರಯಿಸಿ, ಕಡುಂ-ಶಿರೈ-ಪ್ಪೋಯ್ = (ಪ್ರಾರಬ್ಧಕರ್ಮಾಧೀನವಾದ ಈ ದೇಹದ ಅವಸಾನದಲ್ಲಿ) ಅತಿಕ್ರೂರವಾಗಿರುವ ಸ್ಥೂಲ ದೇಹವನ್ನು ಬಿಟ್ಟು ಕರೈ-ಏರುಂ-ಗತಿಯೇ-ಶೆನ್ರು = ಸಂಸಾರ ಸಾಗರದ ಆಚೆದಡವಾದ ಪರಮಪದವನ್ನು (ಹೋಗುವ ಮಾರ್ಗವಾದ) ಅರ್ಚಿರಾದಿ ಮಾರ್ಗದಿಂದ ಸೇರಿ, ವಿಣ್-ಉಲಹಿಲ್ = ಭೂಲೋಕದಲ್ಲಿರುವ, ವಿಯಪ್ಪೆಲ್ಲಾಂ = ಅತ್ಯಾಶ್ಚರ್ಯವಾದುವೆಲ್ಲವೂ, ವಿಳಂಗ = ಕಂಗೊಳಿಸಲು, ಕಂಡು = ನೋಡಿ, (ಶ್ರೀ ವೈಕುಂಠ ಗದ್ಯದಲ್ಲಿ ಅನುಸಂಧಾನ

ಮಾಡುತ್ತಿದ್ದುದೆಲ್ಲವನ್ನೂ ಅತ್ಯದ್ಭುತ ರೀತಿಯಲ್ಲಿ ಅನುಭವಿಸಿ) ವಿಣ್ಣವರ್-ತಂ- = ನಿತ್ಯರ ಮತ್ತು ಮುಕ್ತರ, ಕುಳಾಂಗಳ್-ಉಡನ್ = ಗೋಷ್ಠಿಗಳೊಂದಿಗೆ, ವೇದಂ-ಪಾಡಿ = ಸಾಮಗಾನವನ್ನು ಮಾಡಿ, ಪಣ್ಣುಲಹಿಲ್ = (ಪಣ್ = ರಾಗವಿಶೇಷ ಉಲಹ್ = ಸಮೂಹ) ಪ್ರಕೃತಿಮಂಡಲದಲ್ಲಿ ಕೇಳಿ ಬರುವ ರಾಗಗಳಲ್ಲಿ, ಪಡಿಯಾದ = ಸೇರದಿರುವ (ಅತಿವಿಲಕ್ಷಣವಾದ) ಇಶೈಯಾಲ್ = ಅಪ್ರಾಕೃತವಾದ ದೇವಗಾನ ವಿಶೇಷಗಳಿಂದ, ಪಾಡುಂ = ಹಾಡುವಂತಹ, ಪಲ್ಲಾಂಡೇ-ಪಲ್ಲಾಂಡುಂ = ''ಬಹಳ ಕಾಲಮಂಗಳವಾಗಲಿ'' ಎಂದರ್ಥ ಬರುವಂತೆ ಮಂಗಳಾಶಾಸನಗಳನ್ನು, ಪಾಡುವೋಮೇ = ಸೇವಾರೂಪವಾಗಿ ಹಾಡುವವರಾಗುವೆವು.

भूमौ मोहं विसृज्य प्रचकितमनसोऽथो फलान्यस्थिराणि
त्यक्त्वा सम्यक् विमुक्तिप्रद इह कमलाक्षान्न चान्य स्समर्थः ।
इत्यालोच्यातिभीता स्तदुभयपदपद्माश्रिता उग्रबन्धात्
विस्रस्ताः पार माप्तुं परमपद मिता अर्चिराद्यैव गत्या ॥ १

तत्रालोक्याद्भुतानि क्षितितलविदिताश्चर्यरीत्यैव सर्वा-
ण्याम्नायं साम गात्वा परमपदलसन्नित्यमुक्तै स्समं च ।
नानारागप्रपञ्चापरिचितमधुरापूर्वरागैकगेयं
गायामानन्तकालं शुभभरितसमाशासनं माधवस्य ॥ २०

ಮೂಲ : ಮಾಳಾದವಿನ್ನೈಯನ್ನೈತ್ತುಂ ಮಾಳನಾಂಪೋಯ್
ವಾನೇರಿಮಲರ್‌ಮಗಳಾರನ್ಬುಪ್ಪೂಣುಂ,
ತೋಳಾದ ಮಾಮಣಿಕ್ಕುತ್ತೊಂಡು ಪೂಂಡು
ತೊಳುದುಹನ್ದುತೋತ್ತಿರಂಗಳ್ ಪಾಡಿಯಾಡಿ
ಕೇಳಾದಪಳೈಮರೈಯಿನ್‌ಗೀತಂಕೇಟ್ಟ್
ಕ್ಕಿಡೈಯಾದಪೇರಿನ್ಬಂ ಪೆರುಹನಾಳುಂ,
ಮೀಳಾದಪೇರಡಿಮೈಕ್ಕನ್ಬುಪೆತ್ತೋಂ
ಮೇದಿನಿಯಿಲಿರುಕ್ಕಿನ್ರೋಂ ವಿದಿಯಿನಾಲೇ ॥ 21

ಅರ್ಥ :- ನಾಂ = ನಾವು, ಮಾಳಾದ = ಮತ್ತಾವುದರಿಂದಲೂ ನಿವಾರಿಸಿಕೊಳ್ಳಲಾಗದ, ವಿನ್ನೈ-ಅನ್ನೈತ್ತುಂ = ಪಾಪಗಳೆಲ್ಲವೂ, ಮಾಳ = ನಾಶವಾಗಲು,

ಪೋಯ್ = (ಅರ್ಚಿರಾದಿ ಮಾರ್ಗದಿಂದ) ಹೋಗಿ, ವಾರ್-ಏರಿ = ಪರಪದವನ್ನು ಸೇರಿ, ಮಲರ್-ಮಗಳ್-ಆರ್ = ಮಹಾಲಕ್ಷ್ಮಿಯ, ಅನ್ಬು-ಪೂಣುಂ = ಪ್ರೀತಿಯಿಂದ ಉರಸ್ಸಿನಲ್ಲಿ ಭೂಷಣದಂತೆ ಧರಿಸಲ್ಪಟ್ಟಿರುವ, ತೋಳಾದ = ಸ್ವಲ್ಪವೂ ತುಳುಕಾಡದ, ಮಾ-ಮಣಿಕ್ಕು = ಮಹಾನೀಲರತ್ನಸ್ಥಾನೀಯನಾದ ಶ್ರೀಮನ್ನಾರಾಯಣನಿಗೆ, ತೊಂಡು = ಸೇವೆಮಾಡಲ್ಪಡುವುದರಲ್ಲಿ, ಪೂಂಡು = ಅತ್ಯಂತ ಸಕ್ತರಾಗಿ, ತೊಳುದು = ಪ್ರಣಮಿಸಿ, ಉಹನ್ದು = ಸಂತುಷ್ಟರಾಗಿ, ತೋತ್ತಿರಂಗಳ್-ಪಾಡಿ = ಗುಣಾನುಭವದ ಸ್ತೋತ್ರಗಳನ್ನು ಕೀರ್ತನೆ ಮಾಡುತ್ತಾ, ಆಡಿ = ನರ್ತಿಸುತ್ತಾ, ಕೇಳಾದ = (ಬದ್ಧದೆಸೆಯಲ್ಲಿ) ಎಂದೂ ಕೇಳಲಾಗದಂತಹ, ಪಳ್ಳೈ-ಮರೆಯಿನ್ = ಅನಾದಿಯಾದ ಸಾಮವೇದದ, ಗೀತಂ = ಗಾನವನ್ನು, ಕೇಟ್ಟು = ಕೇಳಿ, ಕಿಡೈಯಾದ = ಪಡೆಯಲಾಗದಂತಹ, ಪೇರ್-ಇನ್ಬಂ = ಅತಿಶಯಾನಂದವು, ಪೆರುಹ = ಪ್ರವಾಹದಂತೆ ಮೇಲೆ ಮೇಲೆ ಉಕ್ಕಿಬರುತ್ತಿರಲು, ನಾಳುಂ = ಎಂದೆಂದಿಗೂ, ಮೀಳಾದ = ಮತ್ತೆ ಹಿಂತಿರುಗಿ ಬಾರದಂತಹ, ಪೇರ್-ಅಡಿಮೈಕ್ಕು = ನಿರತಿಶಯಕೈಂಕರ್ಯಕ್ಕೆ, ಅನ್ಬು-ಪೆತ್ತೋಂ = ಪರಮಭಕ್ತಿಯನ್ನು ಪಡೆದೆವು, ವಿದಿಯಿನಾಲೆ = ದೈವದ ಬಲದಿಂದ, ಮೇದಿನಿಯಲ್-ಇರುಕ್ಕಿನ್ರೋಂ = ಭೂಮಿಯಲ್ಲಿರುತ್ತಿರುವೆವು.

ತಾತ್ಪರ್ಯ :- ಮೊದಲು ಪರಮಾತ್ಮನ ಕಟಾಕ್ಷಕ್ಕೆ ಪಾತ್ರರಾಗಿ, ಸದಾಚಾರ್ಯರ ಮೂಲಕ ಭಗವತ್ಸಮಾಶ್ರಯಣವನ್ನು ಪಡೆದಿರುವ ನಾವು ಶರಣಾಗತಿ ವಶೀಕೃತನಾದ ಸರ್ವಶರಣ್ಯನ ದಯೆಯಿಂದ ಮತ್ತಾವುದರಿಂದಲೂ ಹೋಗಲಾಡಿಸಲಾಗದ ಪಾಪವೆಲ್ಲವನ್ನೂ "ಸರ್ವಪಾಪೇಭ್ಯೋಮೋಕ್ಷಯಿಷ್ಯಾಮಿ" ಎಂಬ ಉಕ್ತಿಯ ಕ್ರಮದಲ್ಲಿಯೂ, ಪ್ರಾರಬ್ಧೇತರ ಪೂರ್ವಪಾಪಮಖಿಲಂ" ಎಂಬ ಆಚಾರ್ಯರ ಸೂಕ್ತಿಯಂತೆಯೂ, ಸಂಪೂರ್ಣವಾಗಿ ನೀಗಿಕೊಂಡು, ಅರ್ಚಿರಾದಿ ಮಾರ್ಗವಾಗಿ ವಿರಜಾನದಿಯ ಆಚೆದಡದಲ್ಲಿರುವ ಪರಮಪದವನ್ನು ಸೇರಿ, ಮಹಾಲಕ್ಷ್ಮಿಯ ಪ್ರೀತಿಯಿಂದ ಅವಳ ವಕ್ಷಸ್ಥಳದ ಆಭರಣವಾದ ಮಹಾನೀಲಮಣಿಯಂತೆ ರಾರಾಜಿಸುವ ಶ್ರೀ ವಲ್ಲಭನ ಸೇವೆಯಲ್ಲಿ ಅತ್ಯಂತ ಆಸಕ್ತರಾಗಿ, ಪ್ರಣಾಮಗಳನ್ನರ್ಪಿಸುತ್ತಾ, ನಿರತಿಶಯ ಕಲ್ಯಾಣಗುಣಗಳನ್ನು, ಕಂಡು ಅತಿಸಂತುಷ್ಟರಾಗಿ, ಆ ಸದ್ಗುಣಗಳನ್ನು ಮನದಣಿಯ ಮಧುರತಮಪದಗಳಿಂದ ಸ್ತೋತ್ರಮಾಡುತ್ತಾ, ಅಷ್ಟಕ್ಕೇ ಪರ್ಯಾಪ್ತಿಗೊಳ್ಳದೆ ಪರವಶರಾಗಿ ನರ್ತಿಸುತ್ತಾ, ಬದ್ಧದೆಸೆಯಲ್ಲೆಂದೂ ಕೇಳಲಾಗದಂತಹ ಅನಾದಿಯಾದ ಸಾಮವೇದಗಾನವನ್ನು ಕೇಳಿ, ಎಂದೂ ಲೀಲಾವಿಭೂತಿಯಲ್ಲಿ ಲಭಿಸದಂತಹ ಅಮೃತದ ಹೊನಲಿನಂತಹ ನಿರತಿಶಯವಾದ ಆನಂದವುಂಟಾಗಲು, ಕಾಲತತ್ವವಿರುವ ತನಕವೂ ಮತ್ತೆಂದೂ ಹಿಂತಿರುಗದಂತಹ ಸರ್ವದೇಶಸರ್ವಕಾಲ ಸರ್ವಾವಸ್ಥೆಗಳಿಗೂ ಉಚಿತತಮವೂ, ನಿತ್ಯವೂ, ನಿರವದ್ಯವೂ, ನಿರತಿಶಯವೂ ಆದ ಕೈಂಕರ್ಯಸಾಮ್ರಾಜ್ಯ ಪಡೆಯಲು ಅದಕ್ಕನುಗುಣವಾದ ಪರಮಭಕ್ತಿಯನ್ನು ಈ ಲೀಲಾ ವಿಭೂತಿಯಾದ ಭೂ ಮಂಡಲದಲ್ಲೇ ಪಡೆದವರಾಗಿರುವೆವು. ಪರಮಭಕ್ತಿಲಾಭವಾದ

ನಂತರ ಮುಕ್ತರಾಗುವರೆಂಬುದನ್ನು ಶಾಸ್ತ್ರವು ಘೋಷಿಸಿದರೂ ಮೇಲೆ ಹೇಳಿದಂತಹ ಅಧಿಕಾರಿಗಳು ಇಲ್ಲೇ ಇನ್ನೂ ಇರಲು ಕಾರಣ ಆ ಪರಮಾತ್ಮನ ಸತ್ಯಸಂಕಲ್ಪವೊಂದೇ, ಆ ಶರಣ್ಯನ ದಯಾಬಲವೇ ಬಲಾತ್ಕಾರವಾಗಿ ತನ್ನ ಸಂಕಲ್ಪಕಾಲಾವಧಿ ಈ ಲೀಲಾವಿಭೂತಿಯಲ್ಲಿ ಈ ಚೇತನದ ಮೂಲಕ ಲೋಕವನ್ನು ತಿದ್ದಿ ಸನ್ಮಾರ್ಗಕ್ಕೆ ತರಬೇಕೆಂಬ ದಯೆಯಿಂದ ಇರುತ್ತಿರುವೆವು ಅಷ್ಟೆ, ಇಲ್ಲಿರಲು ಮತ್ತಾವಕಾರಣವೂ ಇಲ್ಲ, ಮುಕ್ತರಾಗಿ ನಿತ್ಯಾನಂದಭರಿತರಾಗುವ ಯೋಗ್ಯತೆಯಿದ್ದರೂ ಇಲ್ಲೇ ಇರುವ ಕಾರಣವೇನಿರಬಹುದು? ಎಂದು ಆಶ್ಚರ್ಯಗೊಂಡರೆ ಅದರ ಸಕಾರಣವಾದ ಉತ್ತರದ ಸಮಾಧಾನವಿದು.

दुर्वाराखिलदुष्कृते विगलिते पूता वयं प्रस्थिता:
मुक्तिं प्राप्य समाश्रयस्य कमलावक्षोविभूषामणे: ।
श्रीनाथस्य नियोजिता: करुणया सेवारसास्वादने
नेत्वा तुष्टहृदश्च सद्गुणनुतीरुद्गाय सन्नर्त्य च ॥ १

आकर्ण्याश्रुतपूर्वकर्णमधुरं गानं च सामश्रुते:
आकालं त्वतिदुर्लभे प्रवहति स्वानन्द उद्बोधसि ।
भक्तिं तां परमामवाप्नुम तथानावृत्तसेवाप्तये
मेदिन्यां तु लभामहे विधिबलोत्कर्षान्निवासं परम् ॥ २१

गुरु स्त्रय्यन्तार्य: परमपदसोपान मिति या:
हिताय व्यातेने द्रविडगिरि गाथा स्सुमनसाम् ।
विपश्चित् गोपालो व्यवृणुत च कर्णाटकगिरा
सुरोक्त्या च श्लोकीचकर परयाचार्यकृपया ॥

॥ಶ್ರೀಃ॥

॥ಶ್ರೀಮತೇ ನಿಗಮಾಂತಮಹಾದೇಶಿಕಾಯ ನಮಃ ॥

# ಪರಮತಭಂಗಃ

ಶ್ರೀಮದಾಚಾರ್ಯರು ''ಪರಮತಭಂಗ''ವೆಂಬ ಗ್ರಂಥವನ್ನು ಮಣಿಪ್ರವಾಳರೂಪವಾದ ತಮಿಳಿನಲ್ಲಿ ವಿರಚಿಸಿರುವರು. ಇತರ ಮತಗಳನ್ನು ಖಂಡಿಸಿ ತಮ್ಮ ಸಿದ್ಧಾಂತವನ್ನು ಸ್ಥಾಪಿಸಿರುವರು. ಪ್ರತಿಯೊಂದು ಭಂಗದಲ್ಲಿಯೂ ಮೊದಲು ಮತ್ತು ಕೊನೆಯಲ್ಲಿ ತಮಿಳು ಪಾಶುರಗಳಲ್ಲಿ ಆಯಾ ಅಧಿಕಾರದ ವಿಷಯವನ್ನು ಸಂಗ್ರಹವಾಗಿ ನಿರೂಪಿಸಿರುವರು. ಇಂತಹ ಪಾಶುರಗಳು ಒಟ್ಟು 54 ಇವೆ. ಇವುಗಳ ವಿವರ್ತವನ್ನು ಈ ಕೆಳಕಂಡ ರೀತಿ ವಿಶದಪಡಿಸಿರುವರು :-

1, 2, 3 ಪಾಶುರಗಳ ಪ್ರಸ್ತಾವನೆ. 4-5ರಲ್ಲಿ ಜೀವತತ್ವ, 6-7ರಲ್ಲಿ ಅಚಿತ್ತತ್ತ್ವ, 8-9ರಲ್ಲಿ ಪರತತ್ತ್ವ, 10-11ರಲ್ಲಿ ಸಮುದಾಯ ದೋಷೋದ್ಘಾಟನೆ, 12-13ರಲ್ಲಿ ಚಾರ್ವಾಕ (ಲೋಕಾಯತಮತ) ಖಂಡನ, 14-15ರಲ್ಲಿ ಮಾಧ್ಯಮಿಕ ಭಂಗ, 16-17ರಲ್ಲಿ ಯೋಗಾಚಾರಮತಭಂಗ, 18-19ರಲ್ಲಿ ಸೌತ್ರಾಂತಿಕ ಮತಭಂಗ, 20-21ರಲ್ಲಿ ವೈಶೇಷಿಕಭಂಗ, 22-23ರಲ್ಲಿ ಅದ್ವೈತ ಭಂಗ, 24-25ರಲ್ಲಿ ಜೈನಮತಭಂಗ, 26-27ರಲ್ಲಿ ಭಾಸ್ಕರಾದಿಮತಭಂಗ, 28-29ರಲ್ಲಿ ವೈಯ್ಯಾಕರಣಮತಭಂಗ, 30-31ರಲ್ಲಿ ಕಣಾದ (ವೈಭಾಷಿಕ) ಮತಭಂಗ, 32-33ರಲ್ಲಿ ಗೌತಮ (ನ್ಯಾಯ) ಮತಭಂಗ, 34-35ರಲ್ಲಿ ಮೀಮಾಂಸಕಮತಭಂಗ, 36-37ರಲ್ಲಿ ಸಾಂಖ್ಯಮತಭಂಗ, 38-39ರಲ್ಲಿ ಯೋಗಮತಭಂಗ, 40-41-42ರಲ್ಲಿ ಪಾಶುಪತ (ಶೈವ) ಮತಭಂಗ, 43-44ರಲ್ಲಿ ಶ್ರೀ ಪಾಂಚರಾತ್ರಾಗಮದ ಪರಮಶ್ರೇಷ್ಠತೆ, 45-46-47ರಲ್ಲಿ ಪರೋಕ್ತೋಪಾಯಭಂಗ, 48-49ರಲ್ಲಿ ಪರೋಕ್ತಪ್ರಯೋಜನಭಂಗ, 50 ರಿಂದ 54ರವರೆಗೆ ಪೂರ್ತಿ ನಿಗಮನ.

ಪ್ರತಿಯೊಂದು ಮತದ ಸಾರಾಂಶವನ್ನು ಮಾತ್ರ ಪ್ರಸ್ತಾವಿಸಿ, ದೋಷಗಳನ್ನು ನಿರೂಪಿಸಿ, ತಮ್ಮಭಿಪ್ರಾಯದೊಂದಿಗೆ ಗ್ರಂಥವು ಬೆಳೆದು ಬೆಳಗಿದೆ. ಎಲ್ಲದರ ವಿಸ್ತಾರವಾದ ವಾದವನ್ನು ನಿರೂಪಿಸಲು ಗ್ರಂಥಬಾಹುಳ್ಯದ ಭೀತಿಯಿಂದ ಆಯಾ ಪಾಶುರದಲ್ಲಿದ್ದುದನ್ನು ಮಾತ್ರ ಬಿಡದೆ ವಿವರಿಸಲಾಗಿದೆ. ವಿಶದವಾಗಿ ಅರಿಯಬೇಕಾದರೆ ಇವರ ''ನ್ಯಾಯಸಿದ್ಧಾಂಜನ-ತತ್ತ್ವಮುಕ್ತಾಕಲಾಪ'' ಮೊದಲಾದುವುಗಳಲ್ಲಿ ವಿಶದವಾಗಿದೆ. ನೋಡಿ ತಿಳಿಯಬಹುದು. ಪ್ರಕೃತ ಈ ಪ್ರಬಂಧಕ್ಕೆ ಅನುಗುಣವಾಗಿ ನಿರೂಪಿಸಿದೆ.

॥ಶ್ರೀಃ॥

॥ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ॥

# ಪರಮತಭಂಗಃ

ಮೂಲ : ಎಣ್‌ದಳವಂಬುಯತ್ತುಳ್ ಇಲಂಗುಮರುಕೋಣಮಿಶೈ,
ವಣ್ ಪಣಿಲಂತಿಕಿರಿವಳ್ಳೈವಿಲ್‌ವಳ್ಳೈವಾಯ್‌ಮುಶಲಂ,
ತಿಣ್ ಕೈಯಿಲಂಕುಶಂಶೀರ್‌ತಿಗಳುಂಗದೈಶೆಂಗಮಲಂ,
ಎಣ್ ಪಡೈಯೇನ್ದಿನಿನ್ರಾನ್ ಎಳಿಲಾಳಿಯಿರೈಯವನೇ ॥ 1

ಅರ್ಥ :- ಎಳಿಲ್ = ಜ್ವಲಿಸುತ್ತಿರುವ, ಆಳಿ = ಚಕ್ರರೂಪನಾದ, ಇರೈಯವನ್ = ಸ್ವಾಮಿಯು, ಎಣ್-ದಳ-ಅಂಬುಯತ್ತುಳ್ = ಅಷ್ಟದಳ ಪದ್ಮದಲ್ಲಿ, ಇಲಂಗುಂ = ಪ್ರಕಾಶಿಸುವ, ಅರು-ಕೋಣಂ-ಮಿಶೈ = ಆರು ಕೋನಗಳ ಯಂತ್ರದಲ್ಲಿ, ತಿಣ್-ಕೈಯಿಲ್ = ಬಲಿಷ್ಠವಾದ (ತನ್ನ ಎಂಟು) ಕೈಗಳಲ್ಲಿಯೂ, ವಣ್-ಪಣಿಲಂ = ಸುಂದರವಾಗಿರುವ ಶಂಖವೂ, ತಿಗಿರಿ = ಚಕ್ರವೂ, ವಳ್ಳೈ-ವಿಲ್ = ಬಿಲ್ಲೂ, ವಳ್ಳೈ-ವಾಯ್ = ಕೊಡಲಿಯೂ, ಮುಶಲಂ = ಒನಕೆಯೂ, ಅಂಕುಶಂ = ಅಂಕುಶವೂ, ಶೀರ್-ತಿಗಳುಂ-ಗದೈ = ಪ್ರಭಾವವನ್ನು ಬೆಳಗುವ ಗದೆಯೂ, ಶೆಂ-ಕಮಲಂ = ಕೆಂದಾವರೆಯೂ (ಅಥವಾ ಆ ಆಕಾರದ ಆಯುಧ), ಎಣ್-ಪಡೈ = (ಹೀಗೆ) ಎಂಟು ಆಯುಧಗಳನ್ನೂ, ಏಂದಿ-ನಿನ್ರಾನ್ = ಧರಿಸಿ ನಿಂತಿರುವನು.

ತಾತ್ಪರ್ಯ :- ಸುದರ್ಶನ (ಚಕ್ರ) ರೂಪಭಗವಂತನು ಎಂಟುದಳದ ಕಮಲದಲ್ಲಿ ಆರು ಕೋನಯಂತ್ರದಲ್ಲಿ ತನ್ನ ಎಂಟು ಕೈಗಳಲ್ಲೂ ಶಂಖ, ಚಕ್ರ, ಬಿಲ್ಲು, ಕೊಡಲಿ, ಒನಕೆ, ಅಂಕುಶ, ಗದೆ, ತಾವರೆ (ಹೂವಿನಾಕಾರ ಆಯುಧ) ಇವನ್ನು ಧರಿಸಿ, ಅನನ್ಯಾಶ್ರಿತರಾದ ಭಕ್ತರನ್ನು ಸಂರಕ್ಷಿಸಲು ಅರ್ಚಾಮೂರ್ತಿಯಾಗಿ ಪ್ರಕಾಶಿಸುತ್ತಿರುವನು.

**तेजस्वी हेतिराजप्रभुरभिविलसत्पङ्कजे ह्यष्टपत्रे ।**
**यन्त्रे षट्कोणयुक्ते द्वियुगयुगकरैः वीरशङ्खं च चक्रम् ।।**
**चापं चाकुञ्चितं तं परशुमवनतं चाप्ययोऽग्रं सृणिं तां ।**
**शत्रून्मर्दीं गदां चारुणकमल ममून्येत्य वाभाति देवः ।।** १

ಮೂಲ :

ವಿಡನೆರಿಯಂಜಿವಿಡತ್ತೊಡಕ್ಕಿಯ, ವಿದಿಯರಡೈನ್ದುತ್ತೊಳತ್ತಳೈತ್ತೆಳು
ವಿಳಿಯರುಳ್‌ತನ್ದುವಿಲಕ್ಕಡಿಕ್ಕಳೈ,
ವಿರಕಿಲಿಯಂಬಿವಿಲಕ್ಕಿವೈತ್ತನರ್.
ಕೊಡುವಿನೈಯೆನ್ಬದನೈತ್ತಿನೈತ್ತನೈ,
ಕೊಣರ್‌ದಲಿಹಳ್‌ನ್ದಗುಣದನತ್ತಿನರ್,
ಕುರುಕೈಯಿಲ್‌ವನ್ದುಕೊಳುಪ್ಪಡಕ್ಕಿಯ,
ಕುಲಪತಿತನ್ದಕುರಿಪ್ಪಿಲ್ ವೈತ್ತನರ್,
ಕಡುನರಹನ್ಬುಕಳತ್ತಿಮತ್ತೊರು,
ಕತಿಪೆರುಮನ್ಬಿಲೆಮ್ಮೈಪ್ಪೊರುತ್ತಿನರ್,
ಕಮಲೈಯುಹನ್ದಕಡರ್ಕ್ಕಿಡೈಕ್ಕಡಲ್,
ಕರುಣೈಯುಯರ್‌ನ್ದಿಡರ್ ಕ್ಕೊರುಕ್ಕಿನರ್,
ಪಡುಮುದಲಿನ್ರಿವಳರ್ನ್ದನರ್ಕ್ಕಳೈ,
ಪಲಪಲವೊನ್ರವೆಮಕ್ಕುರೈತ್ತನರ್,
ಪಳಮರೈಯನ್ದಿನಡೈಕ್ಕಿಚ್ಚುವರ್‌ಪರಮತಮೆನ್ರುತಿಡಿತ್ತಪತ್ತರೇ ॥ 2

ಅರ್ಥ :- ಪರಮತಂ = ಇತರರ ಮತಗಳು, ಪಳಿ-ಮರೈ-ಅಂದಿ-ನಡೈಕ್ಕು = ಅನಾದಿಯಾದ ವೇದಾಂತ ಮಾರ್ಗಕ್ಕೆ, ಇಡೈ-ಶುವರ್-ಎನ್ರು = ಅಡ್ಡವಾದ ಗೋಡೆ (ತಡೆ)ಗಳೆಂದು, ಅದು = ಆ ಮತಗಳೆಂಬ ಗೋಡೆಗಳನ್ನು, ಇಡಿತ್ತ = ಇಡಿದು ಹಾಕಿದ, ಬತ್ತರ್ = ಭಕ್ತರಾದ ನಮ್ಮ ಆಚಾರ್ಯರು, ವಿಡು-ನೆರಿ-ಅಂಜಿ = ಬಿಟ್ಟು ಬಿಡಬೇಕಾದ ದುರ್ಮಾರ್ಗದಲ್ಲಿ ಕಾಲಿಡಲು ಅಂಜಿ, ವಿಡ-ತೊಡಕ್ಕಿಯ = ಬಿಡಲು ತೊಡಗಿದ, ವಿದಿಯರ್ = ಭಾಗ್ಯವಂತರಾದ ನಾವು, ಅಡೈಂದು-ತೊಳಿ = (ತಮ್ಮನ್ನು) ಆಶ್ರಯಿಸಿ ಸೇವಿಸಲು, ತಳೈತ್ತು-ಎಳು = ಮೇಲೆ ಮೇಲೆ ಉಕ್ಕಿ ಬರುವ, ಅರುಳ್-ವಿಳಿ-ತಂದು = ಕೃಪಾಕಟಾಕ್ಷವನ್ನು ಬೀರಿ, ವಿಲಕ್ಕು-ಅಡಿ = (ಉತ್ತಮ ಫಲವನ್ನು ಪಡೆಯಲಾಗದೆ) ತೊಲಗಿಸಲು ಕಾರಣವಾದ, ಕಳೈ = (ನಮ್ಮ) ವಿಷಗಿಡಗಳಂತಿರುವ ಪಾಪಗಳನ್ನು, ಇಯಂಬಿ = (ಕಿತ್ತುಹಾಕಿ) ಹೇಳಿ, ವಿಲಕ್ಕಿ = (ಪಾಪಗಳಿಂದ ನಮ್ಮನ್ನು) ಬಿಡಿಸಿ, ವಿರಹಿಲ್ = (ತಕ್ಕ) ಉಪಾಯದಲ್ಲಿ, ವೈತ್ತನರ್ = ನೆಲೆಗೊಳಿಸಿದರು. ಕೊಡು-ವಿನೈ-ಎನ್ಬದನೈ = ಕ್ರೂರಪಾಪಗಳೆಂಬುವನ್ನು, ತಿನೈತ್ತನೈ = ಸ್ವಲ್ಪವೂ, ಕೊಣರ್‌ದಲ್-ಇಕಳ್‌ನ್ದ = ಸೇರದಂತೆ ಬಿಡಿಸುವ, ಗುಣ-ದನತ್ತಿನರ್ = ಶುಭಗುಣವೆಂಬ ಧನವುಳ್ಳವರು, ಕುರುಹೈಯಿಲ್-ವಂದ್

= ಆಳ್ವಾರ್ ತಿರುನಗರಿಯಲ್ಲಿ ಅವತರಿಸಿ, ಕೊಳುಪ್ಪು-ಅಡಕ್ಕಿಯ = (ದಿವ್ಯಸೂಕ್ತಿಗಳಿಂದ) ಇತರರ ಗರ್ವವನ್ನು ಅಡಗಿಸಿದ, ಕುಲಪತಿ-ತಂದ = ಪ್ರಪನ್ನ ಜನಕೂಟಸ್ಥರೆಂದು ಖ್ಯಾತರಾದ ನಮ್ಮಾಳ್ವಾರ್ರು ಕರುಣಿಸಿರುವ, ಕುರಿಪ್ಪಿಲ್ = ಸೂಕ್ಷ್ಮಾರ್ಥದಲ್ಲಿ ವೈತ್ತನರ್ = (ನಮ್ಮನ್ನು) ನೆಲೆಗೊಳಿಸಿದರು, ಕಡು-ನರಹು = ಕ್ರೂರನರಕಕ್ಕೆ ತಳ್ಳುವ ಪಾಪ ಕೃತ್ಯದಲ್ಲಿ, ಅನ್ಬು-ಕಳತ್ತಿ = (ನನಗಿದ್ದ) ಪ್ರೀತಿಯನ್ನು ತೊರೆಯುವಂತೆ ಮಾಡಿ, ಮತ್ತು-ಒರು-ಗತಿ-ಪೆರುಂ-ಅನ್ಬಿಲ್ = ಮತ್ತೊಂದು ಅನ್ಯಾದೃಶವಾದ ಅತ್ಯುತ್ತಮ ಗತಿಯಾದ ಮೋಕ್ಷವನ್ನು ಹೊಂದುವ ಹೆಬ್ಬಯಕೆಯಲ್ಲಿ, ಎಮ್ಮೈ = ನಮ್ಮನ್ನು, ಪೊರುತ್ತಿನರ್ = ಅಲುಗದಂತೆ ನೆಲೆಯಾಗಿಸಿದರು. ಕಮಲೈ = ಮಹಾಲಕ್ಷ್ಮಿಯು, ಉಹನ್ದ = ಪ್ರೀತಿಸಿದ, ಕಡಲ್-ಕ್ಕಿಡೈ-ಕಡಲ್ = ಕ್ಷೀರಸಮುದ್ರದಲ್ಲಿ ಪವಡಿಸಿರುವ ಮತ್ತೊಂದು ನೀಲಸಮುದ್ರದಂತಿರುವ (ಆ ಕ್ಷೀರಾಬ್ಧಿಶಾಯಿ) ಪರಮಾತ್ಮನ, ಕರುಣೈ-ಉಹನ್ದ-ತಿಡರ್ಕ್ಕು = ದಯೆಯೆಂಬ ಎತ್ತರವಾದ (ದಿಬ್ಬ) ದಿಣ್ಣೆಯಲ್ಲಿ, ಒರುಕ್ಕಿನರ್ = (ನಮ್ಮನ್ನು) ಒಂದಾಗಿ ಸೇರಿಸಿದರು. ಪಡು-ಮುದಲ್ ಇನ್ರಿ = ಹಾಳಾಗಲು ಅವಕಾಶವಿಲ್ಲದಂತೆ, ವಳರ್ನ್ದ = (ದೇವರು ಮತ್ತು ಮಹರ್ಷಿಗಳಿಂದ) ಹೆಚ್ಚು ಹೆಚ್ಚಾಗಿ ಬೆಳೆದ, ಪಲ-ಪಲ-ನಲ್-ಕಲೈ = ಬೇಕಾದಷ್ಟು ಒಳ್ಳೆಯ ವಿದ್ಯೆಗಳು, ಒನ್ರ = (ನಮ್ಮಲ್ಲಿ) ಒಂದಾಗಿ ಸೇರುವಂತೆ, ಎಮಕ್ಕು-ಉರೈತ್ತನರ್ = ನಮಗೆ ಉಪದೇಶಿಸಿದರು.

ತಾತ್ಪರ್ಯ :- ಅನಾದಿಯಾಗಿರುವ ನಮ್ಮ ವೇದಾಂತ ಮಾರ್ಗವು ಎಲ್ಲೆಡೆಯೂ ಹರಡಲು ಅಡ್ಡಲಾಗಿ ತಡೆಯಾಗಿದ್ದುವು ಇತರ ಮತಗಳು. ಅವನ್ನು ನಮ್ಮ ಪೂರ್ವಾಚಾರ್ಯರು ವಾದಿಸಿ, ಖಂಡಿಸಿದುದಲ್ಲದೆ ತಮ್ಮ ದಿವ್ಯ ಸೂಕ್ತಿಗಳಿಂದಲೂ ನಾಶಗೊಳಿಸಿದರು. ಪಾಪಕೃತ್ಯಗಳಿಗೆ ಅಂಜಿದೆವು. ಸದಾಚಾರ್ಯರನ್ನು ಆಶ್ರಯಿಸಿದೆವು ಮತ್ತು ಸೇವಿಸಿದೆವು. ಅಸಾಧಾರಣ ಕರುಣೆಯಿಂದ ಅವರು ನಮ್ಮನ್ನು ಕಟಾಕ್ಷಿಸಿದರು. ಸತ್ಫಲಗಳನ್ನು ಪಡೆಯಲು ತಡೆಯಾಗಿದ್ದುದನ್ನೂ ಪಾಪದಿಂದ ಬರುವ ದುಃಖವನ್ನೂ ಹೇಳಿ, ಪಾಪವೆಸಗದಂತೆಯೂ, ಉತ್ತಮವಾದ ಉಪಾಯದಲ್ಲಿ ಪ್ರವರ್ತಿಸುವಂತೆಯೂ ಮಾಡಿದರು. ಅವರು ನಮಗೆ ಪಾಪವೆಂಬುದೇ ಲೇಪಿಸದಂತೆ ಗಮನಿಸುವ ಅತ್ಯುತ್ತಮ ಗುಣನಿಧಿಗಳು. ಅಮೃತಕ್ಕಿಂತ ಸವಿಯೆನಿಸಿದ ನಮ್ಮ ಮಧುರತಮಪಾಶುರಗಳಿಂದ ಪರಮತಗಳನ್ನು ಖಂಡಿಸಿ, ಸತ್ಫಲಸಂಜೀವಿನಿಯನ್ನಿತ್ತವರೂ, ಪ್ರಪನ್ನ ಜನ ಸಂತಾನ ಕೂಟಸ್ಥರೂ ಆದ ನಮ್ಮಾಳ್ವಾರ್ರು ತೋರಿರುವ ಮಾರ್ಗವನ್ನೇ ಹಿಡಿದು ಸಫಲರಾಗುವಂತೆ ಮಾಡಿದರು.

ಕಡುನರಕವನ್ನು ಕೊಡುವ ಕರ್ಮವನ್ನು ಮಾಡಿಸದೆ ಮುಕ್ತಿ ಮಹಾಫಲವನ್ನು ಅನುಭವಿಸುವಂತೆ ಮಾಡಿದರು. ಕ್ಷೀರ ಸಾಗರದಲ್ಲಿ ನೀಲಸಾಗರವೊಂದು ಪವಡಿಸಿರುವಂತೆ ಇರುವ ಆ ಕ್ಷೀರಾಬ್ಧಿನಾಥನನ್ನು ಸೇರಲು ಅನರ್ಹರೆನಿಸಿದ ನಮ್ಮನ್ನು ಅವನ ಕರುಣೆಗೆ ಪಾತ್ರರನ್ನಾಗಿಮಾಡಿದರು. ಎಂದೂ ಅಳಿಯದೆ ಒಳಿಯುವ ಹಲವು ಸದ್ವಿದ್ಯೆಗಳನ್ನು

ಉಪದೇಶಿಸಿದರು. ಹೀಗೆ ನಮ್ಮ ಆಚಾರ್ಯವರ್ಯರುಗಳು ನಮಗೆ ಮಾಡಿರುವ ಉಪಕಾರಗಳನ್ನು ಎಣಿಸಲು ಅಸದಳವು. ಆ ಮಹಿಮರ ಸ್ಮರಣೆಯು ಅತ್ಯಗತ್ಯವು.

प्राचीनश्रुतिमौलिपद्धतिगतेः संरोधका हीत्यमः ।
भिन्दन्तोऽन्यमताभिधाः शकलशो भित्ती श्च नो देशिकाः ।।
भीतान् त्याज्यपथात् विधूतकुपथान् भाग्याधिकान् सन्नतान् ।
अस्मान् वीक्ष्य कृपोम्भितै श्च नयनापाङ्गै स्सुधापूरकैः ।। १

त्याज्यानीव च सस्यवृद्धिविहनीत्यावेद्य चास्मांस्ततः ।
व्यावृत्याकलयन् उपायनिरतान् भूयोऽपि पापं यथा ।।
नैवास्मासु घटेत किंचिदपि वा तद्वद्विधातुं हि ते ।
शक्ता स्सद्गुणसम्पद श्च, कुरुकापुर्या मुदीर्णस्य हि ।। २

गर्वोन्मर्दयितुः प्रपन्नजनताकूटस्थयोगीशितुः ।
सूक्तीनां अतिसूक्ष्मभावमहिते ह्यर्थे दृढं न्यक्षिपन् ।।
प्रीतिं कर्मसु नो व्यपोह्य निरयावासैकयोग्येष्विह ।
प्रीतिं तां परसद्गते रधिगतौ व्यातेनिरे स्थेयसीम् ।। ३

क्षीराब्धौ शयितं च नीलजलधिं लक्ष्मीप्रियं चोन्नतं ।
देवेशं करुणामयं निरुपमं देशं समास्थापयन् ।।
सद्विद्या निरवद्यकारुणभुवो नैका श्च संवर्धिताः ।
अस्मभ्यं समुपादिशन् स्यु रखिला अस्मास्वभिन्ना यथा ।। ४

ಮೂಲ :

ಪೋಮುರೈಕ್ಕುಂಪೊರುಯಾಮರಿಯೋಂಪೊರುಳಾರ್ಮರೈಯಿಲ್,
ತಾಮುರೈಕ್ಕಿನ್ರನತಾಮೇಯರಿಯುಂತರಮುಡೈಯಾರ್
ಆಮುರೈಕ್ಕಿನ್ರಿವೈಯಾಯ್ನ್ದೆಡುತ್ತಾರಣನೂಲ್ ವಳಿಯೇ
ನಾಮುರೈಕ್ಕುಂವಹೈನಲ್ಲರುಳೇನ್ದಿನವಿನ್ರನರೇ ॥ 3

ಅರ್ಥ :- ಪೊರುಳ್-ಆರ್-ಮರೈಯಿಲ್ = ಸತ್ಯಾರ್ಥ ಪೂರ್ಣವಾದ ವೇದಗಳಲ್ಲಿ, ಪೋಂ-ಉರೈಕ್ಕುಂ-ಪೊರುಳ್ = (ಸರಿಯಲ್ಲವೆಂದು) ನೀಗುವಂತೆಯೂ, ಮತ್ತು

(ಸರಿಯಾದುದೆಂದು) ಹೇಳುವಂತೆಯೂ ಇರುವ ವಿಷಯವನ್ನು, ಯಾಂ-ಅರಿಯೋಂ = (ಆಚಾರ್ಯೋಪದೇಶಕ್ಕೆ ಮೊದಲು) ನಾವು ಅರಿಯಲಾರೆವು. ತಾಂ-ಉರೈಕ್ಕಿನ್ರನ = ತಾವು ಉಪದೇಶಿಸುವ ವಿಷಯಗಳನ್ನು, ತಾಮೇ-ಅರಿಯುಂ = ತಾವೇ (ಪ್ರತ್ಯಕ್ಷವಾಗಿ) ಕಂಡರಿಯುವಂತಹ, ತಾಂ-ಉಡ್ಯೆಯಾರ್ = ಹಿರಿಮೆಯುಳ್ಳ - ನಮ್ಮ ಆಚಾರ್ಯರು, ನಲ್-ಅರುಳ್-ಏಂದಿ = (ನಮ್ಮ ಮೇಲೆ) ಬಹಳ ದಯೆಯನ್ನು ಬೀರಿ, ಆಯ್‌ನ್ದು = (ವೇದವನ್ನು) ಆರಿಸಿ, ಇವ್ವೈ-ಉರೈಕ್ಕುಂ-ಆಂ-ಎನ್ರು = ಈ ವಿಷಯಗಳು ಉಪದೇಶಕ್ಕೆ ತಕ್ಕವು ಎಂದು, ಎಡುತ್ತು = ಆರಿಸಿಕೊಂಡು, ಆರಣ-ನೂಲ್-ವಳಿಯೇ = ವೇದಮಾರ್ಗಮೂಲಕವೇ, ನಾಂ-ಉರೈಕ್ಕುಂ-ವಹ್ಯೆ = ನಾವು (ಈ ಗ್ರಂಥದಲ್ಲಿ) ಹೇಳಿರುವ ರೀತಿಯಲ್ಲೇ, ನವಿನ್ರವರ್ = (ನಮಗೆ) ಉಪದೇಶಿಸಿದರು.

ತಾತ್ಪರ್ಯ :– ಸತ್ಯವಾದ ಅರ್ಥಗಳಿಂದ ಪೂರ್ಣವಾದ ವೇದವು ಒಂದು ಮಹಾಸಾಗರ. ಅದರಲ್ಲಿ ಬೇಡವಾದುವನ್ನೂ ಬೇಕಾದುವನ್ನೂ ಆಚಾರ್ಯರ ಉಪದೇಶವಿಲ್ಲದೆ ಅರಿಯಲಾಗುವುದಿಲ್ಲ. ನಮ್ಮ ಆಚಾರ್ಯರು ಉಪದೇಶಿಸುವ ಒಂದೊಂದೂ ಅವರು ತಾವೇ ನೇರವಾಗಿ ಕಂಡು ಅನುಭವಿಸಿ ಬಂದುದು. ಅವರು ವೇದಗಳನ್ನು ಪರಿಶೀಲಿಸಿ, ನಮ್ಮ ಮೇಲಿನ ದಯೆಯಿಂದ ನಮಗೆ ಆವಶ್ಯಕವಾದುವನ್ನೇ ಆರಿಸಿ ತೆಗೆದು, ಅವನ್ನೇ ಉಪದೇಶಿಸಿರುತ್ತಾರೆ. ಆದ್ದರಿಂದಲೇ ನಾವು ವೇದಾಂತ ಮಾರ್ಗವನ್ನು ಬಿಡದೆ ಈ ಗ್ರಂಥವನ್ನು ಪ್ರಕಾಶಿಡಿಸುವವರಾದೆವು.

**सत्यार्थैकाभिपूर्णे निगमजलनिधौ सङ्ग्रहीतुं न विद्मः ।**
**त्याज्योपादेयभागावथ विषयगणान् देशिका यान् वदन्ति ।।**
**सम्प्रेक्ष्यैव स्वयं ते निरवधिदयया बोधनीयान् विमृश्य ।**
**प्रोचु स्तानेव न श्राप्यथ वय मपि सुव्याहरामो यथार्थम् ।। ३**

ಮೂಲ : ಶಿತ್ತುಮಶಿತ್ತುಮಿರೈಯುಮೆನ ತ್ತೆಳಿವುತ್ತುನಿನ್ರ,
ತತ್ತುವಮೂನ್ರುಂತನಿತ್ತನಿಕಾಟ್ಟುಂತನಿಮರೈಯಾಲ್,
ಮುತ್ತಿವಳಿಕ್ಕಿದು ಮೂಲಮೆನತ್ತುಣಿವಾರ್ಹಳ್ಳೆಯುಂ,
ಕತ್ತಿಮಯಕ್ಕುಂ ಕತಕರ್ರೈ ನಾಂ ಕಡಿಹಿನ್ರನಮೇ ॥ 4

ಅರ್ಥ :- ಶಿತ್ತುಂ = ಚೇತನವೂ. ಅಶಿತ್ತುಂ = ಅಚೇತನವೂ, ಇರೈಯುಂ = ಈಶ್ವರನೂ, ಎನ = ಎಂದು, ತೆಳಿವು-ಉತ್ತು-ನಿನ್ರ = ತಿಳಿದುಕೊಂಡು ಇರುವ, ತತ್ತುವಂ-ಮೂನ್ರುಂ = ಮೂರು ತತ್ವಗಳನ್ನೂ, ತನಿ-ತನಿ-ಕಾಟ್ಟುಂ = ಬೇರೆ ಬೇರೆಯಾಗಿ ತೋರಿಸುವ, ತನಿ-ಮರೈಯಾಲ್ = ಅಸದೃಶವಾದ ವೇದದಿಂದ, ಇದ್ = ಈ ತತ್ವಜ್ಞಾನವು,

ಮುತ್ತಿವಳಿಕ್ಕು = ಮೋಕ್ಷಮಾರ್ಗಕ್ಕೆ, ಮೂಲಂ-ಎನ = ಕಾರಣವಾಗುವುದೆಂದು, ತುಣಿವಾರ್‌ಹಳ್ಳೈಯುಂ = ನಿಶ್ಚಯಿಸಿ ತಿಳಿಯುವವರನ್ನೂ, ಕತ್ತಿ = ಅಬ್ಬರಿಸಿ, ಮಯಕ್ಕುಂ = ತಬ್ಬಿಬ್ಬಾಗುವಂತೆ ಮಾಡುವ, ಕತಕರೈ = ಪ್ರತಿವಾದಿಗಳನ್ನು, ನಾಂ = ನಾವು (ಸದಾಚಾರ್ಯೋಪದೇಶಪಡೆದವರು) ಕಡಿಕ್ಕಿನ್ರನಂ = ಖಂಡಿಸುವೆವು.

ತಾತ್ಪರ್ಯ :- ವೇದಾಂತವು ''ಚೇತನ ಅಚೇತನ ಮತ್ತು ಈಶ್ವರ'' ಎಂಬ ಮೂರು ತತ್ವಗಳನ್ನೂ ಅವುಗಳ ಸ್ವರೂಪ ಸ್ವಭಾವಗಳೊಂದಿಗೆ ವಿಭಾಗಿಸಿ ತೋರಿಸುವುದು. ವಿವೇಕಿಗಳು ಆ ತತ್ವಗಳನ್ನು ಚೆನ್ನಾಗಿ ಬಲ್ಲವರಾಗುವರು. ಆ ಜ್ಞಾನವೇ ಮೋಕ್ಷಕ್ಕೆ ಮೂಲಕಾರಣವೆಂದು ಚೆನ್ನಾಗಿ ತಿಳಿಯುವರು. ಹೀಗೆ ನಿರ್ಧರವಾಗಿ ತಿಳಿದ ವಿವೇಕಿಗಳನ್ನೂ ಇತರ ಮತದವರು ತಮ್ಮ ಆರ್ಭಟದಿಂದ ಮರುಳುಗೊಳಿಸಲು ಸಂಚುಹಾಕುವರು. ಅಂತಹವರನ್ನು ಈಗ ಚೆನ್ನಾಗಿ ತುಂಡರಿಸುವೆವು.

वेदान्ते चिदचिपरात्परमितं तत्त्वत्रयं दर्शितं ।
प्रत्येकं च विमुक्तये प्रभवति प्रज्ञा तदीयेति च ।।
निर्धार्येह कृतादरां श्च कथका गर्जन्ति तान् मोहितान् ।
कर्तुं तांश्च वयं सुशिक्षितधिय स्त्वेतान् निराकुर्महे ।। ४

ಮೂಲ : ಮುತ್ತಿನ್‌ವಡಂಗಳೆನಮುಕುಂದನ್ಪುನೈಮೂವಹೈಯಾಂ,
ಶಿತ್ತಿಲರುಂ ಶುರುತಿಚ್ಚೆವ್ವೈಮಾರಿಯ ಶಿಂದೈಹಳಾಲ್,
ಪತ್ತಿಲಿರಂಡುಮೆಯ್‌ಕ್ಕಪ್ಪಹಟ್ಟುಂಪರವಾದಿಯರ್‌ತಂ,
ಕತ್ತಿಲ್‌ವಿಳುಂದದೈನ್ದ ಅಳುಕ್ಕಿನ್ರುಕಳತ್ತಿನಮೇ ॥ 5

ಅರ್ಥ :- ಮುತ್ತಿನ್-ವಡಂಗಳ್-ಎನ = ಮುತ್ತಿನ ಸರಗಳಂತಿರುವ, ಮುಕುಂದನ್-ಪುನೈ = ಭಗವಂತನು ಧರಿಸಿದ, ಮೂ-ವಹೈ-ಆಂ-ಚಿತ್ತಿಲ್ = (ಬದ್ಧ-ಮುಕ್ತ-ನಿತ್ಯ) ಮೂರು ವಿಧರಾದ ಚೇತನರ ವಿಷಯದಲ್ಲಿ, ಅರುಂ-ಶುರುತಿ-ಶೆವ್ವೈಮಾರಿಯ - ಗಹನವಾದ ವೇದಗಳಲ್ಲಿರುವ ಋಜುಮಾರ್ಗವನ್ನು ಬಿಟ್ಟು, ಕುತರ್ಕದಿಂದ ಹಾಳುಮಾಡುವ, ಚಿಂತೈಹಳಾಲ್ = ಆಲೋಚನೆಗಳಿಂದ, ಪತ್ತಿಲ್ = (ತಮ್ಮ ಮತವನ್ನು) ಸ್ವೀಕರಿಸಿದರೆ, ಇರಂಡುಂ = ಸುಖದುಃಖಗಳಿಲ್ಲದಿರುವ ಪುರುಷಾರ್ಥಗಳೆರಡನ್ನೂ, ಏಯ್‌ಕ್ಕ = ಬಿಡುವಂತೆ, ಪಹಟ್ಟುಂ = ಮೋಹಗೊಳಿಸುವವರಾದ, (ವೈದಿಕರೂ ಸಹ ಬಾಹ್ಯಕುದೃಷ್ಟಿ ಮತಗಳನ್ನವಲಂಬಿಸಿ, ಪುರುಷಾರ್ಥಗಳನ್ನು ಕಳೆದುಕೊಂಡು ಮೋಹಗೊಳ್ಳದವರಂತೆ ಮೋಹಗೊಳಿಸುವ) ಪರವಾದಿಯರ್ = ಪ್ರತಿವಾದಿಗಳ, ಕತ್ತಿಲ್ = ಜಲ್ಪನದಲ್ಲಿ, ವಿಳುಂದು = ಸಿಕ್ಕಿ, (ಅವರ

ವಾಗಾಡಂಬರವನ್ನು ನಂಬಿ) ಅಡ್ಡೆಂದ = ಪಡೆದ, ಅಳುಕ್ಕು = (ಕೊಳೆ) ದೋಷವನ್ನು, ಇನ್ರು = ಈಗ (ಆಚಾರ್ಯರ ಕೃಪೆಗೆ ಪಾತ್ರನಾಗಿ ಬರೆಯುವ ಈ ಗ್ರಂಥದಲ್ಲಿ) ಕಳಿತ್ತನಂ = ತೊಳೆಯುವೆವು. (ದುರ್ಮತದ ಮೂಲಕ ದೇಹಾತ್ಮಭಾವ, ಸ್ವತಂತ್ರಾಭಾವಗಳ ವಾಸನೆಯಿಂದ ಇಂದು ಚೇತನ ತತ್ವಯಾಥಾತ್ಮ್ಯವು ತೋರದೆ ಇರುವುದು ಎಂದು ಭಾವ.)

ತಾತ್ಪರ್ಯ :- ಭಗವಂತನು ನಿತ್ಯ-ಮುಕ್ತ-ಬದ್ಧರೆಂಬ ಜೀವರಾಶಿಯನ್ನು ಮುತ್ತಿನ ಹಾರದಂತೆ ಧರಿಸಿರುವನು. ಈ ಜೀವರ ವಿಷಯದಲ್ಲಿ ಪರವಾದಿಗಳು ಶ್ರುತಿವಚನಗಳಿಗೇ ಅಪಾರ್ಥವನ್ನು ಕಲ್ಪಿಸಿ, ಎಂತಹವರೂ ಬೆಪ್ಪಾಗುವಂತೆ ವಾದಿಸಿ, ಚೇತನ ತತ್ವದ ನಿಜಾಂಶವನ್ನೇ ಅರಿಯಲಾಗದಂತೆ ಮರುಳುಗೊಳಿಸಿರುವರು. ದೈವವಶಾತ್ ಸದಾಚಾರ್ಯರ ಕೃಪಾಕಟಾಕ್ಷಕ್ಕೆ ಪಾತ್ರನಾಗಿ, ಮುಕ್ತಾಫಲವು ಕೊಳೆ ಹಿಡಿದು, ತನ್ನೊಳಿಯನ್ನು ಕಳೆದುಕೊಂಡು, ಹೊಳೆಯದಿರುವುದರ ಕಾರಣವನ್ನರಿತು, ಅದನ್ನು ತೊಳೆದು, ಮೊದಲಿನ ಹೊಳಪೂ, ಬೆಲೆಯೂ ಬರುವಂತೆ ಮಾಡುವ ಹಾಗೆ ಜೀವ ತತ್ವದ ನಿಜಾಂಶವನ್ನು ಪ್ರಕಾಶಪಡಿಸುವ, ಪರವಾದಿಗಳ ಸೊಕ್ಕನ್ನು ಮುರಿಯುವೆನು. ಎಂಬು ಭಾವ.

**चित्तत्वे त्रिविधे मुकुन्दविधृते दाम्नीव मुक्तामये ।**<br>
**दुर्बोधागमसत्यमार्गविधुरा स्स्वीयान्यथाचिन्तनैः ॥**<br>
**द्वेचाप्यात्ममते न हीति विमते ते मोहयन्त्यास्तिकान् ।**<br>
**तज्जल्पैकविमोहनात्तकलुषान् निष्कल्मषान् कुर्महे ॥** ५

ಮೂಲ : **ನಾಕ್ಕಿಯಲುಂವಹ್ಹೈ ನಮ್ಮೈಯಳಿತ್ತವರ್‌ನಲ್ಲರುಳಾಲ್,**<br>
**ಬಾಗ್ಗಿಯ ಮೇನ್ದಿಪ್ಪರನಡಿಯಾರ್ ತಿರಂಪಾರ್ತದರ್ಪಿನ್,**<br>
**ತಾಕ್ಕಿಯರ್‌ತಂಗಳ್‌ತಲೈಮಿಶೈತಾಕ್ಕಿ ತನಿಮರೈತಾನ್,**<br>
**ಬೋಗ್ಗಿಯ ಮೆನ್ರದನಿಲ್‌ಪೊಯ್‌ಮ್ಮತಂಗಳೈಪೋಕ್ಕುವಮೇ ॥ 6**

ಅರ್ಥ :- ನಮ್ಮೈ = (ಅರಿವಿಲ್ಲದ) ನಮ್ಮನ್ನು, ನಾಕ್ಕು-ಇಯಲುಂ-ವಹ್ಹೈ = ನಾಲಿಗೆಯಿಂದ (ಚೆನ್ನಾಗಿ) ಮಾತನಾಡುವಂತೆ, ಅಳಿತ್ತವರ್ = (ಅರವನ್ನಿತ್ತು) ರಕ್ಷಿಸಿದ ಆಚಾರ್ಯರ, ನಲ್-ಅರುಳಾಲ್ = ಅತ್ಯುತ್ತಮ ದಯೆಯಿಂದ, ಬಾಗ್ಗಿಯಂಏಂದಿ = (ಜ್ಞಾನವನ್ನು ಪಡೆವ) ಭಾಗ್ಯವನ್ನು ಪಡೆದು, ಪರನ್-ಅಡಿಯಾರ್-ತಿರಂ = ಪರಮಾತ್ಮನ ದಾಸಭೂತರಾದ ಜೀವಾತ್ಮರ ಸ್ವರೂಪವನ್ನು, ಪಾರ್ತದರ್ಪಿನ್ = ವಿಮರ್ಶಿಸಿದ ಮೇಲೆ, ತಾಕ್ಕಿಯರ್-ತಂಗಳ್ = (ಆಭಾಸ ಯುಕ್ತಿಗಳಿಂದಲೇ ವಿಷಯವನ್ನು ಸಾಧಿಸುವ) ತಾರ್ಕಿಕರ, ತಲೈ-ಮಿಶೈ-ತಾಕ್ಕಿ = ತಲೆಯ ಮೇಲೆ ತಾಗಿಸಿ (ಬಡಿದು), ತನಿ-ಮರೈ = ಅಸಾಧಾರಣ ವೇದವು, ಬೋಗ್ಗಿಯಂ-ಎನ್ರದನಿಲ್ = (ಆತ್ಮನಿಂದ) ''ಅನುಭವಿಸಲ್ಪಡುವ ವಸ್ತು''ವೆಂದು

ಹೇಳುವ ಅಚೇತನ ತತ್ವವಿಷಯದಲ್ಲಿ ಬರುವ, ಪೊಯ್-ಮತಂಗಳ್ಳೈ = ಇಲ್ಲಸಲ್ಲದನ್ನು ಹೇಳವುದೆಲ್ಲವನ್ನೂ, ಪೋಕ್ಕುವಂ = ಹೋಗಲಾಡಿಸುವೆವು.

ತಾತ್ಪರ್ಯ :- ''ಭೋಕ್ತಾ ಭೋಗ್ಯಂ ಪ್ರೇರಿತಾರಂಚ ಮತ್ವಾ'' ಇತ್ಯಾದಿ ಶ್ರುತಿವಾಕ್ಯದಿಂದ ಮೂರು ತತ್ವಗಳೂ ಅವುಗಳ ಸ್ವಭಾವವೂ ಬೆಳಗಿ ಬರುವುವು. ಅನುಭವಿಸುವವನು ಜೀವಾತ್ಮನು (ಭೋಕ್ತಾ). ಅನುಭವಿಸಲ್ಪಡುವ ವಸ್ತುವೇ (ಭೋಗ್ಯ) ಅಚೇತನವರ್ಗ. ಇವೆರಡನ್ನೂ ನಿಯಮಿಸುವವನೇ (ಪ್ರೇರಿತಾ) ಪರಮಾತ್ಮಾ. ಹಿಂದೆ ಜೀವಾತ್ಮ ತತ್ವವನ್ನು ಸಂಕ್ಷೇಪವಾಗಿ ತಿಳಿಸಲಾಯಿತು. ಇಲ್ಲಿ ಅಚೇತನ ತತ್ವವನ್ನು ನಿರೂಪಿಸುವರು. ಈ ಕ್ರಮದಂತೆ ಹೋಗಲು ಈ ಶ್ರುತಿಯೇ ಕಾರಣವು. ಸರಿಯಾದ ಅರಿವು ಇಲ್ಲದಿದ್ದ ನಾವು ಅತಿವೇಲಯಾಜಲಧಿಗಳಾದ ಆಚಾರ್ಯರ ಉಪದೇಶದಿಂದ ಒಳ್ಳೆಯ ಜ್ಞಾನಿಗಳಾಗಿ, ಚೆನ್ನಾಗಿ ವಿವರಿಸಿ ಹೇಳುವ ಶಕ್ತಿಯುಳ್ಳವರಾದೆವು. ಪರಮಾತ್ಮನಿಗೆ ದಾಸರಾದ ಜೀವಾತ್ಮರನ್ನು ಪ್ರಕಾಶಪಡಿಸಲಾಯಿತು. ಈಗ ಆಭಾಸಯುಕ್ತಿಗಳಿಂದಲೇ ಸಾಧಿಸುವಂತಹ ಯುಕ್ತಿವಾದಿಗಳಾದ ತಾರ್ಕಿಕರನ್ನು ಖಂಡಿಸಿ, ಜೀವಾತ್ಮರು ಅನುಭವಿಸುವಂತಹ ಅಚೇತನತತ್ವ ವಿಷಯದಲ್ಲಿ ಅಸಂಗತವಾದುದನ್ನು ಹೋಗಲಾಡಿಸುತ್ತೇವೆ.

सद्व्याहारविहारभाग्यमहितां प्राप्ता रसज्ञां वयं ।
त्रातु स्सत्कृपया परात्परपदा सेव्यात्मरूपादिकं ।।
युक्त्याभासवतां शिरस्सु च समाहत्यागमे निस्स्मे ।
'भोग्यं' यत्कथितं तदीयविमतान्युन्मूलयामोऽधुना ।। ६

ಮೂಲ : ತೀವಹೈಮಾತ್ತಿಯನ್ರೋರ್ ತೇರಿಲಾರಣಂ ಪಾಡಿಯನಂ
ದೇವಕಿಶೀರ್‌ಮಗನಾರ್ ತಿರಂಬಾವರುಳ್ ಶೂಡಿಯನಾಂ,
ಮೂವಹೈಯಾಮರಿಯಾತ್ತತ್ತುವತ್ತಿನ್‌ಮುಕಮರಿವಾರ್,
ನಾವಹೈಯೇ ನಡತ್ತುಂ ನಡೈಪಾರ್ತುನಡನ್ದನಮೇ ॥ 7

ಅರ್ಥ :- ತೀ-ವಹೈ = ಉಗ್ರರೀತಿಗಳನ್ನು (ಆತ್ಮನಲ್ಲಿ ದೇಹಾತ್ಮ ಭ್ರಮೆ, ಸ್ವತಂತ್ರಾತ್ಮಭ್ರಮೆಗಳನ್ನೂ ಅವುಗಳ ಕಾರ್ಯಗಳನ್ನೂ) ಮಾತ್ತಿ = ನಿವಾರಿಸಿ, ಅನ್ರು = ಆಗ (ಭಾರತ ಯುದ್ಧದಲ್ಲಿ) ಓರ್-ತೇರಿಲ್ = ಅನುಪಮವಾದ ರಥದಲ್ಲಿ (ಸಾರಥಿಯಾಗಿದ್ದು) ಆರಣಂ-ಪಾಡಿಯ = ವೇದಾಂತಗಳನ್ನು ಹಾಡಿದ (ಗೀತೆಯನ್ನು ಹಾಡಿದ) ದೇವಕಿ-ಶೀರ್-ಮಗನಾರ್ = ದೇವಕಿಯ ಸಮಸ್ತ ಕಲ್ಯಾಣ ಗುಣಗಳಿಂದ ಕೂಡಿದ ಮಗನಾದ ಶ್ರೀಕೃಷ್ಣನ, ತಿರಂಬಾ-ಅರುಳ್ = ಅಚಲವಾದ ದಯೆಯನ್ನು, ಶೂಡಿಯ-ನಾಂ

= ಧರಿಸಿರುವ ನಾವು, ಮೂ-ವಹೈ-ಆಂ = (ಪ್ರಕೃತಿ -ಕಾಲ-ಶುದ್ಧಸತ್ವ) ಮೂರು ವಿಧವಾಗಿ, ಅರಿಯಾ-ತತ್ತುವತ್ತಿನ್ = ಅರಿವಿಲ್ಲದ (ಅಚೇತನ) ತತ್ವಗಳ, ಮುಕಂ-ಅರಿವಾರ್ = ಪ್ರಬೇಧಗಳನ್ನು ಚೆನ್ನಾಗಿ ಅರಿತ (ಪರಾಶರ, ವ್ಯಾಸ-ಆಳ್ವಾರ್ರುಗಳ) ವರ, ನಾವಹೈಯೇ = ಉಪದೇಶದ ಮೂಲಕವಾಗಿಯೇ, (ನಮ್ಮ ಆಚಾರ್ಯರು) ನಡತ್ತುಂ = ನಡೆಸುವಂತಹ, ನಡ್ಶೈ = ಪ್ರಕಾರವನ್ನು, ಪಾರ್ತು = ಪರಿಶೀಲಿಸಿ, ನಡತ್ತನಂ = ನಡೆದಿರುವೆವು, (ಬೆಳಗಿರುವೆವು.)

ತಾತ್ಪರ್ಯ :- ದೇವಕಿಯ ಪುತ್ರ ಶ್ರೀಕೃಷ್ಣನು ಜೀವರಾಶಿಗಳನ್ನು ಉಜ್ಜೀವನಗೊಳಿಸಲು ಸಂಕಲ್ಪಮಾಡಿ, ಭಾರತಯುದ್ಧದಲ್ಲಿ ಅರ್ಜುನನಿಗೆ ಸಾರಥಿಯಾಗಿ, ಅವನನ್ನೇ ವ್ಯಾಜಮಾಡಿಕೊಂಡು ವೇದಾಂತಾರ್ಥಗಳೆಲ್ಲವನ್ನೂ "ಗೀತಾ" ಎಂಬ ದಿವ್ಯ ಸೂಕ್ತಿಯಿಂದ, ಜಗತ್ತಿಗೇ ಬೆಳಗಿ ಮಹೋಪಕಾರಮಾಡಿದನು. ಆ ಪರಮಾತ್ಮನ ದಯೆಯೇ ಮೂರ್ತಿಮತ್ತಾಗಿ ಬಂದು, ವಿಶದಪಡಿಸಿದ ಪರಾಶರ, ವ್ಯಾಸ ಆಳ್ವಾರ್ರುಗಳು ಮೊದಲಾದವರ ದಿವ್ಯಸೂಕ್ತಿಗಳನ್ನು ಚೆನ್ನಾಗಿ ಅರಿತ ನಮ್ಮ ಆಚಾರ್ಯರು ಉಪದೇಶಿಸಿರುವರು. ಆ ರೀತಿಯಾಗಿ ಲಭಿಸಿದ ತತ್ವಪ್ರಕಾರವನ್ನು ಇಲ್ಲಿ ಪ್ರಕಟಿಸಿರುವೆನು. (ಸ್ವಕಲ್ಪಿತವಲ್ಲ, ಭಗವಂತನಿಂದ ಹಿಡಿದು ಪರಂಪರೆಯಾಗಿ ಲಭಿಸಿರುವುದು ಎಂದು ಭಾವ.)

**ध्वस्तक्रूरात्मरीते रनुपमरथयन्तु श्च वेदान्तबोद्धुः ।**
**देवक्या नन्दनस्य प्रवरगुणनिधे र्निश्चलायाः कृपायाः ।।**
**पात्रीभूता वयं ये त्वचिति बुबुधिरे देशिका स्त्रीन् प्रकारान् ।**
**तेषामेवोदे शक्रमतप उपगतां पद्धतिं वीक्ष्य यामः ।। ७**

**ಮೂಲ : ವೇಲೈಪ್ಪುರಮಹಂ ಕಾಣ್ಬದುಪೋಲ್ ವೇದನನ್ನೆರಿಶೇರ್,**
**ನೂಲೈಪ್ಪುರಮಹಂಕಾಣ್ಡಲಿಲ್‌ನುಣ್ಣರಿವಿನ್ರಿ, ನಿನ್ರೀರ್,**
**ಮಾಲೈಪ್ಪೆರವಳಿಕಾಟ್ಟಿಯ ದೇಶಿಕರ್‌ವಾಶಕಮೇ,**
**ಓಲೈಪ್ಪುರತ್ತಿಲೆಳುದುಕಿನ್ರೋಮುಳ್ಳೆಳುದುಮಿನೇ ॥ 8**

ಅರ್ಥ:- ವೇಲೈ = ಸಮುದ್ರದ, ಪುರಂ-ಅಹಂ = ಹೊರಗೂ ಒಳಗೂ, ಕಾಣ್ಬದುಪೋಲ್ = ತೋರುವಂತೆ (ತಿಳಿಯುವಂತೆ) ವೇದ-ನಲ್-ನೆಂ = ವೇದಗಳಲ್ಲಿರುವ ಒಳ್ಳೆಯ ಮಾರ್ಗವನ್ನು, ಶೇರ್ = (ಬಿಡದೆ) ಸೇರಿ ಬೋಧಿಸುವ, ನೂಲೈ = ಶಾಸ್ತ್ರಗಳ, ಪುರಂ-ಅಹಂ = ಮೇಲಕ್ಕೆ ತೋರುವ ಅರ್ಥವನ್ನೂ ಒಳಗಡಗಿರುವ ತಾತ್ಪರ್ಯವನ್ನೂ, ಕಾಂಡಲಿಲ್ = ನೋಡುವುದರಲ್ಲಿ, ನುಣ್-ಅರಿವು-ಇನ್ರಿ = ಸೂಕ್ಷ್ಮವಾದ ಅರಿವಿಲ್ಲದೆ, ನಿನ್ರೀರ್ = ಇರುವವರೇ ! (ಸೂಕ್ಷ್ಮಮತಿಯಿಲ್ಲದ ಜನರೆ !) ಮಾಲೈ = ಪರಮಾತ್ಮನನ್ನು, ಪೆರ = (ನಾವು) ಪಡೆಯುವುದಕ್ಕೆ, ವಳಿ-ಕಾಟ್ಟಿಯ = ಮಾರ್ಗವನ್ನು ತೋರಿಸಿಕೊಟ್ಟಿರುವ,

ದೇಶಿಕರ್ = ಆಚಾರ್ಯರ, ವಾಶಕಮೇ = ಉಪದೇಶಸೂಕ್ತಿಯನ್ನೇ, ಓಲೈ-ಪುರತ್ತಿಲ್ = ಪತ್ರದ ಮೇಲೆ, ಎಳುದು ಹಿನ್ರೋಂ = ಬರೆಯುವೆವು. (ಇವನ್ನು) ಉಳ್-(ನಿಮ್ಮ) ಮನದೊಳಗೆ, ಎಳುದುಮಿನ್ = (ಮರೆಯದಂತೆ) ಬರೆದುಕೊಳ್ಳಿ

ತಾತ್ಪರ್ಯ :- ಆಸ್ತಿಕ ಶಿರೋಮಣಿಗಳೆ ! ಮಹಾಸಾಗರದ ವೈಶಾಲ್ಯವನ್ನೂ, ಗಂಭೀರತೆಯನ್ನೂ ಪೂರ್ಣವಾಗಿ ನೋಡುವುದು ಅತಿ ಕಷ್ಟವಲ್ಲವೇ; ಅಸಾಧ್ಯವೆಂದೇ ಹೇಳಬೇಕು. ಅಂತೆಯೇ ವೇದಗಳ ಮಾರ್ಗಗಳನ್ನು ಬೆಳಗುವ ಶಾಸ್ತ್ರಗಳಲ್ಲೂ ಮೇಲೆ ತೋರುವ ಅರ್ಥಗಳನ್ನೂ ಅಂತರಂಗವಾಗಿರುವ ಸಾರಾರ್ಥಗಳನ್ನೂ ಯಥಾವತ್ತಾಗಿ ಅರಿಯುವುದು ಅತಿ ಕಷ್ಟ. ಅದಕ್ಕೆ ಕಾರಣ ಸೂಕ್ಷ್ಮಮತಿಯಿಲ್ಲದಿರುವುದೇ ಆಗಿದೆ. ಆದುದರಿಂದ ಮುಕ್ತಿಯನ್ನು ಪಡೆಯಲು ತಕ್ಕ ಉಪಾಯವನ್ನು ತೋರಿಸಿ ಕೊಟ್ಟಿರುವ ಶ್ರೀಮದಾಚಾರ್ಯರ ಉಪದೇಶದ ಸಾರಾಂಶವನ್ನೇ ಈ ಗ್ರಂಥದಲ್ಲಿ ಬರೆಯುವೆನು. ಇದನ್ನು ಬಿಡದೆ, ನಿಮ್ಮಮನಸ್ಸಿಗೆ ಚೆನ್ನಾಗಿ ಹಿಡಿಯುವಂತೆ ಮಾಡಿಕೊಂಡು, ಚೆನ್ನಾಗಿ ಬಾಳಿ, ಬೆಳಗಿರಿ, (ಭಗವಂತನನ್ನು ಸದಾಚಾರ್ಯೋಪದೇಶದಿಂದಲೇ ಅರಿಯಬೇಕೆಂದು ಭಾವ.)

**बाह्याभ्यन्तरदृष्टिवज्जलनिधावाम्नायसन्मार्गयुक्-**
**शास्त्रान्तर्बहिरीक्ष्यमाणविषयेष्वाधूतसूक्ष्मेक्षणाः ! ॥**
**सर्वेशाप्तिपथैकदर्शिगुरुराडुक्ता गिरश्चैव ताः ।**
**पत्रेष्वत्र लिखाम एव मखिलं स्वान्तेषु संलिख्यताम् ॥** ೮

**ಮೂಲ :** **ಶಿರೈನಿಲೈಯಾಂಬವತ್ತಿಲ್ ಶಿರುತೇನಿನ್ಬಮುಣ್ಡುಳಲ್ವಾರ್,**
**ಮರೈನಿಲೈಕಣ್ಣರಿಯಾಮಯಲ್ ಮಾತ್ತಿಯಮನ್ನರುಳೇ,**
**ತುರೈನಿಲೈಪಾರಮೆನ ತ್ತುಳಂಗಾವಮುದಕ್ಕಡಲಾಂ,**
**ಇರೈನಿಲೈಯಾಮುರೈತ್ತೋಂ ಎಂಗುರುಕ್ಕಳಿಯಂಬಿನವೇ ॥** 9

ಅರ್ಥ :- ಶಿರೈ-ನಿಲೈ-ಆಂ-ಬವತ್ತಿಲ್ = ಸೆರೆಮನೆಯಂತಿರುವ ಈ ಸಂಸಾರದಲ್ಲಿ, ಶಿರು-ತೇನ್-ಇನ್ಬಂ = ಅತ್ಯಲ್ಪಸುಖವನ್ನು, ಉಂಡು = ಅನುಭವಿಸಿ, (ಅದರಲ್ಲೇ) ಉಳಲ್ವಾರ್ = ಮುಳುಗಿ ತೊಳಲುವವರ, ಮರೈ-ನಿಲೈ = ವೇದಗಳ ತಾತ್ಪರ್ಯವನ್ನು ಕಂಡು-ಅರಿಯಾ = ನೋಡಿ ತಿಳಿಯಲಾಗದಂತಹ, ಮಯಲ್-ಮಾತ್ತಿಯ = ಅಜ್ಞಾನವನ್ನು ಹೋಗಲಾಡಿಸುವ, ಮನ್-ಅರುಳಾಲ್ = ಪ್ರಬಲವಾದ ಕೃಪೆಯಿಂದ ಎಂ-ಗುರುಕ್ಕಳ್ = ನಮ್ಮ ಆಚಾರ್ಯರು, ಇಯಂಬಿನ = ಉಪದೇಶಿಸಿದಂತೆ, ತುರೈ = (ಆನಂದ ಸಾಗರದಲ್ಲಿ) ಇಳಿಯುವ ಸೋಪಾನ, ನಿಲೆ = (ಇಳಿದು ಮುಳುಗುವ ಸ್ಥಳ ಅಥವಾ) ಆಶ್ರಯಸ್ಥಾನ, ಪಾರ = (ಸಂಸಾರ ಸಾಗರದ) ಆಚೆದಡ, ಎನ = ಇವುಗಳೂ ಎಂಬಂತೆ, ತುಳಂಗಾ =

ಅಲುಗಾಡದ, ಅಮುದ-ಕಡಲ್-ಆಂ = ಅಮೃತ ಸಾಗರದಂತಿರುವ, ಇರ್ರೈ = ಭಗವಂತನ, ನಿಲೈ = ಪ್ರಕಾರವನ್ನು, ಯಾಂ.= ನಾವು, ಉರ್ರೈತ್ತೋಂ = ಹೇಳಿರುವೆವು. (ಈ ಗ್ರಂಥದಲ್ಲಿ ವ್ಯಕ್ತಪಡಿಸಿರುವೆವು.)

ತಾತ್ಪರ್ಯ :- ಈ ಸಂಸಾರ ಜೀವನವು ಸೆರೆಮನೆಯ ಬಾಳಿನಂತಿರುವುದು. ಇದರಲ್ಲಿ ಪಡಬಹುದಾದ ಸುಖವಾದರೋ ಜೇನಿನ ಹನಿಯಂತೆ ಅತ್ಯಲ್ಪವಾದುದು. ಇದನ್ನೇ ಅತಿ ಮಹತ್ತಾದುದೆಂದು ತಿಳಿದು, ಇದರಲ್ಲೇ ಮುಳುಗಿ ತೊಳಲುವ ಚೇತನರು ವೇದಾಂತದ ಸಾರವನ್ನು ಅರಿಯಲಾರರು. ಅವರ ಅಜ್ಞಾನವೇ ಇದಕ್ಕೆ ಕಾರಣ. ಅದನ್ನು ನಮ್ಮ ಆಚಾರ್ಯರು ಕರುಣಾಪೂರ್ಣವಾದ ಉಪದೇಶಗಳಿಂದ ನಿವಾರಿಸಬಲ್ಲರು. ಅವರು ನಮಗೆ ಆನಂದಸಾಗರದಲ್ಲಿ ಇಳಿಯುವ ಸೋಪಾನದಂತೆಯೂ, ಇಳಿದು, ಮಿಂದು, ಅನುಭವಿಸಿರುವ ಸ್ಥಳದಂತೆಯೂ ಅಥವಾ ನೆಲೆಯಾದ ಆಶ್ರಯ ಸ್ಥಾನದಂತೆಯೂ, ಸಂಸಾರಸಾಗರದ ಆಚೆದಡದಂತೆಯೂ ಇರುತ್ತಾ, ಪರಮಾತ್ಮನನ್ನು ತುಳುಕಾಡದ ಮತ್ತು ತಿಳಿಯಾದ ಅಮೃತಸಾಗರವಾಗಿರುವವನೆಂದು ಉಪದೇಶಿಸಿರುವರು. ಅದರಂತೆಯೇ ಅವನ ಸ್ವರೂಪ-ಸ್ವಭಾವಗಳನ್ನು ಈಗ ಇಲ್ಲಿ ಪ್ರಕಾಶಪಡಿಸುವೆನು.

**कारावासे भवेऽस्मिन् मधुलवसुख मास्वाद्य तल्लोलुपानां ।**
**वेदार्थाज्ञानिनां चाप्यमति मपनुदन्तो यथा देशिका नः ।।**
**प्रोचुः कारुण्यभूम्नाऽवतरणसुतटं स्वाश्रयं पार मीशं ।**
**व्यक्तं लक्ष्मीधवं तं व्यचल मिह सुधावारिधिं प्रावदाम् ।।** ९

ಮೂಲ : ವೆರಿಯಾರ್ ತುಳವುಡೈವಿತ್ತಕನ್ ತನ್ಮೈಯಿನ್ ಮೆಯ್ಯರಿವಾರ್,
ಕುರಿಯಾರ್‌ನೆಡಿಯವರೆನ್ನೊರುರು ಕುತ್ತಂಪಿರರ್ಕ್ಕುರೈಯಾರ್,
ಅರಿಯಾರ್ ತಿರತ್ತಿಲ್ ಅರುಳ್‌ಪುರಿನ್ದಾರಣನನ್ನೆರಿಯಾಲ್,
ಶಿರಿಯಾರ್‌ವಳಿಹಳಳಿಪ್ಪದುಂ ತೀಂಗುಕಳಿಪ್ಪದರ್ಕ್ಕೇ ॥ 10

ಅರ್ಥ :- ವೆರಿ-ಆರ್-ತುಳವು-ಉಡ್ಯೈ = ಪರಿಮಳದಿಂದ ಘಮಘಮಿಸುವ ತುಳಸೀ ಮಾಲೆಯನ್ನು ಧರಿಸಿರುವ, ವಿತ್ತಹನ್ = ಅತ್ಯಾಶ್ಚರ್ಯಕರ ಚೇಷ್ಟಿತನಾದ ಪರಮಾತ್ಮನ, ತನ್ಮೈಯಿನ್ = ಸ್ವಭಾವದ, ಮೆಯ್ = ಸತ್ಯಾಂಶವನ್ನು, ಅರಿವಾರ್ = ಅರಿತ ನಮ್ಮ ಆಚಾರ್ಯರು, ಪಿರರ್ಕ್ಕು = ಇತರರ ವಿಷಯದಲ್ಲಿ, ಕುರ್ರೈಯಾರ್ = ಕೀಳಾದವರು, ನೆಡಿಯಾರ್ = ಉತ್ತಮರಾದವರು, (ಉಚ್ಚನೀಚಭಾವದಿಂದ ಬರುವ ನ್ಯೂನಾತಿರೇಕವನ್ನು) ಎನ = ಎಂದು, ಒರು-ಕುತ್ತಂ-ಉರ್ರೈಯಾರ್ = ಯಾವ ಒಂದು ದೋಷವನ್ನೂ ಎತ್ತಿ ಆಡಿಕೊಳ್ಳುವವರಲ್ಲ. (ಹಾಗಿದ್ದರೂ) ಆರಣ-ನಲ್-ನೆರಿಯಾಲ್ = ವೇದಾಂತವೆಂಬ

ಉತ್ತಮಮಾರ್ಗದಿಂದ, ಶಿರಿಯಾರ್ = ಅಲ್ಪರಾದ ಇತರ ಮತದವರ, ವಳಿಹಳ್ = ಸಿದ್ಧಾಂತಗಳನ್ನು, ಅಳಿಪ್ಪದುಂ = ಖಂಡಿಸಿ, ನಾಶಮಾಡುವುದು, (ಏತಕ್ಕೆಂದರೆ) ಅರಿಯಾರ್-ತಿರತ್ತಿಲ್ = (ನಮ್ಮ ಸಿದ್ಧಾಂತವನ್ನು) ಅರಿಯದ ಪಾಮರರ ವಿಷಯದಲ್ಲಿ ಅರುಳ್‌ಪುರಿನ್ದು, ದಯೆಯಿಟ್ಟು, ತೀಂಗು-ಕಳಿಪ್ಪದರಕ್ಕೇ = (ಇತರರ ಮತಗಳಲ್ಲಿರುವ ದೋಷಗಳು ತಿಳಿಯುವುದರಿಂದ ಅವರಿಗೆ ಬರುವ) ಕೆಡಕನ್ನು ಹೋಗಲಾಡಿಸುವುದಕ್ಕೋಸ್ಕರವೇ (ಬೇರೆಯಲ್ಲ.)

ತಾತ್ಪರ್ಯ :- ನಮ್ಮ ಭಗವಂತನು ಸದ್ಗುಣಪೂರ್ಣ ಸುಗಂಧವನ್ನು ಬೀರುವ ತುಲಸೀ ಮಾಲಾದಿಗಳನ್ನು ಧರಿಸಿ, ಅಲಂಕೃತನಾದವನು ಮತ್ತು ಅತ್ಯದ್ಭುತವಾದ ವ್ಯಾಪಾರಗಳನ್ನು ಮಾಡುವವನು. ನಮ್ಮ ಆಚಾರ್ಯರುಗಳಾದರೋ ಅಂತಹ ಪರಮಾತ್ಮನ ಸ್ವರೂಪ ಸ್ವಭಾವಗಳನ್ನು ಬಲು ಚೆನ್ನಾಗಿ ಅರಿತು ನುರಿತವರು. ಇಂತಹವರು ಇತರರ ವಿಷಯವಾಗಿ ಅಲ್ಪವಾದ ದೋಷವನ್ನೂ ಎತ್ತಿ ಆಡತಕ್ಕವರಲ್ಲ. ಹಾಗಾದರೆ, ಅವರು ವೇದಮಾರ್ಗವನ್ನು ಬಿಟ್ಟು, ಇತರರ ಮತವನ್ನು ಒಪ್ಪುವಂತಹವರನ್ನು ಖಂಡಿಸಿರುವುದು ಏಕೆ ? ಎಂದರೆ, ನಮ್ಮ ಸಿದ್ಧಾಂತವನ್ನು (ಚೆನ್ನಾಗಿ) ಸರಿಯಾಗಿ ಅರಿಯದ ಸಾಧಾರಣ ಜನರು ಇತರ ಮತದವರ ಬಲೆಗೆ ಬಿದ್ದು ಬಲಿಯಾಗದಿರಲಿ, ಎಂದು ಅವರ ಮೇಲೆ ದಯೆಗೈದು, ಅವರಿಗೆ ಅನ್ಯಮತದಲ್ಲಿರುವ ದೋಷಗಳನ್ನು ತಿಳಿಸುವುದಕ್ಕಾಗಿಯೇ ಹೊರತು ಬೇರೆಯಲ್ಲ.

अत्यन्ताश्चर्यकर्तु स्सुरभिततुलसीमालिकालङ्कृतस्य ।
याथार्थ्यं तत्स्वभावे विदु रिह गुरव स्त्वन्यनीचोच्चभावम् ।।
नैव ब्रूयु स्तथापि प्रतिविमतनिरासः कुतो वेति चेन्नः ।
सिद्धान्तेऽज्ञेषु कारुण्यत उरुविपदां वारणायेति चिद्यात् ।। १०

ಮೂಲ : ಮಿಂಡುರ್ಕೈಕ್ಕವಿರಹುತರುಂ ತರುಕ್ಕಂಕೊಂಡೇ
ವೇಂಡುಂಗಾಲ್‌ವೇಂಡುವದೇವಿಳಂಬುಹಿನ್ರಾರ್,
ಕಂಡದರ್ಕುವಿಪರೀತಂ ಕತ್ತುಹಿನ್ರಾರ್
ಕಾಣಾದಕುರ್ರೈಮರ್ರೈಯಿಲ್‌ಕಾಟ್ಟನಿರ್ಪಾರ್,
ಪಂಡೊರುತ್ತನ್ ಕಂಡುರೈತ್ತೇನ್ ನಾನೇಯೆನ್ನ
ಪಲವಹೈಯಿಲುಪಾದಿಹಳಾಲ್‌ಪಡಿಂದುವೀಳ್ವಾರ್,
ಕೊಂಡಲೊಕ್ಕುಂ ತಿರುಮೇನಿಮಾಯಕ್ಕೂತ್ತನ್
ಕುರೈಕಳಲ್‌ಶೇರ್‌ವಿದಿವಹೈಯಿಲ್‌ಕೂಡಾದಾರೇ ।। 11

**ಅರ್ಥ** :- ಮಿಂಡು = (ಮೇಲೆ ಮೇಲೆ) ವಿತಂಡಾವಾದವನ್ನು, ಉರೈಕ್ಕ = ಹೇಳುವುದಕ್ಕೆ, ವಿರಹು-ತರುಂ = ಎಡೆಗೊಡುವ, ತರುಕ್ಕಂ-ಕೊಂಡೇ = ಕೇವಲ ಯುಕ್ತಿಗಳ ಮೂಲಕವೇ, ವೇಂಡುಂ-ಕಾಲ್ = (ತಮಗೆ) ಬೇಕಾದಾಗ, ವೇಂಡುವದೇ = ಇಷ್ಟವಾದ ವಿಷಯವನ್ನೇ, (ತೋರಿದಂತೆ) ವಿಳಂಬುಹಿನ್ರಾರ್ = ಹೇಳುವವರೂ, (ಕಣಾದ-ಗೌತಮ ವೈಯ್ಯಾಕರಣ-ಮೀಮಾಂಸಕರು), ಕಂಡದರ್ಕು = (ತಾವು) ನೋಡಿದುದಕ್ಕೆ, ವಿಪರೀತಂ = ವಿರುದ್ಧವಾಗಿ, ಕತ್ತುಹಿನ್ರಾರ್ = ಗೊಂದಲವೆಬ್ಬಿಸುವವರೂ (ಭಾಸ್ಕರ-ಯಾದವ-ಅದ್ವೈತಿಗಳು) ಮರೈಯಿಲ್ = ವೇದದಲ್ಲಿ, ಕಾಣಾದ-ಕುರೈ = ಕಾಣದಂತಹ ದೋಷವನ್ನು, ಕಾಟ್ಟ-ನಿರ್ಪಾರ್ = ಎತ್ತಿ ತೋರಿಸುವವರೂ, (ಚಾರ್ವಾಕ-ಬೌದ್ಧ ಜೈನರು ವೇದಪ್ರಾಮಾಣ್ಯವನ್ನೊಪ್ಪದವರು), ಪಂಡು-ಒರುತ್ತನ್ = ಹಿಂದಿನವರಲ್ಲಿ ಒಬ್ಬ (ಕಪಿಲ-ಹಿರಣ್ಯಗರ್ಭ-ಪಶುಪತಿಗಳಲ್ಲಿ ಒಬ್ಬ) ನಾನೇ-ಕಂಡು, ಉರೈತ್ತ್-ಎನ್ನ = ನಾನೇ ಕಂಡುಹಿಡಿದು ಉಪದೇಶಿಸಿದೆನೆಂದು ಹೇಳಲು, ಪಲ-ವಹೈಯಿಲ್-ಉಪಾದಿಹಳಾಲ್ = ಹಲವಾರು ಕಾರಣಗಳಿಂದ, (ದ್ರವ್ಯಾಶೆ-ಆಹಾರ ರುಚಿ ಮುಂತಾದ) ಪಡಿಂದು = (ಆಯಾ ಮತಕ್ಕೆ) ಸೇರಿಕೊಂಡವರಾಗಿ, ವೀಳ್ವಾರ್ = ಅಳಿದುಹೋಗುವವರೂ, (ಸಾಂಖ್ಯ-ಯೋಗ-ಶೈವರು) ಸಹ, ಕೊಂಡಲ್-ಒಕ್ಕುಂ-ತಿರು-ಮೇನಿ = ಮೇಘದ ವರ್ಣಗುಣಗಳಿಂದ ಕೂಡಿದ ದಿವ್ಯದೇಹವುಳ್ಳ, ಮಾಯ-ಕೂತ್ತನ್ = ಆಶ್ಚರ್ಯ ಕ್ರಿಯನಾದ ಭಗವಂತನ, ಕುರೈ-ಕಳಲ್-ಶೇರ್ = ಧ್ವನಿಗೈವ ಅಡಿದಾವರೆಗಳನ್ನು ಸೇರಿ ಆನಂದಿಸುವ, ವಿದಿ-ವಹೈಯಿಲ್ = ಭಾಗ್ಯವಿಶೇಷದಲ್ಲಿ, ಕೂಡಾದಾರೇ = ಸೇರದವರಾಗಿಯೇ ಆಗುವರು.

**ತಾತ್ಪರ್ಯ** :- ಕಣಾದ-ಗೌತಮ-ವೈಯಾಕರಣ-ಮೀಮಾಂಸಕರು ಮೇಲೆ ಮೇಲೆ ವಿತಂಡಾವಾದ ಮಾಡಲು ಅವಕಾಶಮಾಡಿಕೊಡುವ ಕುಯುಕ್ತಿಗಳಿಂದಲೇ ತಮಗಿಷ್ಟವಿದ್ದಾಗ ಬೇಕಾದ ವಿಷಯವನ್ನು ತೋರಿದಂತೆ ಹೇಳುವರು, ಭಾಸ್ಕರ-ಯಾದವ-ಅದ್ವೈತಿಗಳು ತಾವು ಕಣ್ಣಾರಕಂಡಜಗತ್ತನ್ನೇ ಬೇರೆಯಾಗಿ ವಾದಿಸುತ್ತಾ ಗೊಂದಲವೆಬ್ಬಿಸುವರು, ಚಾರ್ವಾಕ-ಬೌದ್ಧ-ಜೈನರಾದರೋ ಯಾರೊಬ್ಬರಿಂದಲೂ ಬರೆಯಲ್ಪಡದೆ ಅಪೌರುಷೇಯವಾಗಿ ಬರುತ್ತಿರುವುದೆಂದು ಹೇಳಿಸಿಕೊಳ್ಳುವ ವೇದಗಳನ್ನು ಪುರುಷ ರಚಿತವಾದುವೆಂದು ವಾದಿಸುವರು. ಸಾಂಖ್ಯ-ಯೋಗ-ಶೈವಮತದವರು ತಮ್ಮ ತಮ್ಮ ಮತಗಳನ್ನು ಹಿಂದೆಯೇ ಕಪಿಲರು-ಹಿರಣ್ಯಗರ್ಭರು-ಪಶುಪತಿಗಳು ತಾವಾಗಿಯೇ ಕಂಡುಹಿಡಿದರು ಎನ್ನುವರು ಮತ್ತು ಅವುಗಳನ್ನೇ ನಂಬಿ, ವಿತ್ತಾಶಾಗೃಹೀತರಾಗಿಯೂ, ಆಹಾರಾಶಾಪೀಡಿತರಾಗಿಯೂ ಆಯಾಯಾ ಮತಗಳಲ್ಲಿ ಬಿಡದೆ ಸೇರಿಕೊಂಡೇ ಇರುವರು. ಹೀಗೆ ಈ ಎಲ್ಲ ಮತದವರಿಗೂ ನೀಲಮೇಘಶ್ಯಾಮನಾದ ಪರಮಾತ್ಮನ ಪಾದಾರವಿಂದಗಳನ್ನು ಪಡೆದು ಆನಂದವನ್ನನುಭವಿಸುವ ಭಾಗ್ಯವಿಲ್ಲದೇ ಹಾಗೆಯೇ ನಶಿಸುವರು. (ಇವೆಲ್ಲ ಅನ್ಯಮತಗಳು) ಕೆಲವು ಮುಖ್ಯಾಂಶಗಳಲ್ಲಿ ಹೊಂದಿಕೆ

ಯುಳ್ಳವುಗಳನ್ನು ಒಂದೊಂದು ಗುಂಪಾಗಿ ಮಾಡಿ, ನಾಲ್ಕು ಗುಂಪುಗಳಾಗಿಸಿರುವರು. ಇವುಗಳಲ್ಲಿರುವ ಸಾಮೂಹಿಕ ದೋಷಗಳನ್ನು ಈ ಪಾಶುರದಲ್ಲಿ ಹೇಳಿರುವವರಾದ್ದರಿಂದ ಈ ಭಾಗಕ್ಕೆ ''ಸಮುದಾಯದೋಷಾಧಿಕಾರ''ವೆನ್ನುವರು.

काले काले वितण्डास्पद मभिलषितं तर्कतः प्रब्रुवत्सु ।
विक्रोशत्स्वात्मदृष्टं विषयमपि तदा तद्विरुद्धं वदत्सु ।।
दोषान् वेदेष्वदृष्टान् क्वचिदपि, कपिलाद्येषु च प्राक्तनेषु ।
प्रादुर्भूयोक्तवत्सु स्वत इद मखिलं चे त्यथोपाधिभि स्तैः ।।
नानारूपै र्विकृष्टा विमतजुष इमे संप्रणष्टाः तत श्च ।
नीलाम्भोवाहवर्णप्राथितसुवपुष स्तस्य चाश्चर्यशक्तेः ।।
भूम्नश्शब्दायमानानुपमपदसमायोगभाग्यानवात्प्या ।
योगैकावाप्य मानन्दधु मिह विजहु र्नैव संश्लेषिता स्स्युः ।। ११

ಮೂಲ : ಕಂಡದುಮೆಯ್ಯೆನಿಲ್ ಕಾಣುಂಮರ್ರೈಯಿಲರಿವುಕಂಡೋಂ,
ಕಂಡದಿಲಾದದಿಲದೆನಿಲ್ ಕಂಡಿಲಂಕುತ್ತಮಿದಿಲ್,
ಕಂಡದುಪೋಲ್ಮರ್ರೈಕಾಟ್ಟುಮದುಂ ಕಂಡದೊತ್ತದನಾಲ್,
ಉಂಡದುಕೇಳ್ಕುಮುಲೋಕಾಯತರೆನ್ರುಮೀರುವದೇ ।। 12

ಅರ್ಥ :- ಕಂಡದು = ಕಣ್ಣಾರ ಕಂಡಿದ್ದೇ, ಮೆಯ್-ಎನಿಲ್ = ಸತ್ಯವಾದುದೆಂದರೆ ಕಾಣುಂ-ಮರ್ರೈಯಿಲ್ = ಪ್ರತ್ಯಕ್ಷವಾಗಿಯೇ ತಿಳಿಯಲ್ಪಡುವ ವೇದದಿಂದ, ಅರಿವು-ಕಂಡೋಂ = ಪ್ರತ್ಯಕ್ಷವಾಗಿ (ಉಂಟಾಗುವ) ಜ್ಞಾನವನ್ನು, ಅರಿತೆವು, ಕಂಡದ್-ಇಲಾದದ್ = ಪ್ರತ್ಯಕ್ಷವಾಗಿ ತಿಳಿಯಲ್ಪಡದಿರುವ ವಸ್ತುವು, ಇಲದು-ಎನಿಲ್ = ಸತ್ಯವಲ್ಲವೆಂದರೆ, ಇದಿಲ್ = (ವೇದಜನ್ಯವಾದ) ಈ ಜ್ಞಾನದಲ್ಲಿ, ಕುತ್ತಂ = ಯಾವ ದೋಷವನ್ನೂ, ಕಂಡಿಲಂ = ಕಾಣಲಿಲ್ಲ, ಕಂಡದು-ಪೋಲ್ = ಪ್ರತ್ಯಕ್ಷದಂತೆ (ಪ್ರಮಾಣವನ್ನಾಗಿ ತೆಗೆದುಕೊಳ್ಳುವಂತೆ), ಮರ್ರೈ-ಕಾಟ್ಟುಮದುಂ = ವೇದದಿಂದ ತಿಳಿಯುವ ಜ್ಞಾನವೂ, ಕಂಡದು-ಒತ್ತದನಾಲ್ = ಪ್ರತ್ಯಕ್ಷ ಪ್ರಮಾಣಕ್ಕೆ ಹೊಂದಿಕೊಂಡಿರುವುದರಿಂದ, ಉಂಡದು-ಕೇಳ್ಕು = ತಾನು ಅನುಭವಿಸಿದ್ದನ್ನೇ ಇತರರನ್ನೂ ಕೇಳಿ ತಿಳಿದುಕೊಳ್ಳುವವರಾದ, ಉಲೋಕಾಯತರ್ = ಲೋಕಾಯುತರಾದ ಚಾರ್ವಾಕರು, ಎನ್ರು-ಮೀರುವದು = ಯಾವಾಗ, ಹೇಗೆತಾನೆ (ನಮ್ಮ ಅಭಿಪ್ರಾಯವನ್ನು) ಮೀರಲಾದೀತು ? ಖಂಡಿತ ನಾವು ಹೇಳಿದಂತೆ ಒಪ್ಪಿಕೊಂಡೇತೀರಬೇಕೆಂದರ್ಥ.

ತಾತ್ಪರ್ಯ :- (ಪ್ರತ್ಯಕ್ಷವೊಂದೇ ಪ್ರಮಾಣವು, ಇದರಿಂದ ತಿಳಿಯುವುದೇ ಸತ್ಯವು. ಪ್ರತ್ಯಕ್ಷವಾಗಿ ಕಾಣಿಸದವು ಸತ್ಯವಲ್ಲ, ಹಾಗೂ ಪ್ರತ್ಯಕ್ಷದಲ್ಲೂ ಯಾವ ದೋಷವೂ ಇರಬಾರದು. ಆದುದರಿಂದಲೇ ವೇದದಲ್ಲಿ ಹೇಳಿರುವ ಧರ್ಮ-ಅಧರ್ಮ, ಈಶ್ವರ-ಪರಲೋಕ ಮುಂತಾದುವೆಲ್ಲ ಸುಳ್ಳು. ಇದೆಲ್ಲ ಅವರ ಮತಸಂಗ್ರಹ.

प्रत्यक्षेक्षितमेव सत्य मिति चेत् ज्ञानं ह्युपैम श्रुतौ ।
अप्रत्यक्षगतं त्वसत्य मितिचेत् दोषो न दृष्टोऽत्र च ।।
प्रत्यक्षोपमितैव वैदिकमति स्तत्स्वानुभूतस्य च ।
प्रष्टारः क्नु लङ्घयेयु रुचितं लोकायता नो मतम् ।। १२

ಮೂಲ : ಕಂಡದನಾಲ್ ಕಾಣಾದದನುಮಿಕ್ಕಿನ್ರಾರ್
ಕಂಡೊರುತ್ತನುರೈತ್ತದನ್ನೈಕ್ಕವರುಹಿನ್ರಾರ್,
ಉಂಡು ಪಶಿಕೆಡುಮೆನ್ರೇಯುಣರ್ನ್ದುಣ್ಗಿನ್ರಾರ್
ಒನ್ರಾಲೇ ಯೊನ್ರೈತ್ತಾಂ ಶಾದಿಕ್ಕಿನ್ರಾರ್,
ಪಂಡುಮುಲೈಯುಣ್ಡದನಾಲ್ ಮುಲೈಯುಣ್ಗಿನ್ರಾರ್.
ಪಾರ್ಕಿನ್ರಾರ್ ಪಲರಲ್ಲಾತ್ತಮ್ಮೈ ಮತ್ತುಂ,
ಕಂಡು ಮತಿಕೆಟ್ಟನಿಲೈಕಾಣಹಿಲ್ಲಾರ್
ಕಾಣಾದದಿಲದೆನ್ರುಕಲಂಗುವಾರೇ ॥ 13

ಅರ್ಥ :- ಕಾಣಾದದ್ = ಕಣ್ಣಿಗೆ ಕಾಣಿಸದಿರುವ ವಸ್ತುವು, ಇಲದ್ = ಇಲ್ಲ, ಎನ್ರು = ಎಂದು, ಕಲಂಗುವಾರ್ = ಉದ್ರೇಕಗೊಳ್ಳುವ ಚಾರ್ವಾಕರು, ಕಂಡದನಾಲ್ = ಕಣ್ಣಿಗೆ ಕಾಣಿಸುವ ವಸ್ತುವಿನಮೂಲಕ, ಕಾಣಾದದ್ = ಕಾಣಿಸದವಸ್ತು ಇರುವುದನ್ನು, ಅನುಮಿಕ್ಕಿನ್ರಾರ್ = ಊಹಿಸುವರು, (ಅನುಮಾನಪ್ರಮಾಣದಿಂದ ಒಪ್ಪುವರು) ಒರುತ್ತನ್-ಕಂಡ್ = ಬೇರೊಬ್ಬನುನೋಡಿ, (ತಿಳಿದು) ಉರೈತ್ತದನ್ನೈ = ಹೇಳಿದ ವಿಷಯವನ್ನು, ಕವರುಹಿನ್ರಾರ್ = ಒಪ್ಪಿಕೊಳ್ಳುತ್ತಾರೆ. ಉಂಡು = ಊಟಮಾಡಿದ ಮೇಲೆ, ಪಶಿ = ಹಸಿವು, ಕೆಡುಂ-ಎನ್ರೇ = ಹೋಗುವುದೆಂದೇ, ಉಣರ್ನ್ದು = ತಿಳಿದು, ಉಣ್ಗಿನ್ರಾರ್ = ಊಟಮಾಡುತ್ತಾರೆ. ಒನ್ರಾಲೇ = ಒಂದು ಸಾಧನದಿಂದ, ಒನ್ರೈ = ಒಂದು ವಸ್ತುವನ್ನು, ತಾಂ-ಶಾದಿಕ್ಕಿನ್ರಾರ್ = ತಾವು ಸಾಧಿಸುತ್ತಾರೆ. ಪಂಡು = ಹಿಂದಿನ ಜನ್ಮದಲ್ಲಿ, ಮುಲೈ-ಉಂಡು = ತಾಯಿಯ ಎದೆ ಹಾಲನ್ನು ಕುಡಿದು, ಅದನಾಲ್ = ಅದರಿಂದ (ಆ ಸಂಸ್ಕಾರದಿಂದ) ಮುಲೈ-ಉಣ್ಗಿನ್ರಾರ್. = (ಈ ಜನ್ಮದಲ್ಲೂ) ಹಾಲನ್ನು ಕುಡಿಯುವವರು, ಮತ್ತುಂ = ಮೇಲೂ, ಪಲ-ಅಲ್ಲಾದ-ತಮ್ಮೈ = (ಕೈಕಾಲು ಮೊದಲಾದ) ಹಲವಾರು

ಅವಯವಗಳಾಗದೆ ಅವಕ್ಕಿಂತ ಬೇರೆಯಾಗಿರುವ ತಮ್ಮ ಜೀವಾತ್ಮನ ಸ್ವರೂಪವನ್ನು, ಪಾರ್ಕಿನ್ರಾರ್ = (ತನ್ನ ಕೈ, ಕಾಲು ಮುಂತಾದ ಕ್ರಮದಲ್ಲಿ) ತಿಳಿದುಕೊಳ್ಳುವ, ಕಂಡುಂ = ಹೀಗೆ ಕಂಡುಕೊಂಡಿದ್ದರೂ, ಮತಿ-ಕೆಟ್ಟ-ನಿಲ್ಶೈ = ಬುದ್ಧಿಗೆಟ್ಟು ತಾವು ವಾದಿಸುವ ಸ್ಥಿತಿಯನ್ನು, ಕಾಣಹಿಲ್ಲಾರ್ = ಅರಿತುಕೊಳ್ಳಲಿಲ್ಲ (ತಮ್ಮದು ಹಟವಾದವೆಂಬುದನ್ನು ಅರಿಯಲಿಲ್ಲ.)

ತಾತ್ಪರ್ಯ : ಚಾರ್ವಾಕರು ತಾವು ಕಾಣುವ ಹೊಗೆಯಿಂದ ಕಾಣಿಸದ ಬೆಂಕಿಯನ್ನು ಊಹಿಸಿ (ಅನುಮಾನ ಪ್ರಮಾಣದಿಂದ) ತಿಳಿಯುತ್ತಾರೆ. ಬೇರೆಯವರು ಕಂಡು ಹೇಳಿದ್ದನ್ನೆಲ್ಲಾ ತಾವೂ ನಂಬಿ ಒಪ್ಪುತ್ತಾರೆ. ಇದರಿಂದ ಅವರು ಅನುಮಾನ ಮತ್ತು ಶಬ್ದವೆಂಬ ಪ್ರಮಾಣಗಳನ್ನು ಒಪ್ಪಿಕೊಂಡಂತಾಗಲಿಲ್ಲವೆ ? ಮೇಲೂ ಹಸಿವಾದಾಗ ಊಟಮಾಡಿದರೆ ಹಸಿವು ಹೋಗುವುದೆಂದರಿತೇ ಊಟ ಮಾಡುವರು. ಊಟಕ್ಕೆ ಮುಂಚೆ ''ಊಟಮಾಡಿದರೆ ಹಸಿವಿಂಗುವುದು'' ಎಂಬುದನ್ನು ಪ್ರತ್ಯಕ್ಷವಾಗಿ ಅರಿತುಕೊಂಡಿರಲಿಲ್ಲವೇ ? ಪ್ರತಿವಾದಿಗಳೊಂದಿಗೆ ವಾದಿಸುವಾಗ ಇಬ್ಬರೂ ಒಪ್ಪಿರುವ ಕಾರಣವೊಂದರಿಂದ ಕಾಣದುದನ್ನೂ ಇರುವಂತೆ ಸಾಧಿಸುವರು. ಇದರಿಂದಲೂ ''ಅನುಮಾನವನ್ನು'' ಅವರು ಒಪ್ಪಿದಂತಾಯಿತು. ಅಷ್ಟೇ ಅಲ್ಲದೆ ಕಣ್ಣಿಗೆ ಕಾಣುವ ದೇಹವನ್ನು ಬಿಟ್ಟು ಕಾಣದಿರುವ ''ಆತ್ಮ''ನಿಲ್ಲವೆನ್ನುವ ಚಾರ್ವಾಕರಿಗೆ ''ಮಗು ಹುಟ್ಟಿದೊಡನೆ ಅದು ತನ್ನ ತಾಯಿಯ ಹಾಲನ್ನು ಕುಡಿಯುವುದಕ್ಕೆ ಅದರಿಂದ ಹಿಂದಿನ ಜನ್ಮದ ಸಂಸ್ಕಾರವೇ ಕಾರಣ'' ಎಂಬುದನ್ನು ಬಿಟ್ಟು ಮತ್ತಾವ ಕಾರಣವನ್ನು ಹೇಳಲೂ ಅವಕಾಶವೇ ಇಲ್ಲವಾಗಿದೆ. ಇದರಿಂದ ದೇಹಕ್ಕಿಂತ ಬೇರೆ ''ಆತ್ಮ''ನೆಂಬ ವಸ್ತುವೊಂದಿದೆಯೆಂದು ಒಪ್ಪಿದಂತಾಗಲಿಲ್ಲವೇ? ಮೇಲೂ ''ಶರೀರವೇ ಆತ್ಮಾ'' ಎಂದು ಚಾರ್ವಾಕರು ಇದು ನನ್ನ ಕೈ, ಕಾಲು, ದೇಹ ಎಂಬ ತಮ್ಮ ವ್ಯವಹಾರದಿಂದಲೇ ''ನನ್ನ'' ಎಂಬ ಅನುಭವವಿರುವ ಆತ್ಮನನ್ನು ಒಪ್ಪಿದಂತಾಗಲಿಲ್ಲವೇ ?

ಹೀಗೆ ತಮ್ಮ ಒಪ್ಪಿಗೆಗೂ, ಕಾರ್ಯಗಳಿಗೂ, ಅನುಭವಗಳಿಗೂ ತೀರ ವಿರುದ್ಧವಾದ ಅಂಶಗಳನ್ನು ಅರಿತುಕೊಂಡಿದ್ದರೂ ''ತಿಳಿಗೇಡಿ'' ತನದಿಂದ ತಮ್ಮ ದುರ್ವಾದವನ್ನು ಸರಿಪಡಿಸಿಕೊಳ್ಳುವುದಿಲ್ಲ, ಬರೀ ಮೊಂಡುವಾದ ಮಾಡುವರು.

प्रत्यक्षेतरगम्यवस्तु न भवेदित्युद्विजन्तो हि ये ।
प्रत्यक्षेक्षितवस्तनाऽन्यदपि तेऽदृष्टं विजानन्त्यहो ।।
दृष्टोक्तं यदि केनाचित् किमपि तत् स्वीकुर्वतेऽमी तथा ।
भुक्त्या क्षुच्च निवर्ततेत्विति विजानाना श्च ते भुञ्जते ।।
एकेनैव च साधयन्त्यपर मप्येते पुरा जन्मनि ।
स्तन्यास्वादनसंस्कृते रिह जनौ स्तन्यं पिबन्ति स्वयम् ।।

स्वात्मानं वपुरादितोऽन्य मिति ते जानन्ति याथार्थ्यतः ।
दृष्ट्वाप्येवमिमे प्रहीणमतितां स्वीयां न पश्यन्त्यहो ।। १३

ಮೂಲ : ಕಾಣಾದಿಲದೆನುಂ ಕಲ್ವಿಯಿನಾರೈಕ್ಕಡಿಂದದರ್ಪ್ಪಿ,
ಕೋಣಾರ್‌ಕುತರ್ಕಂಗಳ್‌ಕೊಂಡೇ ಕುಳಪ್ಪುಂಬವುದ್ದರ್‌ಹಳಿಲ್,
ನಾಣಾದನ್ನೈತ್ತುಮಿಲದೆನ್ರುಂ ನಾಲ್ವಹೈಯನ್ರಿದೆನ್ರುಂ,
ವಾಣಾಳರುಕ್ಕಿನ್ರಮದ್ದಿಮತ್ತಾನ್‌ವಳಿಮಾತ್ತುವಮೇ ॥ 14

ಅರ್ಥ :- ಕಾಣಾದು = ಕಾಣದವಸ್ತು, ಇಲದು = ಇಲ್ಲ, ಎನುಂ = ಎಂಬ, ಕಲ್ವಿಯಿನಾರೈ = ಸಿದ್ಧಾಂತವುಳ್ಳ ಚಾರ್ವಾಕರನ್ನು, ಕಡಿಂದದರ್ಪ್ಪಿ = ಖಂಡಿಸಿದಮೇಲೆ, ಕೋಣ್-ಆರ್ = ವಕ್ರತನವೇ ತುಂಬಿರುವ, ಕುತರ್ಕಂಗಳ್-ಕೊಂಡೇ = ಕುಯುಕ್ತಿಗಳಿಂದಲೇ, ಕುಳಪ್ಪುಂ = (ಜಗತ್ತನ್ನು) ಕದಡುವಂತಹ, ಬವುದ್ದರ್‌ಹಳಿಲ್ = ಬೌದ್ಧರುಗಳಿಗೆ, ನಾಣಾದು = ನಾಚಿಕೆಯಿಲ್ಲದೆ, ಅನ್ನೈತ್ತುಂ-ಇಲದ್-ಎನ್ರುಂ = ನಾಲ್ಕುವಿಧಗಳಲ್ಲಿ ಅಡಗುವುದಿಲ್ಲವೆಂದೂ, ವಾಳ್-ನಾಳ್-ಅರುಕ್ಕಿನ್ನ = (ಪತಿಯು) ಬದುಕಿರುವಾಗಲೇ ತಾಳಿಯನ್ನು ಕಿತ್ತುಹಾಕುವ ಹೆಂಗಸಿನಂತಿರುವ, ಮದ್ದಿಮತ್ತಾರ್ = ಮಾಧ್ಯಮಿಕನೆಂಬುವನ ಸಿದ್ಧಾಂತವನ್ನು, ಮಾತ್ತುವಂ = ಸದೆಬಡಿಯುತ್ತೇವೆ.

ತಾತ್ಪರ್ಯ :-ಬೌದ್ಧರಲ್ಲಿನಾಲ್ಕು ಬಗೆ. ಅವರಲ್ಲಿ ಮಾಧ್ಯಮಿಕನೆಂಬುವನು ಒಬ್ಬ. ಅವನು ''ಸರ್ವವೂ ಶೂನ್ಯ'' ಎಂಬುವನು. ತತ್ವವೆಂಬುದೊಂದೂ ಇಲ್ಲವೇ ಇಲ್ಲವೆಂಬುವ ಇವನೇ ಬುದ್ಧನ ಪ್ರಿಯ ಶಿಷ್ಯನಂತೆ. ಪ್ರಾಯಶಃ ವಸ್ತುವು ನಿಜವಾಗಿ ಇದೆ (ಸತ್) ಯೆಂದೂ ಸುಳ್ಳಾಗಿರುವುದೆಂದೂ, (ಅಸತ್) ನಿಜವು ಸುಳ್ಳೂ ಆಗಿರುವುದೆಂದೂ (ಸದಸತ್), ನಿಜವೆಂದೂ ಹೇಳಲಾಗದೇ ಸುಳ್ಳೆಂದೂ ಹೇಳಲಾಗದೇ ಇರುವುದೆಂದೂ (ಸದಸದ್ವಿಲಕ್ಷಣ) ಹೇಳುವುದುಂಟು. ಈ ಮಾಧ್ಯಮಿಕನು ಈ ಜಗತ್ತನ್ನು ಮೇಲೆ ಹೇಳಿದ ನಾಲ್ಕು ವಿಧದಲ್ಲಿ ಒಂದೊಂದರಲ್ಲೂ ಸೇರಿಸಲಾಗುವುದಿಲ್ಲವೆನ್ನುವನು. ಸಮಸ್ತ ಜಗತ್ತಿಗೂ ಪ್ರಭುವಾಗಿ ಬೆಳಗುವ ಭಗವಂತನನ್ನೂ, ಅವನ ಅಧೀನವಾಗಿರುವ ಈ ಜಗತ್ತನ್ನೂ ಇಲ್ಲದಂತೆಯೇ ಮಾಡಿ, ಸರ್ವೇಶ್ವರನಿಂದ ಹೊಂದಬಹುದಾದ ಫಲಗಳನ್ನು ನಾಶಮಾಡಿಕೊಂಡಿರುವನು, ಇದು ಹೇಗಿದೆಯೆಂದರೆ, ಒಬ್ಬ ಹೆಂಗಸು ತನ್ನ ಪತಿಯು ಜೀವಿತನಾಗಿರುವಾಗಲೇ, ಬುದ್ಧಿಗೆಟ್ಟು ಅವನಿಗೆ ದುಃಖವುಂಟುಮಾಡಿ, ತನ್ನ ತಾಳಿಯನ್ನು ಕಿತ್ತು ಎಸೆದು, ''ಪತಿಯೇ ಇಲ್ಲ''ಎಂದು ಹೇಳಿಕೊಂಡು ಬಾಳುವಂತೆ ಆಯಿತು. ಇಂತಹ ತಿಳಿಗೇಡರನ್ನು ಖಂಡಿಸದೆ ವಿಧಿಯಿಲ್ಲ. ಇಂತಹವರಿಂದ ಇಡೀ ಜಗತ್ತೇ ಹಾಳಾದಂತಾಗುವುದು. ಈ ದುರ್ಬೋಧನೆಯನ್ನು ಖಂಡಿಸಿ, ಸನ್ಮಾರ್ಗವನ್ನು ಜಗತ್ತಿಗೆ ಸ್ಪಷ್ಟಪಡಿಸುವೆನು.

नास्त्येवादृष्टवस्त्वियवगतमतयः खण्डिता श्चाथ वक्री- ।
भावाविष्टाः कुनीती जगदभिभवती स्सौगतेषूक्तवत्सु ।।
''सर्वं ने'' त्यह्नियोक्तं ''जगदपि न चतुर्धेति'' तज्जीवितेशा ।
योषाऽनीशेतिवत् माध्यमिकमत मिदं चूर्णयामोऽथ तूर्णम् ।। १४

ಮೂಲ : ಮಾನಮಿಲ್ಲೈ ಮೇಯಮಿಲ್ಲೈಯೆನ್ರುಂ ಮತ್ತೋರ್
ವಾದನೆರಿಯಿಲ್ಲೈಯೆನ್ರುಂ ವಾದುಪೂಂಡ,
ತಾನುಮಿಲ್ಲೈ ತನ್ನುರೈಯುಂ ಪೊರುಳುಮಿಲ್ಲೈ
ತತ್ತುವತ್ತಿನ್ನುಣರ್ತ್ತಿಶಯಮಿಲ್ಲೈಯೆನ್ರುಂ,
ವಾನವರು ಮಾನವರು ಮನಮುಂ ವೆಳ್ಹ
ವಳಂ ಪೇಶುಮತಿಕೇಡನ್ ಮದ್ದಿಮತ್ತಾನ್,
ತೇನನೆರಿಕೊಂಡನೈತ್ತುಂ ತಿರುಡಾವಣ್ಣಂ
ಶೆಳುಮತಿಪೋಲೆಳುಮತಿಯಾಲ್ ಶೇಮಿತ್ತೋಮೆ ॥ 15

ಅರ್ಥ :- ವಾನವರುಂ = ದೇವತೆಗಳೂ, ಮಾನವರುಂ = ಮನುಷ್ಯರೂ, ಮನಮುಂ = (ತನ್ನ) ಮನಸ್ಸೂ, ವೆಳ್ಹ = ನಾಚಿಕೆಗೊಳ್ಳುವಂತೆ, ಮಾನಂ-ಇಲ್ಲೈ = ಪ್ರಮಾಣವೊಂದೂ ಇಲ್ಲ, ಮೇಯಂ-ಇಲ್ಲೈ = ಅರಿಯಲ್ಪಡುವ ವಸ್ತುವೊಂದೂ ಇಲ್ಲ, ಎನ್ರುಂ = ಎಂದೂ, ಮತ್ತು-ಓರ್-ವಾದ-ನೆರಿ = ಬೇರೊಂದುವಾದಮಾಡುವ ದಾರಿಯೂ, ಇಲ್ಲೈ-ಎನ್ರುಂ = ಇಲ್ಲವೆಂದೂ, ವಾದು-ಪೂಂಡ-ತಾನು-ಇಲ್ಲೈ = ವಾದಮಾಡುತ್ತಲಿರುವ ತಾನೂ ಇಲ್ಲ, ತತ್ತುವತ್ತಿನ್-ಉಣರ್ತಿ = ತತ್ವದಜ್ಞಾನವೂ, ಶಯಂ = ಜಯವೂ, ಇಲ್ಲೈಯೆನ್ರುಂ = ಇಲ್ಲವೆಂದೂ, (ಹೀಗೆ ಸರ್ವವೂ ಶೂನ್ಯವೆಂದು ಹೇಳಿ) ವಳಂ-ಪೇಶುಂ = (ತನ್ನ ಮತದ) ಮೇಲ್ಮೆಯನ್ನು ಹೇಳುವ, ಮತಿಕೇಡನ್ = ಮತಿಗೆಟ್ಟವನಾದ, ಮದ್ದಿಮತ್ತಾನ್ = ಮಾಧ್ಯಮಿಕನು, ತೇನ-ನೆರಿ-ಕೊಂಡು = ಕಳ್ಳನ ದಾರಿ ಹಿಡಿದು, ಅನೈತ್ತುಂ = ಸಕಲ ತತ್ವಗಳನ್ನೂ, ತಿರುಡಾ-ವಣ್ಣಂ = ಇಲ್ಲವೆಂದೆನ್ನಿಸದೆ (ಕದಿಯದಂತೆ), ಶೆಳುಮತಿಪೋಲ್-ಎಳುಂ = ಪೂರ್ಣಚಂದ್ರನಂತೆ ವೃದ್ಧಿಹೊಂದುವ, ಮತಿಯಾಲ್ =ಜ್ಞಾನದಿಂದ, ಶೇಮಿತ್ತೋಂ = (ಜಗತ್ತನ್ನು ಅವನ ಕೈಯಿಂದ) ಕ್ಷೇಮವಾಗಿರುವಂತೆ ಮಾಡಿದೆವು, (ರಕ್ಷಿಸಿದೆವು)

ತಾತ್ಪರ್ಯ :- ಮಾಧ್ಯಮಿಕನ ಮತವು ''ಸರ್ವಶೂನ್ಯ''ವೆಂಬುದು. ಈ ಮತದಲ್ಲಿ ಒಂದು ವಸ್ತುವನ್ನು ತಿಳಿಯಲು ಯಾವ ಪ್ರಮಾಣವೂ ಇಲ್ಲ. ಪ್ರಮಾಣದಿಂದ ಅರಿಯುವ ವಸ್ತುವೂ

ಇಲ್ಲ, ವಾದಮಾಡುವಕ್ರಮವೂ ಇಲ್ಲ. ವಾದಿಸುವ ತಾನೂ ಇಲ್ಲ, ತಾನು ಹೇಳುವ ವಾಕ್ಯವೂ ಅದರರ್ಥವೂ ಸಹ ಇಲ್ಲ. ತತ್ವವೆಂಬುದರ ಸೊಲ್ಲೇ ಇಲ್ಲ. ವಾದದಲ್ಲಿ ಜಯವೆಂಬುದೂ ಇಲ್ಲ. ಹೀಗೆ ಅತಿ ವಿಚಿತ್ರವಾಗಿರುವುದರಿಂದ ದೇವತೆಗಳೂ ಮತ್ತು ಮಾನವರೂ ಅಪಹಾಸ್ಯ ಮಾಡುವುದಷ್ಟೇ ಅಲ್ಲದೆ, ತನ್ನ ಮನಸ್ಸೇ ಅವನನ್ನು ಪರಿಹಾಸ್ಯ ಮಾಡುವುದು. ಹೀಗೆ ಎಲ್ಲವನ್ನೂ ಶೂನ್ಯವನ್ನಾಗಿಮಾಡಿ, ಈಶ್ವರನನ್ನೂ ಚೇತನ-ಅಚೇತನಗಳನ್ನೂ ಇಲ್ಲದಂತೆ ಮಾಡಿ, ಯಾವದೊಂದು ಕ್ರಮವನ್ನೂ ಒಪ್ಪದೇ ಇರುವಂತಹ ಅವನನ್ನು ಖಂಡಿಸಿ, ನಮ್ಮ ಸಿದ್ಧಾಂತವನ್ನು ಸಂರಕ್ಷಿಸಿದೆವು.

देवा मर्त्या हसन्ति स्वहृदय मिववा नैव मानं न मेयं ।
नो वान्यो वादमार्गे न च विवदनकृत् नात्मवाक् नैतदर्थः ।।
न स्यात्तत्वानुभूतिः न हि जय इति च श्लाघमानो मतं स्वं ।
दुर्बुद्धिः स्तेनमार्गोऽप्यकृत सकलचौर्यं त मेनं चिकीर्षुः ।। १

वर्धमानकलाधीशप्रतीकाशमनीषया ।
दुर्वादिमाध्यमिकतो जगत् त्राये विमोचयन् ।। १५

ಮೂಲ : ಮುತ್ತುಂ ಶಹತ್ತಿಲದೆನ್ರೇಪಹಟ್ಟಿಯ ಮುಟ್ಟರ್ಶೈನಾಂ,
ಶುತ್ತುಂ ತುರಂದು ತುರೈಯಿಲ್ ನಿನ್ರೇತುಹಳಾಕ್ಕಿಯಪಿನ್,
ಮತ್ತೊನ್ರಿಲದು ಮತಿಪಲವುಂಡೆನ್ರು ವಂಚನೈಯಾಲ್,
ಶತ್ತುಂ ತುರಂದಯೋಗಾಶಾರನೈ ಶದಿಕ್ಕಿನ್ರನಮೇ ॥ 16

ಅರ್ಥ :- ಮುತ್ತುಂ-ಶಹತ್ತ್ = ಇಡೀ ಜಗತ್ತೇ, ಇಲದ್-ನಿನ್ರೇ = ಇಲ್ಲವೆಂದೇ, ಪಹಟ್ಟಿಯ-ಮುಟ್ಟರ್ಶೈ = ಮೋಹಗೊಳಿಸುವ ಮೂಢರಾದ ಮಾಧ್ಯಮಿಕರನ್ನು, ನಾಂ-ತುರೈಯಿಲ್-ನಿನ್ರೇ = ನಾವು ವೇದಾಂತಮಾರ್ಗದಲ್ಲಿ ಇದ್ದುಕೊಂಡೇ, ಶುತ್ತುಂ-ತುರಂದ್ = ಸಂಪೂರ್ಣವಾಗಿ ನಾಶಮಾಡಿ, ತುಹಳಾಕ್ಕಿಯರ್ಪಿ = ಧೂಳಿಬ್ಬಿಸದಮೇಲೆ, ''ಪಲ-ಮತಿ-ಉಂಡು = ಕೆಲವು ವಿಧವಾದ ಜ್ಞಾನ ಉಂಟು, ಮತ್ತು - ಒನ್ರು-ಇಲದ್ = (ಜ್ಞಾನವನ್ನು ಬಿಟ್ಟು) ಮತ್ತೆ ಬೇರೆಯಾವ ವಸ್ತುವೂ ಇಲ್ಲ'' ಎಂದು ಹೇಳಿ, ವಂಚನೈಯಾಲ್ = ವಂಚಿಸಲು ಯೋಚಿಸಿದ್ದರಿಂದ, ಶುತ್ತುಂ-ತುರಂದ = ಅತ್ಯಲ್ಪಫಲವನ್ನೂ ಹಾಳುಮಾಡಿಕೊಂಡ, ಯೋಗಾಶಾರನೈ = ''ಯೋಗಾಚಾರ'' ನೆಂಬುವನನ್ನು, ಶದಿಕ್ಕಿನ್ರನಂ = ಸದೆಬಡಿಯುವೆವು. (ಖಂಡಿಸುವೆವು).

ತಾತ್ಪರ್ಯ :- ಜ್ಞಾನ, ಜ್ಞಾತೃ, ಜ್ಞೇಯ (ಅರಿವು-ಅರಿಯುವವನು-ಅರಿಯಲ್ಪಡುವ ವಸ್ತು) ಇಲ್ಲ. ಅಂದಮೇಲೆ ಆ ರೂಪವಾದ ಜಗತ್ತೇ ಇಲ್ಲ ಎಂದು ದುರ್ವಾದ ಮಾಡಿ ಮೋಹಗೊಳಿಸುತ್ತಿರುವ ಮಾಧ್ಯಮಿಕರನ್ನು ವೇದಾಂತಮಾರ್ಗದಲ್ಲಿಯೇ ಇರುವ ಜ್ಞಾನವೂ, ಜ್ಞಾತೃತ್ವವೂ, ಜ್ಞೇಯವೂ ಸತ್ಯವಾದುವು ಇಲ್ಲದಿಲ್ಲ ಉಂಟು ಎಂದು ಒಪ್ಪಿರುವ ನಾವು ನುಚ್ಚುನೂರಾಗಿಸಿದೆವು.

ಇನ್ನು ಮುಂದೆ ''ಜ್ಞಾನಮಾತ್ರ ಉಂಟು. ಅದು ಸುಖದುಃಖರೂಪವಾದುದು ಅದು ಹೊರತು ಮತ್ತಾವುದೂ ಇಲ್ಲ'' ಎನ್ನುವ ಯೋಗಾಚಾರನೆಂಬುವವನನ್ನು ಖಂಡಿಸುವೆವು.

नास्त्येवैतत् समस्तं जगदिति जगदु र्वञ्चका मध्यमा ये ।
मूढानुन्मर्द्य चाहं श्रुतिशिखरनिषण्णश्च तांश्चूर्णयित्वा ।।
नानाज्ञानं विनान्य न्नभवति किमपीत्युक्तवन्तं तमज्ञं ।
योगाचारं त्यजन्तं फललवमपि तत् सर्वशः खण्डयामि ।। १६

ಮೂಲ : ಉಳಕ್ಕತಿಯ್ಯೆನಾಮುಳ್ಳಿಯುಳ್ಳನ್ದೇರಿ
ಯುಲಹತ್ತಾರುಹನ್ದಿಶ್ಶೈಯವುಲಹುಣ್ಡೆನ್ರೋಂ,
ಇಳಕ್ಕವರಿದಾಹಿಯ ನಲ್‌ತರುಕ್ಕಂಶೇರ್‌ನ್ದ
ಎಳಿನ್ಮರೈಯಿಲೀಶನುಡನೆಮ್ಮೈಕ್ಕಂಡೋಂ,
ವಿಳಕ್ಕುನಿರೈಪೋಲ್‌ಮತಿಹಳ್ ವೇರಾಯ್‌ವೇರೊ-
ನ್ರರಿಯಾದೇ ವಿಳಂಗುಮೆನ ವಿಳಂಬುಹಿನ್ರ,
ಕಳಕ್ಕರುತ್ತನ್ ಕಣ್ಣಿರಂಡು ಮಳಿತ್ತೋಂನಾಣಾ
ಕ್ಕಾಕಂಪೋಲ್ ತಿರಿನ್ದವನೆನ್ ಕದರುಮಾರೇ ।। 17

ಅರ್ಥ :- ನಾಂ = ನಾವು, ಉಳ-ಗತಿಯ್ಯೆ = ಪ್ರಮಾಣಸಿದ್ಧವಾದ ಪ್ರಕಾರಗಳನ್ನು, ಉಳ್ಳಿ = (ಅಪಲಾಪಮಾಡದೆ) ಅಂಗೀಕರಿಸಿ, ಉಲಹತ್ತಾರ್ = ಈ ಲೋಕದ ಜನರು, ಉಳ್ಳಂ-ತೇರಿ = ಮನದಲ್ಲೇ ವಿಶ್ವಾಸವಿಟ್ಟು, ಉಹಂದು = ಸಂತುಷ್ಟರಾಗಿ, ಇಶೈಯ = ಅಂಗೀಕರಿಸುವಂತೆ, ಉಲಹು = ಜಗತ್ತು ಉಂಡು = ಇದೇ, ಸತ್ಯವು, ಎನ್ರೋಂ = ಎಂದು ಹೇಳಿದೆವು, ಇಳಕ್ಕ-ಅರಿದಾಹಿಯ = ಅಲುಗಿಸಲೂ ಆಗದ, ನಲ್-ತರುಕ್ಕಂ-ಶೇರ್‌ನ್ದ = ಸಮೀಚೀನವಾದ ಯುಕ್ತಿಗಳಿಂದ ಕೂಡಿದ, ಎಳೆಲ್-ಮರೈಯಿಲ್ = ಅತಿಶಯವಾದ ವೇದದಲ್ಲಿ, ಈಶ-ಉಡ-ಎಮ್ಮೈ-ಕಂಡೋಂ = ಈಶ್ವರನನ್ನೂ ಆತ್ಮವರ್ಗವನ್ನೂ (ಅಥವಾ ಅಂತರ್ಯಾಮಿಯಾದ ಈಶ್ವರನೊಡನೆ ಕೂಡಿರುವ ಜೀವರಾಶಿಯನ್ನೂ) ಬೇರೆಯಾಗಿ ಅರಿತೆವು, ಮತಿಹಳ್ = ಬುದ್ಧಿಗಳು (ಜ್ಞಾನಗಳು) ವಿಳಕ್ಕು-ನಿರೈ-ಪೋಲ್ =

ದೀಪದ (ಜ್ವಾಲೆಯ) ಬೆಳಕಿನಂತೆ, ವೇರು-ಆಯ್ = ಬೇರೆಬೇರೆಯಾಗಿ, ವೇರು-ಒನ್ರು-ಅರಿಯಾದೇ = (ತನ್ನನ್ನು ಬಿಟ್ಟು) ಮತ್ತಾವುದನ್ನೂ ತಿಳಿಯದೆ, ವಿಳಂಗುಂ-ಎನ = ಪ್ರಕಾಶಿಸುವುದೆಂದು, ವಿಳಂಬುಹಿನ್ರ = ಹೇಳುವಂತಹ, ಕಳ-ಕರುತ್ತನ್ = ಕಳ್ಳ ಭಾವನೆಯುಳ್ಳ ಯೋಗಾಚಾರನ, ಕಣ್-ಇರಂಡುಂ = ಎರಡು ಕಣ್ಣುಗಳನ್ನೂ, (ತಿಳಿಯುವವನೂ, ತಿಳಿಯಲ್ಪಡುವ ವಸ್ತುವೂ ಎಂದರ್ಥ) ಅಳಿತ್ತೋಂ = ನಾಶಪಡಿಸಿದೆವು, ಅವನ್ = ಆ ಯೋಗಾಚಾರನು, ನಾಣಾ-ಕಾಕಂ-ಪೋಲ್-ತಿರಿಂದ್ = ನಾಚಿಗೆಗೆಟ್ಟ ಕಾಕಾಸುರನಂತೆ ಅಲೆದಲೆದು, ಕದರು-ಮಾರು = ಮೊರೆಯಿಡುವುದನ್ನು, ಎನ್ = ಏನೆಂದು ಹೇಳೋಣ. (ವರ್ಣಿಸಲಸದಳವೆಂದರ್ಥ).

ತಾತ್ಪರ್ಯ :- ಯೋಗಾಚಾರನ ಅಭಿಪ್ರಾಯದ ಸಾರಾಂಶ - "ಜ್ಞಾನವು ಕ್ಷಣಿಕವು, ಪ್ರತಿಕ್ಷಣದಲ್ಲೂ ಹೊಸಹೊಸದಾಗಿ ಹುಟ್ಟಿ ಮರುಗಳಿಗೆಯಲ್ಲೇ ನಷ್ಟವಾಗುವುದು. ಇಂತಹುದೂ ಸಹ ತನ್ನನ್ನು ಹೊರತು ಬೇರೆ ಯಾವುದನ್ನೂ ತನಗೆ ಲಕ್ಷ್ಯವಾಗಿಟ್ಟುಕೊಳ್ಳಲಾರದು. ಆದುದರಿಂದ ಬಾಹ್ಯವಸ್ತುವೆಂಬುದೇ ಇಲ್ಲ, ಪ್ರತಿಕ್ಷಣದಲ್ಲೂ ತೋರುವ ಜ್ಞಾನಸಂತತಿಯೇ "ಆತ್ಮಾ" ಎನಿಸುವುದು. ಹಾಗಾದರೆ "ಆತ್ಮಾ ಅನಿತ್ಯವೆಂದಾಯಿತಲ್ಲ" ಎಂದರೆ ದೀಪದಜ್ವಾಲೆಯು ಪ್ರತಿಘಳಿಗೆಯಲ್ಲಿಯೂ ಬೇರೆ ಬೇರೆಯಾದರೆ ಜ್ವಾಲೆಯು ಒಂದೇ ರೀತಿಯಾಗಿರುವುದರಿಂದ ಅದೇ ದೀಪಜ್ವಾಲೆಯೆಂದು ತೋರುವಂತೆ ಜ್ಞಾನವೂ ಒಂದೇ ವಿಧವಾಗಿ ತೋರುವುದರಿಂದ ಅದೇ "ಆತ್ಮಾ" ಎಂಬರಿವುಂಟಾಗುವುದು. ನಿಜವಾಗಿ ನೋಡಿದರೆ "ಆತ್ಮಾ" ಅನಿತ್ಯವೇ."

ನಾವು ಯೋಗಾಚಾರನಿಲ್ಲವೆಂದ ಚೇತನ-ಅಚೇತನ-ಈಶ್ವರತತ್ವಗಳನ್ನು ಪ್ರಮಾಣಗಳೊಂದಿಗೆ ಅವನ ಯುಕ್ತಿಗಳಿಂದಲೇ "ಇವೆ ಸತ್ಯವಾದುವು" ಎಂದು ಸ್ಥಾಪಿಸಿದೆವು. ಮೇಲೂ "ಜ್ಞಾತೃವೂ ಜ್ಞೇಯವೂ ಇಲ್ಲ, ಎರಡೂ ಸುಳ್ಳು" ಎಂದು ಹೇಳುವ ಅವನವಾದವನ್ನು ಖಂಡಿಸಿ, ಅವನ ಮತವು ಅಳಿದುಹೋಗುವಂತೆ ಮಾಡಿದೆವು. ಸೀತಾದೇವಿಯಲ್ಲಿ ಅಪಚಾರವೆಸಗಿದ ಕಾಕಾಸುರನು ತನ್ನನ್ನು ರಕ್ಷಿಸುವವರಿಲ್ಲದೆ, ನಾಚಿಗೆಗೆಟ್ಟು, ಮೂರು ಲೋಕಗಳಲ್ಲೂ ಅಲೆದಾಡಿ, ಕಡೆಗೆ ಶ್ರೀರಾಘವನನ್ನೇ ಶರಣುಹೋಗಿ ಒಂದು ಕಣ್ಣು ಕಳೆದುಕೊಂಡನು. ಈ ಯೋಗಾಚಾರನಾದರೋ ಹಾಗೆಯೇ ನಾಚಿಗೆಗೆಟ್ಟು ಮೇಲೆ ಹೇಳಿದ ಎರಡು ಅಭಿಪ್ರಾಯಗಳೆಂಬ ಎರಡು ಕಣ್ಣುಗಳನ್ನೂ ಕಳೆದುಕೊಂಡು ಅಲೆದಾಡುವಂತೆಮಾಡಿದೆವು. ಸಂಪೂರ್ಣವಾಗಿ ನಾಶಮಾಡಿದೆವು ಎಂದರ್ಥ.

**अङ्गीकृत्य प्रमाणप्रवणसुमनसो नैकरीतीर्वयं ताः ।**
**स्वान्ते विश्वस्य तुष्टा जगति नरवरा यद्यथेच्छन्ति लोकान् ।**

तद्वत्सन्तीत्यवादिष्महि निगमततौ निश्चलायां सुतर्कैः ।
जुष्टायां आत्मसङ्घान् ददृशिम भगवद्योग मासेदुषोऽस्मान् ।। १
दीपज्वालाप्रभावन्मतय इह पृथग्भाविता अप्यनन्याः ।
नान्यज्ञा उल्लसन्तीत्यतिवचनवतां चोरभावोग्मितानाम् ।।
योगाचाराभिधानां नयनयुग मिदं वस्तु वेत्ता च मिथ्ये- ।
त्याविद्ध्येम ह्यलज्ज स्सतु बलिभुगिव भ्राम्यति ब्रूमहे किम् ? ।। १७

ಮೂಲ : ಪೊರುಳೊನ್ರಿಲದೆನ್ರು ಬೋದಮೊನ್ರುಂ ಕೊಂಡಪೊಯ್ಯರೈನಾಂ,
ತೆರುಳ್‌ಕೊಂಡು ತೀರ್ತ್ತಪಿನ್ ಕಾಣವೊಣ್ಣಾಪ್ಪೊರುಳ್‌ತೇಡುಹಿನ್ರ,
ಮರುಳ್‌ಕೊಂಡ ಶೂದುರೈಕ್ಕುಂಶೌತ್ತಿರಾಂತಿಕನ್ ವಣ್ಣಕ್ಕೈನಾಂ,
ಇರುಳ್‌ಕೊಂಡಪಾಳಂಕಿಣರೆನ್ರಿಕಳ್‌ನ್ದೋಡ ವಿಯಂಬುವಮೇ ॥ 18

ಅರ್ಥ :- ಪೊರುಳ್-ಎನ್ರು-ಇಲದು-ಎನ್ರು = ಹೊರಗೆ ತೋರುವ ವಸ್ತುವಾವುದೂ ಇಲ್ಲವೇ ಇಲ್ಲವೆಂದು ನಿಶ್ಚಯಿಸಿಕೊಂಡು, ಬೋದಂ-ಒನ್ರುಂ-ಕೊಂಡ = ಜ್ಞಾನವೆಂಬುದೊಂದನ್ನೇ ಅಂಗೀಕರಿಸದ, ಪೊಯ್ಯರೈ = ಸುಳ್ಳನ್ನೇ ಆಡುವ ಯೋಗಾಚಾರರನ್ನು, ನಾಂ-ತೆರುಳ್-ಕೊಂಡು = ನಾವು ಉತ್ತಮವಾದ ಜ್ಞಾನವನ್ನು ಪಡೆದವರಾಗಿ, ತೀರ್ತ-ಪ್ಪಿನ್ = ಖಂಡಿಸಿದಮೇಲೆ, ಕಾಣ-ಒಣ್ಣಾ-ಪೊರುಳ್ = ಪ್ರತ್ಯಕ್ಷವಾಗಿ ನೋಡಲಾಗದ ವಸ್ತುವನ್ನು (ಇದೆಯೆಂದೊಪ್ಪಿ), ತೇಡುಹಿನ್ರ = ಅನುಮಾನದಿಂದ ಸಾಧಿಸುವ, (ಬಾಹ್ಯವಸ್ತು ಇದೆ. ಅದು ಅನುಮೇಯ. ಜ್ಞಾನಾಕಾರವೇ ಆ ವಸ್ತು. ಜ್ಞಾನದಲ್ಲೇ ಅಂತರ್ಭಾವ. ಯೋಗಾಚಾರ ಇಲ್ಲ ಎಂದನು. ಇವನು ಇದೆಯೆಂದೊಪ್ಪಿ ಇಲ್ಲದಂತೆಮಾಡಿದನು. ಇಷ್ಟೇ ಇವರಿಗಿರುವ ಭೇದ), ಮರುಳ್ = ಅಜ್ಞಾನವನ್ನು, ಕೊಂಡ = ಒಪ್ಪಿದ, ಶೂದು = ಕಪಟವನ್ನು, ಉರೈಕ್ಕುಂ = ವಾದಿಸುವವನಾದ (ಭ್ರಾಂತಿಯನ್ನುಂಟುಮಾಡುವ ಕುಹನಾಯುಕ್ತಿಯನ್ನು ಕಲ್ಪಿಸುವ) ಶೌತ್ತಿರಾಂತಿಕನ್ = ಸೌತ್ರಾಂತಿಕನ, ವಣ್ಣಕ್ಕೈ = ಮತವರ್ಣನೆಯ ರೀತಿಯನ್ನು, ನಾಂ = (ಪರರ ಹಿತದಲ್ಲೇ ಆಸಕ್ತರಾದ ನಾವು, ಇರುಳ್ = ರಾತ್ರಿಯಲ್ಲಿ (ಕತ್ತಲಲ್ಲಿ) ಕೊಂಡ = ಅನುಭವಿಸಿದ್ದ, ಪಾಳ್-ಕಿಣರ್-ಎನ್ರು = ಪಾಳುಭಾವಿಯೆಂದು (ತಿಳಿದು ಜನರು) ಇಕಳ್‌ನ್ದು = ಬಿಟ್ಟು, ಓಡ = ದೂರಹೋಗುವಂತೆ, ಇಯಂಬುವಂ = ಖಂಡಿಸಿ ಹೇಳಿವೆವು. (ಜನರು ಆ ಮತದಲ್ಲಿರುವ ದೋಷಗಳನ್ನು ತಿಳಿದು, ಅದನ್ನು ಅವಲಂಬಿಸಿದಂತೆ ಮಾಡುತ್ತೇನೆ.)

ತಾತ್ಪರ್ಯ :- ''ಬಾಹ್ಯವಸ್ತುವೇ ಇಲ್ಲ. ಇರುವುದು ಜ್ಞಾನವೊಂದೇ'' ಎನ್ನುವ ಯೋಗಾಚಾರನನ್ನು ಪೂರ್ಣವಾಗಿ ನಮ್ಮ ಮತಿ ಪ್ರಭಾವದಿಂದ ಖಂಡಿಸಿ, ಅಳಿಯುವಂತೆ ಮಾಡಲಾಯಿತು.

ಈಗ ಸೌತ್ರಾಂತಿಕವೆಂಬ ಬೌದ್ಧನನ್ನು ಖಂಡಿಸುತ್ತೇವೆ. ಇವನು ''ಬಾಹ್ಯವಸ್ತು''ವನ್ನು ಒಪ್ಪುವನು. ಆದರೆ ಅದನ್ನು ''ಅನುಮಾನ''ದಿಂದ ಸಾಧಿಸುವನು, ಅದೂ ಸಹ ತನ್ನ ತಿಳಿಗೇಡಿತನದಿಂದ ಬಂದ ಕಪಟಯುಕ್ತಿಗಳಿಂದಲೇ, ಹೀಗೆ ಕುಹುಕಯುಕ್ತಿಗಳೇ ತುಂಬಿದ ಇವನ ಮತವನ್ನು ''ರಾತ್ರಿ ಪಾಳುಭಾವಿ''ಯೆಂದು ಕಂಡು ಹಿಡಿದು ದೂರಸರಿಯುವಂತೆ, ದೋಷರೂಷಿತವಾದ ಈ ಮತವನ್ನು ಜನರು ಸೇರದೆ, ಬಿಟ್ಟು, ದೂರಹೋಗುವಂತೆ ದೋಷಗಳಿರುವುದನ್ನು ಸ್ಪಷ್ಟವಾಗಿ ಹೇಳುತ್ತೇವೆ.

**बाह्यं वस्तु न किंचिदस्ति च विना ज्ञानादिति प्रोचुषः ।**
**मिथ्योक्ती वदतो निराचकृमहे ज्ञानावलम्बा ततः ।।**
**वस्त्वन्वेषयत स्त्वदृश्य ममतेः सौत्रान्तिकस्यानृजोः ।**
**भङ्क्ष्यामो मत मन्धुमन्धतमसे दृष्टं त्यजेयु र्यथा ।।** १८

ಮೂಲ : ನಿಲ್ಲೈಯಿಲ್ಲಾಪ್ಪೊರುಳ್‌ಮತಿಯ್ಯೈ ವಿಳೈತ್ತುತ್ತಾನ್ ಶೇರ್
ನಿರಂಕೊಡುತ್ತುತ್ತಾನ್ನಳಿಯುಂ ತನ್ನಾಲ್‌ವಂದ,
ನಿಲ್ಲೈಯಿಲ್ಲಾಮತಿತನ್ನಿಲ್ ನಿರತ್ತೈಕ್ಕಾಣುಂ
ಇದುಕಾಣುಂ ಪೊರುಳ್‌ಕಾಣ್ಗೈಯೆನ್ರನೀರ್ಶ,
ಮುಲ್ಲೈಯಿಲ್ಲಾತ್ತಾಯ್‌ಕೊಡುತ್ತ ಮುಲ್ಲೈಪ್ಪಾಲುಣ್ಣುಂ
ಮುಹಮಿಲ್ಲಾಮೊಳಿಯೆನವೇಮೊಳಿನ್ದವಾರ್ತ್ತೈ,
ತಲ್ಲೈಯಿಲ್ಲಾತ್ತಾಳೂರುಂ ಕಣಕ್ಕಾಯ್ ನಿನ್ರ
ಕಟ್ಟಳೈನಾಂ ಕಣ್ಡೆನ್ರುಕಾಟ್ಟಿನೋಮೇ ॥ 19

ಅರ್ಥ :- ಪೊರುಳ್ = ವಸ್ತುವು, ನಿಲ್ಲೈ-ಇಲ್ಲಾ = ಸ್ಥಿರವಾಗಿಲ್ಲದ್ದು (ಕ್ಷಣಿಕವು), (ಅದು) ಮತಿಯ್ಯೈ-ವಿಳೈತ್ತು = ಜ್ಞಾನವನ್ನುಂಟುಮಾಡಿ, (ಅದಕ್ಕೆ) ತಾನ್-ಶೀರ್ = ತಾನು ಪಡೆದ, ನಿರಂ = ವರ್ಣವನ್ನು, ಕೊಡುತ್ತು = ಕೊಟ್ಟು, ತಾನ್-ಅಳಿಯುಂ = ತಾನು ನಾಶವಾಗುವುದು, ತನ್ನಾಲ್-ವಂದ = ತನ್ನಿಂದ ಬಂದ, ಮತಿ = ಅರಿವೂ, ನಿಲ್ಲೈ-ಇಲ್ಲಾ = ಸ್ಥಿರವಾದುದಲ್ಲ, ತನ್ನಿಲ್-ನಿರತ್ತೈ-ಕಾಣುಂ = ತನ್ನಲ್ಲಿ ಬಣ್ಣವನ್ನು ಕಾಣುವುದು, ಇದು-ಕಾಣುಂ = ಈ ರೀತಿ ಕಾಣುವುದೇ, ಪೊರುಳ್-ಕಾಣ್ಗೈ = ವಸ್ತುವಿನ ಸಾಕ್ಷಾತ್ಕಾರವೆನಿಸುವುದು, ಎನ್ರ = ಎಂದು ಹೇಳಿದ ನೀರ್ಶ = ಅಲ್ಪನಾದ ಸೌತ್ರಾಂತಿಕನು, ಮೊಳಿಂದ-ವಾರ್ತ್ತೈ = ಹೇಳಿದ ಸಿದ್ಧಾಂತವು, ಮುಲ್ಲೈ-ಇಲ್ಲಾದ-ತಾಯ್-ಕೊಡುತ್ತ = ಎದೆಯೇ ಇಲ್ಲದಿರುವ ತಾಯಿಯು ಕೊಟ್ಟ, ಮುಲ್ಲೈ-ಪಾಲ್-ಉಣ್ಣುಂ = ಎದೆಹಾಲನ್ನು ಕುಡಿಯುವಂತೆಯೂ, ಮುಹಂ-ಇಲ್ಲಾ =

ಬಾಯೇ ಇಲ್ಲದವನು, ಮೊಳಿ-ಎನವೇ = ಹೇಳುವ ಮಾತಿನಂತೆಯೂ ಮತ್ತು, ತಲೈ-ಇಲ್ಲಾ = ತಲೆಯೇ ಇಲ್ಲದವನು, ತಾಳ್-ಊರುಂ = ಕಾಲುಗಳಿಂದ ನಡೆಯುವಂತೆಯೂ, ನಿನ್ರ್-ಕಟ್ಟಳೈ-ಕಣಕ್ಕಾಯ್ = ಇರುವ ರೀತಿಯಂತಿಹುದು, ನಾಂ-ಕಂಡು = ನಾವು ಇದನ್ನು ಅರಿತು, ಇನ್ರು = ಈಗ ಕಾಟ್ಟಿನೋಂ = (ಅವನ ಮತದಲ್ಲಿರುವ ದೋಷಗಳನ್ನೆಲ್ಲಾ) ಹೊರಪಡಿಸಿ ತೋರಿಸಿರುತ್ತೇವೆ.

ತಾತ್ಪರ್ಯ :- ಬೌದ್ಧರಲ್ಲಿ ಸೌತ್ರಾಂತಿಕರೆಂಬುವರು ಒಂದು ಗುಂಪಿಗೆ ಸೇರಿದವರು. ಅವರು "ಬಾಹ್ಯವಸ್ತುಗಳನ್ನು ಇಲ್ಲವೆನ್ನುವುದಿಲ್ಲ, ಇದೆಯೆಂದೊಪ್ಪುತ್ತಾರೆ, ಆದರೆ ಅವು ಜ್ಞಾನವುಂಟುಮಾಡಿ, ತಮ್ಮ ತರುವ ಬಣ್ಣಗಳನ್ನು ಅರಿವಿನಲ್ಲಿ ಉಂಟುಮಾಡಿ, ತಾವು ನಾಶವಾಗುತ್ತವೆ. ಅಳಿದುಹೋಗುವುದೇ ತಮ್ಮ ಸ್ವಭಾವವಾಗಿರುವ ಆ ವಸ್ತುಗಳನ್ನು ಇಂದ್ರಿಯಗಳಿಂದ ತಿಳಿಯುವುದು ಹೇಗೆ ? ಆಗುವುದಿಲ್ಲ, ಆದರೆ ವಸ್ತುಜ್ಞಾನವೂ ಒಂದೇ ಕ್ಷಣವಿದ್ದು ಅದೂ ನಾಶವಾಗುವುದು. ಆ ಜ್ಞಾನವೇ "ಆತ್ಮಾ" ಎನಿಸುವುದು. ಅದೇನೇ ಹೊರವಸ್ತುಗಳಿಂದ ತನ್ನಲ್ಲಿ ಉಂಟುಮಾಡಿದ ವಿವಿಧ ಬಣ್ಣಗಳನ್ನು ಅನುಭವಿಸುವುದು. ಆ ಅನುಭವವೇ ವಸ್ತುಸಾಕ್ಷಾತ್ಕಾರವೆನಿಸಿಕೊಳ್ಳುವುದು" ಎಂದು ಹೇಳುವರು.

ಈ ಮತದಲ್ಲಿ ವಸ್ತು ಉಂಟಾದಮೇಲೆಯೇ ಜ್ಞಾನವುಂಟಾಗಬೇಕಾಗಿರುವುದರಿಂದ ಕ್ಷಣಕಾಲವೇ ಇದ್ದು ಅಳಿಯುವ ಆ ವಸ್ತು ಜ್ಞಾನವುಂಟಾಗುವಾಗಲೇ ನಾಶವಾಗಿರಬೇಕೆಂದು ಒಪ್ಪಿಕೊಳ್ಳಬೇಕು. ಜ್ಞಾನ ಹುಟ್ಟಿದ ಮರುಕ್ಷಣದಲ್ಲೇ ಅದರಲ್ಲಿ ವಸ್ತುವು ತನ್ನ ನೀಲಾದಿಬಣ್ಣಗಳನ್ನು ಕೊಡಲರ್ಹವಾಗುವುದು. ಹೀಗೆ ತಾನು ಹುಟ್ಟಿ 2ನೆಯ ಗಳಿಗೆಯಲ್ಲಿ ಅಳಿಯುವಂತಿರುವ ಹೊರವಸ್ತುವು 3ನೆಯ ಕ್ಷಣದಲ್ಲಿ ನೀಲಾದಿಬಣ್ಣಗಳನ್ನು ಜ್ಞಾನದಲ್ಲಿ ಕೊಡುತ್ತದೆಂದೊಪ್ಪಬೇಕು, ಅದೂ ಸುತರಾಂ ಅಸಂಭವ. ಅದೂ ಅಲ್ಲದೆ ಜ್ಞಾನವೂ ಹಾಗೆಯೇ ಕ್ಷಣವಿದ್ದುನಾಶವಾಗುವುದರಿಂದ, ತಾನು ಹುಟ್ಟಿದ ಮರುಕ್ಷಣದಲ್ಲಿ ವಸ್ತುವಿನ ವರ್ಣಗಳನ್ನು ತೆಗೆದುಕೊಳ್ಳುವುದೂ ಅದಾದ ಮರುಗಳಿಗೆಯಲ್ಲಿ ಬಣ್ಣವನ್ನು ನೋಡುವುದೆಂಬ ವಸ್ತು ಸಾಕ್ಷಾತ್ಕಾರವೂ ಅಸಂಭಾವಿತವೇ ಆಗುವುದು.

ಹೀಗೆ ಸೌತ್ರಾಂತ್ರಿಕನ ಮತವು "ಸ್ತನವೇ ಇಲ್ಲದ ತಾಯಿಯು ಸ್ತನ್ಯವನ್ನು ಕುಡಿದಂತೆಯೂ, ಬಾಯೇ" ಇಲ್ಲದೆ ಮಾತನಾಡುವಂತೆಯೂ, ತಲೆಯೇ ಇಲ್ಲದೆ ಕಾಲಿಂದ ಊರಿ ನಡೆಯುವಂತೆಯೂ ಆಗುವುದೆಂದು ಈ ಅಧಿಕಾರದಲ್ಲಿ ಈ ಮತವನ್ನು ಖಂಡಿಸಲಾಗಿದೆ.

**वस्तु त्वस्थिर मेव तच्च घिषणा मृत्पाद्य तन्नात्मनः ।**
**वर्णं न्यस्य विनश्यति स्वय मथो सा चेद मालोकते ॥**

एतन्नोऽखिलवस्तुदर्शन मिति प्रोवाच नीचश्चयः यः ।
स्तन्यं निस्तनमातुरत्र धयतो वाचा सदृक्षो भवेत् ॥ १

आस्याभाववतो नरस्य वचसां यद्वत्प्रवृत्ति र्भवेत् ।
गच्छत्येव विमस्तकोऽपि पुरुषः पद्भ्या मितीवोदितम् ।
तत्सौत्रान्तिकजल्पितं मत मिदं सम्यग्विदित्वा वयं ।
तद्दोषानभिदध्महे तदुदितं सर्वं निराकुर्महे ॥ ११

ಮೂಲ : ಕಾಣ್ಗಿನ್ರವನಿಲ್ಲೈ ಕಾಟ್ಚಿಯುಂ ಕಂಡದುಮುಂಡವ್ವೈತಾಂ,
ಏಣ್‌ಕೊಂಡನವನ್ರಿವತ್ತಿಲ್ ಗುಣಮುಂ ನಿಲ್ಲೈಯುಮಿಲ್ಲೈ,
ಶೇಣ್‌ಕೊಂಡಶಂತತಿಯಾಲ್ ಶೇರ್‌ನ್ದುಮೊನ್ರೆನನಿಱ್ಕುಮೆನ್ರ,
ಕೋಣ್‌ಕೊಂಡಕೋಳುರೈ ವೈಬಾಡಿಕನ್ ಕುರೈಕ್ಕೂರುವಮೇ ॥ 20

ಅರ್ಥ :- ಕಾಣ್ಗಿನ್ರವನ್ = ವಸ್ತುಗಳನ್ನರಿಯುವ ಜೀವಾತ್ಮನು, ಇಲ್ಲೈ = ಇಲ್ಲ, (ಸುಳ್ಳು), ಕಾಟ್ಚಿಯುಂ = ದೃಷ್ಟಿಯೂ (ಜ್ಞಾನವೂ), ಕಂಡದುಂ = ಅರಿಯಲ್ಪಡುವ ವಸ್ತುವೂ, ಉಂಡು = ಇವೆ. (ಸತ್ಯವು) ಅವ್ವೈ-ತಾಂ = ಅರಿವೂ ಮತ್ತು ವಸ್ತುವೂ, ಏಣ್-ಕೊಂಡನ-ಅನ್ರು = ಎಣಿಸಲಾಗದಷ್ಟಿವೆ. (ಅಸಂಖ್ಯಾತಗಳು), ಇವತ್ತಿಲ್ = ಇವುಗಳಲ್ಲಿ, ಗುಣಮುಂ = ಗುಣವೂ (ವಿಶೇಷವೂ), ನಿಲ್ಲೈಯುಂ = ಸ್ಥಿರತೆಯೂ, ಇಲ್ಲೈ = ಇಲ್ಲ, ಶೇಣ್-ಕೊಂಡ = ಚಿರಕಾಲದಿಂದಿರುವ, ಶಂತತಿಯಾಲ್ = ಪರಂಪರೆಯಿಂದ, ಶೇರ್‌ನ್ದುಂ = ಒಟ್ಟಾಗಿ ಸೇರಿಯೂ, ಒನ್ರು-ಎನ = ಒಂದೆಂದು ಹೇಳುವಂತೆ, ನಿಱ್ಕುಂ-ಎನ್ರ = ನಿಲ್ಲುವುದೆಂದು ಹೇಳಿದ, ಕೋಣ್-ಕೊಂಡ = ಕುಟಿಲಭಾವವುಳ್ಳ, ಕೋಳ್-ಉರೈ = ಕ್ರೂರವಾಗಿ ಮಾತಾಡುವ, ವೈಬಾಡಿಕರ್ = ವೈಭಾಷಿಕನೆಂಬುವನ ಕುರೈ = ಕೊರತೆ (ದೋಷ)ಗಳನ್ನು, ಕೂರುವಂ = ಹೇಳುವೆವು.

ತಾತ್ಪರ್ಯ :- "ವಸ್ತುಗಳನ್ನು ತಿಳಿದುಕೊಳ್ಳುವ ಜೀವಾತ್ಮನೆಂಬುದೊಂದು ಇಲ್ಲ. ಇದೆಯೆಂಬುದು ಸುಳ್ಳು. ಜ್ಞಾನವೂ ಮತ್ತು ಅದರಿಂದ ಅರಿಯಲಾಗುವ ವಸ್ತುವೂ ಸತ್ಯವಾದುವು. ಆದರೆ ಸ್ಥಿರವಲ್ಲ, ಮರುಕ್ಷಣದಲ್ಲಿ ಅಳಿಯುವುವು. ಇವೆರಡೂ ಅಷ್ಟಿಷ್ಟಲ್ಲ, ಅನೇಕವಾಗಿವೆ. ಅವಕ್ಕೆ ಯಾವ ಗುಣವೂ ಇಲ್ಲ. ವಸ್ತುವು ಪರಮಾಣುರೂಪವಾಗಿಯೇ ಇರುವುದು. ದೀಪಜ್ವಾಲೆಯಂತೆ ಒಂದೇ ರೀತಿಯಾಗಿರುವುದರಿಂದ ಜ್ಞಾನವೂ ಮತ್ತು ಪರಮಾಣು ಸಮೂಹದ ವಸ್ತುವೂ ತಿಳಿಯುವುದು.

ಪರಮಾಣುಗಳು ಲೆಕ್ಕವಿಲ್ಲದಷ್ಟಿದ್ದರೂ ಅವುಗಳ ಸಮೂಹವೆಂಬುದು ಒಂದೇ

ಆಗುವುದರಿಂದ ''ಘಟ ಒಂದು'' ಎಂಬುದೂ, ಅದೂ ಕ್ಷಣಕಾಲವೇ ಇದ್ದು ಅಳಿದು ಹೋಗುವುದಾಗಿದ್ದರೂ ದೀಪದ ಜ್ವಾಲೆಯು ಒಂದೇ ವಿಧವಾಗಿರುವುದರಿಂದ ''ಆ ಜ್ವಾಲೆಯೇ ಇದು'' ಎಂದು ತಿಳಿಯುವಂತೆ ಪರಮಾಣುಗಳು ಒಂದೇ ರೀತಿಯವಾದ್ದರಿಂದ ''ಅದೇ ಘಟ ಇದು'' ಎಂಬ ಜ್ಞಾನವೂ ಉಂಟಾಗುವುದು'' ಎಂಬಿವೇ ಮೊದಲಾದುವನ್ನು ತಮಗೆ ತೋರಿದಂತೆ ಬಡಬಡಿಸುವ ವೈಭಾಷಿಕರ ಮತದಲ್ಲಿರುವ ದೋಷಗಳನ್ನೆಲ್ಲಾ ಹೊರಗೆಡಹಿ ನಿರ್ಮೂಲಗೊಳಿಸುವೆವು.

द्रष्टा नास्ति च दृष्टि रस्ति बहवो दृश्या असंख्या मताः ।
नास्त्येतेषु गुणो न वा स्थिति रहो ! सर्वत्र वा सर्वदा ।
ते चानादिपरंपरासमुदिता अप्येक एवेति वै ।
वक्तु र्वक्रगते र्वदामि कुमते र्वैभाषिकस्योनताम् ।। २०

ಮೂಲ : ಕುಂಬಿಡುವಾರಾರೆನ್ರು, ತೇಡುಹಿನ್ರಾರ್
ಗುಣಂಗಳ್ಳೆಯುಂ ತಂಗಳುಕ್ಕುಕ್ಕೂರುಹಿನ್ರಾರ್
ತಂಬಡಿಯ್ಯೆತಮರ್ ಕ್ಕುರೈತ್ತುಪ್ಪಡಿವಿಕ್ಕಿನ್ರಾರ್
ತಮಕ್ಕಿನಿಮೇಲ್ ವೀಡೆನ್ರುಶಾದಿಕ್ಕಿನ್ರಾರ್,
ತಂಪುಡವೈಯುಣಲ್ ಕುರಿತ್ತು ನೆಡಿದೆಣ್ಣಿನ್ರಾರ್
ಶಂತತಿಕ್ಕುತ್ತವಂಪಲಿಕ್ಕತ್ತಾಂ ಪ್ಪೋಹಿನ್ರಾರ್,
ಶೆಂಬಡವರ್‌ಶೆಯ್‌ಹಿನ್ರ ಶಿತ್ತಿನಿಪ್ಪೈ
ಶೇವಕಪ್ಪತ್ತುಡನೇ ನಾಂ ಶಿದೈತ್ತಿಟ್ಟೋಮೇ ॥ 21

ಅರ್ಥ :- ಕುಂಬಿಡುವಾರ್-ಆರ್-ಎನ್ರು = (ತಮ್ಮನ್ನು) ನಮಿಸುವ (ಶಿಷ್ಯ)ರು ಯಾರು ? ಎಂದು, ತೇಡುಹಿನ್ರಾರ್ = ಹುಡುಕುತ್ತಿರುವವರೂ, ತಂಗಳುಕ್ಕು = ತಮಗೆ, ಗುಣಂಗಳ್ಳೆಯುಂ = (ಅಹಿಂಸೆಮೊದಲಾದ) ಗುಣಗಳಿರುವಂತೆಯೂ, ಕೂರು ಹಿನ್ರಾರ್ = ಹೇಳಿಕೊಳ್ಳುವವರೂ, ತಂ-ಪಡಿಯ್ಯೆ = ತಮ್ಮ (ಮತದಲ್ಲಿ ಒಪ್ಪಿರತಕ್ಕವನ್ನು) ಪ್ರಕಾರವನ್ನು ತಮರ್‌ಕ್ಕು = ಶಿಷ್ಯರಿಗೆ, ಉರೈತ್ತು = ಉಪದೇಶಿಸಿ, ಪಡಿವಿಕ್ಕಿನ್ರಾರ್ = (ಅವರನ್ನೂ) ಹಾಗೆಯೇ ನಡೆದುಕೊಳ್ಳುವಂತೆ ಮಾಡುವವರೂ, ಇನಿಮೇಲ್-ತಮಕ್ಕು = ಇನ್ನು ಮುಂದೆ ತಮಗೆ, ವೀಡು-ಎನ್ರು = ಮೋಕ್ಷವು (ಖಂಡಿತದೊರಕುವುದು) ಎಂದು, ಶಾದಿಕ್ಕಿನ್ರಾರ್ = ಸಾಧಿಸುವವರೂ, ತಂ-ಪುಡವೈ = ತಮಗೆ ಬೇಕಾದ ಬಟ್ಟೆಯನ್ನೂ, ಉಣಲ್-ಕುರಿತ್ತು-ಆಹಾರ-ಆಹಾರವನ್ನೂ ಕುರಿತು, ನೆಡಿದು-ಎಣ್ಣಿನ್ರಾರ್ = ಹೆಚ್ಚಾಗಿ ಗಮನಿಸುವವರೂ,

ಶಂತತಿಕ್ಕು-ಪಲಿಕ್ಕ = (ತಮ್ಮ) ಮುಂದಿನ ಪೀಳಿಗೆಗೆ ಫಲವು ದೊರಕುವುದಕ್ಕಾಗಿ, ತಾಂ-ತವಂ-ಪೋಹಿನ್ರಾರ್ = ತಾವು ತಪಸ್ಸಿಗೆ ಹೋಗುವವರೂ, (ಆದ) ಶೆಂಬಡವರ್ = ಬೆಸ್ತರನ್ನು ಹೋಲುವ ವೈಭಾಷಿಕರು, ಶೆಯ್‌ಹಿನ್ರ = ಕೈಗೊಂಡ, ಶಿತ್ತಿನಿಪ್ಪ್ = (ಕೇಳುವಾಗ ಇಂಪಾಗಿರುವಂತಿರುವ) ಅತ್ಯಲ್ಪವಾದ ರಸವಿರುವ ಮಾತುಗಳನ್ನು, ನಾಂ = ನಾವು, ಶೇವಕ-ಪತ್ತುಡನೇ = ಭಗವತ್ಸೇವೆಯಲ್ಲಿ ಅತ್ಯಂತ ಭಕ್ತಿಯುಳ್ಳವರಾಗಿ, ಶಿದೈತ್ತು-ಇಟ್ಟೋಂ = ಖಂಡಿಸಿ ನುಚ್ಚುನೂರಾಗಿಸಿದೆವು.

ತಾತ್ಪರ್ಯ :- ವೈಭಾಷಿಕನು ಜ್ಞಾನವನ್ನೂ ವಸ್ತುವನ್ನೂ ಒಪ್ಪುತ್ತಾನೆ. ಇದರಲ್ಲಿ ಗುಣವಾವುದೂ ಇಲ್ಲವೆನ್ನುತ್ತಾನೆ. ಅವೂ ಕ್ಷಣಕಾಲವೇ ಇದ್ದು ಅಳಿಯುವುವೆನ್ನುತ್ತಾನೆ. ಇದೆಲ್ಲ ಅವನಿಗೇವಿರುದ್ಧವಾಗಿವೆ. ತನ್ನ ಮತ ತನಗೇ ತೀರ ವಿರುದ್ಧವಾದಂತಾಗಿದೆ. ಹೇಗೆಂದರೆ :

ಇವರು ತಮಗೆ ಒಳ್ಳೆಯ ಕೀರ್ತಿಯೂ ಐಶ್ವರ್ಯವೂ ಹೆಚ್ಚಲೆಂದು ಶಿಷ್ಯರನ್ನು ಕೂಡಿಸಲು ಯತ್ನಿಸುತ್ತಾರೆ. ''ಅಹಿಂಸೆ-ವೈರಾಗ್ಯ'' ಮುಂತಾದ ಗುಣಗಳಿಗೆ ತಾವೇ ಗಣಿಗಳೆಂದು ಹೇಳುತ್ತಾರೆ. ದೇಹ ನಾಶವಾದೊಡನೆ ತಮಗೆ ಮೋಕ್ಷ ಸಿದ್ಧವೆಂದು ಬೊಬ್ಬೆಯಿಡುವರು. ಹೊಟ್ಟೆ-ಬಟ್ಟೆಗಳಿಗಾಗಿ ಮಿತಿ ಮೀರಿ ಪಾಡು ಪಡುವರು, ತಮ್ಮ ಸಂತತಿಗೆ ಸತತವಾಗಿ ಸತ್ಫಲವು ಲಭಿಸಲೆಂದು ಕಡುತರ ತಪಸ್ಸು ಮಾಡಿ ಕ್ಲೇಶ ಪಡುವರು. ಇವೆಲ್ಲಾ ''ಸರ್ವವೂಕ್ಷಣಿಕ, ಗುಣವಿಲ್ಲದ್ದು'' ಎಂಬಿವರವಾದಕ್ಕೆ ತೀರ ವಿರುದ್ಧವಲ್ಲವೆ.

ಹೀಗೆ ಇವರಲ್ಲಿರುವ ದೋಷಗಳನ್ನು ಬಯಲುಮಾಡಿ, ಅವರ ಅಲ್ಪಸಾರವಾದ ಮಾತುಗಳನ್ನು ಇವರ ವೀರವಚನಗಳಿಂದಲೇ ಖಂಡಿಸುವೆವು.

ಮೀನು ಹಿಡಿಯುವ ಬೆಸ್ತರು ಗಾಳದ ತುದಿಗೆ ಏನಾದರೂ ಹುಳು ಹುಪ್ಪಟಗಳನ್ನು ಸಿಕ್ಕಿಸುತ್ತಾರೆ. ಪಾಪ ಮೀನುಗಳು ಆ ಅಲ್ಪಾಹಾರಕ್ಕೆ ಮೋಹಗೊಂಡು ಸಿಕ್ಕಿಕೊಳ್ಳುತ್ತವೆ. ಹಾಗೆಯೇ ಸಾಮಾನ್ಯ ಜನರು ಇವರ ಕುಯುಕ್ತಿಗಳ ಮಾತುಗಳಿಗೆ ಮರುಳಾಗಿ, ಸರ್ವನಾಶಹೊಂದುವರು. ಆದುದರಿಂದ ಈ ಮತವು ಖಂಡನೀಯ, ಮತ್ತು ವರ್ಜನೀಯವಾದುದು.

ವೈಭಾಷಿಕರಿಗೆ ಬೆಸ್ತರ ದೃಷ್ಟಾಂತಕೊಟ್ಟಿರುವುದು ಅತಿಸಮಂಜಸವಾಗಿದೆ. ಬೆಸ್ತರಿಗೆ ''ಶೆಂಬಡವರ್'' ಎಂದು ತಮಿಳಿನಲ್ಲಿದೆ. ಇಲ್ಲಿ ಶ್ಲೇಷಾರ್ಥದಿಂದ ''ಕೆಂಪುಡಿಗೆಯವರು - ಭಿಕ್ಷುಕರು'' ಎಂದೂ, ''ಬೆಸ್ತ''ರೆಂದೂ ತೋರುವುದು. ಶ್ರೀಮದಾಚಾರ್ಯರು ತಮ್ಮ ಸಮಯೋಚಿತಪದ ಪ್ರಯೋಗ ನೈಪುಣ್ಯವನ್ನು ಸೂಚಿಸಿರುವರು.

**केवात्र प्रणमन्तिनस्त्विति समन्विष्यन्ति ये तादृशान् ।**
**स्तुन्वन्त्यात्मगुणान् स्वयं निजमतं शिष्येभ्य उत्त्का स्वकान् ॥**

तान् कुर्वन्तिच साधयन्त्यमितो मोक्षो ध्रुवो न स्त्विति ।
स्वीयं वस्त्र मथाशनं प्रति तथा सञ्चिन्तयन्त्याकुलाः ।। १

गच्छन्त्यात्मकुलीनसत्फलसमावाप्त्यै तपः कर्मणे ।
मत्स्यग्राहिसधर्मकर्मिण इह क्षुद्रार्थवैभाषिकान् ।।
सारासारविवेकिनो वय मिमे सेवारसास्वादिनः ।
क्षोदीकुर्मह ईदृशान् कपटिनो दुष्टस्वभावाहितान् ।। २१

ಮೂಲ : ವೇದಂಗಳ್ ಮೌಲಿವಿಳಂಗ ವಿಯಾಶನ್ ವಿರಿತ್ತನನ್ನೂಲ್,
ಪಾದಂಗಳಾನ ಪದಿನಾರಿಲೀಶನ್ ಪಡಿಮರೈತ್ತು,
ಬೇದಂಗಳಿಲ್ಲೈಯೆನ್ರೋರ್ ಪಿರಮಪ್ಪಿಚ್ಚಿಯಂಬುಹಿನ್ರ,
ಬೋದಂಕಳಿಂದವನ್ನೈಬ್ಬುದ್ದರ್ ಮಾಟ್ಟುಡನ್ ಪೂಟ್ಟುವಮೇ ॥ 22

ಅರ್ಥ :- ವೇದಂಗಳ್-ಮೌಲಿ = ವೇದಗಳ ಶಿರೋಭಾಗವೆಂಬ ವೇದಾಂತ ಶಾಸ್ತ್ರವು, ವಿಳಂಗ = ಬೆಳಗುವಂತೆ, ವಿಯಾಶ-ವಿರಿತ್ತ = ವ್ಯಾಸರಿಂದ ಹರಡಲ್ಪಟ್ಟ, ನಲ್-ನೂಲ್ = ಉತ್ತಮವಾದ ಬ್ರಹ್ಮಸೂತ್ರಗಳ, ಪಾದಂಗಳಾನ-ಪದಿನಾರಿಲ್ = 16 ಪಾದಗಳಲ್ಲಿ, (ನಿಶ್ಚಯಿಸಲ್ಪಟ್ಟ) ಈಶ-ಪಡಿ-ಮರೈತ್ತು = ಭಗವಂತನ ರೂಪಗುಣಾದಿ ಪ್ರಕಾರಗಳನ್ನು ಮರೆಸಿ, (ಇಲ್ಲದಂತೆಮಾಡಿ) ಬೇದಂಗಳ್-ಇಲ್ಲೈ-ಎನ್ರು = ಭೇದಗಳೇ ಇಲ್ಲವೆಂದು, ಓರ್-ಪಿರಮಪ್ಪಿಚ್ಚು = ಅಸದೃಶವಾದ ಬ್ರಹ್ಮಕ್ಕೆ ಭ್ರಮವನ್ನುಂಟುಮಾಡಿ, ಇಯಂಬು ಹಿನ್ರ = ಕಲ್ಪಿಸಿ ಹೇಳುವ, ಬೋದಂ-ಕಳಿಂದವನ್ನೈ = ತತ್ವಜ್ಞಾನವನ್ನು ಕಳೆದುಕೊಂಡವನನ್ನು, ಬುದ್ದರ್-ಮಾಟ್ಟುಡನ್ = ಬುದ್ಧಮತದವರೆಂಬ ಪಶುವಿನೊಡನೆ, ಪೂಟ್ಟುವಂ = ಒಂದಾಗಿ ಸೇರಿಸುವೆವು.

ತಾತ್ಪರ್ಯ :- ಉಪನಿಷತ್ತುಗಳಿಗೆ ಸರಿಯಾಗಿ ಯಥಾರ್ಥವಾದ ಅರ್ಥವನ್ನೇ ಪ್ರಕಾಶಪಡಿಸಬೇಕೆಂದು ಶ್ರೀ ವೇದವ್ಯಾಸರು ವೇದಾಂತಾರ್ಥಗಳನ್ನಳವಡಿಸಿಕೊಂಡು 16 ಪಾದಗಳುಳ್ಳ 4 ಅಧ್ಯಾಯಗಳನ್ನೊಳಗೊಂಡ ಬ್ರಹ್ಮಸೂತ್ರಗಳನ್ನು ವಿರಚಿಸಿ, ಪ್ರಕಾಶಪಡಿಸಿದರು. ಈ ವೇದಾಂತಶಾಸ್ತ್ರಗಳಿಂದ ಸ್ಪಷ್ಟಪಡುವ ಭಗವಂತನ ಕಲ್ಯಾಣ ಗುಣಗಳನ್ನೂ, ಸ್ವರೂಪ ಮೊದಲಾದುವನ್ನೂ ಅದ್ವೈತಿಗಳು ಒಪ್ಪದೆ, "ಗುಣವಿಲ್ಲದಿರುವ ಜ್ಞಾನಸ್ವರೂಪವಮಾತ್ರವೇ ಬ್ರಹ್ಮನೆಂದೂ, ಅದಕ್ಕಿಂತ ಬೇರೆಯೆನಿಸುವ ಆತ್ಮನೆಂಬುದಿಲ್ಲವೆಂದೂ, ಆ ಬ್ರಹ್ಮವೊಂದೇ ಸತ್ಯವೆಂದೂ, ಅದೊಂದರ ಹೊರತು ಉಳಿದುವೆಲ್ಲವೂ ಸುಳ್ಳೆಂದು, ಉಳಿದುವೂ ಸತ್ಯವೆಂದು ತೋರುವುದಾದರೆ ಆ ಕೋರಿಕೆ

ಅದರ ಅಜ್ಞಾನವೆಂದೂ'' ಹೇಳುವರು. ಹೀಗೆ ವಾದಿಸುವವರನ್ನೂ ಬೌದ್ಧರೊಡನೆ ಕೂಡಿಸಿ, ಎಲ್ಲರನ್ನೂ ತಲೆಯೆತ್ತದಂತೆ ಖಂಡಿಸುವೆವು.

**वेदानां मौलिदेशा इव विशदपरब्रह्मभावप्रकाशाः ।**
**व्याख्यातृव्यासनिर्यद्धविकनिधिपरब्रह्मसूत्रेऽपि तन्त्रे ।।**
**रीतीः पादेषु हित्वा षडधिकदशसु प्रोच्य भेदो नहीति ।**
**भ्रान्तं तं वीतबोधं सह सुगतवृषेणेह संयोजयामः ।।** २२

ಮೂಲ : **ಪಿರಿವಿಲ್ಲಾವಿರುಳೊನ್ರು ಪಿಣಕ್ಕೊನ್ರಿಲ್ಲಾ**
**ಪ್ಪೆರುವೆಯಿಲ್ಲೈ ಮರ್ರೈತ್ತುಲಹಂ ಕಾಟ್ಟುಮೆನ್ನ,**
**ಅರಿವಿಲ್ಲಾವರಿವೊನ್ನೈಯವಿದ್ದೈ ಮೂಡಿ —**
**ಅಹಂಪುರಮೆನ್ರಿವ್ವೈಯನ್ನೈತ್ತುಮಮ್ಮೈಕ್ಕುಮೆನ್ಬಾರ್,**
**ಶೆರಿವಿಲ್ಲಾಬ್ಬುದ್ಧರುಡನ್ ಶೇರ್‌ನ್ದು ಕೆಟ್ಟಾರ್**
**ಶೀವನ್ನೈಯು ಮೀಶನ್ನೈಯುಂಶಿದೈಕ್ಕಪ್ಪಾರ್ತ್ತಾರ್,**
**ನೆರಿಯಿಲ್ಲಾನೇರ್‌ವಳಿಯುಂ ತಾನೇಯಾನಾನ್**
**ನೆಡುಮಾಲ್ಲೈ ನಾಮಡೈಂದು ನಿಲ್ಲೈಪೆತ್ತೋಮೇ ॥** 23

ಅರ್ಥ :- ಪಿರಿವು-ಇಲ್ಲಾ = ಪ್ರತ್ಯೇಕಿಸಲ್ಪಡದಿರುವ, ಇರುಳ್-ಒನ್ರು = ಕತ್ತಲೆಯು, ಪಿಣಕ್ಕು-ಒನ್ರು-ಇಲ್ಲಾ = ವಿರೋಧವೊಂದೂ ಇರದ. (ಮರೆಮಾಡಲಾಗದ) ಪೆರುವೆಯಿಲ್ಲೈ = ಹಿರಿದಾದ ಬೆಳಕನ್ನು, ಮರ್ರೈತ್ತು = ಮರೆಸಿಬಿಟ್ಟು, ಉಲಹಂ-ಕಾಟ್ಟುಂ-ಎನ್ನ = ಜಗತ್ತನ್ನು ಬೆಳಗಿಸುವುದು ಎಂದು ಹೇಳುವಂತೆ, ಅವಿದ್ದೈ = ಅವಿದ್ಯೆಯು, ಅರಿವು-ಇಲ್ಲಾ = ಜ್ಞಾನವೆಂಬ ಗುಣವಿಲ್ಲದ, ಅರಿವು-ಒನ್ನೈ = ಜ್ಞಾನ ಸ್ವರೂಪವಾದ ಪರಬ್ರಹ್ಮವೊಂದನ್ನು, ಮೂಡಿ = ಮರೆಸಿ, ಅಹಂ-ಪುರಂ-ಎನ್ರು = ಒಳಗಿನ (ಆತ್ಮ ಮುಂತಾದ) ಹೊರಗಿನ (ಜಗತ್ತು-ಭೂತ ಮುಂತಾದ) ವಸ್ತುಗಳೆಂದು ಹೇಳಲ್ಪಡುವ, ಇವ್ವೈ-ಅನ್ನೈತ್ತುಂ = ಈ ಲೋಕದ ಎಲ್ಲಾ ವಸ್ತುಗಳನ್ನೂ, ಅಮ್ಮೈಕ್ಕುಂ-ಎನ್ಬಾರ್ = ಸೃಷ್ಟಿಸುವುದೆಂದು ಹೇಳುವ ಅದ್ವೈತಿಗಳು, ಶೆರಿವು-ಇಲ್ಲಾ = ತಿಳಿಯಾದರಿವಿಲ್ಲದ (ವಿವೇಕವಿಲ್ಲದ) ಬುದ್ಧರುಡನ್ = ಬೌದ್ಧರೊಡನೆ, ಶೇರ್‌ನ್ದು = ಸೇರಿ, ಕೆಟ್ಟಾರ್ = ದಾರಿತಪ್ಪಿದವರಾಗಿ, ಶೀವನ್ನೈಯುಂ = ಜೀವನನ್ನೂ, ಈಶನ್ನೈಯುಂ = ಈಶ್ವರನನ್ನೂ, ಶಿದೈಕ್ಕ-ಪಾರ್ತ್ತಾರ್ = ನಾಶಮಾಡಲಾರಂಭಿಸಿದರು, ನಾಂ = (ಆ ಮತಕ್ಕೆ ಸಿಲುಕದ) ನಾವು, ನೆರಿ-ಇಲ್ಲಾ = ಬೇರೆ ಉಪಾಯವಿಲ್ಲದ, ನೇರ್-ವಳಿಯುಂ = ನೇರವಾದ ಮಾರ್ಗವೂ, ತಾನೆ-ಆನಾನ್ =

ತಾನಾಗಿಯೇ ಆಗಿರುವ, ನೆಡು-ಮಾಲ್ಯೆ = (ಭಕ್ತರಲ್ಲಿ) ದೀರ್ಘಕಾಲ ಪ್ರೇಮಶಾಲಿಯಾದ ಭಗವಂತನನ್ನು, ಅಡ್ಯೆಂದ್ = ಶರಣು ಹೊಂದಿ, ನಿಲ್ಯೆ-ಪೆತ್ತೋಂ = ನಿತ್ಯವಾದ (ನಮ್ಮ) ಸ್ವರೂಪವನ್ನು ಪಡೆದು ಉಜ್ಜೀವಿತರಾದೆವು.

ತಾತ್ಪರ್ಯ :- ಬ್ರಹ್ಮವೊಂದೇ ಸತ್ಯ. ಅದರಲ್ಲಿ ಜ್ಞಾನಮೊದಲಾದ ಗುಣಗಳಿಲ್ಲ. ಆದರೆ ಅದು ಜ್ಞಾನಸ್ವರೂಪವಾಗಿಯೇ ನಿಲ್ಲುವುದು. ಬ್ರಹ್ಮಹೊರತು ಮತ್ತಾವುದೂ ಇಲ್ಲವೇ ಇಲ್ಲ. ಬ್ರಹ್ಮಸ್ವರೂಪಕ್ಕೆ ಅನಾದಿಯಾಗಿ ''ಮಾಯೆ''ಯ ಸಂಬಂಧವಿದೆ. ಅದು ಬ್ರಹ್ಮನನ್ನು ಮರೆಸುವುದೇ ಸ್ವಭಾವ. ಹೀಗೆ ಮಾಯೆಯಿಂದ ಮರೆಸಲ್ಪಟ್ಟಿರುವುದರಿಂದ ಬ್ರಹ್ಮಸ್ವರೂಪವು ಇದ್ದಂತೆ ಪ್ರಕಾಶಿಸುವುದಿಲ್ಲ. ''ಮಾಯೆ'' ಎಂಬುದು ಸತ್ವ-ರಜಸ್ಸು-ತಮಸ್ಸೆಂಬ ಗುಣಮಯವಾಗಿಯೂ, ಸತ್ಯವೋ ಅಸತ್ಯವೋ ಏನನ್ನೂ ಹೇಳಲಾಗದಂತೆಯೂ, ತನಗೆ ಆಧಾರವಾದ ಬ್ರಹ್ಮನನ್ನು ತಿಳಿಯದಂತೆ ಮಾಡುವುದೂ, ಮೇಲೆ ಮೇಲೆ ಬದಲಾಯಿಸುವಂತೆಯೂ ಆಗಿರುವ ವಸ್ತು. ಇದು ಪೃಥಿವೀ ಮೊದಲಾದ ವಿಕಾರವನ್ನೂ ಜ್ಞಾನ-ಇಚ್ಛಾ-ದ್ವೇಷ ಮೊದಲಾದುವನ್ನೂ ಉಂಟುಮಾಡುವುದು, ''ಅವಿದ್ಯೆಯೂ'' ಹೀಗೆಯೇ ಎಂದು ಹೇಳುವುದು. ''ಕತ್ತಲೆಯು ದೊಡ್ಡ ಬೆಳಕನ್ನು ಮರೆಸಿ, ಲೋಕದಲ್ಲಿರುವ ವಸ್ತುಗಳೆಲ್ಲವನ್ನೂ ಸ್ವತಃ ಎಲ್ಲರಿಗೂ ತೋರಿಸುವುದು'' ಎಂದು ಹೇಳಿದಂತಾಗುವುದು.

ಅದ್ವೈತಿಗಳು : ಜ್ಞಾನವೊಂದೇ ಸತ್ಯ, ಅದೇ ಬ್ರಹ್ಮ, ಉಳಿದುದೆಲ್ಲವೂ ಸುಳ್ಳು, ಆ ಜ್ಞಾನ ಅಳಿಯದೆ ನಿತ್ಯವಾಗಿದೆ. ಅದು ಒಂದೇ. ಅದರಲ್ಲಿ ಯಾವ ಗುಣವೂ ಇಲ್ಲ. ತಾವು ಹೇಳುವ ನಿತ್ಯತ್ವವೂ-ಏಕತ್ವವೂ ಕಲ್ಪನೆಮಾತ್ರ, ಆಧರ್ಮಗಳು ಖಂಡಿತ ಅದರಲ್ಲಿಲ್ಲ. ತಾವು ಪ್ರಮಾಣವೆಂದೊಪ್ಪಿರುವ ವೇದ, ಅದು ಪ್ರಮಾಣವಾಗುವಿಕೆಯೂ, ಅದನ್ನು ತಿಳಿಯುವವನು ಇವೆಲ್ಲ ಜ್ಞಾನದ ಫಲವೇ ಎಲ್ಲವೂ ಸುಳ್ಳು.

ಬೌದ್ಧರಲ್ಲೊಬ್ಬರಾದ ಯೋಗಚಾರನೂ : ಜ್ಞಾನವೊಂದೇ ಸತ್ಯ. ಉಳಿದುದೆಲ್ಲ ಸುಳ್ಳೇ. ಆ ಜ್ಞಾನವೂ ಕ್ಷಣಿಕ. ಮತ್ತೆ ಮತ್ತೆ ಹುಟ್ಟುತ್ತವೆ. ಅದರಲ್ಲಿ ಯಾವ ಧರ್ಮವೂ ಇಲ್ಲ. ತಾನು ಹೇಳುವ ಅನಿತ್ಯತ್ವವೂ ಬಹುತ್ವವೂ ಕಲ್ಪಿತ. ತನಗೆ ಪ್ರಮಾಣವಾಗಿರುವ ಬೌದ್ಧಾಗಮವೂ, ಪ್ರಮಾಣವಾಗುವಿಕೆಯೂ, ಅದನ್ನರಿಯುವವನೂ ಎಲ್ಲವೂ ಸುಳ್ಳೇ.

ಈ 2 ಮತಗಳೂ ಜ್ಞಾನ ಒಂದು ಅದು ಅನೇಕ, ನಿತ್ಯ-ಅನಿತ್ಯ, ಎಂಬಂಶಗಳಲ್ಲಿ ಮಾತ್ರ ಸ್ವಲ್ಪ ಬೇರೆಯಂತೆ ತೋರಿದರೂ, ಉಳಿದ ಮುಖ್ಯಾಂಶಗಳು ಒಂದಾಗಿರುವುದರಿಂದ, ಬೌದ್ಧರೆಂಬ ಪಶುಗಳೊಡನೆ ಇವರನ್ನೂ ಸೇರಿಸಿ ಖಂಡಿಸಿರುವುದು.

**विश्लेषानर्हमन्धंतमस मिह महो निर्विवादं परीत्य ।**
**लोकं सन्दर्शयेदित्युदित मिव चिदाकार मज्ञं त्वविद्या ॥**

ब्रह्मावृत्यैवमन्तर्बहिरपि सृजतीत्याहुरेतत्समस्तं ।
निर्वेदै स्ते च बौद्धै स्सह विलयमिता स्सर्वथाद्वैतिनोऽमी ।। १

जीवात्मान मथेश्वरं च परितो विध्वंसमाना स्वतः ।
नष्टा धूततदीयमार्गकुशला रामानुजीया वयम् ।।
ईशं संश्रितरक्षिणं स्वशरणापेतं च नारायणं ।
श्रीमन्तं करुणानिधिं ह्युपगता धन्या स्स्म उज्जीविताः ।। २३

ಮೂಲ : ಚೋದನೈವಿಟ್ಟೊರುತ್ತನ್ ಶೊಲಮೆಯ್ಯೆನಚ್ಚೋಗತರೈ,
ಚೇತನೈಯತ್ತವರೆನ್ರುಶಿದೈತ್ತಪಿನ್ ಶೀವರ್‌ಹಳ್ಕೋರ್,
ವೇದನೈಶೆಯ್‌ಹೈವೆರುಮರುಮೆನ್ರುವಿಳಂಬಿವೈತ್ತೇ,
ಮಾದವಮೆನ್ರುಮಯಿರ್ ಪರಿಪ್ಪಾರ್‌ಮಯಲ್
ಮಾತ್ತುವಮೇ ॥ 24

ಅರ್ಥ :- ಒರುವನ್ = ಒಬ್ಬ (ಬುದ್ಧನು), ಶೋದನೈ-ವಿಟ್ಟು = (ಅಪೌರುಷೇಯವಾದ ವೇದವು) ನಿರೂಪಿಸುವುದನ್ನು ಬಿಟ್ಟು, ಶೊಲ = ಹೇಳಲು, (ಅದನ್ನು) ಮೆಯ್-ಎನ = ಸತ್ಯವಾದುದೆಂದು ಒಪ್ಪಿಕೊಂಡ, ಶೋಗತರೈ = ಬೌದ್ಧರನ್ನು, ಚೇತನೈ-ಅತ್ತವರ್-ಎನ್ರು = ಬುದ್ಧಿಯಿಲ್ಲದವರೆಂದು, ಶಿದೈತ್ತ-ಪಿನ್ = (ಅವರ ಮತವನ್ನು) ಖಂಡಿಸಿದ ಮೇಲೆ, ಶೀವರ್‌ಹಳುಕ್ಕು = ಜೀವಾತ್ಮರಿಗೆ, ಓರ್-ವೇದನೈ-ಶೆಯ್‌ಹೈ = ದುಃಖವೊಂದನ್ನುಂಟುಮಾಡುವುದು, ವೆರುಂ-ಮರಂ-ಎನ್ರು = ವ್ಯರ್ಥವಾದ ಪಾಪವೆಂದು) ವಿಳಂಬಿ-ವೈತ್ತೇ = ಹೇಳಿಕೊಂಡೇ, ಮಾ-ತವಂ-ಎನ್ರು = ದೊಡ್ಡತಪಸ್ಸೆಂದು ತಿಳಿದು, ಮಯಿರ್-ಪರಿಪ್ಪಾರ್ = (ತಮ್ಮ) ಕೂದಲನ್ನೇ ಕೀಳುವ ಜೈನರ, ಮಯಲ್ = ಅಜ್ಞಾನವನ್ನೂ, ಮಾತ್ತುವಂ = ಹೋಗಲಾಡಿಸುವೆವು.

ತಾತ್ಪರ್ಯ :- ಬುದ್ಧನು ಅನಾದಿಯಾಗಿಯೂ ಅಪೌರುಷೇಯವಾಗಿಯೂ ಬಂದಿರುವ ವೇದಗಳನ್ನುಪ್ರಮಾಣವೆಂದೊಪ್ಪದೆ, ತನಗೆ ತೋರಿದಂತೆ ತನ್ನ ಶಿಷ್ಯರಿಗೆ ಉಪದೇಶಿಸಿದನು. ಆತ ಹೇಳಿದುದೇ ಸತ್ಯವಾದುದೆಂದು ಅವರೂ ಒಪ್ಪಿದರು. ಹಾಗಿರುವ ಬೌದ್ಧರನ್ನು ಸರಿಯಾದರಿವಿಲ್ಲದವರೆಂದು ವಿಶದಪಡಿಸಿ ಖಂಡಿಸಲಾಯಿತು. ಇನ್ನು ಜೈನರ ಅರಿವಿನ ಪರಿಯನ್ನು ತಿಳಿಸಿ ಆ ಅಜ್ಞಾನವನ್ನು ನಿವಾರಿಸುವೆವು.

ಯಾವ ಜೀವವನ್ನೂ ಹಿಂಸಿಸಕೂಡದೆಂಬುದೇ ಜೈನರ ಮುಖ್ಯ ತತ್ವವಲ್ಲವೆ ! ಆದರೆ

ಅವರು ಅದಕ್ಕೆ ಪ್ರತಿಯಾಗಿ ತಮ್ಮ ತಮ್ಮ ಕೂದಲನ್ನೇ ಕೀಳುತ್ತಾ, ವೃಥಾ ದುಃಖವನ್ನು ಹೆಚ್ಚಿಸಿಕೊಳ್ಳುವುದೇ "ದೊಡ್ಡ ತಪಸ್ಸು" ಎಂದುಕೊಳ್ಳುವರು. ಈ ವಾದ ಅವರಿಗೇ ಸರಿ.

हित्वा वेदोक्त मेको यदि वदति तदेवाप्तवाक्यं च सत्यं ।
मन्वानान् बुद्धिहीनान् सुगत मनुगतान् खण्डयित्वार्हतानाम् ।।
''जीवानां हिंसनं यन्महदघमिति ये घोषयन्त स्स्वकेशान् ।
लुञ्चन्त्येन्महिष्टं तपइति'' वदतां प्रोज्झयेमाज्ञतां ताम् ।। २४

ಮೂಲ : ಶೊನ್ನಾರ್‌ತಾಂ ಶೊನ್ನದೆಲ್ಲಾಂ ತುರವೋಮೆನ್ರುಂ
ಶೊನ್ನದುವೇ ಶೊನ್ನದಲದಾಹುಮೆನ್ರುಂ
ತಿನ್ನಾದುಂ ತಿನ್ನುಮದುಮೇಕಮೆನ್ರುಂ —
ಶಿರಿಯನುಮಾಂ ಪೆರಿಯನುಮಾಂ ಶೀವನೆನ್ರುಂ,
ಮನ್ನಾದು ಮನ್ನುಮದು ಮೊನ್ರೇಯೆನ್ರುಂ
ವೈಯಮೆಲ್ಲಾಂವಿಳುಹಿನ್ರದೆನ್ರುಮೆನ್ರುಂ,
ತೆನ್ನಾಡುಂವಡನಾಡುಂ ಶಿರಿಕ್ಕಪ್ಪೇಶುಂ
ಶಿನನೆರಿಯಾರ್ ಶಿನಮೆಲ್ಲಾಂ ಶಿದೈತ್ತಿಟ್ಟೋಮೇ ॥ 25

**ಅರ್ಥ** :- ಶೊನ್ನಾರ್-ತಾಂ = ಆಯಾಯಾ ಮತಪ್ರವರ್ತಕರು, ಶೊನ್ನದ್-ಎಲ್ಲಾಂ = ಹೇಳಿರುವುದನ್ನೆಲ್ಲಾ, ತುರವೋಂ-ಎನ್ರುಂ = ತೊರೆಯೆವೆಂದೂ, ಶೊನ್ನದುವೇ = ಹೇಳಿರುವ ವಿಷಯವೇ, ಶೊನ್ನದು-ಅಲದು-ಆಹುಂ-ಎನ್ರುಂ = ಹೇಳಲ್ಪಡದ ವಿಷಯವಾಗುವುದೆಂದೂ, ತಿನ್ನಾದುಂ = ತಿನ್ನಬಾರದ ಪದಾರ್ಥವೂ, ತಿನ್ನು-ಮದುಂ = ತಿನ್ನತಕ್ಕ ವಸ್ತುವೂ, ಏಕಂ-ಎನ್ರುಂ = ಒಂದೇ ಎಂದೂ, ಶೀವನ್ = ಜೀವಾತ್ಮನು, ಶಿರಿಯನುಂ-ಆಂ = ಅಲ್ಪ ಪರಿಮಾಣನೂ, ಪೆರಿಯನುಂ-ಆಂ-ಎನ್ರುಂ = ಮಹಾಪರಿಮಾಣನೂ ಆಗುವನೆಂದೂ, ಮನ್ನಾದುಂ = ಅನಿತ್ಯವೂ, ಮನ್ನುಮದುಂ = ನಿತ್ಯವಾದುದೂ, ಒನ್ರೇ-ಎನ್ರುಂ = ಒಂದೇ ಎಂದೂ, ವೈಯಂ-ಎಲಾಂ = ಜಗತ್ತೆಲ್ಲಾ, ಎನ್ರುಂ = ಎಂದೆಂದಿಗೂ, ವಿಳುಹಿನ್ರದು-ಎನ್ರುಂ = ಕೆಳಕ್ಕೆ ಬಿದ್ದುಹೋಗುವುದೆಂದೂ, ತೆನ್-ನಾಡುಂ = ದಕ್ಷಿಣ ದೇಶವೂ, ವಡ-ನಾಡುಂ = ಉತ್ತರ ದೇಶವೂ, ಶಿರಿಕ್ಕ-ಪೇಶುಂ = ಪರಿಹಾಸ್ಯಮಾಡುವಂತೆ ಹೇಳುವ, ಶಿನನೆರಿ. ಯಾರ್ = ಜಿನಮತದವರ, ಶಿನಂ-ಎಲ್ಲಾಂ = ಕ್ರೋಧದಿಂದ ಹೇಳುವ ಮಾತೆಲ್ಲವನ್ನೂ, ಶಿದೈತ್ತಿಟ್ಟೋಂ = ಸದೆಬಡಿದಳಿಸಿದೆವು.

ತಾತ್ಪರ್ಯ :- ಜೈನಮತದ ಸಾರಾಂಶ :- ಈಶ್ವರನಿಲ್ಲ, ಜಗತ್ತಿಗೆ ಪರಮಾಣುಗಳೇ

ಕಾರಣ. ಜಗತ್ತಿನಲ್ಲಿರುವ ಪ್ರತಿಯೊಂದು ವಸ್ತುವೂ ಸತ್ಯ-ಅಸತ್ಯ, ಭೇದ-ಅಭೇದ, ನಿತ್ಯ-ಅನಿತ್ಯ, ಮೊದಲಾದ ಪರಸ್ಪರ ವಿರೋಧವುಳ್ಳದ್ದಾಗಿಯೇ ಇರುವುದೆಂದು ಒಪ್ಪಿರುವರು. ಒಂದೇ ವಸ್ತುವಿನಲ್ಲಿ ಪರಸ್ಪರ ವಿರುದ್ಧ ಧರ್ಮಗಳು ಸೇರಿವೆಯೆನ್ನುವಂತೆಯೇ ವಿರುದ್ಧವಾದ ಮತ್ತೆ ಕೆಲವಂಶಗಳನ್ನೂ ಒಪ್ಪಿಕೊಳ್ಳುವಂತೆ ಆಕ್ಷೇಪಿಸಿದರೆ, ಅವರು ಅದಕ್ಕೆ ಒಪ್ಪರು. ಹೀಗೆ ಅವರ ವಾದವನ್ನು ಸಪ್ರಮಾಣವಾಗಿ ಪ್ರಮಾಣಗಳಿಗೆ ವಿರುದ್ಧವಾದುದೆಂದು ಹೇಳಿದರೆ, ''ಹಾಗೆ ವಿರುದ್ಧವಾದುದನ್ನು ಒಪ್ಪಿಕೊಂಡಿರುವುದೇ ತಮಗೆ ಭೂಷಣ''ವೆನ್ನುವರು.

ವಸ್ತುಗಳಲ್ಲಿ ಅನುಭವಿಸಿರುವುದೂ ಅನುಭವಿಸದಿರುವುದೂ ಒಂದೇ ಆಗುವುದು. ಜೀವಾತ್ಮನ ಗಾತ್ರವು ಆಯಾ ದೇಹ ಗಾತ್ರವೇ ಹೊರತು ಬೇರೆಯಲ್ಲ, ಒಂದೇ ವಸ್ತುವು ನಿತ್ಯವಾಗಿಯೂ ಇರಬಹುದು ಅನಿತ್ಯವಾಗಿಯೂ ಇರಬಹುದು. ಭೂಮಿ ಭಾರವನ್ನು ಹೊರಲಾರದೆ ಕೆಳಕೆಳಕ್ಕೆ ಹೋಗುತ್ತಿದೆ. ಇವೇ ಮೊದಲಾದ ವಾದಗಳನ್ನು ಮಾಡಿ ನಾಡಿನ ತಾತ್ವಿಕ ಜನರ ಪರಿಹಾಸ್ಯಕ್ಕೆ ಗುರಿಯಾಗಿರುವರು, ಅವರ ವಾದಗಳನ್ನು ಈ ಅಧಿಕಾರದಲ್ಲಿ ಖಂಡಿಸುವೆವು.

**तत्तत्सिद्धान्त्युपात्ता य इह च विषयास्तान् जहीमो न सर्वान् ।**
**एवं ह्युक्ता अनुक्ता भवति सम मनास्वाद्य मास्वाद्य मेवम् ।।**
**अण्वात्मा वा महात्मा निपतति पृथिवी नित्य मेवाप्यनित्यं ।**
**येऽवाच्योदीच्यहास्यास्पदजिनमतिन स्तद्रुषोऽद्रावयाम ।।** २५

**ಮೂಲ : ಐಕಾಂತಿಕ ಮೊನ್ರುಮಿಲ್ಲೈ ಯೆನ್ರಾಶೈಯೈತ್ತಾ ಮುಡುಪ್ಪಾರ್,**
**ಶೋಕಾಂತ ಮಾಹತ್ತುರಪ್ಪುಂಡಪಿನ್ ತೊಳಿಲ್ ವೈದಿಕಮೆನ್ರು,**
**ಏಕಾಂತಿಹಳ್ ಶೊನ್ನವೀರ್ಶಪಡಿಯಿಲ್ ಏಕರ್ಪಮೆಣ್ಣುಂ,**
**ಲೋಕಾಂತವೀಣರ್ತಂ ವೇದಾಂತ ವಾರ್ತ್ತೈವಿಲಕ್ಕುವಮೇ ॥ 29**

ಅರ್ಥ :- ಆಶೈಯೈ-ಉಡುಪ್ಪಾರ್-ತಾಂ = ದಿಗಂಬರರಾದ ಜೈನರು, ಒನ್ರುಂ = ಯಾವ ಪದಾರ್ಥವೂ, ಐಕಾಂತಿಕಂ-ಇಲ್ಲೈ-ಎನ್ರು = ಒಂದೇ ಬಗೆಯ ಸ್ವಭಾವವುಳ್ಳದಲ್ಲವೆಂದು ಹೇಳಿ, ಶೋಕಾಂತಮಾಹ = ಶೋಕದಿಂದಲೇ ಕೊನೆಗೊಳ್ಳುವಂತಾಗಿ, ತುರಪ್ಪು-ಉಂಡ-ಪಿನ್ = (ನಮ್ಮಿಂದ) ತೊರೆಯಲ್ಪಟ್ಟಮೇಲೆ, ವೈದಿಕಂ = ವೇದ ವಿಚಾರವೇ, ತೊಳಿಲ್-ಎನ್ರು = (ತಮ್ಮ) ಕಾರ್ಯವೆಂದು, ಏಕಾಂತಿಹಳ್-ಶೊನ್ನ = (ಪರಬ್ರಹ್ಮನನ್ನು) ಏಕರೂಪವಾಗಿಯೇ ಕಂಡ ವ್ಯಾಸಾದಿಗಳು

ಬೆಳಗಿದ, ಈರ್ಶ-ಪಡಿಯಿಲ್ = ಈಶ್ವರನ ಸ್ವರೂಪಸ್ವಭಾವಗಳಲ್ಲಿ, ವಿಕರ್ಪಂ-ಎಣ್ಣಿಂ = (ಭೇದ-ಅಭೇದ) ವಿಕಲ್ಪವನ್ನು ಕಲ್ಪಿಸುವಂತಹವರಾಗಿ, ಲೋಕಾಂತ-ವೀಣರ್‌ತಂ = ಅರಿವಿಲ್ಲದವರಾದ್ದರಿಂದಲೇ ಪ್ರಯೋಜನವಿಲ್ಲದವರಾದವರ (ಭಾಸ್ಕರ-ಯಾದವರ) ವೇದಾಂತ-ವಾತ್ತೈ = ವೇದಾಂತವನ್ನು ಬೋಧಿಸುವ ಮಾತುಗಳನ್ನು, ವಿಲಕ್ಕುವಂ = ನಿರಾಕರಿಸುವೆವು. (ಖಂಡಿಸುವೆವು)

ತಾತ್ಪರ್ಯ :- ಜೈನರು ದಿಕ್ಕುಗಳೇ ಬಟ್ಟೆಯಾಗಿಯುಳ್ಳವರು. ಅವರು ಒಂದೇ ಸ್ವಭಾವದ ವಸ್ತುವಾವುದೂ ಇಲ್ಲವೆನ್ನುವರು. ಬ್ರಹ್ಮನ ಸ್ವರೂಪವನ್ನು ನೋಡಿ ಒಂದೇ ರೀತಿಯಾಗಿದೆಯೆಂದು ಅರಿತು ಪ್ರಕಾಶಪಡಿಸಿದವರು ವ್ಯಾಸರು-ಪರಾಶರರು ಮುಂತಾದವರು. ಅವರು ವಿಶದೀಕರಿಸಿದ ಬ್ರಹ್ಮನ ಸ್ವರೂಪದಲ್ಲಿ ಭೇದ-ಅಭೇದವೆಂಬ ವಿರುದ್ಧಾಂಶಗಳನ್ನು ಕಲ್ಪಿಸತಕ್ಕವರು ಭಾಸ್ಕರ-ಯಾದವರು. ವೇದಾಂತವನ್ನು ನಿರ್ಣಯಿಸುವುದು ತಮ್ಮ ವಾದವೊಂದೇ ಎಂದು ಅವರು ಹೇಳುವರು. ಅವರ ಮತವನ್ನು ಈ ಅಧಿಕಾರದಲ್ಲಿ ಖಂಡಿಸುವೆವು.

ಭೇದಾಭೇದವಾದವು ಬೆಳಕು ಕತ್ತಲೆಗಳಂತೆ ವಿರುದ್ಧವಾಗುವುದನ್ನು ಅರಿಯದೆ ಕುರುಡರಾಗಿ, ಸಕಲಫಲಗಳನ್ನೂ ಕಳೆದುಕೊಂಡಿರುವ ಯಾದವ-ಭಾಸ್ಕರರು ಇಲ್ಲಿ ''ಲೋಕಾಂತವೀಣರ್'' ಎಂದರೆ ಲೋಕಾಂಧ ವೀಣರು ಎಂದೆನಿಸಿಕೊಂಡಿರುವರು.

**प्रोचु श्चाशाम्बरा ये जगति किमपि नैकान्तिकं हीति जैनाः ।**
**शोकान्ता निर्जिता स्ते त्वथ निगमविचारैकनिष्ठा इतीव ।।**
**एकान्त्युक्तेशभावे विहितनिजविकल्पाश्च लोकेप्यलोकाः ।**
**ते चापार्था स्तदीयं ह्युपनिषदभिधेयक्रमं स्वण्डयामः ।।** २६

ಮೂಲ : ಒನ್ರೆನವುಂ ಪಲವೆನವುಂ ತೋತ್ತುಹಿನ್ರ
ಉಲಹೆಲ್ಲಾಂ ಒರುಪಿರಮನ್ ತಾನೇಯಾಕ್ಕಿ,
ನನ್ರೆನವುಂ ತೀದೆನವುಂ ಪಿರಿಂದವೆಲ್ಲಾಂ
ನನ್ರನ್ರು ತೀದನ್ರೇಯೆನ ನವಿನ್ನಾರ್,
ಕನ್ರುಮಲರ್ ಪಶುವುಮಲರಾಹಿ ನಿನ್ರೇ
ಕನ್ರಾಹಿಪ್ಪಶುವಾಹಿ ನಿನ್ರ ವಣ್ಣಂ,
ಇನ್ರುಮರ್ರೈಮಾಟ್ಟುಕ್ಕೋರಿಡ್ಡೈಯ ನಾನ
ಏಕಾಂತಿಯಿಶ್ರೆಂದಿಡ ನಾಮಿಯಂಬಿನೋಮೇ ॥ 27

**ಅರ್ಥ** :- ಒನ್ರು-ಎನವುಂ = ವಸ್ತುವು ಒಂದೇ ಎನ್ನುವಂತೆಯೂ, ಪಲ-ಎನವುಂ = ವಸ್ತುಗಳನೇಕವೆನ್ನುವಂತೆಯೂ, ತೋತ್ತುಹಿನ್ರ = ತೋರುವಂತಹ, ಉಲಹು-ಎಲ್ಲಾಂ = ಜಗತ್ತಿನಲ್ಲಿರುವ ಪದಾರ್ಥಗಳನ್ನೆಲ್ಲಾ, ಒರು-ಪಿರಮ್ಮ-ತಾನೇ-ಆಕ್ಕಿ = ಒಂದು ಬ್ರಹ್ಮಸ್ವರೂಪವಾಗಿಯೇ ಕಲ್ಪಿಸಿ, ನನ್ರೆನವುಂ = ಒಳ್ಳೆಯವೆಂದೂ, ತೀದನವುಂ = ಕೆಟ್ಟವೆಂದೂ, ಪಿರಿಂದವೆಲ್ಲಾಂ = (ಶಾಸ್ತ್ರಗಳಲ್ಲಿ) ವಿಭಾಗಿಸಲ್ಪಟ್ಟ ವಸ್ತುಗಳೆಲ್ಲವನ್ನೂ, ನನ್ರು-ಅನ್ರು = ಉತ್ತಮವಾದುವಲ್ಲ, ತೀದು-ಅನ್ರೆ = ಕೆಟ್ಟವೂ ಅಲ್ಲ, ಎನ-ನವಿನ್ರಾರ್ = ಎಂದು ಹೇಳಿದವರು, (ಭಾಸ್ಕರ-ಯಾದವ ಮತದವರು) ಕನ್ರುಂ-ಅಲರ್ = ಕರುಗಳೂ ಅಲ್ಲದೆ, ಪಶುವುಂ-ಅಲರ್ = ಪಶುವೂ ಅಲ್ಲದೆ, ಅಹಿ-ನಿನ್ರೇ = ಆಗಿದ್ದುಕೊಂಡೇ, ಕನ್ರಾಹಿ-ಪಶುವಾಹಿ = ಕರುವಾಗಿಯೂ, ಹಸುವಾಗಿಯೂ ಆಗಿ, ನಿನ್ರ-ವಣ್ಣಂ = ಇರುವ ಪ್ರಕಾರವನ್ನು, ಮರೈ-ಮಾಟ್ಟುಕ್ಕು = ವೇದವೆಂಬ ಹಸುವಿಗೆ, ಓರ್-ಇಡೈಯನಾನ = ಅಸಾಧಾರಣ ಗೋಪಾಲನಾದ, ಏಕಾಂತಿ = ಒಂದೇ ಸ್ಥಿತಿಯಲ್ಲಿರುವ ಭಗವಂತನು, ಇಶೈಂದಿಡ = ಮನವೊಪ್ಪಿ ಒಲಿವಂತೆ, ಇನ್ರು = ಈಗ, ನಾಂ = (ಅನನ್ಯಶರಣರಾದ) ನಾವು, ಇಯಂಬಿನೋಂ = ಹೇಳಿದೆವು (ಪ್ರಕಾಶ ಪಡಿಸಿದೆವು)

**ತಾತ್ಪರ್ಯ** :- ''ಜೀವನೂ ಬ್ರಹ್ಮನೂ ಬೇರೆಬೇರೆಯಾಗಿರುವ ಒಂದಾಗಿಯೇ ಇರತಕ್ಕವು. ಹೀಗಿರುವ ಅಭೇದವು ಸ್ವಭಾವವಾಗಿಯೇ ಹೊಂದಿಕೊಂಡಿದೆ. ಅವು ಬೇರೆ ಬೇರೆಯಾಗಿ ತೋರುವ ಭೇದವಾದರೋ ಬುದ್ಧಿ-ಇಂದ್ರಿಯ-ಶರೀರಾದಿಗಳ ಕಾರಣದಿಂದ (ಉಪಾಧಿಯಿಂದ) ತೋರುವುದು. ಅಚೇತನಕ್ಕೂ ಬ್ರಹ್ಮನಿಗೂ ಭೇದವೂ ಅಭೇದವೂ ಸ್ವಭಾವವಾಗಿಯೇ ಇರುವುದು ಎಂಬುದು ಭಾಸ್ಕರನ ಮತ.

''ಜೀವನಿಗೂ-ಬ್ರಹ್ಮನಿಗೂ, ಅಚೇತನಕ್ಕೂ-ಬ್ರಹ್ಮನಿಗೂ, ಇರುವ ಭೇದ-ಅಭೇದ ಗಳೆಂಬೆರಡೂ ಸ್ವಭಾವವಾಗಿಯೇ ಇರುತ್ತವೆ'' ಎಂಬುದು ಯಾದವಮತ.

ಹೀಗೆ ಹೇಳುವ ಇವರಿಬ್ಬರೂ ಇಡೀ ಜಗತ್ತೇ ಭೇದವಾಗಿಯೂ ಅಭೇದವಾಗಿಯೂ ಕಾಣುತ್ತದೆಯೆಂದು ಹೇಳುತ್ತಾರೆ.

ಹೇಗೆಂದರೆ ಒಂದೊಂದು ವಸ್ತುವೂ ಜಾತಿ-ವ್ಯಕ್ತಿಯೆಂಬ ಎರಡು ಸ್ಥಿತಿಗಳನ್ನೂ ಹೊಂದಿವೆ. ''ಜಾತಿ''ಎಂಬುದು ಒಂದೇ ಬಗೆಯ ಅನೇಕ ವಸ್ತುಗಳಲ್ಲಿರುವ ಧರ್ಮದಿಂದ ಒಂದನ್ನು ನೋಡಿದೊಡನೆ ಅದೇ ವಿವಿಧ ಅನೇಕ ವಸ್ತುಗಳನ್ನು ನಿರ್ದೇಶಿಸುವುದು. ''ವ್ಯಕ್ತಿ''ಯೆಂಬುದು ನಿರ್ದಿಷ್ಟವಾದ ವಸ್ತುವೊಂದನ್ನೇ ತಿಳಿಸುವುದು. ಪ್ರತಿಯೊಂದು ವಸ್ತುವಿನಲ್ಲೂ ಕಾರ್ಯ-ಕಾರಣ ಭಾವಗಳು ಎರಡೂ ಇವೆ. ಹೀಗಾಗಿ ನಮಗೆ ಕಾಣುವ ಜಗತ್ತೆಲ್ಲವೂ ''ಜಾತಿ'' ಎಂಬ ''ಕಾರಣ'' ಸ್ಥಿತಿಯಲ್ಲಿ ಅಭೇದವುಳ್ಳದ್ದಾಗಿಯೂ, ''ವ್ಯಕ್ತಿ'' ಕಾರ್ಯವೆಂಬ ಸ್ಥಿತಿಯಲ್ಲಿ ಭೇದವುಳ್ಳದ್ದಾಗಿಯೂ ಆಗಿರುವುದು, ಹೀಗಾದರೆ ಬೇರೆ ಬೇರೆ ಅವಸ್ಥೆಗಳ ಮೂಲಕವೇ ಭೇದವೂ-ಅಭೇದವೂ ಒಂದಾಗುವುದಾದರೆ ಒಂದೇ ವಸ್ತುವಿನಲ್ಲಿ

ಭೇದಾ ಭೇದಗಳನ್ನು ಒಪ್ಪಿಕೊಂಡಂತಾಗಲಿಲ್ಲವಲ್ಲಾ ಎಂದರೆ ಜಾತಿಯೂ-ವ್ಯಕ್ತಿಯೂ, ಹಾಗೆಯೇ ಕಾರಣವೂ-ಕಾರ್ಯವೂ ಒಂದಕ್ಕೊಂದು ಬೇರೆಯಾಗಿಯೂ ಒಂದಾಗಿಯೂ ನಿಲ್ಲುವಂತಾಗಿ ಅಲ್ಲೂ ಭೇದಾಭೇದಗಳಿಂದಲೇ ಸಮಾಧಾನಪಡಿಸಬಹುದು.

ಹೀಗೆ ಭೇದಾ ಭೇದಗಳೊಂದಿಗೇ ಜಗತ್ತು ನಡೆಯುವುದು. ಈ ಜಗತ್ತೆಲ್ಲವೂ ಬ್ರಹ್ಮವಾಗಿಯೇ ಇರುವುದು. ವಸ್ತುಗಳೆಲ್ಲವೂ ಒಳ್ಳೆಯವೂ ಅಲ್ಲ, ಕೆಟ್ಟವೂ ಅಲ್ಲ, ಎಂದಂತಾಯಿತು.

ಹೀಗೆ ಸಕಲ ಪ್ರಮಾಣಗಳಿಗೂ ವಿರುದ್ಧವಾಗಿ ಪರಸ್ಪರ ವಿರೋಧವುಳ್ಳ ಭೇದಾ ಭೇದಗಳ ಮೂಲಕವೇ ಜಗತ್ತು ನಡೆಯುವುದೆಂದು ಯಾದವ ಭಾಸ್ಕರರು ಇಬ್ಬರೂ ಹೇಳುವರು.

ವೇದಾಂತಿಗಳಿಂದ ನಾವು ಭೇದವು ಶರೀರ ಸಂಬಂಧದಿಂದ ಬಂದುದೆಂದೂ, ಅಭೇದವು ಆತ್ಮಸ್ವರೂಪಪ್ರಯುಕ್ತವಾಗಿ ಬಂದಿರುವುದೆಂದೂ, ಹೇಳಿ ವಿರೋಧವಿಲ್ಲದಂತೆ ಹೊಂದಿಸುವೆವು. ಹೇಗೆಂದರೆ; ಶ್ರೀಕೃಷ್ಣನು ಹಸುಗಳನ್ನೂ ಕರುಗಳನ್ನೂ ಕಾಡಿಗೆ ಅಟ್ಟಿಕೊಂಡು ಹೋಗಿ ಮೇಯಿಸುತ್ತಿದ್ದಾಗ ಭಗವಂತನ ಹಿರಿಮೆಯನ್ನು ಬ್ರಹ್ಮನು ತಾನೂ ಜಗತ್ತು ಅರಿಯಬೇಕೆಂದು ಹಸು ಕರುಗಳನ್ನು ಕಣ್ಮರೆಮಾಡಿದನು. ಶ್ರೀಕೃಷ್ಣನು ಬ್ರಹ್ಮನನ್ನು ಮೋಹಗೊಳಿಸಲೂ ಗೋಪಾಲರನ್ನು ಪರಿಪಾಲಿಸಲೂ ತಾನೇ ಪಶುಗಳಾಗಿಯೂ ಕರುಗಳಾಗಿಯೂ ರೂಪವನ್ನು ಧರಿಸಿ ಒಂದು ವರುಷ ಕ್ರೀಡಿಸಿದನೆಂದು ಪುರಾಣವು ಹೇಳುತ್ತದೆ.

ನಿಜವಾಗಿ ನೋಡಿದರೆ ಭಗವಂತನು ಹಸುವಾಗಿಯೂ ಕರುವಾಗಿಯೂ ಆದನೆಂದಲ್ಲ. ಅವನ ಸ್ವರೂಪವು ಎಲ್ಲ ವಸ್ತುಗಳಿಗಿಂತ ಪ್ರತ್ಯೇಕವಾದುದು. ಆದರೂ ಹಸು-ಕರುಗಳ ಸ್ವಭಾವವನ್ನು ಭಗವಂತನು ಹೊಂದಿದ್ದೆಲ್ಲಾ ಶರೀರರೂಪದಲ್ಲೇ ಅಲ್ಲ. ಅವನ ಸ್ವರೂಪದಲ್ಲಿ ಅಂತಹ ಸ್ವಭಾವಗಳಿಲ್ಲ. ಜಗತ್ತಿನಲ್ಲಿರುವ ವಸ್ತುಗಳಿಗಿಂತಲೂ ಬೇರ್ಪಟ್ಟಿರುವ ಭಗವಂತನ ಸ್ವರೂಪವನ್ನು ಲೋಕದ ವಸ್ತುಗಳೊಂದಿಗೆ ಒಂದುಗೂಡಿಸುವ ಪ್ರಮಾಣಗಳು ಹೇಳುವುದೆಲ್ಲಾ ''ಭಗವಂತನು ಆಯಾ ವಸ್ತುಗಳನ್ನು ಶರೀರವನ್ನಾಗಿಸಿಕೊಂಡು, ಅವುಗಳಲ್ಲಿ ಅಂತರ್ಯಾಮಿಯಾಗಿರುವ ಕಾರಣದಿಂದಲೇ'' ಎಂದು ನಮ್ಮ ಸಿದ್ಧಾಂತವಾದುದರಿಂದ ಭಾಸ್ಕರ-ಯಾದವರ ಮತಗಳಂತೆ ಭೇದ-ಅಭೇದಗಳೆಂಬ ವಿರುದ್ಧ ಧರ್ಮಗಳನ್ನು ಒಂದರಲ್ಲಿ ಒಪ್ಪತಕ್ಕ ಬೆಪ್ಪುತನವು ನಮ್ಮಲಿಲ್ಲವೆಂದು ಭಾವ.

ಶ್ರೀಕೃಷ್ಣನೆಂಬ ಗೊಲ್ಲನು ವೇದವೆಂಬ ಗೋವನ್ನು, ಕರೆದು, ಗೀತೆಯೆಂಬ ಅಮೃತವನ್ನು ಜಗತ್ತಿಗೇ ಕರೆದುಕೊಟ್ಟವನಾದುದರಿಂದ ಅವನ ಮಾನಸೋಲ್ಲಾಸಕ್ಕಾಗಿ ನಮ್ಮ ಸಿದ್ಧಾಂತವನ್ನು ಸ್ಥಾಪಿಸಿದೆವು.

एकं चेवेति बाह्वित्यखिलजगदिदं लक्षितं तच्च कृत्वा ।
ब्रह्मैवेत्युत्तमं यत् यदथ कलुषितं सर्व मेतद्विभक्तम् ॥
तन्न श्रेष्ठं न दुष्टं त्विति जगदु रथो नैष वत्सो न गौ र्वा ।
भूत्वाप्येषो हि वत्सो भवति सुरभि रित्यादिरीती रमीषाम् ॥ १

त्रयीगोः पालकोऽनन्यो गोपालो दृढनीतिमान् ।
यथा भवति सन्तुष्टः तथा प्राकाशयाम ताः ॥ २७

**ಮೂಲ :** **ಶಾಯಾಮರೈಹಳಿಲ್ ಶತ್ತಂತೆಳಿನ್ದಿಡಚ್ಚಾತ್ತುದಲಾಲ್,**
**ತೂಯಾರಿವರೆನ್ರುತೋನ್ರನಿನ್ರೇ ಪಲಶೂದುಹಳಾಲ್,**
**ಮಾಯಾಮತಮುಂ ಮರುಶಿನವಾದುಂಬವುದ್ದಮುಂಶೇರ್,**
**ವೈಯಾಕರಣರ್ ಶೊಲ್ಲುಂ ಮರುಮಾತ್ತಂಗಳ್ ಮಾತ್ತುವಮೇ ॥ 8**

ಅರ್ಥ :- ಶಾಯಾ = ಸ್ವರ-ವರ್ಣ-ಮಾತ್ರೆಗಳು ವ್ಯತ್ಯಾಸವಾಗದೆ ಉಚ್ಚರಿಸಬೇಕಾದ, ಮರೈಹಳಿಲ್ = ವೇದಗಳಲ್ಲಿರುವ, ಶತ್ತಂ-ತೆಳಿಂದಿಡ = ಶಬ್ದಗಳು ಚೆನ್ನಾಗಿ ತಿಳಿಯುವಂತೆ. ಶಾತ್ತುದಲಾಲ್ = (ವ್ಯಾಕರಣದ ಸಹಾಯದಿಂದ) ಸ್ಥಾಪಿಸಿದುದರಿಂದ, ಇವರ್ = ಈ ವೈಯ್ಯಾಕರಣರು, ತೂಯಾರ್-ಎನ್ರು-ತೋನ್ರ-ನಿನ್ರೇ = ಪರಿಶುದ್ಧರೆಂದು ತೋರುವಂತೆಯೇ ಇದ್ದು, ಪಲ-ಶೂದುಹಳಾಲ್ = ಹಲವಾರು ಕಪಟತನಗಳಿಂದ, ಮಾಯಾಮತಮುಂ = "ಮಾಯೆ"ಯನ್ನೇ ಮುಖ್ಯವಾಗಿ ಒಪ್ಪಿದ ಅದ್ವೈತಮತವನ್ನೂ, ಮರು-ಶಿನ-ವಾದುಂ = ಬೇರೊಂದು ಜೈನ ಮತವೋ ! ಎಂಬಂತಿರುವ ಭಾಸ್ಕರ-ಯಾದವ ಮತವನ್ನೂ, ಬವುದ್ದಮುಂ = ಬೌದ್ಧಮತವನ್ನೂ, ಶೇರ್ = (ಒಂದೊಂದಂಶದಲ್ಲಿ) ಹೊಂದಿಕೊಂಡಿರುವ, ವೈಯಾಕರಣರ್ = ವ್ಯಾಕರಣ ಶಾಸ್ತ್ರಾನುಯಾಯಿಗಳು. ಶೊಲ್ಲುಂ = ಹೇಳುವ, ಮರು-ಮಾತ್ತಂಗಳ್ = ಪ್ರತಿವಾದಿಗಳನ್ನು, ಮಾತ್ತುವಂ = ಅಳಿಸಿಬಿಡುವೆವು.

ತಾತ್ಪರ್ಯ :- ವೇದಗಳು ಶಬ್ದಮಯವಾದುವು, ಆ ಶಬ್ದಗಳನ್ನು ಸ್ವರ-ವರ್ಣ-ಮಾತ್ರಾದಿಳಾವುವೂ ವ್ಯತ್ಯಾಸವಾಗದಂತೆಯೂ ಪ್ರಕೃತಿ-ಪ್ರತ್ಯಯ ವಿಶೇಷಗಳಿಂದ ಅರ್ಥವ್ಯತ್ಯಾಸವಾಗದಂತೆಯೂ ಸಿದ್ಧಗೊಳಿಸಿ ಘೋಷಿಸುವಂತೆ ಮಾಡುವುದು ವ್ಯಾಕರಣ ಶಾಸ್ತ್ರ ಆದುದರಿಂದಲೇ ಇದು ವೇದಾಂಗವೆನಿಸಿತು. ಇಷ್ಟು ಸಹಕಾರದಲ್ಲೇ ನಿಲ್ಲದೆ ವೈಯ್ಯಾಕರಣರು ಅದ್ವೈತಿಗಳು-ಜೈನರು-ಬೌದ್ಧರುಗಳ ಮೋಹದ ಬಲೆಗೆ ಸಿಕ್ಕಿ ತಾವೂ ತಮ್ಮದೇ ಆದ ವಾದವನ್ನು ಮಾಡಲಾರಂಭಿಸಿ, ಇತರರಂತೆ ಇವರೂ ಖಂಡನೀಯರಾಗಿರುವರು, ಒಂದೊಂದಶದಲ್ಲಿ ಒಬ್ಬೊಬ್ಬರೊಂದಿಗೆ ಹೊಂದಿಕೊಂಡಿರುವರು.

1) ಅದ್ವೈತಿಗಳಡೊನೆ ಹೊಂದಿಕೆ :

ಬ್ರಹ್ಮವೊಂದೇ ಸತ್ಯ, ಕಾಣುತ್ತಿರುವ ಸ್ಥಾವರ ಜಂಗಮರೂಪದ ಜಗತ್ತು ಅಸತ್ಯ, ನೀರನ್ನೇ ಕಂಡರಿಯದ ಮರಳುಗಾಡಿನಲ್ಲಿ ಸೂರ್ಯನ ಝಳಕ್ಕೆ ನೀರೂ, ಅಲೆಗಳೂ ಇರುವಹಾಗೆ ಕಾಣುತ್ತವೆ.

ಆದರೆ ಅದು ನಿಜವೇ ? ಅಲ್ಲ, ಸುಳ್ಳು, ಹಾಗೆಯೇ ಸರ್ವತ್ರ ಬ್ರಹ್ಮವೆಂಬ ವಸ್ತುವೇ ಈ ಜಗತ್ತಾಗಿ ಕಾಣುವುದು. ಒಂದು ವಸ್ತು ಮತ್ತೊಂದಾಗಿ ತೋರುವುದೇ ''ವಿವರ್ತ''ವೆನಿಸುವುದು, ಆದ್ದರಿಂದ ''ಪ್ರಪಂಚ ಬ್ರಹ್ಮನ ವಿವರ್ತ'' ಎನ್ನುವರು.

ವೈಯ್ಯಾಕರಣರೂ ವರ್ಣ-ಪದ ವಾಕ್ಯಗಳನ್ನು ಬಿಟ್ಟು 'ಸ್ಫೋಟ'ವೆಂಬುದೊಂದನ್ನೊಪ್ಪಿ, ಅದೇ ವಾಕ್ಯಗಳರ್ಥವನ್ನು ತಿಳಿಸುವುದೆಂದೂ, ಆ ಸ್ಫೋಟವೇ ಬ್ರಹ್ಮನೆಂದೂ, ಹೇಳುವರು, ಅವರಲ್ಲೇ ಕೆಲವರು ಸ್ಫೋಟವೆಂಬ ಬ್ರಹ್ಮದ ವಿವರ್ತವಾಗುವುದೆನ್ನುವರು, ಆದುದರಿಂದ ಮೇಲೆ ಹೇಳಿದ ಮತವೂ ಇದೂ ಒಂದಾದಂತಾಯಿತು.

ಇವರಲ್ಲೇ ಕೆಲವು ಅಂದರೆ ಯಾದವ-ಭಾಸ್ಕರರು ಜೈನಮತದಂತೆ ಭೇದ-ಅಭೇದ ಮೊದಲಾದ ವಿರುದ್ಧಾಂಶಗಳನ್ನು ಒಂದೇ ವಸ್ತುವಿನಲ್ಲಿ ಇರುವುವೆನ್ನುವರು. ಯಾದವರು ಬ್ರಹ್ಮವೇ ಜಗತ್ತಾಗಿ ಮಾರ್ಪಡುವುದೆನ್ನುವರು. ಒಂದು ವಸ್ತುವು ತನ್ನ ಸ್ವಭಾವವನ್ನು ಬಿಟ್ಟು ಬೇರೆ ವಸ್ತುವಾಗಿ ಬದಲಾಗುವುದೇ ಪರಿಣಾಮ. ವೈಯ್ಯಾಕರಣರಲ್ಲೂ ಕೆಲವರು ಶಬ್ದವೆಂಬ ಬ್ರಹ್ಮವೇ ಜಗತ್ತಾಗಿ ಪರಿಣಮಿಸುವುದೆನ್ನುವರು. ಈ ವಿಷಯದಲ್ಲಿ ಇವರಿಬ್ಬರೂ ಒಮ್ಮತವುಳ್ಳವರಾದರು.

ಬೌದ್ಧರೂ ವೈಯ್ಯಾಕರಣರಲ್ಲಿ ಕೆಲವರೂ ''ಒಂದು ವಾಕ್ಯದಲ್ಲಿ ಪದಗಳಿಗೆ ಪ್ರತ್ಯೇಕ ಪ್ರತ್ಯೇಕವಾಗಿಯೇ ಅರ್ಥವು ತಿಳಿದು ಬರುವುದು, ಪೂರ್ಣವಾಗಿ ವಾಕ್ಯದ ತಾತ್ಪರ್ಯ ತಿಳಿಯುವಾಗ ''ಪ್ರತಿಭಾ'' ಎಂಬುದೊಂದು ಜ್ಞಾನವುಂಟಾಗಿ, ಇದೇ ವಾಕ್ಯವಾಗಿಯೂ ವಾಕ್ಯಾರ್ಥವಾಗಿಯೂ ಆಗುವುದೆನ್ನುವರು.

ಹೀಗೆ ಮೇಲೆ ತಿಳಿಸಿದಂತೆ ಇವರೆಲ್ಲರೂ ಒಂದು ಗುಂಪಿಗೆ ಸೇರಿದವರಂತಾಗಿ ಎಲ್ಲರಂತೆ ವೈಯ್ಯಾಕರಣ ಪ್ರತಿವಾದಿಗಳ ಸೊಕ್ಕನ್ನು ಅಡಗಿಸುವೆವು.

**मात्रावर्णस्वराद्याकृतिनिगमपदज्ञानलाभानुकूलाः ।**
**शुद्धा अप्यप्रबुद्धाः प्रकटितकपटा मायिमायेयजैनैः ।।**
**तुल्या स्तद्वादमुग्धा इति भुवि विदिता व्याकृतिज्ञा स्तदुक्तान् ।**
**सर्वान् स्फोटादिवादान्श्रुतिशतविमुखान् प्रस्फुटं स्फोटयामः ।।** २८

ಮೂಲ : ಕಲಹತ್ತಿಲ್ ಕಲಂಗಿವರುಂ ಕಾಣಿಕ್ಕೆಲ್ಲಾಂ
ಕಣ್ಣಾರು ಶದಿರವಳಿಕಟ್ಟುವಾರ್ ಪೋಲ್,
ಉಲಹತ್ತಿಲ್ ಮರೈಶೇರ್‌ನ್ದವುರೈಹಳ್‌ತಮ್ಮಾಲ್
ಒರುಪಿಳೈಯುಂ ಶೇರಾಮಲುಪಕರಿತ್ತಾರ್,
ಪಲಕತ್ತುಂಬವುದ್ದರ್ ಮುದಲಾನಪಂಡೈ
ಪಹಲ್‌ಕಳ್ಳರ್ ಪಹಟ್ಟಳಿಕ್ಕಪರವುಂ ಪೊಯ್ಯಾಂ,
ಶಿಲಕತ್ತುಂ ಶಿದ್ಧಾಂತಮರಿಯಹಿಲ್ಲಾ
ಚ್ಚಿರುವರಿ ನಿಮಯಂಗಾಮಲ್ ಶೇಮಿತ್ತೋಮೆ ॥ 29

ಅರ್ಥ :- ಕಲಹತ್ತಿಲ್ = ಜಗಳದಲ್ಲಿ, (ವಿವಾದದಲ್ಲಿ) ಕಲಂಗಿ-ವರುಂ = ಸಂದೇಹಾಸ್ಪದವಾಗಿ ಬರುತ್ತಿರುವ, ಕಾಣಿಕ್ಕೆಲ್ಲಾಂ = ಭೂಮಿಗಳಿಗೆಲ್ಲಾ (ಹೊಲ ಗದ್ದೆಗಳಿಗೆಲ್ಲಾ) ಕಣ್ಣಾರು-ಶದಿರ-ವಳಿ = ಜಾಣತನದಿಂದ ಅಳತೆಮಾಡಿ ಎಲ್ಲೆಯನ್ನು, ಕಟ್ಟುವಾರ್-ಪೋಲ್ = ಏರ್ಪಡಿಸಿ, (ಕಲಹವನ್ನು) ತೀರ್ಮಾನಿಸುವ ಮಧ್ಯಸ್ಥರಂತೆ, (ಈ ವೈಯ್ಯಾಕರಣರು) ಮರೈ-ಶೇರ್‌ನ್ದ = ವೇದಗಳಲ್ಲಿರುವ, ಉರೈಹಳ್-ತಂ-ಪಾಲ್ = ವಾಕ್ಯಗಳಿಂದ, ಉಲಹತ್ತಿಲ್ = ಈ ಜಗತ್ತಿನಲ್ಲಿ, ಒರು-ಪಿಳೈಯುಂ-ಶೇರಾಮಲ್ = ಯಾವುದೊಂದೂ ತಪ್ಪರ್ಥವೂ ಬರದಂತೆ, ಉಪಕರಿತ್ತಾರ್ = ಸಹಾಯ ಮಾಡಿದರು. ಪಲ-ಕತ್ತುಂ = ಕೆಲವು ವಿಷಯಗಳನ್ನು ಜಲ್ಪಿಸುವ, ಬವುದ್ದರ್-ಮುದಲಾನ = ಬೌದ್ಧರೇ ಮೊದಲಾದ, ಪಂಡೈ-ಪಹರ್-ಕಳ್ಳಹರ್ = ಬಹಳ ಹಿಂದಿನವರಾದ ಹಗಲು ಕಳ್ಳರ, ಪಹಟ್ಟ್-ಅಳಿಕ್ಕ = ಆಡಂಬರ ಕೂಗನ್ನು ಅಳಿಸಲು, ಪರವುಂ = (ಅದರಿಂದ) ಆದರಿಸಲ್ಪಡುವ, ಪೊಯ್ಯಾಂ-ಶಿಲ-ಕತ್ತು = ಸುಳ್ಳಾದ ಕೆಲವು ವಿಷಯಗಳನ್ನು ಕಲಿತುಕೊಂಡು, ಶಿದ್ಧಾಂತಂ-ಅರಿಯಹಿಲ್ಲಾ = (ನಮ್ಮ) ಸಿದ್ಧಾಂತವನ್ನು ಅರಿಯಲಾರದ, ಶಿರುವರ್ = ಅಲ್ಪ ಜ್ಞಾನವುಳ್ಳ ವೈಯ್ಯಾಕರಣರು, ಇನಿ-ಮಯಂಗಾಮಲ್ = ಇನ್ನು ಮುಂದಾದರೂ ಮೋಹಗೊಳ್ಳದಂತೆ, ಶೇಮಿತ್ತೋಂ = (ತತ್ವವನ್ನರಿತು ಬೆಳಗುವಂತೆ ಅವರನ್ನು) ಕಾಪಾಡಿದೆವು.

ತಾತ್ಪರ್ಯ :- ಒಂದು ಭೂಭಾಗಕ್ಕೆ ಹಲವರು ಹಕ್ಕುದಾರರಾಗಿ ಅವರವರ ಪಾಲಿನ ನೆಲದ ಅಳತೆಯಲ್ಲಿ ತಕರಾರು ಬಂದರೆ, ತೀರ್ಪುಗಾರರು ಬಂದು ಅವರವರ ಲೆಖ್ಖ ಪತ್ರದಂತೆ ಅಳತೆಮಾಡಿ ವಿವಾದವಿಲ್ಲದಂತೆ ಮಾಡುವುದು ಲೋಕದಲ್ಲಿ ನಡವಳಿಕೆಯಿದೆ. ಇದಕ್ಕೆ ಸರ್ವೆ ಎನ್ನುವರು. ಇದಕ್ಕೆ ''ಕಣ್ಣಾರ್'' ಎಂದು ತಮಿಳಿನಲ್ಲಿ ಹೇಳುವರು.

ಇದೇ ರೀತಿ ವೇದಾಂತವಾಕ್ಯಗಳಿಗೆ ಹಲವಾರು ಮತದವರು ತಮತಮಗೆ ತೋರಿದಂತೆ ಅರ್ಥವನ್ನು ಹೇಳಿ ವಾದಿಸುವುದನ್ನು ತಡೆಗಟ್ಟಿ, ನಿರ್ಣಯವಾದ ಅರ್ಥವನ್ನು

ತಿಳಿಸಲು ವ್ಯಾಕರಣಶಾಸ್ತ್ರದ ಮೂಲಕ ವೈಯ್ಯಾಕರಣರು ಜಗತ್ತಿಗೆ ತುಂಬ ಸಹಾಯಕರಾದರು. ಹೀಗೆ ಇವರು ಅನುಕೂಲವಾಗಿದ್ದರೂ ಬೌದ್ಧಾದಿ ಮತದವರ ದಂಗುಬಡಿಸುವಂತಹ ವಾಗಾಡಂಬರಕ್ಕೆ ಮೋಹಗೊಂಡು, ಆ ಮತಗಳ ಕೆಲವು ಅಂಶಗಳನ್ನು ಒಪ್ಪಿಕೊಂಡು ತಾತ್ವಿಕವಾದ ಅರ್ಥವನ್ನರಿಯದೆ ವಂಚಿತರಾದರು. ಅಂತಹವರಿಗೆ ತತ್ವಾರ್ಥಗಳನ್ನು ಸ್ಪಷ್ಟಪಡಿಸಿ, ಅವರನ್ನು ರಕ್ಷಿಸಿದೆವು.

ಬೌದ್ಧರನ್ನು ಕುರಿತು ''ಪಹಲ್ ಕಳ್ಳರ್'' ಎಂದು ಹೇಳಿರುವುದು ತುಂಬ ಸಮಜಂಸವಾದ ಪ್ರಯೋಗವು. ವೇದಾಂತಗಳು ತತ್ವಾರ್ಥಗಳನ್ನು ವ್ಯಕ್ತವಾಗಿ ಘೋಷಿಸುತ್ತಿರುವಾಗಲೇ ''ಅದೆಲ್ಲ ಸುಳ್ಳು, ಇಲ್ಲದ ಸಲ್ಲದ ಮಾತುಗಳು'' ಎಂದು ಬೊಬ್ಬೆಯಿಟ್ಟು, ತಾತ್ವಿಕವಾದುದನ್ನು ಕಸಿದುಕೊಳ್ಳಲು ಯತ್ನಿಸಿದುದರಿಂದಲೇ ಅಲ್ಲವೇ ಹೀಗೆ ಹೇಳಿದ್ದು ಅವರಿಗೆ ಚೆನ್ನಾಗಿ ಒಪ್ಪುವುದು.

सन्देहास्पदभूविभागकलहे तच्छान्तये न्यायिनः ।
मर्यादां परिकल्प्य माननिपुणा निर्णायका स्स्यु र्यथा ।।
वेदेषु क्वचिदप्यपार्थकरणं मा भूदितीवोद्यताः ।
ये वैय्याकरणा स्तथा विदधिरे ते चोपकारं परम् ।। १

बौद्धाद्या स्तु चिरंतना बहुवदा व्याप्ता दिवातस्कराः ।
तद्वाग्डम्बरनिर्जिता स्तदुदितं चाभ्यस्य किंचिन्मृषा ।।
अल्पा वेत्तु मिहाक्षमा असदृशं सिद्धान्त मेनं च नः ।
तन्मोहं न पुनर्भजन्त्विति समारक्षिष्म तान् शाब्दिकान् ॥ २९

ಮೂಲ : ಕಂಡದಲಾದನಕಟ್ಟುದಲಾಲ್ ಕಂಡವಿಟ್ಟದಲಾಲ್,
ಪಂಡುಳದಾನಮರೈಕ್ಕುಪ್ಪಳಮೈಯ್ಯೆಮಾತ್ತುದಲಾಲ್,
ಕೊಂಡದುಮೀಶನೈಕ್ಕೊಳ್ಳಾವಹೈಯೆನ್ರುಕೂರುದಲಾಲ್,
ಕಂಟಕರಾಯ್ ನಿನ್ರ ಕಾಣಾದರ್‌ವಾದಂಕಳತ್ತುವಮೇ ॥ 30

ಅರ್ಥ :- ಕಂಡದ್-ಅಲಾದನ = (ಪ್ರತ್ಯಕ್ಷಾದಿಗಳಿಂದ) ಕಾಣದಿರುವ ವಸ್ತುಗಳ, ಕಟ್ಟುದಲಾಲ್ = ಕಲ್ಪಿಸುವುದರಿಂದಲೂ, ಕಂಡ = (ವೇದದಲ್ಲಿ) ಕಾಣುವ ಅಂಶಗಳನ್ನು, ವಿಟ್ಟದನಾಲ್ = (ಒಪ್ಪದೆ) ಬಿಟ್ಟಿರುವುದರಿಂದಲೂ, ಪಂಡು-ಒಳದಾನ = ಅನಾದಿಯಾಗಿರುವ, ಮರೈಕ್ಕು = ವೇದಕ್ಕೆ, ಪಳಮೈಯ್ಯೆ = ಅನಾದಿತ್ವವನ್ನು ಮಾತ್ತುದಲಾಲ್

= ನಿರಾಕರಿಸುವುದರಿಂದಲೂ, ಈಶನ್ನೈ-ಕೊಂಡದುಂ = (ತಾವು) ಈಶ್ವರನನ್ನು ಅಂಗೀಕರಿಸಿಯೂ, ಕೊಳ್ಳಾವಹ್ಯೆ-ಎನ್ರು = (ನಾವು) ಅಂಗೀಕರಿಸಲಾಗದ ಮಾರ್ಗದಲ್ಲಿ (ಅನುಮಾನದಿಂದ) ಯೇ ಎಂದು, ಕೂರುದಲಾಲ್ = ಹೇಳುವುದರಿಂದಲೂ, ಕಂಟಕರಾಯ್ ನಿನ್ರ = (ಒಳ್ಳೆಯದಾರಿಗೆ) ಮುಳ್ಳಿನಂತಾಗಿರುವ, ಕಾಣಾದಾರ್ = ವೈಶೇಷಿಕ ಮತದವರ, ವಾದಂ = ವಾದವನ್ನು, ಕಳತ್ತುವಂ = ಬಿಡಿಸುವೆವು. (ನಾಶಮಾಡುವೆವು)

ತಾತ್ಪರ್ಯ :- (30-31 ಪಾಶುರಗಳು, ವೈಶೇಷಿಕಭಂಗಾಧಿಕಾರ)

ಕಾಣಾದವರು ಪ್ರತ್ಯಕ್ಷಾದಿಯಾದ ಯಾವ ಪ್ರಮಾಣದಿಂದಲೂ ಕಾಣಲಾರದಂತಹ ಕೆಲವನ್ನು ಕಲ್ಪಿಸಿರುತ್ತಾರೆ. ಅವು "ಅವಯವಗಳಿಗಿಂತಲೂ ಬೇರ್ಪಟ್ಟ ಅವಯವಿ, ಸಾಮಾನ್ಯ, ವಿಶೇಷ, ಸಮವಾಯ, ಅಭಾವ," ಮುಂತಾದವು. ಕೆಲವು ತತ್ವಗಳನ್ನು ವೇದದಲ್ಲಿ ಹೇಳಿದ್ದರೂ ಇವರು ಬಿಟ್ಟುಬಿಟ್ಟಿರುವರು. ಅವು "ಪ್ರಕೃತಿ, ಮಹಾನ್," ಮೊದಲಾದವು, ಅಪೌರುಷೇಯವೆಂದೂ ಅನಾದಿಯೆಂದೂ ದೇವರಂತೆ ನಿತ್ಯವೆಂದೂ ಹೊಗಳಿಸಿಕೊಳ್ಳುವ ವೇದಗಳು "ದೇವರಿಂದ ಹೇಳಲ್ಪಡಲಿಲ್ಲ, ಪುರುಷಕೃತವಾದುವು" ಎಂದು ಸ್ವಲ್ಪವೂ ಅಳುಕದೆ ಬಡಬಡಿಸುವರು. ಮೇಲೂ ಇವರು "ದೇವರು ಇದಾನೆ" ಎಂದು ಹೇಳಿದ್ದರೂ ವೇದಾಂತಿಗಳಾದ ನಮ್ಮಂತೆ ಶಬ್ದ ಪ್ರಮಾಣವಾದ ವೇದದಿಂದ ತಿಳಿಯಲ್ಪಡುವನೆಂದು ಒಪ್ಪಿಕೊಳ್ಳದೆ, ಅನುಮಾನ ಪ್ರಮಾಣದಿಂದ ತಿಳಿಯಬೇಕೆಂದು ಹೇಳುವರು.

ಹೀಗೆ ತಮಗೆ ತೋರಿದಂತೆ ಬೊಬ್ಬೆಯಿಡುತ್ತಾ, ವೈದಿಕ ಸಿದ್ಧಾಂತಕ್ಕೆ ಕಂಟಕ ಪ್ರಾಯರಾಗಿರುವುದರಿಂದ ವೈಶೇಷಿಕರನ್ನು ಖಂಡಿಸುವೆವು.

**अद्रष्टव्यप्रकॢप्तेरपि परिहरणात् दर्शनीयस्य तद्वत् ।**
**नित्यानां हि श्रुतीनां निरसनकरणात् नित्यताया स्त्वधीशम् ।।**
**अङ्गीकृत्याप्यनङ्गीकृतमिववचनात् कण्टकीभूय दृष्टान् ।**
**काणादानां च वादाननुचितविषयान् सर्वशः खण्डयामः ।।** ३०

ಮೂಲ : ಆಗಮತ್ತೈಯನುಮಾನ ಮೆನ್ಗ್ಗೈಯಾಲುಂ
ಅಳಿಯಾದ ಮಱೈಯಳಿಕ್ಕ ನಿನ್ನೈತ್ತಲಾಲುಂ,
ಬೋಗಮತ್ತೋರ್ ಉಪಲಂಪೋಲ್ ಕಿಡಕ್ಕೈತಾನೇ
ಪುಣ್ಣಿಯರ್ಕ್ಕು ವೀಡೆನ್ರುಪುಣರ್ತ್ತಲಾಲುಂ,
ಮಾಹಮೊತ್ತಮಣಿವರ್ಣ್ಣ ಪಡಿಯೈಮಾತ್ತಿ
ಮತ್ತವನುಕ್ಕೊರುಪಡಿಯೈವಹುತ್ತಲಾಲುಂ,

ಕಾಕಮೊತ್ತಕಾಣಾದನ್ ಕಣ್ಣೈವಾಂಗಿ
ಕ್ಕಾಕ್ಕೈಕ್ಕಾರ್ ಎನ್ರಲತ್ತಕ್ಕಾಟ್ಟಿನೋಮೇ ॥ 31

ಅರ್ಥ :- ಆಗಮತ್ತೈ = ಶಬ್ದವೆಂಬ ಪ್ರಮಾಣವನ್ನು, ಅನುಮಾನಂ-ಎನ್ಸ್ರೈಯಾಲುಂ = ಅನುಮಾನವೆಂದು ಹೇಳುವುದರಿಂದಲೂ, ಅಳಿಯಾದ-ಮರೈ = ಅಳಿಯದ (ನಿತ್ಯವಾದ) ವೇದವನ್ನು, ಅಳಿಕ್ಕ-ನಿನ್ನೈತ್ತಲಾಲುಂ = ಅನಿತ್ಯವೆನಿಸಲು ಚಿಂತಿಸಿದುದರಿಂದಲೂ, ಬೋಗಂ-ಅತ್ತು = ಅನುಭವವಿಲ್ಲದ, ಓರ್-ಉಪಲಂ-ಪೋಲ್ = ಒಂದು ಕಲ್ಲಿನಂತೆ, ಕಿಡಕ್ಕೈತಾನೇ = ದೊರಕಿದುದೇ, ಪುಣ್ಣಿಯರ್ಕ್ಕು ವೀಡು-ಎನ್ರು = ಪುಣ್ಯವಂತರಿಗೆ (ಇರುವ) ಮೋಕ್ಷವೆಂದು, ಪುಣರ್ತಲಾಲುಂ, ಕಲ್ಪಿಸಿದ್ದರಿಂದಲೂ, ಮಾಹಂ-ಅತ್ತ = ಆಕಾಶದಂತೆ ದೋಷವಿಲ್ಲದವನೂ, ಮಣಿ-ವಣ್ಣನ್ = ನೀಲರತ್ನದಂತೆ ಕಾಂತಿಯುಳ್ಳ ಸರ್ವೇಶ್ವರನ, ಪಡಿಯೈ-ಮಾತ್ತಿ = ಸ್ವರೂಪಾದಿಗಳ ರೀತಿಗಳನ್ನು ಬದಲಾಯಿಸಿ, ಅವನುಕ್ಕು = ಆ ಭಗವಂತನಿಗೆ, ಮತ್ತು-ಒರು-ಪಡಿಯೈ-ವಹುತ್ತಲಾಲುಂ = (ವೇದವಿರುದ್ಧವಾದ) ಬೇರೊಂದು ರೀತಿಯನ್ನು ಕಲ್ಪಿಸುವುದರಿಂದಲೂ, ಕಾಕಂ-ಒತ್ತ = ಕಾಗೆಯನ್ನು ಹೋಲುವ, ಕಾಣಾದರ್ = ಕಾಣಾದರ, ಕಣ್ಣೈ-ವಾಂಗಿ = ಕಣ್ಣನ್ನು ಕಿತ್ತು, ಕಾಕ್ಕೈಕ್ಕು-ಆರ್-ಎನ್ರು-ಅಲತ್ತ = (ತನ್ನನ್ನು) ರಕ್ಷಿಸುವವರು ಯಾರಿರುವರೆಂದು ಮೊರೆಯಿಡುವಂತೆ, ಕಾಟ್ಟಿನೋಂ = (ಅವನ ಮತವನ್ನು ಖಂಡಿಸಿ) ಲೋಕಕ್ಕೆ ತೋರಿಸಿಕೊಟ್ಟೆವು.

ತಾತ್ಪರ್ಯ :- ಕಾಣಾದರು ಶಬ್ದವನ್ನು ಬೇರೆಯಾದ ಪ್ರಮಾಣವೆಂದು ಒಪ್ಪಲಿಲ್ಲ, ಅನುಮಾನದಲ್ಲಿಯೇ ಐಕ್ಯಗೊಳಿಸಿರುವವರು, ಎಂದೆಂದಿಗೂ ಅಳಿಯದೆ ಉಳಿದು, ನಿತ್ಯವಾಗಿರುವುದೆಂದು ಹೇಳುವ ವೇದಗಳನ್ನು ಪೌರುಷೇಯವನ್ನಾಗಿಯೂ ಅನಿತ್ಯವನ್ನಾಗಿಯೂ ಮಾಡಿರುವವರು, ಮೋಕ್ಷವೆಂದರೆ, ''ಜೀವಾತ್ಮನು ಜ್ಞಾನ ಮೊದಲಾದ ಯಾವ ಗುಣವೂ ಇಲ್ಲದೆ, ಯಾವ ಅನುಭವವೂ ಇಲ್ಲದೆ, ಕಲ್ಲಿನಂತೆ ಇರುವುದು'' ಎನ್ನುವರು. ''ಸರ್ವೇಶ್ವರನು ಘಟಾದಿಗಳಿಗೆ ಕುಂಬಾರನಂತೆ ಜಗತ್ತಿಗೆ ನಿಮಿತ್ತ ಕಾರಣನೇ ಹೊರತು ಮಣ್ಣಿನಂತೆ ಉಪಾದಾನಕಾರಣನಲ್ಲ'' ಎನ್ನುವರು. ಸ್ವಲ್ಪವೂ ಪ್ರಕೃತಿಸಂಬಂಧವಿಲ್ಲದೆ ಶುದ್ಧಸತ್ವಮಯವಾದ ವಿಗ್ರಹವುಳ್ಳವನಾಗಿ ಅಪರಿಮಿತಾನಂದ ಪೂರ್ಣನಾಗಿದ್ದರೂ ಸರ್ವೇಶ್ವರನು ಶರೀರವಿಲ್ಲದವನೆಂದು ಹೇಳುವರು. ಮಹಾಲಕ್ಷ್ಮೀರೂಪಳಾದ ಸೀತಾದೇವಿಯಲ್ಲಿ ಕಾಕಾಸುರನು ಅಪಚಾರವೆಸಗಿ ತನ್ನ ಕಣ್ಣನ್ನಳಿಸಿಕೊಂಡು ದುಃಖಭಾಗಿಯಾದನು. ಭಗವಂತನ ವಿಷಯದಲ್ಲಿ ಮಹಾಪರಾಧಿಗಳಾಗಿರುವ ಕಾಣಾದರ ಒಪ್ಪಿಗೆಗಳೆಂಬ ಕಣ್ಣುಗಳನ್ನು ಕಿತ್ತೊಗೆದು, ಅವರಿಗೆ ಮತ್ತಾವ ಆಸರೆಯೂ ದೊರಕದಂತೆ ಮಾಡಿ, ಕಾಣಾದರೆಂಬ ಹೆಸರು ಅನ್ವರ್ಥವಾಗುವಂತೆ ಕಣ್ಣಿದ್ದರೂ ಕಾಣದಂತಾದರೆಂಬುದನ್ನು ನಿರೂಪಿಸಿ ನಾವು ಖಂಡಿಸುವೆವು.

शब्दो नैव प्रमाणं त्वनुमितिविदित स्स्यात्तथैव श्रुतीनां ।
नैवासां नित्यतास्तीत्यपि हृदि कलनात् वीतभोगोपलेन ।।
तुल्यावस्थैव पुण्यार्जितसुखपदवी मुक्तिरन्या न चेति ।
त्यक्ताकाशप्रतीकाशितमणिवपुषो रूपभावादिकांस्तान् ।। १

अन्यस्वूरपगुणवर्णयितुः परस्मिन् ।
काकोपमस्य कणभक्षयितु श्च नेत्रे ।।
उत्क्षिप्य तं च परिरक्षति कस्त्वितीव ।
क्रोशन्त मुद्भ्रमित माश्रिह दर्शयामः ।। ३१

ಮೂಲ : ಗೋತಮನೂಲ್‌ಹಳ್ಳೆ ಕ್ಕುತ್ತಮಿಲಾವಹ್ಯೆಕೂಟ್ಟಲುಮಾಂ,
ಕೋದುಕಳಿತ್ತೊರುಕೂತ್ತಿಲ್ ಗುಣಂಗಳ್ಳೆಕ್ಕೊಳ್ಳವುಮಾಂ,
ಯಾದುಮಿಹನ್ದೊರು ನೀತಿಯ್ಯೆಯಾಮೇ ವಹುಕ್ಕವುಮಾಂ,
ವೇದಿಯರ್ ನನ್ನಯವಿತ್ತರಮೆನ್ಬದು ಮೆಯ್ಯುಳದೇ ॥ 32

ಅರ್ಥ :- ಗೋತಮ-ನೂಲ್-ಹಳ್ಳೆ = ಗೌತಮರ (ನ್ಯಾಯ) ಸೂತ್ರಗಳನ್ನು ಕುತ್ತಂ-ಇಲ್ಲಾ-ವಹ್ಯೆ = (ವೇದವಿರೋಧವೆಂಬ) ದೋಷವಾವುದೂ ಇಲ್ಲದಂತೆ, ಕೂಟ್ಟಲುಂ-ಆಂ = ಕೂಡಿಸುವುದಕ್ಕೂ ಆಗುವುದು, ಕೋದು-ಕಳಿತ್ತು = (ವಿರೋಧವೆಂಬ) ದೋಷಭಾಗವನ್ನು ಬಿಟ್ಟು, ಒರು-ಕೂತ್ತಿಲ್ = ಒಂದು ಭಾಗದಲ್ಲಿ, ಗುಣಂಗಳ್ಳೆ = ಗುಣಗಳನ್ನು, ಕೊಳ್ಳವುಂ-ಆಂ = ಅಂಗೀಕರಿಸುವುದಕ್ಕೂ ಆಗುವುದು, ಯಾದುಂ-ಇಹನ್ದು = ಸೂತ್ರಗಳೆಲ್ಲವನ್ನು ಬಿಟ್ಟು ಬಿಟ್ಟೂ, ಒರು-ನೀತಿಯ್ಯೆ = ಬೇರೊಂದು ನ್ಯಾಯಸೂತ್ರವನ್ನು, ಯಾಮೇ-ವಹುಕ್ಕವುಂ-ಆಂ = ನಾವೇ ಹೊಸದಾಗಿ ಹೇಳುವುದಕ್ಕೂ ಸಮರ್ಥರಾಗಿರುವೆವು, (ಆದ್ದರಿಂದ) ವೇದಿಯರ್ = ವೇದವನ್ನರಿತವರಿಂದ, ನಲ್-ನಯ-ವಿತ್ತರಂ-ಎನ್ಬದು = ಉತ್ತಮವಾದ ನ್ಯಾಯವಿಸ್ತರವೆಂದು ಕರೆಯಲ್ಪಡುವ ವಿದ್ಯಾಸ್ಥಾನವು, ಮೆಯ್-ಉಳದೇ = ಸತ್ಯವಾಗಿಯೇ ಇರುವುದು.

ತಾತ್ಪರ್ಯ :- ನ್ಯಾಯವಿಸ್ತರ ವಿರೋಧನಿಸ್ತಾರವನ್ನು ಮಾಡುವರು. ಗೌತಮರ ನ್ಯಾಯಸೂತ್ರಗಳನ್ನು ವೇದವಿರುದ್ಧದೋಷವಾವುದೂ ತಟ್ಟದಂತೆ ಒಪ್ಪಿಸೇರಿಸಿಕೊಳ್ಳಲೂ ಬಹುದು, ಅಥವಾ ಸೂತ್ರಗಳೆಲ್ಲವನ್ನು ಸಂಪೂರ್ಣವಾಗಿ ಬಿಟ್ಟುಬಿಟ್ಟು, ಬೇರೆ ಹೊಸದಾಗಿ ನ್ಯಾಯಸೂತ್ರಗಳನ್ನು ನಿರ್ಮಿಸಲೂ ಬಹುದು. ಯಾವರೀತಿ ಬೇಕಾದರೂ ಮಾಡಲು ನಾವು ಸಮರ್ಥರು. ಆದುದರಿಂದ ವೇದವಿತ್ತಮರು ಕರೆಯುವ ನ್ಯಾಯವಿಸ್ತರವೆಂಬ ವಿದ್ಯಾಸ್ಥಾನವು

ಇರುವುದು ಸತ್ಯ. ಸರ್ವಥಾ ಅದನ್ನು ಬಿಡಲಾಗುವುದಿಲ್ಲ. (ಇದರ ವಿವರ ಮುಂದಿನ ಪಾಶುರದ ತಾತ್ಪರ್ಯದಲ್ಲಿ ವಿಶದಪಡಿಸಲಾಗುವುದು)

> सूत्राण्यत्राक्षपादान्यपगतकलुषाण्येव कर्तुं च शक्ताः ।
> दोषाविष्टैकदेशत्यजनत इतरत्राददानात् गुणानाम् ।।
> यद्वा सर्वाणि हित्वाप्यभिनवनयतन्त्रं च कर्तुं क्षमा स्मः ।
> तस्मान्न्यायस्य चायं श्रुतिविदभिहितो विस्तरस्सत्यभूतः ॥ ३१

ಮೂಲ : ನಾನ್ಮರೈಕ್ಕುತ್ತುಣೈಯಾಹನಲ್ಲೋರೆಣ್ಣುಂ
ನಾಲಿರಣ್ಡಿಲೊನ್ರಾನ ನಯನೂಲ್ ತನ್ನಿಲ್,
ಕೂನ್ಮರೈತ್ತಲ್ ಕೋದುಳದು ಕಳಿತ್ತಲ್ ಮತ್ತೋರ್,
ಕೋಣಾದಕೋದಿಲ್‌ವಳಿವಹುತ್ತಲನ್ರಿ,
ಊನ್ಮರೈತ್ತವುಯಿರೊಳಿಪೋಲೊತ್ತದೊವ್ವಾದು
ಉಯಿರಿಲ್ಲಾಕ್ಕಾಣಾದಮುರೈತ್ತವೆಲ್ಲಾಂ,
ವಾನ್ಮರೈಕ್ಕಮಡಿಕೋಲುಂ ವಣ್ಣಮೆನ್ರೇಂ
ಮತ್ತಿದರ್ಕ್ಕಾರ್ ಮರುಮಾತ್ತಂ ಪೇಶುವಾರೇ ॥ 33

ಅರ್ಥ :- ನಾನ್-ಮರೈಕ್ಕು = ನಾಲ್ಕು ವೇದಗಳ ಅರ್ಥವನ್ನು ನಿಶ್ಚಯಿಸುವುದಕ್ಕೆ, ತುಣೈಯಾಹ = ಸಹಾಯವಾಗಿ, ನಲ್ಲೋರ್-ಎಣ್ಣುಂ = ದೊಡ್ಡವರಿಂದ (ಮನು ಮುಂತಾದರಿಂದ) ಪರಿಗಣಿಸಲ್ಪಟ್ಟು, ನಾಲ್-ಇರಂಡಿಲ್-ಒನ್ರಾನ = ಎಂಟು ವಿದ್ಯಾಸ್ಥಾನಗಳಲ್ಲಿ ಒಂದಾದ, ನಯ-ನೂಲ್-ತನ್ನಿಲ್ = ನ್ಯಾಯವಿಸ್ತರದಲ್ಲಿ, ಕೂನ್-ಮರೈತ್ತಲ್ = ದೋಷಗಳನ್ನು ಮರೆಸುವುದು, ಕೋದು-ಉಳದ್-ಕಳಿತ್ತಲ್ = ದೋಷವುಳ್ಳ ಅಂಶವನ್ನು ಬಿಡುವುದು, ಮತ್ತು-ಓರ್-ಕೋಣಾದ = ಬೇರೊಂದು ನೇರವಾದ, ಕೋದು-ಇಲ್-ವಳಿ = ದೋಷವಿಲ್ಲದಮಾರ್ಗವನ್ನು, ವಹುತ್ತಲನ್ರಿ = ಏರ್ಪಡಿಸದೆ, ಊನ್-ಮರೈತ್ತ = ಶರೀರದಿಂದ ಮುಚ್ಚಲ್ಪಟ್ಟ, ಉಯಿರ್-ಒಳಿ-ಪೋಲ್ = ಜೀವಾತ್ಮನ ಧರ್ಮಭೂತಜ್ಞಾನದಹಾಗೆ, ಒತ್ತದು = ಸರಿಸಾಟಿಯಾದ ಬೇರೆ ವಿದ್ಯಾಸ್ಥಾನದೊಂದಿಗೆ, ಒವ್ವಾದು = ಸಮಾನವಾಗುವುದಿಲ್ಲ, ಉಯಿರಿಲ್ಲಾ = ಪ್ರಾಣದಂತಿರುವ ಮುಖ್ಯವಾದುದನ್ನೆಲ್ಲಾ ಕೈಬಿಟ್ಟ, ಕಾಣಾದಂ = ಕಣಾದನಮತವು, ಉರೈತ್ತ-ಎಲ್ಲಾಂ = ಪ್ರಕಾಶಪಡಿಸಿದ ವಿಷಯಗಳೆಲ್ಲಾ, ವಾನ್-ಮರೈಕ್ಕ = ಆಕಾಶವನ್ನು ಮರೆಸುವುದಕ್ಕೆ, ಪಡಿಕೋಲುಂ ವಣ್ಣಂ-ಎನ್ರೇಂ = ಬಟ್ಟೆಯನ್ನು ಹಾಸುವ ರೀತಿಯಂತೆ

ಎಂದು ಮೊದಲೇ ಬೆಳಗಿದೆವು, ಮತ್ತು = ಮೇಲೂ, ಇದರ್ಕು (ನಾವು ಹೇಳಿದ) ಇವಕ್ಕೆ ಮರುಮಾತ್ತಂ = ಪ್ರತ್ಯುತ್ತರವನ್ನು, ಆರ್ = ಯಾರು-ಪೇಶುವಾರ್ = ಹೇಳಿಯಾರು ?

ತಾತ್ಪರ್ಯ :- ವಿದ್ಯಾಸ್ಥಾನಗಳು 14, ಅವು 4 ವೇದಗಳು, ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ ಎಂದು 6. ಮೀಮಾಂಸಾ, ನ್ಯಾಯವಿಸ್ತರ, ಪುರಾಣ, ಮತ್ತು ಧರ್ಮಶಾಸ್ತ್ರ ಎಂಬುವು 4. ಇವುಗಳಲ್ಲಿ 4 ವೇದಗಳು. ಉಳಿದ 10 ವೇದಾರ್ಥಗಳನ್ನು ಚೆನ್ನಾಗಿ ತಿಳಿಯಲು ಸಹಾಯವಾಗಿರುವುದೆಂದು ಧರ್ಮ ಶಾಸ್ತ್ರವೂ ಪ್ರಾಯಶಃ ವೇದಾರ್ಥವನ್ನೇ ಬೇರೆ ರೀತಿಯಾಗಿ ಹೇಳುವುದರಿಂದ ಉಳಿದ 8 ವಿದ್ಯಾಸ್ಥಾನಗಳಂತೆ ವೇದಾರ್ಥವನ್ನು ನಿರ್ಧರಿಸಲು ಅವೆರಡೂ ಸಾಧನವಾಗುವುದಿಲ್ಲವೆಂದು ಅವನ್ನು ಬಿಟ್ಟು ಎಂಟೇ ವಿದ್ಯಾಸ್ಥಾನಗಳೆನ್ನುವರು. ಅವುಗಳಲ್ಲಿ ನ್ಯಾಯವಿಸ್ತರವು ಪ್ರತ್ಯಕ್ಷಾದಿಪ್ರಮಾಣಗಳನ್ನೂ ಅವುಗಳಿಗೆ ಲಕ್ಷ್ಯವಾದ ವಸ್ತುಗಳನ್ನೂ ಸಾಮೂಹಿಕವಾಗಿ ಸಂಕ್ಷೇಪಿಸಿ ಪ್ರಕಾಶಪಡಿಸುವುದು. ಮೀಮಾಂಸಾಶಾಸ್ತ್ರವೂ ಅವುಗಳನ್ನೇ ಹೆಚ್ಚು ವಿವರವಾಗಿ ಆರಿಸಿ ಬೆಳಗಿಸುವುದು. ಅಂತೂ ಈ ಎರಡು ವಿದ್ಯಾಸ್ಥಾನಗಳೂ ಸಂಕ್ಷೇಪ ಮತ್ತು ವಿಸ್ತಾರ ಕ್ರಮಗಳಲ್ಲಿ ಬೇರೆಯಾಗಿದ್ದರೂ ಪ್ರಮಾಣಗಳನ್ನೂ ಅವುಗಳ ವಿಷಯಗಳನ್ನೂ ಪ್ರಕಾಶಪಡಿಸುವ ಅಂಶದಲ್ಲಿ ಒಂದೇ ಆಗಿರುವುದರಿಂದ ಎರಡನ್ನೂ ಒಂದೇ ಗುಂಪಿಗೆ ಸೇರಿಸಿ ಒಂದೆಂದೇ ಎಣಿಸಬಹುದು. ಮೇಲೂ ವೇದವು ಕರ್ಮ-ಬ್ರಹ್ಮಕಾಂಡಗಳೆಂದೆರಡು ಬಗೆಯಾಗಿವೆ, ಧರ್ಮಶಾಸ್ತ್ರವೆಂಬ ವಿದ್ಯಾಸ್ಥಾನವು ಯಾಗಾದಿಕರ್ಮಗಳನ್ನು ಪ್ರಧಾನವಾಗಿ ಬೆಳಗುವ ಕರ್ಮಕಾಂಡದ ಅರ್ಥವನ್ನು ವಿವರಿಸುವುದು. ಪುರಾಣವು ಬ್ರಹ್ಮನ ಸ್ವರೂಪಾದಿಗಳನ್ನೇ ಮುಖ್ಯವಾಗಿ ತಿಳಿಸುವ ಬ್ರಹ್ಮಕಾಂಡದ ಸಾರವನ್ನು ವಿಶದಪಡಿಸುವುದು. ಹೀಗೆ ಈ ಎರಡೂ ವೇದಗಳ ಬೇರೆ ಬೇರೆ ಭಾಗಗಳನ್ನು ತಿಳಿಸಿದರೂ ವೇದದ ಸಾರವನ್ನು ಬೆಳಗುವುದರಲ್ಲಿ ಒಂದಾಗಿರುವುದರಿಂದ ಒಂದೆಂದೇ ಭಾವಿಸಬಹುದು. ಈ ಅಭಿಪ್ರಾಯದಿಂದಲೇ ವಿದ್ಯಾಸ್ಥಾನಗಳು 8 ಎಂದು ಈ ಪಾಶುರದ ಮೊದಲಲ್ಲಿ ಹೇಳಲಾಗಿದೆ ಎಂದೂ ಹೇಳುವರು.

ನ್ಯಾಯವಿಸ್ತರವು ನ್ಯಾಯಸೂತ್ರಕಾರರಾದ ಗೌತಮ ಮಹರ್ಷಿಯಿಂದ ಪ್ರವರ್ತಿತವಾಯಿತು. ಅದರಲ್ಲಿ ಪ್ರಮಾಣಗಳೂ, ಪ್ರಮೇಯಗಳೂ ಹೇಳಲ್ಪಟ್ಟಿವೆ. ನಮ್ಮ ಶ್ರೀ ದೇಶಿಕರು ತಮ್ಮ ''ನ್ಯಾಯಪರಿಶುದ್ಧಿ''ಯಲ್ಲಿ ಅವನ್ನು ಶೋಧಿಸಿ, ಅವಕ್ಕೆ ಮೂರು ವಿಧ ಗತಿಗಳನ್ನು ಅಂದರೆ 1. ''ಗೌತಮ ಸೂತ್ರಗಳು ಶ್ರುತಿ-ಸ್ಮೃತಿ-ಬ್ರಹ್ಮಸೂತ್ರಗಳಿಗೆ ಕೆಲವೆಡೆ ವಿರುದ್ಧವಾಗಿದ್ದರೂ, ಅವನ್ನು ಸ್ವಲ್ಪ ಶ್ರಮಪಟ್ಟು ವಿರೋಧ ಬರದಂತೆ ಹೊಂದಿಸಿಕೊಂಡು ಒಪ್ಪಬೇಕು. 2. ಎಲ್ಲವನ್ನೂ ಒಪ್ಪುವುದಾಗಲೀ ಎಲ್ಲವನ್ನೂ ಬಿಟ್ಟುಬಿಡುವುದಾಗಲೀ ಮಾಡದೇ ವಿರುದ್ಧವಾದುವನ್ನು ಮಾತ್ರ ಬಿಟ್ಟು ಉಳಿದುವನ್ನು ಒಪ್ಪುವುದು. 3 ಬ್ರಹ್ಮಸೂತ್ರಕಾರರು ಬಿಟ್ಟಿದ್ದನ್ನೆಲ್ಲಾ ಬಿಟ್ಟು, ಬೇಕಾಗುವ ರೀತಿಯಲ್ಲಿ ಹೊಸದಾಗಿ ತಾವೇ ಸೂತ್ರಗಳನ್ನು ಮಾಡುವುದು'' ಎಂದು ಹೇಳಿ ನ್ಯಾಯವಿಸ್ತರವನ್ನು ವೇದಾಂತಕ್ಕೆ ಅನುಕೂಲಿಸಿಕೊಳ್ಳಬೇಕು.

ಹೀಗೆ ಮಾಡದಿದ್ದರೆ ಉಳಿದ 9ರೊಂದಿಗೆ ಹೊಂದಿಕೊಳ್ಳದ ಪ್ರಯುಕ್ತಾ ಆ ಗುಂಪಿಗೆ ಸೇರದ ಒಂದು ಕಡಮೆಯಾಗಿ ಧರ್ಮ ಶಾಸ್ತ್ರೋಕ್ತಿಗೆ ವಿರೋಧಬರಬಹುದು.

ಈ ಕರ್ಮಭೂಮಿಯಲ್ಲಿ ಜೀವರ ಜ್ಞಾನವು ಕರ್ಮ ಸಂಬಂಧದಿಂದ ಸಂಕುಚಿತವಾಗಿದೆ. ಎಲ್ಲವನ್ನೂ ಸರಿಯಾಗಿ ತಿಳಿಯಲಾಗುವುದಿಲ್ಲ. ನಿತ್ಯರ ಮತ್ತು ಮುಕ್ತರ ಜ್ಞಾನವಾದರೋ ಸರ್ವದಾ ಸರ್ವತ್ರವ್ಯಾಪಿಸಿ ಈಶ್ವರ ಜ್ಞಾನದಂತೆ ಒಂದೇ ಸಮಯದಲ್ಲಿ ಪ್ರತ್ಯಕ್ಷವಾಗಿ ತಿಳಿಯಬಲ್ಲದು. ಆದ್ದರಿಂದ ಬುದ್ಧರ ಜ್ಞಾನ ನಿತ್ಯಮುಕ್ತರ ಜ್ಞಾನಕ್ಕೆ ಹೋಲುವುದಿಲ್ಲ. ಹೀಗಾಗಿ ನ್ಯಾಯವಿಸ್ತರಕ್ಕೆ ಮೇಲೆ ತಿಳಿಸಿದಂತೆ 3 ಗತಿಗಳನ್ನು ಹೇಳದಿದ್ದರೆ ಬೇರೆ ಮಾರ್ಗವೇ ಇಲ್ಲದೆ ಹೋಗುವುದನ್ನು ಗೌತಮ ಮತದವರೂ ಒಪ್ಪಲೇಬೇಕು.

ನ್ಯಾಯಸೂತ್ರಗಳಲ್ಲಿ ಕಣಾದಮತಕ್ಕೆ ವಿರೋಧವಾಗಿ ಹಲವಾರು ಸೂತ್ರಗಳುಂಟು ಆದರೂ ಇವರು ಆ ವಿರೋಧವನ್ನು ಸಹಿಸದೆ, ಹೇಗಾದರೂ ಇಬ್ಬರ ಅಭಿಪ್ರಾಯವೂ ಹೊಂದಿಕೊಂಡಿರುವಂತೆ ಮಾಡಿರುವುದು ತುಂಬ ಉತ್ತಮಮಾರ್ಗ. ಆದರೆ ವೇದಾಂತಕ್ಕೆ ವಿರುದ್ಧವಾದುದನ್ನು ಮಾತ್ರ ಅಷ್ಟಾಗಿ ಗಮನಿಸಲಿಲ್ಲ. ಇದು ಶೋಚನೀಯ. ಸರ್ವಕ್ಕೂ ಮೂಲವಾದ ವೇದಗಳಿಗೂ ವೇದಾಂತಕ್ಕೂ ಸ್ವಲ್ಪವೂ ವಿರೋಧವಿಲ್ಲದ ಸೂತ್ರರಚನೆಯೇ ಅತ್ಯುತ್ತಮವಾದುದು. ನಾವು ಗೌತಮ ಮತವನ್ನು ವೇದವೇದಾಂತಕ್ಕೆ ಅನುಕೂಲವಾಗಿದೆಯೆಂದು ಭಾವಿಸಿ, ಕಣಾದಮತವನ್ನು ವಿಪರೀತವಾದುದೆಂದು ವಾದಿಸಿ, ಸ್ಥಾಪಿಸಿರುವೆವು. ಈ ನಮ್ಮ ದೃಢವಾದ ನಿರ್ಧಾರವನ್ನು ತಡೆಯಲು ಯಾರುತಾನೆ ಶಕ್ತರಿರುವರು? ಯಾರೂ ಇಲ್ಲವೆಂದು ಭಾವ. ಕಣಾದನವಾದವು ಆಕಾಶಕ್ಕೆ ಬಟ್ಟೆಹರಡಲು ಉಪಯೋಗವಾಗುವ ಮಡಿಕೋಲಿನಂತೆ ಅಸಂಬದ್ಧ ಪ್ರಲಾಪವೆಂದಂತಾಯಿತು.

आम्नायानां चतुर्णां समुचितसहकार्यष्टके सद्भिरुक्ते ।
कौटिल्यापह्नवो वा भवतु च नयसूत्रेऽत्र दोषांशहानम् ।।
निर्दुष्टावक्रमार्गाकलनमपि विना धर्मभूतं यथा वा ।
ज्ञानं बद्धात्मभासं त्वितरपरिकरै नैव साम्यं लभेत ।। १

सारांशहीनकणभुग्भणितं समस्तं ।
आच्छादनाय नभसो भवतीव यष्टिः ।।
वासः प्रसारणविधाविति चाब्रवाम ।
किंचात्र कः प्रभवति प्रतिवक्तुकामः ।। ३३

ಮೂಲ : ಈಶನುಂ ಮಟ್ರಣಂಗುಮಿಲದೆನ್ರೆಳಿಲ್ ನಾನ್ಮರೈಯಿಲ್,
ಪೇಶಿಯನಲ್ವಿನ್ನೈಯಾಲ್ ಪೆರುಂಪಾಳುಕ್ಕುನೀರಿರೈಕ್ಕುಂ,

**ನೀಶರ್ರೈನೀತಿಹಳಾಲ್ ನಿಗಮಾಂತತ್ತಿನ್ನೂಲ್‌ವಳಿಯೇ.**
**ಮಾಶಿಲ್‌ಮನಂಕೊಡುತ್ತುಮರುಮಾತ್ತಂಗಳ್‌ಮಾತ್ತುವಮೆ ॥ 34**

ಅರ್ಥ :- ಈಶನುಂ = ಪರಮಾತ್ಮನೆಂಬ ವಸ್ತುವೂ, ಮತ್ತ-ಅಣಂಗುಂ = ಇತರ ದೇವತೆಗಳೂ, ಇಲದು = ಇಲ್ಲ, ಎನ್ರು = ಎಂದು, ಎಳಿಲ್-ನಾನ್ಮರೈಯಿಲ್ = ರಮ್ಯವಾಗಿ ಬೆಳಗುವ ವೇದಗಳಲ್ಲಿ, ಪೇಶಿಯ-ನಲ್-ವಿನ್ಯೆಯಾಲ್ = ಹೇಳಿರುವ ಒಳ್ಳೆಯ ಕರ್ಮಗಳಿಂದ, ಪೆರುಂ-ವಾಳುಕ್ಕು = ವಿಶಾಲವಾದ ಪಾಳುಭೂಮಿಗೆ, ನೀರ್-ಇರೈಕ್ಕುಂ-ನೀಶರ್ರೈ = ನೀರನ್ನು ಹಾಯಿಸುವವರಂತಿರುವ ಅಲ್ಪ (ಮೀಮಾಂಸಕ)ರನ್ನು, ನೀತಿಹಳಾಲ್ = (ವೇದವಿರೋಧವಿಲ್ಲದ) ನ್ಯಾಯಗಳಿಂದ, ನಿಗಮಾಂತತ್ತಿನ್-ನೂಲ್-ವಳಿಯೇ = ವೇದಾಂತ ಶಾಸ್ತ್ರದ ಮಾರ್ಗದಿಂದಲೇ, ಮಾಶು-ಇಲ್-ಮನಂ-ಕೊಡುತ್ತು = ದೋಷವಿಲ್ಲದ ಮನಸ್ಸನ್ನು ಕೊಟ್ಟು, ಮರು-ಮಾತ್ತಂಗಳ್ = ಪ್ರತಿವಾದಿಗಳನ್ನು, ಮಾತ್ತುವಂ = ಖಂಡಿಸುವೆವು.

## (ಮೀಮಾಂಸಕ ಮತ ಭಂಗಾಧಿಕಾರ)

ತಾತ್ಪರ್ಯ :- ಮೀಮಾಂಸಕರು ಈಶ್ವರನನ್ನು ಒಪ್ಪುವುದಿಲ್ಲ, ಮಾನವರು ಮಾಡುವ ಯಾಗಾದಿ ಕರ್ಮಗಳಿಂದ ''ಅಪೂರ್ವ''ವೆಂಬುದೊಂದನ್ನು ಕಲ್ಪಿಸಿ, ಅದೇ ಆಯಾ ಕರ್ಮಗಳಿಗೆ ತಕ್ಕ ಫಲವನ್ನು ಕೊಡುವುದೆನ್ನುವರು. ಇಂದ್ರಾದಿ ದೇವತೆಗಳನ್ನೊಪ್ಪದೆ ಶಬ್ದವನ್ನೇ ದೇವತೆಯೆನ್ನುವರು. ಇದರಿಂದ ಈ ಮತದಲ್ಲಿ ದೇವತೆಗಳಿಗೆ ಆಕಾರವಾಗಲೀ, ಆ ದೇವತೆಯು ಹವಿಸ್ಸನ್ನು ಪಡೆಯುವುದಾಗಲೀ, ಏಕ ಕಾಲದಲ್ಲಿ ಅನೇಕ ಕಡೆಗಳಲ್ಲಿ ನಡೆಯುವ ಯಾಗಗಳಿಗೆ ಹೋಗುವುದಾಗಲೀ, ಆ ದೇವತೆ ತೃಪ್ತಿ ಪಡುವುದಾಗಲೀ, ಮಾಡಿದಕರ್ಮಕ್ಕೆ ತಕ್ಕ ಫಲಕೊಡುವುದಾಗಲೀ, ಯಾವುದೂ ಇಲ್ಲವೆಂದಾಯಿತು.

ಸಮಸ್ತ ಕರ್ಮಗಳಿಂದಲೂ ಆದರಿಸಲ್ಪಟ್ಟು, ಸರ್ವಜನರ ಸರ್ವಸತ್ಕರ್ಮಗಳಿಗೂ ಪೂರ್ಣಫಲವನ್ನು ಕೊಡಬಲ್ಲವನು ಸರ್ವೇಶ್ವರನೆಂದು ''ಅಪೂರ್ವ''ವೆಂಬ ಶಕ್ತಿಯೊಂದನ್ನು ಕಲ್ಪಿಸುವುದಾದರೆ ವೇದವಿಹಿತವಾದ ಉತ್ತಮ ಕರ್ಮಗಳನ್ನು ಅತ್ಯಂತ ದೇಹಾಯಾಸವಾಗುವುದರಿಂದಲೂ ಅಪರಿಮಿತಧನವ್ಯಯದಿಂದ ಸಾಧ್ಯವಾಗುವುದ ರಿಂದಲೂ ಮಾಡುವುದೇ ವ್ಯರ್ಥವೆಂದಂತಾಗಿ, ಕಡೆಗೆ ಇವರು ಹೇಳುವುದೆಲ್ಲ ''ಪಾಳು ನೆಲದಲ್ಲಿ ಫಲ ಬರುವುದೆಂಬ ಆಸೆಯಿಂದ ಶ್ರಮಪಟ್ಟು ನೀರು ಹಾಯಿಸಿದಂತೆ ಆಗುವುದು.''

ಹೀಗೆ ಮತಿಗೆಟ್ಟುನಮಗೆ ತೋರಿದಂತೆ ಹೇಳುವ ಮೀಮಾಂಸಕರಿಗೆ ಸರ್ವೇಶ್ವರರನು ಸದ್ಬುದ್ಧಿಯನ್ನು ಕರುಣಿಸಲೆಂದು ಪ್ರಾರ್ಥಿಸಿ, ಉತ್ತಮನ್ಯಾಯಗಳ ಸಹಿತವಾದ

ವೇದಾಂತಶಾಸ್ತ್ರದ ನೆರವಿನಿಂದ ಅವರ ಮತವನ್ನು ಖಂಡಿಸುವುದಾಗಿ ಹೇಳಿರುವವರು ನಮ್ಮ ಆಚಾರ್ಯಶಿಖಾಮಣಿಗಳು.

नैवेशो नापि देवः पर इति परमापूर्वमभ्येत्य पश्चात् ।
रम्याम्नायोक्तसत्कृत्युपगतविफलक्ष्माम्बुसम्पूरकाभान् ।।
अल्पान् वेदान्तमार्गानुगनयवचनै र्मानसं वीतदोषं ।
आशास्यैवातिवादान् कथकजनकृतान् सर्वशः खण्डयामः ।। ३४

ಮೂಲ : ಕನ್ನೈಕಡಲ್ ಪೋಲೊರುನೀರಾಂ ಸೂತ್ತಿರತ್ತೈ
ಕವಂದನ್ನೈಯು ಮಿರಾಹುವ್ವೈಯುಂ ಪೋಲಕ್ಕಂಡು,
ನಿನ್ನೈವುಡನೇ ನಿಲೈತ್ತರುಮ ಮಿಹನ್ನುದಿರ್ಕುಂ
ನೀಶರ್‌ನಿಲೈನಿಲೈ ನಾಡಾವಣ್ಣಮೆಣ್ಣಿ,
ವಿನ್ನೈಪರವು ಶೈಮಿನಿಯಾರ್ ವೇದನೂಲೈ
ವೇದಾಂತ ನೂಲುಡನೇ ವಿರಹಾಲ್ ಕೋತ್ತ,
ಮುನ್ನೈಯುಡೈಯಮುಳುಮದಿನಮ್ಮುನಿವರ್‌ಶೊನ್ನ
ಮೊಳಿವಳಿಯೇ ವಳಿಯೆನ್ರು ಮುಯನ್ರಿಟ್ಟೋಮೇ ॥ 35

ಅರ್ಥ :- ಕನ್ನೈ-ಕಡಲ್-ಪೋಲ್ = ಭೋರ್ಗರೆಯುವ ಕಡಲಿನಂತೆ, ಒರು-ನೀರ್-ಆಂ = ಒಂದೇ ತೆರನಾದ ನೀರಾಗಿರುವಂತಹ, ಸೂತ್ತಿರತ್ತೈ = ಮೀಮಾಂಸಾಸೂತ್ರಗಳನ್ನು, ಕವಂದನ್ನೈಯುಂ-ಇರಾಹುವ್ವೈಯುಂ-ಪೋಲ-ಕಂಡು = ಕಬಂಧನನ್ನೂ ರಾಹುವನ್ನೂ ಬೇರೆ ಬೇರೆ ಕಾಣುವಂತೆ (ಪೂರ್ವ ಮೀಮಾಂಸೆ-ಉತ್ತರ ಮೀಮಾಂಸೆ ಎಂಬ) ಪ್ರತ್ಯೇಕವಾದ ಶಾಸ್ತ್ರಗಳೆಂದು ನೋಡಿ, ನ್ನಿನ್ನೈವುಡನೇ = ಅರಿವೊಂದಿಗೆ, ನಿಲೈ-ದರುಮಂ = ಸ್ಥಿರಧರ್ಮವೆನಿಸಿದ ಈಶ್ವರನನ್ನು, ಇಹನ್ದು-ನಿರ್ಕುಂ = (ಇಲ್ಲವೆಂದು) ಬಿಟ್ಟಿರುವ, ನೀಶರ್-ನಿಲೈ = ಅಲ್ಪ (ಮೀಮಾಂಸಕ)ರ ಸಿದ್ಧಾಂತವು, ನಿಲೈ-ನಾಡಾ-ವಣ್ಣಂ-ಎಣ್ಣಿ = ಸ್ಥಿರವಾಗಿ ನಿಲ್ಲುವಂತಿಲ್ಲವೆಂದೆಣಿಸಿ, ವಿನ್ನೈ-ಪರವು = ಕರ್ಮಗಳನ್ನೇ ಹೊಗಳುವ, ಶೈಮಿನಿಯಾರ್-ವೇದನೂಲೈ = ಜೈಮಿನಿ ಮುನಿಗಳಿಂದ ರಚಿತವಾದ ಸೂತ್ರಗಳನ್ನು, ವೇದಾಂತ ನೂಲುಡನೇ = ಬ್ರಹ್ಮಸೂತ್ರಗಳೊಡನೆ, ವಿರಹಾಲ್-ಕೋತ್ತ = ಸಾಮರ್ಥ್ಯದಿಂದ (ಒಂದೇ ಶಾಸ್ತ್ರದಂತೆ) ಸೇರಿಸಿದ, ಮುನ್ನೈ-ಉಡೈಯ-ಮುಳುಮತಿ = ಸೂಕ್ಷ್ಮವಾಗಿಯೂ ಪರಿಪೂರ್ಣವಾಗಿಯೂ ಇರುವ ಜ್ಞಾನವುಳ್ಳ, ನಂ-ಮುನಿವರ್-ಶೊನ್ನ = ನಮ್ಮ ಮುನಿಗಳು(ವ್ಯಾಸ-ಬೋಧಾಯನ- ಶ್ರೀಭಾಷ್ಯಕಾರಾದಿಗಳು) ತಿಳಿಸಿದ,

ವೊಳಿ-ವಳಿಯೇ = ಸೂಕ್ತಿಗಳ ಮಾರ್ಗವೇ, ವಳಿ-ಎನ್ರು = ಸನ್ಮಾರ್ಗವೆಂದು, ಮುಯನ್ರಿಟ್ಟೋಂ = (ಈ ಮಾರ್ಗದಲ್ಲೇ) ಪ್ರವರ್ತಿಸಿದೆವು. (ಪ್ರತಿಪಾದಿಸಿದೆವು.)

ತಾತ್ಪರ್ಯ :- ಪೂರ್ವ ಮತ್ತು ಉತ್ತರ ಮೀಮಾಂಸಗಳನ್ನು ಒಂದುಗೂಡಿಸಿ, ಒಂದೇ ಶಾಸ್ತ್ರವೆಂದು ಹೇಳುವುದೇ ನಮ್ಮ ಸಿದ್ಧಾಂತವು. ಸಮುದ್ರವು ಒಂದೇ ಆಗಿದ್ದರೂ ಪೂರ್ವ-ಪಶ್ಚಿಮ ಸಮುದ್ರಗಳೆಂದು ವಿಭಾಗಿಸಿ ವ್ಯವಹರಿಸುವಂತೆ ಈ ಶಾಸ್ತ್ರವು ಒಂದೇ ಆದರೂ ಎರಡಾಗಿ ಒಂದಕ್ಕೊಂದು ಹೊಂದಿಕೊಂಡಿರುವುದರಿಂದ ಹೆಸರು ಮಾತ್ರ ಬೇರೆಬೇರೆಯಾಗಿದೆ. ಕರ್ಮಗಳೆಲ್ಲವೂ ಭಗವದಾರಾಧನ ರೂಪವಾದುವು. ಅವನ್ನೇ ಮುಖ್ಯವಾಗಿ ತಿಳಿಸುವುದರಿಂದ ವೇದದ ಪೂರ್ವಭಾಗವನ್ನು ''ಕರ್ಮಕಾಂಡ'', ''ಪೂರ್ವ ಮೀಮಾಂಸಾ'' ಎಂದು ಕರೆಯುವರು. ಆ ಕರ್ಮಗಳಿಂದ ಆರಾಧಿಸಲ್ಪಟ್ಟ ಸರ್ವೇಶ್ವರನನ್ನೇ ಮುಖ್ಯವಾಗಿ ತಿಳಿಸುವುದರಿಂದ ''ಬ್ರಹ್ಮಕಾಂಡ'', ''ಉತ್ತರ ಮೀಮಾಂಸಾ'' ಎಂದು ವೇದದ ಉತ್ತರಭಾಗವನ್ನು ಕರೆಯುವರೆಂದು ಬೋಧಾಯನರು, ಶ್ರೀ ಯಾಮುನಾಚಾರ್ಯರು, ಶ್ರೀ ರಾಮಾನುಜರೇ ಮೊದಲಾದ ಹಿರಿಯರು ಸ್ಥಾಪಿಸಿರುವರು. ಅಂತಹ ಮಹಾಮೇಧಾವಿಗಳು ತೋರಿರುವ ದಾರಿಯೇ ಸರಿಯೆಂದು ಅದರಲ್ಲೇ ನಾವೂ ನಡೆದೆವು.

ಮೀಮಾಂಸಕರ ಅಭಿಪ್ರಾಯದಂತೆ ಕರ್ಮಕಾಂಡವೇ ಬೇರೆ ಶಾಸ್ತ್ರವಾದಂತಾಗುವುದು. ಇವರು ಕರ್ಮವನ್ನು ಮಾತ್ರ ಒಪ್ಪಿ, ಪ್ರಧಾನತಮನಾದ ಈಶ್ವರನೇ ಇಲ್ಲವೆನ್ನುವುದು ತಲೆಯೇ ಇಲ್ಲದ ಕೇವಲ ಮುಂಡವುಳ್ಳವನಂತೆ ಆಗುವುದು. ಕರ್ಮವನ್ನು ಬಿಟ್ಟು ಬರೀ ಸರ್ವೇಶ್ವರನನ್ನೇ ಪ್ರತಿಪಾದಿಸುವ ''ಉತ್ತರ ಮೀಮಾಂಸೆ''ಯನ್ನು ಒಪ್ಪಿದರೆ ''ಒಡಲೇ ಇಲ್ಲದ ತಲೆ''ಯುಳ್ಳವನಂತೆ ಆಗುವುದು. ಹೀಗಾವುದನ್ನು ಸ್ಪಷ್ಟಪಡಿಸುವುದಕ್ಕಾಗಿಯೇ ''ಕಬಂಧ-ರಾಹು''ಗಳ ಸಾಮ್ಯವನ್ನು ಕೊಟ್ಟರುವರು. ಆದುದರಿಂದ ಪೂರ್ವೋತ್ತರ ಮೀಮಾಂಸಗಳು ಒಂದಾಗಿ ಸೇರಿ ಒಂದೇ ಶಾಸ್ತ್ರವೆನ್ನಬೇಕೆಂಬುದೇ ಶ್ರೀಮದಾಚಾರ್ಯರ ಹೃದಯ.

शास्त्रं शब्दायमानांबुधिजलसदृशं सूत्ररूपं विदित्वा ।
शीर्षापेतं कबन्धाकृतिवदिह तथा राहुकल्पं विदेहं ।।
नित्यं धर्मे परेशं परिजहुरपि ये बुद्धिपूर्वं तदीयं ।
यद्वन्नैव स्थिरं स्यान्मत मथ विदितं जैमिनीयं हि सूत्रम् ।। १

कर्मस्तोतृश्रुतीनां सुगमविवरणं वेदशीर्षार्थबोधैः ।
सन्धातुर्ब्रह्मसूत्रै स्सह निपुणतरं योगिनो यादृशी धीः ।।

तादृग्धीमद्भिरस्मन्मुनिभिरभिहिता सूक्तिपद्यैव पद्या ।
हृद्येत्यालोच्य तस्यां शुभगतिमतय स्संप्रवृत्ता अभूम ।। ३५

ಮೂಲ : ಮುಗ್ಗುಣಮಾಯ್‌ನಿನ್ರ, ಮೂಲಪ್ಪಿರ ಕಿರುತಿಕ್ಕಳಿಯಾ,
ಅಗ್ಗುಣಮತ್ತವರುತ್ತುಣ್ಣೈಮತ್ತದರ್ಕ್ಕೀಶನಿಲ್ಲೈ
ಇಗ್ಗಣನೈಪ್ಪಡಿಯೈಯ್ಯೈನ್ದುಮೆಣ್ಣಿಲ್ ಮುನ್ ಮುತ್ತಿಯೆನ್ನುಂ,
ಪಕ್ಕಣವೀಣರ್‌ಪಳಂಪಹಟ್ಟೈಪ್ಪಳುದಾಕ್ಕುವಮೇ ॥ 36

**ಅರ್ಥ** :- ಮುಕ್ಕುಣಮಾಯ್-ನಿನ್ರ = (ಸತ್ವ-ರಜಸ್-ತಮಸ್) ಮೂರು ಗುಣಸ್ವರೂಪವಾಗಿರುವ, ಮೂಲಪಿರಕಿರುತಿಕ್ಕು = ಮೂಲ ಪ್ರಕೃತಿಗೆ, ಅಳಿಯಾ = ಅಳಿಯದ, ಅ-ಕುಣಂ-ಅತ್ತ = ಆ (ಮೂರು) ಗುಣಗಳಿಲ್ಲದಿರುವ, ಅರು-ತುಣ್ಣೈ = ಜೀವನ ಸಹಾಯವಾಗಿಯೂ, ಅದರ್ಕು = ಆ ಮೂಲ ಪ್ರಕೃತಿಗೆ, ಈ ಶನ್-ಇಲ್ಲೈ = ಈಶ್ವರನಿಲ್ಲ, ಇ-ಗಣನ್ನೈ-ಪಡಿ = ಈ ಮತದ ವಿಧವಾದ ಗಣನೆಗೆ ತಕ್ಕಂತೆ, ಐಯ್ಯೈನ್ದುಂ = (5 x 5) 25 ತತ್ವಗಳನ್ನೂ, (ಅವುಗಳ ಸ್ವರೂಪ-ಸ್ವಭಾವಗಳೊಂದಿಗೆ) ಎಣ್ಣಿಲ್ = ಚೆನ್ನಾಗಿ ಗಮನಿಸಿದರೆ, (ಚಿಂತಿಸಿದರೆ) ಮುಕ್ತಿ = ಮುಕ್ತಿಯು, ಮುನ್-ಎನ್ನುಂ = (ಮರಣಕ್ಕೆ) ಮೊದಲೇ ಲಭಿಸುವುದೆಂದು ಹೇಳುವ, ಪಕ್ಕಣ ವೀಣರ್ = ಬೇಡರ ಕೇರಿಯಲ್ಲಿರುವ (ಪಾಮರರಂತೆ ವೃಥಾ ಜಲ್ಪಿಸುವವರಂತಿರುವ) ಸಾಂಖ್ಯರ, ಪಳಂ-ಪಹಟ್ಟೈ = ಬಹಳ ಹಳೆಯದಾದ ಆಡಂಬರವನ್ನು, ಪಳುದಾಕ್ಕುವಂ = ವ್ಯರ್ಥವಾಗಿಸುವೆವು.

**ತಾತ್ಪರ್ಯ** :- ತತ್ವಗಳು "ಪ್ರಕೃತಿ-ಜೀವ" ಎಂಬುವು (ಸಾಂಖ್ಯಮತಭಂಗ) ಎರಡೇ. ಈಶ್ವರನೆಂಬುವನೊಬ್ಬನಿಲ್ಲ, "ಸತ್ವ, ರಜಸ್ಸು, ತಮಸ್ಸು" ಎಂಬುವು ದ್ರವ್ಯಗಳು, ಗುಣಗಳಲ್ಲ. ಇವು ಮೂರು ಏರು ಪೇರಿಲ್ಲದೆ ಸಮನಾಗಿದ್ದಾಗ "ಮೂಲಪ್ರಕೃತಿ"ಯೆಂದೆನಿಸುವುದು. ಇದು ಅರಿವಿಲ್ಲದುದು ಮತ್ತು ಅಳಿವಿಲ್ಲದುದು. ಜೀವನಿಂದ ಅನುಭವಿಸಲ್ಪಡುತ್ತದೆ. ಸರ್ವತ್ರ ವ್ಯಾಪಿಸಿರುವುದರಿಂದ ವಿಭುವಾಗಿರುವುದರಿಂದ, ಸದಾ ಮಾರ್ಪಡುತ್ತಲೇ ಇರುವುದು. ಇದೇ ಎಲ್ಲಕ್ಕೂ ಮೊದಲನೆಯ ಕಾರಣವಾಗಿ, ಮಹದಾದಿತತ್ವಗಳಾಗಿ ಮಾರ್ಪಡುವುದು. ಜೀವನೂ ಅಳಿವಿಲ್ಲದವನು. ಎಲ್ಲ ಕಡೆಯೂ ಇರುವುದರಿಂದಲೇ ವಿಭುವೆನಿಸುನು. ಯಾವಗುಣವೂ ಇಲ್ಲದವನು. ಜ್ಞಾನ ಸ್ವರೂಪನಾಗಿಯೇ ಇರುವವನು, ಯಾವುದೊಂದು ಕ್ರಿಯೆಯೂ ಇಲ್ಲದವನು. ಪ್ರತಿ ಶರೀರದಲ್ಲಿಯೂ ಬೇರೆ ಬೇರೆ ಯಾಗಿರುವನು. ಇವನೊಂದಿಗೆ ಸೇರಿಕೊಂಡಿರುವುದರಿಂದಲೇ ಪ್ರಕೃತಿಯು ಬದಲಾವಣೆ ಹೊಂದುತ್ತದೆ. ಕಾಲಿಲ್ಲದವನ ಸಹಾಯದಿಂದ ಕಣ್ಣಿಲ್ಲದವನು ನಡೆದುಕೊಂಡು ಹೋಗುವಂತೆ, ಜ್ಞಾನಸ್ವರೂಪನಾದ

ಜೀವನ ಸಹಾಯದಿಂದ ಕೆಲಸಮಾಡುವ ಸ್ವಭಾವವುಳ್ಳ ಪ್ರಕೃತಿಯು ತನ್ನ ಕಾರ್ಯವನ್ನು ಮಾಡುವುದು. ಹೀಗೆ ಪ್ರಕೃತಿ-ಪುರುಷರಿಂದ ಈ ಜಗತ್ತು ನಡೆಯುವುದರಿಂದ ಇವೆರಡಕ್ಕಿಂತ ಬೇರೆಯಾದ ಈಶ್ವರನನ್ನು ಒಪ್ಪುವುದು ಬೇಕಿಲ್ಲವೆನ್ನುವರು. ''ಮೂಲ ಪ್ರಕೃತಿ-ಮಹಾನ್-ಅಹಂಕಾರ-ಪಂಚಭೂತಗಳು-ಪಂಚತನ್ಮಾತ್ರೆಗಳು-ದ್ವಿಸ್ವಭಾವವಾದ ಮನಸ್ಸು, ಮತ್ತು ಜೀವ'' ಎಂಬ ಈ 25 ತತ್ವಗಳ ಸ್ವರೂಪವನ್ನು ಚೆನ್ನಾಗಿ ಅರಿತರೆ, ಮರಣಕ್ಕೆ ಮೊದಲೇ ಮುಕ್ತಿಯನ್ನು ಪಡೆಯಬಹುದು,'' ಎಂದು ಹೇಳುವರು.

ಹೀಗೆ ಇವರು ಧರ್ಮಾಧರ್ಮಗಳನ್ನೂ ಈಶ್ವರನನ್ನೂ ಅರಿಯದೆ, ಗೊಲ್ಲಗೇರಿಯ ಗೊಲ್ಲತಿಯರಂತೆ ಅರಿವಿಲ್ಲದೆ, ವ್ಯರ್ಥವಾಗಿ ಬಡಬಡಿಸುವುದನ್ನು ನಾವಿಲ್ಲಿ ಖಂಡಿಸುತ್ತೇವೆ.

**मूलाया श्च प्रकृत्या स्त्रिगुणमयतनो स्तै र्गुणै र्वीत आत्मा ।**
**नित्य श्चैक स्सहायो भवति तदितरो नेश्वरोऽस्तीतिरीत्या ।।**
**तत्वानां पञ्चविंशत्यनुगणनयुजां आविमर्शाद्धि पुंसां ।**
**मोक्षोऽग्रे सिद्ध एवेत्यमतिविलसितं घोषिणां उज्जहामि ।।** ३६

ಮೂಲ : ಈಶನಿಲನೆನ್ಬದನಾಲೆನ್ರುಂಶೀವರ್
ಎಂಗುಮುಳರಿಲರುಣರ್ ವೈಯೆನ್ರವತ್ತಾಲ್,
ಪಾಶಮೆನುಂ ಪಿರಕಿರುತಿ ತನ್ನಾಲೆನ್ನುಂ
ಪಲಮುಮಿಲ್ಲೈ ವೀಡುಮಿಲ್ಲೈಯೆನ್ನುಂ ಪಣ್ಬಾಲ್,
ಕಾಶಿನಿನೀರ್ ಮುದಲಾನಕಾರಿಯಂಗಳ್
ಕಚ್ಚಪತ್ತಿನ್ ಕಾಲ್‌ಕೈಪೋಲೆನ್ನುಂಕತ್ತಾಲ್,
ನಾಶಮಲದಿಲ್ಲೈ ಕಾಣುಂ ಇಞಾಲತ್ತುಳ್ಳೀರ್,
ನಾಮಿಶೈಯಾಚ್ಚಾಂಕಿಯತ್ತೈನಾಡುವಾರ್‌ಕ್ಕೇ ॥ 37

ಅರ್ಥ :- ಇಞಾಲತ್ತುಳ್ಳೀರ್ ! = ಭೂಮಂಡಲನಿವಾಸಿಗಳೇ, ಈಶನ್ ಇಲ್ಲ-ಎನ್ಬದನಾಲ್ = ಈಶ್ವರನಿಲ್ಲವೆನ್ನುವುದರಿಂದಲೂ, ಶೀವರ್-ಎನ್ರುಂ-ಎಂಗುಂ-ಉಳರ್' = ಜೀವಾತ್ಮರು ಎಂದೆಂದಿಗೂ, ಎಲ್ಲ ಕಡೆಯೂ ಇರುವರು, ಉಣರ್ವು-ಇಲರ್ = ಜ್ಞಾನವಿಲ್ಲದವರು, ಎನ್ರವತ್ತಾಲ್ = ಎಂದು ಹೇಳುತ್ತಲಿರುವವರೆನ್ನುವುದರಿಂದಲೂ, ಪಾಶಂ ಎನುಂ = ಪಾಶವೆಂದು ಬರುವಂತಹ, ಪಿರುಕಿರುತಿತನ್ನಾಲ್ = ಮೂಲಪ್ರಕೃತಿಯಿಂದ, ಎನ್ರುಂ = ಎಂದಿಗೂ, ಪಲಮುಂ-ಇಲ್ಲೈ = (ಸಂಸಾರವೆಂಬ) ಫಲವೂ ಇಲ್ಲ, ವೀಡು-ಇಲ್ಲೈ = ಮೋಕ್ಷವು ಇಲ್ಲ, ಎನ್ನುಂ-ಪಣ್ಬಾಲ್ = ಎಂದು ಹೇಳುವ

ಕ್ರಮದಿಂದಲೂ, ಕಾಶಿನಿ-ನೀರ್-ಮುದಲಾನ-ಕಾರಿಯಂಗಳ್ = ಭೂಮಿ, ನೀರು, ಮೊದಲಾದ ಕಾರ್ಯವಸ್ತುಗಳು, ಕಚ್ಚಪತ್ತಿ‍ರ್ = ಆಮೆಯ, ಕಾಲ್-ಕೈ-ಪೋಲ್-ಎನುಂ = ಕೈ, ಕಾಲೆಂದು, ಕತ್ತಾಲ್ = ಕಿರುಚುವುದರಿಂದಲೂ, ನಾಂ-ಇಶೈಯಾ-ಶಾಂಕಿಯತ್ತೈ = ನಾವು ಒಪ್ಪಿಕೊಳ್ಳಲಾಗದಂತಹ ಸಾಂಖ್ಯಮತವನ್ನು, ನಾಡುವಾರ್ಕ್ಕು = ಆಶ್ರಯಿಸುವವರಿಗೆ, ನಾಶಂ-ಅಲದ್-ಇಶೈ-ಕಾಣುಂ = ನಾಶವಾಗುವುದು ಹೊರತು ಬೇರೆಯಾವುದೊಂದು ಫಲವೂ ಇಲ್ಲವೆಂದು ಅರಿಯುವಿರಿ.

**ತಾತ್ಪರ್ಯ** :- ವೇದಗಳೆಲ್ಲವೂ ಸರ್ವೇಶ್ವರನೊಬ್ಬನಿರುವವೆನ್ನುವುವು. ಅವನನ್ನು ಸ್ತುತಿಸುವುವು. ಅಂತಹವನನ್ನೇ ಇಲ್ಲವೆನ್ನುವವರು ಸಾಂಖ್ಯರು. ಶ್ರುತಿಯು ''ಜೀವನು ಅಣುವು, ಜ್ಞಾನವುಳ್ಳವನು'' ಎಂದು ಹೇಳಿದರೆ, ಇವರು ''ಜೀವನು ವಿಭು, ಜ್ಞಾನವಿಲ್ಲದವನೆನ್ನುವರು, ಅಷ್ಟೇ ಅಲ್ಲದೆ ''ಜೀವನ ಸಂಸಾರ ಬಂಧನಕ್ಕೂ, ಮೋಕ್ಷಕ್ಕೂ ಪ್ರಕೃತಿಯೇ ಕಾರಣ''ವೆನ್ನುವರು, ''ಭೂಮಿ-ನೀರು ಮೊದಲಾದುವುಗಳ ಸ್ವಭಾವ ಬದಲಾವಣೆಗಳೆಲ್ಲ ನಿತ್ಯವಾಗಿರತಕ್ಕವು. ಹೊಸದಾಗಿ ಉಂಟಾಗುವುದಾಗಲೀ ನಾಶವಾಗುವುದಾಗಲೀ ಇಲ್ಲವೆಂದೂ, ಆದರೆ ಪ್ರಳಯದಲ್ಲಿ ಮಾತ್ರ ಅಳಿಯುವುವೆಂದೂ, ಸೃಷ್ಟಿಯಲ್ಲಿ ಉಂಟಾಗುವುದೆಂದೂ ಹೇಳಿ, ಹೀಗೆ ಆಗುವುದೆಲ್ಲಾ'' ಆಮೆಯು ತನ್ನ ಅವಯವಗಳನ್ನು ಬೇಕಾದಾಗ ಒಳಕ್ಕೆ ಎಳೆದುಕೊಳ್ಳುವಂತೆಯೂ, ಹೊರಕ್ಕೆ ಚಾಚುವಂತೆಯೂ ತತ್ತ್ವಗಳು ಸಂಕ್ಷೇಪವಾಗಿಯೂ ವಿಕಾಸವಾಗಿಯೂ ಆಗುವುದರಿಂದಲೇ ಹೊರತು ಹೊಸದಾಗಿ ಸ್ವಭಾವವೊಂದನ್ನು ಹೊಂದುವುದರಿಂದಲ್ಲ'' ಎಂದೂ ಹೇಳುವರು.

ಹೀಗೆ ಶ್ರುತಿವಿರುದ್ಧವಾಗಿ ತೋರಿದಂತೆ ಹೇಳುವುದರಿಂದ ವೇದಾಂತಿಗಳಾದ ನಾವು ಇವರನ್ನು ಬಿಡಬೇಕಾಗಿ ಬಂದು ಬಿಟ್ಟೆವು. ಈ ಮತವು ಪ್ರಬಲವಾಗಿದ್ದರೂ ಇದನ್ನು ಅವಲಂಬಿಸುವವರೂ ತಾವಾಗಿಯೇ ಬಿಟ್ಟುಹೋಗುವರು. ಈ ರೀತಿ ಎಲ್ಲರೂ ಬಿಡುವುದೇ ಈ ಮತಕ್ಕಿರುವ ಅಸಾಧಾರಣ ಫಲವಾಗುವುದು. ಅನ್ಯಥಾ ಆಶ್ರಿತರ ಆತ್ಮನಾಶವೇ ಆಗುವುದು.

ईशो नास्तीतिवाचा सततमिह नराः ! सर्वत स्सन्ति जीवाः ।
धीशून्या इत्यथोक्त्या न किमपि फल मस्या च पाशप्रकृत्याः ॥
मुक्ति नैवेति सर्वा मृदुदककृतयः कूर्मपादादिवत् स्युः ।
इत्युक्त्या सांख्य मस्मद्विमतमुपयतां आतमनाशात् किमन्यत् ॥ ३೭

ಮೂಲ : ತಾವಿಬ್ಬುವನಂಗಳ್ ತಾಳಿಣ್ಣೈಶೂಟ್ಟಿಯ ತಂದ್ಯೆಯುಂದಿ,
ಪೂವಿಲ್‌ಪಿರಕ್ಕಿನುಂ ಬೂತಂಗಳೆಲ್ಲಾಂ ಪುಣರ್‌ನ್ದಿಡಿನುಂ,

ನಾವಿಲ್ ಪಿರಿವಿನ್ರಿನಾಮಂಗೈವಾಳಿನುಂನಾನ್ಮರೈಯಿಲ್,
ಬಾವಿತ್ತದನ್ರಿಯುರೈಪ್ಪದು ಪಾರುಂಪದರ್ತ್ತಿರಳೇ ॥ 38

ಅರ್ಥ :- ಬುವನಂಗಳ್ = ಸಕಲ ಲೋಕಗಳನ್ನೂ, ತಾವಿ = (ಅಳೆದು) ದಾಟಿ ಬಂದು ತಾಳ್-ಇಣೈ =ಚರಣಗಳೆರಡನ್ನೂ, ಶೂಟ್ಟಿಯ = ತಲೆಗೆ ಅಲಂಕಾರವಾಗುವಂತೆ ಇಟ್ಟ, ತಂದೈ = ತಂದೆಯಾದ ಶ್ರೀ ಮಹಾವಿಷ್ಣುವಿನ, ಉಂದಿ-ಪೂವಿಲ್ = ನಾಭಿಕಮಲಪುಷ್ಪದಲ್ಲಿ, ಪಿರಕ್ಕಿನುಂ = ಜನಿಸಿದವನಾಗಿದ್ದರೂ, ಭೂತಂಗಳ್-ಎಲ್ಲಾಂ = ಎಲ್ಲಾ ಪ್ರಾಣಿಗಳನ್ನೂ, ಪುಣರ್ತ್ತಿಡಿನುಂ = ಸೃಷ್ಟಿಮಾಡಿದ್ದರೂ, ನಾವಿಲ್ = ನಾಲಿಗೆಯಲ್ಲಿ, ನಾಮಂಗೈ = ಸರಸ್ವತಿಯು, ಪಿರಿವಿನ್ರಿ = ಅಗಲಿರದೆ, ವಾಳಿನುಂ = ವಾಸಿಸುತ್ತಿದ್ದರೂ, ನಾನ್ಮರೈಯಿಲ್ = ನಾಲ್ಕು ವೇದಗಳಲ್ಲೂ, ಬಾವಿತ್ತದ್-ಅನ್ರಿ = ಭಾವಿಸಿದ ವಿಷಯಗಳನ್ನು ಹೊರತು, ಉರೈಪ್ಪದ್ = (ಯೋಗ ಮತದಲ್ಲಿ) ಹೇಳುವ ವಿಷಯವು, ಪಾರುಂ-ಪದರ್-ತ್ತಿರಳ್ = ಹಾರಿ ಹೋಗುವ (ತೂರಿಹೋಗುವ) ಜಳ್ಳು ಕಾಳಿನ (ಧಾನ್ಯದ) ರಾಶಿ.

ತಾತ್ಪರ್ಯ :- (ಯೋಗಮತಭಂಗ) ಬ್ರಹ್ಮನೇ ಯೋಗಮತ ಪ್ರವರ್ತಕನು. ಇವನು ತ್ರಿವಿಕ್ರಮಾವತಾರಮಾಡಿದ ಮಹಾವಿಷ್ಣುವಿನ ಪಾದಪುಷ್ಪವನ್ನು ತಲೆಯಲ್ಲಿ ಅಲಂಕರಿಸಿಕೊಂಡಿರುವವನಾದರೂ, ಶ್ರೀಮನ್ನಾರಾಯಣನ ನಾಭಿಕಮಲದಲ್ಲೇ ಜನಿಸಿದ್ದರೂ, ಸಮಸ್ತವನ್ನೂ ಸೃಷ್ಟಿಸುವುದರಲ್ಲಿ ನಿಪುಣನಾಗಿದ್ದರೂ, ವಾಗಧಿದೇವತೆಯಾದ ಸರಸ್ವತಿಗೇ ಪತಿಯಾಗಿದ್ದರೂ, ವೇದಗಳೆಲ್ಲವನ್ನೂ ಅಧ್ಯಯನಮಾಡಿದವನಾಗಿದ್ದರೂ, ಈತನಿಂದ ಪ್ರವೃತ್ತವಾದ ಯೋಗಮತದಲ್ಲಿರುವ ವಿಷಯಗಳು ಹಲವು ವೇದವಿರುದ್ಧವಾದುವು. ಆದುದರಿಂದಲೇ ಈ ಮತ ನಿಷ್ಫಲವೆನಿಸಿಕೊಂಡಿತು. ಇದರಲ್ಲಿ ಹೇಳಿರುವುದೆಲ್ಲ ಜಳ್ಳಿನರಾಶಿ.

विक्रान्ताखिललोकपादकमलद्वन्द्वोत्तमाङ्गोऽपि यः ।
जातोऽप्यात्मपितु श्च नाभिकमलेऽप्युद्भूतभूतो गिरां ।
देवींचानुकलं सतीमपि रसज्ञावासिनी माप्तवान् ।
तेनोक्ता अपि वेदबाह्यविषया व्यर्थाः कुधान्यौघवत् ॥ ३८

ಮೂಲ : ಕಾರಣನಾಯುಲಹಳಿಕ್ಕುಂ ಕಣ್ಣನ್ತೇಶೈ
ಕಣ್ಣಾಡಿನಿಳಲ್ಪೋಲಕ್ಕಾಣ್ಗ್ಲೆಯಾಲುಂ,
ದಾರಣೈಯಿನ್ ಮುಡಿವಾನಶಮಾದಿತನ್ನೈ
ತನಕ್ಕೇತ್ತುಂ ವಿಳಕ್ಕೆನ್ರುತನಿಕ್ಕೈಯಾಲುಂ,

ಕಾರಣಮಾಮದು ತನಕ್ಕುಪ್ಪಯನಾಂಶೀವನ್
ಕೈವಲಿಯ ನಿಲ್ಲೆಯೆನ್ರುಕಣಿಕ್ಕೈಯಾಲುಂ,
ಕೋರಣಿಯಿನ್ ಕೋಲಮೆನಕ್ಕುರಿಕ್ಕಲಾಹುಂ
ಕೋಕನಹತ್ತಯನ್ ಕೂರುಂಶಮಯಕ್ಕೂರೇ ॥ 39

ಅರ್ಥ :- ಕಾರಣಮಾಯ್ = ನಿಮಿತ್ತೋಪಾದಾನ ಕಾರಣನಾಗಿ, ಉಲಹು-ಅಳಿಕ್ಕುಂ = ಲೋಕಗಳನ್ನು ಸಂರಕ್ಷಿಸುವ, ಕರ್ಣ್ಣ-ತೇಶ್ಶೈ = ಶ್ರೀ ಕೃಷ್ಣಪರಮಾತ್ಮನ ತೇಜಸ್ಸನ್ನು, ಕನ್ನಾಡಿ-ನಿಳಲ್-ಪೋಲ= ಕನ್ನಡಿಯಲ್ಲಿ ಬೀಳುವ, ಪಡಿನೆಳಲಿ (ಪ್ರತಿಬಿಂಬ)ನಂತೆ, ಕಾಣ್ಗೈಯಾಲುಂ = ತೋರಿಬರುವುದರಿಂದಲೂ, ದಾರಣೈಯಿರ್-ಮುಡಿನಾಡಿ = ಧಾರಣೆಯ ಕೊನೆಯ ಸ್ಥಿತಿಯಾದ, ಶಮಾದಿ-ತನ್ನೈ = ಸಮಾಧಿ ಎನ್ನುವ ಭಕ್ತಿಯೋಗವನ್ನು, ತನಕ್ಕು-ಏತ್ತುಂ-ವಿಳಕ್ಕ್-ಎನ್ರು = (ಜೀವಾತ್ಮನಾದ) ತನ್ನನ್ನು ಅರಿಯುವುದಕ್ಕಾಗಿ ಹಚ್ಚಲ್ಪಡುವ ದೀಪವೆಂದು, ತನಿಕ್ಕೈಯಾಲುಂ = ಬೇರೆಯಾಗಿ ಹೇಳುವುದರಿಂದಲೂ, ಕಾರಣಂ-ಆಂ-ತನಕ್ಕ್ = (ಫಲಪಡೆವ) ಕಾರಣವಾದ (ಭಕ್ತಿಯೋಗವೆಂಬ) ಉಪಾಯಕ್ಕೆ, ಶೀವರ್-ಕೈವಲಿಯ-ನಿಲ್ಲೈ = ಜೀವಾತ್ಮನ ಕೈವಲ್ಯ ಸ್ಥಿತಿಯನ್ನೇ, ಪರ್ಯ-ಆಂ-ಎನ್ರು = ಫಲವಾಗುವುದೆಂದು, ಗಣಿಕ್ಕೈಯಾಲುಂ = ತಿಳಿಯುವುದರಿಂದಲೂ, ಕೋಕನಹತ್ = ನಾಭಿ ಕಮಲಸಂಜಾತನಾದ, ಅಯರ್ = ಬ್ರಹ್ಮನು, ಕೂರುಂ = ಹೇಳುವ, ಶಮಯ-ಕ್ಕೂತ್ತು = ಯೋಗವುತದ ಮಾತುಗಳು, ಕೋರಣಿಯರ್-ಕೋಲಂ-ಎನ = ನರ್ತನದ ಅಲಂಕಾರವೆನ್ನುವಂತೆ, ಕುರಿಕ್ಕಲಾಹುಂ = ಹೇಳಬಹುದಾಗಿದೆ.

ತಾತ್ಪರ್ಯ :- ಸಾಂಖ್ಯರು ''ಪ್ರಕೃತಿ-ಜೀವ-ಈಶ್ವರ'' ಎಂಬ ಮೂರು ತತ್ತ್ವಗಳನ್ನು ಒಪ್ಪಿದರು, ಆದರೆ ವೇದಗಳಲ್ಲಿ ''ಈಶ್ವರನನ್ನು ಸಕಲ ಕಲ್ಯಾಣ ಗುಣನಿಧಿ''ಯೆಂದು ಸಾರಿಸಾರಿ ಹೇಳಿದ್ದರೂ ಅವನಿಗೆ ಆಗುಣಗಳು ಸ್ವಾಭಾವಿಕವಾದುವಲ್ಲ. ''ಒಂದು ಕನ್ನಡಿಯಲ್ಲಿ ಒಂದು ವಸ್ತುವಿನ ಪ್ರತಿಬಿಂಬವು ಕಾಣುವುದಕ್ಕೆ ಕಾರಣ ಒಂದು ನಿಜವಾದ ವಸ್ತು ಆ ಕನ್ನಡಿಗೆ ಎದುರಾಗಿ ಇರುವುದರಿಂದಲ್ಲವೆ ? ಹಾಗೆಯೇ ಸರ್ವೇಶ್ವರನೆಂಬ ಕನ್ನಡಿಯಲ್ಲಿ ಗುಣಗಳೆಂಬ ಛಾಯೆಗಳು ತೋರುವುವು. ನಿಜವಾಗಿಯೂ ಆಯಾ ಗುಣಗಳುಳ್ಳ ಚೇತನವೋ ಅಚೇತನವೋ ಆದ ವಸ್ತುವಿನ ಸಂಬಂಧವು ಹೀಗೆ ತೋರಲು ಕಾರಣವೇ ಹೊರತು ಬೇರೆಯಲ್ಲ. ಅಲ್ಲದೆ ಭಕ್ತಿಯೋಗದಲ್ಲಿ ಪರಮಾತ್ಮನ ಸಾಕ್ಷಾತ್ಕಾರವು ಮುಖ್ಯವಾಗಿರುವಾಗ ಅದರಲ್ಲಿ ಜೀವಾತ್ಮನ ಸಾಕ್ಷಾತ್ಕಾರವೇ ಮುಖ್ಯವೆನ್ನುವರು. ಅಷ್ಟೇ ಅಲ್ಲದೆ ಭಕ್ತಿಯೋಗಕ್ಕೆ ಪರಮಪದದಲ್ಲಿ ಭಗವದನುಭವವು ಫಲವಾಗಲಾರದೆಂದೂ, ಪ್ರಕೃತಿಯೊಂದಿಗೆ ಸೇರದೆ ಇರುವ ಜೀವಾತ್ಮನನ್ನು ಅನುಭವಿಸುವುದೆಂಬ ''ಕೈವಲ್ಯವೇ'' ''ಮೋಕ್ಷ''ವೆಂದೂ ಹೇಳುವರು.

ಹೀಗೆ ತತ್ತ್ವ-ಹಿತ-ಪುರುಷಾರ್ಥಗಳಲ್ಲೆಲ್ಲಾ ಶ್ರುತಿ ವಿರುದ್ಧವಾದ ಕ್ರಮಗಳೇ ಇದರಲ್ಲಿರುವುದರಿಂದ, ಈ ಮತವು ಜನರನ್ನು ವಶಪಡಿಸಿಕೊಳ್ಳಲು ಮಾಡಿರುವ ''ನರ್ತಕರ ವೇಷದಂತೆ'' ಒಂದು ವಿಧ ಮೋಹಕವಾದ ವೇಷವಲ್ಲದೆ ಮತ್ತೇನು ?

**कृष्णस्याखिलकारणस्य जगतां संरक्षितु स्तेजसः ।**
**छायाया इव दर्शनाच्च मुकुरे स्वात्मावलोकार्थिनः ।।**
**दीपस्येति च धारणापरिणते स्सूक्त्या समाधेःपृथक् ।**
**हेतोस्तस्य भवेत् फलं च परमं कैवल्यमेवात्मनः ।।** १

**इत्युक्त्या च सरोजातजाताजसमुदीरितं ।**
**योगशास्त्रं परिज्ञेयं नर्तनालङ्कृतं त्विति ।।** ३९

**ಮೂಲ :** **ಶಾದುಶನಂಗಳೆಲಾಂಶಚ್ಚೈಯೆನ್ನುಂಶಲಂಪುಣರ್‍ತ್ತಾರ್,**
**ಗೋತಮಶಾಪಮೊನ್ರಾಲ್ ಕೊಡುಂಕೋಲಂಗಳ್‍ಕೊಣ್ಡುಲಹಿಲ್**
**ಬೂತಪತಿಕ್ಕಡಿಯಾರೆನನಿನ್ರವನ್‍ಪೊಯ್ಯುರೈಯಾಲ್,**
**ವೇದಮಹತ್ತಿನಿರ್‍ವಾರ್ ವಿಕರ್‍ಪಂಗಳ್ ವಿಲಕ್ಕುವಮೇ ॥** **40**

ಅರ್ಥ :- ಶಾದು-ಶನಂಗಳ್-ಎಲಾಂ = ಸಾಧುಜನಗಳೆಲ್ಲರೂ, ಶಚ್ಚೈ-ಎನ್ನುಂ = ಅಸಾರವಾದುದೆಂದು ಬಿಟ್ಟುಬಿಡುವ, ಶಲಂ-ಪುಣರ್‍ತ್ತಾರ್ = ಛಲವೆಂಬ ದೋಷವುಳ್ಳವರಾಗಿಯೂ, ಗೋತಮ-ಶಾಪಂ-ಒನ್ರಾಲ್ = ಗೌತಮಮುನಿಗಳ ಒಂದು ಶಾಪದಿಂದ, ಉಲಹಿಲ್ ಕೊಡುಂ-ಕೋಲಂಗಳ್-ಕೊಂಡು = ಲೋಕದಲ್ಲಿ ಭಯಂಕರವಾದ ವೇಷಗಳನ್ನು ಧರಿಸಿ, ಬೂತಪತಿಕ್ಕು-ಅಡಿಯಾರ್-ಎನ-ನಿನ್ರು = ಶಿವನಿಗೆ ಭಕ್ತರಾಗಿರುವಂತೆ ಇರುತ್ತಾ, ಅವನ್-ಪೊಯ್-ಉರೈಯಾಲ್ = ಆ ಶಿವನ ಅನೃತವಾದ (ಪಾಶುಪತಮತ) ವಾಕ್ಯಗಳಿಂದ, ವೇದಂ-ಅಹತ್ತಿ-ನಿರ್‍ಪಾರ್ = ವೇದಗಳನ್ನು ಬಿಟ್ಟಿರುವವರ, ವಿಕಲ್ಪಂಗಳ್ = ಹಲವಾರು ವಿಧವಾದ ಮತವಿಷಯಗಳನ್ನು, ವಿಲಕ್ಕುವಂ = ಖಂಡಿಸುವೆವು.

ತಾತ್ಪರ್ಯ :- (ಪಾಶುಪತಮತಭಂಗ) ಪಾಶುಪತರು ಗೌತಮರ ಶಾಪಕ್ಕೆ ಗುರಿಯಾಗಿ ಭಯಂಕರ ವೇಷವನ್ನು ತಾಳಿದರು. ಪಶುಪತಿಯ ಉಪದೇಶೋಕ್ತಿಗಳಿಂದ ಕೂಡಿದ ಪಾಶುಪತ ಶಾಸ್ತ್ರವನ್ನು ಅವಲಂಬಿಸಿಕೊಂಡು, ವೇದಗಳನ್ನೇ ದೂರೀಕರಿಸಿರುವರು. ಅವರ ವಾದಗಳನ್ನೆಲ್ಲಾ ಖಂಡಿಸಲಾಗುವುದು.

(ಒಮ್ಮೆ ಗೌತಮರು ದಂಡಕವನದಲ್ಲಿ ತಪಸ್ಸುಮಾಡಿ, ಬ್ರಹ್ಮನನ್ನು ಒಲಿಸಿಕೊಂಡು, ಅವನಿಂದ ''ತನ್ನಲ್ಲಿ ಯಾವಾಗಲೂ ಧಾನ್ಯವು ತುಂಬಿರಬೇಕು'' ಎಂಬ ವರವನ್ನು ಪಡೆದು,

''ಶತಶೃಂಗ''ವೆಂಬಲ್ಲಿ ಒಂದು ಆಶ್ರಮವನ್ನು ನಿರ್ಮಿಸಿಕೊಂಡು, ಅಲ್ಲಿ ವಾಸಿಸುತ್ತಿದ್ದರು. ದಿನವೂ ಧಾನ್ಯವನ್ನು ತಂದು ಬ್ರಾಹ್ಮಣರಿಗೆ ಊಟಮಾಡಿಸಿ ಸಂತೃಪ್ತರಾಗಿರುತ್ತಿದ್ದರು. ಆಗ ಕೆಲವೆಡೆ 10-12 ವರ್ಷಗಳಿಂದ ಮಳೆಯಿಲ್ಲದೆ ಕ್ಷಾಮಪೀಡಿತರಾದ ಸುಮಾರು 48,000 ಬ್ರಾಹ್ಮಣರು ಈ ಮುನಿಗಳ ಬಳಿಗೆ ಬಂದು ಊಟಕ್ಕೆ ಯಾಚಿಸಿದರು. ಬಹಳ ಸಂತೋಷಪಟ್ಟು ತಮ್ಮ ಧಾನ್ಯ ಸಂಪತ್ತಿನಿಂದ ಅವರೆಲ್ಲವನ್ನೂ ಆದರದಿಂದ ಸತ್ಕರಿಸಿ, ಹಿಗ್ಗಿದರು. ಕಾಲಕ್ರಮದಲ್ಲಿ ಬರಗಾಲ ಸರಿಯಿತು. ಆದರೂ ಅವರೆಲ್ಲ ಗೌತಮರ ಸಮೃದ್ಧಿಯನ್ನು ನೋಡಿಸಹಿಸದೆ, ಕೆಲವು ಕಾಲ ಅಲ್ಲಿಂದ ಕದಲದೆ, ಏನಾದರೊಂದು ಅಪವಾದವನ್ನು ಇವರ ಮೇಲೆ ಹೊರಸಿ ಹೋಗಬೇಕೆಂದು ಬಗೆದು, ಒಂದು ಹಸುವನ್ನು ಕೊಂಡು ಈ ಆಶ್ರಮದಲ್ಲಿ ಬಿಟ್ಟು ಇವರ ಬೆಳೆಯನ್ನೆಲ್ಲಾ ಮೇಯುವಂತೆ ಮಾಡಿದರು.

ಪೈರನ್ನೆಲ್ಲಾ ಹಾಳು ಮಾಡುವುದನ್ನು ನೋಡಿ, ಗೌತಮರು ಅದನ್ನು ಹೊರಗಟ್ಟಲು, ತಮ್ಮ ಕಮಂಡಲುವಿನ ತೀರ್ಥವನ್ನು ಅದರ ಮೇಲೆ ಪ್ರೋಕ್ಷಿಸಲು ಅದುಕೂಡಲೇ ನೆಲದ ಮೇಲೆ ಬಿದ್ದಿತು. ಇದನ್ನು ನೋಡಿದ ಈ ಬ್ರಾಹ್ಮಣರು ಗೋಹತ್ಯಾಪಾಪವನ್ನು ಪರಿಹರಿಸಿ ಕೊಳ್ಳುವವರೆಗೆ ತಾವುಗಳು ಊಟ ಮಾಡುವುದಿಲ್ಲವೆಂದೂ ''ಗಂಗಾತೀರ್ಥವನ್ನು ತಂದು ಪ್ರೋಕ್ಷಿಸಿದರೆ ಮತ್ತೆ ಬದುಕುವುದು ಎಂದೂ ಹೇಳಿ ಹೊರಟುಹೋದರು. ತರುವಾಯ ಗೌತಮರು ಮತ್ತೆ ತಪಸ್ಸುಮಾಡಿ ಶಿವನ ಜಟೆಯ ಒಂದು ಭಾಗವನ್ನು ಪಡೆದು, ಅದರಲ್ಲಿದ್ದ ಗಂಗೆಯ ತೀರ್ಥದಿಂದ ಆ ಹಸುವನ್ನು ಬದುಕಿಸಿದರು, ಇಷ್ಟೂ ಆ ಬ್ರಾಹ್ಮಣರ ವಂಚನೆಯೆಂದರಿತು, ಕುಪಿತರಾಗಿ, ''ಶಿವನಂತೆ ಭೈರವ ರೂಪತಾಳಿ, ವೇದ ವಿರೋಧಿಗಳಾಗಿ ವೇದವಿರುದ್ಧಕರ್ಮಗಳನ್ನೇ ಮಾಡುತ್ತಾ, ಪಾಷಂಡಿಗಳಾಗಿ ನಾಶವಾಗಿ'' ಎಂದು ಅವರಿಗೆ ಶಾಪಕೊಟ್ಟರು, ಮಹೇಶ್ವರನು ಅವರ ಆ ಶಾಪವನ್ನು ನೀಗಿಸಲು ಪಾಶುಪತ ಶಾಸ್ತ್ರವನ್ನು ಪ್ರವರ್ತನಗೊಳಿಸಿ ಅದರ ಸಲುವಾಗಿ ಕೆಲವು ವಿಪರೀತಾಚಾರಣೆಗಳನ್ನು ವಿಧಿಸಿದನು. ಅದರ ಅನುಯಾಯಿಗಳೇ ಈ ಪಾಶುಪತರು, ಇದೇ ಗೌತಮರ ಶಾಪದ ಪೂರ್ವ ಕಥೆ.

निस्सारं वर्जनीयं छलमिति गदितं साधुभि र्गृह्णतां तत् ।
मेदिन्यां भीकरालङ्कृतियुतवपुषां शापतो गौतमस्य ।।
भूत्वा भूतेशभक्ता स्तदुदितवचनै र्मोहितानामसत्यै: ।
वेदान् हित्वा स्थितानां पशुपतिमतिनां खण्डयाभो विकल्पान् ।। ४०

ಮೂಲ : ಮಾದವನೇ ಪರನೆನ್ರು, ವೈಯ್ಯಂಕಾಣ
ಮಳುವೇಂದಿಮಯಲ್ ತೀರ್ಕವಲ್ಲದೇವನ್,

ಕೈತವಮೊನ್ರುಹಂದವರ್ಕೈಕ್ಕಡಿಯಶಾಪಂ
ಕದುವಿಯದಾಲದನ್ ಪಲತ್ತೈಕ್ಕರುದಿಪಂಡ್ಯೈ,
ವೇದನೆರಿಯಣುಹಾದುವಿಲಂಗುತಾವಿ
ವೇರಾಹವಿರಿತ್ತುರ್ರೈತ್ತವಿಕರ್ಪಮೆಲ್ಲಾಂ,
ಓದುವದು ಕುತ್ತಿರತ್ತುಕ್ಕೆನ್ರುರೈತ್ತಾನ್
ಓದಾದೇಯೋದುವಿಕ್ಕುಮೊರುವನ್ ತಾನೇ ॥ 41

ಅರ್ಥ :- ಓದಾದೇ = (ಇತರರಲ್ಲಿ) ಓದದೇ, (ಅಧ್ಯಯನಮಾಡದೆ) ಓದುವಿಕ್ಕುಂ = ಅನ್ಯರಿಗೆ ಉಪದೇಶಮಾಡುವ, ಒರುವನ್ = ಅನುಪಮವಾದ ಭಗವಂತನು ಮಾದನವೇ-ಪರನ್-ಎನ್ರು = ಶ್ರೀಮನ್ನಾರಾಯಣನೇ ಸರ್ವೋತ್ತಮನೆಂದು, ವೈಯ್ಯಂ-ಕಾಣ = ಜಗತ್ತೆಲ್ಲ ತಿಳಿಯುವಂತೆ, ಮಳು-ಏಂದಿ = ಕೊಡಲಿಯನ್ನು ಕೈಯಲ್ಲಿ ಹಿಡಿದು, ಮಯಲ್-ತೀರ್ಕವಲ್ಲ = ಅಜ್ಞಾನವನ್ನು ಹೋಗಲಾಡಿಸಲು ಬಲ್ಲವನಾದ, ದೇವರ್ = ಮಹೇಶ್ವರನು, ಕೈತವಂ-ಒನ್ರು-ಉಹಂದವರ್ಕೈ = ಕಪಟವೊಂದರಿಂದ ಗೌತಮರಲ್ಲಿ ದೋಷವನ್ನುಂಟುಮಾಡಿದ ಬ್ರಾಹ್ಮಣರನ್ನು, ಕಡಿಯಶಾಪಂ-ಕದುವಿಯಾಲ್ = ಕಡುತರ ಶಾಪವನ್ನು ಪಡೆದುದರಿಂದ, ಅದನ್-ಪಲತ್ತೈ-ಕರುದಿ = ಆ ಶಾಪದ ಫಲವನ್ನು ಕೊಡಲು ನೆನೆದು, ಪಂಡ್ಯೈ-ವೇದ-ನೆರಿ-ಅಣುಹಾದು = ಅನಾದಿಯಾದ ವೇದಮಾರ್ಗವನ್ನು ಅನುಸರಿಸದೆ, ವಿಲಂಗು-ತಾವಿ = ಅಡ್ಡದಾರಿ ಹಿಡಿದು, ವೇರಾಹ = ಹೊಸದಾಗಿ, (ಬೇರೆ) ವಿರಿತ್ತು-ಉರೈತ್ತ = ವಿಸ್ತಾರವಾಗಿ ಹೇಳಿದ, ವಿಕರ್ಪಂ-ಎಲ್ಲಾಂ = ಹಲವು ತೆರನಾದ ಶೈವ ಮತಗಳನ್ನೆಲ್ಲಾ, ಓದುವುದು = ಕಲಿಯುವುದು, ಕುತ್ತಿರತ್ತುಕ್ಕು = (ಅತ್ಯಲ್ಪ ಫಲವನ್ನು) ಪಡೆಯುವುದಕ್ಕೇ, ಎನ್ರು-ಉರೈತ್ತಾ್ = ಎಂದು ಉಪದೇಶಿಸಿದನು.

ತಾತ್ಪರ್ಯ :- ಮಹೇಶ್ವರನು ಪರಶುಧರನಾಗಿ, ''ಶ್ರೀಮನ್ನಾರಾಯಣನೇ ಎಲ್ಲರಿಗಿಂತ ಮೇಲ್ಪಟ್ಟವನು'' ಎಂದು ಆಣೆಯಿಟ್ಟು ಸರ್ವಜನರ ಅಜ್ಞಾನವನ್ನು ನಿವಾರಿಸಿದನು ಎಂದು ಪುರಾಣವು ಮೊಳಗುತ್ತದೆ. ಅಂತಹ ಪರಶಿವನು ಗೌತಮರಲ್ಲಿ ಅಪಚಾರವೆಸಗಿದ ಬ್ರಾಹ್ಮಣರಿಗೆ ಆ ಮುನಿಯು ಕೊಟ್ಟ ಶಾಪವನ್ನು ನಿಜವನ್ನಾಗಿ ಮಾಡಲು, ವೇದವಿರುದ್ಧವಾದ ಹೊಸ ಮತವೊಂದನ್ನು ಕಲ್ಪಿಸಿ, ಅದನ್ನು ಆ ಬ್ರಾಹ್ಮಣರಿಗೆ ಉಪದೇಶಿಸಿದನು. ಸ್ವತಃ ಸರ್ವಜ್ಞನಾಗಿ ಅನ್ಯರಿಗೆ ಬೋಧಿಸುವವನು ಆ ಪರಮಾತ್ಮ ಮಾಧವನೇ. ಪಾಶುಪತಮತ ಕಲ್ಪಿಸುವಂತೆ ಸಂಕಲ್ಪಿಸಿ, ಪಶುಪತಿಯ ಮೂಲಕ ಪ್ರವರ್ತನಗೊಳಿಸಿ ಆ ಮತವನ್ನು ಅವಲಂಬಿಸುವುದರಿಂದ ಅತ್ಯಲ್ಪ ಫಲಗಳನ್ನು ಶೀಘ್ರವಾಗಿ ಪಡೆಯಲುನುಕೂಲವೆಂದು ಉಪದೇಶಿಸಿರುವನು.

योऽनध्येता स्वतोऽध्यापक इह स परो माधवो हीतिवक्ता ।
देवोऽज्ञानापनेता करधृतपरशुः कैतवव्यग्रविप्रान् ।।
शप्तान् सश्रित्य लब्धं फलमननुगतः प्रत्नवेदोक्तमार्गान् ।
सम्पत्यैतद्विरुद्धे पथि पृथगवदत् विस्तरं यान्विकल्पान् ।। १

तेषामेषां समस्तानां अभ्यासकरणं परम् ।।
अत्यल्पफललाभार्थमेवेति निजगाद ह ।। ४१

**ಮೂಲ :** ಗಂದಮಲರ್‌ಮಹಳ್ ಮಿನ್ನುಂ ಕಾರಾರ್ ಮೇನಿ
ಕರುಣೈಮುಹಿಲ್ ಕಂಡಕಣ್ಗಳ್ ಮಯಿಲಾಯಾಲುಂ,
ಅಂದಮಿಲ್ ಪೇರಿನ್ಬತ್ತಿಲಡಿಯರೋಡೇ
ಅಡಿಮೈಯೆನುಂ ಪೇರಮುದಮರುಂದಿವಾಳ,
ತಂದಮತಿಯಿಳನ್ದರನಾರ್ ಶಮಯಂಪುಕ್ಕು
ತಳಲ್‌ವಳಿಪೋಯ್‌ತ್ತಡುಮಾರಿತ್ತಳರ್‌ನ್ದುವೀಳ್‌ನ್ದೀರ್,
ಚಂದನೆರಿನೇರರಿವಾರ್‌ಚರಣಂಶೇರ್‌ನ್ದು
ಶಂಕೇತತ್ತುವ ಮುನಿವೀರ್ ತವಿರ್‌ಮಿನೀರೇ ॥ 42

ಅರ್ಥ :- ಗಂದ-ಮಲರ್-ಮಹಳ್-ಮಿನ್ನುಂ = ಪರಿಮಳಿಸುವ ಹೂವಿನಲ್ಲಿ ಅವತರಿಸಿದ ಶ್ರೀದೇವಿಯು (ಮಿಂಚಿನಂತೆ) ಹೊಳೆಯುವ ಸ್ಥಳವೆಂಬ, ಕಾರ್-ಆರ್-ಮೇನಿ = ನೀಲವರ್ಣ ಶರೀರವುಳ್ಳ, ಕರುಣೈ ಮುಹಿಲ್ = ಕರುಣೆಯೆಂಬ ನೀರನ್ನು ಸುರಿಸುವ ಪರಮಪದನಾಥನೆಂಬ ಮೋಡವನ್ನು, ಕಂಡ-ಕಣ್ಗಳ್ = ಸಂದರ್ಶಿಸಿದ ಕಣ್ಣುಗಳು, ಮಯಿಲಾಯ್-ಆಲುಂ = ನವಿಲಾಗಿ ಆಡುವ ಸ್ಥಳವಾಗಿರುವ, ಅಂತಂ-ಇಲ್-ಪೇರ್-ಇನ್ಬತ್ತಿಲ್ = ಅಪರಿಮಿತವಾದ ಆನಂದರೂಪವಾದ ವೈಕುಂಠದಲ್ಲಿ, ಅಡಿಯರೋಡೇ = ಭಾಗವತರ ಜೊತೆಯಲ್ಲಿ, ಅಡಿಮೈ-ಎನುಂ-ಪೇರ್-ಅಮುದಂ = ಕೈಂಕರ್ಯವೆಂಬ ಅಮಿತವಾದ ಅಮೃತವನ್ನು, ಆರುಂದಿ-ವಾಳ = ಅನುಭವಿಸಿ ಬಾಳುವಂತೆ, ತಂದ = (ದೇವರು) ಕೊಟ್ಟ, ಮತಿ-ಇಳಂದು = ಜ್ಞಾನವನ್ನು ಹೊಂದದೆ, ಅರನಾರ್-ಶಮಯಂ-ಪುಕ್ಕು = ಶಿವನ ಮತದಲ್ಲಿ ಪ್ರವೇಶಿಸಿ, ತಳಲ್-ವಳಿಪೋಯ್ = ಬೆಂಕಿಯಂತೆ ದಹಿಸುವ ಮಾರ್ಗದಲ್ಲಿ ಹೋಗಿ, ತಡುಮಾರಿ = ತಡವರಿಸಿ, ತಳರ್‌ನ್ದು-ವೀಳ್‌ನ್ದೀರ್ = ಮನದಲ್ಲಿ ಸಂತಾಪಗೊಂಡವರೇ ! ಚಂದ-ನೆರಿ = ವೇದಾಂತಮಾರ್ಗವನ್ನು, ನೇರ್-ಅರಿವಾರ್ = ನೇರವಾಗಿ ಅರಿತ ಆಚಾರ್ಯರ,

ಶರಣಂ-ಶೇರ್‌ನ್ದು = ಪಾದಗಳನ್ನು ಹೊಂದಿ, ಶಂಕೇತತ್ತು-ಅವಂ = ಕಟ್ಟುಪಾಡಿನ ವೇಷಾದಿ ದೋಷಗಳಲ್ಲಿ, ಮುನಿವೀರ್ = ಜುಗುಪ್ಸೆಗೊಂಡು, ನೀರ್ = ನೀವು, ತವರ್‌ಮಿರ್ = ಬಿಡುವವರಾಗಿ,

ತಾತ್ಪರ್ಯ :- ಮಿಂಚಿ, ಧಾರಾಕಾರವಾಗಿ ನೀರನ್ನು ಸುರಿಸುವಂತಹ ಸ್ವಭಾವದ ಮೇಘವನ್ನು ನೋಡಿ, ಆನಂದಿಸಿ, ತಣಿದು, ಕುಣಿಯುವುದು ನವಿಲಿನ ಸಹಜಗುಣ ಮಹಾಲಕ್ಷ್ಮಿ ಎಂಬ ಮಿಂಚು ಪರಮಾತ್ಮನ ವಕ್ಷಸ್ಥಳದಲ್ಲಿ ಮಿಂಚಲು, ದಯೆಯೆಂಬ ನೀರನ್ನು ಸುರಿಸುವ ಭಗವಂತನೆಂಬ ಮೇಘವನ್ನು ನೋಡಿ, ಭಕ್ತರ ಕಣ್ಣುಗಳೆಂಬ ನವಿಲುಗಳು ಅತ್ಯಾನಂದದಿಂದ ನರ್ತಿಸುವ ಸ್ಥಲವು ಪರಮಪದವು. ಅಲ್ಲಿ ನಿತ್ಯ-ಮುಕ್ತರೊಡಗೂಡಿ ನಿತ್ಯ ಸೇವಾಮೃತದ ಸವಿಯನ್ನು ಅನುಭವಿಸಲು ಪೂರ್ಣವಾದ ಅರ್ಹತೆಯಿದ್ದರೂ ಅವಿವೇಕದಿಂದ ಪಾಶುಪತ ಪಾಶವಶರಾಗಿ, ಲಭಿಸಿದ್ದ ಭಾಗ್ಯವನ್ನೂ ಕಳೆದುಕೊಂಡ ಮಾನವರೇ ! ಇನ್ನು ಮುಂದಾದರೂ ಮಾಡಿದುದಕ್ಕೆ ಪಶ್ಚಾತ್ತಾಪಗೊಂಡು, ಸದಾಚಾರ್ಯರನ್ನು ಶರಣುಹೋಗಿ, ಉಜ್ಜೀವಿಸುವುದನ್ನು ಗಮನಿಸಿ.

सौरभ्यातिशयाम्बुजाततनयासौदामनीद्योतिते ।
नीलाङ्गे करुणाभ्रलोकनयनाभिख्यै र्मयूखै र्युते ।
आनन्दैकपदे पदे च परमे नित्यै स्समं सूरिभिः ।
कैङ्कर्याख्यमहासुधानुभवतो दत्तां मतिं जीवितुम् ।। १

विहाय समयं ततः पशुपते स्समासादिताः ।
कुशानुपथगामिनः क्षुभितमानसा मानवाः ।।
त्रयीसृतिमतं पदस्समुपसेविताश्चेत् ध्रुवं ।
त्वनाकलिततन्मताः जहिथ तेन सङ्केतितम् ।। ४२

ಮೂಲ : ಯಾದು ಮಿಲಾದವನ್ರ್ರಂ ಯಾವರ್ಕ್ಕುಂ ನನ್ರಿಯೆಣ್ಣಿಯನಂ,
ಮಾದವನಾರ್ ವದನತ್ತ ಮುದುಣ್ಣುಂ ವಲಂಬುರಿಪೋಲ್,
ವಾದುಹಳಾಲಳಿಯಾಮರ್ರೈಮೌಲಿಯಿನ್‌ವಾನ್‌ಪೊರುಳೇ,
ಓದಿಯಪಂಚಾತ್ತಿರಮುಹವಾರ್ರೈಯೊಳುಕ್ಕುವಮೇ ॥ 43

ಅರ್ಥ :- ಯಾದುಂ-ಇಲಾದ-ಅನ್ರ್ರಂ = ಯಾವುದೊಂದೂ ಉಳಿಯದೆ ಅಳಿದಿರುವ ಪ್ರಳಯಕಾಲದಲ್ಲಿ (ತಾನು ಇರುತ್ತಾ) ಯಾವರ್ಕ್ಕುಂ-ನನ್ರಿ-ಎಣ್ಣಿಯ = ಎಲ್ಲಾ ಜೀವರಾಶಿಗಳಿಗೂ ಒಳ್ಳೆಯದನ್ನೇ ಮಾಡಲು ಸಂಕಲ್ಪಿಸಿದ, ನಂ-ಮಾದವನಾರ್ = ನಮ್ಮ

ಮಹಾಲಕ್ಷ್ಮಿಯ ವಲ್ಲಭನ, ವದನತ್ತು-ಅಮುದು-ಉಣ್ಣುಂ = ಮುಖದಲ್ಲಿರುವ ಅಮೃತವನ್ನು ಆಸ್ವಾದಿಸುವ, ವಲಂಬುರಿಪೋಲ್ = ಬಲಮುರಿ ಶಖದಂತೆ, ವಾದುಹಳಾಲ್-ಅಳಿಯಾ = (ಪ್ರತಿವಾದಿಗಳ) ವಾದಗಳಿಂದ ಅಳಿಯದ, ಮರೈ-ಮೌಲಿಯಿನ್ = ವೇದಾಂತದ, ವಾನ್-ಪೊರುಳೇ = ಉತ್ಕೃಷ್ಟವಾದ ಅರ್ಥವನ್ನೇ, ಓದಿಯ = ಹೇಳುವ, ಪಂಚಾತ್ತಿರಂ = ಪಾಂಚರಾತ್ರಶಾಸ್ತ್ರವನ್ನು, ಉಹವಾರ್ಕೈ = (ಪ್ರಮಾಣವಾಗಿ ಒಪ್ಪದೆ) ವಿರೋಧಿಸುವವರನ್ನು, ಒಳುಕ್ಕವುಂ = ನಮ್ಮ ಮಾರ್ಗದಲ್ಲೇ ಬರುವಂತೆ ಮಾಡೋಣ.

ತಾತ್ಪರ್ಯ :- ಮಹಾಪ್ರಳಯದಲ್ಲೂ ಸಕಲ ಜೀವರಾಶಿಗೂ ಒಳ್ಳೆಯದಾಗಬೇಕೆಂದೇ ಸಂಕಲ್ಪಿಸುವ, ನಮ್ಮೀಮಹಾಲಕ್ಷ್ಮಿಯ ವಲ್ಲಭನ ವದನ ಸುಧಾ ಪಾವನ ಸುಯೋಗಭಾಗ್ಯ ಲಾಭವನ್ನು ಪಡೆದಿರುವ ಬಲಮುರಿ ಶಂಖದಹಾಗೆ ವಿರಾಜಿಸುವುದು ಪಂಚರಾತ್ರತಂತ್ರವು. ಇದು ಭಗವದ್ವಾಸುದೇವನಿಂದಲೇ ಉಪದೇಶಿಸಲ್ಪಟ್ಟು, ಉಪನಿಷತ್ತುಗಳ ಸಾರಾರ್ಥವನ್ನೇ ಅಳವಡಿಸಿಕೊಂಡು, ಅನ್ಯಮತೀಯರ ವಾದಕ್ಕೆ ಜಗ್ಗದೆ ಬೆಳಗುತ್ತಿದೆ. ಇಂತಹ ಉತ್ತಮೋತ್ತಮ ತಂತ್ರವನ್ನು ಅಂಗೀಕರಿಸಿ ಉಜ್ಜೀವಿತರಾಗದೆ, ಅನ್ಯಾಯವಾಗಿ ವಿಪರೀತಾಚರಣ ನಿರತರಾಗಿರುವವ ಅನೇಕರಿರುವರು. ಅವರೆಲ್ಲರನ್ನೂ ನಮ್ಮ ಒಳ್ಳೆಯ ದಾರಿಗೇ ತಂದು, ಈ ಪಾಂಚರಾತ್ರತಂತ್ರವನ್ನು ಸ್ಥಾಪಿಸುವೆವು.

कल्पे सर्वात्मनां यद्ध्रुवकमविकलं योऽस्ति सङ्कल्पमानः ।
तस्यास्मन्माधवस्यामृतमुखमिव तं दक्षिणावर्तशङ्खम् ।।
वादानुन्मूलनीयं निगमशिरसि च व्यक्तमेवार्थमाह ।
तन्त्रं ये पाञ्चरात्रं स्तुवत इह न तान् कुर्महे तन्नुनूषून् ।। ४३

ಮೂಲ : ಪೂವಲರುಂತಿರುವುನ್ದಿಪ್ಪುನಿದನ್‌ವೈಯ್ಯಂ
ಪೊನ್ನಡಿಯಾಲಳಂದಿರುವರ್‌ಪೋತ್ತನಿನ್ರ,
ನಾವಲರುಂ ಕಲೈಹಳೆಲ್ಲಾಂ ತನ್ನೈನಾಡ
ನಾಡಾದನನ್ನಿದಿಯಾನಣುಹುನಾತನ್,
ಕೋವಲನಾಯ್‌ನಿರೈಯಳಿತ್ತನಿರೈಪೋಲ್‌ವೇದಂ
ಕೋವಾಹಕ್ಕೋಮಾನಾಯತನ್‌ಪಾಲ್‌ಶೇರ್ತ್ತ,
ಕಾವಲಿದು ನಲ್ಲುಯಿರುಕ್ಕೆನ್ರುಕಾಟ್ಟುಂ
ಕಾರ್ತಯುಗಗತಿಕಂಡೋಂ ಕರೈಕಂಡೋಮೇ ॥ 44

ಅರ್ಥ :- ಪೂ-ಅಲರುಂ-ತಿರು-ಉಂದಿ-ಪುನಿದನ್ = ತಾವರೆಹೂ ಅರಳುವಂತಹ (ದೇವರ) ನಾಭಿಯಲ್ಲಿ ಜನಿಸಿದ ಮತ್ತು ಪವಿತ್ರನಾದ ಬ್ರಹ್ಮನ, ವೈಯುಂ = ಲೋಕವಾದ ಸತ್ಯಲೋಕದವರೆಗಿನ ಲೋಕಗಳನ್ನೂ, ಪೊನ್-ಅಡಿಯಾಲ್-ಅಳಂದು = ಸುಂದರವಾದ ಪಾದಗಳಿಂದ ಅಳೆದು, ಇರುವರ್-ಪೋತ್ತ-ನಿನ್ರ = (ಬ್ರಹ್ಮ-ರುದ್ರ) ಇಬ್ಬರೂ ಸ್ತುತಿಸುತ್ತಿರಲು ಬೆಳೆದು ನಿಂತ, ನಾ-ಅಲರುಂ-ಕಲ್ವೈಹಳ್-ಎಲ್ಲಾಂ = ನಾಲಿಗೆಯಲ್ಲಿ ವಿವರಿಸಲ್ಪಡುವ ವೇದಶಾಸ್ತ್ರಾದಿಗಳೆಲ್ಲವೂ, ತನ್ನೈ-ನಾಡ = ತನ್ನ ಸ್ವರೂಪವನ್ನು ಹುಡುಕುತ್ತಿರಲು, ನಾಡಾದ-ನಲ್-ನಿದಿಯಾ = ಸುಲಭವಾಗಿ ಸಿಗುವ ಕ್ಷೇಮನಿಧಿಯಾಗಿ, ನಣುಹುಂ = (ಚೇತನಾ ಚೇತನಗಳಲ್ಲಿ) ಸೇರಿಕೊಂಡಿರುವ, ನಾದನ್ = ಸರ್ವೇಶ್ವರನು, ಕೋವಲನಾಯ್-ನಿರೈ-ಅಳಿತ್ತ-ನಿರೈಪೋಲ್ = ಗೋಪಾಲನಾಗಿ ಹಸುಗಳ ಮಂದೆಯನ್ನು ಕಾಯ್ದ ಮಹಿಮೆಯಂತೆ, ವೇದಂ-ಗೋವಾಹ = ವೇದವು ಹಸುವಾಗಿರಲು, ಕೋಮಾನಾಯ್ = ತಾನು ಹಸು ಕರೆಯುವವನಾಗಿ, ಅದನ್-ಪಾಲ್-ಶೇರ್ತು = ಆ ಹಸುವಿನ ಹಾಲನ್ನು ಸೇರಿಸಿ, ಇದು = ಈ ಸಾರವಾದುದು, ಉಯಿರುಕ್ಕು = ಚೇತನರಿಗೆ, ನಲ್-ಕಾವಲ್-ಎನ್ರು-ಕಾಟ್ಟುಂ = ಉತ್ತಮ ರಕ್ಷಣೆಯೆಂದು ತಿಳಿಸಿದ, ಕಾರ್ತಯುಗ-ಗತಿ = ಕೃತಯುಗದ ಧರ್ಮವನ್ನು ಬೋಧಿಸುವ ಪಾಂಚರಾತ್ರಾಗಮ ಶಾಸ್ತ್ರವನ್ನೂ, ಕಂಡೋಂ = ಚೆನ್ನಾಗಿ ಅರಿತೆವು. ಕರೈ-ಕಂಡೋಂ = (ಸಂಸಾರ ಸಾಗರದ) ದಡವನ್ನು ಸೇರಿದೆವು.

ತಾತ್ಪರ್ಯ :- ಭಗವಂತನು ವಾಮನನಾಗಿ ಅವತರಿಸಿ, ತ್ರಿವಿಕ್ರಮನಾಗಿ ಬೆಳೆದು, ಅಳೆದಾಗ ಒಂದಡಿಯು ಬ್ರಹ್ಮಲೋಕದವರೆಗೆ ವ್ಯಾಪಿಸಲು, ಬ್ರಹ್ಮನು ಅದನ್ನು ಅಭಿಷೇಕಿಸಿದನು. ಆ ತೀರ್ಥವೇ ಗಂಗೆಯಾಯಿತು. ಅದನ್ನು ಮಹೇಶ್ವರನು ಮುಡಿಯಲ್ಲಿ ಧರಿಸಿ ಶಿವನಾದನು. ಬ್ರಹ್ಮ-ಶಿವರಿಬ್ಬರೂ ಸ್ತುತಿಸಿದರು. ಅಂತಹ ಮಹಾಮಹಿಮನಾದ ಆ ಪರಮಾತ್ಮನ ಸ್ವರೂಪ-ಗುಣ-ವಿಭವಗಳನ್ನು ಅರಿಯಲು ವೇದಗಳಾದಿಯಾಗಿ ಎಲ್ಲವೂ ಪ್ರಯತ್ನಿಸಿ ಸುಮ್ಮನಾದವು. ಆ ಪುರುಷೋತ್ತಮನು ತನ್ನ ಆಶ್ರಿತರು ಅರಸದಂತೆ ತಾನಾಗಿಯೇ ಅವರಲ್ಲಿ ಕ್ಷೇಮನಿಧಿಯಂತೆ ಸದಾ ಇರುವನು. ಗೋವೃಂದವನ್ನು ಕಾದಂತೆ ಇಂದಿಗೂ ಗೋಪಾಲನಾಗಿಯೇ ವೇದಗಳೆಂಬ ಗೋವುಗಳನ್ನು ಕರೆದು, ಅದರ ಸಾರವೆಂಬ ಅಮೃತವನ್ನು ತೆಗೆದು, ಶ್ರೀಪಾಂಚರಾತ್ರವನ್ನುಪದೇಶಿಸುವನು. ಸಕಲಚೇತನರಿಗೂ ಇದೇ ಸಂರಕ್ಷಕವೆಂದರುಹಿದನು. ಕೃತಯುಗಧರ್ಮವನ್ನು ಸುಲಭವಾಗಿ ಬೋಧಿಸುವ ಆ ಶಾಸ್ತ್ರವನ್ನು ನಾವು ಚೆನ್ನಾಗಿ ಅಭ್ಯಾಸಮಾಡಿ, ಸಂಸಾರಸಾಗರದಿಂದ ಪಾರಾಗಲು ದಾರಿಯನ್ನರಿತವರಾದೆವು.

**राजीवाक्षविकासिनाभिकमलोद्भूतस्य पूतस्य च ।**
**लोकान् दिव्यपदद्वयात प्रमितवान् द्वाभ्यां तदा य स्स्तुतः ॥**

वेदै र्यश्च गवेषितोऽपि रसनास्वाद्यै स्समस्ताश्रयः ।
नाथोऽमार्गयितव्य एव सुलभश्चास्ते शुभशेवधिः ।। १

गोपालो हि यथा गवा मवनतः पारम्यमेवाप्तवान् ।
सत्याम्नायचये हि धेनुसमजे गोपालभाव स्स्वयम् ।।
तादृग्वेदपयोविमिश्रमवदज्जीवाभिरक्षाश्रयं ।
तन्त्रं कार्तयुगैकधर्म मिति तद्विद्म स्तटं चाप्नुमः ।। ४४

ಮೂಲ : ನಮಕ್ಕಾರ್ ತುಣ್ಣೈಯೆನ ನಾಮೆನ್ರುರುಳ್‌ತರುಂ ನಾರಣನಾರ್,
ಉಮಕ್ಕಾರಿವ್ವೈಯೆನ್ರಡಿಯಿಣ್ಣೈಕಾಟ್ಟ ವುಣರ್‌ನ್ದಡೈಯುಂ
ಎಮಕ್ಕೋರ್ ಪರಮಿನಿಯಿಲ್ಲಾ ತಿರುವಿನ್ನೈ ಮಾತ್ತುದಲಿಲ್,
ತಮಕ್ಕೇ ಪರಮೆನ್ರು ತಾಮ್ಮುಯಲುಂತರಂ ಶಾತ್ತುವಮೇ ॥ 45

ಅರ್ಥ :- ನಮಕ್ಕು-ತುಣ್ಣೈ-ಆರ್-ಎನ = (ಸಂಸಾರಿಗಳಾದ) ನಮಗೆ ಸಹಾಯಕರು ಯಾರು ? ಎಂದಿರಲು, ನಾಂ-ಎನ್ನ = ನಾವು (ಇರುವೆವು) ಎಂದು (ಹೇಳಿ) ಅರುಳ್-ತರುಂ-ನಾರಣನಾರ್ = (ನಮ್ಮಲ್ಲಿ) ದಯೆಯನ್ನು ಬೀರುವ ಶ್ರೀಮನ್ನಾರಾಯಣನು, ಉಮಕ್ಕು-ಇವ್ವೈ-ಆರು-ಎನ್ರು = ನಿಮಗೆ ಇವು ಉಪಾಯವೆಂದು, ಅಡಿ-ಯಿಣ್ಣೈ-ಕಾಟ್ಟ = ತನ್ನ ಎರಡು ಪಾದಗಳನ್ನೂ ತೋರಿಸಲು, ಉಣರ್‌ನ್ದು- ಅಡೈಯುಂ-ಎಮಕ್ಕು = ಅನುಭವಿಸಿ (ಹಾಗೆ ತಿಳಿದು) ರಕ್ಷಿಸತಕ್ಕವೆಂದು ಹೊಂದುವ ನಮಗೆ, ಇನಿ-ಓರ್-ಪರಂ-ಇಲ್ಲಾದು = ಇನ್ನು ಯಾವುದೊಂದು ಭಾರವೂ ಇಲ್ಲದೆ, ಇರುವಿನ್ನೈ-ಮಾತ್ತುದಲಿಲ್ = (ಪುಣ್ಯ ಪಾಪವೆಂಬ) ಎರಡು ವಿಧ ಕರ್ಮಗಳನ್ನೂ ನಾಶಮಾಡುವುದರಲ್ಲಿ, ಪರಂ-ತಮಕ್ಕೇ-ಎನ್ರು = ಹೊಣೆಗಾರಿಕೆ ತಮಗೇ ಸೇರಿದ್ದೆಂದು (ತಿಳಿದು) ತಾಂ-ಮುಯಲುಂ-ತರಂ = (ಬೇರೆ ಉಪಾಯಕ್ಕೆ ಪ್ರತಿಯಾಗಿ ತಾನೇ ಇದ್ದು ಫಲವನ್ನು ಕೊಡುವುದಕ್ಕೆ) ತಾನು ಹೇಳುವ ಹಿರಿಮೆಯನ್ನು, ಶಾತ್ತುವಂ = (ಇಲ್ಲಿ) ಹೇಳುವೆವು.

ತಾತ್ಪರ್ಯ :- (3 ಪಾಶುರಗಳಿಂದ ಇತರರು ಹೇಳುವ ಉಪಾಯದ ಸ್ವರೂಪವನ್ನು ಖಂಡಿಸಿ, ನಮ್ಮ ಸಿದ್ಧಾಂತದ ಸ್ವರೂಪವನ್ನೂ, ಮೇಲ್ಮೆಯನ್ನೂ ಹೇಳುವರು) ಜೀವಾತ್ಮರು "ಸಂಸಾರ ಸಾಗರದಲ್ಲಿ ಮಗ್ನರಾಗಿರುವ ನಮಗೆ ರಕ್ಷಕರಾರು ?" ಎಂದು ಖಿನ್ನರಾಗಿರಲು, ಶ್ರೀಮನ್ನಾರಾಯಣನು "ನಾನಿದ್ದೇನೆ ಚಿಂತಿಸಬೇಡಿ" ಎಂದು ಹೇಳಿ, ತನ್ನೆರಡಡಿಗಳನ್ನು ತೋರಿಸಿ, "ಇವೇ ನಿಮಗೆ ಉಪಾಯವು" ಎಂದನು. ಅವನ್ನು ಶರಣು ಹೋದ ನಮಗೆ ಯಾವ ಭಾರವೂ ಆಗದಂತೆ, ಕರ್ಮಗಳಿಂದ ಬಿಡಿಸುವ ಭಾರವನ್ನು ತಾನೇ ವಹಿಸಿ, ಇತರ

ಉಪಾಯಗಳ ಸ್ಥಾನದಲ್ಲಿ ತಾನೇ ನಿಂತು ಫಲವನ್ನು ಕೊಡಲು ತ್ವರೆಗೊಳ್ಳುವನು ಆ ಸರ್ವಶರಣ್ಯನು. ಹೀಗಿರುವ ಅವನ ಮಹಿಮೆಯನ್ನು ಇಲ್ಲಿ ವಿವರಿಸುವರು.

**कोऽस्माकं भविनां सहाय इति चेन्नारायणः खल्वहं ।**
**कारुण्यार्णव इत्युदीर्यक उपायः पादयुग्मं मम ।।**
**इत्युक्ते तदुपेयुषां भर इतो नो नेति यः प्राह सः ।**
**स्वस्यैवाघयुगापहो भर इति प्रोद्वृष्यतेऽत्रेष्टदः ।।** ४५

**ಮೂಲ : ಪಲತ್ತಿಲೊರುತುವಕ್ಕತ್ತಪದವಿಕಾಟ್ಟಿ**
**ಪಲ್ಲುಯಿರುಂ ತಡುಮಾರಪ್ಪಣ್ಣುಹಿನ್ರ,**
**ಕಲಿತ್ತಿರಳಿನ್ ಕಡುಂಕಳುದೈಕ್ಕತ್ತು ಮಾತ್ತಿ**
**ಕಣ್ಣುಡೈಯಾರ್ ಕಂಡುರೈತ್ತ ಗತಿಯ್ಯೈ ಚ್ಚೊನ್ನೋಂ,**
**ವಲತ್ತಿಲಹು ಮರುವೊನ್ರಾಲ್ ಮರುವೊನ್ರಿಲ್ಲಾ**
**ಮಾಮಣಿಯಾಯ್ ಮಲರ್ ಮಾದರೊಳಿಯಾ ಮನ್ನಲ್,**
**ನಲತ್ತಿಲೊರು ನಿಹರಿಲ್ಲಾ ನಾತನ್ ಪಾದಂ**
**ನಲ್ವಳಿಯಾಮಲ್ವಳಕ್ಕಾರ್ ನಡುತ್ತುವಾರೇ ॥** **46**

ಅರ್ಥ :- ಪಲತ್ತಿಲ್-ಒರು-ತುವಕ್ಕು-ಅತ್ತ = ಫಲದಲ್ಲಿ ಯಾವುದೊಂದು ಸಂಬಂಧವೂ ಇಲ್ಲದ, (ಯಾವ ಫಲವನ್ನೂ ಕೊಡದೆ ವ್ಯರ್ಥವಾದ) ಪದವಿ ಕಾಟ್ಟಿ = ಉಪಾಯವನ್ನು ತೋರಿಸಿ, ಪಲ್-ಉಯಿರುಂ = ಹಲವಾರು ಜೀವರನ್ನು, ತಡುಮಾರಪ್ಪಣ್ಣುಹಿನ್ರ = ಸಂತಪಿಸುವಂತೆ ಮಾಡಿದಂತಹ, ಕಲಿ-ತಿರಳಿನ್ = ವಿಮತರೆಂಬ ಕಲಿಪುರುಷರ ಕೂಟದ, ಕಡುಂ-ಕಳುದೈ-ಕತ್ತು = ಕಡುತರವಾದ ಕತ್ತೆಯಂತಿರುವವರ ಆಡಂಬರವೆಂಬ ಬೊಬ್ಬೆಯಿಡುವಿಕೆಯನ್ನು, ಮಾತ್ತಿ = ನಾಶಪಡಿಸಿ, ಕಣ್-ಉಡೈಯಾರ್ = (ಜ್ಞಾನ) ಕಣ್ಣುಳ್ಳವರು, (ಪೂರ್ವಾಚಾರ್ಯರು) ಕಂಡು-ಉರೈತ್ತ = (ತಾವು) ನೋಡಿ (ನಮಗೆ) ಉಪದೇಶಿಸಿದ, ಗತಿಯ್ಯೈ-ಶೊನ್ನೋಂ = ಉಪಾಯವನ್ನು ಹೇಳಿದೆವು. (ಅದೇನೆಂದರೆ) ವಲತ್ತು-ಇಲಹುಂ (ವಕ್ಷಸ್ಥಳದ) ಬಲಭಾಗದಲ್ಲಿರುವ, ಮರು-ಒನ್ರಾಲ್ = (ಶ್ರೀವತ್ಸ) ಗುರುತಿನೊಡನೆ. ಮರು-ಒನ್ರು-ಇಲ್ಲಾ = ಮತ್ತಾವ ದೋಷವೂ ಇಲ್ಲದ, ಮಾಮಣಿಯಾಯ್ = ದೊಡ್ಡರತ್ನವಾಗಿ, ಮಲರ್-ಮಾದರ್-ಒಳಿ-ಆಂ = ಮಹಾಲಕ್ಷ್ಮಿಯು (ತನಗೆ) ಪ್ರಕಾಶದಂತಿರುವವನಾದ, ಅ-ನಲ್-ನಲತ್ತಿಲ್ = ಆ ಉತ್ತಮವಾದ ಪರಿಪೂರ್ಣಾನಂದದಲ್ಲಿ, ಒರು-ನಿಹರ್-ಇಲ್ಲಾ = ಸಮವಾದುದು

ಮತ್ತೊಂದಿಲ್ಲದವನಾದ, ನಾತನ್ = ಪ್ರಭುವಾದ ಪರಮಾತ್ಮನ, ಪಾದಂ = ಪಾದಗಳೇ, ನಲ್-ವಳಿ-ಆಂ = ಅತ್ಯುತ್ತಮ ಉಪಾಯವಾಗುವುದು. ಅಲ್-ವಳಿಕ್ಕು = ಈ (ವಿಷಯದಲ್ಲಿ) ಅಲ್ಲಸಲ್ಲದ ವಿವಾದಗಳನ್ನು, ಆರ್-ನಡುತ್ತಾರ್ = ಯಾರು ತಾನೆ ಮಾಡಲು ಸಾಧ್ಯ ?

ತಾತ್ಪರ್ಯ :- ಜ್ಞಾನದೃಷ್ಟಿಪರಿಪುಷ್ಟರೂ, ಶಿಷ್ಟರೂ ಆದ ನಮ್ಮ ಆಚಾರ್ಯರು ತಾವು ಚೆನ್ನಾಗಿ ಅರಿತು, ನಮಗೆ ಉಪದೇಶಿಸಿದ ಉಪಾಯವನ್ನು ("ವಕ್ಷಸ್ಥಳದಲ್ಲಿ ಶ್ರೀ ವತ್ಸಲಾಂಛಿತನಾಗಿ, ಅತ್ಯುತ್ತಮ ನೀಲಮಣಿರೂಪನಾಗಿ, ಆದರ ಕಾಂತಿಯಾದ ಶ್ರೀದೇವಿಯೊಡಗೂಡಿ, ಎಂದೂ ಅಗಲದೆ ಪರಿಪೂರ್ಣಾನಂದನೂ, ಅನುಪಮನೂ ಆದ ಪರಮಪುರುಷನ ಅಡಿದಾವರೆಗಳೇ ನಮಗಿರುವ ಅನನ್ಯ ಸಾಮಾನ್ಯವಾದ ಉಪಾಯವೆಂಬುದನ್ನು") ಪ್ರಕಾಪಡಿಸುವೆವು. ಹಾಗೆಯೇ ಇತರರು ವಿಪರೀತವಾಗಿ ಹೇಳುವ ಉಪಾಯವನ್ನು ಆಶ್ರಯಿಸಿ ಪೇಚಾಡುವುದನ್ನು ಖಂಡಿಸದೆ ವಿಧಿಯಿಲ್ಲ. ಅಂತಹ ಉಪದೇಶಕರು ಕಲಿಪುರುಷರೇ ಹೊರತು ಬೇರೆಯಲ್ಲ. ಅವರ ಕೂಗಾಟವೆಲ್ಲ ರಾಸಭದ ಕಿರಿಚಾಟದಂತೆ. ಅದನ್ನೆಲ್ಲ ಖಂಡಿಸುವೆವು. ನಾವು ಹೇಳುವ ರೀತಿಯನ್ನು ಖಂಡಿಸಲು ಯಾರಿಂದ ಸಾಧ್ಯ ।

सम्बन्धं च विनैकमप्यधिफलं मार्गं परं दर्शितं ।
जीवानाददतोऽत्र कांश्चिदगतीन् व्यामेहितान् व्याकुलान् ।।
कुर्वाणस्य कलिव्रजोत्कटखरस्योन्मूल्य तज्जल्पितं ।
संप्रेक्ष्याक्षिजुषो गतिं गुरुवरा यामाहु रब्रूम ताम् ।। १

वक्षोदक्षिणभागलक्षणमहाश्रीवत्सवन्निर्मल- ।
ज्योतिःपुञ्जमहामणेरिव महालक्ष्म्या रुचा राजतः ।।
नाथस्यानुपमस्य पादयुगळं पूर्णप्रमोदेस्ति नः ।
सिद्धोपाय इहत्वसव्द्यवहृतौ वादे प्रवर्तेन कः ? ।। ४६

ಮೂಲ : ಎಲ್ಲಾರ್ಕುಮೆಳಿದಾನವೇತ್ತಾಲುಂ
ಇನಿಯುರೈಕ್ಕೈಮಿಹೈಯಾನವಿರಕ್ಕತ್ತಾಲುಂ,
ಶೊಲ್ಲಾರ್ಕ್ಕು ಮಳವಾಲು ಮಮೈದಲಾಲುಂ
ತುಣೆವರಿದಾಯ್ ತುಣೈತುರಕ್ಕುಂ ಶುಕರತ್ತಾಲುಂ,
ಕಲ್ಲಾರ್ಕ್ಕುಂ ಕತ್ತಾರ್ ಶೊರ್ಕವರ್ದಲಾಲುಂ
ಕಣ್ಣನುರೈಮುಡಿ ಶೂಡಿ ಮುಡಿತ್ತಲಾಲುಂ,

ನಲ್ಲಾರ್ಕ್ಕುಂತೀಯಾರ್ಕ್ಕುಮಿದುವೇ ನನ್ರಾಂ
ನಾರಣರ್ಕ್ಕೇಯಡೈಕ್ಕಲಮಾಯ್ ನಣುಹುವೀರೇ ॥ 47

ಅರ್ಥ :- ಎಲ್ಲಾರ್ಕ್ಕುಂ-ಎಳಿದಾನ-ಏತ್ತತ್ತಾಲುಂ = ಸಕಲ ಜೀವರುಗಳಿಗೂ (ಆಚರಿಸಲು) ಸುಲಭವಾಗಿರುವುದೆಂಬ ಹಿರಿಮೆಯಿಂದಲೂ, ಇನಿ = (ಒಮ್ಮೆ ಆಚರಿಸಿದ) ಮೇಲೆ,ಉರೈಕ್ಕೈ = (ಮತ್ತೆ ಅದೇ ಪ್ರಯೋಜನಕ್ಕಾಗಿ ಆ ಶರಣಾಗತಿ ವಾಕ್ಯವನ್ನು) ಹೇಳುವುದು, ಮಿಹೈಯಾನ = (ಬ್ರಹ್ಮಾಸ್ತ್ರನ್ಯಾಯದಂತೆ) ಹೆಚ್ಚಿಂಬಂತಿರುವ, ಇರಕ್ಕತ್ತಾಲುಂ = (ದೇವರಿಗೆ) ಕರುಣೆಯನ್ನುಂಟುಮಾಡುವುದರಿಂದಲೂ ಶೊಲ್ = ಪ್ರಪತ್ತಿ ವಾಕ್ಯವು, ಆರ್ಕುಂ-ಅಳವಾಲುಂ = ಪೂರ್ಣವಾಗಿ ಉಚ್ಚರಿಸಲ್ಪಟ್ಟ ಮಾತ್ರದಿಂದಲೇ, ಅಮೈದಲಾಲುಂ = (ಫಲವನ್ನು ಕೊಡಲು) ಸಾಕಾಗುವುದರಿಂದಲೂ, ತುಣಿವು-ಅರಿದಾಯ್ = (ಪ್ರಪತ್ತಿಯ ಅಂಗವಾದ) ಮಹಾ ವಿಶ್ವಾಸವು ಕಷ್ಟವಾದರೂ, ತುಣೈ-ತುರಕ್ಕುಂ = (ಅದಕ್ಕಿಂತ ಕಷ್ಟವಾದ ಜ್ಞಾನಯೋಗ), ಕರ್ಮಯೋಗ ಮೊದಲಾದ) ಅಂಗಗಳನ್ನು ಬಿಟ್ಟು ಬಿಡುವುದೆಂಬ, ಶುಕರತ್ತಾಲುಂ = ಸೌಕರ್ಯದಿಂದಲೂ, ಕಲ್ಲಾರ್ಕ್ಕುಂ = ಜ್ಞಾನವಿಲ್ಲದ ಸಾಮಾನ್ಯಾಧಿಕಾರಿಗಳಿಗೂ, ಕತ್ತಾರ್-ಶೊಲ್ = ವಿಶೇಷ ಜ್ಞಾನವುಳ್ಳ ಆಚಾರ್ಯರು ಅನುಸಂಧಾನ ಮಾಡುವ ವಾಕ್ಯವು, ಕವರ್‌ದಲಾಲುಂ = ಫಲವುಳ್ಳದ್ದಾಗಿರುವುದರಿಂದಲೂ, ಕಣ್ಣ್-ಉರೈ = ಶ್ರೀಕೃಷ್ಣನ ಸೂಕ್ತಿ (ಗೀತೆ)ಯ, ಮುಡಿ-ಶೂಡಿ = ಕೊನೆಯಲ್ಲಿ (ಚರಮಶ್ಲೋಕದಲ್ಲಿ) ವಿವರಿಸಲ್ಪಟ್ಟು ಮುಡಿತ್ತಲಾಲುಂ = (ಗೀತೆಯನ್ನು) ಮುಕ್ತಾಯಗೊಳಿಸಿರುವುದರಿಂದಲೂ, ನಲ್ಲಾರ್ಕ್ಕುಂ = ಪುಣ್ಯಶಾಲಿಗಳಿಗೂ, ತೀಯಾರ್ಕ್ಕುಂ = ಪಾಪಿಷ್ಠರಿಗೂ, ಇದುವೇ = ಈ ಶರಣಾಗತಿಯೇ, ನನ್ರು-ಆಂ = ಒಳ್ಳೆಯ ಉಪಾಯವಾಗುವುದು, (ಆದ್ದರಿಂದ) ನಾರಣರ್ಕ್ಕೇ = ಶ್ರೀಮನ್ನಾರಾಯಣನಿಗೇ, ಅಡೈಕ್ಕಲಮಾಯ್ = ರಕ್ಷಿಸಲ್ಪಡಬೇಕಾದ ವಸ್ತುವಾಗಿದ್ದು, ನಣುಹುವೀರ್ = (ಅವನನ್ನು ಶರಣವನ್ನಾಗಿ) ಹೊಂದಿರಿ.

ತಾತ್ಪರ್ಯ :- ''ಸಮಸ್ತ ಜೀವಾತ್ಮರೂ ಅತಿ ಸುಲಭವಾಗಿ ಆಚರಿಸಬಹುದಾದ ಉಪಾಯ'' ಎಂಬ ಹಿರಿಮೆಯನ್ನು ಪಡೆದಿರುವುದರಿಂದಲೂ, ಒಮ್ಮೆ ಆಚರಿಸಿದ ಮೇಲೆ ಅದೇ ಫಲಕ್ಕಾಗಿ ಮತ್ತೊಮ್ಮೆ ಆಚರಿಸಬೇಕಿಲ್ಲ. ''ಬ್ರಹ್ಮಾಸ್ತ್ರ ನ್ಯಾಯದಂತೆ'' ಎಂದಿರುವುದರಿಂದಲೂ, ಹಾಗೆ ಮತ್ತೆ ಆಚರಿಸದಿರುವುದು ಸರ್ವಶರಣ್ಯನ ದಯೆ ಹೆಚ್ಚುವಂತೆ ಮಾಡುವುದರಿಂದಲೂ, ಪ್ರಪತ್ತಿ ವಾಕ್ಯವನ್ನು ಉಚ್ಚರಿಸಿದ ಮಾತ್ರಕ್ಕೇ ಪೂರ್ಣಫಲ ದೊರಕುವಂತಿರುವುದರಿಂದಲೂ, ಪ್ರಪತ್ತ್ಯಂಗವಾದ ''ಮಹಾವಿಶ್ವಾಸವು'' ಉಂಟಾಗುವುದು ಅತಿಕಷ್ಟವಾದರೂ ಭಕ್ತಿಯೋಗ ಸಿದ್ಧಿಸಲು ಬೇಕಾದ ಕರ್ಮ-ಜ್ಞಾನ ಯೋಗಗಳ ಸಾಪೇಕ್ಷೆ ಇರುವಂತೆ ಇದಕ್ಕೆ ಬೇಕಾಗಿಲ್ಲವೆಂಬ ಸೌಕರ್ಯವಿರುವುದರಿಂದಲೂ, ಪಾಮರರಿಗೂ ಜ್ಞಾನಿಗಳಿಗೂ ಪರಮಜ್ಞಾನಿಗಳಾದ ಸದಾಚಾರ್ಯರು ಅನುಸಂಧಾನಮಾಡುವ ಪ್ರಪತ್ತಿ ವಾಕ್ಯೋಚ್ಚಾರಣದಿಂದ ಇಷ್ಟ ಸಿದ್ಧಿಯಾಗುವುದೆಂದಿ

ರುವುದರಿಂದಲೂ, ಶ್ರೀಕೃಷ್ಣನು ಅರ್ಜುನನಿಗೆ ಸರ್ವವಿಧದಲ್ಲೂ ಉಪದೇಶಿಸಿ, ಕೊನೆಗೆ ''ಚರಮಶ್ಲೋಕೋ''ಪದೇಶದಿಂದ ಮುಕ್ತಾಯಗೊಳಿಸಿರುವುದರಿಂದಲೂ, ಪುಣ್ಯವಂತರು, ಪಾಪಿಷ್ಠರು ಎಂಬ ಬೇಧವಿಲ್ಲದೆ ಎಲ್ಲರಿಗೂ ಇದು ಒಳ್ಳೆಯ ಉಪಾಯವಾಗಿರುವುದರಿಂದಲೂ, ಸರ್ವರೂ ಶ್ರೀಮನ್ನಾರಾಯಣನಿಗೆ ರಕ್ಷಿಸಲ್ಪಡುವ ವಸ್ತುವಾಗಿ, ಅವನನ್ನೇ ಬಿಡದೆ ಶರಣುಹೊಂದಿರಿ.

सर्वेषामपि सर्वदा सुलभतावाप्तिप्रकर्षादपि ।
भूयोऽप्युक्तिकथा वृथेति समनुप्राप्तातिकारुण्यतः ।।
पूर्णोच्चारणमात्रतोऽप्युपगतात् पर्याप्तिभावादपि ।
विश्वासातिशयस्य दुष्करतया त्याज्याङ्गसौकर्यतः ।। १

अज्ञानामपि सत्फलप्रदतया प्राज्ञोक्तिमात्रादपि ।
श्रीकृष्णोक्त्यवतंसितेन चरमश्लोकेन सम्पूरणात् ।।
स्यादेवायमुपाय आत्तसुकृतां पापात्मनामप्यतः ।
प्रीत्या रक्ष्यतया भवेत विमला नारायणस्यैव हि ।। ೪೭

**ಮೂಲ :** **ಪಂಡೈ ಮರ್ರೈಕ್ಕುಪ್ಪಹೈಯೆನನಿನ್ರ, ಪರಮತಂಗಳ್,**
**ಕೊಂಡವರ್‌ಕೊಳ್ಳುಂಪಯನೊನ್ರಿಲದೆನುಂ ಕೂರ್ಮತಿಯಾಲ್,**
**ವಂಡುವರ್ರೈಕ್ಕರಶಾನ ನಮ್ಮಾಯನ್ನೈವಾನುಲಹಿಲ್,**
**ಕಂಡುಕಳಿಪ್ಪದೆನುಂ ಕಾದಲೊನ್ರೈಕ್ಕರುದುವಮೇ ॥** **48**

**ಅರ್ಥ** :- ಪಂಡೈ-ಮರ್ರೈಕ್ಕು = ಅನಾದಿಯಾದ ವೇದಗಳಿಗೆ, ಪಹೈ-ಎನ-ನಿನ್ರ = ವಿರೋಧಿ ಎಂಬಂತಿರುವ, ಪರಮತಂಗಳ್ = ಇತರ ಮತಗಳನ್ನು, ಕೊಂಡವರ್-ಕೊಳ್ಳುಂ = ಕೈಗೊಂಡವರಿಂದ ಪಡೆಯಬಹುದಾದ, ಪರ್ಯ-ಒನ್ರು-ಇಲದು-ಎನುಂ = ಫಲವಾವುದೂ ಇಲ್ಲವೆಂದು ತಿಳಿದು ಹೇಳುವಂತಹ, ಕೂರ್-ಮತಿಯಾಲ್ = ಸೂಕ್ಷ್ಮಮತಿಯಿಂದ, ವಣ್-ತುವರ್ರೈಕ್ಕು-ಅರಶಾನ = ಸುಂದರವಾದ ದ್ವಾರಕಾನಗರಿಗೆ ಅರಸಾದ, ನಂ-ಮಾಯನ್ನೈ = ಅತ್ಯಾಶ್ಚರ್ಯ ವ್ಯಾಪಾರವುಳ್ಳ ನಮ್ಮ ಶ್ರೀಕೃಷ್ಣನನ್ನು ವಾನ್-ಉಲಹಿಲ್ = ಪರಮಪದದಲ್ಲಿ, ಕಂಡು-ಕಳಿಪ್ಪದು-ಎನುಂ = ಸೇವಿಸಿ, ಆನಂದಿಸುವುದೆಂಬ, ಕಾದಲ್-ಒನ್ರೈ = ಆಸೆಯೊಂದನ್ನೇ, ಕರುದುವಂ = ಭಾವಿಸೋಣ.

**ತಾತ್ಪರ್ಯ** :- ''ಇತರ ಮತದವರು ಅನಾದಿಯಾದ ಶ್ರುತಿಗಳಿಗೆ ವಿರುದ್ಧವಾಗಿರುವರು. ಮೋಹಗೊಂಡು ಆ ಮತಗಳನ್ನು ಅವಲಂಬಿಸಿದರೆ ದೊರಕುವ ಫಲವಾದರೋ ಏನೇನೂ

ಇಲ್ಲ'' ಎಂಬುದನ್ನು ಅತಿಸೂಕ್ಷ್ಮಮತಿಯಿಂದ ಪರ್ಯಾಲೋಚಿಸಿ, ದೃಢನಿಶ್ಚಯಗೊಂಡು, ಅತಿರಮಣೀಯವಾದ ದ್ವಾರಕಾಪುರಿಗಧಿಪತಿಯಾಗಿ, ಅತ್ಯಾಶ್ಚರ್ಯ ವ್ಯಾಪಾರವೆಸಗಿದ, ಶ್ರೀಕೃಷ್ಣನಾಗಿದ್ದ ಪರಮಪುರುಷನನ್ನು ಪರಮಪದದಲ್ಲಿ ಸಂದರ್ಶಿಸಿ, ಸೇವಿಸಿ, ಆನಂದಿಸುವೆವೆಂಬ ಪರಮಪುರುಷಾರ್ಥವನ್ನು ಪಡೆಯುವ ಮಹಾಭಿಲಾಷೆಯಿಂದ ಅತ್ಯುತ್ಸಾಹಿಗಳಾಗಿರೋಣ.

प्रत्नाम्नायाविरोधवत्परमतैकालम्बिलभ्यं फलं ।
किञ्चिचापि न हीति सूक्ष्मसुधिया मायाविनं नः प्रभुम् ।।
श्रीमद्द्वारवतीश्वरं हि परमे सन्दृश्य धामन्य हो ।
सेविष्यामह इत्यसाम परमानन्दानुभूत्युत्सुकाः ।। ४८

ಮೂಲ : ಕಲಂದಿಹಳುಂ ಬೋಗಂಗಳ್ ಕಂಡುವೆಳ್ಹಿ
ಕ್ಕಾರಿಯಮುಂ ಕಾರಣಮುಂ ಕಡಂದು ನಾಂಪೋಯ್,
ಕುಲಂತಿಹಳುಂ ಗುರುಕ್ಕಳಡಿಶೂಡಿಮನ್ನುಂ
ಕುತ್ತೇವಲಡಿಯವರ್ ತಂಕುಳಾಂಗಳ್ ಕೂಡಿ
ವಲಂತಿಹಳುಂತಿರುಮಹಳುಂ ಮತ್ತಿಡತ್ತೇ
ಮನ್ನಿಯ ಮಣ್‌ಮಹಳಾರುಂ ನೀಳೈಯಾರುಂ,
ನಲಂತಿಹಳವೀತ್ತಿರುಂದನಾತರ್ ಪಾದಂ
ನಮಕ್ಕಿದುವೇ ಮುಡಿಯೆನ್ನನಣ್ಣಿನೋಮೇ ॥ 49

ಅರ್ಥ :- ಕಲಂದು-ಇಹಳುಂ = (ದುಃಖದೊಂದಿಗೆ) ಕಲೆತಿರುವುದರಿಂದ ಬಿಡಲ್ಪಡುವ, ಬೋಗಂಗಳ್-ಕಂಡು-ವೆಳ್ಹಿ = ಜಗತ್ತಿನ ಸುಖಗಳನ್ನು ನೋಡಿ, ಬೇಡವೆಂದೆಣಿಸಿ, (ಉಪಾಯಾನುಷ್ಠಾನ ಮಾಡಿ) ಕಾರಿಯಮುಂ = (ಮಹತ್-ಅಹಂಕಾರವೊ ಅಥವಾ ಶರೀರೇಂದ್ರಿಯಗಳೋ ಆದ) ಕಾರ್ಯಗಳನ್ನೂ, ಕಾರಣಮುಂ = ಮೂಲ ಪ್ರಕೃತಿಯನ್ನೂ, ಕಡಂದು = ದಾಟಿ, ನಾಂ-ಪೋಯ್ = ನಾವು (ವೈಕುಂಠಕ್ಕೆ) ಹೋಗಿ, ಕುಲಂ-ತಿಹಳುಂ-ಗುರುಕ್ಕಳ್ = (ಅಲ್ಲಿ) ಗೋಷ್ಠಿಯಲ್ಲಿ ಬೆಳಗುವ (ನಮ್ಮ) ಆಚಾರ್ಯರುಗಳ, ಅಡಿ-ಶೂಡಿ = ಪಾದಗಳನ್ನು ತಲೆಮೇಲೆ ಧರಿಸಿ ಮನ್ನುಂ-ಕುತ್ತೇವಲ್ = ಸ್ಥಿರವಾದ ಸೇವೆಯನ್ನು ಮಾಡುವ, ಅಡಿಯವರ್‌ತಮ್ = ಭಾಗವತರ (ನಿತ್ಯರ ಮತ್ತು ಮುಕ್ತರ) ಕುಳಾಂಗಳ್-ಕೂಡಿ = ಗೋಷ್ಠಿಗಳಲ್ಲಿ ಸೇರಿ, ವಲಂ-ತಿಹಳುಂ-ತಿರುಮಹಳುಂ = ಬಲಗಡೆ ಬೆಳಗುವ ಲಕ್ಷ್ಮಿಯೊಡನೆಯೂ ಇಡತ್ತೇ-ಮನ್ನಿಯ = ಎಡಗಡೆ ಸದಾ

ವಾಸಮಾಡಿರುವ, ಮಣ್-ಮಹಳಾರುಂ- ನೀಳೈಯಾರುಂ = ಭೂದೇವಿಯೊಂದಿಗೂ, ಮತ್ತು ನೀಳಾದೇವಿಯೊಂದಿಗೂ, ನಲಂ-ತಿಹಳ = ಆನಂದವು ಹೆಚ್ಚುವಂತೆ, ವೀತ್ತಿರುಂದ-ನಾರ್ದ-ಪಾದಂ = ಬಿಜಯ ಮಾಡಿಸಿರುವ ಭಗವಂತನ ಪಾದಗಳನ್ನು, ನಮಕ್ಕು-ಇದುವೇ-ಮುಡಿಯೆನ್ನ = ನಮಗೆ ಇದೇ ಕಿರೀಟವಾಗುವುದು ಎಂಬಂತೆ, ನಣ್ಣಿನೋಂ = ಒಪ್ಪಿಕೊಂಡಿರುವೆವು.

ತಾತ್ಪರ್ಯ :- (ಸ್ವಾಭಿಮತಸಾರವಾದ ಫಲಸ್ವರೂಪ ನಿರೂಪಣವು) ಈ ಜಗತ್ತಿನಲ್ಲಿ ಇರುವತನಕ ವೈರಾಗ್ಯಭಾಗ್ಯವಂತರಾಗಿ, ವಿಹಿತವಾದ ಉಪಾಯವನ್ನುಸರಿಯಾಗಿ ಅನುಷ್ಠಿಸಿ, ಸಂಸಾರದಿಂದ ವಿಮುಕ್ತರಾಗಿ, ಪರಮಪದದಲ್ಲಿ ಆಚಾರ್ಯರ ಅಡಿದಾವರೆಗಳನ್ನು ವಂದಿಸಿ, ನಿತ್ಯಸೂರಿಗಳ ಗೋಷ್ಠಿಯಲ್ಲಿ ಭಾಗಿಗಳಾಗಿ, ನಾವು ಶ್ರೀ ಭೂ ನೀಳಾ ಸಮೇತನಾಗಿ ಶೋಭಿಸುತ್ತಾ ಪರಮಾನಂದಭರಿತನಾಗಿ ಬಿಜಯಮಾಡಿರುವ ಶ್ರೀಮನ್ನಾರಾಯಣನ ಪಾದಾರವಿಂದಗಳನ್ನು ಶಿರಸ್ಸಿನಲ್ಲಿ ಧರಿಸಿಕೊಂಡು, ಅವನ ನಿತ್ಯ ಸೇವಾಮೃತಾಸ್ವಾದ ಪರಿಪೂರ್ಣಾನಂದವುಳ್ಳವರಾಗೋಣ.

मिश्रीभूतविनश्वराणि हि सुस्वान्यालोक्य सँल्लजिताः ।
कार्यं कारण मित्युभेऽपि वयमप्युत्तीर्य वैकुण्ठगाः ।।
राराजद्गुरूपङ्क्तिपादकमलोत्तंसोत्तमाङ्गा दृढं ।
सेवातत्परमुक्तभक्तनिवहाविष्टाः प्रमोदोम्भिताः ।। १

वक्षोदक्षिणपार्श्वशोभितमहालक्ष्म्या च वामस्थया ।
जुष्टस्य स्थिरया समुज्ज्वलितया देव्या च नीळाख्यया ॥
आनन्दातिशयं सदानुभवतो नाथस्य पादाम्बुज- ।
द्वन्द्वं न स्त्विद मेव मौळिरुचिरालङ्कार इत्यास्महे ॥ ४९

ಮೂಲ : ಮಾನಂಗಳಿನ್ರಿವಹುತ್ತುರೈಕ್ಕಿನ್ರ, ಮತಂಗಳೆಲ್ಲಾಂ,
ತಾನಂಗಳನ್ರು, ದರುಮನೆರಿಕ್ಕೆನ್ರು, ಶಾತ್ತಿಯ ಪಿನ್,
ವಾನಂಕವರ್‌ನ್ದು ಮರೈಮುಡಿಶೂಡಿಯ ಮಾದವತ್ತೋರ್,
ಇಾನಂಗಳೊನ್ರನಡಕ್ಕಿನ್ರ, ನಲ್‌ವಳಿನಾಡುವಮೇ ॥ 50

ಅರ್ಥ :- ಮಾನಂಗಳ್-ಇನ್ರಿ = (ವೇದ ಮೊದಲಾದ) ಪ್ರಮಾಣಗಳನ್ನು ಸ್ವೀಕರಿಸದೆ, ವಹುತ್ತು-ಉರೈಹಿನ್ರ = (ತೋರಿದಂತೆ) ವಿಭಾಗಿಸಿ ಹೇಳುವ, ಮತಂಗಳ್-ಎಲ್ಲಾಂ = ಎಲ್ಲಾ ಮತಗಳೂ, ದರುಮನೆರಿಕ್ಕು = ಧರ್ಮಮಾರ್ಗಕ್ಕೆ,

ತಾನಂಗಳ್-ಅನ್ರು = ಆಸ್ಪದವಾಗಲಾರವು, ಎನ್ರು-ಶಾತ್ತಿಯ-ಪಿನ್ = ಎಂದು ಸ್ಥಾಪಿಸಿದ ತರುವಾಯ, ವಾನಂ-ಕವರ್‌ನ್ದು = ಪರಮಪದಕ್ಕೆ ಆಸೆಪಟ್ಟು, ಮರ್ರೈ-ಮುಡಿ-ಶೂಡಿಯ = ವೇದಾಂತದಲ್ಲಿ ಭೂಷಿತರಾಗಿರುವವರೂ, ಮಾ-ತವತ್ತೋರ್ = ಮಹಾತಪಸ್ಸೆಂದು ಖ್ಯಾತಿಪಡೆದ ನ್ಯಾಸವಿದ್ಯೆಯನ್ನು ಅನುಷ್ಠಿಸಿದ ನಮ್ಮ ಪೂರ್ವಾಚಾರ್ಯರು, ಞಾನಂಗಳ್-ಒನ್ರ-ನಡಕ್ಕಿನ್ರ = ಶಾಸ್ತ್ರಗಳು (ಒಂದಕ್ಕೊಂದು ವಿರೋಧವಿಲ್ಲದಂತೆ) ಒಮ್ಮುಖವಾಗಿ ಸೇರುವಂತೆ ನಡೆಸುವ, ನಲ್‌ವಳಿ-ನಾಡುವಂ = ಉತ್ತಮವಾದ ಮಾರ್ಗವನ್ನು ಹಿಡಿಯೋಣ.

ತಾತ್ಪರ್ಯ :- ''ವೇದಗಳನ್ನು ಪ್ರಮಾಣವನ್ನಾಗಿ ಒಪ್ಪದಿರುವ ಯಾವ ಮತವೂ ಧರ್ಮವನ್ನು ಬೋಧಿಸಲಾರದು. ಎಂಬದನ್ನು ಸ್ಥಾಪಿಸಿ, ''ಪರಮ ಪದದಲ್ಲಿ ಪರಿಪೂರ್ಣ ಬ್ರಹ್ಮಾನಂದನುಭವವನ್ನು ಪಡೆಯಲು ಆಸೆಯಿಂದ ವೇದಾಂತದಲ್ಲಿ ಪರಿನಿಷ್ಣಾತರಾಗಿ, ''ತಪಸ್ಸುಗಳಲೆಲ್ಲಾ ಅತ್ಯುತ್ತಮವಾದ ತಪಸ್ಸು ನ್ಯಾಸ'' ಎಂದು ಖ್ಯಾತಿಗೊಂಡಿರುವುದನ್ನು ಅನುಷ್ಠಿಸಿ, ಪೂರ್ಣ ಫಲವನ್ನು ದೊರಕಿಸಿ ಕೊಡುವ ನಮ್ಮ ಪೂರ್ವಾಚಾರ್ಯರು ವಿವಿಧವಾಗಿರುವ ಶಾಸ್ತ್ರಗಳಿಗೆ ಪರಸ್ಪರ ವಿರೋಧ ತಟ್ಟದಂತೆ ಒಮ್ಮುಖವಾಗಿಸಿ, ಘೋಷಿಸಿ, ಸ್ಥಾಪಿಸಿರುವ ಸನ್ಮಾರ್ಗದಲ್ಲಿ ನಡೆಯೋಣ.

**मानापेतानि सर्वप्रतिमतिकथितानीह नालं मतानि ।**
**धर्म्यायां सत्पदव्यां गति मनुभवितुं हीति संस्थापितत्वात् ।।**
**नित्यानन्देप्सवो न श्श्रुतिशिखरधरा न्यासविद्यातपस्याः ।**
**एकीकृत्यैव शास्त्राण्युचिततमसृतिं यां ददुस्तां श्रयाम ।।** ५०

**ಮೂಲ : ತನ್ನಡಿಕ್ಕೀಳುಲಹೇಳ್ಳೆಯುಂ ವೈತ್ತ ತನಿತ್ತಿರುಮಾಲ್,**
**ಪೊನ್ನಡಿಕ್ಕೇರ್ರಿನ್ರ ಪುಣ್ಣಿಯರ್ ಕೇಣ್ಮಿ ಪುಹಲರಿವಾರ್,**
**ಮುನ್ನಡಿಪಾರ್ತು ಮುಯಲುದಲಾಲವರ್ ಚಾಯ್ಗೈವನ**
**ಪಿನ್ನಡಿಪಾರ್ತ್ತುನಡಂದು ಪೆರುಂಪದಮೇರುವಮೇ ॥** 51

ಅರ್ಥ :- ತರ್-ಅಡಿ-ಕ್ಕೀಳ್ = ತನ್ನಡಿಗಳಡಿಯಲ್ಲಿ, ಉಲಹು-ಏಳ್ಳೆಯುಂ-ವೈತ್ತ = ಏಳು ಲೋಕಗಳನ್ನೂ ನಿಲ್ಲಿಸಿಕೊಂಡಿರುವ, ತನಿ-ತಿರುಮಾಲ್ = ಅಸದೃಶವಾದ ಶ್ರೀಮನ್ನಾರಾಯಣನ, ಪೊರ್-ಅಡಿಕ್ಕು = ದಿವ್ಯವಾದ ಪಾದಗಳನ್ನು ಪಡೆದು ಅನುಭವಿಸುವುದಕ್ಕೆ, ಏರಿನ್ರ = ತಕ್ಕವರಾದ, ಪುಣ್ಣಿಯರ್ = ಪುಣ್ಯಶಾಲಿಗಳೇ ! ಕೇಣ್ಮಿ = ಕೇಳುವವರಾಗಿ, (ಏನೆಂದರೆ) ಪುಹಲ್-ಅರಿವಾರ್ = ಉಪಾಯದ ಸ್ವರೂಪವನ್ನು ಅರಿತಿರುವ ನಮ್ಮ ಆಚಾರ್ಯರುಗಳು, ಮುರ್ ಅಡಿ-ಪಾರ್ತು = (ತಮ್ಮ) ಹಿರಿಯರು ಅಡಿಯಿಟ್ಟ

ಮಾರ್ಗವನ್ನೇ ಗಮನಿಸಿ, ಮುಯಲುದಲಾಲ್ = (ಹಾಗೆಯೇ ನಡೆಯಲು) ಪ್ರವರ್ತಿಸುವುದರಿಂದ, ಅವರ್-ಪಿನ್-ಚಾಯ್ಯೆ-ಎನ = (ನಾವೂ) ಅವರ ಹಿಂದಿರುವ ನೆಳಲಿನಂತೆ, ಅಡಿ-ಪಾರ್ತ್ತು = (ಅವರು) ಇಟ್ಟ ಹೆಜ್ಜೆಯ ಗುರುತನ್ನು ನೋಡಿ, ನಡಂದು = (ಹಾಗೆಯೇ) ನಡೆದು, ಪೆರುಂ-ಪದಂ-ಏರುವಂ = (ತನಗಿಂತ ಮೇಲಿನದು ಮತ್ತೊಂದಿಲ್ಲವೆನ್ನಿಸಿರುವ) ಅತ್ಯುತ್ತಮವಾದ (ಸ್ಥಾನ) ಪರಮಪದವನ್ನು ಪಡೆಯೋಣ.

ತಾತ್ಪರ್ಯ :– ಓ! ಪುಣ್ಯಶಾಲಿಗಳೇ ! ಎಲ್ಲರಿಗೂ ಬಹಳ ಒಳ್ಳೆಯದಾಗುವುದೊಂದನ್ನು ಹೇಳಿವೆನು, ಕೇಳಿ. ಭಗವಂತನು ಸಕಲ ಲೋಕಗಳನ್ನೂ ತನ್ನಡಿಗಳಡಿಯಲ್ಲಿರಿಸಿ ಆಳುವನು. ಅವನಡಿಗಳನ್ನು ಅನುಭವಿಸಲು ಎಲ್ಲರಿಗೂ ಅವಕಾಶವುಂಟು. ನಮ್ಮ ಆಚಾರ್ಯರುಗಳು ಅವರ ಹಿರಿಯರಡಿಯಿಟ್ಟ ಸನ್ಮಾರ್ಗದಲ್ಲೇ ನಡೆದು ಬಂದವರು. ನಾವೂ ನಮ್ಮ ಪೂರ್ವಾಚಾರ್ಯರು ಹೋಗಿರುವ ಸರಣಿಯಲ್ಲೇ ಪರಮಪದದಲ್ಲಿನ ಪರಮ ಪುರುಷನ ಪರಿಪೂರ್ಣಾನಂದವನ್ನು ಪಡೆಯೋಣ.

**धर्ता य स्सप्तलोक्या निजचरणतलेऽनुत्तम श्श्रीविलोलः ।**
**तच्चार्वङ्घ्र्यब्जलाभावहसुकृतयुता मानवाः ! संश्रुणुध्वम् ।।**
**ज्ञातोपायाः स्वपूर्वाचरितपथ मवालोक्य तत्र प्रयाताः ।**
**तच्छायेवानुयाताः परमपद मवाप्स्याम आनन्दधाम ।।** ५२

**ಮೂಲ : ವೈಯಮೆಲ್ಲಾಮಿರುಳ್‌ನೀಕ್ಕು ಮಣಿವಿಳಕ್ಕಾಯ್,**
**ಮನ್ನಿಯನಾನ್ಮರೈ ಮೌಲಿಮತಿಯೇ ಕೊಂಡು,**
**ಮೆಯ್ಯಲದು ವಿಳಂಬಾದ ವಿಯಾಶನ್‌ಕಾಟ್ಟುಂ**
**ವಿಲಕ್ಕಿಲ್ಲಾ ನಲ್‌ವಳಿಯೇ ವಿರೈಂದು ಶೆಲ್ವೀರ್,**
**ಐಯಮರವರುಶಮಯಕ್ಕುರುಂಬರುತ್ತೋಂ**
**ಅಣಿಯರಂಗರಡಿಯವರಕ್ಕೇಯಡಿಮೈಶೈಯ್ದೋಂ**
**ಮೈಯಕಡಲ್ ವಟ್ಟತ್ತುಳ್ ಮತ್ತುಂ ತೋತ್ತುಂ**
**ವಾದಿಯರ್ ತಂವಾಯ್‌ಪ್ಪಹಟ್ಟೈಮಾತ್ತಿನೋಮೇ ॥** 52

ಅರ್ಥ :– ಐಯಂ-ಅರ = ಸಂದೇಹವಿಲ್ಲದಂತೆ, ಅರು-ಶಮಯ-ಕರುಂಬುಂ = ಆರು ಮತಗಳ ಹಮ್ಮನ್ನು, ಅರುತ್ತೋಂ = ಅಡಗಿಸಿ ಧ್ವಂಸಮಾಡಿದೆವು. ಅಣಿ-ಅರಂಗರ್-ಅಡಿಯವರ್ಕ್ಕೇ = ಅದ್ಭುತರೂಪವಾದ ಶ್ರೀರಂಗನಾಥನ ಸೇವಕರಿಗೇನೆ, ಅಡಿಮೈ-ಶೇಯ್ದೋಂ = ಸೇವೆಗೈದೆವು. ಮೈಯ-ಕಡಲ್-ವಟ್ಟತ್ತುಳ್ = ನೀಲವಾರಿಧಿ

ಪರಿವೃತವಾದ ಭೂಮಂಡಲದಲ್ಲಿ, ಮತ್ತುಂ-ತೋತ್ತುಂ = (ಇರಬಹುದಾದ) ಇನ್ನೂ ತೋರುವ, ವಾದಿಯರ್-ತಂ = ವಾದಿಗಳ, ವಾಯ್-ಪಹಟ್ಟೈ = ಬಾಯಿಮಾತಿನ ಕೊಬ್ಬನ್ನೂ, ಮಾತ್ತಿನೋಂ = ಅಡಗಿಸಿ ನಾಶಪಡಿಸಿದೆವು. (ಆದ್ದರಿಂದ ಇನ್ನು) ವೈಯಂ-ಎಲ್ಲಾಂ = ಜಗತ್ತಿನಲ್ಲೆಲ್ಲಾ (ಇರುವ), ಇರುಳ್-ನೀಕ್ಕುಂ = (ಅಜ್ಞಾನವೆಂಬ) ಕತ್ತಲನ್ನು ಹೋಗಲಾಡಿಸುವ, ಮಣಿವಿಳಕ್ಕಾಯ್ = ರತ್ನದೀಪದಂತಾಗಿ, ಮನ್ನಿಯ = ನಿರ್ಣಯವಾಗಿ ಒಪ್ಪುವಂತಹ, ನಾನ್ಮರೈ-ಮೌಲಿ = ನಾಲ್ಕು ವೇದಗಳ ತಲೆಯಲ್ಲಿರುವ (ಉಪನಿಷತ್ತುಗಳಲ್ಲಿರುವ) ಮತಿಯೇ-ಕೊಂಡು = (ಸಾರತಮವಾದ) ಜ್ಞಾನವನ್ನೇ ಅವಲಂಬಿಸಿ, ಮೆಯ್-ಅಲದು-ವಿಳಂಬಾದ = ಸತ್ಯವಾದ ವಿಷಯವನ್ನು ಹೊರತು ಬೇರೆ ಹೇಳದಿರುವ, ವಿಯಾರ್ಶ-ಕಾಟ್ಟುಂ = ವ್ಯಾಸರು (ಬ್ರಹ್ಮ ಸೂತ್ರಗಳ ಮೂಲಕ) ತೋರಿಸುವ, ವಿಲಕ್ಕು-ಇಲ್ಲಾ = (ವೇದ) ವಿರೋಧವಿಲ್ಲದ, ನಲ್-ವಳಿಯೇ = ಸನ್ಮಾರ್ಗದಲ್ಲಿಯೇ, ವಿರೈಂದು = (ಒಲಿದು) ವೇಗವಾಗಿ, ಶೆಲ್ವೀರ್ = ಸೇರುವವರಾಗಿ.

ತಾತ್ಪರ್ಯ :- ನಿಸ್ಸಂದೇಹವಾಗಿ ವಿರೋಧಮತಗಳನ್ನೆಲ್ಲಾ ಖಂಡಿಸಲಾಯಿತು. ಶ್ರೀ ರಂಗನಾಥನ ಪಾದಸೇವಾರಸಿಕರ ಸೇವೆಯನ್ನೇ ಮಾಡಲಾಯಿತು. ಸಾಗರಪರಿವೃತವಾದ ಈ ಧರಾತಲದಲ್ಲಿ ಕಾಣಿಸಿಕೊಂಡ ಪ್ರತಿವಾದಿಗಳ ಕೊಬ್ಬನ್ನಡಗಿಸಲಾಯಿತು. ವೇದಾಂತಗಳು ಜಗತ್ತಿನ ಅಜ್ಞಾನಾಂಧಕಾರವನ್ನು ನೀಗುವ ರತ್ನದೀಪಗಳಾಗಿವೆ. ಅವುಗಳ ಸಾರಾಂಶಗಳನ್ನೇ ಅಳವಡಿಸಿಕೊಂಡು, ಬ್ರಹ್ಮಸೂತ್ರಾದಿಗಳನ್ನು ಮಾಡಿದವರು ಶ್ರೀ ವೇದವ್ಯಾಸರು. ಅವರು ಸತ್ಯಾಂಶಗಳನ್ನು ಹೇಳಿರುವರು. ಅಸತ್ಯಾಂಶದ ಸೊಲ್ಲೇ ಅವರ ಮಾತಿನಲ್ಲಿಲ್ಲ. ಅಂತಹ ವ್ಯಾಸಮುನಿಗಳು ತೋರಿದ ಒಳ್ಳೆಯ ಮಾರ್ಗದಲ್ಲಿಯೇ ಅತ್ಯಾದರದಿಂದ ಎಲ್ಲರೂ ನಡೆಯುವವರಾಗಬೇಕು. ಅವರು ಹೇಳಿರುವ ಭಕ್ತಿ-ಪ್ರಪತ್ತಿಗಳಲ್ಲಿ ಭಕ್ತ್ಯುಪಾಯವು ಕೆಲವರಿಗೇ ಸಾಧ್ಯ ಮತ್ತು ವಿಲಂಬವಾಗಿ ಫಲಕೊಡತಕ್ಕುದು. ಪ್ರಪತ್ತ್ಯುಪಾಯವಾದರೋ ಎಲ್ಲರಿಗೂ ಅನುಕೂಲವಾಗಿರುವುದು ಮತ್ತು ಶೀಘ್ರಫಲಕಾರಿಯಾದುದು. ಆದುದರಿಂದ ಇದನ್ನೇ ಅನುಷ್ಠಿಸಿ ಸದ್ಯಫಲವನ್ನು ಪಡೆಯಿರಿ. ಈ ಭಾವವನ್ನು ''ವಿರಿಕ್ಕಿಲ್ಲಾ'' ''ವಿರೈಂದು'' ಎಂಬ ಪ್ರಯೋಗಗಳು ಸೂಚಿಸುವುವು.

**लोके सर्वत्र गाढं तिमिरमपनुदन्तो महारत्नदीपाः ।**
**भूत्वा स्थेयांस एव श्रुतियुगयुगळीमौळयो हीति वेत्ता ।।**
**व्यासो वाण्या ऋताया ऋत इतरगिरः क्वापि जात्वप्यवक्ता ।**
**साध्वीं तद्दर्शितां तां विहतिविरहितां वर्तनीं प्राप्नुथाशु ।।** १

प्राभाङ्क्ष्मा संशयं तां प्रबलितसमायानां च षण्णामहन्तां ।
रम्यश्रीरङ्गनाथप्रियविनतनृणा मेव सेवा मकार्ष्म ।।
नीलाम्बुध्यावृतायां भुवि पुन रसतां वादिनां व्यर्थवाचां ।
सर्वत्राडम्बरं तं तमपि निरवशेषं निराकुर्म, सत्यम् ।। ५२

ಮೂಲ : ಕೋದವಮೊನ್ರಿಲ್ಲಾದ ತಹವೇ ಕೊಂಡ
ಕೊಂಡಲೆನವಂದುಲಹಿಲ್ಐವರ್ಕನ್ರೋರ್,
ತೂದುವನಾಯೊರುಕೋಟಿಮರ್ರೈಹಳೆಲ್ಲಾಂ
ತೊಡರ್ನ್ದೋಡತ್ತನಿಯೋಡಿತ್ತುಯರಂತೀರ್ತ,
ಮಾದವನಾರ್ವಡಕೊಂಗಿಲ್ ವಾನಿಯಾತ್ತಿನ್
ವಣ್ಣಿಕ್ಕೈ ನನ್ನಡಂಕಂಡು ಮಹಿಳ್ನ್ದುವಾಳುಂ,
ಪೋದಿವ್ವೈನಾಂ ಪೊನ್ನಯಿಂದೈನಗರಿಲ್ ಮುನ್ನಾಳ್
ಪುಣರಾದ ಪರಮತಪ್ಪೋರ್ ಪೂರಿತ್ತೋಮೇ ॥ 53

**ಅರ್ಥ** :- ಕೋದು-ಅವಂ-ಒನ್ರು-ಇಲ್ಲಾದ = ದೋಷಗಳೂ ಕೇಡುಗಳೂಯಾವುವೂ ಇಲ್ಲದ, ತಹವೇ-ಕೊಂಡ = ಕರುಣೆ (ಎಂಬ ನೀರನ್ನೇ)ಯನ್ನೇ ಅವಲಂಬಿಸಿದ, ಕೊಂಡಲ್-ಎನ = ಮೇಘದಂತೆ, ಉಲಹಿಲ್-ವಂದು = ಈ ಲೋಕದಲ್ಲಿ ಅವತರಿಸಿ, ಅನ್ರು = ಆ ಕಾಲದಲ್ಲಿ, ಐವರ್ಕು = ಪಂಚಪಾಂಡವರಿಗೆ, ಓರ್-ತೂದುವನಾಯ್ = ಅಸಾಧಾರಣ ದೂತನಾಗಿ, ಒರು-ಕೋಟಿ-ಮರ್ರೈಹಳ್-ಎಲ್ಲಾಂ = ಅಸದೃಶವಾದ ಕೋಟಿಗಟ್ಟಲೆ ವೇದವಚನಗಳು, ತೊಡನ್ರ್ದು-ಓಡ = (ತನ್ನನ್ನು ಹೊಗಳಲು) ಹಿಂಬಾಲಿಸಿ ಬರಲು, ತನಿ-ಓಡಿ = (ಅವುಗಳಿಗೆ ಸಿಕ್ಕದೆ) ತಾನೇ ಅನನ್ಯಸಾಮಾನ್ಯನಾಗಿ ಬಂದವತರಿಸಿ, ತುಯರ್-ತೀರ್ತ = (ಜಗತ್ತಿನ) ದುಃಖವನ್ನು ಹೋಗಲಾಡಿಸಿದ, ಮಾದವನಾರ್ = ಶ್ರೀ ಮಹಾವಿಷ್ಣುವು, ಪೊನ್-ಅಯಿಂದೈ-ನಗರಿಲ್ = ಬಲು ಅಂದವಾದ ತಿರುವಹೀಂದ್ರಪುರದಲ್ಲಿ (ದೇವನಾಯಕನಾಗಿ ಅವತರಿಸಿ) ವಡ-ಕೊಂಗಿಲ್ = ಉತ್ತರದ ಕಡೆ, ವಾನಿ-ಆತ್ತಿನ್ = ಹರಿಯುವ ಗರುಡನದಿಯಲ್ಲಿ, ವಣ್ಣಿಕ್ಕೈ = ಹೊಗಳಿಸಿಕೊಳ್ಳುವಂತಹ, ನಲ್-ನಟಂ-ಕಂಡು = ಅತ್ಯುತ್ತಮವಾದ ನರ್ತನವನ್ನು ನೋಡಿ, ಮಹಿಳ್ನ್ದು = ಸಂತೋಷದಿಂದ, ವಾಳುಂ-ಪೋದು = ಬಿಜಯಮಾಡಿಸಿದ ಸಮಯದಲ್ಲಿ, ಮುನ್ನಾಳ್-ಪುರಾಣದ = ಅಲ್ಲಿಯವರೆಗೆ ಮಾಡಲಾಗಿದ್ದ, ಇವ್ವೈ-ಪರ-ಮತ-ಪ್ಪೋರ್ = ಈ ಪರಮತ ಭಂಗದ ಹೋರಾಟದ ವಿಜಯದ ಸೂಕ್ತಿಯನ್ನು, ನಾಂ-ಪೂರಿತ್ತೋಂ = ನಾವು ಪೂರೈಸಿದೆವು.

ತಾತ್ಪರ್ಯ :- ಭಗವಂತನೆಂಬ ಕಾಳಮೇಘವು ಯಾವ ದೋಷವೂ ಇಲ್ಲದಿರುವ ಕರುಣೆಯೆಂಬ ನೀರನ್ನು ತುಂಬಿಕೊಂಡು ಅದನ್ನು ನಮ್ಮ ಮೇಲೆ ಸುರಿಸಲು ಈ ಲೋಕದಲ್ಲವತರಿಸಿತು. ಅಂತಹ ಪರಮಪುರುಷನನ್ನು ಪೂರ್ಣವಾಗಿ ಅರಿತುಕೊಳ್ಳಲಾರದೆ, ವೇದವಾಕ್ಯಗಳು ಸ್ತುತಿಸಿ, ಹಿಂದಕ್ಕೆ ಸರಿದಿವೆ. ಅಂತಹ ಪಾವನವೇದಗಳಿಗೇ ನಿಲುಕದ ಆ ದೇವನು ಪಾಂಡವರಿಗೆ ದೂತನಾಗಿ ಓಡಿ ಬಂದು, ಲೋಕದ ಸಂಕಟವನ್ನೇ ನಿವಾರಿಸಿದನು.

ತಿರುವಹೀಂದ್ರಪುರದಲ್ಲಿ ಶ್ರೀಕೃಷ್ಣನೇ ದೇವನಾಯಕನಾಗಿ ಅವತರಿಸಿ, ಉತ್ತರದಲ್ಲಿ ಹರಿಯುವ ಗರುಡನದಿಯ ಅಲೆಗಳು ಉಯ್ಯಾಲೆಯಂತೆ ಚಲಿಸುತ್ತಿರುವುದನ್ನು ನೋಡಿ, ಸಂತೋಷಿಸಿ ಬಿಜಯಮಾಡುವುದನ್ನು ಕಣ್ಣಾರ ನೋಡಿ ಆನಂದಿಸಿ ನಾನು ನಮ್ಮ ಶ್ರೀಭಾಷ್ಯಕಾರರು ಶ್ರೀಭಾಷ್ಯಾದಿಗಳಲ್ಲಿ ಪರಮತಗಳಲ್ಲಿನ ಅನೇಕ ಅಂಶಗಳನ್ನು ಖಂಡಿಸಿದ್ದರೂ, ಅಲ್ಲಿ ಬಿಟ್ಟುಹೋದ ಮತ್ತು ಹೆಚ್ಚು ಆಕ್ಷೇಪಕ್ಕೆ ಗುರಿಯಾಗುವ ಅಂಶಗಳನ್ನು ಈಗ ಇಲ್ಲಿ ಖಂಡಿಸಿ, ಈ ''ಪರಮತಭಂಗ''ವನ್ನು ಸಮಾಪ್ತಿಗೊಳಿಸಿರುವೆನು.

**निर्धूतासारदोषां विधरति करुणामेव मेघोपमाने ।**
**आयात्योर्व्यां कदाचिन्निरुपमकृतिमत्यत्र पाण्ड्वात्मजानाम् ॥**
**दूतेऽनन्ये च कोटिश्रुतिषु समनुयातीष्वपि स्वं रमेशे ।**
**ताभ्यो दूरेऽघहर्तर्यथ रुचिरमहाहीन्द्रपुर्यां मुदेत्य ॥ १**

**सव्ये तस्याः प्रदेशे प्रविमलजलवत्या वहन्त्या श्च नद्याः ।**
**ताक्ष्याख्याया मनोहार्यतिशयनटनं वर्णनीयं विलोक्य ॥**
**काले सम्मोदमाने सति च विरचितां प्रागनुक्तां च सूक्तिं ।**
**ख्यातामेतां समापूरय मिह परराद्धान्तभङ्गाभिधानम् ॥ ५३**

ಮೂಲ : ತಿಕಿರಿಮಳುವುಯರ್‌ಕುಂತಂ ತಂಡಂಕುಶಂಪೊರಿ
ಶಿದರುಶತಮುಕವಂಗಿವಾಳ್ ವೇಲಮರ್‌ನ್ದದುಂ
ತೆಳಿಪಣೆಲಶಿಲೈಕಣ್ಣಿಶೀರಂಗಶೆವ್ವಿಡಿ
ಚ್ಚೆಳಿಯಗದೈ ಮುಶಲಂತಿರಿಶೂಲಂತಿಹಳ್‌ನ್ದದುಂ
ಅಕಿಲವುಲಹುಗಳ್‌ಗಂಟ್ಬೆಯಾಯೋರಲಂಗಲಿಲ್
ಅಡ್ಬೆಯವಡ್ಬೆವಿಲಿಲಂಗವಾಶಿನ್ರಿನ್ರದುಂ
ಅಡಿಯುಮರುಕಣ್ಣೆಯುಮರವಾಮೆನ್ನನಿನ್ರಡಿ

ಯಡ್ಡೈಯುಮಡಿಯರ್ೖೆಯನ್ಬಿನಾಲಂಜಲೆನ್ಬದುಂ,
ಮಕಿಳುಮಮರರ್ ಗಣಂಗಳ್ ವಾನಂಕವರ್ನ್ದಿಡ
ಮಲಿಯುಮಶುರರ್ಪುಣರ್ತ್ತಮಾಯಂತುರನ್ದದುಂ
ವಳರುಮಣಿಮಣಿಮಿನ್ನವಾನನ್ದಿಕೊಂಡಿಡ
ಮರ್ೖೆಮುರ್ೖೆಮುರ್ೖೆವಣಂಗಮಾರಿನ್ರಿವೆನ್ರದುಂ,
ಶಿಕಿಯಿರವಿಮದಿಯಮುಮಿಳ್ತೇಶುಂದವೆಣ್ದಿಶೈ
ತಿಣಿಮರುಳ್ಶೆಹವುಹನ್ದುಶೇಮಂಗಳ್ಶೆಯ್ದದುಂ
ತಿಹಳರವಣೈಯರಂಗರ್ತೇಶೆನ್ನಮನ್ನಿಯ
ತಿರಿಶುದರಿಶನರ್ಶೆಯ್ಯವೀರ್ ಎಣ್ಬುಯಂಗಳೇ ॥ 54

**ಅರ್ಥ :–** ತಿಕಿರಿ = ಚಕ್ರವೂ, ಮಳು = ಕೊಡಲಿಯೂ, ಉಯರ್ = ಉತ್ಕೃಷ್ಟವಾದ, ಕುಂತಂ = ಕುಂತವೂ (ಈಟಿ), ತಂಡ್ = ದಂಡವೂ, ಅಂಕುಶಂ = ಅಂಕುಶವೂ, ಪೊರಿ-ಶಿದರು-ಶತ-ಮುಕ -ಅಂಗಿ = ಕಿಡಿಗಳನ್ನು ಸುರಿಸುವ ನೂರು ಮುಖವಾದ ಅಗ್ನಿಯೂ, ವಾಳ್ = ಕತ್ತಿಯೂ, ವೇಲ್ = ವೇಲಾಯುಧವೂ, (ಇವು) ಅಮರ್ನ್ದದುಂ = ಬಲು ಒಪ್ಪಿಗೆಯಾಗಿರುವ ಸನ್ನಿವೇಶವುಳ್ಳವೂ,

ತೆಳಿ-ಪಣಿಲಂ = ಬೆಳಗುವ ಶಂಖವೂ, ಶಿಲೈ = ಬಿಲ್ಲೊ, ಕಣ್ಣಿ = ಹಗ್ಗವೂ, ಶೀರಂಗಂ = ನೇಗಿಲೂ, ಶೆವ್ವಿಡಿ = ಕೆಂಪಾದ ವಜ್ರಾಯುಧವೂ, ಶೆಳಿಯ-ಗದೈ = ಉಬ್ಬಿರುವ ಗದೆಯೂ, ಮುಶಲಂ = ಒಲಕೆಯೂ, ತಿಶೂಲಂ = ತ್ರಿಶೂಲವೂ, ತಿಹಳ್ನ್ದದುಂ = ಪ್ರಕಾಶಿಸುವುವೂ.

ಅಕಿಲ-ಉಲಹುಹಳ್ = ಸಕಲ ಲೋಕಗಳೂ, ಓರ್-ಅಲಂಗಲಿಲ್ = ಒಂದು ಮಾಲಿಕೆಯಲ್ಲಿ, ಗಂಟೈಯಾಯ್ = ಕಿರುಗಂಟೆಗಳಾಗಿ, ಅಡೈಯ = ಎಲ್ಲವೂ, ಅಡೈವಿಲ್ = ಸಾಲಾಗಿ (ಕ್ರಮವಾಗಿ) ಇಲಂಗ = ಬೆಳಗುವಂತೆ, ಆಶು-ಇನ್ರಿ = ದೋಷವಿಲ್ಲದೆ, ನಿನ್ರದುಂ = ಇರುವ, ಅಡಿಯುಂ-ಅರುಕಣೈಯುಂ ಆಂ = ಪಾದುಕೆಯೂ ಮತ್ತು ಒರಗು ದಿಂಬೂ ಆಗಿರುವ, ಅರವು-ಎನ್ನ-ನಿನ್ರು = ಆದಿಶೇಷನಂತೆ ಇರುತ್ತಾ, ಅಡಿ-ಅಡೈಯುಂ-ಅಡಿಯರ್ೖೆ = ಶರಣಾಗತರಾದ ಭಾಗವತರನ್ನೂ, ಅನ್ಬಿನಾಲ್ = ಪ್ರೀತಿಯಿಂದ, ಅಂಜಲ್-ಎನ್ಬದುಂ = ಅಂಜಬಾರದೆಂದು ಅಭಯವನ್ನು ನೀಡುವುವೂ,

ಮಹಿಳುಂ-ಅಮರರ್-ಗಣಂಗಳ್ = ಅತಿ ಸಂತೋಷವುಳ್ಳ ದೇವತೆಗಳ ಸಮೂಹಗಳ, ವಾನಂ-ಕವರ್ನ್ದಿಡ = ಸ್ವರ್ಗವನ್ನು ಸೂರೆಮಾಡಲು, ಮಲಿಯುಂ-

ಅಶುರರ್-ಪುಣರ್ತ = ರಾಕ್ಷಸರು ಒಂದಾಗಿ ಸೇರಿ ಗುಂಪುಗುಂಪಾಗಿ ಬಂದು ಮಾಡಿದ, ಮಾಯಂ-ತುರಂದದುಂ = ಮಾಯಾಚೇಷ್ಟೆಗಳನ್ನು ಅಳಿಸಿದುವೂ,

ವಳರುಂ-ಅಣಿ = ತುಂಬಿರುವ ಒಡವೆಗಳಲ್ಲಿರುವ, ಮಣಿ-ಮಿನ್ನ = ರತ್ನಗಳು ಹೊಳೆಯುತ್ತಿರಲು, (ಅದರಿಂದ) ವಾನ್-ಅಂದಿ-ಕೊಂಡಿಡ = ಆಕಾಶವೆಲ್ಲ ಕೆಂಪೇರಿದಂತಾಗಿರಲು, ಮರ್ೖ-ಮುರ್ೖ-ವಣಂಗ = ವೇದಗಳು ವಿಧವಿಧವಾಗಿ ಸ್ತುತಿಸಿ, ಪ್ರಣಮಿಸಿ ಇರಲು, ಮಾರು-ಇನ್ರಿ-ವೆನ್ರದುಂ = ಶತ್ರುಗಳನ್ನು ನಿಶ್ಶೇಷವಾಗಿ ಸೋಲಿಸಿ ಜಯಿಸಿದುವೂ,

ಶಿಕಿ = ಅಗ್ನಿಯನ್ನೂ, ಇರವಿ = ಸೂರ್ಯನನ್ನೂ, ಮದಿಯುಂ = ಚಂದ್ರನನ್ನೂ, ಉಮಿಳ್-ತೇಶು-ಉಂದ = ಕುಕ್ಕುವಂತಿರುವ ತೇಜಸ್ಸನ್ನು ಬೀರುವುದರಿಂದ, ಎಣ್-ದಿಶೈ = ಎಂಟುದಿಕ್ಕುಗಳಲ್ಲೂ (ಎಲ್ಲೆಡೆಯೂ) ತಿಣಿ-ಮರುಳ್-ಶೆಹ-ಉಹನ್ದು = ಕವಿದಿರುವ ಅಜ್ಞಾನವೆಂಬ ಇರುಳನ್ನು ಅಳಿಸಲು ಮನಸ್ಸುಮಾಡಿ, ಶೇಮಂಗಳ್-ಶೆಯ್ದದುಂ = (ಲೋಕಕ್ಕೆ) ಕ್ಷೇಮವನ್ನುಂಟುಮಾಡಿದುವೂ,

ತಿಹಳ್-ಅರವು-ಅಣೈ = ಪ್ರಕಾಶಿಸುವ ಆದಿಶೇಷನೆಂಬ ಹಾಸಿಗೆಯ ಮೇಲೆ ಪವಡಿಸಿರುವ, ಅರಂಗರ್ = ಶ್ರೀರಂಗನಾಥನ, ತೇಶು-ಎನ್ನ-ಮನ್ನಿಯ = ತೇಜಸ್ಸೇ ಆಕಾರವೆತ್ತಿ ಬಂದಂತೆ ಸ್ಥಿರವಾಗಿರುವ, ತಿರಿ-ಶುದರಿಶಿನರ್ = ತಿರುಗುವ ಸುದರ್ಶನನೆಂಬ ಚಕ್ರದೇವನ, ಶೆಯ್ಯ-ಈರ್-ಎಣ್-ಬುಯಂಗಳ್ = ಕೆಂಪಿಡಿದ 16 ಭುಜಗಳು.

ತಾತ್ಪರ್ಯ :- ಈ ಗ್ರಂಥದ ಆರಂಭದಲ್ಲೂ ''ಶ್ರೀಸುದರ್ಶನದೇವ''ನನ್ನೇ ಮಂಗಳಶ್ಲೋಕದಲ್ಲಿ ಸ್ತೋತ್ರಮಾಡಿರುವರು. ಪರಿಸಮಾಪ್ತಿ ಮಾಡುವಾಗಲೂ, ಆ ಸುದರ್ಶನ ಭಗವಾನನ್ನೇ ಸ್ತುತಿಸುತ್ತಾ, ಆ ದೇವನ 16 ಭುಜಗಳ ಹಿರಿಮೆ-ಮಹಿಮೆಗಳನ್ನು 16 ಪಾದಗಳುಳ್ಳ ಒಂದು ಪಾಶುರದಲ್ಲಿ ಕೊಂಡಾಡುವರು.

ಆಯುಧ ಸಾರ್ವಭೌಮನೆನಿಸಿದ ಈ ಸುದರ್ಶನವು ಫಣಿಪತಿಶಾಯಿಯಾದ ಶ್ರೀರಂಗನಾಥನ ತೇಜಸ್ಸೇ ಮೂರ್ತಿಗೊಂಡಂತೆ ಕಂಗೊಳಿಸುವುದು. ಈ ಚಕ್ರದೇವನ 16 ಕೈಗಳಲ್ಲಿ ಇಡೀ ಲೋಕಗಳೆಲ್ಲವೂ ಮಾಲಿಕೆಯಲ್ಲಿ ಗಂಟೆಗಳು ಕ್ರಮವಾಗಿರುವಂತೆ ಸೇರಿಕೊಂಡು ಸುರಕ್ಷಿತವಾಗಿವೆ. ಆ ಕೈಗಳು ಆದಿಶೇಷನಂತೆ ಪರಮಾತ್ಮನ ನಿತ್ಯಸೇವೆಯನ್ನು ಮಾಡಲು ತುಂಬ ಆಸೆಪಟ್ಟು, ಶರಣುಬಂದ ಭಾಗವೋತ್ತಮರಿಗೆ ಕರುಣಿಸಿ, ಅಭಯವನ್ನು ನೀಡುತ್ತವೆ. ದೇವತೆಗಳ ಐಶ್ವರ್ಯವನ್ನು ಲೂಟಿಮಾಡುವುದಕ್ಕೆ ಬಂದ ಅಸುರರನ್ನು ನಾಶಗೊಳಿಸುತ್ತವೆ. ವೇದ ವಿರೋಧಿಗಳನ್ನು ಧ್ವಂಸಮಾಡುತ್ತವೆ. ತಮ್ಮ ತೇಜಸ್ಸಿನಿಂದ ಲೋಕದಲ್ಲಿ ಕವಿದಿರುವ ಅಜ್ಞಾನಾಂಧಕಾರವನ್ನು ಹೋಗಲಾಡಿಸಿ, ಕ್ಷೇಮವನ್ನುಂಟು ಮಾಡುತ್ತವೆ. ಹೀಗಿರುವಾಗ ಅದರ ಹಿರಿಮೆ ಮಹಿಮೆಗಳನ್ನು ವರ್ಣಿಸುವ ಬಗೆಯೆಂತು ?

चक्रं कुन्तं प्रशस्तं परशु मपि सृणिं दण्ड मुद्यत्स्फुलिङ्गं ।
शोचिष्केशं शतास्यं क्रमश इह कृपाणं च वेलां दधानाः ।।
शङ्खं शब्दायमानं धनु रनुपमितं पाश मन्यादृशं च ।
सीरं शम्पां सुरक्तां मुसलमपि गदां वर्धमानां त्रिशूलम् ।। १

एतेषां ये प्रकाशास्पदमपि च जगद्रूपघण्टास्समस्ताः ।
मालायां गुम्फिता श्च व्यपगतकलुषाः संविभान्तीव येषु ।।
पादूरूपोऽथ शम्याकृति रहिकुलराड्वच्च पादाश्रयेच्छ्रून् ।
भक्तांस्तान्माबिभीतेत्यभय सविरतं प्रेमतो दर्शयंतः ।। २

बृन्दे बृन्दारकाणा मनुभवति दिवं मोदिनां लुण्टितुं तत् ।
कूटीकृत्यागतानां कपटकृतितती रक्षसां नाशयन्तः ।।
पूर्णालङ्काररत्नद्युतिमति वियतीवाप्तसन्ध्यानुरागे ।
नानारीत्या प्रसंसत्यपि निगमचये सन्नतेऽरीन् जयन्तः ।। ६

काष्टा अष्टौकृशानु रवि ममृतकरं धारयेयु र्यथा वा ।
गाढाज्ञानं प्रणाश्य प्रमद मिह तथा क्षेमसंवर्धुका स्ते ।।
रङ्गेशस्यादिशेषे शयितु रिव महोराशिरूपस्य भान्ति ।
स्थास्नो श्चक्रायुधस्यारुणरुचिरुचिरा बाहवो द्व्यष्टसंख्याः ।।

५४

।।श्रीमते निगमान्त महादेशिकाय नमः ।।

श्रीमान् वेदान्तसूरिः कविकथकघटाकेसरी ग्रन्थरत्नं ।
नव्यं भव्यं स्वकीयं किल परमतभङ्गाभिधं देवनाथे ।।
सानन्दं चार्पयत्तत्पुनरमरगिरा श्लोकायामास सार्थं ।
गोपालेनानतेन स्वपदमधुलिहाचीकरत् देशिकोक्त्या ।।

।। श्रीमते वेदान्तरामानुजमहादेशिकाय नमः ।।

## -: परमतभङ्गविषयविभागदर्शिनी :-

इत्थं परमतभङ्गे विषयविभागः प्रकल्पितो गुरुभिः ।
प्रथमं षोडशबाहोः स्तोत्रं चक्रात्मदेवनाथस्य ।। १

पूर्वाचार्यकृतोपकारनिवहस्मृत्युक्तिरुक्ता ततः ।
तत्तत्वत्रयदर्शनं परमतोन्मूलोन्मनस्त्वं तथा ।।
आपातोदितदूषणं परमतेषूक्तं च संक्षेपतः ।
चार्वाकेऽथ तथागतेऽद्वयमते जैने तथा भास्करे ।। २

व्याकृत्यां यादवीये कणभुजि चरणाक्षे च मीमांसके च ।
सांख्ये योगे च दोषान् पशुपतिविहिते प्रोच्य तान् खण्डयित्वा ।।
माहात्म्यं पाञ्चरात्रागमगतमपि च न्यासविद्यास्वरूपम् ।
श्रेष्ठ्यं चोद्गीर्य तस्या स्त्वतिशयितफलप्राप्तिरीतिं प्रदर्श्य ।। ६

स्वाचार्यादृतसंप्रदायसरणे रेवोत्तमत्वं परं ।
संस्थाप्यान्यमतप्रभञ्जनयुतस्वाभीष्टसंस्थापने ।।
शक्तेर्दातु रपारशक्तिवपुषः चक्राभिधानप्रभोः ।।
शक्तिं तां घृणिन श्च षोडषभुजस्योद्गाय पूर्णं व्यधात् ।। ४

| | | | | | | |
|---|---|---|---|---|---|---|
| | | | ಶ್ರೀ | | | |
| | | ಶ | ಗೋ | ಪೀ | | |
| | ಶ | ಗೋ | ಪಾ | ಲ | ಭ | |
| ಕ್ಷೇ | ಷ್ಟ | ಫ | ಲ | ದಾ | ಯ | ಕ |
| ಕ | ರು | ಣಾ | ಕ | ರ | ಮಾಂ | ಪಾ |
| | ಹಿ | ಕ | ಎ | ಲೋ | ಲ | |
| | | ಸು | ಗೀ | ರ | | |
| | | | ತ | | | |

||ಶ್ರೀಃ||

||ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ||

# ಶ್ರೀಹಸ್ತಿಗಿರಿಮಾಹಾತ್ಮ್ಯಂ

## ಅರಿಕೆ

ಕಂಚಿಯಲ್ಲಿ ವರದರಾಜನು ಬಿಜಯಮಾಡಿರುವ ಸ್ಥಳಕ್ಕೆ ಹಸ್ತಿಗಿರಿಯೆಂದು ಹೆಸರು. ಆ ಕ್ಷೇತ್ರದಲ್ಲಿ ಆಚರಿಸುವ ಕರ್ಮ, ವ್ರತಗಳೆಲ್ಲವೂ ಸತ್ಫಲವನ್ನು ಕೊಡುತ್ತವೆ. ಅರ್ಥಿಗಳಾದ ಭಕ್ತರ ಅಭೀಷ್ಟವನ್ನು ಈಡೇರಿಸಲು ಸತ್ಯವತ್ರನಾಗಿ ಭಗವಂತನಿರುವುದರಿಂದ ''ಸತ್ಯವ್ರತ ಕ್ಷೇತ್ರ''ವೆನ್ನುವರು. ಬ್ರಹ್ಮನು ಅಶ್ವಮೇಧಯಾಗ ಮಾಡಿದಾಗ ಆ ಯಾಗವೇದಿಯಲ್ಲಿ ಆವಿರ್ಭವಿಸಿ, ಜಗದ ಪುಣ್ಯದಿಂದ ಇಂದಿಗೂ ಭಗವಂತನು ಅಲ್ಲಿ ವಿರಾಜಮಾನನಾಗಿರುವನು.

ಎಲ್ಲರಿಗೂ ಹಿತತಮವಾದವಿಷಯವು ವೇದಾಂತವು. ಇದನ್ನು ಉಪಬ್ರಂಹಿಸಲು ವಿವಿಧವಾದ ಪುರಾಣಗಳು ತೋರಿಕೊಂಡುವು. ಇವುಗಳಲ್ಲಿ ಮುಖ್ಯವಾದದ್ದು ''ಬ್ರಹ್ಮಾಂಡ ಪುರಾಣ''. ಇದರಲ್ಲಿ ಈ ಕ್ಷೇತ್ರದ ಮಹಿಮೆಯು ವರ್ಣಿತವಾಗಿದೆ. ಈ ಕ್ಷೇತ್ರದ ಮಹಿಮೆಯ ಸತ್ಯವನ್ನು ನಮ್ಮ ಶ್ರೀ ದೇಶಿಕರು ತಮ್ಮದೇ ಆದ ಅನಿತರಸಾಧಾರಣ ಶೈಲಿಯಲ್ಲಿ ತಿಳಿ ತಮಿಳಿನಲ್ಲಿ ಆಯಾ ಸಂದರ್ಭಗಳಿಗೆ ತಕ್ಕ ವೃತ್ತ, ಪದಗಳಯೋಜನೆ, ರಸ, ಅಲಂಕಾರ, ಅರ್ಥಗಾಂಭೀರ್ಯ, ಅಷ್ಟೇ ಅಲ್ಲದೆ ಎಲ್ಲಕ್ಕಿಂತ ಮೇಲಾಗಿ ವೇದಾಂತ ತತ್ವಗಳು, ಎಲ್ಲವನ್ನೂ ಹೃದಯಂಗಮವಾಗಿ ವರ್ಣಿಸಿರುವರು. ಯಾಗವನ್ನು ಅವರಿವರ ಪ್ರೇರಣೆಯಿಂದ ಕೆಡಿಸಲು ನದೀರೂಪತಾಳಿ, ಬಹಳ ಕುಪಿತಳಾಗಿ, ಬರುತ್ತಿರುವ ಸರಸ್ವತಿಯನ್ನು ವರ್ಣಿಸಿರುವ ಪಾಶುರವನ್ನು ವರ್ಣಿಸಲು ಅಸದಳ. ಕೇವಲಸಹೃದಯರ ಅನುಭವಕ್ಕೇ ವೇದ್ಯವು. ಬ್ರಹ್ಮಸೂತ್ರವಾದ 4 ಅಧ್ಯಾಯ ಹಾಗೂ 16 ಪಾದಗಳ ಸಾರಾರ್ಥಗಳನ್ನು 16 ಪಾದಗಳುಳ್ಳ ಒಂದೇ ಪಾಶುರದಲ್ಲಿ ಅಳವಡಿಸಿ, ಸಂದರ್ಭಕ್ಕೆ ತಕ್ಕಂತೆ ಹೊಂದಿಸಿರುವುದು ಅನಿತರ ಸಾಮಾನ್ಯ ಪ್ರತಿಭೆಯ, ಅತ್ಯಂತ ಶ್ರೇಷ್ಠ ಕವಿತಾ ಶಕ್ತಿಯ ಸಾಕ್ಷಿಯಾಗಿರುವುದು.

ತಮಿಳು ಸೂಕ್ತಿಗಳಲ್ಲಿ ಶ್ರೀಮದಾಚಾರ್ಯರು ತಮ್ಮ ಬಿರುದಾವಳಿಗಳನ್ನು ಹೆಚ್ಚಾಗಿ ಕೊಂಡಾಡಿಕೊಂಡಿರುವುದು ಈ ಪ್ರಬಂಧದ ಕೊನೆಯಲ್ಲೇ. ಉಭಯವೇದಾಂತಗಳೂ ಮತ್ತು ತಜ್ಞರೂ ರಸಿಕರಾಗಿ ಅನಂತಕಾಲ ಆನಂದಿಸಲೆಂದು ಮಂಗಳಾಶಾಸನ ಮಾಡಿರುವರು. ಶ್ರೀಮದಾಚಾರ್ಯರು ರಹಸ್ಯಗಳನ್ನು ಹೊರಸೂಸಿರುವ ಕೃತಿಗಳು ಹಲವಾರು.

''ಅವುಗಳಲ್ಲಿ ಹಸ್ತಿಗಿರಿ ಮಾಹಾತ್ಮ್ಯ''ವೆಂಬುದೂ ಒಂದು. ಅದು ಮಣಿಪ್ರವಾಳರೂಪದಲ್ಲಿದ್ದು, ಆಯಾ ಪಾಶುರಕ್ಕೆ ತಮಗಿರುವ ಭಾವವನ್ನು ವ್ಯಾಖ್ಯಾನರೂಪದಲ್ಲೂ ಬರೆದಿರುವರು. ಅದರ ಸಂಗ್ರಹವೇ ಈ ಪ್ರಬಂಧ.

ಇದರ ರಸಾನುಭವವು ಕನ್ನಡ ಜನತೆಗೂ ಆಗಬೇಕೆಂಬ ಹೆಬ್ಬಯಕೆಯು ಈ ಸೇವೆಯಲ್ಲಿ ತೊಡಗುವಂತೆ ಮಾಡಿತು. ಸಂಪ್ರದಾಯಾಭಿಮಾನಿಗಳ ಸಹಕಾರವೂ ಕೂಡಿ ಈ ಕೃತಿರತ್ನವು ಬೆಳಕಿಗೆ ಬಂದಿತು. ರಹಸ್ಯಾರ್ಥಗಳು ಸದಸ್ಯವಾಗುತ್ತಿರುವ ಈ ಸದವಕಾಶವನ್ನು ರಸಿಕಶಿರೋಮಣಿಗಳು ಉಪಯೋಗಿಸಿಕೊಳ್ಳುವರೆಂದು ನಂಬಲಾಗಿದೆ.

ಶುಭಕೃತ್ - ಪುಷ್ಯ
1962

*ವಿದ್ವಾನ್ ಹ. ಗೋಪಾಲಾಚಾರ್ಯ*
ಮೈಸೂರು

॥ಶ್ರೀಃ॥

॥ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ॥

# ಶ್ರೀಹಸ್ತಿಗಿರಿಮಾಹಾತ್ಮ್ಯಂ

ಮೂಲ : ವಾಳಿಯರುಳಾಳರ್ ವಾಳಿಯಣಿಯತ್ತಿಗಿರಿ,
ವಾಳಿಯತಿರಾಶರ್ ವಾಶಕತ್ತೋರ್-ವಾಳಿ
ಶರಣಾಗತಿಯೆನ್ನುಂ ಶಾರ್ವುಡನ್ ಮತ್ತೊನ್ರೈ,
ಅರಣಾಹಕ್ಕೊಳ್ಳಾದಾರನ್ಬು॥ 1

ಅರ್ಥ :- ಅರುಳಾಳರ್ = ದಯಾನಿಧಿಯಾದ ವರದನು, ವಾಳಿ = ಬೆಳಗಲನುಗಾಲ. ಅಣಿ = (ಜಗತ್ತಿಗೆ) ಅಲಂಕಾರವಾದ, ಅತ್ತಿಗಿರಿ = ಹಸ್ತಿಗಿರಿಯು, ವಾಳಿ = ಬಾಳಿ ಕಂಗೊಳಿಸಲಿ, ಯತಿರಾಶರ್-ವಾಶಕತ್ತೋರ್ = ಶ್ರೀಭಾಷ್ಯಕಾರ ಶ್ರೀ ಸೂಕ್ತಿಗಳನ್ನು ಅರಿತ ಮಹಿಮರು. ವಾಳಿ = ಒಳಿದು ಬಾಳಲಿ, ಶರಣಾಗತಿ-ಎನ್ನುಂ-ಶಾರ್ವು-ಉಡನ್ = ಪ್ರಪತ್ತಿಯೆಂಬ ಉಪಾಯದೊಂದಿಗೆ, ಮತ್ತು-ಒನ್ರೈ = ಮತ್ತೊಂದನ್ನು, ಅರಣಾಹ = ಉಪಾಯವನ್ನಾಗಿ, ಕೊಳ್ಳಾದಾರ್-ಅನ್ಬು = ಕೊಳ್ಳದೆ ಇರುವ ಮಹನೀಯರ ಪ್ರೀತಿಯು, ವಾಳಿ = ನಿರಂತರಬಾಳಲಿ.

ತಾತ್ಪರ್ಯ :- ಕರುಣಾಕರನಾದ ಶ್ರೀ ವರದರಾಜನೂ, ಆ ಪರಮಾತ್ಮನು ಬಿಜಯ ಮಾಡಿರುವ ಹಸ್ತಿಗಿರಿಯೂ, ಶ್ರೀಮದ್ರಾಮಾನುಜಾಚಾರ್ಯರ ಶ್ರೀ ಸೂಕ್ತಿಗಳನ್ನು ಅರಿತು ನುರಿತಿರುವ ಸಂಪ್ರದಾಯಾಭಿಜ್ಞರೂ, ಅನಿತರ ಸಾಧಾರಣವಾಗಿರುವ ಶರಣಾಗತಿಯೆಂಬ ಉಪಾಯವೂ, ಮತ್ತು ಪ್ರಪನ್ನರಿಗೆ ಆ ಭಗವಂತನಲ್ಲಿರುವ ಪರಮ ಭಕ್ತಿಯೂ ಬಹಳಕಾಲ ಜಯಿಸಿರಲಿ, ಬಾಳಲಿ ಎಂದು ಈ ಪ್ರಬಂಧದ ಮೊದಲು ಮಂಗಳಾಶಾಸನವನ್ನು ಮಾಡಿರುವರು ನಮ್ಮ ದೇಶಿಕಮಣಿಗಳು.

जयतु वरदराजो हस्तिशैल स्स जीयात् ।
यतिपतिसुवचोभिज्ञातृवर्या जयन्तु ।।
जयतु च शरणागत्याख्यगत्या सहान्या- ।
वन मनभिगतानां धीमतां प्रीति रत्र ।। १

ಮೂಲ : ಎಣ್ದಿಶೈಯುಂ ಕಡಲೇಳುಂ ಮಲೈಹಳೇಳುಂ
ಈರೇಳುವೈಯಹಮುಂ ಪಡೈತ್ತಿಲಂಗುಂ,

ಪುಂಡರೀಕತ್ತಯನ್ ಪುಣರ್ತ್ತಪೆರಿಯವೇಳ್ವಿ
ಪುನಿತನರುಂ ಬೋಗ್ಗಿಯತ್ತೈಯುವನ್ದುವನ್ದು,
ತೊಣ್ಡೈಯೆನುಂ ಮಣ್ಡಲತ್ತಿನ್‌ನಡುವಿಲ್‌ಪಾರಿಲ್
ತೂನಿಲಮೆಯ್‌ವಿರತತ್ತಿಲ್ ತೋನ್ರಿ ನಿನ್ರ,
ಕೊಣ್ಡಲರುಳ್ ಗುಣಮೇನಾಂ ಕೂರುಹಿನ್ರೋಂ
ಕೂರ್ಮತಿಯೀರ್ ಕುರಿಪ್ಪಾಹ ಕ್ಕೊಣ್ಮಿನೀರೇ ॥ 2

ಅರ್ಥ :- ಕೂರ್-ಮತೀಯರ್ = ಸೂಕ್ಷ್ಮ ಬುದ್ಧಿಗಳೇ ! ಎಣ್-ದಿಶೈಯುಂ = 8 ದಿಕ್ಕುಗಳನ್ನೂ, ಕಡಲ್-ಏಳುಂ = 7 ಸಮುದ್ರಗಳನ್ನೂ, ಮಲೈಹಳ್-ಏಳುಂ = 7 ಕುಲಪರ್ವತಗಳನ್ನೂ, ಈರ್-ಏಳು-ವ್ವೈಯಹಮುಂ = 14 ಲೋಕಗಳನ್ನೂ, ಪಡೈತ್ತು = ಸೃಷ್ಟಿಸಿ, ಇಲಂಗುಂ = ಬೆಳಗುತ್ತಲಿರುವವನೂ, ಪುಂಡರೀಕತ್ತು-ಅಯರ್ನ್ = ನಾಭಿಕಮಲಸಂಭವನಾದ ಬ್ರಹ್ಮನು, ಪುಣರ್ತ್ತ = ನಡೆಸಿದ, ಪೆರಿಯ-ವೇಳ್ವಿ = (ಅಶ್ವಮೇಧ) ಮಹಾಯಾಗದ, ಪುನಿದ-ನರುಂ-ಬೋಗ್ಗಿಯತ್ತೈ = ಪರಿಶುದ್ಧವೂ ಪರಿಮಳವೂ ಆದ ಹವಿಸ್ಸನ್ನು, ಉವಂದು-ವಂದು = ಸಂತೋಷದಿಂದ ಬಂದು, ತೊಂಡೈ-ಎನುಂ-ತುಂಡಲತ್ತಿನ್-ನಡುವಿಲ್ = ಉಂಡೀಮಂಡಲದ ನಡುವೆ, ಪಾರಿಲ್-ತೂ-ನಿಲಂ = ಭೂಮಂಡಲದಲ್ಲೇ ಅತ್ಯಂತ ಪವಿತ್ರ ಸ್ಥಳವಾದ, ಮೆಯ್-ವಿರತತ್ತು = ಸತ್ಯವ್ರತವೆಂಬ ದಿವ್ಯ ಕ್ಷೇತ್ರದಲ್ಲಿ ತೋನ್ರಿ-ನಿನ್ರ = ಎಲ್ಲರ ಕಣ್ಣಿಗೂ ಗೋಚರನಾಗಿನಿಂತಿರುವ, (ದೇವರಾಜನ) ಕೊಂಡಲ್-ಅರುಳ್-ಗುಣಮೇ = ಮೇಘದ ಗುಣವುಳ್ಳ ಕರುಣೆಯೆಂಬ ಗುಣವನ್ನೇ, ನಾಂ = ನಾವು, ಕೂರುಹಿನ್ರೋಂ = ಸಾರಿಹೇಳಿತ್ತಿರುವೆವು. ನೀರ್ = ನೀವು, ಕುರಿಯಾಹ-ಕೊಣ್ಮಿ = (ಮೇಲೆ ಹೇಳಿರುವುದನ್ನು) ಗುರಿಯಾಗಿಟ್ಟುಕೊಂಡು ಬಿಡದೆ ಪಡೆಯಿರಿ.

ತಾತ್ಪರ್ಯ : ಭಗವಂತನ ನಾಭಿಕಮಲದಲ್ಲಿ ಅವತರಿಸಿ, ಸಕಲ ಲೋಕಗಳನ್ನೂ ಸೃಜಿಸಬಲ್ಲ ಬ್ರಹ್ಮನು ಪರಮಾತ್ಮನನ್ನು ಕುರಿತು, ಇಡೀ ಭೂಮಂಡಲದಲ್ಲೇ ಅತ್ಯಂತ ಪವಿತ್ರ ಕ್ಷೇತ್ರವೆಂದು ಪ್ರಖ್ಯಾತಿ ಪಡೆದಿರುವ ಸತ್ಯವ್ರತ ಕ್ಷೇತ್ರದಲ್ಲಿ ಅಶ್ವಮೇಧ ಮಹಾಯಾಗವನ್ನು ಮಾಡಿದನು. ಆ ಯಜ್ಞದ ಹವಿಸ್ಸನ್ನು ಸವಿಯುವ ಪರಮಪುರುಷ ವದರಾಜನು ಆ ಯಜ್ಞವೇದಿಯಲ್ಲೇ ಅವತರಿಸಿರುವನು. ಸಕಲ ಜನರೂ ಸಂದರ್ಶಿಸಿ ಹಿಗ್ಗುವಂತೆ ದಿವ್ಯರೂಪನಾಗಿ ನಿಂತಿಹನು. ಆ ದೇವರಾಜನ ಗುಣಗಳಲ್ಲಿ ಮುಖ್ಯವಾಗಿರುವ ಕರುಣೆಯನ್ನು ಕಾರ್ಮುಗಿಲಿನಂತೆ ಸಾರ್ವತ್ರಿಕವಾಗಿ ವರ್ಷಿಸುವ ಉದಾರಗುಣವುಳ್ಳದುದನ್ನು ರಸಿಕರೂ, ಭಾಗವತೋತ್ತಮರೂ ಮತ್ತು ಜ್ಞಾನಿಗಳೂ ಆದ ಪೂರ್ವಜರು ಮನತಣಿವಂತೆ ಕೊಂಡಾಡಿರುವರು. ಆ ದೇವಾಧಿ ದೇವನನ್ನು ಮನದಲ್ಲಿ ಭಾವಾತಿರೇಕವೂ ವಾಣಿಯಲ್ಲಿ

ರಾಗವೂ ಕೈಯಲ್ಲಿ ತಾಳವೂ ಇರುವ ಭರತ ಶಾಸ್ತ್ರವನ್ನು ಮೀರಿಸಿದಂತೆ ಪಾಡಿಕೊಂಡಾಡುವೆವು. ಸೂಕ್ಷ್ಮಮತಿಗಳಾದ ಭಾಗವತೋತ್ತಮರಿರಾ ! ನೀವೆಲ್ಲರೂ ಏಕಾಗ್ರಚಿತ್ತದಿಂದ ಗಮನಿಸಿ ಕೇಳುವವರಾಗಿರಿ.

1) 7 ಸಾಗರಗಳು :- ಲವಣ-ಇಕ್ಷು-ಕ್ಷೀರ-ಮಧು-ಘೃತ-ದಧಿ-ಶುದ್ಧಜಲ-
2) 7 ಪರ್ವತಗಳು :- ಮಹೇಂದ್ರ-ಮಲಯ- ಸಹ್ಯ-ಶುಕ್ತಿಮಾನ್-ರುಕ್ಷ-ವಿಂಧ್ಯ-ಪಾರಿಯಾತ್ರ-
3) 14 ಲೋಕಗಳು :- ಅತಲ-ವಿತಲ-ಸುತಲ-ಧರಾತಲ-ಮಹಾತಲ-ರಸಾತಲ-ಪಾತಾಲ-ಭೂಃ-ಭುವಃ-ಸುವಃ-ಮಹಃ- ಜನಃ-ತಪಃ-ಸತ್ಯಂ

**अष्टाशा स्सप्तवार्धीन् धरणिधरवरान् सप्त लोकान् द्विसप्ता- ।**
**प्युत्पाद्य भ्राजमान स्सलिलभवभवो यं हि चक्रेऽश्वमेधम् ।।**
**पूतं भोग्यं तदीयं सुरभि हवि रुपादातुकामो दयालुः ।**
**प्रादुर्भूतोऽतिमोदात् निखिलसुजनदृग्गोचर स्सन् विभाति ॥ १**

**तुण्डीरे मण्डलेऽस्मिन् जगति शुचितमे क्षेत्रसत्यव्रताख्ये ।**
**देवाधीशस्य तस्य त्वनवधिसुगुणेष्वेकमत्रोल्लिखामः ।। (उद्गिरामः)**
**कारुण्याख्योऽत्युदार स्स तु जलधरवत् पक्षपातानभिज्ञः ।**
**भो भो स्सूक्ष्मार्थविज्ञा ! स्सुधिय ! इह समागत्य लक्ष्यं लभध्वम् ॥ २**

**ಮೂಲ : ವಮ್ಮಿನ್ ಪುಲವೀರರುಳಾಳಪ್ಪೆರುಮಾಳೆನ್ರುಂ ಅರುಳಾಳಿ,**
**ಅಮ್ಮಾನೆನ್ರುಂತಿರುಮಹಳೈಪ್ಪೆತ್ತು ಮೆನ್ನೆಂಜಂಕೋಯಿಲ್‌ಕೊಂಡ,**
**ಪೇರರುಳಾಳರೆನ್ರುಂ ವಿಯಪ್ಪಾವಿರುದೂದುಂಬಡಿಕರೈಪುರಂಡ,**
**ಕರುಣೈಕ್ಕಡಲೈಯೆವ್ವಣ್ಣಂ ಪೇಶುವೀರಿದೆನ್ನ ಪಾಂಗೇ ॥ 3**

ಅರ್ಥ :- ಪುಲವೀರ್ = ವಿದ್ಯಾವಂತರಿರಾ ! ವಮ್ಮಿನ್ = ಬನ್ನಿ, ಅರುಳಾಳಪ್ಪೆರುಮಾಳ್-ಎನ್ರುಂ = ಕರುಣೆಯಿಂದಲೇ ಲೋಕಗಳನ್ನಾಳುವ ಪುರುಷೋತ್ತಮನೆಂದೂ, ಅರುಳ್-ಆಳಿ-ಅಮ್ಮಾನ್-ಎನ್ರುಂ = ಕರುಣೆಗೆಕಡಲೆನಿಸಿದ ಸ್ವಾಮಿಯೆಂದೂ, ತಿರು-ಮಗಳೈ-ಪೆತ್ತುಂ = ಮಹಾಲಕ್ಷ್ಮಿಯನ್ನೇದೇವಿಯನ್ನಾಗಿ ಪಡೆದುದೂ ಅಲ್ಲದೆ, ಎನ್-ನೆಂಜಂ = ನನ್ನ ಮನಸ್ಸನ್ನೂ, ಕೋಯಿಲ್‌ಕೊಂಡ = (ತನ್ನ) ವಾಸದ ನೆಲೆಯನ್ನಾಗಿ, ಮಾಡಿಕೊಂಡ, ಪೇರ್-ಅರುಳ್-ಆಳರ್-ಎನ್ರುಂ = ಪರಮ ದಯಾಳುವೆಂದೂ, ವಿಯಪ್ಪಾ = ಆಶ್ಚರ್ಯಕರವಾಗಿ, ಬಿರುದು-ಊದುಂ-ಪಡಿ

=ಬಿರುದಾವಳಿಯನ್ನೂ ಘೋಷಿಸಿರುವ, ಕರ್೯-ಪುರಂಡ-ಕರುಣೈ-ಕ್ಕಡಲೈ = ದಡವನ್ನುಮೀರಿ ಹೊರಳುವ ಕರುಣೆಗೆ ಕಡಲೆನಿಸಿದ ವರದರಾಜನನ್ನು, ಎವ್ವಣ್ಣಂ = ಯಾವರೀತಿ, ಪೇಶುವೀರ್ = ಹೊಗಳುವಿರಿ ? ಈದು = ಈರೀತಿ ಮಾಡುವುದು, ಎನ್ನ-ಪಾಂಗು = ಅದೆಂತಹ ಪರಿಪಾಕವು ?

ತಾತ್ಪರ್ಯ :- ಪರಿಪೂರ್ಣಮಹನೀಯರೇ ! ಬನ್ನಿ. ನಮ್ಮೀದೇವರಾಜನಕರುಣೆ ಎಂಬ ಗುಣವನ್ನು ಆಳ್ವಾರ್ರುಗಳೂ ಮತ್ತು ಪೂರ್ವಜರೂ ಅದ್ಭುತರೀತಿಯಲ್ಲಿ ಹಲವಾರು ಬಿರುದಾವಳಿಗಳೊಂದಿಗೆ ಪಾಡಿ ಅನುಭವಿಸಿರುವರು. ಅಂತಹ ಕರುಣೆಗೆ ಕಡಲೆನಿಸಿದ ವರದ ಮಹಿಮೆಯನ್ನು ನೀವು ಹೇಗೆ ವರ್ಣಿಸುವಿರಿ ? ಹಾಗೆ ವರ್ಣಿಸಲು ಮುಂದೆ ಬರುವುದೂ ಸಾಧಾರಣವಲ್ಲ, ಅಸಾಧ್ಯವೆಂದೇ ಹೇಳಬಹುದು. ನಮ್ಮೊಡನೆ ಬಂದು ಸೇರಿ. ನಾವೆಲ್ಲರೂ ಕೂಡಿ ಅವನ ಹಿರಿಮೆಯ ಮಹಿಮೆಯನ್ನೂ ಪಾಡಿ, ಗುಣಾನುಭವ ಮಾಡೋಣ. ಅದಕ್ಕೂ ಮನಃಪರಿಪಾಕ ಬೇಕಲ್ಲವೆ !

विद्वद्वर्या ! उपैत स्वय ममितदयो देवराट् शास्ति सर्वं ।
कारुण्याम्भोधिरीशोप्युपगतकमलो प्यात्तमश्चितवासः ।।
देवाधीशोऽनुकम्पाकर इति बिरुदै रद्भुतं कीर्त्यमानं ।
वेलातीतं दयाब्धिं कथ मिह वरदं संस्तुथेदं नु भाग्यम् ।। ३

ಮೂಲ : ಒನ್ರೇಪುಹಲೆನ್ರುಣರ್ನ್ದವರ್ ಕಾಟ್ಟತ್ತಿರುವರುಳಾಲ್
ಅನ್ರೇಯಡ್ಡೈಕ್ಕಲಂ ಕೊಂಡ ನಮ್ಮತ್ತಿಗಿರಿತ್ತಿರುಮಾಲ್
ಇನ್ರೇಯಿಶೈಯಲಿಣೈಯಡಿಶೇರ್ಪ್ಪರ್ ಇನಿಪ್ಪಿರವೋಂ,
ನನ್ರೇವರುವದೆಲ್ಲಾಂ ನಮಕ್ಕುಪ್ಪರಮೊನ್ರಿಲದೇ ॥ 4

ಅರ್ಥ :- ತಿರು-ಅರುಳಾಲ್ = ಮಹಾಲಕ್ಷ್ಮಿಯ ದಯೆಯಿಂದ, ಒನ್ರೇ = (ಶ್ರೀಮನ್ನಾರಾಯಣ) ಒಬ್ಬನೇ, ಪುಹಲ್ = ಉಪಾಯವು, ಕಾಟ್ಟ = ತೋರಿಸಲು (ಉಪದೇಶಿಸಲು) ಅನ್ರೇ = ಆಗಲೇ, ಅಡ್ಡೈಕ್ಕಲಂ-ಕೊಂಡ = ರಕ್ಷಿಸತಕ್ಕ ವಸ್ತುವಿದೆಂದು ಅಂಗೀಕರಿಸಿದ, ನಂ-ಅತ್ತಿ-ಗಿರಿ-ತಿರುಮಾಲ್ = ನಮ್ಮ ಹಸ್ತಿಗಿರಿಯ ಲಕ್ಷ್ಮೀವಲ್ಲಭನು. ಇನ್ರೇ = ಪ್ರಪತ್ತಿಯ ಮರುಗಳಿಗೆಯಲ್ಲೇ, ಇಶೈಯಿಲ್ = ಕೋರಿದರೆ, ಇಣೈ-ಅಡಿ = (ತನ್ನ) ಪಾದಗಳೆರಡನ್ನೂ, ಶೇರ್ಪ್ಪರ್ = ಸೇರುವಂತೆ ಮಾಡುವನು. ಇನಿ = ದೇಹತ್ಯಾಗ ಮಾಡಿದಮೇಲೆ, ಪಿರವೋಂ = ಮತ್ತೆ ಇಲ್ಲಿ ಜನ್ಮತಾಳುವುದಿಲ್ಲ, ವರುವದೆಲ್ಲಾಂ = ಇರುವತನಕ ಒದಗುವುದೆಲ್ಲ, ನನ್ರೇ = ಒಳ್ಳೆಯದೇ ಆಗಿರುತ್ತದೆ. ನಮಕ್ಕು = ನಮಗೆ, ಪರಂ-ಒನ್ರುಂ = ಯಾವದೊಂದೂ ಭಾರವೂ, ಇಲದೇ = ಇಲ್ಲವಷ್ಟೆ !

ತಾತ್ಪರ್ಯ :- ನಮ್ಮ ಆಚಾರ್ಯರು "ಶ್ರೀಮನ್ನಾರಾಯಣನೊಬ್ಬನೇ ಉಪಾಯವು" ಎಂದರಿತು ಅನುಭವಿಸಿ, ನಮಗೂ ಉಪದೇಶಿಸಿ, ಅವನಡಿದಾವರೆಗಳಲ್ಲಿ ನಮ್ಮನ್ನು ಒಪ್ಪಿಸಿದರು. ಸರ್ವಶರಣ್ಯನಾದ ದೇವಾಧಿರಾಜನ ನಮ್ಮ ಮೇಲಿನ ಸಹಜಕೃಪೆಯಿಂದಲೂ, ಮಹಾಲಕ್ಷ್ಮಿಯ ಸಮಾಧಾನೋಕ್ತಿಗಳಿಂದಲೂ, ನಮ್ಮನ್ನು ರಕ್ಷಿಸತಕ್ಕ ವಸ್ತುವನ್ನಾಗಿ ಕೂಡಲೇ ಅಂಗೀಕರಿಸಿರುವನು. ನಾವು ಇಂದೇ ಮುಕ್ತಿಯನ್ನು ಅಪೇಕ್ಷಿಸಿದರೂ ಅವನು ಕೊಡಲು ಕಾದಿರುವನು. ಇನ್ನು ನಮಗೆಂದಿಗೂ ಮತ್ತೆ ಜನ್ಮವಿಲ್ಲ. ಈ ಕರ್ಮಭೂಮಿಯಲ್ಲಿರುವ ತನಕ ಒದಗುವ ಸುಖವೋ ದುಃಖವೋ ಎಲ್ಲವೂ ಅನುಕೂಲವಾಗಿಯೇ ಇರುವುವು. ನಾವು ಉಜ್ಜೀವಿಸಲು ಮತ್ತೆ ಮಾಡಬೇಕಾದುದೇನೂ ಉಳಿದಿಲ್ಲ. ಆದರೂ ಇರುವವರೆಗೆ ಒಳ್ಳೆಯ ಹೊತ್ತಾಗಿ ಕಳೆದು, ಮನವನ್ನು ತಣಿಸಿ, ಶ್ರೀ ವರದರಾಜನ ಮಹಿಮೆಯನ್ನೂ ಹಿರಿಮೆಯನ್ನೂ ಕೊಂಡಾಡುವೆವು. "ಸಂತೋಷಾರ್ಥಂ ವಿಮೃಶತಿ ಮುಹುಃ" ಎಂಬಂತೆ ಪ್ರಪನ್ನನಿಗೆ ಇದಕ್ಕಿಂತ ಮತ್ತೇನಿದೆ ಆತ್ಮೋಜ್ಜೀವನಕ್ಕಾಗಿ ಎಂದು ಭಾವ.

**सिद्धोपाय स्स एवेत्यवगमयितृषु श्रीदयैकाश्रयेषु ।**
**रक्ष्यत्वेनैव गृह्णन् सपदि करिगिरिश्रीधरो न स्तदैव ।।**
**मुक्तावभ्यर्थितायां निजपदयुगळीं प्रापयत्येव, भूयः ।**
**नैवोत्पत्तिः यदाप्तं शुभकर मखिलं, नास्ति नो ह्यात्मभारः ।। ४**

**ಮೂಲ : ವಂಬವಿಳ್ ಪೋದಮರ್ ಮಾದರುಹನ್ದವಮ್ಮಾನಿದಿಯ್ಯೈ,**
**ತನ್ಬಲಮೇಕೊಂಡು ಕಾಣಕ್ಕರುದಿಯ ತಾಮರೈಯೋನ್,**
**ಮುನ್ಬಲ ಕುತ್ತತ್ತು ವಲ್ ವಿನ್ಯೆ ಮೊಯಕ್ಕ ಮುಹಿಳ್ ಮತಿಯಾಯ್**
**ಅಂಬುಲಿವೇಂಡಿಯ ಪಾಲನ್ಯೆಪ್ಪೋಲವಳುದನನೇ ॥ 5**

ಅರ್ಥ :- ವಂಬು-ಅವಿಳ್ = ಪರಿಮಳಿಸುತ್ತಾ ಅರಳಿದ. ಪೋದು-ಅಮರ್ = ಹೂವಿನಲ್ಲಿ ವಾಸಿಸುವ, ಮಾದರ್ = ಮಹಾಲಕ್ಷ್ಮಿಯ, ಉಹಂದ = ಪ್ರೀತಿಗೆ ವಶನಾದ ಅ-ಮಾ-ನಿದಿಯ್ಯೈ = ದೊಡ್ಡನಿಧಿಯಂತಿರುವ ಆ ಪರಮ ಪುರುಷನನ್ನು, ತರ್-ಫಲಮೇ-ಕೊಂಡು = ತನ್ನ ಭೋಗಫಲವನ್ನೇ ಹೊಂದಿ, ಕಾಣ-ಕರುದಿಯ- ತಾಮರೈಯೋನ್ = ಪ್ರತ್ಯಕ್ಷಮಾಡಿಕೊಳ್ಳಲು ಧ್ಯಾನಿಸಿದ ಬ್ರಹ್ಮನು. ಮುನ್-ಪಲ-ಕುತ್ತತ್ತು = ಹಿಂದಿನ ಹಲವಾರು ಅಪರಾಧಗಳಿಂದ ಸೇರಿಕೊಂಡು ಬಂದ, ವಲ್-ವಿನ್ಯೆ-ಮೊಯ್ಕ್ಕ = ಪ್ರಬಲವಾದ ಪಾಪಕರ್ಮಗಳು ಆವರಿಸಿಕೊಳ್ಳಲು, ಮುಹಿಳ್-ಮತಿಯಾಯ್ = ಮಂಕುಹಿಡಿದ ಬುದ್ಧಿಯಾಗಿ, ಅಂಬುಲಿ-ವೇಂಡಿಯ = (ಎಟುಕಿಸದ) ಚಂದ್ರನನ್ನು ಹಿಡಿದು ತರುವಂತೆ

ಆಸೆಪಟ್ಟ, ಬಾಲನ್ಪೈ-ಪೋಲ = ಎಳೆಯ ಹುಡುಗನಂತೆ. ಅಳುದನನ್ = (ಆಸೆಯು ಈಡೇರದಿದ್ದುದಕ್ಕಾಗಿ) ಅತ್ತನು.

ತಾತ್ಪರ್ಯ :- ಸಕಲ ಶುಭಗುಣನಿಧಿಯೂ, ಸರ್ವಶಕ್ತನೂ, ಸರ್ವಶರಣ್ಯನೂ, ಸಕಲೈಶ್ವರ್ಯ ಪರಿಪೂರ್ಣನೂ ಮತ್ತು ಪರಿಮಳವಾಸಿತ ತಾಮರಸವಾಸಿನಿಯಾದ ಮಹಾಲಕ್ಷ್ಮಿಯ ಪ್ರಿಯವಲ್ಲಭನೂ ಆದ ಶ್ರೀಮನ್ನಾರಾಯಣನನ್ನು ಬ್ರಹ್ಮನು ತನ್ನ ಯೋಗಫಲ ಬಲದಿಂದಲೇ ಪ್ರತ್ಯಕ್ಷಮಾಡಿಕೊಳ್ಳಲು ಯತ್ನಿಸಿದರೂ, ಅದು ಅವನ ಹಿಂದಿನ ಕರ್ಮಗಳ ಫಲವಾಗಿ ಸಫಲವಾಗದೆ ಬಹಳ ವ್ಯಸನಪಟ್ಟನು. ಮಕ್ಕಳು ಆಕಾಶದಲ್ಲಿ ಕಂಗೊಳಿಸುವ ಚಂದ್ರ ಬಿಂಬವನ್ನು ಹಿಡಿದುಕೊಳ್ಳಲು ಪ್ರಯತ್ನಿಸಿ, ಅದು ಸಾಧ್ಯವಾಗದೆ, ಅಸಾಧ್ಯವೆಂಬರಿವೂ ಇಲ್ಲದೆ ಅಳುವಂತೆ, ತುಂಬ ಅತ್ತನು. ಪರಮಪುರುಷನ ಒಲಿಮೆಯು ಅವನ ಸಂಕಲ್ಪಾಧೀನ.

**सौरभ्यालयफुल्लपद्मनिवसल्लक्ष्मीप्रियं तं महा- ।**
**निक्षेपं पुरुषोत्तमं निजबलादेवेक्षितुं पद्मजः ।।**
**नाशक्नोन्निजनैकमन्तुफलतः दुष्कर्मदोषाविलः ।**
**मोहान्धो व्यरुदच्च बाल इव तच्चन्द्राभिलाषी तदा ।।** ५

**ಮೂಲ :** ಅಡಂಗಾಕ್ಕರಣಂಗಳೈನ್ದುಡನಾರುಮಡಕ್ಕಿಮುನ್ನಂ,
ನೆಡುಂಕಾಲಮಿನ್ನಿಲಮೇನಿಲೈಯಾಪ್ಪೂಂಡು ನೀಡುರೈವಾನ್,
ಶೆಡಂಗಾರ್ ಪೆರಿಯತವಂಗಳ್ ಶೈಯ್ದೇನೆನ್ನತನ್ರೈಯಿದೆನ್ರು,
ಇಡಂಕಾತ್ತಿರುಂದದಿಶೈಮುಕನ್ ತನ್ನೈಯಿಹಳ್‌ನ್ದನನೇ ॥ 6

ಅರ್ಥ :- ಇಡಂ-ಕಾತ್ತು-ಇರುಂದ = ತಾನುಪಡೆದಿರುವ ಬ್ರಹ್ಮಪದವಿಯನ್ನು ರಕ್ಷಿಸಿಕೊಂಡಿದ್ದ, ದಿಶೈ-ಮುಕನ್ = ಬ್ರಹ್ಮನು, ನೆಡುಂ-ಕಾಲಂ = ಬಹಳಕಾಲ, ಇ-ನಿಲಮೇ = ಈ ಬ್ರಹ್ಮಲೋಕವನ್ನೇ, ನಿಲೈಯಾಯ್-ಪೂಂಡು = ನೆಲೆಯಾಗಿರುವಂತೆ ಪಡೆದು, ನೀಡು-ಉರೈವಾನ್ = ಚಿರಕಾಲಬಾಳಿ ಬೆಳಗಲು ಆಸೆಪಟ್ಟು, ಪ್ರಾರ್ಥಿಸಿ, ಮುನ್ನಂ = ಮೊದಲೇ, ಅಡಂಗಾ-ಕರಣಂಗಳ್-ಐಂದು-ಉಡನ್ = 5 ಅಡಗಿಸಲಾಗದ ಕರ್ಮೇಂದ್ರಿಯಗಳೊಂದಿಗೆ, ಆರುಂ-ಅಡಕ್ಕಿ = ಜ್ಞಾನೇಂದ್ರಿಯಗಳನ್ನೂ ಅಡಗಿಸಿ, ಶೆಡಂಗಾಲ್-ಪೆರಿಯ = (ತಪಸ್ಸಿನ) ಅಂಗಗಳಾದ ವ್ರತಗಳಿಂದ ಹಿರಿದಾದ, ತವಂಗಳ್ = ತಪಸ್ಸುಗಳನ್ನು, ಶೆಯ್ದೇನ್ = ಮಾಡಿದೆನು, ಇದು-ಎನ್ನ-ತನ್ರೈ-ಎನ್ರು = ಇದು (ತಾನುಮಾಡಿದುದು) ಎಂತಹ ಕಾರ್ಯವಾಯಿತು ? ಎಂದು, ತನ್ನೈ = ತನ್ನನ್ನೇ, ಇಹಳ್‌ನ್ದನನ್ = ಲಜ್ಜೆಗೊಂಡು ಹಳಿದುಕೊಂಡನು.

ಕಂಗೆಟ್ಟವರಿಗೆ ದೊರಕಿದ ಸ್ವಾದುಸ್ವಚ್ಛ-ಶೀತಲವಾದ ನೀರಿನ ಹೊನಲೋ ಎನ್ನುವಂತೆಯೂ, ಹಸ್ತಿಗಿರಿಯು ತಗ್ಗಿಬರುವಂತೆಯೂ, ಇಡೀ ಲೋಕದ ಹೊರಗಿನ ಕತ್ತಲು ಹೋಗಲು, ಸೂರ್ಯನಿರುವಂತೆ ಹೊರಗಿನ ಮತ್ತು ಒಳಗಿನ ಅಜ್ಞಾನಾಂಧಕಾರವನ್ನು ನೀಗಲು, ಪ್ರಜ್ವಲಿಸುವ ತೇಜಸ್ಸೋ ಎಂಬಂತೆಯೂ, ಬ್ರಹ್ಮನು ಇಷ್ಟು ಕಷ್ಟದಿಂದ ಮಾಡಿದ ಅಶ್ವಮೇಧ ಯಾಗಕ್ಕೆ ದೊರಕಿದ ಪರಮ ಫಲವೋ ಎಂಬಂತೆಯೂ, ಸಕಲ ಜೀವರಾಶಿಗಳಲ್ಲೂ ಇರುವ ಪರಮಾತ್ಮನೋ ಎಂಬಂತೆಯೂ, ಭಕ್ತಿರಸಪರವಶರಾದ ಭಾಗವತರಿಗೆ ಲಭಿಸುವ ಅಮೃತವೋ ಎಂಬಂತೆಯೂ ನಿತ್ಯಸೂರಿಗಳಿಗೆ ಪ್ರಕಾಶಿಸಿದನೆಂದು ವರ್ಣಿಸುವುವು.

दिनकरभास्वरमकुटं । व्युदितकलानिधिवदनं ।
द्विविधलसत्श्रुतियुगले । त्वभिपतनोत्सुकमकरौ ।। १

अतुलदयोन्नतिरमया । घुतमणिनायतहृदयं ।
चिदचित उद्गमदुदरं । जगदभिविक्रमचरणौ ।। २

दधदतिदुर्गमनिगमैः । वरिवसितौ करिवरदः ।
धुतकरुणाकृति रिहत । न्महिम परं त्वभिविनुमः ।। ३

मरुभुवि तज्जलसृतिवद्विनतनगोपरि नगवत् ।
अमतिविनाशकरुच्रिवत्कमलभवाभिमतफलम् ।। ४

सकलतनुष्वसव इव प्रणतनृणा मिव च सुधा ।
इति कविभिः परिपणितं द्रुहिण उदीक्ष्य च मुमुदे ।। १८

ಮೂಲ : ಚಿತ್ತಚಿತ್ತೆನವಿರಿತ್ತುರೈತ್ತನ,
ವನ್ನೈತ್ತಮ್ಮೈತ್ತುರೈಯುಮಿರೈವನಾರ್,
ಶಿರಿಯಪೆರಿಯವುರುವಡೈಯವುಡಲಮೆನ,
ನಡಲಮಿಲದಿಲಹುನಿಲೈಯಿನಾರ್,

ಚಿತ್ತಿರತ್ತೊೞಿಲ್ಲೈಯೊತ್ತಪತ್ತರೊಡು,
ಮುತ್ತರ್ ಬಿತ್ತಿಯೆನುಮುಣರ್ ವಿನಾರ್,
ಶಿದೈವಿನ್ ಮರೈನೆರಿಯಿಲೆರಿಯವುರುಮುರೈಹಳ್,
ಮುರಿಯಶಿರೈಯರಿಯನಿರೈವಿನಾರ್,

ಕತ್ತುವಿಕ್ಕವಲಹತ್ತುವಿದ್ದೈವಳಿ,
ಕತ್ತವರ್ಕ್ಕಳೈವಿಲ್ಮಾಯನಾರ್,
ಕಪಿಲರ್ಕಣಚರಣರ್ ಶುಗತರ್ ಶಮಣರರರ್,
ವಳಿಹಳಳಿಯುಮರುಳ್ಮೊಳಿಯಿನಾರ್,

ಕತ್ತಿಲಕ್ಕಿಲುಮರುಕ್ಕುಲತ್ತಿಲುಂ,
ಅಚಿತ್ತಿಲೊಕ್ಕುಮೊರುಮುದಲ್ವನಾರ್,
ಕರಣಮಿಡುಕಡಿಯಪದಿನೊರಿರುಡಿಕಮು,
ಮಡೈಯಮುಡಿಯುಮಡಿಯಿರುಡಿಯಾರ್,

ಒತ್ತನೈತ್ತುಲಹುಮೊತ್ತಿಯೊತ್ತಿವದುಂ,
ಇಬ್ಬವತ್ತಿಶ್ಯೆಯಿನಿಶ್ಯೆವಿನಾರ್,
ಉರುವಮರುವಮೆನುಮುಲಹಿಙ್ ಮುಡಹಿಲದಿಲ್,
ಉವಮ್ಯೆಯಿಲತಿಲಹುತಲೈವನಾರ್,

ಉತ್ತಮಪ್ಪಡಿವಹುತ್ತವಿದ್ದೈಹಳಿಲ್,
ಉದ್ದರಿಕ್ಕವುಣರ್ ಗುಣವನಾರ್,
ಉರಿಯಕಿರಿಶ್ಯೆಹಳಿಲರಿಯದೊರುವಿರಹು,
ತೆರಿಯವಿರ್ಯೆಯುಮವರ್ಪರಿವಿನಾರ್,

ಶತ್ತಶತ್ತೆನುಮನ್ಯೆತ್ತಣ್ಯೆತ್ತವಿನ್ಯೆ,
ತೊತ್ತರುಕ್ಕುವಲತುಣೆವಿನಾರ್,
ಶರಿಯುಮಳವಿಲುರಿಯವರ್ಯೆಯರಿವರಿಯ,
ದಮನಿನೆರಿಶೆರುಹುವಿರಹಿನಾರ್,

ತತ್ತುವತ್ತಿರಳುದ್ಯೆತ್ತುದ್ಯೆತ್ತಡ್ಯೆವು,
ತತ್ತು ವಿಕ್ಕುಮವರ್ ತಲೈವನಾರ್,
ತರುಹವುಣರುಮವರ್ಶರಣಮಡುಹವಿಡ,
ಲರಿಯವರುಳ್ವರದರಡಿಯಮೇ ॥ 19

**ಅರ್ಥ** :- ಚಿತ್-ಅಚಿತ್-ಎನ = ಜ್ಞಾನವುಳ್ಳದ್ದು-ಜ್ಞಾನವಿಲ್ಲದುದು (ಚೇತನ-ಅಚೇತನ) ಎಂದು, ವಿರಿತ್ತು-ಉರ್ರೈತ್ತನ = (ವಿಭಾಗಿಸಿ) ವಿಸ್ತಾರವಾಗಿ ಹೇಳಲ್ಪಟ್ಟಿರುವ, ಅನ್ಹೈತ್ತುಂ = ಸಮಸ್ತವನ್ನೂ, ಅಮೈತ್ತು = ಸೃಷ್ಟಿಸಿ, ಉರ್ರೈಯುಂ = (ಅವುಗಳಲ್ಲಿ ಅಂತರ್ಯಾಮಿಯಾಗಿ) ಇರುತ್ತಿರುವ, ಇರ್ರೈವನಾರ್ = ನಿಯಮಿಸುವ ಈಶ್ವರನಾದ; ಶಿರಿಯ-ಪೆರಿಯ = ಸೂಕ್ಷ್ಮವೂ ಸ್ಥೂಲವೂ ಆದ, ಉರು-ಅಡ್ಯೆಯ = ರೂಪವುಳ್ಳ ವಸ್ತುಗಳೆಲ್ಲವೂ, ಉಡಲುಂ-ಎನ = (ತನಗೆ) ಶರೀರಗಳಾಗಿರುವಂತೆ ಇದ್ದು, ನಡಲಂ-ಇಲದು = ಅವುಗಳ ದೋಷವು ಸೋಂಕದಂತೆ, ಇಲಹು-ಬೆಳಗುವ, ನಿಲ್ಯೆಯಿನಾರ್ = ಸ್ಥಿತಿಯುಳ್ಳವನಾದ; ಚಿತ್ತರ-ತೊಳಿಲ್ಯೆ = ಅಂದವಾದ ಚಿತ್ರಕೆಲಸಕ್ಕೆ, ಒತ್ತ = ಸಮಾನವಾದ, ಬತ್ತರ್-ಒಡು-ಮುತ್ತರ್ = ಬದ್ಧರಿಗೂ ಮುಕ್ತರಿಗೂ ಮತ್ತು ನಿತ್ಯರಿಗೂ, ಬತ್ತಿಯೆನುಂ = ಆಶ್ರಯವಾದ ಗೋಡೆಯಂತೆ ಸರ್ವಾಧಾರನಾಗಿ, ಉಣರ್‌ವಿನಾರ್ = ಜ್ಞಾನವುಳ್ಳವನಾದ (ಸಂಕಲ್ಪವುಳ್ಳವನಾದ); ಶಿದ್ಯೆವು-ಇಲ್ = ನಾಶವಿಲ್ಲದ, ಮರ್ರೈ-ನೆರಿಯಿಲ್ = ವೇದಮಾರ್ಗದಲ್ಲಿ, ಎರಿ = ತಳ್ಳಲ್ಪಟ್ಟ, ಅ-ಉರು-ಮುರ್ರೈಹಳ್ = ಆ ಅಚೇತನವಾದ ರೀತಿಗಳು, ಮುರಿಯ = ನಾಶವಾಗುವಂತೆ, ಶಿರ್ರೈ-ಅರಿಯ = ಸಂಕೋಚವಿಲ್ಲದ, ನಿರ್ರೈವಿನಾರ್ = ಪರಿಪೂರ್ಣಮಹಿಮೆಯವನಾದ, ಕತ್ತುವಿಕ್ಕ-ವಲ = (ಕಂಡ ಕಡೆಯೆಲ್ಲ ಇಲ್ಲದಿದ್ದರೂ ಕಾರಣ ಕಲ್ಪಿಸಲು) ಆರ್ಭಟಮಾಡಿ ಕಾರಣವನ್ನು ಕಲ್ಪಿಸಲು ಸಮರ್ಥವಾದ, ಕತ್ತುವಿದ್ವೈವಳಿ = ''ಜಲ್ಪವಾದ''ವೆಂಬ ಮಾರ್ಗವನ್ನು, ಕತ್ತುವರ್ರು = ಕಲಿತಿರುವವರಿಂದ, ಅಶ್ಯೆವು-ಇಲ್ = ಅಲುಗಿಸಲಾಗದಂತಹ, ಮಾಯಿನಾರ್ = ಅದ್ಭುತ ಮಾಯಾಶಕ್ತಿಯುಳ್ಳವನೂ ಆದ; ಕಪಿಲರ್ = ಕಪಿಲರ, ಕಣಚರಣರ್ = ಕಣಾದರ, ಶುಗತರ್ = ಬುದ್ಧರ, ಶಮಣರ್ = ಜಿನರ, ಅರರ್ = ಹರನ, ವಳಿಹಳ್ = ಮಾರ್ಗಗಳು (ಹೇಳಿದ ಸಿದ್ಧಾಂತಗಳು), ಅಳಿಯುಂ = ನಾಶಗೊಳಿಸಲು ಕಾರಣವಾದ, ಅರುಳ್ = ಕೃಪೆಯಿಂದ, ಮೊಳಿಯಿನಾರ್ = (ಪಾಂಚರಾತ್ರವನ್ನು) ತಾನೇ ಹೇಳಿದವನೂ ಆದ; ಕತ್ತು-ಇಲಕ್ಕಿಲುಂ = ಇಂದ್ರಿಯಗಳಿಗೆ ವಿಷಯವಾಗುವ 5 ಭೂತಗಳಲ್ಲೂ, ಅರು-ಕುಲತ್ತಿಲುಂ = ಜೀವರುಗಳ ಸಮೂಹದಲ್ಲಿಯೂ, ಅಚಿತ್ತಿಲ್-ಒಕ್ಕುಂ = ಅಚೇತನ ತತ್ವಗಳಲ್ಲಿ ಹೇಳಿರುವಂತೆಯೇ, ಒರು-ಮುದಲ್ವನಾರ್ = ಒಬ್ಬನೇ ಮೂಲಕಾರಣನೂ ಆದ; ಕರಣಂ-ಇಡು = ಇಂದ್ರಿಯಗಳಿಗೆ ಗೋಚರವು, ಕಡಿಯ = ಆಗದಿರುವ, ಪದಿನೊರು-ಇರುಡಿಕಮುಂ = ಹನ್ನೊಂದು ಇಂದ್ರಿಯಗಳು, ಅಡ್ಯೆಯ = ಎಲ್ಲವೂ, ಮುಡಿಯುಂ-ಅಡಿ = ನಶಿಸಿಹೋಗುವ ಕಾಲದಲ್ಲಿ (ಆದಿಕಾಲದಲ್ಲಿ) ಇರುಡಿಯಾರ್ = ಋಷಿಗಳಂತೆ ಇಂದ್ರಿಯಾಪೇಕ್ಷೆಯಿಲ್ಲದೆಯೇ ಎಲ್ಲವನ್ನು ತಿಳಿಯುವವನಾದ; ಒತ್ತು = ಸರ್ವದಾ ಒಂದೇ ಸಮನಾಗಿರುತ್ತಾ, ಅನ್ಹೈತ್ತು-ಉಲಹುಂ = ಸಮಸ್ತಜೀವರಾಶಿಗಳನ್ನೂ, ಒತ್ತಿ-ಒತ್ತಿ-ವರುಂ = ಕ್ರಮಕ್ರಮವಾಗಿ ಬಿಡದೆ ಆಕ್ರಮಿಸಿಕೊಂಡು ಬರುವ, ಇ-ಬವತ್ತು =

ಈ ಸಂಸಾರವನ್ನು ನಡೆಸುವಂತೆ, ಇಶೈಯುಂ = ಅಂಗೀಕರಿಸುವ, ಇಶೈವಿನಾರ್ = ಸಂಕಲ್ಪವುಳ್ಳವನೂ ಆದ, ಉರುವಂಅರುವಂ-ಎನ = ರೂಪವುಳ್ಳ ಮತ್ತು ರೂಪವಿಲ್ಲದ, ಉಲಹಿನ್ = ಲೋಕದಲ್ಲಿ, ಮುಡುಹು-ಇಲದಿಲ್ = ದೋಷವಿಲ್ಲವೆನ್ನುವುದರಲ್ಲಿ, ಉವಮೈ ಇಲದ್= ಉಪಮಾನವಿಲ್ಲದೆ, ಇಲಹು = ಪ್ರಕಾಶಿಸುವ, ತಲೈವನಾರ್ = ಪ್ರಧಾನನಾಗಿಯೂ ಇರುವ; ಉತ್ತಮು-ಪಡಿ = ಉತ್ತಮರೀತಿಯಾಗಿ, ವಹುತ್ತ-ವಿದ್ದೈಹಳಿಲ್ = ವಿಭಜಿಸಿದ (ಭಕ್ತಿಯೋಗಾದಿಗಳಲ್ಲಿ) ವಿದ್ಯೆಗಳಲ್ಲಿ, ಉದ್ಧರಿಕ್ಕ = ಸಂಸಾರ ಸಾಗರದಿಂದ ಉದ್ಧರಿಸಲು, ಉಣರ್ = ಅನುಸಂಧಾನ ಮಾಡಲರ್ಹನಾದ, ಗುಣವನಾರ್ = ಗುಣಗಳನ್ನು ಪಡೆದಿರುವವನಾದ, ಉರಿಯ-ಕಿರಿಶೈಹಳಿಲ್ = (ಭಕ್ತಿಗೆ) ಬೇಕಾದ (ತಕ್ಕ) ವರ್ಣಾಶ್ರಮ ವಿಹಿತ ಕರ್ಮಗಳಲ್ಲಿ, ಅರಿಯದು = ಮಾಡಲಾಗದಂತಹ, ಒರು-ವಿರಹು = ಒಂದುಪಾಯವನ್ನು (ಸಾತ್ವಿಕತ್ಯಾಗ), ತೆರಿಯ = ತಿಳಿದುಕ್ಕೊಳ್ಳುವುದಕ್ಕೆ, ವಿರೈಯುಮವರ್ = ಆತುರಪಡುವವರಲ್ಲಿ, ಪರಿವಿನಾರ್ = ಬಲುಪ್ರೇಮವಿರುವವನಾದ; ಶತ್ತು-ಅಶತ್ತು-ಎನುಂ = ಸತ್ವಂ ಅಸತ್ವವೆಂಬ (ಪುಣ್ಯಪಾಪವೆಂಬ) ಅಣೈತ್ತ= ಜೀವಾತ್ಮರನ್ನು ಆವರಿಸಿಕೊಂಡಿರುವ, ಅನ್ನೆತ್ತು-ವಿನ್ನೆ = ಸಮಸ್ತಪಾಪಗಳ, ತೊತ್ತು = ಸಂಬಂಧವನ್ನು, ಅರುಕ್ಕ-ವಲ = ನಿರ್ಮೂಲಗೊಳಿಸಬಲ್ಲ, ತುಣಿವನಾರ್ = ದೃಢಸಂಕಲ್ಪವುಳ್ಳವನಾದ, ಶರಿಯುಂ-ಅಳವಿಲ್ = ಶರೀರತ್ಯಾಗಮಾಡುವ (ಅವಸಾನ) ಕಾಲದಲ್ಲಿ, ಉರಿಯವರ್ೈ = ಮುಕ್ತಿಗೆ ಅರ್ಹರಾದ ಜೀವಾತ್ಮನನ್ನು, ಅರಿವು-ಅರಿಯ = ಅರಿಯಲಾಗದಂತಿರುವ, ದಮನಿ-ನೆರಿ = ಬ್ರಹ್ಮ (ಮೂರ್ಧನ್ಯ) ನಾಡಿಯ ಮಾರ್ಗದಲ್ಲಿ, ಶೆರುಹ = ಪ್ರವೇಶಗೊಳಿಸುವ, ವಿರಹಿನಾರ್ = ಉಪಾಯವನ್ನು ತಿಳಿದು, ಹೂಡುವವನಾದ; ತತ್ತುವ-ತಿರಳ್ = (ಅಚೇತನ) ತತ್ವಗಳ ಸಮೂಹವೆಲ್ಲವನ್ನೂ, ಉದೈತ್ತು= ಕಾಲಿಂದ ಒದ್ದು ತಳ್ಳಿ, ಅಡೈವು = ಕ್ರಮವಾಗಿ, ತತ್ತುವಿಕ್ಕುಮವರ್ = (ಪ್ರಕೃತಿಮಂಡಲದಿಂದ) ಮುಂದು ಮುಂದಕ್ಕೆ ದಾಟಿಸುವ ಅತಿವಾಹಿಕರಿಗೆ, ತಲೈವನಾರ್ = ಮುಖ್ಯನೂ ಸ್ವಾಮಿಯೂ ಆದ; ತರುಹ = (ದೇವರು) ಕೊಡುವ ಫಲವನ್ನು, ಉಣರುಮವರ್ = (ಅಡಿಗಡಿಗೆಧ್ಯಾನಿಸುತ್ತಾ) ಅನುಭವಿಸುವ, (ಉಪಾಸಿಸುವ) ಜೀವಾತ್ಮರ, ಶರಣಂ-ಅಣುಹ = (ತನ್ನ) ಪಾದಗಳಲ್ಲಿ ಶರಣಾಗತರಾಗಲು, ವಿಡಲ್-ಅರಿಯ = ಬಿಡುವುದನ್ನು ಅರಿಯದಿರುವ, ಅರುಳ್-ವರದರ್ = ಕರುಣೆಯೇ ಮೂರ್ತಿಯಾಗಿರುವ ವರದ ರಾಜನ, ಅಡಿಯಂ = ದಾಸರಾಗಿರುತ್ತೇವೆ. (16 ಪದದವೃತ್ತವಿದು)

ತಾತ್ಪರ್ಯ :- 1) ಚೇತನ -ಅಚೇತನ ವಸ್ತುಗಳೆಲ್ಲವನ್ನೂ ಸೃಷ್ಟಿಸುವ, ಎಲ್ಲವನ್ನೂ ತನಗೆ ಶರೀರವಾಗಿ ಮಾಡಿಕೊಂಡಿರುವ, 2) ಸಮಸ್ತಕ್ಕೂ ತಾನು ಆಧಾರನಾಗಿ ತನಗೆ ತಾನೇ ಆಧಾರನಾಗಿರುವ, 3) ನಿರತಿಶಯಮಹಿಮನಾಗಿರುವ, 4) ''ಶ್ರೀಮನ್ನಾರಾಯಣನೇ ಪರಬ್ರಹ್ಮನು. ಅವನೇ ಜಗತ್ಕಾರಣನು.'' ಎಂಬ ಅಭಿಪ್ರಾಯಕ್ಕೆ ವಿರೋಧವಾಗಿಯೂ,

5) ದೋಷರೂಷಿತವಾಗಿಯೂ ಇರುವ ವಿಮತರ ತಾತ್ಪರ್ಯಕ್ಕೆ ಲಕ್ಷ್ಯನಾಗಿಲ್ಲದಿರುವ, 6) ಪರತತ್ವವನ್ನು ವ್ಯಕ್ತಪಡಿಸಲು ಹೊರಟು, ದಾರಿತಪ್ಪಿ, ವಿಪರೀತಾರ್ಥಗಳನ್ನು ಪ್ರಚಾರ ಪಡಿಸುವ ಇತರ ಮತಗಳನ್ನು ನಿವಾರಿಸಲು, ತಾನೇ ಪಾಂಚರಾತ್ರ ಶಾಸ್ತ್ರವನ್ನು ಪ್ರಕಟಿಸಿ, ಅದರಂತೆ ನಡೆಯುವ ತನ್ನ ಭಕ್ತರಿಗೆ ಪರಮಾನುಕೂಲನಾಗಿಯೂ ಇರುವ 7) ಜೀವೋಪಕರಣಗಳಿಂದ ಪಂಚಭೂತಗಳನ್ನೂ ಸೃಜಿಸಿರುವ 8) ಸಕಲೇಂದ್ರಿಯಗಳಿಗೂ ಕಾರಣನಾದ, 9) ನಿಖಿಲಚೇತನಗಳ ಜಾಗ್ರತ್-ಸ್ವಪ್ನ-ಸುಷುಪ್ತಿ-ಮೂರ್ಛೆ-ಮರಣ ಮೊದಲಾದ ಎಲ್ಲಾ ಅವಸ್ಥೆಗಳಲ್ಲೂ ತಾನೇ ನಿರ್ವಾಹಕನಾಗಿ, ಜಗತ್ತನ್ನು ನಡೆಸುವ, 10) ಚೇನತಾಚೇತನಗಳೊಂದಿಗೆ ತಾನೂ ಕೂಡಿಕೊಂಡು ಅಂತರ್ಯಾಮಿಯಾಗಿದ್ದರೂ ಅವುಗಳ ಸಹಜದೋಷ ತನಗೆ ತಟ್ಟದಂತೆ ಇರುವವನೂ, 11) ಮುಕ್ತಿಗೆ ಸಾಧನವಾಗಿ ಭಕ್ತಿಯೋಗಾದಿಗಳು ಹೇಳಲ್ಪಟ್ಟು, ಅವುಗಳಲ್ಲಿ ಪರಸ್ಪರ ನ್ಯೂನಾತಿರೇಕ-ಗುಣಾತಿಶಯ ಗಳಿದ್ದರೂ ಪರಸ್ಪರ ಅವು ವಿರುದ್ಧವಾಗದೆ ಸಕಲವಿದ್ಯೆಗಳು ಇರ್ರುವ ''ಉಪಾಸ್ಯನು ತಾನೇ'' ಎಂದಿರುವವನೂ, 12) ಯೋಗಾಂಗವಾದ ನಿತ್ಯನೈಮಿತ್ತಿಕಾದಿ ಕರ್ಮಗಳುಳ್ಳ ವರ್ಣಾಶ್ರಮ ಧರ್ಮಗಳನ್ನು, ''ಸಾತ್ವಿಕತ್ಯಾಗ'' ಪೂರ್ವಕವಾಗಿ ಮಾಡುವುದನ್ನು ತಾನು ಸ್ವೀಕರಿಸಿ, ಅತ್ಯಂತ ಪ್ರೀತನಾಗಿ ಒಳ್ಳೆಯ ಜ್ಞಾನವನ್ನು ಕೊಡುವವನೂ, 13) ಉಪಾಸಕರ ಸಮಸ್ತ ಕರ್ಮಗಳನ್ನೂ (ಪುಣ್ಯ-ಪಾಪ) ನಿವಾರಿಸುವವನೂ, 14) ಪ್ರಸನ್ನರಾಗಿ ಮುಕ್ತಿಹೊಂದುವವರನ್ನು ಬ್ರಹ್ಮನಾಡೀ ಮೂಲಕ ಪ್ರವೇಶಗೊಳಿಸುವವನೂ, 15) ಅಂತಹ ಚೇತನರನ್ನು ಆತಿವಾಹಿಕ ಪುರುಷರ ಮೂಲಕ ಸಂಸಾರಮಂಡಲದಿಂದ ದಾಟಿಸಿ, ಪರಮಪದವನ್ನು ಸೇರಿಸುವವನೂ, 16) ಅನಂತರ ಮತ್ತೆ ಹಿಂತಿರುಗಿಸದಂತೆ ಮಾಡಿ, ತನ್ನ ಆತ್ಮೈಶ್ವರ್ಯದ ಪರಮಾವಧಿಯ ಸ್ವಸಾಮ್ಯವನ್ನಿತ್ತು ಬೆಳಗಿಸುವ ಆ ಪರಮಾತ್ಮನಾದ ಈ ವರದರಾಜನಿಗೆ ನಿತ್ಯಸೇವಕರಾಗಿ ಜನಿಸಿ, ಇರುವೆವಲ್ಲಾ! ಆಹಾ ! ಅದೆಂತಹ ಭಾಗ್ಯವಂತರು ನಾವು'' ಎಂದು ಸಮಸ್ತ ದೇವತೆಗಳೂ ಕೊಂಡಾಡಿದರು. ಎಂದು ಶ್ರೀವೇದವ್ಯಾಸರು ರಚಿಸಿರುವ ''ಬ್ರಹ್ಮಸೂತ್ರ''ದ 4 ಅಧ್ಯಾಯ = 16 ಪಾದಗಳಲ್ಲಿನ ಸಾರಾರ್ಥವನ್ನು ತಮ್ಮ 16 ಈ ಪಾದಗಳುಳ್ಳ ಪಾಶುರದಲ್ಲಿ ಅಳವಡಿಸಿ, ಪರತತ್ವ ಸಾರವನ್ನು ನಮಗೆ ನಮ್ಮ ಶ್ರೀ ದೇಶಿಕೋತ್ತಮರು ಉಪದೇಶಿಸಿರುವರು.

ಹೀಗೆಯೇ ಕೇವಲ ನಾಲ್ಕೇ ಪಾದಗಳುಳ್ಳ ಒಂದು ಶ್ಲೋಕದಲ್ಲಿ ಅಳವಡಿಸಿ, ''ಅಧಿಕರಣಸಾರಾವಳಿ'' ಎಂಬ ಗ್ರಂಥದಲ್ಲಿ ಒಂದೊಂದು ಪದದಿಂದ ಒಂದೊಂದು ಪಾದದ ಸಾರಾರ್ಥವನ್ನು ವ್ಯಕ್ತಪಡಿಸಿ, ತಮ್ಮ ಅನಿತರ ಸಾಧಾರಣ ಕವಿತಾಸಾಮರ್ಥ್ಯವನ್ನೂ ತೋರ್ಪಡಿಸಿರುವರು.

ಆ ಶ್ಲೋಕ :- ''ಸ್ರಷ್ಟಾದೇಹೀಸ್ವನಿಷ್ಠೋ ನಿರವಧಿಮಹಿಮಾಽಪಾಸ್ತಬಾಧಃ ಶ್ರಿತಾಪ್ತಃ । ಖಾತ್ಮಾದೇಃ ಇಂದ್ರಿಯಾದೇಃ ಉಚಿತ ಜನನಕೃತ್ ಸಂಸೃತೌತಂತ್ರವಾಹೀ ॥ ನಿರ್ದೋಷತ್ವಾದಿರಮ್ಯೋ ಬಹುಭಜನಪದಂ ಸ್ವಾರ್ಹಕರ್ಮಪ್ರಸಾದ್ಯಃ । ಪಾಪಚ್ಛಿತ್

ಬ್ರಹ್ಮನಾಡೀಕೃತ್ ಅತಿವಹನ್ ಸಾಮ್ಯದಶ್ಚಾತ್ರವೇದ್ಯಃ ॥'' ಎಂದು (ಸಹೃದಯರಿಗೇನೆ ಶ್ರೀಮದಾಚಾರ್ಯರ ಉಪದೇಶಾಮೃತಾಸ್ವಾದದ ಹಿರಿಮೆಯರಿವಾಗುವುದು)

विवृत्योक्तं शास्त्रे चिदचिदिति सर्वं सृजसि तत् ।
तदन्तर्यामी सन्निवससि तदन्त स्तदधिपः ।।
सरूपं स्थूलं वा भवतु सकलं सूक्ष्म मपि वा ।
तदात्मा तद्देही प्रविलससि तद्दोषरहितः ।। १

यथा भित्त्याधारं भवति रुचिरं चित्र मखिलं ।
तथा बद्धा मुक्ताः परमपदिनोऽप्याश्रयबलाः ।।
त्रयीमार्गे त्यक्ता अचिदहितरीति र्निरसितुं ।
सदोदारप्रज्ञो महिमपरिपूर्णोऽसि भगवन् ! २

सहेतुपरिकल्पनाचतुरजल्पविद्याचणैः ।
अचाल्य उरुशक्तिमानतिविचित्रमायानिधिः ।।
सकापिलकणादसौगतजिनेशवाचोदितं ।
श्रीताप्त उपमर्दितुं सदय आत्थ शास्त्रं स्वयम् ।। ३

निदान मुचितं यथाचिति तथात्मवर्गे परः ।।
हृषीकविषयेषु च प्रथितपञ्चभूतेष्वसि ।।
दशैककरणेष्वपि प्रलय इन्द्रियागोचरे- ।
ष्ववेक्षणविचक्षणो मुनि रहो ! महान् दृश्यसे ।। ४

समग्रसमभावनः सकललोकनिर्वाहकः ।
क्रमेण समुपावृतं त्वघभवं भवं शास्ति च ।।
विचेतनसचेतने जगति वीतदोषस्थितौ ।
अनुत्तमयशोनिधिः निरुपम स्समस्ताधिपः ।। ५

कलासु विविधास्वनुत्तमतया विभक्तास्वपि ।
समुद्धरणभावनानुगुणसद्गुणानां निधे ! ॥

प्रशस्तनिजकर्मसु त्यजनशेमुषी दुष्करा ।
ह्युपाय मिम माचरत्स्वतिदयः प्रिय स्तुष्यसि ।। ६

उपासकमुपावृता न्यखिलपुण्यपापान्यपि ।
प्रणाश्य पुनरागमव्यपगमाय संकल्पवान् ।।
शरीरपतनस्थितौ प्रणमता मनावृत्तिके ।
प्रवेशकरणक्षमोऽस्यनववोध्यनाडीपथे ।। ७

प्रकृत्यनुगुणं ततं निखिलतत्व मुन्मूल्य च ।
भवाम्बुनिधितारकेष्वतिमहाधिकार्यग्रणीः ।।
वितीर्णफलचिन्तकान् शरण मागतान् आत्मनः ।
अनुज्झित ! दयाकृते ! वरद ! ते हि दासा वयम् ।। ११

ಮೂಲ ತಿರುಮಗಳ್‌ಮಣ್ಮಗಳ್‌ನೀಳೈಮುದಲಾವೆಲ್ಲಾ, ತ್ತೇವಿಯರುಂ
ತನ್ನುಡನೇ ತಿಹಳ್‌ನ್ದು ನಿರ್ಕ, ದರುಮಮಿರು ಮೂನ್ರುಮುದಲ
ನೈತ್ತುಂತೋನ್ರ, ತನ್ನನೈಯ ಶೂರಿಯರ್ ತನ್ನಡಿಕ್ಕೀಳ್‌ವಾಳ,
ಅರುಮರೈ ಶೇರಳವಿಲ್ಲಾವವ ನಿಯಿನ್‌ಕಣ್, ಅರೈವಣೈ ಮೇಲ್‌ವೀತ್ತಿ
ರುಪ್ಪಾಲನೈತ್ತುಂಕಾಕ್ಕುಂ, ಕರುಮಣಿಯೈಕ್ಕರಿಗಿರಿ ಮೇಲ್ಕಂಡೇನ್,
ಎನ್‌ತನ್ಕಡು ವಿನೈಹಳನೈತ್ತುಂ ನಾನ್ಕಂಡಿಲೇನೇ ॥ 20

ಅರ್ಥ :- ತಿರುಮಗಳ್ = ಮಹಾಲಕ್ಷ್ಮಿ, ಮಣ್‌ಮಗಳ್ = ಭೂದೇವಿ, ನೀಳೈ = ನೀಳಾದೇವಿ, ಮುದಲಾ-ಎಲ್ಲಾ-ದೇವಿಯರುಂ = ಮೊದಲಾದ ಸಮಸ್ತ ದೇವಿಯರೂ, ತನ್ನುಡನೇ-ತಿಹಳ್‌ನ್ದು-ನಿರ್ಕ = ತನ್ನ ಜೊತೆಯಲ್ಲಿ ಬೆಳಗುತ್ತಿರಲು, ಇರು-ಮೂನ್ರು-ದರುಮಂ-ಮುದಲ್ = ಜ್ಞಾನಶಕ್ತ್ಯಾದಿ ಆರು ಗುಣಗಳೇ ಮೊದಲಾದ, ಅನೈತ್ತುಂ = ತೋನ್ರ = ಎಲ್ಲಾ ಗುಣಗಳೂ ಬೆಳಗಲು, ತನ್-ಅನೈಯ = ತನ್ನಂತೆಯೇ ಇರುವ, ಶೂರಿಯರ್ = ನಿತ್ಯಸೂರಿಗಳು, ತನ್-ಅಡಿ-ಕೀಳ್-ವಾಳ = ತನ್ನಡಿಗಳಲ್ಲಿ ಸೇವೆ ಮಾಡುತ್ತಿರಲು, ಅರು-ಮರೈ-ಶೇರ್ = ಅತಿಗಹನವಾದ ವೇದಗಳಿಂದ ಸ್ತುತಿಸಲ್ಪಡುವ, ಅಳವು-ಇಲ್ಲಾ-ಅವನಿಯನ್-ಕಣ್ = ಅಳತೆ ಮಾಡಲಾರದಷ್ಟು ವಿಶಾಲವಾದ ಪರಮ ಪದದಲ್ಲಿ, ಅರವು-ಅಣೈ-ಮೇಲ್ = ಆದಿಶೇಷನೆಂಬ ಮಂಚದ ಮೇಲೆ, ವೀತ್ತಿರುಪ್ಪಾಲ್ = ಬಿಜಯಮಾಡಿಸಿರುವುದರಿಂದಲೇ, ಅನೈತ್ತುಂ-ಕಾಕ್ಕುಂ = ಸಮಸ್ತವನ್ನೂ ಸಂರಕ್ಷಿಸುವ,

ಕರುಮಣಿಯ್ಯೈ = ನೀಲರತ್ನದಂತಿರುವ ವರದರಾಜನನ್ನು, ಕರಿಗಿರಿ ಮೇಲ್ = ಹಸ್ತಿಗಿರಿಯ ಮೇಲೆ, ಕಂಡೇನ್ = ನೋಡಿದೆನು, ಎನ್-ತನ್-ಕಡು-ವಿನ್ಯೈಹಳ್-ಅನ್ನೈತ್ತುಂ = ನನ್ನ ಕಡುತರಕರ್ಮಗಳಾವುದನ್ನೂ, ನಾನ್-ಕಂಡಿಲೇನ್ = ನಾನು ಕಾಣಲಿಲ್ಲ.

ತಾತ್ಪರ್ಯ :- ಪರಮ ಪದದದಲ್ಲಿ ಪರಮಪದನಾಥನ ಪಕ್ಕಗಳಲ್ಲಿ ಶ್ರೀ, ಭೂ, ನೀಳಾದೇವಿಯರು ವಿರಾಜಿಸುವರು. ನಿತ್ಯಸೂರಿಗಳು ಅವನ ಪಾದಸೇವೆಗಳನ್ನು ಮಾಡುತ್ತಿರುವರು. ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸುಗಳೆಂಬ ಆರು ಪ್ರಧಾನತಮಗುಣಗಳಾದಿಯಾಗಿ ಸಮಸ್ತಕಲ್ಯಾಣ ಗುಣಗಳೂ ಬೆಳಗುವಂತೆ, ಅನಂತನಾದ ದಿವ್ಯಪರ್ಯಂಕದಲ್ಲಿ ಇರುತ್ತಲೇ, ತನ್ನ ದಿವ್ಯಾಮೃತ ಕಟಾಕ್ಷವೀಕ್ಷಣದಿಂದಲೇ ಸಕಲ ಲೋಕಗಳನ್ನೂ ಪರಿಪಾಲಿಸುವ ಪರಮಾತ್ಮನನ್ನು ಈ ಹಸ್ತಿಗಿರಿಯಲ್ಲಿ ಇಂದು ಕಣ್ಣಾರಕಂಡೆನು. ನನ್ನ ಸಮಸ್ತ ಪಾಪಗಳೂ ತೊಲಗಿದವು. ಎಂದು ಬ್ರಹ್ಮನು ನೆನೆನೆನೆದು ಆನಂದಿಸಿದನು.

श्रीभूनीलादिदेवीष्वनुपमसुषुमास्वेजमानेषु षट्सु ।
ज्ञानादिष्वात्मसाम्येष्वपि कृतपदसेवेषु नित्येषु नित्यम् ।।
वेदस्तुत्येऽप्रमेये परमपद इते भोगितल्पे स्थिते हिं ।
नीलं रत्नं जगत्त्रं करिगिरिशिखरेऽपश्य मुग्रे न मेऽघम् ।। २०

ಮೂಲ : ಪೆಡೈಯಿರಣ್ಡ್ಯೊರನಮಡೈನ್ನು, ಪಿರಿನ್ದಿಡಾವಹೈಪೇಶಲಾಂ,
ಪೆರುಹುಮರುವಿಹಳರುಹುಮರುವಿಯ,
ಪೆರಿಯಮಣಿವರೈಪಯಿಲಲಾಂ,
ಪಿಡಿಯಿರಣ್ಡೊಡುಕಳಬನೊನ್ರು, ಪಿಣ್ಣೈನ್ದಪೇರಳಹೋದಲಾಂ,
ಪಿರಿವಿಲೊಳಿಯೊಡುನಿಳಲುಮರುಹುರು, ಮಿರವಿ
ಯಿಲಹುದಲ್‌ಪರವಲಾಂ
ಕೊಡಿಯಿರಣ್ಡೊಡು ವಿಡವಿಯೊನ್ರು,
ಕುಳಿರ್‌ನ್ದವಾರುಕುಲಾವಲಾಂ,
ಕುರೈವಿಲ್‌ಶುರದಿಯುಂನಿನ್ನೈವು ಮಿಲಹಿಯದರುಮವರು
ನಿಲೈಯೆನ್ನಲಾಂ,
ಅಡಿಯಿರಣ್ಡೈಯುಮಡೈಯುಮನ್ಬರರಿನ್ದಪೇರರುಳಾಳನಾರ್,
ಅಣಹುಮಲರ್ಮಹಳವನಿಮಹಳೊಡು ಕರಟಿಗಿರಿ
ನಿಲೈಕವರ್‌ದಲೇ ॥ 21

ಅರ್ಥ :- ಅಡಿ-ಇರಂಡೈಯುಂ = ತನ್ನೆರಡಡಿಗಳನ್ನೂ, ಅಡೈಯುಂ-ಅನ್ಬರ್ = ಪಡೆಯುವ ಭಕ್ತರಿಂದ, ಅರಿಂದ = ಧ್ಯಾನಮಾಡಲ್ಪಟ್ಟ, ಪೇರರುಳಾಳನಾರ್ = ದೇವಾಧಿರಾಜನು, ಅಣುಹುಂ = ಎರಡು ಪಕ್ಕಗಳಲ್ಲೂ, ಮಲರ್-ಮಹಳ್-ಅವನಿ-ಮಹಳ್-ಓಡು = ಮಹಾಲಕ್ಷ್ಮಿ ಮತ್ತು ಭೂದೇವಿಯೊಡನೆ, ಕರಟಿಗಿರಿ = ಹಸ್ತಿಶೈಲದಲ್ಲಿ, ನಿಲೈ-ಕವರ್‌ದಲ್ = ನೆಲೆಸಿ ಬೆಳಗುವುದನ್ನು (ನೋಡಿದರೆ) ಒರ್-ಅನಂ = ಒಂದು ಹಂಸವು, ಪೆಡೈ-ಇರಂಡೈ = ಎರಡು ಹಂಸಿಗಳೊಂದಿಗೆ, ಅಡೈಂದು = ಜೊತೆಗೂಡಿ, ಪಿರಿಂದ್-ಇಡಾ-ವಹೈ = ಎಂದೂ ಅಗಲದ ರೀತಿಯಂತಿದೆಯೆಂದು, ಪೇಶಲಾಂ = ಹೇಳೋಣ. ಪೆರುಹುಂ = ಹರಿಯುವ, ಅರುವಿಹಳ್ = ಗಿರಿನದಿಗಳೆರಡು, ಅರುಹು = ಅರುಗಿನಲ್ಲೇ, ಮರುವಿಯ = ಕೂಡಿಕೊಂಡಿರುವ, ಪೆರಿಯ-ಮಣಿ-ವರೈ = ದೊಡ್ಡ ರತ್ನಪರ್ವತವೆಂದು, ಪಯಿಲಿಲಾಂ = ಯಾವಾಗಲೂ ನೆನೆಯೋಣ. ಒನ್ರು-ಕಳಬಂ = ಒಂದು ಆನೆಯು, ಪಿಡಿ-ಇರಂಡು-ಒಡು = ಎರಡು ಹೆಣ್ಣಾನೆಗಳೊಡನೆ, ಪಿಣೈಂದ = ಸೇರಿರುವ, ಪೇರ್-ಅಳಿಹು = ತುಂಬ ಸೊಗಸಿನಂತಿದೆಯೆಂದು, ಓದಲಾಂ = ಹೇಳೋಣ. ಪಿರಿವು-ಇಲ್-ಒಳಿ-ಒಡು = ತನ್ನನ್ನು ಬಿಡದೆ ಇರುವ ಪ್ರಕಾಶದೊಂದಿಗೆ, ನಿಳಲುಂ = ನೆರಳೂ, ಅರುಹು-ಉರುಂ = ಪಾರ್ಶ್ವವನ್ನು ಹೊಂದಿಕೊಂಡಿರುವ, ಇರವಿ = ಸೂರ್ಯನು, ಇಲಹುದಲ್ = ಪ್ರಕಾಶಿಸುವುದನ್ನು (ಪ್ರಕಾಶಿಸುವಂತಿದೆಯೆಂದು) ಪರವಲಾಂ = ಎಲ್ಲೆಡೆಯೂ ಹರಡೋಣ (ಹೊಗಳೋಣ). ಒನ್ರು-ವಿಟವಿ = ಒಂದು ಮರವು, ಕೊಡಿ-ಇರಂಡು-ಒಡು = ಎರಡು ಲತೆಗಳೊಂದಿಗೆ, ಕುಳಿರ್‌ನ್ದ-ವಾರು = ತಂಪಾಗಿರುತ್ತಾ, ಇರುವಂತಿದೆಯೆಂದು, ಕುಲಾವಲಾಂ = ಕೊಂಡಾಡೋಣ, ಕುರುವೈ-ಇಲ್ = ವಿಕಲತೆಯಿಲ್ಲದ, ಶುರುದಿಯುಂ-ಶ್ರುತಿಯೂ, ನಿನೈವುಂ = ಸ್ಮೃತಿಯೂ (ಕೂಡಿಕೊಂಡು) ಇಲಹಿಯ = ಪ್ರಕಾಶಿಸುವ, ದರುಮ-ಅರು-ನಿಲೈ = ಧರ್ಮದ ಸೂಕ್ಷ್ಮಸ್ಥಿತಿಯೋ ಎಂಬಂತೆಯೂ, ಎನ್ನಲಾಂ = ವರ್ಣಿಸೋಣ.

ತಾತ್ಪರ್ಯ :- ದೇವಾಧಿರಾಜನು ಶ್ರೀದೇವಿ ಭೂದೇವಿಯರೊಡನೆ ಕೂಡಿ, ಹಸ್ತಿಗಿರಿಲ್ಲಿ ನೆಲೆಸಿ, ಕಂಗೊಳಿಸುವುದನ್ನು ನೋಡಿದರೆ, ''ಒಂದು ರಾಜಹಂಸವು ಎರಡು ಹಂಸಿಗಳೊಂದಿಗೆ ಕೂಡಿ ವಿಹರಿಸುವಂತೆಯೂ, ಒಂದು ನೀಲಮಣಿ ಪರ್ವತವು ತನ್ನೆರಡು ಪಕ್ಕಗಳಲ್ಲೂ ಝರಿಗಳನ್ನು ಹೊಂದಿ ಕಂಗೊಳಿಸುವಂತೆಯೂ, ಒಂದು ಆನೆಯು, ತನ್ನ ಎರಡು ಹೆಣ್ಣಾನೆಗಳನ್ನು ಕೂಡಿಕೊಂಡು, ಉಲ್ಲಾಸದಿಂದರುವಂತೆಯೂ, ಸೂರ್ಯನು ತನ್ನ ಪ್ರಭೆ ಮತ್ತು ಛಾಯೆಗಳೊಡನೆ ಪ್ರಕಾಶಿಸುವಂತೆಯೂ, ಒಂದು ವೃಕ್ಷವು ಎರಡು ಅಂದವಾದ ಬಳ್ಳಿಗಳನ್ನು ಹಬ್ಬಿಸಿಕೊಂಡು ಮನೋಹರವಾಗಿರುವಂತೆಯೂ, ಮತ್ತು ಧರ್ಮಶಾಸ್ತ್ರದ ಸೂಕ್ಷ್ಮಸ್ಥಿತಿಯು ಶ್ರುತಿ ಮತ್ತು ಸ್ಮೃತಿಗಳನ್ನು ಬಿಡದೆ ಕೂಡಿಕೊಂಡು, ಸಫಲವಾಗಿ,

ಹೊಂದಿಕೊಂಡಿರುವಂತೆಯೂ,'' ಇರುತ್ತಾ ಅನ್ಯಾದೃಶಸಾದೃಶ್ಯವನ್ನು ಹೊಂದಿರುವನೆಂ[illegible] ವರ್ಣಿಸೋಣ. ಹೀಗೆ ಬ್ರಹ್ಮನು ಸದ್ಗುಣನಿಧಿಯಾಗಿದ್ದು ಪರಮಾತ್ಮನನ್ನು ಸಂದರ್ಶಿಸಿ ಹಿ[illegible] ಹೋದನು.

पादद्वन्द्वाश्रयैकप्रियविदितदयामूर्तिदेवाधिनेतुः ।
पार्श्वस्थश्रीधरस्य स्तुतकरटिगिरौ कल्पनं स्थेमधाम्नः ।।
हंसीभ्यां हंस एकोऽविरहित इव वाश्लिष्ट इत्युद्गृणीम ।
पार्श्वस्त्रोतस्विनीकं मणिमय मिव वाम्रेडयामाचलेन्द्रम् ।। १
संश्लीष्टं तं वशाभ्या मिभ मिव च महासुन्दरं ह्यामनाम ।
जुष्टं छायाप्रभाभ्यां रवि मिव सुरुचिं वर्णयामा वियुक्तम् ।।
वीरुद्भ्यां भासमानं विटपिन मिव संशीतलं संस्तवाम ।
निर्वैकल्यश्रुतिस्मृत्युपचित मिव तं धर्मसूक्ष्मं फणाम ।। २१

ಮೂಲ : ವೇರೊಪ್ಪಾರ್‌ವಿಣ್ಮುದಲಾಂಕಾವುಕ್ಕೆಲಾಂ, ವಿಳಿಯೊಪ್ಪಾರ್ ವೇದಮೆನುಂಕಣ್‌ತನಕ್ಕು, ಕಾರೊಪ್ಪಾರ್ ಕರುಣೈಮಳೈ ಪೊಳಿನ್ದಿಡುಂಕಾಲ್, ಕಡಲೊಪ್ಪಾರ್ ಕಣ್ಡಿನುಂ ಕಾಣಾಕ್ಕೂತ್ತಾಲ್ ನೀರೊಪ್ಪಾರ್‌ನಿಲಮಳಿಕ್ಕುಂತನ್ಮೈತನ್ನಾಲ್, ನಿಲಮೊಪ್ಪಾರ್ ನೆಡುಂಪಿಳೈಹಳ್ ಪೊರುಕ್ಕುನೇರಾಲ್, ಆರೊಪ್ಪಾರಿವರ್‌ಗುಣಂ ಗಳನೈತ್ತುಂಕಂಡಾಲ್, ಅರುಳಾಳರ್ ತಾಮೆನಿನುಂತವ ಕ್ಕೊವ್ವಾರೇ ॥ 22

ಅರ್ಥ :- ಅರುಳಾಳರ್ = ದೇವರಾಜನು, ವಿಣ್-ಮುದಲ್-ಆಂ = ಆಕಾಶಾದಿಗಳಿಂದಾಗುವ ಜಗತ್ತೆಂಬ, ಕಾವುಕ್ಕೆ-ಎಲ್ಲಾ = ಕಾಡುಗಳಿಗೆ (ಮರಗಳಿಗೆ)ಲ್ಲಾ, ವೇರ್-ಒಪ್ಪಾರ್ = ದೊಡ್ಡ ಬೇರಿನಂತೆಯೂ, ವೇದಂ ಎನುಂ = ವೇದಗಳೆಂಬ, ಕಣ್-ತನಕ್ಕು = ಕಣ್ಣುಗಳಿಗೆ, ವಿಳಿ-ಒಪ್ಪಾರ್ = ಕಣ್ಣಿನ ನಡುವೆ ಇರುವ ಪಾಪೆಯಂತೆಯೂ, ಕರುಣೈ-ಮಳೈ = ಕರುಣೆಯೆಂಬ ಮಳೆಯನ್ನು, ಪೊಳಿಂದಿಡುಂಕಾಲ್ = ಸುರಿಸುವ ಕಾಲದಲ್ಲಿ, ಕಾರ್-ಒಪ್ಪಾರ್ = ಮೇಘದಂತೆಯೂ, ಕಂಡಿಡಿನುಂ = ಕಣ್ಣಾರನೋಡಿದ್ದರೂ, ಕಾಣಾ-ಕೂತ್ತಾಲ್ = ಪೂರ್ಣವಾಗಿ ನೋಡಲಾಗದಂತಹ ಹೆಚ್ಚಳಿಕೆಯಿಂದ, ಕಡಲ್-ಒಪ್ಪಾರ್ = ಸಮುದ್ರದಂತೆಯೂ, ನಿಲಂ-ಅಳಿಕ್ಕುಂ-ತನ್ಮೈ-ತನ್ನಾಲ್ = ನೆಲವನ್ನೆಲ್ಲಾ

ಕಾಪಾಡುವ ಸಹಜಗುಣದಿಂದ, ನೀರ್-ಒಪ್ಪಾರ್ = ನೀರಿನಂತೆಯೂ, ನೆಡುಂ-ಪಿಳೈಹಳ್ = ಸಮಸ್ತ ಅಪರಾಧಗಳನ್ನೂ, ಪೊರಕ್ಕುಂ-ನೇರಾಲ್ = ಸಹಿಸಿಕೊಳ್ಳುವ ಸ್ವಭಾವದಿಂದ, ನಿಲಂ-ಒಪ್ಪಾರ್ = ಭೂಮಿಯಂತೆಯೂ ಇರುವವನು. (ಆದರೆ) ಇವರ್-ಗುಣಂಗಳ್-ಅನೈತ್ತುಂ-ಕಂಡಾಲ್ = ಇವರ ಎಲ್ಲಾ ಗುಣಗಳನ್ನೂ (ಒಟ್ಟಿಗೆ ಒಂದೆಡೆ) ಪರ್ಯಾಲೋಚಿಸಿದರೆ, ಒಪ್ಪಾರ್-ಆರ್ = ಸಮಾನರೆಂದೆನಿಸುವವರು ಯಾರು ? (ಯಾರೂ ಇಲ್ಲ) ತಾಮೆ-ಎನಿನುಂ = ತಾನೇ ಆಗಿರಬಹುದಲ್ಲವೆಂದರೆ (ಹೋಲಿಕೆಯಾಗುವವರು) ತಮಕ್ಕ್-ಒವ್ವಾರ್ = ತನಗೂ ತಾನಾಗಲಾರನು.

**ತಾತ್ಪರ್ಯ** :- ಆಕಾಶಾದಿ ಪಂಚಭೂತಗಳಿಂದ ಆಗಿರುವ ಈ ಜಗತ್ತೆಂಬ ಮಹೋದ್ಯಾನದ ಮರಗಳಿಗೆ ಒಂದೇ ಬೇರಾಗಿ ಇರುವಂತೆ ಸರ್ವಾಧಾರನೆಂದು ಬೇರಿಗೆ ಹೋಲಿಸಿಕೊಳ್ಳಬಹುದು, ಪರಮಾತ್ಮನು ಹಾಗೆಯೇ ವೇದಗಳೆಂಬ ಕಣ್ಣುಗಳಿಗೆ ಮಧ್ಯದಲ್ಲಿರುವ ದೃಷ್ಟಿ ಪ್ರಧಾನವಾದ ಪಾಪೆಗಳಂತೆ ಎಂದು ಜ್ಞಾನ ಜ್ಯೋತಿಪ್ರದನಾಗಿ, ಅದಕ್ಕೆ ಸಮಾನನೆನ್ನಿಸಿಕೊಳ್ಳುವನು. ಪಕ್ಷಪಾತವಿಲ್ಲದೆ ಸರ್ವತ್ರ ಒಂದೇರೀತಿ ಮಳೆಸುರಿಸುವ ಮೇಘವನ್ನು ಹೋಲುವನು, ತಾನು ದಯಾದೃಷ್ಟಿಯನ್ನು ಸುರಿಸುವುದರಿಂದ, ಭಕ್ತರ ಕಣ್ಣಿಗೆ ಗೋಚರನಾದರೂ, ಕೇವಲ ಕೆಲವಂಶದಲ್ಲಿಯೇ ಹೊರತು ಪೂರ್ಣನಾಗಿ ಗೋಚರನಾಗದಂತಹ ಅತಿಶಯ ಅದ್ಭುತನಾಗಿರುವುದರಿಂದ ಸಮುದ್ರಕ್ಕೆ ಹೋಲಿಸಿಕೊಳ್ಳಬಹುದು. ಸಮುದ್ರವನ್ನು ಎಲ್ಲರೂ ನೋಡುವಂತಾಗಿದ್ದರೂ ಏಕದೇಶವದು. ಅದರ ವೈಶಾಲ್ಯ, ಗಂಭೀರತೆ, ಅದರಲ್ಲಿನ ಸರ್ವಸ್ವ ಮೊದಲಾದುವನ್ನು ಸಂಪೂರ್ಣವಾಗಿ ನೋಡಲಾಗುವುದಿಲ್ಲವೋ ಅದರಂತೆ ಅವನೂ ಅಗೋಚರ-ನೀರು ಭೂಮಿಯನ್ನು ಬಾಡಿಸದಂತೆ ಒದ್ದೆಯಾಗಿಯೇ ಇಟ್ಟು ಕಾಪಾಡುವಂತೆ, ತಾನು ಜಗದ ಜೀವರಾಶಿಗಳನ್ನು ದುಃಖಕ್ಕೆ ಈಡುಮಾಡದೆ ಉಜ್ಜೀವನಗೊಳಿಸುವವನಾದುದರಿಂದ ನೀರಿಗೆ ಹೋಲಿಸಿಕೊಳ್ಳಬಹುದು. ನಾವು ಮಾಡುವ ಸಮಸ್ತ ಅಪಚಾರ ಅಪರಾಧಗಳನ್ನೂ ತಾಳ್ಮೆಯಿಂದ ತಾಳುವ ಭೂಮಾತೆಯಂತೆ ಸರ್ವವನ್ನೂ ಕ್ಷಮಿಸುವವನಾದುದರಿಂದ, ಭೂಮಿಗೆ ಹೋಲುವನು, ಹೀಗೆ ಕೆಲವು ಅಂಶಗಳಲ್ಲಿ ಒಂದೊಂದನ್ನು ಹೋಲಿಸಿದರೂ, ಎಲ್ಲವೂ ಒಂದೆಡೆಯಿರುವ ವಸ್ತುವಿಗೆ ಹೋಲಿಸಿಕೊಳ್ಳಲು ಅಂತಹ ವಸ್ತುವೇ ಸೃಷ್ಟಿಯಲ್ಲಿಲ್ಲ. ಹೋಗಲಿ, ತಾನೇ ತನ್ನನ್ನು ಹೋಲಲೂ ಆಗುವುದಿಲ್ಲ, ಎಲ್ಲೂ ಒಂದೇ ಕಾಲದಲ್ಲಿ ತನ್ನ ಸರ್ವಸ್ವವನ್ನೂ ತೋರಿಸಿಲ್ಲ. ಅಂದರೆ ಅಂತಹ ಅಪಾರಮಹಿಮನು ನಮ್ಮ ದೇವರಾಜನು ಅವನದೇ ಒಂದು ವೈಶಿಷ್ಟ್ಯ. ಈ ರೀತಿ ಬ್ರಹ್ಮದೇವನು ಭಗವಂತನನ್ನು ನೋಡಿ, ಹಿಗ್ಗಿ, ಆನಂದಪಟ್ಟನು.

**आकाशादिसमस्तविष्टपमहोद्यानैकमूलोपमः ।**
**आम्नायाक्षिकनीनिकेव च दयावर्षेण मेघोपमः ॥**

दृष्टादृष्टत एधितोत्तमगुणात् वाराशिनीकाशितः ।
मेदिन्या शिशिरीकृते रवनतश्चाम्भोनिभो देवराट् ॥ १

लोकानां सकलापराधसहनात् सर्वंसहासन्निभः ।
लोकेऽन्य स्सदृशोऽस्य सद्गुणपरामर्शे तु लभ्येत कः ?
नान्यस्स्वोपम इत्यसंशयवचः स्यादात्मनात्मैव वे- ।
त्यामर्शे नहि जाघटीति यदयं सत्यं स्वतो निस्तुलः ॥ २२

ಮೂಲ : ಎನ್ನಿಲಮುಂ ಕುರತ್ತಾಲ್ ಕುರಿಶೆಯ್‌ದವೆಳಿಲ್‌ಪರಿಕೊಂಡು,
ಅನ್ನಮುಯರ್ತ್ತಶೆಯ್ಯೋನ್‌ಅನ್ರುವೇಳ್ವಿಶೆಯ್‌ವೇದಿಯಿನ್ಮೇಲ್,
ಮುನ್ನಿಲೈಯಾಹಿಯಮೂರ್ತ್ತಿಯನ್‌ನಾನ್ಮುಹಮತ್ತುಮುನಕ್ಕು,
ಎನ್ನವರಂ ತರುವೋಮೆನ್ರು ನಾದನಿಯಂಬಿನನೇ ॥ 23

ಅರ್ಥ :- ಅನ್ನಂ-ಉಯರ್‌ನ್ದ = ಹಂಸವಾಹನನೂ, ಶೆಯ್ಯೋನ್ = ಋಜುಸ್ವಭಾವದವನೂ ಆದ ಬ್ರಹ್ಮನು, ಎನ್ನಿಲಮುಂ = ಭೂಮಿಯಲ್ಲಿ ಎಲ್ಲೆಲ್ಲೂ, ಕುರುತ್ತಾಲ್ = ಕಾಲುಗೊರಸುಗಳಿಂದ, ಕುರಿ-ಶೆಯ್ದ = ಗುರುತನ್ನು ಮಾಡಿರುವ, ಎಳಿಲ್-ಪರಿ-ಕೊಂಡು = ಕಂಗೊಳಿಸುವ ಕುದುರೆಯ ಮೂಲಕ, ಅನ್ರು = ಆಗ, ವೇಳ್ವಿ-ಶೆಯ್ = ಯಾಗಮಾಡಿದ, ವೇದಿಯಿನ್-ಮೇಲ್ = ವೇದಿಕೆಯ ಮೇಲೆ, ನಾದನ್ = ಪ್ರಭುವಾದ ದೇವರಾಜನು, ಮುನ್-ನಿಲೈ-ಆಹಿಯ-ಮೂರ್ತ್ತಿಯನ್ = ಎದುರಿಗೆ ಕಾಣಿಸಿಕೊಂಡು. (ಅರ್ಚಾರೂಪಿಯಾಗಿ ಪ್ರತ್ಯಕ್ಷನಾಗಿ) ನಾನ್ಮುಹ ! = ಎಲೈ ಬ್ರಹ್ಮನೆ ! ಉನಕ್ಕು = ನಿನಗೆ, ಮತ್ತುಂ-ಎನ್ನ = (ಪ್ರತ್ಯಕ್ಷವಾಗಿರುವುದಲ್ಲದೆ) ಮತ್ತೆ ಯಾವ, ವರಂ = ವರವನ್ನು, ತರುವೋಂ = ಕೊಡಬೇಕು. (ಕೇಳುವವನಾಗು) ಎನ್ರು = ಎಂದು, ಇಯಂಬಿನನ್ = ಕರುಣಿಸಿ ಕೇಳಿದನು.

ತಾತ್ಪರ್ಯ :- ಹೀಗೆ ಬ್ರಹ್ಮದೇವನು ಕೈಗೊಂಡ ಅಶ್ವಮೇಧಯಾಗ ವೇದಿಕೆಯಲ್ಲಿ ಪರಮಾತ್ಮನು ಆ ದೇವಾಧಿರಾಜನು ಅವತರಿಸಿ, ಬ್ರಹ್ಮನಿಗೆ ಅಮಿತಾನಂದವನ್ನು ಕರುಣಿಸಿದುದೂ ಅಲ್ಲದೆ, ''ಓ ಬ್ರಹ್ಮ ! ನಿನ್ನ ಅಭೀಷ್ಟವಾದುದನ್ನು ಕೇಳಬಹುದು. ನನ್ನನ್ನು ಪ್ರತ್ಯಕ್ಷವಾಗಿ ಕಂಡಮಹಾತ್ಮರು ಸಮಸ್ತ ಫಲಗಳನ್ನೂ ಪಡೆಯಬಹುದು'' ಎಂದು ಅವನನ್ನು ಕಟಾಕ್ಷಿಸಿ ಭಗವಂತನು ಕೇಳಿದನು.

कुर्वन्तं हंसवाहे प्रगुणितहृदये क्ष्मां खुराघातलक्ष्मां ।
अर्वन्तं चाददाने ज्वलित मिह परं यागभूमेध्यवेद्याम् ॥

प्रादुर्भूत स्स नाथः पुर उदितवपुः भो श्रुतुश्शीर्ष ! तुभ्यं ।
किं वाद्यान्यत् प्रदद्यां वर मुचित मिति प्राह देवाधिराजः ।। २३

ಮೂಲ : ಶೆನ್ರುಮಲರ್ ಪರಿತ್ತು ಎನ್ನಾದನ್ ಶೇವಡಿಪ್ಪೋದುಹನ್ದು
ನನ್ರೆನನೀರ್ ಶುಡರ್ ನನ್ಮುಕವಾಶಮಿಲ್ಲೈಕೊಡುತ್ತು
ಕನ್ನಲಿಲಡ್ಡು ಕತ್ತೋಡನ್ನಂ ಶೀಡೈಕರಿಪಡ್ಶೈತ್ತು
ಪಿನ್ನುಂ ಶೇವಿತ್ತವನ್ಪಾದಂ ಪಣಿಮಿನ್‌ಹಳೆನ್ರನನೇ ॥ 24

ಅರ್ಥ :- ಶೆನ್ರು = (ಶರಣು ಹೊಂದಿ) ಸೇರಿ, ಮಲರ್-ಪರಿತ್ತು = ಹೂಗಳನ್ನು ಕ್ತುಯ್ದು, ಎನ್-ನಾದನ್ = ನಮ್ಮ ಸ್ವಾಮಿಯಾದ ದೇವರಾಜನ, ಶೇ-ಅಡಿ-ಪ್ಪೋದು = ಕೆಂಪಾದ ಪಾದಕಮಲಗಳನ್ನು, ಉಹನ್ದು = ಪೂಜಿಸಿ, ನನ್ರು-ಎನುಂ-ನೀರ್ = ಉತ್ತಮವಾದ ಬಾಯಿ ಮುಖ ಮೊದಲಾದುವನ್ನೂ, ಸುವಾಸನೆಗೊಳಿಸುವ ''ಮುಖವಾಸ'' ಮತ್ತು ''ತಾಂಬೂಲ''ಗಳನ್ನು, ಕೊಡುತ್ತು = ಕೊಟ್ಟು, ಕನ್ನಲ್ = ಕಬ್ಬಿನರಸ (ಅಥವಾ ಸಕ್ಕರೆಯಿಂದ ಆಗವ) ಇಲಡ್ಡುಹತ್ತೋಡು = ಲಾಡು ಎಂಬ ಭಕ್ಷ್ಯವನ್ನೂ, ಅನ್ನಂ = ಪರಿಕರ ಸಹಿತವಾದ ಅನ್ನವನ್ನೂ, ಶೀಡೈ = ತಿಂಡಿಯನ್ನೂ, ಕರಿ = ವ್ಯಂಜನವನ್ನೂ, ಪಡೈತ್ತು = ಸಂಪಾದಿಸಿ, ಪಿನ್ನುಂ = ತಿರುಗಿಯೂ, ಶೇವಿತ್ತು = ಮಂತ್ರಜಪವನ್ನು ಮಾಡಿ, ಅವನ್-ಪಾದಂ-ಪಣಿಮಿನ್‌ಗಳ್ = ಅವನ ಪಾದಗಳನ್ನು ಧ್ಯಾನಮಾಡಿ, ಎನ್ರನರ್ = ಎಂದು ಉಪದೇಶಿಸಿದನು.

ತಾತ್ಪರ್ಯ :- ಆಗ ಬ್ರಹ್ಮನು ''ಎಲೈ ಭಗವಂತನೇ ! ನೀನು ಪರಮಪದದಲ್ಲೂ, ಕ್ಷೀರ ಸಮುದ್ರದಲ್ಲೂ ನಿತ್ಯ ವಾಸಮಾಡುವಂತೆ, ಈ ಸತ್ಯವ್ರತ ಕ್ಷೇತ್ರದಲ್ಲೂ ನಿತ್ಯ ವಾಸಮಾಡಬೇಕು. ಹಸ್ತಿಗಿರಿಯ ಶಿಖರದಲ್ಲಿ ಸಕಲಲೋಕ ಜನರಿಂದಲೂ ನಮಿಸಲ್ಪಡುತ್ತಾ, ಬೆಳಗುವ ಈ ಪುಣ್ಯಕೋಟಿ ವಿಮಾನದಲ್ಲಿ, ಎಲ್ಲರೂ ಯಾವಾಗಲೂ ನಿನ್ನನ್ನು ನೇರವಾಗಿ ನೋಡಿ ಉಜ್ಜೀವಿತರಾಗಬೇಕು'' ಎಂದು ಕೇಳಿಕೊಂಡನು. ಅಲ್ಲಿದ್ದ ಮಹರ್ಷಿಗಳಿಗೂ ಅಭಿಗಮನ, ಉಪಾದಾನ ಇಜ್ಯಾ-ಸ್ವಾಧ್ಯಾಯ-ಯೋಗವೆಂಬ ಪಂಚಕಾಲ ಪೂಜಾಕ್ರಮವನ್ನು ಉಪದೇಶಿಸಿದನು. (ಈ ಪಾಶುರವು ಅನೇಕ ಮಾತೃಕೆಗಳಲ್ಲಿ ದೊರಕಿಲ್ಲ. ಒಂದೆರಡರಲ್ಲಿ ಮಾತ್ರವಿತ್ತು. ಬಿಡುವುದಕ್ಕಿಂತ ಪ್ರಕಟಿಸುವುದು ಮೇಲೆಂದು ವಿವರಿಸಲಾಗಿದೆ.)

ಓ ಮಹರ್ಷಿಗಳಿರಾ ! ಪ್ರಾತಃಕಾಲ ದೇವರಲ್ಲಿ ಪ್ರಪತ್ತಿಯನ್ನಾಚರಿಸಿ (ಅಭಿಗಮನ) ಹೂ-ತುಲಸಿ-ಮೊದಲಾದುವನ್ನು ತಂದು ಪೂಜಿಸಿ, (ಉಪಾದಾನ) ಮನಸ್ಸನ್ನು ನಿರ್ಮಲವನ್ನಾಗಿಸಿಕೊಳ್ಳಿ. ನಂತರ ಶುದ್ಧವಾದ ತೀರ್ಥ, ಧೂಪ, ದೀಪ, ತಾಂಬೂಲ, ಅನ್ನ, ಸಕ್ಕರೆಯ ವಸ್ತುಗಳನ್ನು-ಎಲ್ಲವನ್ನೂ ಸಂಪಾದಿಸಿ, ನಿವೇದಿಸಿ ಶೇಷವನ್ನು ಪ್ರಸಾದದಂತೆ

ಭುಜಿಸಿ (ಇಜ್ಯೆ), ಮತ್ತೆ ಜಪಾದಿಗಳನ್ನು ಮಾಡಿ (ಸ್ವಾಧ್ಯಾಯ) ಮತ್ತೆ ಧ್ಯಾನಾದಿಗಳನ್ನಾಚರಿಸಿ (ಯೋಗ) ಈ ರೀತಿ ಆರಾಧಿಸಿ ನಿಮ್ಮ ಅಭಿಮತವನ್ನು ಸಾಧಿಸಿ, ಲೋಕಕಲ್ಯಾಣವನ್ನುಂಟುಮಾಡಿ ಎಂದು ಅವರಿಗೆ ಅರುಹಿದನು.

**नाथं प्राप्यस्मदीयं कुसुम मपचितं तत्पदाब्जेऽर्पयित्वा ।**
**पूतं नीरं च दीपं मुखसुरभिवसु प्रेष्ठताम्बूलदानम् ।।**
**पानीयं चेक्षुसाराद्युपहित मशनं लड्डुकाद्यं सुभक्ष्यं ।**
**दत्वा भूयो जपित्वा तदुभयचरणं ध्यायतेत्यादिदेश ।।** २४

**ಮೂಲ :** **ಆಳಿನಿಲ್ಲೈವಿನ್ನೈಕಡಿವಾನಯಮೇದಮುಡಿನ್ದದರ್ಪಿನ್**
**ವೇಳಮಲ್ಲೈನಾಯಕನಾರ್ ವಿಡ್ಡೈಕೊಡುಕ್ಕವಿಣ್ಣೇರಿ**
**ನಾಳಿಹೈಯಿಲ್ ವಾನವರ್ಗೈ ಮಾತ್ತಿಯಿಡುಂ ನಾನ್ಮುಹನ್‌ತಾನ್**
**ಊಳಿಯೆಲಾ ಮಳಿಯಾದ ಯೋಗಮಡ್ಡೆಂದಿರುಂದಾನೇ ॥** **25**

ಅರ್ಥ :- ನಾಳಿಹೈಯಿಲ್ = ಕ್ಷಣಕಾಲದಲ್ಲಿ, ವಾನವರ್ಗೈ = ದೇವತೆಗಳನ್ನು, ಮಾತ್ತಿಯಿಡುಂ = ಆಯಾ ಸ್ಥಾನದಿಂದ ಬದಲಾಯಿಸುವಂತಹ, ನಾನ್‌ಮುಕನ್-ರ್ತಾ = ಚತುರ್ಮುಖ ಬ್ರಹ್ಮನು, ಆಳಿ-ನಿಲ್ಲೈ-ವಿನ್ನೈ = ಸಮುದ್ರದಂತೆ ಅಪಾರವಾದ ಕರ್ಮಗಳನ್ನು, ಕಡಿವಾ = ಹೋಗಲಾಡಿಸುವುದಕ್ಕಾಗಿ, ಅಯಮೇದಂ = ಅಶ್ವಮೇಧಯಾಗವು, ಮುಡಿನ್ದದರ್ಪಿನ್ = ಮುಗಿದನಂತರ, ವೇಳಮಲ್ಲೈ-ನಾಯಕನಾರ್ = ಹಸ್ತಿಗಿರೀಶನಾದ ವರದರಾಜನು, ವಿಡ್ಡೈ-ಕೊಡುಕ್ಕ = ಬೀಳ್ಕೊಡಲು, ವಿಣ್-ಏರಿ = ಬ್ರಹ್ಮಲೋಕಕ್ಕೆ ಹೋಗಿ, ಊಳಿ-ಎಲಾಂ-ಅಳಿಯಾದ = ಪ್ರಳಯಕಾಲದಲ್ಲೂ ಅಳಿಯದಂತಹ, ಯೋಗಂ = ಯೋಗವನ್ನು (ಭಗವದ್ಧ್ಯಾನವನ್ನು) ಅಡ್ಡೆಂದ್-ಇರುಂದಾನ್ = ಪಡೆದು, ನೆಲೆಯಾಗಿದ್ದನು.

ತಾತ್ಪರ್ಯ :- ಬ್ರಹ್ಮನು ಅಶ್ವಮೇಧ ಯಾಗವನ್ನು ಭಗವತ್ಕೃಪೆಯಿಂದ ನೆರವೇರಿಸಿ, ಪರಮಾತ್ಮನನ್ನು ಸಾಕ್ಷಾತ್ಕರಿಸಿ, ಅವನ ಮಹಿಮೆಯನ್ನು ಕೊಂಡಾಡಿ, ಭಗವನ್ನಿಯಮವನ್ನು ಪಡೆದು, ತನ್ನ ಹಿಂದಿನ ವಾಸಸ್ಥಾನವೂ ಮತ್ತು ಅಧಿಕಾರ ಸ್ಥಾನವೂ ಆದ ಸತ್ಯಲೋಕಕ್ಕೆ (ಬ್ರಹ್ಮಲೋಕಕ್ಕೆ) ಬೀಳ್ಕೊಂಡು ಹೋಗಿ ಸೇರಿದನು. ಎಂದಿನಂತೆ ತನ್ನ ಹಿಂದಿನ ಅಧಿಕಾರವನ್ನು ನಡೆಸುತ್ತಾ ವರದರಾಜನ ಕೃಪಾಮಹಿಮೆಯನ್ನೂ ಅವನ ಸತ್ಯಸಂಕಲ್ಪವನ್ನೂ ಅನುಸಂಧಾನ ಮಾಡುತ್ತಾ, ಕಲ್ಪಕಾಲದಲ್ಲೂ ಅಳಿದು ಹೋಗದಂತಹ ಭಗವದ್ಗುಣ ರಸಾನುಭವ (ಯೋಗವನ್ನು) ಮಾಡುತ್ತಾ, ಕೃತಕೃತ್ಯನಾಗಿ, ಅತ್ಯಂತ ಭಾಗ್ಯಶಾಲಿಯಾಗಿ ಇರುತ್ತಿದ್ದನು.

देवानुद्वास्य चान्थान् नियमयितुमलं य श्चुतुर्वक्त्र आशु !
पारावारोपमं तन्निजदुरित मपोढुं च निर्वर्त्य यज्ञम् ।।
हस्त्यद्रीशानुमत्या पुनरपि भुवनं स्वीय मागत्य तत्र ।
योगे कल्पानपाये भगवदभिमुखो ध्याननिष्ठो बभूव ।। २५

ಮೂಲ : ಆದಿಯುಗತ್ತಯನ್ ಕಣ್ಡಿಡ ನಿನ್ರವರುಳ್‌ವರದರ್
ಕಾದಲುಯರ್‌ನ್ದಕಳಿತ್ತ್ರೈತ್ತಿರೇತ್ತೈಯಿಲ್ ಕಾತ್ತಳಿತ್ತು
ವಾದುಯರ್ ದೇವಗುರುವುಕ್ಕಿರಂಗಿದ್ದುವಾಪರತ್ತಿಲ್
ಶೋದಿಯನನ್ದನ್ ಕಲಿಯ್ಳಿಲ್ ತೊಳುದೆಳ ನಿನ್ರನರೇ ॥ 26

**ಅರ್ಥ** :- ಆದಿಯುಗತ್ತು = ಕೃತಯುಗದಲ್ಲಿ, ಕಂಡಿಡ-ನಿನ್ರ = (ಬ್ರಹ್ಮನು) ಸಾಕ್ಷಾತ್ಕರಿಸುವಂತೆ ಇದ್ದವನೂ, ಅರುಳ್-ವರದರ್ = ಕರುಣೆಯೇ ಮೂರ್ತಿಗೊಂಡಂತೆಯೂ ಇರುವ ವರದನು, ತಿರೇತ್ತೈಯಿಲ್ = ತ್ರೇತಾಯುಗದಲ್ಲಿ, ಕಾದರ್-ಉಯರ್ನ್ದ = (ತನ್ನಲ್ಲಿ) ಬಹಳ ಭಕ್ತಿಯಿದ್ದ, ಕಳಿತ್ತೈ = ಗಜೇಂದ್ರನನ್ನು, ಕಾತ್ತಳಿತ್ತು = ಸಂರಕ್ಷಿಸಿ, ದುವಾಪರತ್ತಿಲ್ = ದ್ವಾಪರ ಯುಗದಲ್ಲಿ, ವಾದು-ಉಯರ್ = ವಾದಮಾಡಲ್ಪಡುವುದರಲ್ಲಿ, ಅತಿ ಮೇಲಾದ, ದೇವ-ಗುರುವುಕ್ಕು = ದೇವತೆಗಳ ಗುರುವಾದ ಬೃಹಸ್ಪತಿಗೆ, ಇರಂಗ್ಗಿ = ಕರುಣಿಸಿ, ಕಲಿಯಿಲ್ = ಕಲಿಯುಗದಲ್ಲಿ, ಶೋತಿ-ಅನಂತರ್ = ಜ್ವಲಿಸುವ ಆದಿಶೇಷನು, ತೊಳುದು-ಎಳ = ಸೇವಿಸಿ ಉಜ್ಜೀವನಗೊಳ್ಳಲು, ನಿನ್ರನರ್ = ನೆಲೆಸಿ ಇರುವನು.

**ತಾತ್ಪರ್ಯ** :- ಕರುಣೆಯೇ ಆಕಾರವೆತ್ತಿ ನಿಂತಿರುವಂತಿರುವ ವರದರಾಜನು ಕೃತಯುಗದಲ್ಲಿ ಯಾಗವೇದಿಕೆಯಲ್ಲಿ ಅವತರಿಸಿ, ಬ್ರಹ್ಮನನ್ನು ಅನುಗ್ರಹಿಸಿದನು. ತ್ರೇತಾಯುಗದಲ್ಲಿ ಗಜೇಂದ್ರನ ನಿಸ್ತುಲಭಕ್ತಿಗೆ ಪ್ರಸನ್ನನಾಗಿ ಅದನ್ನು ಕಾಪಾಡಿದನು. (ತ್ರಿಕೂಟಾಚಲದ ಶಿಖರದಲ್ಲಿ ಮಹಾಶಾಂತನೆಂಬೋರ್ವ ಬ್ರಾಹ್ಮಣನು ಕಡುತಪ್ಪಸ್ಸನ್ನಾಚರಿಸಿದನು. ಅದರಿಂದ ತನ್ನ ಪದವಿಗೆ ಧಕ್ಕೆಯಾಗಬಹುದೆಂದಂಜಿ ಇಂದ್ರನು ಅದನ್ನು ಕೆಡಿಸಲು ಅಪ್ಸರಸ್ತ್ರೀಯರನ್ನು ಕಳುಹಿಸಿದನು. ಆದರೂ ಆ ಬ್ರಾಹ್ಮಣನ ಮನವು ಚಲಿಸಲಿಲ್ಲ, ಆಗ ಇಂದ್ರನೇ ಆನೆಯಾಗಿ ಹಲವು ಹೆಣ್ಣಾನೆಗಳೊಂದಿಗೆ ಇವನೆದುರಿಗೆ ವಿಹರಿಸಿದನು. ಅದನ್ನು ನೋಡಿ ಮನಸೋತು, ತಾನೂ ಆನೆಯ ರೂಪವನ್ನೇ ತಾಳಿ ಹಲವಾರು ಹೆಣ್ಣಾನೆಗಳೊಂದಿಗೆ ವನದಲ್ಲಿ ವಿಹರಿಸುತ್ತಾ ತನ್ನ ತಪಶ್ಚರಣೆಯನ್ನೇ ಮರೆತನು. ಹೀಗೆ ಅಲೆಯುತ್ತಾ ಸಾಲಿಗ್ರಾಮ ಕ್ಷೇತ್ರದಲ್ಲಿ ಚಕ್ರತೀರ್ಥದಲ್ಲಿ ಮುಳುಗಿದಾಗ ಹಿಂದಿನ ಸ್ಮರಣೆ ಬಂದು, ವಿಷ್ಣುಕ್ಷೇತ್ರಗಳಲ್ಲಿರಬೇಕೆಂದೆಣಿಸಿ, ಬರುವಾವ ಮಾರ್ಗದಲ್ಲಿ ಗೋದಾವರಿ

ತೀರದಲ್ಲಿ ಮೃಕಂಡುವಿನ ಆಶ್ರಮಕ್ಕೆ ಬರಲು ಅದನ್ನು ತನ್ನ ಜ್ಞಾನದೃಷ್ಟಿಯಿಂದ ನಿಜಾಂಶವನ್ನರಿತು, ಆ ಆನೆಯನ್ನು ಪೂಜಿಸಿ, ಪುಣ್ಯ ಕ್ಷೇತ್ರಗಳ ಮಹಿಮೆಯನ್ನು ವರ್ಣಿಸುತ್ತಾ, ಕಂಚಿಯಲ್ಲಿರುವ ಅನಂತಸರಸ್ಸಿನಲ್ಲಿ ಮಿಂದು ದೇವರನ್ನು ಸೇವಿಸಿದರೆ ದೋಷನಿವಾರಣೆಯಾಗುವುದೆನಲು, ಕೂಡಲೆ ಅಲ್ಲಿಗೆ ಆನೆಯು ಹೋಗಿ, ದಿನವೂ ಸಾವಿರಾರು ತಾವರೆಗಳನ್ನು ಕೊಯ್ದು ಪೂಜಿಸುತ್ತಿದ್ದಿತು. ಒಮ್ಮೆ ಮಳೆಯಿಲ್ಲದೆ ಎಲ್ಲಿ ನೋಡಿದರೂ ನೀರಿಲ್ಲದೆ ಕೊಳಗಳು ಬತ್ತಿಹೋದವು. ಹೂ ದೊರಕಲಿಲ್ಲ. ಹುಡುಕುತ್ತಾ ಚಿತ್ರಕೂಟದಲ್ಲಿ ಒಂದು ಕೆರೆಯಲ್ಲಿ ಹೂ ತುಂಬ ಇರಲು ಅಲ್ಲಿಳಿಯಿತು, ಅಲ್ಲಿದ್ದ ಮೊಸಳೆಯೊಂದು ಇದರ ಕಾಲು ಹಿಡಿಯಿತು. ಅಲ್ಲಿರುವ ಹೂವನ್ನೇ ಕೊಯ್ದು ''ವರದ''ನನ್ನು ಮೊರೆಯಿಡಲು ಗರುಡಾರೂಡನಾಗಿ ಬಂದ ಶ್ರೀಕಾಂತನು ಕೂಡಲೇ ತನ್ನ ಚಕ್ರದಿಂದ ಮೊಸಳೆಯನ್ನು ಕೊಂದು, ಆನೆಯನ್ನು ಉದ್ಧಾರಮಾಡಿದನು. ಇದೇ ಇದರ ಹಿಂದಿನ ಕತೆ.) ದ್ವಾಪರ ಯುಗದಲ್ಲಿ ಸುರಗುರುವಾದ ಬೃಹಸ್ಪತಿಯನ್ನು ಉಜ್ಜೀವಿತನನ್ನಾಗಿ ಮಾಡಿದನು.

(ಒಮ್ಮೆ ದೇವ ಸಭೆಯಲ್ಲಿ ''ಗೃಹದಲ್ಲಿದ್ದು ಪೂಜಿಸುವುದು ಮೇಲೋ ಅಥವಾ ತೀರ್ಥಯಾತ್ರಾದಿಗಳನ್ನು ಮಾಡುವುದು ಮೇಲೋ'' ಎಂದು ಚರ್ಚೆಯಾಯಿತು. ಮುನಿಗಳೆಲ್ಲರೂ ಮೊದಲನೆಯದನ್ನೇ ಸಾಧಿಸಿದರು. ಬೃಹಸ್ಪತಿಯು ವಾದಿಸಿ, ಮುನಿಗಳಿಗೆ ತೇಜೋವಧೆಮಾಡಿ ಎರಡನೆಯದನ್ನೇ ಸಾಧಿಸಿದಾಗ ಮುನಿಗಳು ಇವನ ಗರ್ವಕ್ಕೆ ಕೋಪಗೊಂಡು ಮಾನವನಾಗಿ ಜನಿಸಿ, ನೋವನ್ನು ಅನುಭವಿಸುವಂತೆ ಶಪಿಸಿದರು. ಬೃಹಸ್ಪತಿಯು ಕೂಡಲೇ ನರ್ಮದಾ ತೀರದಲ್ಲಿ ಒಬ್ಬ ಬಡಬ್ರಾಹ್ಮಣ ದಂಪತಿಗೆ ಮಗುವಾಗಿ ಜನಿಸಿ, ಚಿಕ್ಕಂದಿನಿಂದಲೇ ತಂದೆತಾಯಂದಿರನ್ನು ಕಳೆದುಕೊಂಡು, ಮತ್ತೊಬ್ಬನ ಆಸರದಲ್ಲಿರುತ್ತಾ ಬಲುಕಷ್ಟಪಟ್ಟು, ಕಡೆಗೆ ಗಂಗಾತೀರದಲ್ಲಿ ಭರದ್ವಾಜ ಮುನಿಯನ್ನು ಶರಣು ಹೋಗಲು, ಅವರು ಜ್ಞಾನದೃಷ್ಟಿಯಿಂದೆಲ್ಲವನ್ನೂ ಅರಿತು ಹಸ್ತಿಗಿರಿಯಲ್ಲಿ ವರದರಾಜನನ್ನು ಕುರಿತು ತಪಸ್ಸುಮಾಡಿದರೆ ಶಾಪವಿಮೋಚನೆಯಾಗುವುದು'' ಎಂದೆನಲು, ಗುರುವು ಒಡನೆ ಹಾಗೆಯೇ ಮಾಡಲು, ಶ್ರೀಕಾಂತನು ಪ್ರಸನ್ನನಾಗಿ ದ್ವಾಪರಯುಗದಲ್ಲಿ ಪೂಜಿಸೆಂದು ಆಣತಿಯಿಡಲು, ತಪಸ್ಸನ್ನಾಚರಿಸಿ ತನ್ನ ಸ್ಥಾನವನ್ನು ಮತ್ತೆ ಸೇರಿದನು.)

ಕಲಿಯುಗದಲ್ಲಿ ಆದಿಶೇಷನು ಸೇವೆಮಾಡುತ್ತಿರುವನು. ಹೀಗೆ ಇವರಿಗಾಗಿ ನಿಂತಿರುವ ಆ ಪರಮಾತ್ಮನ ಮಹಿಮೆಯೆಷ್ಟೆಂದು ಹೇಳಲು ಸಾಧ್ಯ.

(ಆದಿವರಾಹ ರೂಪದಲ್ಲಿ ಹಿಂದೆ ಭಗವಂತನು ಭೂ ದೇವಿಯನ್ನು ಪಾತಾಳದಿಂದುದ್ಧರಿಸಿದನು. ಆ ರೂಪವನ್ನು ಸಂದರ್ಶಿಸಿದ ಆದಿಶೇಷನು ಆ ಭಗವಂತನನ್ನು ಸೇವಿಸಲು ಮೇಲಕ್ಕೆ (ಶೇಷನು ಮೇಲೆ ಬಂದಾಗ ಆದ ಹಳ್ಳವೇ ಈಗಿರುವ ಅನಂತ ಸರಸ್ಸು)

ಬಂದು ಆದರ ಸಮೀಪದಲ್ಲೇ ಒಂದು ಹುತ್ತದಲ್ಲಿರುತ್ತಾ ಇಂದಿಗೂ ಸೇವೆ ಮಾಡುತ್ತಿರುವನು. ಈ ಆಖ್ಯಾನಗಳು ಕಾಂಚಿಯ ಹಿರಿಮೆಯನ್ನು ವ್ಯಕ್ತಪಡಿಸುತ್ತವೆ.)

धात्रा साक्षात्कृतोऽसौ वरद इह कृपाकार आद्ये युगेऽभूत् ।
त्रेतायां भक्तिं भूम्ना कृतवरिवसितं तं करीन्द्रं ररक्ष ।।
वादेष्वत्यन्तदक्षे निरुपमितगुरौ द्वापरेऽपिप्रयच्च ।
दीप्तोऽनन्तः कलौ स्या त्स्वपदपरिचरो भूष्णु रित्यास्थितोऽत्र ।। २६

ಮೂಲ : ಪುಣ್ಡರೀಕಮುಯರ್ತ್ತಪುರಾಣನಾರ್ ಪೊಯ್ಯಿಲ್
ಮಾಮಕವುತ್ತರ ವೇದಿಯಿಲ್
ಕೊಣ್ಡಲಾರರುಳ್‌ಮಾರಿ ಪೊಳಿನ್ದಿಡ
ಕೊಣ್ಡದೋರುಯರ್ ಕೂರ್ಮತಿಯನ್ಬಿನಾಲ್
ಪಣ್ಡೈನಾನ್ಮರೈ ಮೌಲಿಪಡಿನ್ದಯಾನ್
ಪಾರಿನ್ಮೆಯ್‌ವಿರತಕ್ಕವಿಪಾಡಿನೇನ್
ತೊಣ್ಡಮಣ್ಡಲವೇದಿಯರ್ ವಾಳವೇ
ತೂಯತೆನ್ಮರೈವಲ್ಲವರ್‌ವಾಳವೇ ॥ 27

ಅರ್ಥ :-ಪುಂಡರೀಕಂ-ಉಯಿರ್ತ್ತ = (ಭಗವಂತನ) ನಾಭಿಕಮಲದಲ್ಲಿ ಜನಿಸಿದ, ಪುರಾಣನಾರ್ = ಅನಾದಿ ಪುರುಷನಾದಬ್ರಹ್ಮನ, ಪೊಯ್-ಇಲ್-ಮಾ-ಮಕ-ಉತ್ತರ-ವೇದಿಯಿಲ್ = ಸತ್ಯವ್ರತ ಕ್ಷೇತ್ರದಲ್ಲಿ ಆಚರಿಸಿದ ಮಹಾಯಾಗದ ಉತ್ತರ ವೇದಿಕೆಯಲ್ಲಿ, ಕೊಂಡಲ್ = (ವರದರಾಜನೆಂಬ) ಮೋಡವು, ಆರ್-ಅರುಳ್-ಮಾರಿ = ತುಂಬಿದಕರುಣೆಯೆಂಬ ಮಳೆಯನ್ನು, ಪೊಳಿಂದಿಡ = ಸುರಿಸುತ್ತಿರಲು, ಕೊಂಡದು = (ಆದರಿಂದ) ಉಂಟಾದ, ಓರ್-ಉಯರ್ = ಅಸಮಾನನಾಗಿಯೂ ಉತ್ತಮವಾಗಿಯೂ ಇರುವ, ಕೂರ್-ಮತಿ-ಅನ್ಬಿನಾಲ್ = ಸೂಕ್ಷ್ಮಬುದ್ಧಿಯಿಂದಲೂ, ಅತ್ಯಂತ ಗಾಢವಾದ ಭಕ್ತಿಯಿಂದಲೂ, ತೊಂಡಮಂಡಲವೆಂಬ ಕಾಂಚಿಯ ಪ್ರಾಂತದಲ್ಲಿ ವೇದವನ್ನರಿತ ಭಾಗವತೋತ್ತಮರೆಲ್ಲ, ವಾಳ = ಬಲುಗಾಲ ಬಾಳಲೆಂದೂ, ತೂಯ-ತೆನ್-ಮರೈ-ವಲ್ಲವರ್ = ಪರಿಶುದ್ಧವಾದ ತಮಿಳು ವೇದವನ್ನು ಅರಿತ ಭಾಗವತೋತ್ತಮರೂ, ವಾಳ = ಬಲುಗಾಲ ಬಾಳಲೆಂದೂ, ಪಂಡೈ = ಅನಾದಿಯಾದ, ನಾನ್ಮರೈ = ನಾಲ್ಕು ವೇದಗಳ, ಮೌಲಿ = ತಲೆಯಲ್ಲಿ(ಕೊನೆಯಲ್ಲಿ) ಪಡಿಂದ = ತುಂಬ ನುರಿತವನಾದ, ಯಾನ್ = ನಾನು, (ವೇದಾಂತಾಚಾರ್ಯನೆಂಬ ಬಿರುದಿನ ನಾನು) ಪಾರಿಲ್ = ಭೂ ಮಂಡಲದಲ್ಲಿ,

ಮೆಯ್-ವಿರತ-ಕವಿ = ಸತ್ಯವ್ರತನೆಂಬ ಕ್ಷೇತ್ರದ ಮಹಿಮೆಯನ್ನು ವರ್ಣಿಸುವ ಈ ಪಾಶುರಗಳನ್ನು, ಪಾಡಿನೇನ್ = ಕೀರ್ತನೆ ಮಾಡಿರುವೆನು.

ತಾತ್ಪರ್ಯ :- ಬ್ರಹ್ಮನು ಮಾಡಿದ ಅಶ್ವಮೇಧಯಾಗದ ವೇದಿಕೆಯಲ್ಲಿ ಅವತರಿಸಿದ ವರದರಾಜನ ಕೃಪಾತಿಶಯದಿಂದ ತೆಳುವಾದ ಅರಿವನ್ನೂ ಅಚಲ ಭಕ್ತಿಯನ್ನೂ ಪಡೆದು, ಈ ಹಸ್ತಿಗಿರಿ ಮಾಹಾತ್ಮ್ಯವನ್ನು ಸಂಕೀರ್ತಿಸಿದೆನು. ಶ್ರೀ ವರದರಾಜನನ್ನು ಶರಣುಹೋಗಿ, ಬೆಳಗುವ ತೊಂಡಮಂಡಲದ ವೇದವೇತ್ತರಾದ ಭಾಗವತರೂ, ಭಗವತ್ಕೃಪೆಯಿಂದ ಆಳ್ವಾರ್ರುಗಳು ಪಾಡಿರುವ ದ್ರಾವಿಡ ವೇದದಲ್ಲಿ ನುರಿತು ರಸಿಕರಾದ ಭಾಗವತರೂ, ಅಂದರೆ ಉಭಯ ವೇದಾಂತ ರಸಿಕ ಶಿರೋಮಣಿಗಳು ಈ ದಿವ್ಯ ಪ್ರಬಂಧವನ್ನು (ಹಸ್ತಿಗಿರಿ ಮಾಹಾತ್ಮ್ಯವನ್ನು) ಅನುಸಂಧಾನ ಮಾಡಿ, ಹಲವಾರು ವರ್ಷಗಳು ಹರ್ಷದಿಂದ ಬಾಳಿ ಬೆಳಗಲಿ.

पुण्डरीकजपुराणपुँस्कृते । निर्व्यलीक उदिते महामखे ।
देववारिमुचि वार्षुके कृपां । तत्समृद्धमतिसूक्ष्मभक्तितः ।।
तोण्डमण्डलगता श्च वैदिकाः । पावनद्रविडवेदवेदिनः ।
जीविता स्स्युरिति सत्यवैभवं । प्राक्तनोक्तिमकुटार्य उज्जगौ ।। २७

ಮೂಲ : ಉಯ್ ವಿರತಮೊನ್ನಿನ್ರಿಯಡೈನ್ದಾರುಯ್ಯ,
ವೊರುವಿರತಂ ತಾನ್ಕೊಂಡವುಯರ್ನ್ದಮಾಲ್ಯೆ,
ಶೆಯ್ ವಿರತಮೊನ್ರಾಲುಂ ತೆಳಿಯಹಿಲ್ಲಾ,
ಶಿನ್ದೈಯಿನಾಲ್ ದಿಶೈಪಡೈತ್ತದಿಶೈಮುಹನ್ ತಾನ್
ಪೊಯ್ ವಿರತನಿಲಮೆಲ್ಲಾಂಪೋಯೇಮೀಂಡು,
ಪುಹಲಿದುವೇ ಪುಣ್ಣಿಯತುಕ್ಕೆನ್ರುಶೇರ್ನ್ದ,
ಮೆಯ್ ವಿರತನನ್ನಿಲತ್ತುಮೇನ್ಮೈಯೇತ್ತಿ,
ವೇದಾನ್ತವಾಶಿರಿಯನ್ ವಿಳಂಗಿನಾನೇ ॥ 28

ಅರ್ಥ:- ದಿಶೈ-ಪಡೈತ್ತ = ದಿಕ್ಕುಗಳನ್ನೂ ಸೃಷ್ಟಿಸಿದವನೂ, ದಿಶೈ-ಮುಹನ್ = (ದಿಕ್ಕುಗಳು 4) ನಾಲ್ಕು ಮುಖವುಳ್ಳವನೂ ಆದ ಬ್ರಹ್ಮನು, ಉಯ್-ವಿರತಂ = (ತಾವು) ಉಜ್ಜೀವಿಸಲು ಉಪಾಯವು, ಒನ್ರುಂ-ಇನ್ರಿ-ಅಡೈಂದಾರ್ = (ಬೇರೊಂದು) ಇಲ್ಲದೆ ಶರಣುಹೋದವರು, ಉಯ್ಯ = ಉದ್ಧಾರಮಾಡುವುದಕ್ಕೆ, ಒರುವಿರತಂ = (''ಶರಣಾಗತರಕ್ಷಣ''ವೆಂಬ) ಅಸಾಧಾರಣವ್ರತವನ್ನು , ತಾನ್-ಕೊಂಡ = ತಾನೇ

ಕೈಗೊಂಡವನಾದ, ಉಯರ್‌ನ್ದ-ಮಾಲ್ಯೆ = (ಅದರಿಂದ) ಅತ್ಯುತ್ತಮನೆಂದು ಹೊಗಳಿಸಿಕೊಳ್ಳುವ ಭಗವಂತನನ್ನು, ಶೆಯ್-ವಿರತಂ-ಒನ್ರಾಲುಂ = (ತನ್ನಿಂದ) ಮಾಡಲ್ಪಡುವ ಮತ್ತಾವ ವ್ರತದಿಂದಲೂ, ತೆಳಯಹಿಲ್ಲಾದ-ಶಿಂದ್ಯೆಯಿನಾಲ್ = ನೇರವಾಗಿ ನೋಡಲಾಗದಂತಹ ಚಿಂತೆಯಿಂದ, ಪೊಯ್-ವಿರತನಿಲಂ-ಎಲ್ಲಾಂ = (ಫಲವಿಲ್ಲದುದರಿಂದ) ವ್ಯರ್ಥವಾಗುವ ವ್ರತಗಳುಳ್ಳ ಕ್ಷೇತ್ರಗಳಿಗೆಲ್ಲಾ, ಪೋಯ್ = ಹೋಗಿ ಸುತ್ತಿ, ಮೀಂಡು = ಹಿಂತಿರುಗಿ, ಇದುವೇ-ಪುಣ್ಣಿಯತ್ತುಕ್ಕು-ಪುಹಲ್ = ಈ ಕ್ಷೇತ್ರವೇ ಪುಣ್ಯವನ್ನು ಪಡೆಯಲು ಸಾಧಕವಾಗುವುದು, ಎನ್ರು = ಎಂದು, ಶೇರ್‌ನ್ದ = ಬಂದು ಸೇರಿದ, ಮೆಯ್ ವಿರತ-ನಲ್ -ನಿಲತ್ತು = ಸತ್ಯವ್ರತವೆಂಬ ಕ್ಷೇತ್ರದ, ಮೇನ್ಮೈ = ಮೇಲ್ಮೆಯನ್ನು, ಎತ್ತಿ = ಕೊಂಡಾಡಿ, ವೇದಾಂತ-ಆಶಿರಿಯನ್ = ವೇದಾಂತ ದೇಶಿಕರು, ವಿಳಂಗಿನಾನ್ = ಚೆನ್ನಾಗಿ ಬೆಳೆದರು.

ತಾತ್ಪರ್ಯ :—ಸತ್ಯವ್ರತ ಕ್ಷೇತ್ರವು ಬಹು ಪುಣ್ಯಕ್ಷೇತ್ರ. ಬ್ರಹ್ಮನು ಅನೇಕ ಕ್ಷೇತ್ರಗಳಲ್ಲಿ ಸಂಚರಿಸಿ, ಕಡೆಗೆ ಈ ಕ್ಷೇತ್ರಕ್ಕೆ ಬಂದು ಅಶ್ವಮೇಧ ಯಾಗಮಾಡಿ, ಆ ಯಾಗವೇದಿಕೆಯಲ್ಲಿ ಅವತರಿಸಿದ ವರದರಾಜನನ್ನು ಸೇವಿಸಿ, ಸಂದರ್ಶಿಸಿ, ಅಸಾಧಾರಣ ಫಲವನ್ನು ಪಡೆದನು. ಅಂತಹ ಮಹಿಮೆಯುಳ್ಳ ಕ್ಷೇತ್ರದ ಮೇಲ್ಮೆಯನ್ನು ವೇದಾಂತಾಚಾರ್ಯನಾದ ನಾನು ''ಹಸ್ತಿಗಿರಿ ಮಹಾತ್ಮ್ಯ''ವೆಂಬ ದಿವ್ಯ ಪ್ರಬಂಧದ ಮೂಲಕ ಪ್ರಚುರಪಡಿಸಿರುವೆನು.

ಅಖಂಡವಾಗಿದ್ದ ವೇದರಾಶಿಯನ್ನು ನಾಲ್ಕು ಗುಂಪಾಗಿ ವಿಂಗಡಿಸಿ, ಬ್ರಹ್ಮಸೂತ್ರಗಳನ್ನು ರಚಿಸಿ, ಶ್ರೀ ವೇದವ್ಯಾಸರು ವೇದಾಚಾರ್ಯರೆನಿಸಿದರು. ಹಾಗೆಯೇ ನಮ್ಮೀ ದೇಶಿಕರು ತಮಿಳು ವೇದಗಳನ್ನು (ಪ್ರಬಂಧ ಸಾರದಲ್ಲಿ) ವಿಭಾಗಿಸಿ, ತೋರಿಸಿಕೊಟ್ಟು, ''ರಹಸ್ಯ ರತ್ನಾವಳೀ'' ಮುಂತಾದ ಸೂತ್ರಗಳನ್ನು ರಚಿಸಿ, ''ಹಸ್ತಿಗಿರಿ ಮಾಹಾತ್ಮ್ಯ''ವೆಂಬ ಇತಿಹಾಸವನ್ನೂ ಪಾಡಿ, ''ವೇದಾಂತಾಚಾರ್ಯ''ರೆಂಬ ಬಿರುದನ್ನು ಶ್ರೀ ರಂಗನಾಥನಿಂದಲೇ ಪಡೆದು ಮೆರೆದರಲ್ಲವೇ, ಈ ಆಶಯವು ಅವರ ಉಕ್ತಿಯಿಂದಲೇ ವ್ಯಕ್ತವಾಗಿದೆ.

**स्रष्टाशानां दिवस्य स्त्वनितरगतिकोज्जीवनैकव्रतस्य ।**
**धर्तुर्देवाधिराज स्तदितरकरणात् चिन्तयाऽनीक्ष्यतायाः ।।**
**सर्वत्र व्यर्थभूमिष्वपि चिर मटनात् सन्निवृत्तोऽतिपुण्यम् ।**
**आयादित्येव सत्यव्रतविभव मगायच्च वेदान्तसूरिः ॥** २८

ಮೂಲ : ಶೀರಾರುಂತೂಪ್ಪುಲ್ ತಿರುವೇಂಗಡಮುಡೈಯಾನ್,
ತಾರಾರರುಳಾಳರ್ ತಾಳ್ ನಯನ್ದು-ಶೀರಾಹ

ಮೆಯ್ ವಿರತನ್ನಿಲತ್ತುಮೇನ್ಮೈಯಿದು ಮೊಳಿನ್ದಾನ್
ಕೈಯಿಲ್ ಕನಿಪೋಲಕ್ಕಂಡು ॥ 29

**ಅರ್ಥ** :- ಶೀರ್-ಅರುಂ = ಮಹಿಮಾ ಪೂರ್ಣರಾದ, ತೂಪ್ಪುಲ್ = ತೂಪ್ಪುಲಿನಲ್ಲಿ ಅವತರಿಸಿದ, ತಿರು-ವೇಂಗಡಮುಡ್ಡೈಯಾನ್ = "ಶ್ರೀಮಾನ್ ವೇಂಕಟನಾಥನು" ಎಂಬ ದೇಶಿಕರು, ತಾರ್-ಆರ್-ಅರುಳಾಳರ್ = ಹಾರಗಳಿಂದ ತುಂಬಿ ಪರಿಭೂಷಿತನಾದ ವರದರಾಜ, ತಾಳ್-ನಯನ್ದು = ಪಾದಾರವಿಂದಗಳನ್ನೇ ಹೊಂದಿ, ಮೆಯ್ ವಿರತ-ನಲ್-ನಿಲತ್ತು-ಮೇನ್ಮೈ = ಸತ್ಯವ್ರತನೆಂಬ ಅತಿ ಶ್ರೇಷ್ಠ ಕ್ಷೇತ್ರದ ಹಿರಿಮೆಯನ್ನು, ಕೈಯಿಲ್-ಕನಿ-ಪೋಲ-ಕಂಡು = ಅಂಗೈಯಲ್ಲಿರುವ ನೆಲ್ಲೀ ಹಣ್ಣಿನಂತೆ ಚೆನ್ನಾಗಿ ಅರಿತು, ಶೀರಾಹ = ಬಳುವಳಿಯಂತೆ, ಇದು = ಈ ಪ್ರಬಂಧವನ್ನು, ಮೊಳಿಂದಾನ್ = ಹೇಳಿ ಬೆಳಗಿದರು.

**ತಾತ್ಪರ್ಯ** :- ಮಹಾಮಹಿಮರಾದ ತೂಪ್ಪುಲ್‌ನಲ್ಲಿ ಶ್ರೀನಿವಾಸನ ಘಂಟೆಯ ಅಂಶವಾಗಿ, "ಶ್ರೀಮಾನ್ ವೇಂಕಟನಾಥಃ" ಎಂದು ಖ್ಯಾತಿಪಡೆದು ಅವತರಿಸಿದ, ಶ್ರೀ ದೇಶಿಕನಾದ ನಾನು, ಶ್ರೀ ವರದರಾಜನ ಅಡಿದಾವರೆಗಳನ್ನೇ ಅತ್ಯಾದರಿಸಿ, ಸತ್ಯವ್ರತ ಕ್ಷೇತ್ರದ ಮಹಿಮೆಯನ್ನು ಅಂಗೈಯಲ್ಲಿನ ಹಣ್ಣಿನಂತೆ ಚೆನ್ನಾಗಿ ಅನುಭವಿಸಿ ಈ ಪ್ರಬಂಧದ ಮೂಲಕ ಪ್ರಕಾಶಪಡಿಸಿರುವೆನು.

तूप्पुल् श्रीवेङ्कटेशः शुभगुणविभव स्तस्य देवाधिनेतुः ।
मालाद्यै र्भूषितस्य प्रथितपदयुगं संश्रितोऽनन्यभक्त्या ।।
क्षेत्रे सत्यव्रताख्ये निधिमिव निहितं तद्गतं वैभवं च ।
संप्रेक्ष्येमं समग्रं करतलफलवत् प्राह दिव्यप्रबन्धम् ।। २९

।। श्रीमते निगमान्तमहादेशिकाय नमः ।।

श्रीमान् वेङ्कटनाथदेशिकमणिः सत्यव्रतैकाश्रयः ।
श्रीमद्धस्तिगिरिप्रभावमतुलं गाथाभिरास्वादयत् ।।
गोपालो निगमान्तलक्ष्मणगुरुप्राच्याङ्घ्रिपद्माश्रयः ।
कर्णाटामरभाषितेन विवृतिं श्लोकां श्च तासां व्यधात् ।।

श्रीमते निगमान्तमहादेशिकाय नमः ।।

श्रीमान् वेङ्कटनाथार्यः कवितार्किकेसरी ।।

वेदान्ताचार्यवर्यो मे सन्निधत्तां सदाहृदि ।।

# ಅಡೈಕಲಪ್ಪತ್ತು

ಮೂಲ : ಪತ್ತಿಮುದಲಾಮವತ್ತಿಲ್ ಪತಿಯೆನಕ್ಕು ಕ್ಕೂಡಾಮಲ್,
ಎತ್ತಿಶೈಯು ಮುಳನ್ರೋಡಿಯಿಳೈತ್ತುವಿಳುಂ ಕಾಕಂಪ್ಪೋಲ್,
ಮುತ್ತಿತರುಂನಗರೇಳಿಲ್ ಮುಕ್ಕಿಯಮಾಂ ಕಚ್ಚಿತನಿಲ್,
ಅತ್ತಿಗಿರಿಯರುಳಾಳರ್ಕ್ಕ ಅಡೈಕ್ಕಲನಾಂ ಪುಹುಂದೇನೇ ॥ 1

ಅರ್ಥ :- ಪತ್ತಿ = ಭಕ್ತಿಯೇ, ಮುದಲಾಂ = ಅವತ್ತಿಲ್ = ಮೊದಲಾದವುಗಳಲ್ಲಿ, ಪದಿ = ನಿಲುಗಡೆಯು, ಎನಕ್ಕು = ನನಗೆ, ಕೂಡಾಮಲ್ = ದೊರಕದೆ, ಎತ್ತಿಶೈಯುಂ = ಎಲ್ಲೆಲ್ಲೂ, ಉಳಿನ್ರ್ = ಅಲೆದಾಡಿ, ಓಡಿ = ಓಡಿ, ಇಳೈತ್ತ್ = ಬಹಳ ಆಯಾಸಗೊಂಡು, ವಿಳುಂ = (ಕಾಲಿಗೆ) ಬಿದ್ದ, ಕಾಕಂಪೋಲ್ = ಕಾಕಾಸುರನಿಗೆ ಕೊಟ್ಟಂತೆ, ಮುತ್ತಿ = ಮುಕ್ತಿಯನ್ನು, ತರುಂ = ಕೊಡುವ, ನಗರ್ -ಏಳಿಲ್ = ಏಳು ನಗರಗಳಲ್ಲಿ, ಮುಕ್ಕಿಯುಂ-ಆಂ = ಮುಖ್ಯವಾದ, ಕಚ್ಚಿ-ತನಿಲ್ = ಕಂಚಿಯಲ್ಲಿ, (ಕಂಗೊಳಿಸುವ) ಅತ್ತಿಗಿರಿ = ಹಸ್ತಿಗಿರಿಯಲ್ಲಿರುವ, ಅರುಳಾಳರ್ಕ್ಕ = ದಯಾಸಾಗರನಾದ ವರದರಾಜನಿಗೆ, ಅಡೈಕ್ಕಲಂ = ರಕ್ಷಿಸಲ್ಪಡಬೇಕಾದ ವಸ್ತುವಾಗಿ, ನಾಂ = ನಾನು, ಪುಹುಂದೇನ್ = ಆಶ್ರಯಿಸಿದವನಾದೆನು.

ತಾತ್ಪರ್ಯ :- ನನಗೆ ಭಕ್ತಿ ಮೊದಲಾದುವಲ್ಲಿ ನೆಲೆ ದೊರಕಲಿಲ್ಲ. ಕಾರಣ ಅನರ್ಹತೆ. ಎಲ್ಲಕಡೆಯೂ ಅಲೆದಲೆದು, ಓಡೋಡಿ, ಸಾಕಾಗಿ ಕಡೆಗೂ ಯಾವ ರಕ್ಷಣೆಯೂ ಸಿಕ್ಕದೆ, ಶ್ರೀರಾಮನನ್ನು ಶರಣುಹೋದ ಕಾಕಾಸುರನಿಗೆ ದಯಾನಿಧಿಯಾದ ಶ್ರೀರಾಮನು ರಕ್ಷಣೆಯನ್ನು ಕರುಣಿಸಿದ ಹಾಗೆ ಮುಕ್ತಿಕೊಡಲು ಶಕ್ತಿಯಿರುವ ಏಳು ಪುಣ್ಯನಗರಗಳಲ್ಲಿ ಪ್ರಧಾನವೆನಿಸಿದ ಕಾಂಚಿಯಲ್ಲಿ ಬೆಳಗುವ ಹಸ್ತಿಗಿರಿಯಲ್ಲಿ ಕಂಗೊಳಿಸುವ ಕರುಣೆಗೆ ಕಡಲಾದ ಆ ವರದ ಪ್ರಭುವನ್ನು ಶರಣುಹೊಂದಿ ಉಜ್ಜೀವಿತನಾದೆನು.

भक्त्यादौ अनवाप्तसुस्थितिः अटन् सर्वत्र धावन् यथा
श्रान्त स्सन् पतितो रघूत्तमपदे काक स्तथा सप्तसु ।
मुक्तिप्राप्ति करीषु पूर्षु महिते काञ्चीपुरे दीव्यतः
हस्तीशस्य कृपैकलक्ष्य मधुना भूत्वा त माशिश्रिये ।। १

ಮೂಲ : ಶಡೈಮುಡಿಯರ್ಚ ಶತುಮುಹನೆನ್ರಿವರ್ ಮುದಲಾಂತರಮೆಲ್ಲಾಂ,
ಅಡೈಯವಿನೈಪ್ಪಯನಾಹಿಅಳಿನ್ದ್ವಿಡುಂ ಪಡಿಕಂಡ್,
ಕಡಿಮಲರಾಳ್ ಪಿರಿಯಾದ ಕಚ್ಚಿನಹರತ್ತಿಗಿರಿ,
ಇಡಮುಡೈಯ ವರುಳಾಳರಿಣೈಯಡಿಹಳಡೈಂದೇನೇ ॥ 2

ಅರ್ಥ :- ಶಡೈ-ಮುಡಿಯನ್ = ಜಟೆತಲೆಯವನೂ, (ಈಶ್ವರನೂ), ಶತು-ಮುಹನ್ = ಚತುರ್ಮುಖನೂ, (ಬ್ರಹ್ಮನೂ) ಎನ್ರ್-ಇವರ್-ಮುದಲಾಂ-ತರಂ-ಎಲ್ಲಾಂ = ಇವರೇ ಮೊದಲಾದ ಬಗೆಯವರೆಲ್ಲರೂ, ಅಡೈಯ = ಒಟ್ಟಾಗಿ ಬಂದು ಸೇರಲು, ವಿನೈ-ಪಯನ್-ಆಹಿ = ಕರ್ಮದ ಫಲವಾಗಿ, ಅಳಿಂದ್-ವಿಡುಂ = ನಶಿಸಿ ಹೋಗುವ, ಪಡಿ = ರೀತಿಯನ್ನು, ಕಂಡ್ = ಕಂಡು, ಕಡಿಮಲರಾಳ್ = ತುಂಬ ಸುವಾಸನೆಯ ಪೂವಿನಲ್ಲಿ ಅವತರಿಸಿದ ಲಕ್ಷ್ಮಿಯು, ಪಿರಿಯಾದ = ಅಗಲದಿರುವ, ಕಚ್ಚಿನಹರ್ = ಕಾಂಚೀಪುರದಲ್ಲಿರುವ, ಅತ್ತಿಗಿರಿ = ಹಸ್ತಿಗಿರಿಯಲ್ಲಿ ಬೆಳಗುವ, ಅರುಳಾಳರ್ = ದಯಾಳುವಾದ ವರದರಾಜನ, ಇಣೈ-ಅಡಿಹಳ್ = ಪಾದಗಳೆರಡನ್ನೂ, ಅಡೈಂದೇನ್ = ಶರಣುಹೋದೆನು.

ತಾತ್ಪರ್ಯ :- ''ಬ್ರಹ್ಮರುದ್ರಾದಿ ದೇವತೆಗಳ ಐಸಿರಿಯೆಲ್ಲವೂ ನಶ್ವರವಾದುದು. ಅವರೂ ಅವರವರ ಕರ್ಮಾನುಸಾರವಾಗಿರುವರು. ಅದಕ್ಕೆ ತಕ್ಕಂತೆ ಅವರವರ ಐಶ್ವರ್ಯ ಬಂದಿದೆ'' ಎಂಬುದನ್ನು ಚೆನ್ನಾಗಿ ಅರಿತು, ಘಮಿಘಮಿಸುವ ಪೂ ಪರಿಮಳದ ಕುವರಿಯಾದ ಸಿರಿದೇವಿಯನ್ನು ಬಿಟ್ಟಿರದ, ಕಂಚಿಯಲ್ಲಿ ಕಂಗೊಳಿಸುವ, ಆ ಹಸ್ತಿಗಿರಿ ಪ್ರಭುವಾದ, ಮತ್ತು ದಯಾನಿಧಿಯಾದ ವರದರಾಜನ ಅಡಿದಾವರೆಗಳೆರಡನ್ನೂ ಶರಣುಹೋಗಿಹೆನು.

**कपर्दिचतुराननप्रभृतयः स्वकर्मानुगाः**
**भवन्ति चलवैभवा इति विलोक्य पद्माजुषः ।**
**गजाचलमहेशितुः प्रथितकाञ्चिपूर्वासिनः**
**दयाब्धिवरदप्रभोः शरणमेमि पादद्वयम् ॥** २

ಮೂಲ : ತಂದಿರಂಗಳ್ ವೇರಿನ್ರಿತ್ತಮದ್ವಳಿಯುಳಿಯಾದ್,
ಮಂದಿರಂಗಳ್ ತಮ್ಮಾಲುಂ ಮತ್ತು ಮುಳ್ಳವುರೈಯಾಲುಂ,
ಅಂದರಂಕಂಡಡಿಪಣಿವಾರನೈವರ್ಕ್ಕುಮರುಳ್ ಪುರಿಯುಂ
ಶಿಂದುರವೆರ್ಪಿರ್ದೈಯವನಾರ್ ಶೀಲಮಲ್ಲದರಿಯೇನೇ ॥ 3

ಅರ್ಥ :- ವೇರು = ಬೇರೆ, ತಂತಿರಂಗಳ್ = ತಂತ್ರಗಳು (ಉಪಾಯಗಳು) ಇನ್ರಿ = ಇಲ್ಲದೆ, ತಮದ್ = ತಮ್ಮ ತಮ್ಮ, ವಳಿ = ಮಾರ್ಗವು, ಅಳಿಯಾದ್ = ಕೆಟ್ಟುಹೋಗದೆ, ಮಂತಿರಂಗಳ್-ತಮ್ಮಾಲುಂ = ಮಂತ್ರಗಳಿಂದಲೂ, (ಅಷ್ಟೇಅಲ್ಲದೆ) ಮತ್ತುಂ = ಮತ್ತು, ಉಳ್ಳ = ಇರುವ, ಉರೈಯಾಲುಂ = ಸೂಕ್ತಿಗಳಿಂದಲೂ, ಅಂತರಂ = ವ್ಯತ್ಯಾಸವನ್ನು, ಕಂಡ್ = ನೋಡಿ, (ತಿಳಿದು) ಅಡಿ = ಪಾದಗಳನ್ನು, ಪಣಿವಾರ್ = ನಮಿಸುವ, ಅನ್ನೈವರ್ಕ್ಕುಂ = ಎಲ್ಲರಿಗೂ, ಅರುಳ್ = ದಯೆಯನ್ನು, ಪುರಿಯುಂ = ಸುರಿಸುವ (ತೋರುವ), ಶಿಂದುರವೆರ್ಪ್ = ಹಸ್ತಿಗಿರಿಗೆ, ಇರೈಯವ-ನಾರ್ = ಒಡೆಯನಾದ ವರದರಾಜನ, ಶೀಲಂ-ಅಲ್ಲದ್ = ಸ್ವಭಾವವನ್ನು ಹೊರತು, (ಬೇರೆ ಯಾವುದನ್ನೂ) ಅರಿಯೇನ್ = ಅರಿಯೆನು.

ತಾತ್ಪರ್ಯ :- ನಮ್ಮ ವರದರಾಜನ ಶೀಲವಿಂತಹುದೆಂದು ಪೇಳಲರಿಯೆನು. ಆಶ್ಚರ್ಯಕರವಾದುದದು, ಮತ್ತು ಅಪಾರವಾದುದು. ಯಾರೇ ಆಗಲಿ ಅವರವರು ತಂತಮ್ಮ ಧರ್ಮಗಳನ್ನು ಬಿಡದೆ ನಡೆಸಿಕೊಂಡು ಪ್ರಪನ್ನರಾದರೆ ಅಂತಹವರಿಗೆ ಪೂರ್ಣ ಫಲವನ್ನು ಕೊಡದೆ ಇರನು. ಕೊಟ್ಟೇ ಕೊಡುವನು. ಇದೇ ಅವನ ಶೀಲ. (ವರ್ಣಾಶ್ರಮ ಧರ್ಮಗಳೂ, ನಿತ್ಯನೈಮಿತ್ತಿಕ ಕರ್ಮಗಳೂ ಭಗವಂತನ ಆಜ್ಞೆಯೆಂದು ಆಚರಿಸಬೇಕು. ಶರಣಾಗತರನ್ನು ಸಂರಕ್ಷಿಸಿ, ಇಷ್ಟಫಲಗಳನ್ನು ಕರುಣಿಸುವನು. ಪ್ರಪನ್ನನೆಂದಿಗೂ ಕೆಡನು).

**तन्त्रै रन्यै र्विना स्वस्वसरणिं अविनाश्यैव मन्त्रै स्तथोक्तैः**
**वैलक्षण्यं च सूक्तैः सुविशद मवलोक्यैव पादौ नमन्ति ।**
**कारुण्योद्वर्षिणोऽस्मास्वखिलतनुयुतेष्वस्य देवाधिनेतुः**
**हस्तिक्षोणीधराधीश्वरवरदविभोः शीलतोऽन्यन्न जाने ।।** ३

ಮೂಲ : ಕಾಕಮಿರಾಕ್ಕದನ್ ಮನ್ನರ್ ಕಾದಲಿಕತ್ತಿರಬಂದು,
ನಾಕಮರನಯನ್‌ಮುದಲಾನಾಹನಹರಾರ್ ತಮಕ್ಕುಂ,
ಬೋಗಮುಯರ್‌ವೀಡುಪೆರ ಪೊನ್ನರುಳ್ ಶೆಯ್ದಮೈಕಂಡ್,
ನಾಕಮಲೈನಾಯಹನಾರ್ ನಲ್ಲಡಿಪ್ಪೋದಡೈಂದೇನೇ ॥ 4

ಅರ್ಥ :- ಕಾಕಂ = ಕಾಕಾಸುರ, ಇರಾಕ್ಕದನ್ = ವಿಭೀಷಣ, ಮನ್ನರ್-ಕಾದಲಿ = ರಾಜರಾದ (ವೀರರಾದ) ಪಾಂಡವರ ಪ್ರಿಯಮಡದಿ (ದ್ರೌಪದಿ), ಕತ್ತಿರಬಂದು = ಕ್ಷತ್ರಬಂಧು, ನಾಕಂ = ಕಾಳಿಂಗ ಅಥವಾ ಗಜೇಂದ್ರ, ಅರನ್ = ರುದ್ರ, ಅಯನ್ = ಬ್ರಹ್ಮ, ಮುದಲಾಂ = ಮೊದಲಾದ, ನಾಕನಗರಾರ್-ತಮಕ್ಕುಂ = ದೇವಲೋಕನಿವಾಸಿಗಳಾದ ದೇವತೆಗಳಿಗೂ, ಬೋಗಂ = ಸುಖಗಳಲ್ಲಿ, ಉಯರ್ = ಉತ್ತಮವಾದ ಆನಂದವುಳ್ಳ,

ವೀಡ್ = ಮೋಕ್ಷವನ್ನೂ, ಪೆರ = ಪಡೆಯುವಂತೆ, ಪೊನ್-ಅರುಳ್ = ಉತ್ತಮವಾದ ದಯೆಯನ್ನು, ಶೆಯ್ದಮೈ = ತೋರಿರುವುದನ್ನು, ಕಂಡ್ = ತಿಳಿದು, ನಾಕ-ಮಲೈ = ಹಸ್ತಿಗಿರಿಯ, ನಾಯಕನಾರ್ = ಪ್ರಭುವಾದ ವರದರಾಜನ, ನಲ್-ಅಡಿ-ಪೋದು = ಅತ್ಯುತ್ತಮವಾದ ಅಡಿದಾವರೆಗಳನ್ನು, ಅಡ್ಬೈಂದೇನ್ = ಶರಣುಹೊಂದಿದೆನು.

ತಾತ್ಪರ್ಯ :- ಭಗವಂತನು ಸೀತಾದೇವಿಯಲ್ಲಿ ಪಾಪವೆಸಗಿದ ಕಾಕಾಸುರನನ್ನೂ ರಕ್ಷಿಸಿದನಲ್ಲವೇ ! ವಿಭೀಷಣ ಮತ್ತು ಅವನೊಡನಿದ್ದ ರಕ್ಕಸರನ್ನು ಅಕ್ಕರೆಯಿಂದ ರಕ್ಷಿಸಿ, ಅವರ ಆನಂದವನ್ನು ಉಕ್ಕಿಸಿದನಲ್ಲವೇ ! ಖ್ಯಾತವೀರರಾದ ಪಾಂಡವರ ಪ್ರಿಯಮಡದಿ ದ್ರೌಪದಿಯನ್ನು ಸಂರಕ್ಷಿಸಿ, ಅವಳ ಪ್ರತಿಜ್ಞೆಯನ್ನು ಈಡೇರಿಸಿದುದೂ ಅಲ್ಲದೆ ಅವಳಿಗಾಗಿಯೇ ಪಾಂಡವರನ್ನುಳಿಸಿ ಕಾಪಾಡಿದನಲ್ಲವೇ ! ಕಾಳಿಂಗನ ಹಾವಳಿಯನ್ನು ಅಳಿಸಿ ಪೊರೆದನಲ್ಲವೇ ! ಗಜರಾಜನನ್ನು ಉಜ್ಜೀವನಗೊಳಿಸಿದನಲ್ಲವೇ ! ರುದ್ರನಿಗೆ ಬಂದ ಬ್ರಹ್ಮಹತ್ಯೆಯನ್ನು ನಿವಾರಿಸಿದನಷ್ಟೆ, ಬ್ರಹ್ಮನನ್ನು ಕೈಬಿಡದೆ, ವೇದಗಳನ್ನು ಮತ್ತೆ ತಂದಿತ್ತು ಪರಿಪಾಲಿಸಿದನಲ್ಲವೆ ! ಹೀಗೆ ಮಾಡಿದ ರಕ್ಷಣಾಕಾರ್ಯಗಳಷ್ಟಿಷ್ಟಲ್ಲ. ಆಶ್ರಿತರಿಗೆ ಐಹಿಕ ಮತ್ತು ಆಮುಷ್ಮಿಕ ಐಶ್ವರ್ಯಗಳನ್ನು ದೊರಕಿಸಿ ಪೊರೆದಿಹನು. ಅಂತಹ ಕರುಣೆಗೆ ಕಡಲೆನಿಸಿಹ ಹಸ್ತಿಗಿರಿಯೊಡೆಯ ವರದನ ಅಡಿದಾವರೆಗಳನ್ನು ಪಿಡಿದೆನು. (ನಾವೆಂತಹ ಪಾಪವೆಸಗಿದ್ದರೂ ಪೂರ್ಣನಂಬಿಕೆಯಿಂದ ಸರ್ವಶಕ್ತನಾದ ಆವನನ್ನು ಶರಣುಹೋದರೆ ಕಾಪಾಡುವನು.)

**काक-क्रव्याद्-पाण्ड्वात्मजनृपरमणी-क्षत्रबन्धु-द्विपेन्द्र-**
**स्थाणु-ब्रह्मादिबृन्दारकपुरनिलयेभ्य स्सुखेष्वग्रभाजम् ।**
**मोक्षं चानन्दपूर्णं ददत मिह दयां प्रेक्ष्य पूर्णां तदीयां**
**नागागाधीशदेवाधिपवरदपदाम्भोजयुग्मं प्रपद्ये ॥ ४**

**ಮೂಲ :** **ಉಹಕ್ಕುಮವೈಯುಹನ್ದುಹವಾವನೈತ್ತು ಮೊಳಿನ್ದುರವುಗುಣಂ,**
**ಮಿಹತ್ತುಣಿವು ಪೆರವುಣರ್ನ್ದ್ ವಿಯನ್ ಕಾವಲೆನವರಿತ್ತ್,**
**ಶಹತ್ತಿಲೊರುಪುಹಲಿಲ್ಲಾತ್ತವ ಮಿಲಿಯೇನ್ ಮದಿಳ್ಕಚ್ಚಿ**
**ನಹರ್ಕರುಣ್ಣೈನಾದನ್ನೈ ನಲ್ಲಡ್ಬೈಕ್ಕಲಮಾಯಡ್ಬೈನ್ದೇನೇ ॥ 5**

ಅರ್ಥ :- ಉಹಕ್ಕುಂ-ಅವೈ = ಸಂತೋಷಪಡುವಂತಹವುಗಳನ್ನು, ಉಹನ್ದು = ಸಂತೋಷವಾಗಿ ಸ್ವೀಕರಿಸಿ (ದೇವರಿಗೆ) ಉಹವಾ = ಬೇಡವಾದ, ಅನೈತ್ತುಂ = ಎಲ್ಲವನ್ನೂ ಒಳಿಂದ್ = ಬಿಟ್ಟು, ಉರವು = ಸಂಬಧವನ್ನೂ, ಗುಣಂ = ಗುಣಗಳನ್ನೂ, ಮಿಹ = ಹೆಚ್ಚಾಗಿ, ತುಣಿವ್ = ವಿಶ್ವಾಸವನ್ನು, ಪೆರ = ಪಡೆಯುವಂತೆ, ಉಣರ್ನ್ದ್ = ಪರಿಶೀಲಿಸಿ, ತಿಳಿದು,

ವಿಯನ್-ಕಾವಲ್-ಎನ = ಅತಿ ವಿಲಕ್ಷಣವಾದ ರಕ್ಷಣವಿದೆಂದು, ಪರಿತ್ತು = ಬೇಡಿ, ಶಹತ್ತಿಲ್ = ಜಗತ್ತಿನಲ್ಲಿ, ಒರು-ಪುಹಲ್-ಇಲ್ಲಾ = ಬೇರೊಂದು ಉಪಾಯವಿಲ್ಲದೆ, ತವಂ = ತಪಸ್ಸನ್ನು, ಅರಿಯೇನ್ = ಅರಿಯದ ನಾನು, ಮದಿಳ್ = ಪ್ರಾಕಾರದಿಂದ ಸುತ್ತುವರಿದ, ಕಚ್ಚಿ-ನಹರ್ = ಕಾಂಚೀ ನಗರದಲ್ಲಿರುವ, ಕರುಣೈ-ನಾದನ್ನೈ = ದಯಾಳುವಾದ ಪ್ರಭುವನ್ನು (ವರದನನ್ನು) ನಲ್ = ಅತ್ಯುತ್ತಮವಾದ, ಅಡೈಕ್ಕಲಮಾಯ್ = ರಕ್ಷಿಸುವ ವಸ್ತುವೆಂದು, ಅಡೈಂದೇನ್ = ಶರಣುಹೊಂದಿದೆನು.

ತಾತ್ಪರ್ಯ :- ನಮಗೆ ಅನುಕೂಲವಾದುವೂ ಹಾಗೂ ಭಗವಂತನಿಗೆ ಅನುಕೂಲವಾದುವೂ ಯಾವುವು ? ಎಂದರೆ ಆಜ್ಞಾನುಜ್ಞಾತ ಕೈಂಕರ್ಯಗಳು. ಅವು ಅವನ ಮುಖೋಲ್ಲಾಸವನ್ನುಂಟುಮಾಡತಕ್ಕವು. ಅವನ್ನು ಬಿಡದೆ ಮಾಡಿ, ನಮಗೆ ಪ್ರತಿಕೂಲವಾದುವನ್ನೂ ಅವನಿಗೆ ರಕ್ಷಿಸಲು ಪ್ರತಿಕೂಲವಾದುವನ್ನೂ ಮಾಡದೆ ಬಿಟ್ಟು, ಅವನಿಗೂ ನಮಗೂ ಇರುವ ''ಶೇಷಿ-ಶೇಷಭಾವಾ''ದಿ ಸಂಬಂಧವನ್ನೂ ಅವನ ವಾತ್ಸಲ್ಯಾದಿ ಗುಣಗಳನ್ನೂ ಪರಿಶೀಲಿಸಿ ಪೂರ್ಣ ವಿಶ್ವಾಸವನ್ನು ಪಡೆದೆನು. ಒಳ್ಳೆಯ ಅರಿವಿನಿಂದ ಬೇರಾವ ದೇವತೆಯೂ ನಮಗೆ ಮುಕ್ತಿ ಕೊಡಲಾರದೆಂದು ದೃಢಪಡಿಸಿಕೊಂಡೆನು. ಕರುಣೆಗೆ ಕಡಲಿನಂತಿರುವ ವರದನ ಅಡಿಗಳನ್ನು ಶರಣುಹೊಂದಿದೆನು. (ಅಂಗಪಂಚಕ ಕವಚಿತವಾದ ಶರಣಾಗತಿಯ ಅನುಷ್ಠಾನವು ಸಂಕ್ಷೇಪವಾಗಿ ಇಲ್ಲಿ ವರ್ಣಿತವಾಗಿದೆ)

**श्रीशोल्लासक्रिया या बिदधदतिमुदा संजिहानोऽनभीष्टाः**
**सम्बन्धौघं गुणौघं समधिक मनुभूयैव विश्वासकाष्ठाम् ।**
**श्रेष्ठां संप्रार्थ्य रक्षांजगति गतिधुतो नैव चक्रे तपोऽहं**
**काञ्च्यां सालावृतायां वरद मुरुदयं रक्षितारं प्रपद्ये ।।** ५

ಮೂಲ : ಅಳವುಡೈಯಾರಡೈಂದಾರ್ಕ್ಕುಂ ಅದನುರೈಯೇಕೊಂಡವರ್ಕ್ಕುಂ,
ವಳೈವುರೈತನ್ದವನರುಳೇ ಮನ್ನಿಯ ಮಾದವತ್ತೋರ್ಕ್ಕುಂ,
ಕಳವೊಳಿವಾರೆಮರೆನ್ನವಿಶೈಂದವರ್ಕ್ಕುಂ ಕಾವಲರಾಂ,
ತುಳವಮುಡಿಯರುಳ್ ವರದರ್ ತುವಕ್ಕಿಲೆನ್ನೈವೈತ್ತೇನೇ ॥ 6

ಅರ್ಥ :- ಅಳವ್-ಉಡೈಯಾರ್ = ಎಲ್ಲವನ್ನೂ (ಚೆನ್ನಾಗಿ) ಅರಿತವರಾಗಿ, (ಬಂದು) ಅಡೈಂದಾರ್ಕ್ಕುಂ = ಶರಣುಹೊಂದಿದವರಿಗೂ, ಅದನ್-ಉರೈಯೇ = ಆ ಪ್ರಪತ್ತಿಯ ಮಾತುಗಳನ್ನೇ, ಕೊಡವರ್ಕ್ಕುಂ = (ಅಂಗೀಕರಿಸಿ) ಆಚರಿಸಿದವರಿಗೂ, ವಳ = ಶ್ರೇಷ್ಠವಾದ, ಉರೈ = ಮಾತನ್ನು, ತಂದವನ್ = ಉಪದೇಶಿಸಿದವರ, ಅರುಳೇ = ದಯೆಯನ್ನೇ, ಮನ್ನಿಯ

= ದೃಢವಾಗಿ ಬಿಡದೆ ಕೈಕೊಂಡ, ಮಾ-ತವತ್ತೋರ್ಕ್ಕುಂ = ಮಹಾ ತಪಸ್ವಿಗಳಿಗೂ, ಕಳವ್-ಒಳಿವಾರ್ = ಕಳ್ಳತನವನ್ನು ಬಿಟ್ಟಿರುವವರು, ಎಮರ್ = ನಮ್ಮವರು, ಎನ್ನ = ಎಂದು, ಇಶೈಂದವರ್ಕ್ಕುಂ = ಆಸೆಯಿಂದ ಒಪ್ಪಿದವರಿಗೂ, ಕಾವಲರ್ = ಪಾಲಕರಾದ, ತುಳವ-ಮುಡಿ = ತುಳಿಸೀಧಾರಿಯಾದ, ಅರುಳ್-ವರದರ್ = ಕರುಣಾಳುವಾದ ವರದನ, ತುವಕ್ಕಿಲ್ = ಸಂಬಂಧದಲ್ಲಿ, ಎನ್ನೈ = ನನ್ನನ್ನು (ಈ ನನ್ನ ಆತ್ಮನನ್ನು) ವೈತ್ತೇನ್ = ರಕ್ಷ್ಯವಾಗಿಟ್ಟೆನು.

ತಾತ್ಪರ್ಯ :- ಪ್ರಪತ್ತಿಯಲ್ಲಿ ಇದು ಅಂಗಿ, ಇದು ಅಂಗ ಎಂಬುದನ್ನು ಚೆನ್ನಾಗಿ ಅರಿತು ಶರಣಾಗತಿಯನ್ನು ಆಚರಿಸಿದವರಿಗೂ (ಸ್ವತಂತ್ರ ನಿಷ್ಠರಿಗೂ), ಯಾವ ವಿಶದಜ್ಞಾನವೂ ಇಲ್ಲದೆ ಇದ್ದರೂ ಪೂರ್ಣ ಪ್ರಪತ್ತಿಯ ವಾಕ್ಯೋಚ್ಚಾರಣೆ ಮಾಡುವುದರೊಡನೆ ಆಚರಿಸಿದವರಿಗೂ (ಉಕ್ತನಿಷ್ಠೆಯಲ್ಲಿರುವವರಿಗೂ) ರಹಸ್ಯತ್ರಯಾದಿಗಳನ್ನು ಚೆನ್ನಾಗಿ ಉಪದೇಶಿಸಿದ ಆಚಾರ್ಯರ ಕೃಪೆಯನ್ನೇ ನಂಬಿ ಆಚರಿಸಿದವರಿಗೂ (ಆಚಾರ್ಯನಿಷ್ಠೆಯಲ್ಲಿರುವವರಿಗೂ), ರಕ್ಷಕನು ಆ ಶರಣ್ಯನೇ ಆಗಿರುವನು. ಇವರೆಲ್ಲರೂ ಬೇರೆಬೇರೆ ದಾರಿಯಲ್ಲಿರುವವರೆಂದು ತೋರಿದರೂ ಸತ್ಸಂಪ್ರದಾಯದ ಸತ್ಪಥವನ್ನೇ ಹಿಡಿದವರು. ಆದರೆ ಇವೆಲ್ಲಕ್ಕೂ ಧೈರ್ಯವೂ, ನಂಬಿಕೆಯೂ ಕಾರಣ. ನಂಬಿಕೆಯಿಂದಲೂ, ಧೈರ್ಯದಿಂದಲೂ ಆಚರಿಸಿದರೇನೇ ಸತ್ಫಲ ಖಂಡಿತ ದೊರಕುವುದು. ಹೀಗೆಯೇ ಮತ್ತೆ ಕೆಲವರು ಭಗವಂತನಿಗೆ ಸೇರಿದ ಈ ಆತ್ಮ ವಸ್ತುವನ್ನು ತನ್ನದೆಂದು ತಿಳಿಯುವ ಕಳ್ಳರಾಗದೆ, ಭಾಗವತ ಪರತಂತ್ರರಾಗಿಯೂ, ತತ್ವಜ್ಞಾನಿಗಳಾಗಿಯೂ ಇರುವರು. ಅವರೂ ನಮ್ಮ ಆಪ್ತರೇ ಹೌದು. (ಭಾಗತನಿಷ್ಠರು) ಅವರನ್ನೂ ಆ ದಯಾಳು ಕೈಬಿಡನು. ಅಂತಹ ಪರಮಾತ್ಮನಲ್ಲಿ ಈ ನನ್ನ ಆತ್ಮನನ್ನು ಒಪ್ಪಿಸಿದೆನು.

**प्राज्ञा ये शरणं गता अनुययु र्ये वा तदुक्त्या दृढं**
**ये वैतादृशतारकोक्तिदकृपा मेवैत्य चेरु स्तपः ।**
**चौर्यस्याकरणात् स्वका इम इति प्रीत्याङ्ग्यकुर्वंश्च ये**
**तेषां गोप्तरि मां दयालुवरदे न्यस्ये तुलस्यद्वहे ।।** ६

**ಮೂಲ :** ಉಮದಡಿಹಳಡೈಹಿನ್ರೇನೆನ್ರೊರುಕಾಲುರೈತ್ತವರ್ಕೈ,
ಅಮ್ಮೈಯುಮಿನಿಯೆನ್ಬವರ್‌ಪೋಲ್ ಅಂಜಲೆನಕ್ಕರಂವೈತ್ತು,
ತಮದನೈತ್ತುಂ ಅವರ್‌ತಮಕ್ಕುಂ ವಳಂಗಿಯುಂ ತಾರ್ ಮಿಹವಿಳಂಗುಂ,
ಅಮ್ಮೈವುಡೈಯವರುಳಾಳರಡಿಯಿಣೈಯೈಯಡೈಂದೇನೇ ॥ 7

ಅರ್ಥ :- ಉಮದ್ = ನಿಮ್ಮ, ಅಡಿಹಳ್ = ಪಾದಗಳನ್ನು, ಅಡೈಹಿನ್ರೇನ್ = ಶರಣುಹೋಗುತ್ತೇನೆ, ಎನ್ರ್ = ಎಂದು, ಒರು-ಕಾಲ್ = ಒಂದುಸಲ, ಉರೈತ್ತ-ವರ್ಕೈ =

ಹೇಳಿದವರನ್ನು, ಇನಿ-ಅಮೈಯುಂ = ಇನ್ನು ಇದು ಸಾಕು, ಎನ್ಬವರ್ ಪೋಲ್ = ಎಂದು ಹೇಳುವವರಂತೆ, ಅಂಜಲ್ = ಹೆದರಬೇಡಿ, ಎನ = ಎಂದು, ಕರಂ = ಕೈಯನ್ನು, ವೈತ್ತು = ಇಟ್ಟು (ತೋರಿಸಿ), ತಮದ್ = ತಮ್ಮ, ಅನೈತ್ತುಂ, ಎಲ್ಲವನ್ನೂ, ಅವರ್-ತಮಕ್ಕುಂ = ಆ ಪ್ರಪತ್ತಿಮಾಡಿದವರಿಗೂ, ವಳಂಗಿಯುಂ = ಕೊಟ್ಟೂ, ತಾನ್ = ತಾನು, ಮಿಹ = ಹೆಚ್ಚಾಗಿ, ವಿಳಂಗುಂ = ಬೆಳಗುವ, ಅಮೈವು-ಉಡೈಯ = ಪರಿಪೂರ್ಣತೆಯುಳ್ಳ, ಅರುಳಾಳರ್ = ಕರುಣಾಳು ವರದನ, ಅಡಿ-ಇಣೈಯೈ = ಅಡಿಗಳೆರಡನ್ನೂ, ಅಡೈಂದೇನ್ = ಸೇರಿದೆನು.

ತಾತ್ಪರ್ಯ :- ವರದರಾಜದೇವರು ಅಭಯಮುದ್ರಿಕೆಯ ಹಸ್ತವನ್ನು ತೋರುತ್ತಿರುವರು. ಭಕ್ತರು ಬಂದು ''ಸ್ವಾಮಿ ! ನಿನ್ನನ್ನು ಶರಣು ಹೋದೆನು'' ಎಂದು ಒಂದು ಸಲ ಹೇಳಿದರೆ ಸಾಕು. ಮತ್ತೊಮ್ಮೆ ಅದನ್ನು ಹೇಳಬೇಕಿಲ್ಲ. ಅಂತಹವರಿಗೆ ''ನೀವು ಭಯಪಡಬೇಡಿ. ನಿಮ್ಮನ್ನು ರಕ್ಷಿಸುತ್ತೇನೆ. ನನ್ನ ಸಮಸ್ತ ಸಿರಿಯೂ ನಿಮ್ಮದೇ'' ಎಂದು ಹೇಳಿ ಅಭಯತೋರುತಿಹನು. ಇದೇ ಆ ತೋರಿಕೆಯ ಸಾರಾರ್ಥ. ದೃಢಭಾವನೆಯಿಂದ ಒಂದು ಸಲ ಪ್ರಪತ್ತಿಯನ್ನಾಚರಿಸಿದರೆ ಸಾಕು. ಪೂರ್ಣ ಫಲ ಕೊಡುವನು. ಸರ್ವಶಕ್ತನೂ ಸರ್ವಶರಣ್ಯನೂ, ಅಪಾರ ಕಾರುಣ್ಯನೂ ಆದ ಆ ಪರಮಾತ್ಮನ ಪಾದಾರವಿಂದಗಳನ್ನೇ ಬಿಡದೆ ಪಡೆದಿಹೆನು. ಜೀವನದಲ್ಲಿ ಪ್ರಪತ್ತಿಯೆಂಬುದು ಒಂದು ಸಲ ಆಚರಿಸಲ್ಪಡತಕ್ಕದ್ದು. ಅದಕ್ಕೆ ಫಲ ಖಂಡಿತ ಉಂಟೆಂದೂ, ಪ್ರಪನ್ನರಿಗಲ್ಲದೆ ಬೇರೆಯವರಿಗೆ ಮುಕ್ತಿಸಾಮ್ರಾಜ್ಯಸುಖವನ್ನು ಅವನು ಕೊಡುವುದಿಲ್ಲವೆಂಬುದೂ ನಿಶ್ಚಯ. ಈ ವಿಷಯವಿಲ್ಲಿ ಸ್ಪಷ್ಟವಾಗಿದೆ.

**भवत्पदयुगं श्रये त्विति सकृत् प्रवक्तृ नलं**
**प्रतीत इति बोधयन् इव करं प्रदर्श्याभयम् ।**
**वितीर्य सकलं स्वकं स्वयमतीव यो राजते**
**दयाळु वरदप्रभोः पदयुगं च तस्याश्रये ।। ७**

**ಮೂಲ :** ತಿಣ್ಮೈಕುರೈಯಾಮೈಕ್ಕುಂ ನಿರೈಹೈಕ್ಕುಂ ತೀವಿನೈಯಾಲ್,
ಉಣ್ಮೈಮರೈವಾಮೈಕ್ಕುಂ ಉಳಮದಿಯಿಲುಹಕ್ಕೈಕ್ಕುಂ
ತಣ್ಮೈಕುರೈಯಾಮೈಕ್ಕುಂ ದರಿಹೈಕ್ಕುಂ ತಣಿಹೈಕ್ಕುಂ,
ವಣ್ಮೈಯುಡೈಯವರುಳಾಳರ್ ವಾಶಕಂಗಳ್ ಮರವೇನೇ ॥ 8

ಅರ್ಥ :- ತಿಣ್ಮೈ = ದೃಢತೆಯು (ಮಹಾ ವಿಶ್ವಾಸವು) ಕುರೈಯಾಮೈಕ್ಕುಂ = ಕಡಿಮೆಯಾಗದಿರುವುದಕ್ಕೂ, (ಇರತಕ್ಕದ್ದು) ನಿರೈಹೈಕ್ಕುಂ = ಪೂರ್ಣವಾಗುವುದಕ್ಕೂ, ತೀ-ವಿನೈಯಾಲ್ = ಕ್ರೂರಕರ್ಮದ ಫಲವಾಗಿ, ಉಣ್ಮೈ = ನಿಜಾಂಶವನ್ನು, ಮರವಾಮೈಕ್ಕುಂ = ಮರೆಯದಿರುವುದಕ್ಕಾಗಿಯೂ, ಉಳಮತಿಯಿಲ್ = ಇರುವ

ಬುದ್ಧಿಯಲ್ಲಿ, ಉಹಕ್ಕೈಕ್ಕುಂ = ಸಂತೋಷಪಡುವುದಕ್ಕೂ, ತಣ್ಮೈ = ತಂಪು (ಶಾಂತತೆ) ಕುರೈಯಾಮೈಕ್ಕುಂ = ಕಡಿಮೆಯಾಗದಿರುವುದಕ್ಕೂ, ದರಿಪ್ಪೈಕ್ಕುಂ = ಧರಿಸುವುದಕ್ಕೂ, ತಣಿಪ್ಪೈಕ್ಕುಂ = ಸೌಮ್ಯವಾಗಿರುವುದಕ್ಕೂ ವಣ್ಮೈಯುಡ್ಡೈ = ಸೊಬಗಿನ ಅರುಳಾಳರ್ = ಕರುಣಾಳು ವರದನ, ವಾಶಕಂಗಳ್ = ಮಾತುಗಳನ್ನು, ಮರವೇನೇ = ಮರೆಯುವೆನೆ ?

ತಾತ್ಪರ್ಯ :- ಪರಮಾತ್ಮನು ಪ್ರಪನ್ನನಿಗೆ ಕೊಟ್ಟ ಅಭಯೋಕ್ತಿಗಳನ್ನು ಮರೆಯಬಾರದು. ಅಡಿಗಡಿಗೆ ಅನುಸಂಧಾನಮಾಡುತ್ತಿರಬೇಕು. ಮಹಾವಿಶ್ವಾಸವು ಬರಬರುತ್ತಾ ಕಡಿಮೆಯಾಗದು. ಇರುವ ವಿಶ್ವಾಸವು ದಿನೇದಿನೇ ಹೆಚ್ಚಿ ಪೂರ್ಣವಾಗುವುದು. ಕ್ರೂರಕರ್ಮದ ಫಲವಾಗಿ "ನಾವು ಶೇಷರು, ಭಗವಂತನಿಗಧೀನರು" ಎಂಬ ನಿಜಸಂಗತಿಯೂ ಹೋಗಿಬಿಡುವುದುಂಟು. ಹಾಗಾಗದಿರಬೇಕು. ಇರುವ ಅರಿವನ್ನೇ "ಭಗವಂತನ ಕೃಪೆಯಿಂದ ಇಷ್ಟಾದರೂ ಬಂದಿತಲ್ಲ" ಎಂದು ನೆನೆದು ಹರ್ಷಿಸಬೇಕು. ಸರ್ವವೂ ದೇವರೆಂದು ಯಾವ ವಿಧವಾದ ಅಪಚಾರವೂ ಸಂಭವಿಸದಂತೆ ಎಚ್ಚರಿಕೆಯಿಂದರಬೇಕು. ಸ್ವಪರ ಸ್ವರೂಪಜ್ಞಾನವುಂಟಾಗಿ, ಸಂಸಾರದಲ್ಲಿ ಜಿಹಾಸೆ ಹುಟ್ಟಿದರೂ ಆ ಶರಣ್ಯನ ಕೃಪೆಯನ್ನೇ ಎದುರುನೋಡುತ್ತಿರಬೇಕು. ತಾಪತ್ರಯಗಳು ಸಂತಾಪಗೊಳಿಸಿದರೂ ಲೆಕ್ಕಿಸದೇ ಶಾಂತವಾಗಿರಬೇಕು. ಸೌಂದರ್ಯ-ಸೌಶೀಲ್ಯ-ಕಾರುಣ್ಯಾದಿಗಳಿಗೆ ನಿಧಿಯಾದ ವರದನ ಅಡಿಗಳನ್ನು ಮುಡಿಯಲ್ಲಿ ಮುಡಿದುಕೊಂಡರೆ ಎಲ್ಲವೂ ಸಿದ್ಧಿಸಿ, ಇಹಪರಗಳಲ್ಲಿ ಅಮಿತ ಸುಖವನ್ನು ಪಡುವೆವು. ಆದುದರಿಂದಲೇ ಶರಣುಹೋದೆನು. (ನ್ಯಸ್ತಭರರು ನಿರ್ಭಯರಾಗಿಯೂ ನಿರ್ಭರರಾಗಿಯೂ ಇರುವುದು ಇಲ್ಲಿ ವಿಶದೀಕೃತವಾಗಿದೆ.)

विश्वासान्यूनतायै उपचितफलपूर्त्यै च दुष्कर्मलब्धां
सत्यांशाविस्मृतिं तां निरसयितु मवाप्तोपलब्धौ प्रतुष्ट्यै ।
शैतल्याहीनतायै विधरणकरणार्थं प्रशान्त्यै दयालोः
सौन्दर्योपासिमूर्तेः करिगिरिकमितुः किं गिरो विस्मरामि ॥ ८

ಮೂಲ : ಶುರುದಿನಿನ್ನೈ ವಿಮ್ಮೈಯರಿಯುಂತುಣಿವುಡ್ಡೈಯಾರ್ತೂಯ್ಮೊಳಿಹಳ್,
ಪರಿದಿಮದಿಯಾಶಿರಿಯರ್ ಪಾಶುರಂ ಶೇರ್ನ್ದರುಕ್ಕಣಂಗಳ್,
ಕರುದಿಯೊರುತೆಳಿವಾಳಾಲ್ ಕಲಕ್ಕಮರುತ್ತತ್ತಿಗಿರಿ,
ಪರಿದಿಮದಿನಯನಮುಡ್ಡೈಪ್ಪರಮನಡಿಪಣಿಂದೇನೇ ॥ ೯

ಅರ್ಥ :- ಶುರುದಿ = ಶ್ರುತಿಯು, ನಿನ್ನೈವು, = ತಾತ್ಪರ್ಯವನ್ನು, ಇಮ್ಮೈ ಎಮ್ಮೆಯಿಕ್ಕುವುದರೊಳಗೆ, ಅರಿಯುಂ = ಅರಿಯತಕ್ಕ, ತುಣಿವು = ಮನೋಬಲವನ್ನು

ಉಡ್ಡೈಯಾರ್ = ಉಳ್ಳವರ, ತೂಯ್‌ಮೊಳಿಹಳ್ = ಪರಿಶುದ್ಧವಾದ ಮಾತುಗಳು, ಪರಿದಿ = ಸೂರ್ಯನಂತೆ ಬೆಳಗುವ, ಮತಿ = ಬುದ್ಧಿಯುಳ್ಳ, ಆಶರಿಯರ್ = ಆಚಾರ್ಯರ, ಪಾಶುರಂ = ಪಾಶುರಗಳೂ (ಸೂಕ್ತಿಗಳೂ) ಶೇರ್ನ್ದ್ = ಹೊಂದಿಕೆಯಾಗಿ ಸೇರಿ, ಅರು-ಕ್ಕಣಂಗಳ್ = ಜೀವರಾಶಿಗಳನ್ನು, ಕರುದಿ = ಕುರಿತು, ಒರು-ತೆಳಿ-ವಾಳಾಲ್ = ಜ್ಞಾನವೆಂಬ ಒಂದು ಕತ್ತಿಯಿಂದ, ಕಲಕ್ಕಂ = ಮೋಹವನ್ನು (ಅಜ್ಞಾನವನ್ನು) ಅರುತ್ತ್ = ಬೇರುಸಹಿತ ಕಿತ್ತು, ಅತ್ತಿಗಿರಿ = ಹಸ್ತಿಗಿರಿಯಲ್ಲಿ, (ಕಂಗೊಳಿಸುವ) ಪರಿದಿ-ಮದಿ-ನಯನಂ-ಉಡ್ಡೈ = ಪಾದಗಳನ್ನು, ಪಣಿಂದೇನ್ = ನಮಿಸಿದೆನು.

ತಾತ್ಪರ್ಯ :- ತಮ್ಮ ತಪೋಬಲದಿಂದ ವೇದಗಳ ಗೂಢಾರ್ಥಗಳನ್ನೂ ಅರಘಳಿಗೆಯಲ್ಲಿ ಅರುಹಬಲ್ಲ ಪರಶುರಾಮಾದಿ ತಪೋಧನರ ಸೂಕ್ತಿಗಳ ಮೂಲಕವೂ, ಕತ್ತಲನ್ನು ನೀಗಿ, ಬೆಳಕನ್ನು ಹರಿಸಿ, ಜಗತ್ತಿಗೇ ಉಪಕರಿಸುವ ಸೂರ್ಯದೇವನಂತೆ ಬೆಳಗುವ ಆಚಾರ್ಯರುಗಳನ್ನು ಅವತರಿಸುವಂತೆ ಮಾಡಿ, ಅವರ ಉಪದೇಶಾದಿಗಳ ಮೂಲಕವೂ, ತಾನು ಜ್ಞಾನ ನಿಧಿಯನ್ನು ಆ ಭಗವಂತನು ಒದಗಿಸಿಕೊಟ್ಟಿರುವನು. ಸೂರ್ಯಚಂದ್ರರೇ ಆತನ ಕಣ್ಣುಗಳಲ್ಲಿವೆ. ತಿಳಿಯಾದರಿವೆಂಬ ಕತ್ತಿಯಿಂದ ಸಮಸ್ತ ಜೀವರ ಸಂಶಯಾದಿ ದೋಷಗಳನ್ನೂ ನಿವಾರಿಸಿ ಕರುಣಿಸುವನು. ಪ್ರಪನ್ನನಾಗಿ, ಭಗವತ್ಕರುಣೆ ಬಂದು, ಶರೀರತ್ಯಾಗಮಾಡುವತನಕ ಮಾಡಬೇಕಾದ ಕೃತ್ಯಗಳು ಸಂಕ್ಷೇಪವಾಗಿ ಅಡಗಿವೆ. (ಶ್ರೀಮದಾಚಾರ್ಯರು ಸ್ವಾರ್ಥವಾಗಿಯೇ ಅಲ್ಲದೇ ಸ್ವಕೀಯರ ಉಜ್ಜೀವನಾರ್ಥವಾಗಿಯೂ ಭರನ್ಯಾಸಮಾಡಿದಂತೆ ಭಾಸವಾಗುವುದು)

**क्षणे च निगमार्थवित्सुमनसां विशुद्धोक्तिभिः**
**शुभा रविधियां च ता स्सुकलयन् गुरूणां गिरः ।**
**विनाश्य धिषणासिना विशय मात्मनः प्राणम्**
**रवीन्दुनयनस्य तत्पदयुगं गजाद्रीशितुः ॥** ९

ಮೂಲ : **ತಿರುಮಹಳುಂ ತಿರುವಡಿವುಂ ತಿರುವರುಳುಂ ತೆಳ್ಳರಿವುಂ,**
**ಅರುಮ್ಮೈಯಿಲಾಮ್ಮೈಯುಮುರವುಂ ಅಳಪ್ಪರಿಯ ವಡಿಯರಶುಂ,**
**ಕರುಮಮಳಿಪ್ಪಳಿಪ್ಪಮ್ಮೈಪ್ಪುಂ ಕಲಕ್ಕಮಿಲಾವಹೈನಿನ್ರ**
**ಅರುಳ್‌ವರದರ್ ನಿಲ್ಯೆಯಿಲಕ್ಕಿಲಂಬೆನನಾನಮಿಳ್‌ನ್ದೇನೇ ॥ 10**

ಅರ್ಥ :- ತಿರುಮಹಳುಂ = ಶ್ರೀದೇವಿಯಲ್ಲೂ, ತಿರು-ವಡಿವುಂ = ದಿವ್ಯಮಂಗಳ ಮೂರ್ತಿಯಲ್ಲೂ, ತಿರು-ಅರುಳಂ = ಕರುಣೆಯಲ್ಲಿಯೂ, ತೆಳ್-ಅರಿವುಂ = ತಿಳುವಾದರಿವಿನಲ್ಲೂ, ಅರುಮ್ಮೈ-ಇಲಾಮ್ಮೈಯುಂ = ಮಾಡಲಸಾಧ್ಯವಾಗದಿರುವುದರಲ್ಲೂ

ಉರವುಂ = ಸಂಬಂಧದಲ್ಲೂ, ಅಳಪ್ಪ್-ಅರಿಯ = ಅಳೆಯಲಾಗದಂತಿರುವ, ಅಡಿ-ಅರಶುಂ = ರಾಜ್ಯಸಿರಿಯಲ್ಲೂ, ಅಳಿಪ್ಪ್ = ನಾಶ, ಅಳಿಪ್ಪ್ = ರಕ್ಷಣೆ, ಅಮೈಪ್ಪ್ = ಸೃಷ್ಟಿ, (ಮುಂತಾದ) ಕರುಮಂ = ಕಾರ್ಯಗಳಲ್ಲೂ, ಕಲಕ್ಕಂ-ಇಲಾ-ವಹೈ-ನಿನ್ರ = ಕಲುಷಿತವಾಗದ ರೀತಿಯಲ್ಲಿರುವ, ಅರುಳ್-ವರದರ್ = ದಯೆಯೇ ಆಕಾರವೆತ್ತಿ ಬಂದಂತಿರುವ ವರದನ, ನಿಲೈ = ಸ್ಥಿರವಾದ, ಇಲಕ್ಕಿಲ್ = ಗುರಿಗೆ, ಅಂಬ್-ಎನ = ಬಾಣದಂತೆ, ನಾನ್ = ನಾನು, ಅಮಿಳ್ನ್ದೇನೆ = ಬಿಡಿಸಲಾಗದಂತೆ ಸೇರಿಕೊಂಡೆನು.

ತಾತ್ಪರ್ಯ :- ಸ್ವೇತರ ಸಮಸ್ತವನ್ನೂ ಸೃಷ್ಟಿಸಿ, ರಕ್ಷಿಸಿ, ಅಳಿಸಿ, ಮತ್ತೆ ಮತ್ತೆ ಇದೇರೀತಿ ಲೀಲೆಯಾಡಿದರೂ ಸ್ವಲ್ಪವೂ ಕದಡದ ರೀತಿಯುಳ್ಳ ಆ ಪರಮಾತ್ಮನು ಜೀವಾತ್ಮರ ಮೇಲೆ ಕರುಣೆಯಿಂದ ತನ್ನನ್ನರಿವ ಅರಿವನ್ನು ಕೊಡುತ್ತಲೂ, ಕರುಣಿಸುತ್ತಲೂ, "ನಂಬಿದವರಿಗೆ ಅಸಾಧ್ಯವಾವುದೂ ಇಲ್ಲ"ವೆಂಬುದನ್ನು ತೋರಿಸುತ್ತಲೂ, ತನ್ನ ರೂಪಾದಿಗಳನ್ನು ಕಾಣುವಂತೆ ಮಾಡುತ್ತಲೂ, ಹೀಗೆಯೇ ಅವೇಕ ವಿಧದಲ್ಲಿ ಉಪಕರಿಸುತ್ತ ದಯೆಗೈಯ್ದಿಹನು ಆ ಪರಮಾತ್ಮ. "ಪ್ರಣವವೆಂಬ ಬಿಲ್ಲಿನಲ್ಲಿ ಆತ್ಮನೆಂಬ ಬಾಣವನ್ನು ಹೂಡಿ, ಬ್ರಹ್ಮವೆಂಬ ಗುರಿಗೆ ಜಾಗರೂಕತೆಯಿಂದ ಹೊಡೆದರೆ ಗುರಿಯಲ್ಲಿ ಬಾಣವು ನಾಟುವುದು." ಎನ್ನುವಂತೆ ಈ ನನ್ನ ಆತ್ಮ ವಸ್ತುವನ್ನು ಆ ಪರದೇವತೆಯಲ್ಲಿ ಅರ್ಪಿಸಿಹೆನು. ಸಮಸ್ತವೂ ಶರಣ್ಯನ ದಯಾ ಪರವಶವಾದುದರಿಂದ ಅವನಿಗೆ ಒಪ್ಪಿಸುವಂತೆ ಸಾತ್ವಿಕತ್ಯಾಗದ ರೀತಿಯನ್ನಿಲ್ಲಿ ವ್ಯಕ್ತಗೊಳಿಸಿರುವರು.

लक्ष्म्यां द्वियाकृतौ तन्निरवधिकरुणानिर्मलज्ञानयो श्च
संसाध्ये स्वानुबन्धे त्वमितजनपदैश्वर्यपूर्णे प्रणाशे ।
रक्षायां सर्गकार्येऽप्यनुदितकलुषाकाररीत्या स्थितस्य
सुस्थे लक्ष्ये विलग्न श्शर इव वरदस्यानुकम्पावतोऽहम् ॥ १०

ಮೂಲ : ಆರುಪರ್ಯ್ವೇರಿಲ್ಲಾ ವಡಿಯವರ್‌ಹಳನೈವರ್ಕ್ಕುಂ
ಆರುಮದನ್ ಪಯನುಮಿವೈಯೊರುಹಾಲುಂ ಪಲಹಾಲುಂ,
ಆರುಪಯನೆನವೇ ಕಂಡರುಳಾಳರಡಿಯಿಣೈ ಮೇಲ್,
ಕೂರಿಯ ನರ್‍ಗುಣವುರೈಹಳ್ ಇವೈಪತ್ತುಂ ಕೋದಿಲವೇ ॥ 11

ಅರ್ಥ :- ಆರು = ಉಪಾಯವೂ, ಪರ್ಯ್ = ಫಲವೂ, (ದೇವರನ್ನು ಬಿಟ್ಟು) ವೇರು = ಬೇರೆ ಯಾವುದೂ, ಇಲ್ಲಾ = ಇಲ್ಲದವರರಾದ, ಅಡಿಯವರ್‌ಹಳ್ = ಭಕ್ತರಾದ, ಅನೈವರ್ಕ್ಕುಂ = ಎಲ್ಲರಿಗೂ, ಆರುಂ = ಶರಣಾಗತಿಯೂ, ಅದರ್ = ಅದರ, ಪರ್ಯ್ = ಫಲವೂ, (ಆದ) ಇವೈ = ಇವು, ಒರು-ಕಾಲಂ = ಒಂದು ಕಾಲದಲ್ಲೂ, ಪಲ-ಕಾಲಂ =

(ಫಲವು) ಬಹುಕಾಲ ಕಳೆದೂ, ಆರು = ಉಪಾಯ, ಪರ್ಯ = ಫಲ, ಎನವೇ = ಎಂದೇ, ಕಂಡ್ = ನೋಡಿ, ಅರುಳಾಳರ್ = ದಯಾಮೂರ್ತಿಯಾದ ವರದನ, ಇಣೈ-ಅಡಿಹಳ್ = ಅಡಿಗಳೆರಡರ ಮೇಲೆ, ಕೂರಿಯ = ಹೇಳಿರುವ, ನಲ್-ಗುಣ-ಉರೈಹಳ್ = ಒಳ್ಳೆಯಗುಣಗಳಿಂದ ತುಂಬಿದ ಸೂಕ್ತಿಗಳಾದ, ಇವ್ವೈ-ಪತ್ತುಂ = ಈ ಹತ್ತೂ, ಕೋದು-ಇಲ = ಅಸಾರವಾದುದಲ್ಲ.

ತಾತ್ಪರ್ಯ :- ಉಪಾಯವೂ ಅದರ ಫಲವೂ ಆ ಶರಣ್ಯನೇ, ಬೇರೆಯಿಲ್ಲ, ನಾವೆಲ್ಲ ಶೇಷಭೂತರು. ಉಪಾಯಾನುಷ್ಠಾನವಾದರೋ ಒಂದೇ ಸಲ. ಅದೂ ಅಲ್ಪಕಾಲದಲ್ಲಿ ಅದರ ಫಲವಾದರೋ ಬಹುಕಾಲ ಕಳೆದ ಮೇಲೆ ಆದರೂ ಪರಿಪೂರ್ಣ ಬ್ರಹ್ಮಾನುಭವವು ಖಂಡಿತ. ಅದರನುಭವಕ್ಕೆ ಅವಧಿಯಿಲ್ಲ. ಇಂತಹ ನಿರವಧಿಕದಯಾ ಕಾರ್ಯವನ್ನು ಮಾಡುವ ಪರಮಾತ್ಮನ ವಿಷಯವಾದ, ಅವನ ಅತ್ಯುತ್ತಮ ಗುಣಗಳನ್ನು ಬೆಳಗುವ, ಮತ್ತು ಪ್ರಪನ್ನರಿಗೂ ಪ್ರಪತ್ತಿಕಾಂಕ್ಷಿಗಳಿಗೂ ಉಪಾದೇಯತಮವಾದ ಈ ಗ್ರಂಥ ಭಾಗ 10 ಪದ್ಯಗಳನ್ನುಳ್ಳದ್ದು. ಅತ್ಯಂತ ಸಾರವತ್ತಾದುದು. ಪರಮಾತ್ಮನ ಪಾದಗಳೆರಡೂ ಉಪಾಯ ಮತ್ತು ಫಲಗಳು. ಅವೆರಡೂ ಈ ಜೀವನಿಗೆ ಅತ್ಯಗತ್ಯವಾದುವು. ಆದುದರಿಂದಲೇ ಅವೆರಡರಲ್ಲೇ ಜೀವಾತ್ಮನು ಸೇರುವಂತೆ ಶರಣುಹೋದೆನು.

उपायोऽन्यो न स्यात् फलमपि रमेशादिति विदां
प्रपत्ति स्सर्वेषां फलमपि तदीयं सकृदिमे ।
कदाचिद्वोपाय: फलमति च मत्वैव पदयो:
कृपाळो: प्रोक्तं सद्गुणिदशक मेताद्विकलुषम् ।। ११

श्रीदेशिकप्रबन्धस्यप्रपत्तिदशकस्य हि ।
गोपालार्यो लिलेखार्थतात्पर्ये श्लोकसंयुते ।।
।। श्रीमते निगमान्तमहादेशिकायनम: ।।

|| ಶ್ರೀಃ ||

|| ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ||

# ಅರ್ಥಪಂಚಕಂ

ಮೂಲ : ಅಮಲನವಿಯಾದಶುಡರಳವಿಲ್ಲಾವಾರಮುದಂ
ಅಮಲವುರುಕ್ಕುಣಂಗಳಣಿಯಾಯುದಂಗಳಡಿಯವರ್‌ಹಳ್
ಅಮಲವಳಿಯಾದನಗರಳಿಂದೆಳುಂಕಾವುಡನೆಲ್ಲಾಂ
ಕಮಲೈಯುಡನರಶಾಳುಂ ಕರಿಗಿರಿಮೇಲ್‌ಕಾವಲನೇ || 1

ಅರ್ಥ :- (ಅಮಲನ್) ನಿರ್ಮಲನಾದ, (ಅವಿಯಾದ-ಶುಡರ್) ಸರ್ವಕಾಲದಲ್ಲೂ ನಂದಿಹೋಗದ ಜ್ಯೋತಿರೂಪನಾದ, (ಅಳವ್-ಇಲ್ಲಾ-ಆರ್-ಅಮುದಂ) ಅಳತೆ ಮಾಡಲಾಗದ ಮತ್ತು ಪರಿಪೂರ್ಣವಾದ ಅಮೃತದಂತೆ ಪರಮಭೋಗ್ಯನಾದ (ಕರಿ-ಗಿರಿ-ಮೇಲ್-ಕಾವಲನೇ) ಕಾಂಚಿಯ ಹಸ್ತಿಗಿರಿ ಶಿಖರದಲ್ಲಿರುವ ಸರ್ವಸಂರಕ್ಷಕನಾದ ವರದರಾಜರೂಪಿನ ಶ್ರೀಮನ್ನಾರಾಯಣನೇ, (ಕಮಲೈ-ಉಡನ್) ಮಹಾಲಕ್ಷ್ಮೀ ಸಮೇತನಾಗಿ ಅಮಲ-ಉರು-ಗುಣಂಗಳ್-ಅಣಿ-ಆಯುದಂಗಳ್-ಅಡಿಯಯವರ್ ಹಳ್) ನಿರ್ಮಲವಾದ ವಿಗ್ರಹ, ಕಲ್ಯಾಣಗುಣಗಳು, ಆಭರಣಗಳು, ಚಕ್ರಾದ್ಯಾಯುಧಗಳು ಮತ್ತು ನಿತ್ಯರು, ಮುಕ್ತರು ಈ ಎಲ್ಲರನ್ನೂ (ಅಮಲ-ಅಳಿಯಾದ-ನಗರ್) ನಿರ್ಮಲವಾದ ಅಪ್ರಾಕೃತವಾಗಿ ಶಾಶ್ವತವಾದ ಪರಮಪದವನ್ನೂ (ಮತ್ತು) (ಅಳಿಂದ್-ಎಳುಂ-ಕಾವುಡನ್ ಎಲ್ಲಾಂ) ನಾಶಹೊಂದಿ ಮತ್ತೆ ಉತ್ಪನ್ನವಾಗಿರುವ ತೋಪುಗಳುಳ್ಳ ಈ ಲೀಲಾ ವಿಭೂತಿಯಾದ ಜಗತ್ತೆಲ್ಲವನ್ನೂ (ಅರಶ್-ಆಳುಂ) ಸರ್ವೇಶ್ವರನಾಗಿ ಆಳುವವನು.

1) ಶ್ರೀಮನ್ನಾರಾಯಣನೇ ಪ್ರಾಪ್ಯವಾದ ಪರಬ್ರಹ್ಮ, 2) ಜೀವಾತ್ಮನೇ ಪ್ರಾಪ್ತಾ, 3) ಪ್ರಾಪ್ಯವನ್ನು ಪ್ರಾಪ್ತಾಪಡೆಯಲು ಇರುವ ಉಪಾಯವು ಪ್ರಪತ್ತಿ. 4) ಆ ಪ್ರಪತ್ತಿಗೆ ತಕ್ಕ ಫಲ ಪರಮಪದದ ಪರಿಪೂರ್ಣ ಬ್ರಹ್ಮಾನಂದಾನುಭವವೇ. 5) ಇಂತಹ ಉಪಾಯಕ್ಕೆ ವಿರೋಧಿಗಳಾಗಿರುವುದರ ಅರಿವು. ಹೀಗೆ ಇರುವ ಈ ಐದು ಅರ್ಥಗಳನ್ನು ವಿವೇಕಿಯಾದ ಮುಮುಕ್ಷುವು ತಿಳಿಯಬೇಕಾದುದು ಅಗತ್ಯ. ಇದೇ ಅರ್ಥಪಂಚಕ. ಪ್ರಾಪ್ಯವಾದ ಪರಬ್ರಹ್ಮದ ಸ್ವರೂಪವನ್ನು ನಿರೂಪಿಸುವ ಗುಣಗಳಿಂದ ನಿರೂಪಿತವಾಗುವ ಸ್ವರೂಪವು ಮೂರ್ತಿ, ಗುಣ, ಭೂಷಣ, ಆಯುಧ, ಉಭಯ ವಿಭೂತಿಗಳಿಂದ ವಿಶಿಷ್ಟವಾದುದು ಎಂದು ಭಾವ.

स्वच्छोऽविच्छिन्नतेजा अपरिमितसमग्रामृतात्मा विशुद्ध- ।
स्वाकारालंकृतीनि प्रविमलगुणजातायुधात्माश्रितां श्र ॥
स्वच्छां नित्यां विभूतिं प्रमपदपुरीं नश्यदुत्पन्नलीला-
भूतिं च श्रीसमेत: करिगिरिवरदो रक्षितैव प्रशास्ति ॥ १

ಮೂಲ : ಉಳ್ಳಪೊರುಳನೈತ್ತುಕ್ಕುಮುರುವನಿಲೈಕರುಮಂಗಳ್
ತೆಳ್ಳಿಶೈಯಿನ್ ವಶಮಾಕ್ಕಿತ್ತಿಹಳ್ನ್ದುಯಿರಾಯುರೈಹಿನ್ರಾನ್
ನಳ್ಳಿರುಳ್ ತೀರ್ತ್ತಡಿಯವರ್ಕ್ಕನಲಂಕೊಡುಕ್ಕುಂತಿರುವುಡನೇ
ವಳ್ಳಲರುಳಾಳರೆನ್ನುಂ ವಾರಣವೆರ್ಪ್ಪಿರೈಯವನೇ ॥ 2

ಅರ್ಥ :- (ಉಳ್ಳ-ಪೊರುಳ್-ಅನೈತ್ತುಕ್ಕುಂ) ಪ್ರಮಾಣಸಿದ್ಧವಾಗಿರುವ ಸಮಸ್ತ ಪದಾರ್ಥಗಳಿಗೂ (ಉರುವ-ನಿಲೈ-ಕರುಮಂಗಳ್) ರೂಪವನ್ನೂ, ಸ್ಥಿತಿಯನ್ನೂ, ಪ್ರವರ್ತಿಸುವಿಕೆಯನ್ನೂ, ಅಂದರೆ ಸ್ವರೂಪಸ್ಥಿತಿ ಪ್ರವೃತ್ತಿಗಳನ್ನೂ, (ತೆಳ್-ಇಶೈಯಿನ್-ವಶಂ-ಆಕ್ಕಿ) ತನ್ನ ತಿಳಿಯಾದ ದಯಾರೂಪಸಂಕಲ್ಪಕ್ಕೆ ವಶಪಡಿಸಿಕೊಂಡು (ಉಯಿರಾಯ್-ತಿಹಳ್ನ್ದು) ಅಂತರಾತ್ಮನಾಗಿ ಪ್ರಕಾಶಿಸುತ್ತಾ (ಉರೈಹಿನ್ರಾನ್) ವಾಸಮಾಡುವ (ವಳ್ಳಲ್) ಮಹೋಪಕಾರನಾದ (ಅರುಳಾಳರೆನ್ನುಂ) ದಯಾನಿಧಿ ವರದರಾಜನೆಂದು ಪ್ರಸಿದ್ಧನಾದ (ವಾರಣ-ವೆರ್ಪ್ಪ-ಇರೈಯವನೇ) ಹಸ್ತಗಿರಿಗೆ ನಾಥನಾಗಿರುವವನೇ (ತಿರು-ಉಡನೆ) ಮಹಾಲಕ್ಷ್ಮೀಸಮೇತನಾಗಿ (ಅಡಿಯವರ್ಕ್ಕು-ನಳ್-ಇರುಳ್-ತೀರ್ತ್ತು) ಆಶ್ರಿತರಾದ ಪ್ರಪನ್ನರಿಗೆ ಗಾಢವಾಗಿದ್ದ ಸಂಸಾರದ ಅಜ್ಞಾನಾಂಧಕಾರವನ್ನು ನಿವಾರಿಸಿ (ನಲಂ-ಕೊಡುಕ್ಕುಂ) ಪರಿಪೂರ್ಣಾನಂದವನ್ನು ಕೊಡುವನು.

ಸಮಸ್ತ ವಸ್ತುಗಳ ಸ್ವರೂಪಸ್ಥಿತಿ ಪ್ರವೃತ್ತಿಗಳನ್ನೂ ಅನುಗ್ರಹರೂಪದಿಂದ ಪ್ರಸನ್ನವಾಗುವ ತನ್ನ ಸಂಕಲ್ಪಕ್ಕೆ ಅಧೀನಳನ್ನಾಗಿ ಮಾಡಿಕೊಂಡು ಸ್ವನಿಯಾಮ್ಯತ್ವಲಕ್ಷಣವಾದ ಶರೀರಭಾವದಿಂದಲೂ, ಆತ್ಮಭಾವದಿಂದಲೂ ಇದ್ದು ಲೀಲಾ ವಿಭೂತಿ ಭೋಗವಿಭೂತಿಳೆರಡನ್ನೂ ಆಳುವಂತಹ ಸರ್ವೇಶ್ವರನೇ ಪ್ರಾಪ್ಯವಾದ ಬ್ರಹ್ಮನೆಂದು ವಿಶದಪಡಿಸಿದಂತಾಯಿತು.

सर्वेषां च स्वरूपं स्थिति मतिविमला स्तत्प्रवृत्ती रशेषा: ।
स्वेच्छाया एव निघ्ना विदधदधिवसन्नात्मभावेन दीव्यन् ॥
देवेश स्साह्यकर्ता निरवधिकरुणो वारणक्ष्माधरेन्द्र: ।
श्रीमानेवाश्रितेभ्यो दृढतिमिर मपास्यात्मतोषं ददाति ॥ २

ಮೂಲ : ಬೂತವುಡಲ್‌ಪುಲನ್‌ಗಳ್‌ಮನಂಪುಲ್ಲಾವಿಪುನ್ದಿಯೆನ್ನುಂ
ಯಾದುಮಲನಾಯುಲಹಿಲ್ ಯಾನೆನ್ನುಮಿನ್ನುಣ್ಣರಿವಾಯ್
ಚೇತನನಾಯಡಿಮ್ಮೈಯುಮಾಯುಯಿರ್ಕ್ಕೆಲ್ಲಾಂತಿಣ್ಣುಯಿರಾಯ್
ತೀದಲನ್ರಿತ್ತಿಹಳುಂಶೀರ್ ಅತ್ತಿಗ್ಗಿರಿತ್ತಿರುಮಾಲೇ ॥ 3

ಅರ್ಥ :- (ಶೀರ್) ಕಲ್ಯಾಣಗುಣಪರಿಪೂರ್ಣನಾದ (ಅತ್ತಿಗ್ಗಿರಿ-ತಿರುಮಾಲ್) ಹಸ್ತಗಿರಿಯ ಶ್ರೀಲೋಲನಾದ ವರದರಾಜನು (ಉಲಹಿಲ್) ಈ ಜಗತ್ತಿನಲ್ಲಿ (ಬೂತ-ಉಡಲ್) ಪಂಚಭೂತಮಯವಾದ ಶರೀರಗಳೂ (ಪುಲನ್‌ಗಳ್) ಇಂದ್ರಿಯಗಳೂ (ಮನಂ) ಮನಸ್ಸೂ (ಪುಲ್-ಆವಿ) ತೃಣದಂತೆ ಅತಿಸುಲಭವಾಗಿ ಛೇದಿಸಲ್ಪಡುವಂತಹ ಪ್ರಾಣಗಳೂ (ಪುನ್ದಿ) ಬುದ್ಧಿಯೂ (ಎನ್ನುಂ) ಈ ರೀತಿ ಹೇಳಲ್ಪಟ್ಟಿರುವಗಳಲ್ಲಿ (ಯಾದುಂ-ಅಲನಾಯ್) ಯಾವುದೊಂದೂ ಆಗಿರದವನಾಗಿ (ಯಾನ್-ಎನ್ನುಂ) ನಾನು ಎಂದು ಪ್ರಕಾಶಿಸುವ (ಇನ್) ಭೋಗ್ಯವಾದ (ನುಣ್) ಸೂಕ್ಷ್ಮವಾದ (ಅರಿವಾಯ್) ಜ್ಞಾನ ಸ್ವಭಾವವಾಗಿಯೇ ಭಗವಂತನಿಗೆ ಸೇವಕನಾದ (ಉಯಿರ್ಕ್ಕ-ಎಲ್ಲಾಂ) ಜೀವಾತ್ಮನಾಗಿರುವ ಆತ್ಮವರ್ಗಕ್ಕೆಲ್ಲಾ (ತಿಣ್-ಉಯಿರಾಯ್) ದೃಢವಾದ ಆತ್ಮನಾಗಿ, ಅಂದರೆ ಎಲ್ಲಕ್ಕೂ ಅಂತರ್ಯಾಮಿಯಾಗಿ (ತೀದಲ್-ಅನ್ರಿ) ಯಾವ ಅವದ್ಯವೂ ಇಲ್ಲದಂತೆ (ತಿಹಳುಂ) ಚೇತನವರ್ಗದ ಯಾವ ದೋಷವೂ ಲೇಪಿಸದಂತೆ ಕಂಗೊಳಿಸುವನು. (ಪ್ರಾಪ್ಯವಾದ ಪರಬ್ರಹ್ಮನ ಸ್ವರೂಪ ಸ್ವಭಾವಗಳನ್ನು ಹಿಂದೆ ತಿಳಿಸಲಾಯಿತು. ಇಲ್ಲಿ ಪ್ರಾಪ್ತವಾದ ಜೀವಾತ್ಮನ ಸ್ವರೂಪ ಸ್ವಭಾವಗಳನ್ನು ಎರಡು ಪದ್ಯಗಳಲ್ಲಿ ಹೇಳಲು ಉದ್ದೇಶಿಸಿ, ಮೊದಲು ಜೀವನ ಸ್ವರೂಪಾದಿಗಳನ್ನು ಹೇಳುತ್ತಾ, ಅವೂ ಸಹ ಪರಮಾತ್ಮನ ಅಧೀನಗಳೆಂದು ವಿಶದಪಡಿಸುವರು).

काया भूतमया मनोऽक्षनिचयः प्राणाश्च तुल्या स्तृणैः ।
बुद्धिश्चेति न कोऽप्यमीषु कथितो जीव स्ततोऽन्य स्सुखी ।।
धीरूपो मतिमान् निषेवणरति स्स्या त्तादृशानां दृढ- ।
स्त्वन्तर्याम्यनवद्यसद्गुणनिधि र्भातीभशैलाधिपः ।। ३

ಮೂಲ : ತಾನಡೈತ್ತಗುಣಂಕರುವಿತ್ತನ್‌ಕಿರಿಶೈವಳಿಯೊಳುಕ್ಕಿ
ಊನೆಡುತ್ತುಂಡುಮಿಳ್‌ನ್ದುಳಲುಮುಯಿರ್ಕ್ಕೆಲ್ಲಾಮುಯಿರಾಹಿ
ಕಾಲ್‌ನಡತ್ತಿಕ್ಕಮಲ್ಲೈಯುಡನ್ ಕಂಡುಹಂದು ವಿಳ್ಳೆಯಾಡುಂ
ತೇನೆಡುತ್ತಶೋಲೈಹಳ್‌ಶೂಳ್ ತಿರುವತ್ತಿಯೂರಾನೇ ॥ 4

ಅರ್ಥ :- (ತೇನ್) ಜೇನನ್ನು (ಎಡುತ್ತ) ತುಂಬಿಕೊಂಡಿರುವ (ಶೋಲೈಹಳ್-ಶೂಳ್) ಉಪವನಗಳಿಂದ ಪರಿವೃತವಾದ (ತಿರು-ಅತ್ತಿ-ಊರಾನ್) ಸಂಪತ್ತುಳ್ಳ ಹಸ್ತಿಗಿರಿಯಿರುವ ಕಾಂಚಿಯಲ್ಲಿ ನಿತ್ಯವಾಸಮಾಡುವ ವರದರಾಜನು (ಕಮಲೈ-ಉಡನ್) ಲಕ್ಷ್ಮೀಸಮೇತನಾಗಿ (ತಾನ್-ಅಡೈತ್ತ) ತಾನೇ ಆಯಾ ಜೀವಾತ್ಮರು ಪಡೆಯುವಂತೆ ಮಾಡಿದ (ಗುಣಂ) ಗುಣಗಳನ್ನು (ಕರುವಿ) ಮರೆಸಿ, (ತನ್-ಕಿರಿಶೈ-ವಳ್-ಒಳುಕ್ಕಿ) ಆಯಾಜೀವರು ತಮ್ಮ ತಮ್ಮ ಕರ್ಮಮಾರ್ಗದಲ್ಲಿ ಪ್ರವರ್ತಿಸುವಂತೆಮಡಿ, (ಊನ್-ಎಡುತ್ತ) ಮಾಂಸಾದಿಮಯವಾದ ಶರೀರವನ್ನು ಪಡೆದು, (ಉಂಡು) ಕರ್ಮಾನುಗುಣವಾದ ಪ್ರಾಕೃತ ವಿಷಯಸುಖದುಃಖಗಳನ್ನು ಅನುಭವಿಸಿ, (ಉಮಿಳ್‌ನ್ದು) ಕಕ್ಕುತ್ತಾ, ಅಂದರೆ ಅವುಗಳಿಂದ ಬೇರೆಯಾಗಿ, (ಉಳಲುಂ) ಅಲೆದಾಡುತ್ತಿರುವ (ಉಯಿರ್ಕ್-ಎಲ್ಲಾಂ) ಎಲ್ಲಾ ಜೀವರಿಗೂ (ಉಯಿರ್-ಆಹಿ) ಆತ್ಮನಾಗಿ, ಅಂದರೆ ಅಂತರ್ಯಾಮಿಯಾಗಿ, (ಕಾಲ್-ನಡತ್ತಿ) ನಡೆಸುತ್ತಾ, (ಕಂಡ್) ತಾನು ನಡೆಸುವ ಸಂಸಾರಚಕ್ರಪರಿವರ್ತನವನ್ನು ನೋಡಿ (ಉಹಂದ್) ಸಂತೋಷಗೊಂಡು (ವಿಳೈಯಾಡುಂ) ಲೀಲಾನಂದವನ್ನು ಅನುಭವಿಸುವನು.

(ಪ್ರತ್ಯಗಾತ್ಮನ ಸ್ವಾಭಾವಿಕವಾದ ಆಕಾರಗಳನ್ನು ವಿವರಿಸಿ. ಇದರಲ್ಲಿ ಅನಾದಿ ಕರ್ಮಕೃತವಾದ ಪ್ರಕೃತಿ ಸಂಬಂಧವೆಂಬ ಉಪಾಧಿಗಳಿಂದ ಕೂಡಿದ ಆಕಾರಗಳನ್ನು ವಿಶದವಾಗಿ ಹೇಳಿ, ಅವುಗಳೊಡನೆ ಪರಮಾತ್ಮನು ಲೀಲಾರಸವನ್ನು ಅನುಭವಿಸುವನೆಂಬುದನ್ನು ಸ್ಫುಟವಾಗಿ ತಿಳಿಸಿರುವರು.)

**माध्वीपूर्णवनावृतानवरतश्रीनागशैलाधिपः ।**
**सश्रीक श्च निजोपलम्भितगुणान् विस्मार्य कर्माध्वनि ॥**
**जीवान् तद्गुणिनि प्रवर्त्यवपु राधायानुभूतान् च्युतान् ।**
**भ्रान्तान् वीक्ष्य कृपावश स्तदधिप स्तुष्टश्च संक्रीडते ॥ ४**

**ಮೂಲ :** **ಉಯ್ಯುಮುರವಿಶ್ಶೈಯಾದೇಯೊತ್ತವರ್ಕ್ಕೇಯಡಿಮ್ಮೈಯುಮಾಯ್**
**ಪೊಯ್ಯುರುವೈತನಕ್ಕೇತ್ತಿಪುಲನ್‌ಕೊಂಡಪಯನ್ಗೊಂಡು,**
**ಐಯ್ಯುರವುಮಾರಿರುಳುಮಲ್ವಳಿಯುಮಡೈಂದವರ್ಕ್ಕು,**
**ಮೆಯ್ಯರುಳ್‌ಶೆಯ್ದಿಡುಂತಿರುಮಾಲ್ ವೇಳಮಲೈಮೆಯ್ಯವನೇ ॥ 5**

ಅರ್ಥ :- (ವೇಳ-ಮಲೈ-ಮೆಯ್-ಅವನ್) ಹಸ್ತಿಗಿರಿಯಲ್ಲಿ ಸತ್ಯಸ್ವರೂಪನಾಗಿ ಬಿಜಯಮಾಡಿರುವ (ತಿರು-ಮಾಲ್) ಲಕ್ಷ್ಮೀವಲ್ಲಭನಾದ ಪರಮಾತ್ಮನೇ (ಉಯ್ಯಂ-ಉರವ್-ಇಶೈಯಾದೆ) ಉಜ್ಜೀವನಗೊಳ್ಳುವ ಸಂಬಂಧವನ್ನು ಒಪ್ಪಿಕೊಳ್ಳದೆ ಅಂದರೆ ಸ್ವರೂಪೋಚಿತ ಪುರುಷಾರ್ಥ ಪ್ರಾಪಕವಾದ ಈ ಭಗವದ್ದಾಸ್ಯತ್ವವನ್ನು

ಅಂಗೀಕರಿಸದೆ, (ಒತ್ತವರ್ಕ್ಕೇ-ಅಡಿಮೈಯುಂ-ಆಯ್) ತಮಗೆ ಸಮಾನವಾಗಿರುವವರಿಗೇನೆ ಸೇವಕರಾಗಿ (ತನಕ್ಕ್) ನಿಜವಾಗಿಯೂ ಜ್ಞಾನಾನಂದಪೂರ್ಣವರಾಗಿ ಜೀವತತ್ವಗಳಾದ ತಮಗೆ (ಪೊಯ್-ಉರುವ್ವೈ-ಏತ್ತಿ) ಇಲ್ಲದ ಸಲ್ಲದ ದೇಹಾದಿ ರೂಪವನ್ನು ಆರೋಪಿಸಿಕೊಂಡು, (ಪುಲನ್-ಕೊಂಡ-ಪರ್ಯ) ಇಂದ್ರಿಯಗಳಿಂದ ಗ್ರಹಿಸಲಾಗುವ ಫಲಗಳನ್ನೂ (ಐಯ್-ಉರವುಂ) 'ತಂದೆ-ತಾಯಿ-ಸೋದರ-ಭೃತ್ಯ-ಸ್ವಾಮಿ'' ಎಂಬ ಐದು ವಿಧ ಸಂಬಂಧಗಳನ್ನೂ (ಆರ್-ಇರುಳುಂ) ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳೆಂಬ ಆರು ವಿಧವಾದ ಅಜ್ಞಾನಕರವಾದ ಅಂಧಕಾರಗಳನ್ನೂ (ಅಲ್-ವಳಿಯುಂ) ಅವುಗಳಿಂದ ಸಂಭವಿಸುವ ದುರ್ಮಾರ್ಗಗಳನ್ನೂ (ಅಡೈಂದವರ್ಕ್) ಪಡೆದಿರುವ ಈ ಸಂಸಾರಿ ಚೇತನರಿಗೆ (ಮೆಯ್-ಅರುಳ್-ಶೆಯ್ದ್-ಇಡುಂ) ಮಿಂಚಿನಂತೆ ಹೊಳೆದು ಕಾಣಿಸಿಕೊಳ್ಳದೆ ಸುಳ್ಳೋ, ಎಂಬಂತಾಗದೆ ಸಹಜವಾಗಿಯೇ ಸತ್ಯಭೂತವಾದ ದಯೆಯ ಕಾರ್ಯವನ್ನು ಮಾಡಿಯೇಬಿಡುವನು.

(ಪರಬ್ರಹ್ಮ-ಜೀವಾತ್ಮರ ಸ್ವರೂಪ ಸ್ವಭಾವಾದಿಗಳನ್ನು ಹೇಳಿದ ಮೇಲೆ ''ಪ್ರಾಪ್ಯುಪಾಯಂ ಫಲಂ ಚೈವ ತಥಾಪ್ರಾಪ್ತಿವಿರೋಧಿಚ'' ಎಂಬ ವಚನದಂತೆ ಕ್ರಮ ಪ್ರಾಪ್ತವಾದ ''ಪ್ರಾಪ್ಯುಪಾಯ''ವನ್ನು ಬಿಟ್ಟು ಕೊನೆಯದಾದ ''ಪ್ರಾಪ್ತಿವಿರೋಧಿ''ಯನ್ನು ವಿಶದಪಡಿಸಲುಪಕ್ರಮಿಸಿ ಮೊದಲು ಸಂಸಾರಚಕ್ರ ಪರಿವೃತ್ತಿಗೆ ನಿದಾನವಾದ ''ವಿಪರೀತಜ್ಞಾನ''ವೆಂಬ ಪ್ರಾಪ್ತಿವಿರೋಧಿಯನ್ನು ತಿಳಿಸಿ, ಅದನ್ನು ನಿವಾರಿಸುವುದು ಭಗವತ್ಕೃಪೆಯೇ ಹೊರತು ಬೇರೆಯಲ್ಲವೆಂದು ಹೇಳಿರುವರು).

**श्रीलोल: करिशैलसत्य इह ये चोत्तारकत्वादिकं ।**
**स्वस्मिन्नाभ्युपगम्य तत्समधिवश्चान्यान् निषेव्यात्मनि ।।**
**आरोप्यानृततां तदिन्द्रियफलं पञ्चानुबन्धान् तम- ।**
**षट्कं दुष्पथ माश्रितावितनुते सत्यां दयां तेषु हि ।। ५**

ಮೂಲ : **ವಿದ್ಯೆಮುಳ್ಳೆಯಿನ್‌ನಿಯಾಯತ್ತಾಲಡಿಯಿಲ್ಲಾವಿನ್ನೈಯಡೈವೇ,**
**ಶದ್ದೈಯುಡಲನಾಲ್ವಹೈಯುಂ ಶರಣಳಿಪ್ಪಾನೆನತ್ತವಿಳ್ನ್ದು,**
**ಪದವಿಯರಿಯಾದುಪಳಂಪಾಳಿಲುಳಲ್‌ಹಿನ್ರಾರ್ಕ್ಕುಂ,**
**ಶಿದೈವಿಲರುಳ್‌ತರುಂ ತಿರುಮಾಲ್ ತಿರುವತ್ತಿನಹರಾನೇ ॥ 6**

ಅರ್ಥ :- (ತಿರು-ಮಾಲ್) ಮಹಾಲಕ್ಷ್ಮಿಲೋಲನಾದ (ತಿರು-ಅತ್ತಿ-ನಗರ್ರಾ) ಶ್ರೀ ಹಸ್ತಿಗಿರಿನಿವಾಸಿಯಾದ ದೇವರಾಜನು (ವಿದ್ಯೆ-ಮುಳ್ಳೈಯಿರ್-ನಿಯಾಯತ್ತಾಲ್) ಬೀಜ ಮತ್ತು ಅಂಕುರಗಳ ನ್ಯಾಯದಂತೆ (ಅಡಿ-ಇಲ್ಲಾ-ವಿನ್ನೈ) ಇದು ಮೊದಲೆಂದು ಹೇಳಲಾಗದ

ಅನಾದಿ ಕರ್ಮಗಳ (ಅಡೈವೇ) ಪರಿಪಕ್ವವಾದ ಕ್ರಮದಿಂದಲೇ (ಶದೈ-ಉಡಲಂ-ನಾಲ್ವಹೈಯುಂ) ಮಾಂಸಮಯವಾದ ದೇವಾದಿ ನಾಲ್ಕು ವಿಧ ಶರೀರಗಳನ್ನು (ಶರಣ್) ರಕ್ಷಕನಾದವನಾಗಿ (ಅಳಿಪ್ಪಾನ್) ಕಾಪಾಡುವನು ಅವನು (ಎನ) ಎಂದು (ತಮಿಳ್‌ನ್ದು) ಸಂಕ್ರಮಿಸಿ (ಪದವಿ) ಆತ್ಮೋಜ್ಜೀವನಮಾರ್ಗವನ್ನು (ಅರಿಯಾದು) ಕಾಣದೆ (ಪಳಂ-ಪಾಳಿಲ್) ಪುರಾತನವಾದಪ್ರಕೃತಿಮಂಡಲದಲ್ಲಿ (ಉಳಲ್‌ಹಿನ್ರಾರ್ಕ್ಕುಂ) ಅಲೆದಾಡುವವರಿಗೂ (ಶಿದೈವಿಲ್) ಸಡಿಲಿಸದಿರುವ (ಅರುಳ್) ದಯೆಯನ್ನು (ತರುಂ) ಬೀರುವನು.

ಹಿಂದೆ ಹೇಳಿದ ವಿಪರೀತ ಜ್ಞಾನಕ್ಕೆ ಫಲವಾದ ದೇವ ಮನುಷ್ಯಾದಿ ಶರೀರ ಪ್ರವೇಶ ಪ್ರವೃತ್ತಿರೂಪವಾದ ವಿರೋಧಿಯನ್ನು ತಿಳಿಸುತ್ತಾ, ಅದರ ನಿವೃತ್ತಿಯೂ ಪರಮಾತ್ಮನ ಕೃಪೆಯಿಂದಲೇ ಆಗುವುದೆಂದು ಹೇಳಿದರು.

**श्रीलोल: करिशैलवासरसिको बीजाङ्कुरन्यायत: ।**
**प्राप्तानादिकृतक्रियान् कृतभरान् संरक्षतीत्यागता: ॥**
**आत्मोज्जीवपथं त्वनीक्ष्य सुचिरं प्रत्ने च शून्यस्थले ।**
**नृणां संचरतां कृपा मशिथिलामत्यादरात् यच्छति ॥** ६

ಮೂಲ : ಯಮನಿಯಮೋಪಾಶನಂಗಳ್ ಇಯಲಾವಿಪುಲನಡಕ್ಕುಂ
ತಮದರಿಯುಂದಾರಣೈಹಳ್‌ದಾರ್‍ಯೆಯರಾನಿನ್ನೈವೊಳುಕ್ಕಂ
ಶಮಮುಡೈಯಶಮಾದಿನಲಂಶಾದಿಪ್ಪಾರ್‍ಕ್ಕಿಲಕ್ಕಾಹುಂ
ಅಮರರ್‌ತೊಳುಮತ್ತಿಗಿರಿಯಂಬುಯತ್ತಾಳಾರಮುದೇ ॥ 7

ಅರ್ಥ :- (ಅಮರರ್-ತೊಳುಂ) ದೇವತೆಗಳಿಂದ ಸೇವಿಸಲ್ಪಡುವ (ಅತ್ತಿ-ಗಿರಿ) ಹಸ್ತಿಗಿರಿಯಲ್ಲಿ ನಿತ್ಯವಾಸಮಾಡುವ (ಅಂಬುಯತ್ತಾಳ್) ಕಮಲವಾಸಿನಿಯಾದ ಮಹಾಲಕ್ಷ್ಮಿಯ (ಅರ್-ಅಮುದೇ) ಪರಿಪೂರ್ಣವಾದ ಅಮೃತವೇ ಅಂದರೆ ಪರಮ ಭೋಗ್ಯನಾದ ವರದ ಪರಮಾತ್ಮನೇ (ಯಮ) ''ಬ್ರಹ್ಮಚರ್ಯ-ಅಹಿಂಸಾ-ಸತ್ಯ-ಅಸ್ತೇಯ-ಅಪರಿಗ್ರಹ'' ಎಂಬುವನ್ನೂ (ನಿಯಮ) ''ಸ್ವಾಧ್ಯಾಯ-ಶೌಚ-ಸಂತೋಷ-ತಪಸ್ಸು-ನಿಯಮಾತ್ಮತತ್ವ'' ಎಂಬುವನ್ನೂ (ಉಪಾಶನಂಗಳ್) ತನಗೆ ಅಭ್ಯಾಸವಾಗಿರುವ ಮತ್ತು ಸುಖಕರವಾಗಿರುವ ಆಸನವನ್ನೂ (ಇಯಲ್) ಉಚಿತವಾದ (ಆವಿ) ಪ್ರಾಣದೊಂದಿಗೂ (ಪುಲನ್) ಇಂದ್ರಿಯಗಳೊಂದಿಗೂ (ಅಡಕ್ಕಂ) ನಿರೋಧವನ್ನೂ (ತಮದ್) ತಮ್ಮ ಮನಸ್ಸಿನಿಂದ (ಅರಿಯುಂ) ಅರಿಯಲಾಗುವ (ದಾರಣೈಹಳ್) ''ಪ್ರಾಣಯಾಮೇನ ಪವನೇ ಪ್ರತ್ಯಾಹಾರೇಣಚೇಂದ್ರಿಯೇ । ವಶೀಕೃತೇ ತತಃಕುರ್ಯಾತ್ ಸ್ಥಿತಂಚೇತಶ್ಶುಭಾಶ್ರಯೇ.॥'' ಎಂದು ಉಪಕ್ರಮಿಸಿ, ''ಮೂರ್ತೆಭಾಗವತರೂಪೇ

ಸರ್ವಾಪಾಶ್ರಯನಿಸ್ಪೃಹೇ। ಏಷಾಸಾಧಾರಣಾಪ್ರೋಕ್ತಾ ಯಚ್ಚಿತ್ತಂ ತತ್ರಧಾರ್ಯತೇ'' ಎಂದು ಹೇಳಿದ ಧಾರಣೆಯನ್ನೂ (ದಾರ್ೖೆ-ಆರಾ) ನಡುವೆನಿಂತು ಹೋಗದೆ ಧಾರಾಕಾರವಾಗಿರುತ್ತಿರುವ (ನಿನೈವ್) ನೆನಪುಗಳ ಅಂದರೆ ಧ್ಯಾನದ (ಒಳುಕ್ಕಂ) ಪ್ರವಾಹವನ್ನೂ (ಶಮಂ-ಉಡೈಯ) ಅಂತರಿಂದ್ರಿಯ ನಿಗ್ರಹವುಳ್ಳ (ಶಮಾದಿ-ನಲಂ) ಸಮಾಧಿಸ್ಥಿತಿಯ ಆನಂದವನ್ನೂ (ಶಾದಿಪ್ಪಾರ್) ಸಾಧಿಸುವವರಿಗೆ (ಇಲಕ್ಕ್-ಆಹುಂ) ಲಕ್ಷ್ಯಭೂತನಾಗುವನು ಅಂದರೆ ಧ್ಯಾನಕ್ಕೆ ವಿಷಯನಾಗುವನು. (ಭಕ್ತಿರೂಪಸಾಧ್ಯೋಪಾಯವನ್ನು ಅಂದರೆ ''ಯಮ-ನಿಯಮ-ಆಸನ-ಪ್ರಾಣಾಯಾಮ-ಪ್ರತ್ಯಾಹಾರ-ಧಾರಣ-ಧ್ಯಾನ-ಸಮಾಧಿ''' ರೂಪವಾಗಿ ಅಷ್ಟಾಂಗ ಯೋಗವೆಂದು ಹೆಸರುವಾಸಿಯಾದುದನ್ನು ಸಂಪೂರ್ಣವಾಗಿ ಹೇಳಿ, ಇದಕ್ಕೆ ವಿಷಯನಾಗುವ ಶ್ರಿಯಃಪತಿಯೇ ಸಿದ್ಧೋಪಾಯನೆಂದು ಹೇಳಿದೆ.)

**प्राणे र्योम्यै हृषीके स्सह यमनियमावासनं धारणं च ।**
**चेतोवेद्यं च धाराकृति मविचलितां सन्ततिं च स्मृतीनाम् ।।**
**भक्त्या ये साधयन्ति प्रशमयुतसमाधिप्रमोदं च तेषां ।**
**लक्ष्यं स्यादेव देवार्चितकरिशिखरिश्रीसमग्रामृतोऽयम् ।। ७**

ಮೂಲ : ಪುಹಲುಲಹಿಲಿಲ್ಲಾದುಪೊನ್ನರುಳ್‌ಕಂಡುತ್ತವರ್ಕ್ಕುಂ
ಅಹಲಹಿಲ್ಲಾವನ್ಬರ್ಕ್ಕುಮನ್ರೇತನ್ನರುಳ್‌ಕೊಡುತ್ತು
ಪಹಲದನಾಲ್‌ಪಳಂಕಂಗುಲ್‌ವಿಡಿವಿಕ್ಕುಂಪಂಗಯತ್ತಾಳ್
ಅಹಲಹಿಲ್ಲೇನೆನ್ರುರೈಯುಮತ್ತಿಗಿರಿಯರುಣ್‌ಮುಗಿಲೇ ॥ 8

ಅರ್ಥ :- (ಪಂಗಯತ್ತಾಳ್) ಪಂಕಜವಾಸಿನಿಯಾದ ಮಹಾಲಕ್ಷ್ಮಿಯು (ಅಹಲ-ಹಿಲ್ಲೇನ್) ಅಗಲಿ ಇರಲು ಸಮರ್ಥಳಲ್ಲ (ಎನ್ರು-ಉರೈಯುಂ) ಎಂದು ನೆನದು ನಿತ್ಯ ವಾಸಮಾಡುವ ದಿವ್ಯಸ್ಥಳವಾದ (ಅತ್ತಿ-ಗಿರಿ) ಹಸ್ತಿಗಿರಿಯಲ್ಲಿರುವ (ಅರುಳ್-ಮುಹಿಲ್) ದಯೆಯನ್ನು ವರ್ಷಿಸುವ ಮೋಡವು, ಅಂದರೆ ವರದ ಪ್ರಭುವು (ಉಲಹಿಲ್) ಲೋಕದಲ್ಲಿ (ಪುಹಲ್-ಇಲ್ಲಾದ್) ಕರ್ಮ ಜ್ಞಾನ ಭಕ್ತಿಯೋಗಗಳಲ್ಲಿ ನಿಷ್ಠೆಯು ದುರ್ಲಭವಾದ್ದರಿಂದ ''ಅನಾಗತಾನಂತ ಕಾಲ ಸಮೀಕ್ಷಯಾಪಿ ಅದೃಷ್ಟಸಂತಾರೋಪಾಯಃ। ತತ್ಪಾದಾಂಬುಜದ್ವಯ ಪ್ರಪತ್ತೇಃ ಅನ್ಯನ್ನಮೋ ಕಲ್ಪಕೋಟಿಸಹಸ್ರೇಣಾಪಿ ಸಾಧನ ಮಸ್ತೀತಿಮನ್ವಾನಃ'' ಎಂಬ ಸ್ಥಿತಿಯಲ್ಲಿ ಬೇರೆ ಉಪಾಯವಿಲ್ಲದೆ (ಪೊನ್-ಅರುಳ್-ಕಂಡು) ಎಲ್ಲರೂ ಆಸೆಪಡುವಂತಿರುವ ದಯೆಯನ್ನು ನೋಡಿ (ಉತ್ತವರ್ಕ್ಕುಂ) ಆಶ್ರಯಿಸಿದವರಿಗೂ (ಅಹಲಹಿಲ್ಲಾ-ಅನ್ಬರ್ಕ್ಕುಂ)

"ಸಕೃತ್ತ್ವದಾಕಾರವಿಲೋಕ ನಾಶಯಾ ... ಯದ್ವಿರಹೋಽತಿದುಸ್ಸಹಃ" ಎಂಬಂತೆಯೇ ಕ್ಷಣವೂ ಅಗಲಿರದ ಉತ್ಕಟ ಪ್ರೇಮಶಾಲಿಗಳಾದ ಮಹಾತ್ಮರಿಗೂ (ಅನ್ರೇ) ಅವರು ಕೋರಿದಾಗಲೇ (ತನ್-ಅರುಳ್-ಕೊಡುತ್ತು) ತನ್ನ ಅಮೋಘವಾದ ದಯೆಯನ್ನು ಬೀರಿ (ಪಹಲ್-ಅದನಾಲ್-ಪಳಂ) ಹಗಲಿನಿಂದ ಬಹಳ ದೂರವಾಗಿದ್ದ (ಕಂಗುಲ್) ಸಂಸಾರವೆಂಬ ಕಾಳರಾತ್ರಿಯನ್ನು (ವಿಡಿವಿಕ್ಕುಂ) ಬೆಳಗಾಗುವಂತೆ ಮಾಡುವನು.

(ಪ್ರಪತ್ತಿರೂಪವಾದ ಸಾಧ್ಯೋಪಾಯವನ್ನು ಅದರ ಅಧಿಕಾರಸಹಿತ ವಿವರಿಸಿ, ಅದರಿಂದ ವಶೀಕೃತನಾದ ಸಿದ್ಧೋಪಾಯನಾದ ಸಕಲ ಶರಣ್ಯನಾದ ಶ್ರಿಯಃಪತಿಯು ಪ್ರಪತ್ತ್ಯುಪಾಯನಿಷ್ಠರಿಗೆ ಪ್ರಾರಬ್ಧವನ್ನೂ ಕ್ಷಮಿಸಿ ಅವರಪೇಕ್ಷಿಸಿದ ಕಾಲದಲ್ಲೇ ಪೂರ್ಣಫಲವನ್ನು ಕೊಡುವನು" ಎಂಬುದು ಸಾರಾರ್ಥ)

**सोढुं लक्ष्मी र्न शक्ता प्रियविरहमितीव ब्रुवाणो द्विपाद्रौ ।**
**स्थास्नुः कारुण्यधाराधर इह तरणोपायदौर्लभ्यदृष्ट्या ॥**
**प्रार्थ्यां वीक्ष्यानुकम्पां शरणजुष उरूप्रीतिभाज स्सभाजः ।**
**संगृह्यानुग्रहेण व्यपगमितनिशं सुप्रभाहं करोति ॥**

8

ಮೂಲ : ಇರುವಿಲಂಗ್ ವಿಡುತ್ತಿರುಂದ ಶಿರೈವಿಡುತ್ತೋರ್ ನಾಡಿಯಿನಾಲ್,
ಕರುನಿಲಂಗಳ್‌ಕಡಕ್ಕುಂವಳಿಕಾವಲರಾಲ್ ಕಡತ್ತು ವಿತ್ತು,
ಪೆರುನಿಲಂಕಂಡುಯಿರುಣರ್‌ನ್ದ್ ಪಿರಿಯಾಮಲರುಳ್‌ಶೆಯ್ಯುಂ,
ಉರುನಿಲಂಕೊಂಡುರುಂತಿರುವೋಡುಉಯರತ್ತಿಗಿರಿಯಾನೇ ॥ 9

ಅರ್ಥ :- (ಉರು-ನಿಲಂಕೊಂಡು) ಶರೀರವೆಂಬ ಸ್ಥಲವನ್ನು ಸ್ವೀಕರಿಸಿ, (ಉರುಂ) ಸಾನ್ನಿಧ್ಯ ಕೊಡಲು ವಾಸಮಾಡುವವನಾದ (ತಿರು-ಓಡು) ಮಹಾಲಕ್ಷ್ಮಿಯೊಡನೆ (ಉಯರ್) ಉನ್ನತವಾದ (ಅತ್ತಿ-ಗಿರಿಯಾನ್) ಹಸ್ತಿಗಿರಿನಾಥನಾದ ವರದಪ್ರಭುವು (ಇರು-ವಿಲಂಗ್) ಪುಣ್ಯಪಾಪಗಳೆಂಬ ಎರಡುವಿಧ ಬಂಧನಗಳನ್ನೂ (ವಿಡುತ್ತು) ಬಿಡಿಸಿ (ಓರ್‌ನಾಡಿಯಿನಾಲ್) ಅಸಾಧಾರಣವಾದ ಒಂದುನಾಡಿಯಮೂಲಕ (ಇರುಂದ-ಶಿರೈ) ಜೀವನನ್ನು ವಾಸಮಾಡುವ ಕಾರಾಗೃಹದಂತಿರುವ ದೇಹಭಾಗದಿಂದ (ವಿಡುತ್ತ್) ಹೊರಹೊರಡಿಸಿ (ಕರು-ನಿಲಂಗಳ್-ಕಡಕ್ಕುಂ-ವಳಿ) ಮತ್ತೆ ಹುಟ್ಟುವ ಗರ್ಭಸ್ಥಳಗಳನ್ನು ದಾಟಿಸುವ ಮಾರ್ಗವಾದ ಅರ್ಚಿರಾದಿ ಮಾರ್ಗವನ್ನು (ಕಾವಲರಾಲ್-ಕಡತ್ತು-ವಿತ್ತು) ರಕ್ಷಕರಾದ ಆತಿವಾಹಿಕಪುರುಷರಿಂದ ದಾಟಿಸಿ (ಪೆರು-ನಿಲಂ-ಕಂಡ್) ಪರಮಪದವನ್ನು ನೋಡಿ (ಉಯಿರ್) ಆತ್ಮನು (ಉಣರ್‌ನ್ದ್) ಪರಮಾತ್ಮನನ್ನು ಅನುಭವಿಸಿ (ಪಿರಿಯಾಮಲ್) ಮತ್ತೆ ಅಗಲದಂತೆ (ಅರುಳ್-ಶೆಯ್ಯುಂ) ದಯೆಯನ್ನು ಬೀರುವನು.

(ಪುಣ್ಯಪಾಪಗಳನ್ನು ಬಿಡಿಸುವ ಮೊದಲುಗೊಂಡು ಗುಣಾಷ್ಟಕ ಪ್ರಾದುರ್ಭಾವ ಪರ್ಯಂತವಾಗಿರುವ ಹಾರ್ದವ್ಯಾಪಾರವನ್ನು ಹೇಳಿದಂತಾಯಿತು)

बन्धद्वन्द्वान्निवार्य स्थितनिगळगृहात् निर्गमय्यैकनाड्या
गर्भावाप्तिस्थलोत्तारकपथ मथ तद्रक्षकै स्तारयित्वा ।
आत्मानं दृष्टदिव्यस्थलममितमुदं चाविनाभाविनं च
कुर्योदेवात्तवर्ष्मोन्नतकरिगिरिपः पद्मसद्मासमेतः ॥ ९

ಮೂಲ : ತನ್ತಿರುಮಾದುಡನೇ ತಾನ್ ತನಿಯರಶಾಯುರೈಹಿನ್ರ,
ಅನ್ದಮಿಲ್ ಪೇರಿನ್ಬತ್ತಿಲಡಿಯವರೋಡೆಮ್ಮೈಚ್ಚೇರ್ತ್ತು,
ಮುನ್ದಿಯಿಳನ್ದನವೆಲ್ಲಾ ಮುಳುಕ್ಕತ್ತನ್ತಾಳ್‌ಕೊಳ್ಳುಂ,
ಅನ್ತಮಿಲಾವರುಳಾಳಿಯತ್ತಿಗಿರಿತ್ತಿರುಮಾಲೇ ॥ 10

ಅರ್ಥ :- (ಅಂತಂ-ಇಲಾ-ಅರುಳ್-ಆಳಿ) ಅಪಾರವಾಗಿರುವ ಕರುಣೆಯ ಸಾಗರನಾದ (ಅತ್ತಿ-ಗಿರಿ-ತಿರು-ಮಾಲ್) ಹಸ್ತಿಗಿರಿಯಲ್ಲಿ ದೇದೀಪ್ಯಮಾನವಾಗಿರುವ ಲಕ್ಷ್ಮೀವಲ್ಲಭನಾದ ವರದ ಪ್ರಭುವು (ತನ್-ತಿರು-ಮಾದು-ಉಡನೆ) ತನ್ನ ಪ್ರಿಯಳಾದ ಲಕ್ಷ್ಮಿಯ ಜೊತೆಯಲ್ಲೇ (ತಾನ್-ತನಿ-ಅರಶಾಯ್-ಉರೈಹಿನ್ರ) ತಾನು ಅನನ್ಯ ಸಾಧಾರಣ ಧರಣೀಧರನಾಗಿ ವಾಸಮಾಡುವ ಸ್ಥಾನವಾದ (ಅಂತಂ-ಇಲ್-ಪೇರ್-ಇನ್ಬತ್ತಿಲ್) ಅಪರಿಮಿತವೂ ಸ್ವಭಾವವಾಗಿಯೇ ನಿರತಿಶಯವೂ ಮಹಾನಂದದಾಯಕವೂ ಆದ ಪರಮಪದದಲ್ಲಿ (ಅಡಿಯವರ್-ಓಡೆ) ಕಿಂಕರರಾದ ನಿತ್ಯರೊಂದಿಗೂ, ಮುಕ್ತರೊಂದಿಗೂ (ಎಮ್ಮೈ-ಶೇರ್ತ್) ನಮ್ಮನ್ನು ಸೇರಿಸಿ (ಮುಂದಿ) ಹಿಂದೆ ಸಂಸಾರದೆಸೆಯಲ್ಲಿ (ಇಳಂದನ-ಎಲ್ಲಾಂ) ಬಿಟ್ಟುಹೋಗಿದ್ದ ಸರ್ವವಿಧ ಸೇವೆಯನ್ನೂ (ಮುಳುಕ್ಕ) ಸಂಪೂರ್ಣವಾಗಿ ಅಂದರೆ ಸಂಸಾರದೆಸೆಯಲ್ಲಿದ್ದುದನ್ನು ಮರೆತು ತಾನೆಂದೆಂದೂ ಹೀಗೆಯೇ ನಿತ್ಯಕಿಂಕರನಾಗಿದ್ದಂತೆ ಉಂಟುಮಾಡಿ (ತನ್-ತಾಳ್-ಕೊಳ್ಳುಂ) ತನ್ನ ದಿವ್ಯ ಪಾದಾರವಿಂದಗಳಲ್ಲಿ ನೆಲೆಯಾಗಿರುವಂತೆ ಸ್ವೀಕರಿಸುವನು.

(ಪರಿಪೂರ್ಣಬ್ರಹ್ಮಾನಂದನಾಭವಪರೀವಾಹದಿಂದ "ಒಳಿವಿಲ್ ಕಾಲಮೆಲ್ಲಾ ಮುಡನಾಯ್ ಮನ್ನಿ ವಳುವಿಲಾವಡಿಮೈಶೆಯ್ಯವೇಂಡುಂನಾಂ" ಎಂಬ ನಮ್ಮಾಳ್ವಾರ ಶ್ರೀಸೂಕ್ತಿಯಂತೆ, ಇರುವಂತೆ ಮಾಡುವುದನ್ನು ಕೃಪಾಪಾರಪಾರಾವಾರನಾದ ಪರಮಾತ್ಮನು ಈ ಅರ್ಥಪಂಚಕವನ್ನು ಚೆನ್ನಾಗಿ ಅರಿತು ನಡೆದುಕೊಳ್ಳುವವನಿಗೆ ಉಂಟುಮಾಡುವ ನೆಂಬುದು ಸತ್ಯವೆಂದು ಉಪದೇಶಿಸಿರುವರು).

अपारकरुणाम्बुधिः करिमहीधरश्रीधरः
स्वयं त्वसदृशः प्रभु स्सरम एव मोदप्रदे ।
पदे महति मेलयन् सह निजै र्वितीर्याथ नः
पुरा गतिनिषेवणं वितनुते स्वकीयांघ्रिसात् ॥ १०

ಮೂಲ : ಅಯನ್‌ಪಣಿಯುಮತ್ತಿಗಿರಿಯರುಳಾಳರಡಿಯಿಣೈಮೇಲ್,
ನಯಂಕೊಳ್‌ಶೇರ್‌ಕಚ್ಚಿನಗರ್ ನಾನ್ಮರೈಯೋರ್ ನಲ್ಲರುಳಾಲ್,
ಪಯನ್‌ಹಳಿವೈಯನೈತ್ತುಮೆನಪ್ಪಂಡುರೈತ್ತಾರ್ ಪಡಿಯುರೈತ್ತ,
ವಿಯನ್‌ಕಲೈಹಳೀರೈನ್ದುಂ ವೇದಿಯರ್‌ಹಳ್ಕಿನಿಯನವೇ ॥ 11

ಅರ್ಥ :- (ಅಯನ್-ಪಣಿಯುಂ) ಬ್ರಹ್ಮನಿಂದ ಸೇವೆಗೊಳ್ಳುತ್ತಿರುವ (ಅತ್ತಿ-ಗಿರಿ-ಅರುಳಾರ್) ಹಸ್ತಿಗಿರಿಯ ಕರುಣಾನಿಧಿಯಾದ ವರದ ಪ್ರಭುವಿನ (ಅಡಿ-ಇಣೈ-ಮೇಲ್) ಪಾದಾರವಿಂದಗಳೆರಡರ ವಿಷಯವಾಗಿ (ನಯಂ-ಕೊಳ್-ಶೇರ್) ನ್ಯಾಯಗಳಿಂದ ಕೂಡಿ ಬಿಡದಿರುವ (ಕಚ್ಚಿ-ನಗರ್-ನಾಲ್-ಮರೈಯೋರ್) ಕಾಂಚೀನಗರದಲ್ಲಿ ವಾಸಿಸುವ ಸಮಸ್ತ ವೇದಗಳನ್ನೂ ಅರಿತ ಭಾಗವತರ (ನಲ್-ಅರುಳಾಲ್) ನಿರತಿಶಯವಾದ ದಯೆಯಿಂದ (ಇವೈ-ಅನೈತ್ತುಂ-ಪಯನ್‌ಹಳ್-ಎನ) ಇವೆಲ್ಲವೂ ಸಮಸ್ತ ಫಲಗಳು ಎಂದು (ಪಂಡು-ಉರೈತ್ತಾರ್-ಪಡಿ-ಉರೈತ್ತ) ಹಿಂದಿನ ಆಚಾರ್ಯರು ಉಪದೇಶಿಸಿದ್ದ ರೀತಿಯಲ್ಲೇ ನನ್ನಿಂದ ಹೇಳಲಾಗಿರುವ (ವಿರ್ಯ-ಕಲೈಹಳ್-ಈರ್-ಐಂದುಂ) ಅತಿ ವಿಚಿತ್ರವಾದ ಈ ಹತ್ತು ಪದ್ಯಗಳೂ (ವೇದಿಯರ್‌ಹಳ್ಕ್) ವೇದಾರ್ಥದ ಸಾರವನ್ನರಿತವರಿಗೆ (ಇನಿಯನವೇ) ಹೃದ್ಯಗಳಾಗಿ ಪರಮಭೋಗ್ಯವಾಗಿರುವುವಲ್ಲವೇ !

ब्रह्मासेवितहस्तिशैलकरुणामूर्तेः पदद्वन्द्वयोः
कारुण्याच्च सतां चतुर्निगमविन्न्याय्याध्वकाञ्चीजुषाम् ।।
सर्वाणीव फलान्यमूनि च पुराचार्योपदिष्टाध्वना
पद्यान्यद्य विदां द्विपञ्चकलितान्यत्यन्तहृद्यानि वै ॥ ११

श्रीदेशिकप्रबन्धस्थमर्थपञ्चकमर्थदम् ।
सश्लोकं सार्थमतनोत् गोपालार्यो सतां मुदे ।।

इति श्रददेशिकप्रबन्धासारार्थप्रकाशे विदुषा गोपालार्येण कृते
अर्थपंचकं संपूर्णम् ॥

॥ಶ್ರೀಃ॥

॥ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ॥

# ಶ್ರೀವೈಷ್ಣವ ದಿನಚರೀ

**श्री वैष्णवदिनचर्यां वेदान्तार्य श्चकार गाथाभिः ।**
**गोपालोऽयं कुरुते श्लोकांश्चार्थांश्च तत्कृपया ।।**

ಮಾನವ ಸಾಮಾನ್ಯರಿಗೂ ದಿನದಿನದ ಕರ್ತವ್ಯವಿಂಥದೆಂಬುದುಂಟು. ವಿಶೇಷವಾಗಿ ಬ್ರಾಹ್ಮಣರಿಗೆ ಅವಶ್ಯಕರ್ತವ್ಯಾಂಶವು ಶ್ರುತ್ಯಾದಿಚೋದಿತವಾದುದು. ಅವರಲ್ಲೂ ಭಗವನ್ನಿಷ್ಠರಾದ ಶ್ರೀವೈಷ್ಣವರಿಗಂತೂ ಪ್ರತಿದಿನ ಅನುಷ್ಠಾನಕ್ರಮವು ಶ್ರುತಿವಿಹಿತವಾಗಿರುವುದಷ್ಟೇ ಅಲ್ಲದೆ, ಉಪಬ್ರುಂಹಣಗಳಿಂದ ವಿವರಿಸಲ್ಪಟ್ಟು, ಪೂರ್ವಾಚಾರ್ಯ ಪರಂಪರೆಯಿಂದ ಅನುಸ್ಯೂತವಾಗಿ ಆಚರಿಲಸಲ್ಪಟ್ಟು ಬರುತ್ತಿದೆ. ಶ್ರೀ ಸಾತ್ವತಭಗವಚ್ಛಾಸ್ತ್ರಾದಿಗಳಲ್ಲಿಯೂ ''ಮಹಾಭಾರತ'' ''ಶಾರೀರಕಸೂತ್ರಾ'' ದಿಗಳಲ್ಲಿಯೂ ಉಪಬ್ರುಂಹಿಂತವಾಗಿದೆ. ಶ್ರೀ ಯಾಮುನಾಚಾರ್ಯರ ''ಆಗಮ ಪ್ರಾಮಾಣ್ಯ''ದಲ್ಲಿಯೂ ಸ್ಫುಟವಾಗಿದೆ. ಶ್ರೀಭಾಷ್ಯಕಾರರ ''ಶರಣಾಗತಿ ಗದ್ಯ'' ''ವೈಕುಂಠಗದ್ಯ'' ''ಭಗವದಾರಾಧನೆ ಪ್ರಯೋಗ''ಗಳಲ್ಲಿ ದಿನಚರ್ಯೆಯ ವಿಧಾನವು ಸುವ್ಯಕ್ತವಾಗಿ ಉಪದೇಶಿಸಲ್ಪಟ್ಟಿದೆ. ಶ್ರೀವಂಗಿವಂಶೇಶ್ವರರು ಕಾರಿಕಾರೂಪ ಕೃತಿಯಲ್ಲಿ ಅತ್ಯಂತ ವಿಶದವಾಗಿ ತಿಳಿಸಿರುವರು. ಹಾಗೆಯೇ ನಾರಾಯಣಮುನಿ ಪ್ರಭೃತಿಗಳೂ ತಮ್ಮ ತಮ್ಮ ಆಹ್ನಿಕ ಗ್ರಂಥಗಳಲ್ಲಿ ಸ್ಫುಟೀಕರಿಸಿರುವರು. ಶ್ರೀಮದಾಚಾರ್ಯರೂ ತಮ್ಮ ''ಶ್ರೀ ಪಾಂಚರಾತ್ರರಕ್ಷೆ''ಯಲ್ಲಿ ಸಂಭಾವಿತ ಸಮಸ್ತ ವಿರೋಧ ಪ್ರಶಮನಪೂರ್ವಕವಾಗಿ ಅವಶ್ಯಾನುಷ್ಠಾನಕ್ರಮವನ್ನು ವಿವರಿಸಿ, ಅದರ ಎರಡನೆಯ ಅಧಿಕಾರದಲ್ಲಿ ಪ್ರಪತ್ತಿನಿಷ್ಠರಿಗೂ ಸಹ ಸ್ವಯಂಪ್ರಯೋಜನರೂಪವಾಗಿ ಅವಶ್ಯಕರ್ತವ್ಯವೆಂದು ಪ್ರತಿಪಾದಿಸಿ, ಅದರಲ್ಲೇ ಮೂರನೆಯ ಅಧಿಕಾರದಲ್ಲಿ ಅನುಷ್ಠಾನಕ್ರಮವನ್ನು ಪ್ರದರ್ಶಿಸಿರುವರು. ಹೀಗೆ ಆಚರಿಸಬೇಕಾದ ''ಶೌಚ-ಸ್ನಾನ-ಸಂಧ್ಯೋಪಾಸನಾದಿ ಸಾಮಾನ್ಯ ಧರ್ಮಗಳಿಂದ ದತ್ತಹಸ್ತಾವಲಂಬನದಂತಿರುವ, ''ಅಭಿಗಮನ-ಉಪಾದಾನ- ಇಜ್ಯಾ-ಸ್ವಾಧ್ಯಾಯ-ಯೋಗ'' ಎಂದು ಐದು ಭಾಗವುಳ್ಳ ಪ್ರತಿದಿನದ ಆಯಾ ಸಮಯದ ಅವಶ್ಯಕರ್ತವ್ಯವನ್ನು ಶ್ರೀಮದಾಚಾರ್ಯರು ''ಶ್ರೀವೈಷ್ಣವ ದಿನಚರೀ'' ಎಂಬ ಹೆಸರಿನ ಈ ಸರಳ ದ್ರಾವಿಡ ಪದ್ಯರೂಪವಾದ ಪ್ರಬಂಧದಲ್ಲಿ ಉಪದೇಶಿಸಿರುವರು. ಸಾಮಾನ್ಯ ಜನರಿಗೂ ಚೆನ್ನಾಗಿ

ತಿಳಿಯಬೇಕೆಂದೇ ತಿಳಿತಮಿಳಿನಲ್ಲಿ ತಮ್ಮ ಸ್ವರಸವಾದ ಕವಿತಾವಾಣಿಯಿಂದ ಹೇಳಿ ಮಹೋಪಕಾರ ಮಾಡಿರುವರು.

''ಆಚಾರಪ್ರಭವೋಧರ್ಮಃ, ಧರ್ಮಸ್ಯ ಪ್ರಭುಃ ಅಚ್ಯುತಃ॥'' ಎಂದೂ ''ಧರ್ಮೋರಕ್ಷತಿ ರಕ್ಷಿತಃ'' ಎಂದೂ ಹೇಳಿರುವಂತೆ ಧರ್ಮಕ್ಕೆ ಮೂಲವಾದ ಆಚಾರವನ್ನೂ, ಆಚಾರದಿಂದ ಬರುವ ಧರ್ಮವನ್ನೂ ಬಿಡದೆ ಆಚರಿಸಿ, ಆ ಧರ್ಮದ ಪ್ರಭುವೆನಿಸಿದ ಸರ್ವಶರಣ್ಯನಾದ ಸಕಲಕರ್ಮ ಸಮಾರಾಧ್ಯನನ್ನು ಆರಾಧಿಸಿ, ಸುರಕ್ಷಿತರಾಗಿ ಬಾಳಿ ಬೆಳಗಬೇಕೆಂಬುದೇ ಈ ಉಪದೇಶಾಮೃತದ ಸಾರ.

ಮೈಸೂರು
ಶುಭಕೃತ್
1962

ವಿದ್ವಾನ್ ಹ. ಗೋಪಾಲಾಚಾರ್ಯಃ

॥ಶ್ರೀಃ॥

॥ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ॥

# ಶ್ರೀವೈಷ್ಣವ ದಿನಚರೀ

ಮೂಲ : ವರಿಯಿರುಳಳಿವದರ್ ಮನಂವರುಮುಣರ್‌ವೊಡು,
ಕರಿಗಿರಿಮರುವಿಯ ಕರಿಯವರಡಿಯಿಣೈ,
ಪರವೊಡುಪರವುನಲ್ಲಡಿಯವರ್‌ಪಳವುರೈ,
ಅರಿ ಯರಿ ಯರಿ ಯರಿ ಯರಿ ಯರಿ ಯರಿಯೇ ॥ 1

ಅರ್ಥ :- ವರಿ = ಆವರಿಸಿರುವ, ಇರುಳ್ = (ಕತ್ತಲಿನ ಗುಣಗಳುಳ್ಳ) ನಿದ್ರೆಯು, ಅಳಿವದರ್= ಮುಗಿದು, ಕೊನೆಯಲ್ಲಿ, ಮನಂ = ಮನಸ್ಸು (ಜ್ಞಾನವು) ವರುಂ = ಬರುವ, ಉಣರ್-ಒಡು = ಅನುಭವದೊಂದಿಗೆ, ಕರಿಗಿರಿ = ಹಸ್ತಿಗಿರಿಯ, ಮರುವಿಯ = ಆದರದಿಂದಿರುವ, ಕರಿಯವರ್ = ನೀಲಮೇಘಶ್ಯಾಮನಾದ ವರದನ, ಅಡಿ-ಇಣೈ = ಎರಡು ಪಾದಗಳನ್ನೂ, ಪರಿವೊಡು = ಪ್ರೇಮದಿಂದ, ಪರವುಂ = ಸ್ತುತಿಸುವ, ನಲ್-ಅಡಿಯವರ್ = ಉತ್ತಮ ಸೇವಕರ, ಪಳ = ಪ್ರಾಚೀನವಾದ, ಉರೈ = ಸೂಕ್ತಿಯಾದುದು, ''ಅರಿ'' = ಹರಿ ಎಂದು ಏಳುಸಲ ಹೇಳತಕ್ಕದ್ದೇ ಅಲ್ಲವೆ.

ಬೆಳಗಿನ ಝಾವದಲ್ಲಿ ನಿದ್ರೆಯಿಂದ ಎಚ್ಚರಗೊಂಡು ಎದ್ದು, ನಿರ್ಮಲವಾದ ಮನಸ್ಸಿನಿಂದ ದಿವ್ಯಮಂಗಳ ವಿಗ್ರಹವಾದ ವರದನನ್ನು ಕಣ್ಣೆದುರಿಗೆ ನೋಡುವಂತೆ ಧ್ಯಾನಿಸುತ್ತಾ, ಇಂಪಾದ ಸ್ವರದಲ್ಲಿ ''ಹರಿಃ'' ಎಂಬ ಅಮೃತವನ್ನು ಸುರಿಸುವ, ಸಕಲದೋಷ ನಿವಾರಕವಾದ ನಾಮವನ್ನು ಏಳುಸಲ ಹೇಳುತ್ತಾ, ಸ್ತೋತ್ರಾದಿಗಳನ್ನು ಹೇಳಬೇಕು. ನಿರತಿಶಯವಾದ ಭಕ್ತಿಯಿರುವ ವೈಷ್ಣವೋತ್ತಮರು ಬಾಯಿಂದ ಹೇಳಲುಪ್ರಕಮಿಸಿದರೆ ಬೇರೆ ಶಬ್ದಗಳಿಂದ ಅಲ್ಲ. ಅದು ಹರಿ ಶಬ್ದವೇ. ಪೂರ್ವಾಚಾರ್ಯ ಪರಂಪರೆಯಿಂದ ಬಂದಿರುವ ಕ್ರಮವನ್ನು ತಾವೂ ಅನುಷ್ಠಿಸಿ, ಅನುಭವಿಸಿ, ಲೋಕಕ್ಕೆ ಉಪದೇಶಿಸುವರು. ಪೂರ್ವರಾತ್ರಿಯಲ್ಲಿ ಸಂಕಲ್ಪಿಸಿಕೊಂಡಿದ್ದ ಯೋಗವನ್ನು ಮುಗಿಸಿ, ಸಾತ್ವಿಕತ್ಯಾಗಮಾಡಿ, ಅನಂತರ ಅನುಷ್ಠಿಸಬೇಕಾದ ರೀತಿಯನ್ನು ಈ ಪಾಶುರದಲ್ಲಿ ಉಪದೇಶಿಸಿ, ನಂತರ ''ಅಭಿಗಮನ''ವೆಂಬುದಕ್ಕೆ ಸಂಕಲ್ಪಿಸಿಕೊಂಡು, ಅದರ ಸಂಬಂಧವಾದ ಆಚರಣೆಗಳನ್ನು ನಡೆಸಬೇಕು.

निराकृतावृतान्धकारकाल आत्मरञ्जने ।
गजाचलादराधिवासिनीलनीरमुक्पदौ ॥

प्रशंसतां च रागतो निषेविणां चिरोक्तय: ।
हरि हेरि हेरि हेरि हेरि हेरि हेरि स्त्विति ।। १

ಮೂಲ : ವಿನ್ನೈವಹೈಯೊಳುಹಿಯವೆರಿನಿಲ್ಯೆಯಡ್ಯೆಯವುಂ,
ನಿನ್ನೈವುಡ್ಯೆನಿಕಳೆದಿರ್‌ನಿಲ್ಯೆನಲಮಣುಹಿಡ,
ಮನಮುರ್ಯೆಕಿರಿಶ್ಯೆಹಳ್‌ಮಕಿಳ್‌ಮರ್ಯೆ (ಮತಿ) ನೆರಿಕೊಡು,
ತನಿಮುದಲಡಿಯಿಣ್ಯೆಯಡ್ಯೆಬವರ್‌ತಮರೇ ॥ 2

ಅರ್ಥ :- ತಮರ್ = ತಮ್ಮವರು (ಶ್ರೀವೈಷ್ಣವರು) ವಿನ್ನೈ-ವಹೈ-ಒಳುಹಿಯ = ಅನಾದಿಯಾಗಿ ಬರುವ ಕರ್ಮಪ್ರವಾಹದಲ್ಲಿ ಹೋಗುತ್ತಿರುವ, ವೆರಿ-ನಿಲ್ಯೆ-ಅಡ್ಯೆಯವುಂ = ಉನ್ಮಾದವಾದವಸ್ಥೆಗಳೆಲ್ಲರಲ್ಲೂ, ನಿನ್ನೈವು-ಉಡ್ಯೆ = ಸ್ಮರಣೆಯಿರುವ, ನಿಕಳ್ = ವರ್ತಮಾನಕಾಲದಲ್ಲಿ, ಎದಿರ್-ನಿಲ್ಯೆ = ಭವಿಷ್ಯತ್ಕಾಲದ, ನಲಂ = ಆನಂದವು, ಅಣುಹ್-ಇಡ = ಸನ್ನಿಹಿತವಾಗುವಂತೆ, ಮನಂ-ಉರ್ಯೆ-ಕಿರಿಶ್ಯೆಹಳ್ = ಮನಸ್ಸು ಮಾತು ಕ್ರಿಯೆಗಳು, ಮಕಿಳ್ = ಆನಂದಪಡುವಂತೆ, ಮರ್ಯೆ-ನೆರಿ = ವೇದವೆಂಬ ಉಪಾಯವನ್ನು, (ಮತಿ-ನೆರಿ = ಎಂಬ ಪಾಠದಲ್ಲಿ ಜ್ಞಾನವೆಂಬ ಉಪಾಯವನ್ನೆಂದರ್ಥ) ಕೊಡು = ಕೊಟ್ಟವನಾದ, ತನಿ = ಅಸದೃಶನಾದ, ಮುದಲ್ = ಕಾರಣ ಭೂತನಾದ ಪರಮಾತ್ಮನ, ಇಣ್ಯೆ-ಅಡಿ = ಎರಡು ಪಾದಗಳನ್ನು, ಅಡ್ಯೆಬವರ್ = ಶರಣವಾಗಿ ಆಶ್ರಯಿಸುವರು.

ಅನಾದಿಯಾದ ಕರ್ಮಪ್ರವಾಹದಲ್ಲಿ ಸಿಕ್ಕಿಕೊಂಡುದು ಭಗವದಾಜ್ಞಾರೂಪವಾದ ಕೈಂಕರ್ಯಾತಿಕ್ರಮದ ಫಲಿ. ಒದಗಿರುವ ದೇಹಾದಿಗಳು ಹಿಂದೆಪಟ್ಟ, ಇಂದು ಪಡುತ್ತಿರುವ ಮತ್ತು ಮುಂದೆ ಪಡಬಹುದಾದ ಕಷ್ಟಪರಂಪರೆಗಳನ್ನು ನೆನೆಸಿಕೊಂಡು, ಗಾಬರಿಗೊಂಡು, ಮರುಗಿ ಮತ್ತೆ ಧೈರ್ಯತಾಳಿ ವಿವೇಕಗೊಂಡು, ''ಇತ ಊರ್ಧ್ವಂ ಅಹಂತಾವತ್ ಯಾವಜ್ಜೀವಂ ಹರೇಃಪುನಃ ॥ ಪದಯೋರರ್ಚನಂ ಕರ್ತುಂಯತಮಾನಸ್ಸಮಾಹಿತಃ ॥'' ಎಂಬಂತೆ ಭಗವಂತನಲ್ಲಿ ಅನನ್ಯ ಮನಸ್ಸಿನಿಂದ ನಿವೇದಿಸಿಕೊಂಡು, ಸ್ನಾನ-ಸಂಧ್ಯಾದಿ ನಿತ್ಯ ನೈಮಿತ್ತಿಕ ಕರ್ಮಗಳನ್ನೂ ಆಚರಿಸಿ, ಅವುಗಳಲ್ಲೂ ರೂಪ ಗುಣಾದಿಗಳನ್ನು ಚಿಂತಿಸುತ್ತಾ, ಮಾಡುವ ಕರ್ಮಕ್ಕೆ ಸಾರ್ಥಕತೆಯನ್ನು ಪಡೆದು ಆನಂದಿಸುತ್ತಾ, ಭಗವದಾರಾಧನ ಯೋಗ್ಯತೆಯನ್ನು ಪಡೆದು ಸ್ವಯಂಪ್ರಯೋಜನರೂಪವಾಗಿ ಶರಣುಹೋಗುವುದೇ, ''ಅಭಿಗಮನ''ವೆನಿಸುವುದು. ಶ್ರೀವೈಷ್ಣವರು ಇದನ್ನು ಬಿಡದೆ ಆಚರಿಸಿ ಜೀವಿತಕಾಲವನ್ನು ಸಾರ್ಥಕಪಡಿಸಿಕೊಳ್ಳಬೇಕಾದುದು ವಿಧಿನಿಯಮಿತವೆಂದು ಹೇಳಿರುವರು. ಇದೇ ಈ ಪದ್ಯದ ಸಾರಾಂಶ.

कर्मपूरयातसर्वसोन्मदप्रवृत्तिषु ।
स्मृत्युपेतवर्तमान आयतेश्च मोदवत् ।।

**चितवाक्क्रियाप्रमोदकृत्त्रयीपथप्रदा-**
**नन्यहेतुपादयुग्म माश्रयन्ति वैष्णवाः ॥** २

**ಮೂಲ : ಮಲರ್‌ಮಹಳ್‌ಮರುವಿಯ ಮರುವುಡೈಯಿರೈಯವರ್,**
**ಮಲರಡಿಕರುದಿಯಮನಮುಡೈಯಡಿಯುವರ್,**
**ಮಲರ್‌ಪುನಲಮುದುಡನ್‌ವಹೈಯೆನವಡೈಯವುಂ,**
**ಮಲರ್‌ಮದಿಯೆಮದಲವೆನವರುಬವರೇ ।.** 3

**ಅರ್ಥ** :- ಮಲರ್-ಮಹಳ್ = ಮಹಾಲಕ್ಷ್ಮಿಯಿಂದ, ಮರುವಿಯ = ಆದರಿಸಲ್ಪಟ್ಟ, ಮರುವುಡೈ = ಚಿಹ್ನೆಯುಳ್ಳ, ಇರೈಯವರ್ = ಸರ್ವೇಶ್ವರನ, ಮಲರ್ = ಹೂವಿನಂತಿರುವ, ಅಡಿ = ಪಾದಗಳನ್ನು, ಕರುದಿಯ = ಚಿಂತಿಸುವ, ಮನಂ-ಉಡೈ = ಮನಸ್ಸುಳ್ಳ, ಆಡಿಯವರ್ = ಭಕ್ತರು, ಮಲರ್ = ಹೂವುಗಳು, ಪುನಲ್ = ನೀರು, ಅಮುದ್ = ಅನ್ನ, ಉಡನ್ = ಇವುಗಳೊಂದಿಗೆ, ವಹೈ-ಎನ = ಇರುವಂತಹ, ಅಡೈಯವುಂ = ಎಲ್ಲವೂ, ಎಮದ್-ಅಲ-ಎನ = ತಮ್ಮದಲ್ಲ ಎಂದು, ಮಲರ್-ಮತಿ = (ಹಿಂದುಮುಂದಾಗಿ ಅನ್ವಯಿಸಬೇಕು) ಬುದ್ಧಿಯೆಂಬ ಹೂವು (ಜ್ಞಾನವು), ವರುಬವರ್ = ಬರುವಂತೆ ಮಾಡುವರು, (ಒಳ್ಳೆಯ ಜ್ಞಾನವನ್ನು ಸಂಪಾದಿಸುವರು). (ಪರಾರ್ಥಾನುಸಂಧಾನ ಪರಿಕರ್ಮಿತವಾದ ಬಾಹ್ಯಾಭ್ಯಂತರ ಪೂಜೋಪಕರಣಗಳನ್ನು ಸಂಪಾದಿಸುವುದೆಂಬ "ಉಪಾದಾನ"ವನ್ನು ಹೇಳಿದಂತಾಯಿತು)

**ತಾತ್ಪರ್ಯ** :- ಉಪಾದಾನಕಾಲದಲ್ಲಿ ಭಗವದಾರಾಧನೆಗೆ ಅಂತಃಕರಣಶುದ್ಧಿಯಿಂದ "ಅಹಿಂಸೆ-ಇಂದ್ರಿಯ ನಿಗ್ರಹ-ಸರ್ವಭೂತದಯೆ-ಕ್ಷಮೆ-ಜ್ಞಾನ-ತಪಸ್ಸು-ಧ್ಯಾನ-ಸತ್ಯ" ಎಂಬ ಪುಷ್ಪಗಳನ್ನು ಜಪ-ಪಾರಾಯಣಾದಿಗಳಿಂದಲೂ, ತುಲಸೀ-ಹೂ-ನೈವೇದ್ಯದ ವಸ್ತುಗಳನ್ನು ಬಾಹ್ಯ ಪರ್ಯಟನದಿಂದಲೂ ಸಂಪಾದಿಸಬೇಕು. ಇವನ್ನೂ ಸಹ "ಅಕ್ಲೇಶೇನ ಶರೀರಸ್ಯ ಕುರ್ವೀತ ಧನಸಂಚಯಂ। ಅಪ್ರಯತ್ನಾಗತಾಸ್ಸೇವ್ಯಾಗೃಹಸ್ಥೈರ್ವಿಷಯಾಸ್ಸದಾ" ॥ ಎಂಬ ಮನುಧರ್ಮ ವಚನದಂತೆ ಧ್ಯಾನಾದಿಗಳಿಗೆ ವಿರೋಧಿಯಾಗುವ ಕಾಯಕ್ಲೇಶಾದಿಗಳಿಲ್ಲದಂತೆ ಆರ್ಜಿಸಬೇಕು. "ನಾತ್ಮಾರ್ಥಂ ಅನ್ನಂ ಅಭಿರೂಪಂ ಪಾಚಯೇತ್" ಎಂಬ ಆಪಸ್ತಂಬರ ನುಡಿಯಂತೆಯೂ, "ತದರ್ಥಂ ಕರ್ಮಕೌಂತೇಯ ಮುಕ್ತಸಂಗಃ ಸಮಾಚರ" ಇತ್ಯಾದಿ ಗೀತಾವಚನಗಳಂತೆಯೂ ತನಗಾಗಿ ಏನನ್ನೂ ಮಾಡಿಕೊಳ್ಳಬಾರದು. ಹೀಗೆ ಸಂಪಾದಿಸಿದ ದ್ರವ್ಯಾದಿಗಳನ್ನು "ಶ್ರೀವತ್ಸವೆಂಬ ಚಿಹ್ನವನ್ನೂ ಜಗನ್ಮಾತೆಯಾದ ಮಹಾಲಕ್ಷ್ಮಿಯನ್ನೂ ವಕ್ಷಸ್ಥಳದಲ್ಲಿ ಧರಿಸಿ, ಪರಾತ್ಪರನೂ, ಪರಿಪೂರ್ಣನೂ" ಆದ ಶ್ರೀಮನ್ನಾರಾಯಣನಿಗೆ ಸಮರ್ಪಿಸಿ, ಈ ನಮ್ಮ

ಕರಚರಣಾದಿಗಳನ್ನೂ ದೇಹಯಾತ್ರೆಯನ್ನೂ ಸಾರ್ಥಕಪಡಿಸಿ, ಕೃತಾರ್ಥರಾಗಬೇಕು. ಈ ಅನುಷ್ಠಾನಕ್ರಮವನ್ನೇ ''ಉಪಾದಾನ'' ಎಂಬ ಕಾಲವಿಭಾಗದ ಕರ್ತವ್ಯವಾಗಿ ಹೇಳಿರುವುದು.

पुष्पभूरमादराङ्कवक्षसोऽधिरक्षितुः ।
पुष्पपादशंसमानमानसा स्सुसेवकाः ।।
पुष्प मम्बु शुद्धमन्न मेवमादिवस्तुभिः ।
धीसुमाद्यवाप्नुयु र्न चेव चात्मनः कृते ।। ३

ಮೂಲ: ನಿಱೈಯುಡೈಮಲರ್‌ಮಹಳ್ ನಲಮುರಮರುವಿಯ,
ಇಱೈಯವನಿನಿದುರ ವಿನಿಯವೈಯೆನುಮವರ್,
ಅರನೆರಿಯಿಲನವನಣುಹಿಲುಮಣುಹಿಲರ್,
ತುಱೈಯಲದೆನುಮೊರುತುಱೈಪಡುಹಿಲರೇ ॥ 4

ಅರ್ಥ :- ನಿಱೈ-ಉಡೈ = ಪರಿಪೂರ್ಣತೆಯುಳ್ಳ, ಮಲರ್-ಮಹಳ್ = ಮಹಾಲಕ್ಷ್ಮಿಯು, ನಲಂ-ಉರ = ಆನಂದವನ್ನು ಪಡೆಯುವುದಕ್ಕೆ, ಮರುವಿಯ = ಆದರಿಸುವಂತೆ ಇರುವ, ಇಱೈಯವನ್ = ಸರ್ವೇಶ್ವರನಾದ ವರದಪ್ರಭುವು, ಇನಿದ್-ಉರ = ಭೋಗವನ್ನು ಹೊಂದಲು, ಇನಿಯವೈ = ಈ ಭೋಗ್ಯವಸ್ತುಗಳು, ಎನುಂ-ಅವರ್ = ಎಂದು ನೆನೆದಿರುವರು, (ಭಾಗವತೋತ್ತಮರಾದ ಶ್ರೀ ವೈಷ್ಣವರು) ಅರ-ನೆರಿ-ಅದು = ವಿಹಿತ ಕರ್ಮಾಚರಣೆಯನ್ನು, ಇಲನ್-ಅವನ್ = ಬಿಟ್ಟಿರುವವನು, ಅಣುಹಿಲುಂ = ಹತ್ತಿರ ಬಂದರೂ, ಅಣುಹಿಲರ್ = ಹತ್ತಿರ ಸೇರುವುದಿಲ್ಲ. ತುಱೈ-ಅಲದ್-ಎನುಂ = ಸೋಪಾನವಲ್ಲವಿದು ಎನ್ನುವಂತೆ ಇರುವ, ಒರು-ತುಱೈ = ಯಾವುದೊಂದು ಸೋಪಾನದಲ್ಲಾಗಲೀ, ಪಡುಹಿಲರ್ = ಬೀಳಲಾರರು. (ಇಳಿಯುವುದಿಲ್ಲ).

ತಾತ್ಪರ್ಯ :- ಸಕಲ ಮಂಗಳಗಳಿಗೂ ಸಮಸ್ತೈಶ್ವರ್ಯಕ್ಕೂ ಅಧಿದೇವತೆಯಾಗಿರುವ ಮಹಾಲಕ್ಷ್ಮಿಯು ಸಂಪೂರ್ಣ ಸಂಪತ್ಕಾಮಳಾಗಿದ್ದರೂ, ತನ್ನ ಭೋಗಸಿದ್ಧಿಗಾಗಿ ಆಶ್ರಯಿಸುವಂತೆ ಶ್ರೀಗೂ, ಶ್ರೀಯಾಗಿರುವ ಶ್ರೀಮನ್ನಾರಾಯಣನಿಗೆ ಅತ್ಯಂತ ಭೋಗ್ಯವೂ, ಪರಿಶುದ್ಧವೂ ಆದ ದ್ರವ್ಯವನ್ನೇ ಸಂಪಾದಿಸಿ, ಅವನಿಗೇ ಸಮರ್ಪಿಸುವವರು ನಿಜವಾಗಿಯೂ ಶ್ರೀವೈಷ್ಣವರು. ಇಂತಹವರು ಧರ್ಮಮಾರ್ಗವನ್ನು ಬಿಡುವುದಿಲ್ಲ. ಸನ್ಮಾರ್ಗದಲ್ಲಿ ಇಲ್ಲದವರು ಕೊಟ್ಟುದನ್ನು ತೆಗೆದುಕೊಳ್ಳುವುದಿಲ್ಲ, ಅಧರ್ಮಿಷ್ಠರ ಸಂಗಡ ಊಟಮಾಡುವುದಿಲ್ಲ. ಶಿಷ್ಟರು ಆಚರಿಸದುದನ್ನು ಎಂದಿಗೂ ತಾವು ಮಾಡರು. ಇದನ್ನೇ ''ಕುಲಟಾಷಂಡಪತಿತವೈರಿಭ್ಯಃ ಕಾಕಿಣೀಮಪಿ । ಉದ್ಯತಾಮಪಿಗೃಹ್ಣೀಯಾತ್

ನಾಪದ್ಯಪಿಕದಾಚನ ॥ ತಸ್ಕರಾತ್ ಪತಿತಾತ್ ಷಂಡಾತ್ ಡಂಭಲೋಭಮದಾನ್ವಿತಾತ್ । ಮಾತ್ರಾವಿತ್ತಂನಗೃಹ್ಣೀಯಾತ್ ಅಭಕ್ತಾದಪಚಾರತಃ ॥ ಕೇಶವಾರ್ಚಗೃಹೇಯಸ್ಯ ನ ತಿಷ್ಠತಿ ಮಹೀಪತೇ । ತಸ್ಯಾನ್ನನ್ನೈವಭೋಕ್ತವ್ಯಂ ಅಭಕ್ಷ್ಯೇಣ ಸಮಂಹಿತತ್''॥ ಎಂದು ಶಾಂಡಿಲ್ಯಸ್ಮೃತಿಯೂ ''ಉಗ್ರಗಂಧಾ ಅಕರ್ಮಣ್ಯಾ ಅಪ್ರಸಿದ್ಧಾಸ್ತಥೈವಚ । ಚತುಷ್ಪಥ ಶಿವಾವಾಸಸ್ಮಶಾನ ವನಮಧ್ಯಗಾಃ ॥ ವರ್ಜನೀಯಾಃ ಪ್ರಯತ್ನೇನ ಪತ್ರಪುಷ್ಪಫಲಾದಯಃ''॥ ಎಂದು ಸಾತ್ವತಾದಿಗಳೂ ಹೇಳುತ್ತವೆ.

**पूर्णकामपुष्वभूस्वभोगलिप्सया प्रभो: ।**
**आदृतस्य हीत्यवेयु रस्ति भोग्यवस्त्विदम् ।।**
**यद्यधर्मवानुपैति तेन नोपयन्त्यमी ।**
**क्वाप्यपावतारिणीस्थले न निष्पतन्ति च ।।** ४

**ಒಳಿಮದಿಯೆನವೊರು ತಿರುವುಡನುಯರ್ ಬವರ್,**
**ನಳಿರ್ಮದಿಮುಹನಹೈನಲನಿಲವುಹವುಹಳ್**
**ತೆಳಿಪುನಲಮುದೆನ ಶೆಳುಮತಿಯಡಿಯವರ್,**
**ಕುಳಿಮುದಲ್ಕಿರಿಶೈಹಳ್ ಕುರೈಹಿಲರ್ವಲದೇ ॥** 5

ಅರ್ಥ :- ಒಳಿ-ಮದಿ-ಎನ = ಬೆಳದಿಂಗಳಿಂದ ಕೂಡಿದ ಚಂದ್ರನಂತೆ, ಒರು = ಅಸದೃಶನಾದ, ತಿರು-ಉಡ್ರ = ಮಹಾಲಕ್ಷ್ಮೀ ಸಮೇತನಾದ, ಉಯರ್ಬವರ್ = ಅತ್ಯುತ್ತಮನೆನಿಸಿದ ಆ ಪರಮಾತ್ಮನ, ನಳಿರ್-ಮದಿ-ಮುಹಂ = ಅತಿಶೀತಲ ಚಂದ್ರನಂತಿರುವ ಮುಖದ, ನಹೈ-ನಲ = ಮಂದಹಾಸವೆಂಬ ಆನಂದವನ್ನು ಬೀರುವ. ನಿಲವು = ಬೆಳದಿಂಗಳಿಂದುಂಟಾಗುವ, ಉಹವುಹಳ್ = ಮನಸ್ಸಿನ ಉಲ್ಲಾಸಕ್ಕೆ ಕಾರಣವಾದುವು, (ಯಾವುವೆಂದರೆ) ತೆಳಿ-ಪುನಲ್-ಅಮುದ್-ಎನ = ನಿರ್ಮಲವಾದ, ನೀರು-ಅನ್ನ ಮೊದಲಾದ ವಸ್ತುಗಳು ಎಂದು, ಶೆಳು-ಮತಿ-ಅಡಿಯವರ್ = ಕ್ರಮೇಣ ಅಭಿವೃದ್ಧಿಯಾಗುವ ಬುದ್ಧಿಯುಳ್ಳ ಭಗವತ್ಸೇವಕನು, ವಲದ್-ಮಾಡಬಹುದಾದ, ಕುಳಿ-ಮುದಲ್-ಕಿರಿಶೈಹಳ್ = ಸ್ನಾನ ಮುಂತಾದ ಕರ್ಮಗಳನ್ನು, ಕುರೈಹಿಲರ್ = ಸ್ವಲ್ಪವೂ ನ್ಯೂನತೆಯಿಲ್ಲದಂತೆ ಅನುಷ್ಠಿಸುವರು.

ತಾತ್ಪರ್ಯ :- ಜಗದಾನಂದಕಾರಕನಾದ ಚಂದ್ರನ ಸಹಜ ಸೌಂದರ್ಯಾದಿಗಳು ಅವನ ಚಂದ್ರಿಕೆಯಿಂದಲೇ ಕಂಗೊಳಿಸುವಂತೆ ಭಗವಂತನ ಸ್ವಾಭಾವಿಕ ಕಲ್ಯಾಣ ಗುಣಗಳು ಮಹಾಲಕ್ಷ್ಮಿಯ ಸಂಶ್ಲೇಷದಿಂದ ಪ್ರಕಾಶಿಸುವುವು. ಬೆಳದಿಂಗಳನ್ನು ಬಿಟ್ಟಿರದ ಚಂದ್ರನಂತೆ ಮಹಾಲಕ್ಷ್ಮಿಯನ್ನು ಅಗಲಿರದ ನಾರಾಯಣನು ಅನುಗ್ರಾಹಕನು ಮತ್ತು

ಪರಮಾನಂದದಾಯಕನು. ಆ ಪರಮಾತ್ಮನ ಶೀತಲಮುಖ ಮಂದಹಸಿತಾನಂದ ಚಂದ್ರಿಕೆಯಿಂದ ನಾವು ನಿವೇದಿಸುವ ಶುದ್ಧವಾದ ನೀರು-ಅನ್ನ-ಮೊದಲಾದುವು ಹೃದಯೋಲ್ಲಾಸಕರಗಳಾಗುವುವು. ಭಗವದ್ಭಕ್ತರು ದೇಶ-ಕಾಲ-ಅವಸ್ಥೆಗಳಿಗನುಸಾರವಾಗಿ ಭಗವದಾರಾಧನೆಯನ್ನು ಮಾಡಬೇಕು. ಅದಕ್ಕೆ ಮೊದಲು ಸ್ನಾನಾದಿ ಕರ್ಮಗಳನ್ನು ಯಾವ ಕೊರತೆಯೂ ಇಲ್ಲದಂತೆ ಆಚರಿಸಬೇಕು. ಹೀಗೆ ಭಗವದಾರಾಧನೆಯ ಕಾಲವೇ ''ಇಜ್ಯಾ'' ಎನಿಸಿಕೊಳ್ಳುತ್ತದೆ. ಇದನ್ನು ಶ್ರೀವೈಷ್ಣವರು ಮಾಡಿಯೇ ಮಾಡುವರು. (ಅದರಿಂದಲೇ ''ಶ್ರೀವೈಷ್ಣವ ದಿನಚರೀ'' ಎಂದು ಸಾಮಾನ್ಯವೂ, ವಿಶೇಷವೂ ಆದ ಹೆಸರನ್ನು ಹೇಳಿರುವುದು).

**सचन्द्रिकेन्दुवत् समस्य निस्समस्य चाखिलो-**
**न्नतस्य शीतचन्द्रसस्मितास्यमोदवात्प्रियाः ।।**
**—प्रसन्न मम्बु जान्न मित्युदारमत्युपाश्रिताः ।**
**अनून मेव मज्जनदि कर्म कुर्यु राह्निकम् ।।** ೫

**ಮೂಲ :** **ವರುವದೋರುರವೆನ ವಳರಿಳವರಶೆನ,**
**ಮರುವುನನ್ಮಗನೆನ ವನಮದಕರಿಯೆನ,**
**ಅರುವಿಲೈಮಣಿಯೆನ ವಡಿಯವರಡೈಬವರ್,**
**ಅರುಹಣೈಯಿರೈವನೈಯರುಹಣೈಯುಡನೇ ॥** 6

**ಅರ್ಥ** :- ಅಡಿಯವರ್ = ಭಕ್ತರು, ಅರುಹಣೈ = ಪೂಜೆಗೆ, ಇರೈವನೈ = ಸ್ವಾಮಿಯಾದ ಪರಮಾತ್ಮನನ್ನು, ಅರುಹಣೈ-ಉಡನ್ = (ಶ್ರೀಭಾಷ್ಯಕಾರರು ''ನಿತ್ಯ''ದಲ್ಲಿ ಉಪದೇಶಿಸಿರುವಂತೆ) ಆರಾಧನೆಯ ಜೊತೆಯಲ್ಲಿಯೇ, ವರುವದ್ = ಆಗತಾನೇ ಬಂದ, ಓರ್ = ಅಸಮಾನವಾದ, ಉರವು-ಎನ = ಬಂಧುವಂತೆಯೂ, ವಳರ್ = ಅಭಿವೃದ್ಧಿಯಾಗುವ, ಇಳ = ಎಳೆ ವಯಸ್ಸಿನ, ಅರಶ್-ಎನ = ದೊರೆಯಂತೆಯೂ, ಮರುವು = ಅತ್ಯಾಸೆಪಡುವಂತೆ ಇರುವ, ನಲ್-ಮಗ್ಗ-ಎನ = ಸತ್ಪುತ್ರನಂತೆಯೂ, ವನ-ಮದ-ಕರಿ-ಎನ = ಕಾಡಿನ ಮದಿಸಿದ ಆನೆಯಂತೆಯೂ, ಅರು-ವಿಲೈ = ಬಹಳ ಬೆಲೆಬಾಳುವ, ಮಣಿ-ಎನ = ರತ್ನದಂತೆಯೂ, ಅಡೈಬವರ್ = ಆಶ್ರಯಿಸುವರು (ಹೊಂದಿ ಪೂಜಿಸುವರೆಂದರ್ಥ).

**ತಾತ್ಪರ್ಯ** :- ಆರಾಧಕನು ಸ್ನಾನಾದಿ ಕರ್ಮಗಳನ್ನು ಅನುಷ್ಠಿಸಿ, ಪೂಜೆಗೆ ಅರ್ಹನಾಗುವನು. ಪೂಜಾವೇಳೆಯಲ್ಲಿ ಭಾವನೆಯು ಬಹಳ ಪರಿಶುದ್ಧವಾಗಬೇಕು. ನಾವು

ಮಾಡುವ ಸಮಸ್ತ ಪೂಜೆಗಳನ್ನು ಭೋಗಿಸುವವನೂ, ಮತ್ತು ಅವೆಲ್ಲಕ್ಕೂ ಪ್ರಭುವೂ ಶ್ರೀಮನ್ನಾರಾಯಣನೇ, ''ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವಚ'' ಎಂದಲ್ಲವೇ ಗೀತಾಚಾರ್ಯನು ನುಡಿದಿರುವುದು. ದೇವರಿಗೆ ಉಪಚಾರಗಳನ್ನು ನೀಡುವಾಗ ನಮ್ಮ ಭಾವನೆಯು ಹೀಗಿರಬೇಕು.

ಆತ್ಮಬಂಧುವೂ, ಅತಿಥಿಯೂ ಮತ್ತು ಅತಿಪ್ರಿಯನೂ ಬಂದಾಗ ನೀಡುವ ಆದರ - ಗೌರವ - ಸತ್ಕಾರವ್ಯಗ್ರತೆಗಳಂತೆಯೂ ಭಾವಿಸಬೇಕು. ತರುಣ ರಾಜನನ್ನು ಉಪಚರಿಸುವಾಗ ಪರಿಜನರು ಅದೇ ಪರಮಪುರುಷಾರ್ಥವೆಂದಿರುವಂತೆಯೂ ಭಾವಿಸಬೇಕು. ಒಳ್ಳೆಯ ಮಕ್ಕಳನ್ನು ಪಡೆದ ತಾಯಿತಂದೆಯರು ಅತ್ಯಂತ ವಾತ್ಸಲ್ಯ - ಲಾಲನೆ - ಪಾಲನೆಗಳನ್ನು ಮಾಡುವ ಸಡಗರದಂತೆಯೂ ನೆನೆಯಬೇಕು. ವನದಲ್ಲಿ ಮದಿಸಿದ ಆನೆಯು ಸ್ವೇಚ್ಛೆಯಾಗಿರುತ್ತಾ ಸರ್ವಾದರಣೀಯವೂ, ಸಕಲ ಸಂಪತ್ಸಮೃದ್ಧಿಸೂಚಕವೂ ಆಗಿರುವಂತೆ ಭಾವಿಸಬೇಕು. ಅಮೂಲ್ಯರತ್ನವು ಲಭಿಸಿದರೆ ಬಹಳ ಜಾಗರೂಕತೆಯಿಂದ ರಕ್ಷಿಸುವ ವಿಧಾನಗಳಿಂದ ದೇವರನ್ನು ದ್ವಾರಪಾಲಕರ ವಶ ಒಪ್ಪಿಸಿ, ಇಚ್ಛಿಸಿದಾಗ ಮತ್ತೆ ಸಂದರ್ಶಿಸುವಂತೆ ಭಾವಿಸಿ ನಿರ್ಭಯರಾಗಿರುವಂತೆಯೂ ಭಾವಿಸಬೇಕು. ಇವೇ ಆಯಾ ಆಸನಪರಿಕಲ್ಪನೆಯ ಸಮಯದಲ್ಲಿರಬೇಕಾದ ಭಾವಬಂಧಗಳು, ಇವಿಲ್ಲದ ಪೂಜೆ ಪೂಜೆಯಾಗದು. ಅದು ಪೂಜೆಯ ವ್ಯಾಜಮಾತ್ರ. ಅದರ ಫಲವೂ ಅಷ್ಟೆ! ಇದನ್ನೇ ''ಯಥಾಯುವಾನಂರಾಜಾನಂ ಯಥಾಚಮದಹಸ್ತಿನಂ । ಯಥಾಪ್ರಿಯಾಽತಿಥಿಂ ಯೋಗ್ಯಂ ಭಗವಂತಂ ತಥಾರ್ಚಯೇತ್ ॥ ಯಥಾಚಪುತ್ರಂದಯಿತಂ ತಥೈವೋಪಚರೇದ್ಧರಿಂ । ಎಂದೂ, ಸರ್ವೇಭವಂತಸ್ಸಗಣಾಸ್ಸನ್ನದ್ಧಾಸ್ಸರ್ವದಿಕ್ಷ್ವಪಿ । ಸಾವಧಾನಾಶ್ಚತಿಷ್ಠಂತು ನಿಕ್ಷಿಪಾಮಿಭವತ್ಸ್ವಹಂ ॥ ಮಮ ನಾಥಂ ಮಮಗುರುಂ ಪಿತರಂ ಮಾತರಂಚಮೇ । ಹರಿಂಶ್ರಿಯಂಭುವಂಚಾಪಿತಾನ್ ಪಾಲಯತಸರ್ವತಃ ॥ ಯಥಾನಿಕ್ಷಿಪ್ತ ರೂಪಂಮೇ ಸಂದರ್ಶಯತ ಸರ್ವದಾ । ಭವತಶ್ಶರಣಂಲಬ್ಧ್ವಾವ್ರಜಾಮಿಗತಸಾಧ್ವಸಃ॥ ಎಂದೂ ಭಗವಚ್ಛಾಸ್ತ್ರಗಳು ಮೊಳಗುತ್ತವೆ.

**समर्हणाप्रभुं शरण्य मर्चया सहार्चकाः ।**
**गृहागतैकबन्धुवत्प्रवर्धनक्षितीशवत् ।।**
**प्रियं निजात्मजं यथा च वन्यमत्तहस्तिवत् ।**
**यथाह्यमूल्यरत्न माप्त माश्रयन्ति सादरम् ।।** ६

ಮೂಲ : ಏರೈಕಮಳ್‌ಮಲರ್‌ಮಗಳ್ ಮಿಹವುರುಮಿರೈಯರ್ವ,
ಕುರೈಕಳಲ್ ಕುರುಹಿಯಕುಳಿರ್ ಮದಿಮತಿಯೊಡು,

**ಎರ್ರೈನಿಲ್ರೈಯಡಿಯವರ್ ಮರ್ರೈಹಳಿನ್ನರ್ರೈಯೆನುಂ,**
**ಉರ್ರೈನಿರ್ರೈಪರವುವರ್ ಉಳಮಮುದುಣವೇ ॥** 7

**ಅರ್ಥ** :- ವಿರ್ರೈ-ನಿಲ್ರೈ = ಪರ್ವತದಂತೆ ಅಚಲವಾದ ನಿಷ್ಠೆಯಳ್ಳ, ಅಡಿಯವರ್ = ಆಶ್ರಿತ ಸೇವಕರು, ವಿರ್ರೈ-ಕಮಳ್ = ಪರಿಮಳದಿಂದ ಘಮಿಘಮಿಸುವ, ಮಲರ್-ಮಗಳ್ = (ಹೂವಿನ ಕುವರಿಯಾದ) ಮಹಾಲಕ್ಷ್ಮಿಯಿಂದ, ಮಿಹ = ಅತ್ಯಧಿಕವಾಗಿ, ಉರುಂ = ಆಶ್ರಯಿಸಲ್ಪಟ್ಟ (ಲಕ್ಷ್ಮೀನಿತ್ಯಸಂಶ್ಲಿಷ್ಟನಾದ) ಇರ್ರೈಯವರ್ = ಸ್ವಾಮಿಯ, ಕುರ್ರೈ-ಕಳಲ್ = ಧ್ವನಿಗೈಯ್ಯುವ ಕಾಲಂದುಗೆಯಿರುವ ಪಾದಗಳನ್ನು, ಕುರುಹಿಯ = ವಿಷಯೀಕರಿಸಿಕೊಂಡಿರುವ, ಕುಳಿರ್-ಮದಿ = ಶೀತಲಚಂದ್ರನಂತಿರುವ, ಮತಿ-ಒಡು = ಬುದ್ಧಿಯೊಂದಿಗೆ, ಉಳಂ = ಅಂತಃಕರಣವು, ಅಮುದ್-ಉಣ = ಅಮೃತವನ್ನು ಆಸ್ವಾದಿಸುವಂತೆ ಮಾಡುವ, ಮರ್ರೈಹಳಿಲ್ = ವೇದಗಳಲ್ಲೂ, ಮರ್ರೈಹಳ್-ಎನ = ವೇದಗಳೆಂಬಂತೆ ಇರುವ, ಉರ್ರೈ = ಉಕ್ತಿಗಳ, ನಿರ್ರೈ = ಪಂಕ್ತಿಯನ್ನು, ಪರವುವರ್ = ಜಪಿಸುವರು.

**ತಾತ್ಪರ್ಯ** :- ''ಗಿರಯೊ ವರ್ಷಧಾರಾಭಿಃಹನ್ಯಮಾನಾ ನ ವಿವ್ಯಥುಃ । ವ್ಯಸನ್ಯೈಃ ವ್ಯಥಮಾನಾಶ್ಚಯಥಾಧೋಕ್ಷಜಚೇತಸಃ''॥ ಎಂಬಂತೆ ಸ್ಥಿರವಾಗಿರುವ ಪರ್ವತಗಳಿಗೂ ದೃಷ್ಟಾಂತವಾಗುವಂತೆ ಅತ್ಯಂತದುಷ್ಕಂಪತತ್ವಹಿತ ಪುರುಷಾರ್ಥಾಧ್ಯವಸಾಯಶಾಲಿಗಳಾದ, ಉಪಬೃಂಹಣಗಳಾದ ಇತಿಹಾಸ ಪುರಾಣಾದಿ ನಿರಪೇಕ್ಷ ಪೂರ್ಣಜ್ಞಾನಿಗಳಾದ ಭಾಗವತೋತ್ತಮರು ''ಸ್ವಾಧ್ಯಾಯ'' ಎಂಬ ಕಾಲವಿಭಾಗದಲ್ಲಿ ಉಪಬೃಂಹಣೀಯವಾದ ಮಂತ್ರಭಾಗದ ಜಪವನ್ನೇ ಮಾಡುವರು. ಪಾಂಚರಾತ್ರರಕ್ಷೆಯಲ್ಲೂ ಇದನ್ನೇ ''ಉಪಬೃಂಹಣನಿರಪೇಕ್ಷೈ' ಉಪಬೃಂಹಣೀಯ ವೇದಭಾಗಜಪ ಏವೋಚಿತಃ'' ಎಂದು ಹೇಳಿರುವರು. ಶ್ರೀಮನ್ನಾರಾಯಣನಿಗೆ ನಿವೇದಿಸಿ, ಪಂಚಮಹಾ ಯಜ್ಞಾದಿಗಳನ್ನು ಮಾಡಿ, ಪರಮಪಾವನವಾದ ಅನ್ನವನ್ನು ಸೇವಿಸಿ, ಆಪ್ಯಾಯಿತಚಿತ್ತರಾಗಿ, ನಿರತಿಶಯ ಪರಿಮಳ ಕಮಲವಾಸಿನಿಯಾದ ಮಹಾಲಕ್ಷ್ಮಿಯಿಂದ ಸಮಾಶ್ಲಿಷ್ಟನಾದ ಭಗವಂತನ ನೂಪುರಾದ್ಯಾಭರಣ ಶ್ರುತಿಮನೋಹರ ಮಧುರಧ್ವನಿಯ ಚರಣಗಳಲ್ಲಿ ಅತ್ಯಾಸಕ್ತರಾಗಿ, ಚಂದ್ರನಂತೆ ಅತಿಪ್ರಸನ್ನ ಶೀತಲ ಮತಿಯುತರಾಗಿ, ಅಮೃತಾಸ್ವಾದಗೈಯ್ಯುವಂತೆ ವೇದಗಳಿಗೂ ವೇದಗಳಂತಿರುವ ಶ್ರೀಮದಾಷ್ಟಕ್ಷರದ್ವಯಾದಿ ಭಗವನ್ಮಂತ್ರಗಳನ್ನು ಜಪಿಸುವರು. ಈ ರೀತಿ ''ಸ್ವಾಧ್ಯಾಯ''ವೆಂಬ ಸಮಯವನ್ನು ಸಾರ್ಥಕಪಡಿಸಿಕೊಳ್ಳುವರು ಶ್ರೀವೈಷ್ಣವೋತ್ತಮರು. ಇದೇ ಅವರ ಭಗವದಾಜ್ಞಾ ಲಬ್ಧವಾದ ನಿತ್ಯಕೈಂಕರ್ಯ.

**महीधरा इवाश्रिताः क्रियारता विसृत्वरा-**
**तिगन्धपुष्पजावृतप्रभुक्कणत्पदाश्रिता ॥**

सुशीतचन्द्रधीमन स्सुधासुपायिनी श्रुति- ।
ष्वपि त्रयीति कीर्तितोक्तिपङ्क्ति माजपन्ति हि ॥ ೭

ಮೂಲ : ತುದಿಹಳುಮರಿವರು ಶುರುದಿಯಿನಿರುದಿಯಿನ್,
ಇದಯಮಿದೆನಮುನಿಯಿರೈಯವರುರೈಹಳುಂ,
ಮದುರಮನುದವಿಯ ಮರೈಹಳುಮಡಿಯವರ್,
ವಿದಿವಹೈಪರವುವರ್ ಮಿಹವುಳಮೆಳವೇ ॥ 8

ಅರ್ಥ :- ಅಡಿಯವರ್ = (ಭಗವದ್ಗುಣರಸಿಕರಾದ) ಭಕ್ತರು. ಉಳಂ = (ತಮ್ಮ) ಮನಸ್ಸು, ಮಿಹ = ಬಹಳ, ಎಳ = ಉಲ್ಲಾಸಗೊಂಡು, ಮುಂದಿನ ಕೈಂಕರ್ಯಕ್ಕೆ ಉತ್ಸಾಹಿಗಳಾಗುವಂತೆ, ತುದಿಹಳುಂ = ಸ್ತೋತ್ರಗಳನ್ನೂ, ಅರಿವ್-ಅರು = ಅರಿಯಲು ಕಷ್ಟಸಾಧ್ಯವಾದ, ಶುರುದಿಯಿನಿರುದಿಯಿನ್ = ವೇದಾಂತಗಳ, ಇದಯಂ = ಹೃದಯವು (ಸಾರವಾದ ಗೂಢಾರ್ಥವು) ಇದು = ಈ ರೀತಿಯಾಗಿರುವುದು, ಎನ = ಎಂದು ತಿಳಿಸುವಂತೆ, ಮುನಿ-ಇರೈಯವರ್ = ಮುನೀಶ್ವರರ (ಪರಾಶರ-ಪಾರಾಶರ್ಯ-ಶುಕ-ಶೌನಕಾದಿಗಳ) ಉರೈಹಳುಂ = ವಚನಗಳನ್ನೂ, ಮದುರ = ಅತ್ಯಂತ ಭೋಗ್ಯವಾಗಿರುವ, ಮನ್-ಉದವಿಯ = ದೃಢವಾಗಿ ಉಪಕರಿಸುವ, ಮರೈಹಳುಂ = (ಶಠಾರಿ ಮೊದಲಾದವರ ಸೂಕ್ತಿಗಳು) ದಿವ್ಯಪ್ರಬಂಧಗಳನ್ನೂ, ವಿದಿ-ವಹೈ = ಶಾಸ್ತ್ರ ವಿಹಿತವಾದ ಕ್ರಮದಲ್ಲಿ, ಪರವುವರ್ = ಪರಿಶೀಲನೆಮಾಡುವರು. (ಇದೇ ''ಸ್ವಾಧ್ಯಾಯ''ವೆಂಬ ಕಾಲವಿಭಾಗದ ಕೃತ್ಯ. ಸ್ವ = ತನ್ನ, ಅಧ್ಯಾಯ = ಅಧ್ಯಯನ ಎಂದರ್ಥ.)

ತಾತ್ಪರ್ಯ :- ಕ್ರಮವಾಗಿ ಬಂದ ''ಸ್ವಾಧ್ಯಾಯ''ದ ನಂತರ ಬರುವುದು ''ಯೋಗ'' ಅದರಲ್ಲಿ ತಮ್ಮ ಚಿತ್ತವು ಅತ್ಯಂತ ಪ್ರೋತ್ಸಾಹಿತವಾಗುವಂತಿರುವ ಭಗವತ್ಸ್ತೋತ್ರಾದಿಗಳನ್ನೂ, ಅತಿಗಹನವಾದ ವೇದಾಂತ ತಾತ್ಪರ್ಯವನ್ನು ಅತಿ ಸರಳವಾಗಿ ವಿಶದಪಡಿಸುವವರೂ, ಯೋಗಮಹಿಮೆಯಿಂದ ಸಕಲ ಪರಾವರ ತತ್ತ್ವಯಥಾತ್ಮ್ಯವನ್ನು ಸಾಕ್ಷಾತ್ಕರಿಸಿದವರೂ ಆದ ಪರಾಶರ ಪಾರಾಶರ್ಯ ಶುಕ ಶೌನಕಾದಿ ಮಹರ್ಷಿಗಳ ಶ್ರೀ ಸೂಕ್ತಿಗಳನ್ನೂ, 'ಸದ್ಯಃಪರಮಾತ್ಮನಿಚಿತ್ತರಂಜಕಾಃ ವೇದೋಪ ಬೃಂಹಣಾರ್ಥ ಪ್ರವೃತ್ತ ಪರಾಂಕುಶಪರಕಾಲಾದಿ ಮುನಿ ಮಧುರತಮ ಸೂಕ್ತೀಃ ಯಥಾದೇಶ ಕಾಲಾವಸ್ಥಂಪರಿಶೀಲಯೇಯುಃ'' ಎಂದು ಹೇಳಿದಂತೆ ದ್ರಾವಿಡ ದಿವ್ಯ ಪ್ರಬಂಧ ಸೂಕ್ತಿಗಳನ್ನೂಪರಿಶೀಲನಮಾಡುವರು. ಹೀಗೆ ಭಾಗವೋತ್ತಮರು ಸ್ವಾಧ್ಯಾಯ ಸಮಯದ ಕೃತ್ಯವನ್ನು ''ವೇದಾನಧ್ಯಾಪಯೇತ್ ಶಿಷ್ಯಾನ್‌ತಾರಯೇಚ್ಚ ವಿಚಾರಯೇತ್ । ಅವೇಕ್ಷೇತಚಶಾಸ್ತ್ರಾಣಿ ಧರ್ಮಾದೀನಿ ದ್ವಿಜೋತ್ತಮಃ ॥ ವೈದಿಕಾದೀಂಶ್ಚನಿಗಮಾನ್

ವೇದಾಂಗಾನಿ ವಿಶೇಷತಃ।'' ಇತ್ಯಾದಿ ವಚನಗುಣವಾಗಿ ಅನುಷ್ಠಿಸುವರು. (ಹಿಂದಿನ ಮತ್ತು ಈ ಪಾಶುರಗಳಲ್ಲಿ ಸ್ವಾಧ್ಯಾಯ ಭಾಗವನ್ನು ವಿವರಿಸಲಾಗಿದೆ).

रमाधवाश्रया स्स्वचित्तरञ्जका स्स्तुती स्तथा ।
दुरूहवेदमौळिहार्दमेव मित्युदीरका: ॥
मुनीशसद्गिरश्च गाढसाह्यकृद्रसावहा: ।
यथाविधि ह्यधीयते शठार्यवाग्गाधिका: ॥ ೮

ಮೂಲ : ಅರಿವಿಲರ್ ತಲೈಮಿಶೈಯಯನಡಿಯೆಳುದಿಯ,
ಪೊರಿವಹೈವಿಳುವದೋರ್ ಪೊರಿನಲಮುಹವಲರ್;
ಉರುವದುಮುಡೈಯದುಮಿದುವೆನಮರುವದುಂ,
ನರುಮಲರ್ಮಗಳ್ ಪತಿನಲಮುರುನಿನೈವೇ ॥ 9

ಅರ್ಥ :- ನರು-ಮಲರ್-ಮಗಳ್-ಪತಿ = ಸುಗಂಧಿಪುಷ್ಪವಾಸಿನಿಯಾದ ಮಹಾಲಕ್ಷ್ಮಿಯ ರಮಣನ, (ವಿಷಯಕವಾದ) ನಲಂ-ಉರ = ಆನಂದರೂಪದ, ನಿನೈವು = ಸ್ಮರಣೆಯು, (ತೈಲಧಾರೆಯಂತಿರುವ ಸ್ಮೃತಿ ಸಂತತಿಯು) ಅರಿವು-ಇಲರ್ = ಜ್ಞಾನಹೀನರ (ವಿವೇಕರಹಿತರ) ತಲೈ-ಮಿಶೈ = ತಲೆಯಲ್ಲಿ, ಅಯನ್ = ಬ್ರಹ್ಮನಿಂದ, ಅಡಿ = ಹಿಂದೆಯೇ, ಎಳುದಿಯ = ಬರೆಯಲ್ಪಟ್ಟಿರುವ, ಪೊರಿ-ವಹೈ = ಅಕ್ಷರದ ಕ್ರಮವೆರಿತು, ಎಳುವದ್ = ಉಂಟಾಗುವ, ಓರ್ = ಅದ್ವಿತೀಯವಾದ, (ವಿವೇಕವಿಲ್ಲದಿರುವುದರಿಂದ ವೈಷಯಿಕ ಸುಖವೇ ಅತಿಶಯವಾದುದೆಂದು) ಪೊರಿ-ನಲಂ = ಶಬ್ದಾದಿ ವಿಷಯಗಳ ಸುಖವನ್ನು, ಉಹವ್-ಇಲರ್ = ಸಮ್ಮತಿಸದೇ ಇರುವವರು, ಉರುವದುಂ = ಈಗ ಪಡೆಯುವುದೂ, ಉಡೈಯದುಂ = ಹಿಂದೆಯೇ ಪಡೆದುದೂ, ಇದು-ಎನ = ಇದೇ ಎನ್ನುವಂತೆ, ಮರುವದುಂ = ಪರಿಣಾಮಗೊಂಡಿರುವುದೆಂದು ತಿಳಿಯುವರು.

ತಾತ್ಪರ್ಯ :- ಶಾಂಡಿಲ್ಯರು ''ಈದೃಶಃ ಪರಮಾತ್ಮಾಽಯಂ ಪ್ರತ್ಯಗಾತ್ಮಾ ತಥೇದೃಶಃ। ತತ್ಸಂಬಂಧಾನುಸಂಧಾನಂ ಇತಿ ಯೋಗಃಪ್ರಕೀರ್ತಿತಃ''॥ ಎಂದು ಸಂಕ್ಷೇಪವಾಗಿ ಯೋಗವನ್ನು ವಿಮರ್ಶಿಸಿರುವರು. ಭಗವದ್ಭಾಷ್ಯಕಾರರು'' ಯಾಮುನಾರ್ಯ ಸುಧಾಂಭೋಧಿಮವಗಾಹ್ಯಯಥಾಮತಿ । ಆದಾಯ ಭಕ್ತಿಯೋಗಾಖ್ಯಂ ರತ್ನಂ ಸಂದರ್ಶಯಾಮ್ಯಹಂ''॥ ಎಂದಾರಂಭಿಸಿ ಶ್ರೀ ವೈಕುಂಠ ಗದ್ಯದಲ್ಲಿ ವಿಲಕ್ಷಣವಾದ ಫಲಪರ್ವಾನುಸಂಧಾನಪೂರ್ವಕವಾಗಿ, ಉಪದೇಶಿಸಿರುವರು. ಅನನ್ಯ ಪ್ರಯೋಜನ ಕರ್ತವ್ಯವಾಗಿ ವಿಚಿತ್ರವಾದ ಭಗವದ್ಯೋಗವನ್ನು ವಿರಕ್ತರು ಭಗವಚ್ಚಿಂತನಾಮೃತಾಸ್ವಾದನವೇ ಹಿಂದೆ ಪಡೆದ ಮತ್ತು ಮುಂದೆ ಪಡೆಯುವ ಸಕಲ ಪುರುಷಾರ್ಥವೆನ್ನುವರು.

ಪೂರ್ವದಲ್ಲಿ ವಿವೇಕವಿಲ್ಲದಿದ್ದಾಗ ಮಾಡಿದ ಕರ್ಮಗಳಿಗನುಗುಣವಾಗಿ ಭಗವತ್ಸಂಕಲ್ಪದಿಂದ ದುರ್ವಾರವಾಗಿ ಬರುವ ಶಬ್ದಾದಿ ವಿಷಯಾಸ್ವಾದನದಲ್ಲಿ ಈಗ ವಿರಕ್ತರಾಗಿ, ಅನನ್ಯ ಪ್ರಯೋಜನರಾಗಿ, ಅಪೂರ್ವ ಲಾಭ ಮತ್ತು ಲಬ್ಧಾರ್ಥಪರಿಪಾಲನೆಂಬ ಯೋಗಕ್ಷೇಮರೂಪ ಪುರುಷಾರ್ಥವಾಗಿ ಪರಿಮಿಸುವ ಯೋಗವನ್ನು ಅನುಷ್ಠಿಸುವರು. ಶ್ರೀಮನ್ನಾರಾಯಣನ ವಿಷಯವಾದ ಚಿಂತನೆಯೇ ಆನಂದರೂಪವಾಗುವುದು. ಅದನ್ನು ಅನುಭವಿಸುವರು. ಅಭಿಗಮನಾದಿ ಪಂಚಕದಲ್ಲಿ ಯೋಗದ ವಿಷಯವಿದು.

**सुगन्धिपुष्पजातमाधवस्मृति र्मुदाकृतिः ।**
**विधि र्लिलेख यत्पुराऽधियां नृणां ललाटके ॥**
**लिपिक्रमेण लब्ध मेक मैन्द्रियं सुखं विना ।**
**विदु र्विरागिणश्च लब्धलप्स्यमानरूपिणीम् ॥** ९

**ಮೂಲ : ಪೆರುಹಿಯನಲನಿಲ್ಶೈ ಪೆರುಮ್ಮೈಯಿನ್ ಮಿಹುಮ್ಮೈಯಿಲ್**
**ಉರುಹಿಯನಿಲ್ಶೈಮನಂ ಉಯರ್‌ಮುಹಿಳೆಳುಮುಡಲ್ ।**
**ಶೊರಿಹಿಯ ವಿಳಿತಿಹಳ್ ಶುಡರ್‌ಮತಿಪುಹುಮಿರೈ ।**
**ಕರುಹಿಯವುರುತಿಹಳ್ ಕರಿಗಿರಿಯರಿಯೇ ॥** **10**

ಅರ್ಥ :- ಕರುಹಿಯ = ಶ್ಯಾಮಲವಾದ, ಉರು = ರೂಪದಿಂದ, ತಿಹಳ್ = ಪ್ರಕಾಶಿಸುವ, ಕರಿ-ಗಿರಿ-ಅರಿಯೇ = ಹಸ್ತಿಶೈಲದಲ್ಲಿ ಅರ್ಚಾಮೂರ್ತಿಯಾಗಿರುವ ವರದರಾಜ ಪರಮಾತ್ಮನೇ, ಪೆರುಹಿಯ = ಪ್ರವಹಿಸುವ, ನಲ-ನಿಲ್ಶೈ = ಆನಂದಾವಸ್ಥೆಯ, ಪೆರುಮ್ಮೈಯಿನ್ = ಅಭಿವೃದ್ಧಿಯ, ಮಿಹುಮಯಿಲ್ = ಹೆಚ್ಚಾದ ವ್ಯಾಮೋಹದಿಂದಲೂ, ಉರುಹಿಯ-ನಿಲ್ಶೈ = ದ್ರವಿಸುವ ಅವಸ್ಥೆಯುಳ್ಳ, ಮನಂ = ಮನಸ್ಸಿನಿಂದಲೂ, ಉಯರ್ = ಉನ್ನತವಾದ, ಮುಹಿಳ್ = ಮೊಗ್ಗುಗಳು, ಎಳುಂ = ಅಂಕುರಿಸುವಂತಹ, ಉಡಲ್ = ದೇಹದಿಂದಲೂ, ಶೊರುಹಿಯ = ಸುಖ ಪರವಶತೆಯಿಂದ ಅಂತರ್ಲೀಯಮಾನಗಳಾದ, ವಿಳಿ = ಕಣ್ಣುಗಡ್ಡೆಗಳಿಂದಲೂ, ತಿಹಳ್ = ಪ್ರಕಾಶಿಸುವ, ಶುಡರ್ = ಉಜ್ವಲವಾದ, ಮತಿ = (ಯೋಗರೂಪ) ಜ್ಞಾನವನ್ನೂ, ಪುಹುಂ = ಪ್ರಕಾಶಪಡಿಸುವವನಾದ, ಇರೈ = ಪ್ರಭುವು.

ತಾತ್ಪರ್ಯ :- ಯೋಗಕ್ಕೆ ವಿಷಯನಾದವನು, ವಿಲಕ್ಷಣ ವಿಗ್ರಹವಿಶಿಷ್ಟನೂ, ಶುಭಾಶ್ರಯನೂ, ಆಚಾರ್ಯರೂಪಿಯೂ ಮತ್ತು ಕರುಣಾಳುವೂ ಆ ವರದರಾಜನೇ. ಅಭಿಗಮನದಲ್ಲಿ ಹರಿನಾಮ ಸಂಕೀರ್ತನದಿಂದ ಮೊದಲುಮಾಡಿ ಯೋಗದ ಕೊನೆಯಾದ ಇಲ್ಲಿಯೂ ಹರಿನಾಮ ನಿರ್ದೇಶದಿಂದಲೇ ಮುಗಿಸಿರುವರು. ''ಹರಿರ್ಹರತಿ ಪಾಪಾನಿ

ದುಷ್ಟಚಿತ್ತೈರಪಿಸ್ಮೃತಃ । ಅನಿಚ್ಛಯಾಪಿ ಸಂಸ್ಪೃಷ್ಟೋದಹತ್ಯೇವ ಹಿ ಪಾವಕಃ ॥ ಎಂದೂ, ಯಥಾಗ್ನಿರುದ್ಧತಶಿಖಃ ಕಕ್ಷಂ ದಹತಿ ಸಾನಿಲಃ । ತಥಾ ಚಿತ್ತಸ್ಥಿತೋವಿಷ್ಣುಃ ಯೋಗಿನಾಂಸರ್ವಕಿಲ್ಬಿಷಂ ॥'' ಎಂದೂ ಹೇಳಿರುವಂತೆ ಸ್ವವಿಷಯಾತ್ಮಯೋಗಪರಿಪಂಥಿ ಸಕಲ ದುರಿತ ಹರಣ ಶೀಲನು ಅವನೇ ಹೌದು. ಭಗವದ್ಯೋಗಾನಂದ ಪ್ರವಾಹವು ಸಂತತ ಧಾರಾಕಾರವಾಗಿ ''ಶರತ್ಪವಣೇಂದು ಮಯೂಖಗುಂಭಿತ ಪಾರಾವಾರ ನ್ಯಾಯ''ದಂತೆ ಆತ್ಮನಲ್ಲಿ ಅಡಗದೆ ತತ್ಕಾಲದಲ್ಲಿ ಆಗುವ ಆನಂದ ಮೂರ್ಛೆಯಿಂದಲೂ, ಚಿತ್ತದ್ರವೀಭಾವ-ರೋಮಾಂಚ-ನೇತ್ರವಿಕಾರಗಳಿಂದ ಅತಿಶಯಾನಂದಭಾವವು ಹೊರಸೂಸುವಂತೆ ಮಾಡಿ, ನಿರುಪಮ ಸಮಾಧಿ ವಿಷಯನಾಗಿ ಬೆಳಗಿಸಿ, ಬೆಳಗುವವನೂ ಅವನೇ. ದಿವ್ಯಾತ್ಮಸ್ವರೂಪಕ್ಕಿಂತ ದಿವ್ಯಮಂಗಳ ವಿಗ್ರಹವು ಹೃದಯಂಗಮವು. ಅದರಲ್ಲೂ ಪರವ್ಯೂಹಾದಿಗಳಿಗಿಂತ ಅರ್ಚಾವತಾರ ಹೃದಯಂಗಮತರವು. ಅದರಲ್ಲೂ ''ಅಸ್ಪೃಷ್ಟಚಿಂತಾಪದಮಾಭಿರೂಪ್ಯಂ'' ಎಂದು ತಾವೇ ಅನುಭವಿಸಿರುವ ವರದರಾಜನೇ ಸಮಾಧಿಸುಖಾಸ್ವಾದ ಲಾಲಸರಾದವರಿಗೆ ಹೃದಯಂಗಮತಮವೆಂಬ ತಮ್ಮ ಹೃದಯವನ್ನು ವ್ಯಕ್ತಪಡಿಸುವರು. ಹೀಗೆ ಚಿಂತಿಸುತ್ತಾ ಪಂಚಕಾಲ ಕರ್ತವ್ಯನಿಷ್ಠರಾಗಿ, ತಮ್ಮ ಜೀವಿತಸಮಯವನ್ನು ಸರಸವಾಗಿ ಹಸನಾಗಿಸಿಕೊಂಡು, ಪರಮಾತ್ಮನ ಒಲುಮೆಗೆಪಾತ್ರರಾಗಿ, ನಿರತಿಶಯಶಾಶ್ವತ ಪರಿಪೂರ್ಣ ಬ್ರಹ್ಮಾನಂದಾನುಭವರಸವನ್ನು ಪಡೆಯುವವರಾಗಬೇಕು. ಇಂತಹವರೇ ಭಾಗವೋತ್ತಮ ಶ್ರೀ ವೈಷ್ಣವರು.ಇವರ ದಿನದಿನದ ಚರ್ಯೆಯೇ ಇದು.

स नीलरूपशोभितो हरि र्द्विपाचलाधिपः ।
प्रवाहमुद्दशाभिवृद्धमोहतो द्रवद्धृदः ।।
सरोमविक्रियाङ्गत स्समाधिसूचकाक्षिमी-
लनाश्च सूज्ज्वलन्नतिप्रकाशको हि नः प्रभुः ।। १०

श्रीमते निगमान्त महादेशिकाय नमः

श्री वैष्णवदिनचर्यां गाथादशकेऽत्रदेशिका श्चक्रुः ।
गोपालेन पुनस्तां सश्लेकार्थामकारयन् स्वमुदे ॥

||ಶ್ರೀಃ ||

||ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ||

# ತಿರುಚ್ಚಿನ್ನಮಾಲೈ

ಭಗವಂತನು ಪರಮಪದದಲ್ಲಿ ನಿತ್ಯಸೂರಿಗಳಿಂದ ವಿವಿಧವಾಗಿ ಸೇವೆಗೊಳ್ಳುವಂತೆ ಅರ್ಚಾವತಾರದಲ್ಲೂ ನಿತ್ಯಸೂರಿಗಳಂತಿರುವ ಸ್ವಸೇವಾನಿರತರಿಂದ ಉತ್ಸವಕಾಲದಲ್ಲಿ ಸಕಲ ಲೋಕಾಧಿಪತ್ಯದ ಚಿಹ್ನೆಯಂತಿರುವ ಕಹಳೆಯ ವಾದ್ಯವನ್ನು ಊದಿಸಿಕೊಳ್ಳುವನು. ಕಾಂಚಿಯಲ್ಲಿ ಹಸ್ತಿಶೈಲಶಿಖರದಲ್ಲಿ ವಿರಾಜಮಾನನಾದ ವರದರಾಜನು ಬಿಜಯಮಾಡುವಾಗ ಊದುವ ಕಹಳೆಯ ನಾದವನ್ನು ಸ್ವಾಮಿದೇಶಿಕರು ''ತಿರುಚ್ಚಿನ್ನಮಾಲೈ'' ಎಂಬ ತಮಿಳು 11 ಪದ್ಯಗಳಲ್ಲಿ ವರ್ಣಿಸಿರುವರು. ಅದು ಕೇವಲ ವಾದ್ಯನಾದವಾಗದೆ ರಹಸ್ಯತ್ರಯದ ಸಾರಭೂತವಾದ ಅರ್ಥವಿಶೇಷಗಳನ್ನು ಶ್ರುತಿಮನೋಹರವಾಗಿ ಘೋಷಿಸುವಂತಹ ಆತ್ಮೋಜ್ಜೀವನಕರವಾದ ಧ್ವನಿಯಾಗಿದೆ.

ಮೊದಲು ಆರುಪದ್ಯಗಳಲ್ಲಿ ಮೂಲ ಮಂತ್ರಾರ್ಥವು ವಿವರಿಸಲ್ಪಟ್ಟು, ಈ ಆರರಲ್ಲೂ ಮೊದಲು ಮೂರರಿಂದ ಪ್ರಣವದ ಅರ್ಥವು ವಿವರಿಸಲ್ಪಟ್ಟಿದೆ.

ಪಾಶುರ 1, ಪ್ರಣವದ ಅಕಾರದ ಅರ್ಥವಾದ ಸರ್ವಕಾರಣತ್ವದ ಪ್ರಕಾರವಿಶೇಷಗಳನ್ನೂ, ರಕ್ಷಕತ್ವದ ಗೂಢಾರ್ಥವಿಶೇಷಗಳನ್ನೂ ಸಂಗ್ರಹಿಸಲಾಗಿದೆ.

2. ಅದೇ ರಕ್ಷಕತ್ವವು ಶ್ರುತಿ ಸ್ಮೃತಿ ಸದಾಚಾರ ಪ್ರವರ್ತನಮುಖವಾಗಿ ಆಮುಷ್ಮಿಕ ಫಲಪ್ರದತ್ವರೂಪವಾಗುವುದೆಂದು ತಿಳಿಸಲಾಗಿದೆ.

3. ಲೋಪವಾಗಿರುವ ಚತುರ್ಥೀ ವಿಭಕ್ತಿಯ ಅರ್ಥ, ಉಕಾರದ ಮತ್ತು ಮಕಾರದ ಅರ್ಥ ಇವುಗಳನ್ನು ತಿಳಿಸಿ, ಪ್ರಣವಾರ್ಥವನ್ನು, ಉಪಸಂಹರಿಸಿರುವರು.

4. 'ನಮಃ' ಎಂಬುದರ ಸ್ಥೂಲಸೂಕ್ಷ್ಮಾರ್ಥ, ಅದು ಚತುರ್ಥ್ಯಂತ ನಾರಾಯಣ ಪದದೊಂದಿಗೆ ಇರುವುದರಿಂದಾಗುವ ಅರ್ಥ - ಇವುಗಳನ್ನು ವಿವರಿಸಿದೆ.

5. 'ನಾರಾಯಣ' ಎಂಬ ನಾಮ ಪ್ರಕೃತಿಯ ಅರ್ಥವನ್ನು ವಿವರಿಸಿದೆ.

6. 'ನಾರಾಯಣಾಯ' ಎಂಬುದರ ತಾತ್ಪರ್ಯವಾದ ನಿತ್ಯಶೇಷವೃತ್ತಿಯನ್ನೂ, ಅದರಿಂದ ಆಕ್ಷಿಪ್ತವಾದ ಕರ್ಮಬಂಧನಿವೃತ್ತಿದ್ವಾರಾ ಫಲಗಳನ್ನೂ ಸ್ಫುಟೀಕರಿಸಿದೆ.

7-8. ದ್ವಯಾರ್ಥವನ್ನೂ, ಶ್ರೀಗೀತೆಯ ಅವತಾರ ಪೂರ್ವಕವಾಗಿ ಚರಮಶ್ಲೋಕಾರ್ಥವನ್ನೂ ತಿಳಿಸಿದೆ.

9. ಚರಮಶ್ಲೋಕೋಪದೇಶಕನಾದ ಶ್ರೀಕೃಷ್ಣನ ನಿರತಿಶಯಮಹಿಮೆಯನ್ನು ತಿಳಿಸಲು ಆತನ ದಿವ್ಯಾದ್ಭುತವ್ಯಾಪಾರಗಳನ್ನು ತಿಳಿಸುವ ನೆಪದಿಂದ ''ಮಾಂ-ಅಹಂ'' ಎಂಬವುಗಳಲ್ಲಿ ಬೇಕಾದ ಕಲ್ಯಾಣ ಗುಣಗಳನ್ನು ವಿವರಿಸಿದೆ.

10. ಭಗವಂತನ ಆರ್ಚಾವತಾರದ ಮಹಿಮೆಯ ಗುಣಗಳನ್ನು ವಿಶದಪಡಿಸಿದೆ.

11. ಸದಾಚಾರ್ಯಸಂಪ್ರದಾಯ ಲಬ್ಧವಾದ ರಹಸ್ಯಾರ್ಥಗಳನ್ನು ಸಾವಧಾನವಾಗಿ ಕೇಳಿ, ಅವನ್ನೇ ಅಳವಡಿಸಿಕೊಂಡು, ಶ್ರೀ ವರದರಾಜನ ಪ್ರಭಾವವಿಷಯವಾದ ಈ ಪುಟ್ಟ ಪ್ರಬಂಧವು ವೈಷಯಿಕೈಕ ಸುಖವಿತೃಷ್ಣರಿಗೆ ಕರ್ಣಾಮೃತವಾಗಿರುವುದೆಂದು ಸಮಾಪ್ತಿಗೊಳಿಸಿರುವರು.

ಶಾರ್ವರಿ
ಮಾರ್ಗಶೀರ್ಷ-ಪುಷ್ಯ
1961

*ಇತಿ, ದೇಶಿಕಕೃಪಾವಲಂಬೀ*
**ವಿದ್ವಾನ್. ಹ. ಗೋಪಾಲಾಚಾರ್ಯಃ**
ಮೈಸೂರು

||ಶ್ರೀಃ ||

||ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ||

# ತಿರುಚ್ಚಿನ್ನಮಾಲೈ

ಮೂಲ : ಮನ್ ತಿರುಮಂದಿರತ್ತಿನ್ ವಾಳ್ ದುವಯತ್ತಿನ್ ಪೊರುಳುಂ
ತುನ್ನುಪುಹಳ್ ಕೀದೈತನಿಲ್ ಶೊನ್ನವೆಣ್ಣಾನ್ಗಿನ್ ಪೊರುಳುಂ
ಅನ್ನವಯಲ್ ಕಚ್ಚಿ ಅರುಳಾಳರ್ ತಿರುಚ್ಚಿನ್ನವೊಲಿ
ಇನ್ರಪಡಿಯೆನ್ರು ಉರೈತ್ತಾನ್ ಎಳಿಲ್ ವೇದಾಂತಾರಿಯನೇ || 1

ಅರ್ಥ :- ಮನ್ = ನಿತ್ಯವಾದ (ಮಂತ್ರರಾಜನೆನಿಸಿದ) ತಿರು-ಮಂದಿರತ್ತಿನ್ = ಮೂಲಮಂತ್ರದ (ಅಷ್ಟಾಕ್ಷರದ), ವಾಳ್ = ಆತ್ಮವನ್ನುಜ್ಜೀವನಗೊಳಿಸುವ, ದುವಯತ್ತಿನ್ = ದ್ವಯಮಂತ್ರದ (ಶರಣಾಗತಿ ಮಂತ್ರದ) ಪೊರುಳುಂ = ಸಾರಾರ್ಥವನ್ನೂ, (ಮತ್ತು) ತುನ್ನು = ಬಹಳ, ಪುಹಳ್ = ಖ್ಯಾತಗೊಂಡಿರುವ, ಗೀತ್ಯೈ-ತನಿಲ್ = ಭಗವದ್ಗೀತೆಯಲ್ಲಿ, ಶೊನ್ನ = ಹೇಳಿರುವ, ಎಣ್ಣಾನ್ಗಿನ್ = (8 x 4 = 32) 32 ಅಕ್ಷರಗಳುಳ್ಳ ಮಂತ್ರದ, (ಚರಮಶ್ಲೋಕದ) ಪೊರುಳುಂ = ತಾತ್ಪರ್ಯವನ್ನೂ, ಅನ್ನ = ಹಂಸಗಳಿರುವ, ವಯಲ್ = ಬಯಲಾದ (ಕ್ಷೇತ್ರವಾದ), ಕಚ್ಚಿ = ಕಂಚಿಯ, ಅರುಳಾಳರ್ = ದಯಾಳುವರದರಾಜನ, ತಿರು-ಚಿನ್ನ-ಒಲಿ = ಮಧುರವಾದ ಕಹಳೆಯ ಧ್ವನಿಯ, ಇನ್ರ-ಪಡಿ-ಎನ್ರು = ಈ ತೆರನಾದುದು ಎಂದು, ಎಳಿಲ್ = ಸದ್ಗುಣಗಳುಳ್ಳ, ವೇದಾಂತಾರಿಯನ್ = ವೇದಾಂತಾಚಾರ್ಯರು, ಉರೈತ್ತಾನ್ = ಹೇಳಿದರು.

।। श्री काहळीनादमाला ।।

श्रीमन्मन्त्राधिराजः सकलजनसमुज्जीवकस्य द्वयस्य
द्वात्रिंशद्वर्णभाजः सुमहितभगवद्गीतवाचश्च भावम् ।
हंसाग्र्यावासकाञ्चीपुरवरदमहाकाहलीनादमाला
ह्येवंरूपेत्यवादीत् शुभगुणमहितो वेदचूडार्थसूरिः ॥ १

ಮೂಲ : ಏಕಾಂತಮೂನ್ರುಂ ಎಳಿಲಾಲುರೈಶೆಯ್ದ
ಮಾಹಾಂದಂ ಶೆಯ್ದರುಳುಂ ವಳ್ಳಲ್ ತಾಂಶಾಕಾಂತ
ದೇಶಿಕನಾಂತೂಪ್ಪುಲ್ ತಿರುವೇಂಗಡೇಶಗುರು
ವಾಶಕಮೇ ಎಂಗಳುಕ್ಕುವಾಳ್ವ || 2

ಅರ್ಥ :- ಏಕಾಂತಂ = ಗುಟ್ಟಾಗಿ, (ತಿಳಿದು ಜಪಿಸುವ) ಮೂನ್ರುಂ = ಮೂರು ರಹಸ್ಯಗಳನ್ನೂ, ಎಳಿಲಾಲ್ = ಅಂದವಾಗಿ, ಉರೈಶೆಯ್ದ್ = (ಧ್ವನಿರೂಪದಲ್ಲಿದ್ದುದನ್ನು ವರ್ಣೋಪಚಾರಣಪೂರ್ವಕ ಧ್ವನಿಯುಳ್ಳದ್ದನ್ನಾಗಿ) ಹೇಳಿ, ಮಾಹಾಂದಂ = ಅತ್ಯಾನಂದವನ್ನು, ಶೆಯ್ದರುಳುಂ = ಉಂಟುಮಾಡಿ ಕರುಣಿಸುವ, ವಳ್ಳಲ್-ತಾನ್ = ಧಾರಾಳತನವುಳ್ಳ, ಶಾಕಾಂತ-ದೇಶಿಕನ್-ಆಂ = ವೇದಾಂತಾಚಾರ್ಯರೆಂದು ಪ್ರಖ್ಯಾತರಾದ, ತೂಪ್ಪುಲ್ = ತೂಪ್ಪುಲ್ ಅಗ್ರಹಾರದ, ತಿರುವೇಂಕಟೇಶಗುರು = "ಶ್ರೀವೇಂಕಟಾಚಾರ್ಯರು" (ಎಂಬ) ವಾಚಕಮೇ = ಶಬ್ದವೇ, ಎಂಗಳುಕ್ಕು = ನಮಗೆ ವಾಳ್ವ್ = ಬಾಳನ್ನು ಕೊಡತಕ್ಕದ್ದು.

एकान्तेऽभ्यस्य जपयं त्रितय मपि रहस्यस्य हृद्यं प्रयच्छन्
अत्यानन्दप्रदाता श्रुति शिखरगुरुः दानशौण्डः कवीन्द्रः ।
'तूप्पुल् श्रीवेङ्कटार्य' स्त्विति महितवचांस्येव तन्नामजुष्टा-
न्यस्माकं जीवनं स्यात् निरवधिकरुणः सन्निधि स्सर्वदाता ॥ २

ಮೂಲ : ಪರಿಚ್ಚಿನ್ನಮಾನವಿರುನಾಲೆಳುತ್ತಿನ್‌ಪಲ್‌ವಣ್ಮೈಯೆಲಾಂ
ವಿರಿಚ್ಚುನಲಂಪೆರವೋದವಲ್ಲೋರ್ಕ್ಕಿಂದಮೇದಿನಿಕ್ಕೇ
ಮರಿಚ್ಚಿನ್ನಮೀಳಪ್ಪಿರವಾಮಲ್ ವಾಳ್ವಿಕ್ಕುಂಮಾಲ್‌ವರದರ್
ತಿರುಚ್ಚಿನ್ನವೋಶೈಯಿನಿಮೈಯುಂಡೋ ? ಮಟ್ರತ್ತೇವರುಕ್ಕೆ ॥ 3

ಅರ್ಥ :- ಪರಿಚ್ಚಿನ್ನಮಾನ = (ಪದವಿಭಾಗ ಚತುರತೆಯಿಂದ) ಬೇರೆಬೇರೆಯಾದ, ಇರು-ನಾಲ್-ಎಳುತ್ತಿಲ್ = ಅಷ್ಟಾಕ್ಷರದ, ಪಲ್ = ಹಲವಾರು ವಿಧವಾಗಿ, ವಣ್ಮೈಯೆಲಾಂ = ಸಮರ್ಥನೆಮಾಡುವುದೆಲ್ಲವನ್ನೂ, ವಿರಿಚ್ಚು = ಹರಡಿ (ವಿಶದವಾಗಿ) ನಲಂ-ಪೆರ = ಆನಂದವಾಗುವ ರೀತಿಯಲ್ಲಿ, ಓದವಲ್ಲೋರ್ಕ್ = ಓದಿ ತಿಳಿಸುವವರಿಗೆ, ಇಂದಮೇದಿನಿಕ್ಕೇ = ಈ ಭೂಮಂಡಲದಲ್ಲೇ, ಮರಿಚ್ಚಿನ್ನ ಮೀಳಪಿರವಾಮಲ್ = ಮತ್ತೆ ಮತ್ತೆ ಜನಿಸಿದಂತೆ, ವಾಳ್‌ವಿಕ್ಕುಂ = ಸಂರಕ್ಷಿಸುವ, ಮಾಲ್ = ಸರ್ವೇಶ್ವರನಾದ, ವರದರ್ = ವರದರಾಜನ, ತಿರುಚ್ಚಿನ್ನ = ಚಿನ್ನಂಗಾಳೆಯ, ಓಶೈ = ಧ್ವನಿಯ, ಇನಿಮೈ = ಇಂಪು, ಮಟ್ರ = ಇತರ (ಯಾವ) ದೇವರ್ಕ್ = ದೇವರಿಗೆ, ಉಂಡೋ = ಉಂಟೋ ? (ಹೇಳು, ಯಾರಿಗೂ ಇಲ್ಲ)

पौष्कल्यं विविधं वदन्ति च परिच्छिन्नाष्टवर्णाकृतेः
मन्त्रस्येह सुविस्तरेण च मुदं तन्वन्ति तेषां सतां ।
जन्मावृत्ति मपोह्य पातु रतुलो यः काहलीनिस्वनः
देवेस्येभगिरीशितुः क्वनु भवेत् अन्यस्यवैतादृशः ॥ ३

ಮೂಲ : ಈರುಲಹೈಪ್ಪಡೈಕ್ಕವೆಣ್ಣಿಯಿರುಂದಾರ್‌ವಂದಾರ್
ಎಳಿನ್ಮಲರೋನ್‌ತನ್ನೈಯನ್ರೇಯೀನ್ರಾರ್‌ವಂದಾರ್
ಮಾರುತಮಣ್ಣೀರಾಹುಂಮಾಯೋರ್ ವಂದಾರ್
ವಾನೋಡೆರಿತಾಮಾಹುಮ್ಮರೈಯೋರ್‌ವಂದಾರ್
ಶೂರಿಯರ್ ತಮ್ಮುಡನ್‌ತುಲಂಗುತೂಯೋರ್ ವಂದಾರ್
ಶುರರ್‌ಹಳುಕ್ಕನ್ರಮುದರುಳ್ ಶುಂದರನಾರ್ ವಂದಾರ್
ವಾರಿದಿಶೂಳ್‌ವೈಯಹಂವಾಳ್‌ವಿತ್ತಾರ್‌ವಂದಾರ್
ವಣ್ಮೈಯುಡನ್‌ವರಂತರುವಾರ್ ವಂದಾರ್‌ತಾಮೇ ॥ 1

ಅರ್ಥ :- ಈರ್-ಉಲಹೈ = (ಚೇತನಾಚೇತನ ರೂಪವಾದ) ಲೋಕಗಳೆರಡನ್ನು, ಪಡೈಕ್ಕ = ಸೃಷ್ಟಿಮಾಡಲು, ಎಣ್ಣಿ-ಇರುಂದಾರ್ = ಸಂಕಲ್ಪಿಸಿದ್ದ (ಪರಮಾತ್ಮನು) ವಂದಾರ್ - ಬಿಜಯಮಾಡಿದನು, ಎಳಿಲ್ = ಸುಂದರವಾದ, ಮಲರೋ‌ನ್-ತನ್ನೈ = ತಾವರೆಯಲ್ಲಿ ಅವತರಿಸಿದ ಬ್ರಹ್ಮನನ್ನು, ಅನ್ರೆ = ಅಂದೇ, (ಆದಿಯಲ್ಲೇ) ಈನ್ರಾರ್ = ಸೃಷ್ಟಿಮಾಡಿದ ಸರ್ವೇಶ್ವರನು, ವಂದಾರ್ = ದಯಮಾಡಿದನು. ಮಾರುತಂ = ಗಾಳಿ, ಮಣ್ = ಮಣ್ಣು ನೀರ್ = ನೀರು, (ಇವು) ಆಹುಂ = ಆಗುವ, ಮಾಯೋರ್ = ಆಶ್ಚರ್ಯಶಕ್ತಿಯುಳ್ಳ ಪುರುಷೋತ್ತಮನು, ವಂದಾರ್ = ದಯಮಾಡಿದನು, ವಾನ್-ಓಡು = ಆಕಾಶದೊಡನೆ, ಎರಿ-ತಾನ್ ಆಹುಂ = ಅಗ್ನಿಯಾಗುವ, ಮರೈಯೋರ್ = ವೇದಗಳಿಂದ ತಿಳಿಸಿಕೊಳ್ಳುವ ಪರಮಾತ್ಮನು, ವಂದಾರ್ = ಬಿಜಯಮಾಡಿದು.

ಶೂರಿಯರ್ ತಮ್ಮುಡನ್ = ನಿತ್ಯಸೂರಿಗಳ ಜೊತೆಯಲ್ಲಿ, ತುಲಂಗ್ = ಬೆಳಗುವ, ತೂಯೋರ್ = ಪರಿಶುದ್ಧವಾದ ಪರಬ್ರಹ್ಮನು, ವಂದಾರ್ = ಬಂದನು. ಶುರರ್ ಹಳುಕ್ಕ್ = ದೇವತೆಗಳಿಗೆ, ಅನ್ರ್ = ಅಂದು, ಅಮುದ್ = ಅಮೃತವನ್ನು, ಅರುಳ್ = ಕರುಣಿಸಿದ, ಶುಂದನಾರ್ = ದಿವ್ಯಮಂಗಳ ವಿಗ್ರಹನು, ವಂದಾರ್ = ಬಂದನು, ವಾರಿದಿ = ಸಮುದ್ರದಿಂದ, ಶೂಳ್ = ಸುತ್ತುವರೆದ, ವೈಯಹಂ = ಈ ಭೂಮಿಯನ್ನು, ವಾಳ್-ವಿತ್ತಾರ್ = ಬಾಳುಗೊಳಿಸಿದ ಸರ್ವರಕ್ಷಕನು, ವಂದಾರ್ = ಬಂದನು. ವಣ್ಮೈ ಉಡನ್ = ದಯೆಯಿಂದ, ವರಂ = ಬೇಕಾದ್ದನ್ನು, ತರುವಾರ್ = ಕೊಡುವ-ಪರಮದಾನಿಶರಣ್ಯನು, ತಾಮೇ ವಂದಾರ್ = ತಾನೇ ಬಂದನು.

आयात्प्रेप्सुर्विभूती, सुरुचिरसुमजं योऽजं आयात्ससर्ज ।
वायूर्व्यब्रूप आयात्, द्युयुतदहनवान् वेदवेद्य स्स आयात् ।

दीप्तो नित्यै स्स आयात् शुचि: अमरसुधादश्च रम्यो य आयात्
आयादब्धावृतोर्व्या अवनकृद्गुरुदयोऽभीष्टदोय श्च आयात् ॥ ४

ಮೂಲ : ಅರುಮರ್ೈಯ್ೈಯೂಳಿದನಿಲ್ ಕಾತ್ತಾರ್‌ವಂದಾರ್
ಅದುತನ್ನೈಯನ್ರಯನಕ್ಕಳಿತ್ತಾರ್ ವಂದಾರ್
ದರುಮವಳಿಯಳಿಯಾಮಲ್ ಕಾಪ್ಪಾರ್‌ವಂದಾರ್
ತಾಮರ್ೈಯಾಳುಡನಿಲಂಗುಂ ತಾದೈವಂದಾರ್
ತಿರುವುರ್ೈಯಾಯ್‌ತಾಂಪೊರುಳಾಯ್ ನಿರ್ಪ್ಪಾರ್‌ವಂದಾರ್
ತಿರುವರುಳಾಲ್‌ಶೆಳುಂಕಲ್ೈಹಳ್ ತಂದಾರ್‌ವಂದಾರ್
ಮರುವಲರ್ಕ್ಕು ಮಯಕ್ಕುರ್ೈಕ್ಕುಂಮಾಯೋರ್‌ವಂದಾರ್
ವಾನೇರವಳಿತಂದಾರ್ ವಂದಾರ್‌ತಾಮೇ ॥ 2

ಅರ್ಥ :- ಅರು = ಅತಿಮಹತ್ತಾದ, ಮರ್ೈಯ್ೈ = ವೇದಗಳನ್ನು, ಊಳಿ ದನಿಲ್ = ಪ್ರಳಯಕಾಲದಲ್ಲಿ, ಕಾತ್ತಾರ್ = ಸಂರಕ್ಷಿಸಿದವನು, ವಂದಾರ್ = ಬಂದನು, ಅದ್-ತನ್ನೈ = ಆ ವೇದಗಳನ್ನು, ಅನ್ರ್ = ಆಗ, ಅಯನುಕ್ಕ್ = ಅಜನಿಗೆ, ಅಳಿತ್ತಾರ್ = ಉಪದೇಶಿಸಿದವನು, ವಂದಾರ್ = ಬಂದನು. ದರುಮ-ವಳಿ = ಧರ್ಮಮಾರ್ಗವು, ಅಳಿಯಾಮಲ್ = ನಾಶವಾಗದಂತೆ, ಕಾಪ್ಪಾರ್ = ಕಾಪಾಡುವವನು, ವಂದಾರ್ = ಬಿಜಯಂಗೈದನು, ತಾಮರ್ೈ-ಆಳ್ = ತಾವರೆಯಲ್ಲಿವಾಸಿಸುವ ಮಹಾಲಕ್ಷ್ಮಿಯ, ಉಡನ್ = ಜೊತೆಯಲ್ಲಿ, ಇಲಂಗುಂ = ಬೆಳಗುವ, ತಾದೈ =ತಂದೆಯಾದ ಪರಮ ಪುರುಷನು, ವಂದಾರ್ = ದಯಮಾಡಿದನು, ತಿರು = ಮಹಾಲಕ್ಷ್ಮಿಯು, ಉರ್ೈಯಾಯ್ = (ವಾಚಕ) ಮಾತಾಗಿಯೂ, ತಾಂ = ತಾನು, ಪೊರುಳಾಯ್ = (ಅದರ ವಾಚ್ಯ) ಅದರರ್ಥವಾಗಿಯೂ, ನಿರ್ಪ್ಪಾರ್ = ನಿಲ್ಲುವನು, ವಂದಾರ್ = ಬಂದನು, ತಿರು-ಅರುಳಾಲ್ = ಶ್ರೀದೇವಿಯ ಕರುಣೆಯಿಂದ, ಶೆಳುಂ = ತುಂಬಿ ಬೆಳೆಯುವ, ಕಲ್ೈಹಳ್ = ಶಾಸ್ತ್ರಗಳನ್ನು, ತಂದಾರ್ = ತಂದಿತ್ತವರು, ವಂದಾರ್ = ಬಂದನು. ಮರುವಲರ್ = ಮರುಳುತನದಿಂದ ತುಂಬಿ ಒಲಿಸಿಕೊಳ್ಳದವರಿಗೆ, ಮಯಕ್ಕುರ್ೈಕ್ಕುಂಮಾಯೋರ್ = ಮೋಹಗೊಳ್ಳುವಂತೆ ಅದ್ಭುತವಾಗಿ ಹೇಳುವ ಮಾಯಾವಿಯು, ವಂದಾರ್ = ಬಂದನು, ವಾನ್ = ಪರಮಪದಕ್ಕೆ ಏರ = ಹೋಗಲು, ವಳಿ = ದಾರಿಯನ್ನು, ತಂದಾರ್ = ತಂದು ಕರುಣಿಸಿದವನು, ತಾಮೇ = ತಾನೇ, ವಂದಾರ್ = ದಯಮಾಡಿಸಿದನು.

प्रळयसमय आयात् गोप्तवान् यो हि वेदान्
निगमतति मजायोपादिशत् य स्तदायात् ।

श्रुतिविहितसुधर्माध्वाविताऽऽयात् अबाधम्
कमलवसतिलक्ष्म्यादीश आयात् पिता नः ॥

विदध इह गिरं मां स्वं तदर्थं य आयात्
परमकरुणयादात् ऋद्धशास्त्राणि चायात्
प्रपदनरहितानां मोहको माय्युपायात्
परमपदसमारोहाध्वदर्शी स आयात् ॥ २

ಮೂಲ : ಅನ್ನೈತ್ತುಲಹಂ ಕಾಕ್ಕುಮರುಳಾಳರ್ ವಂದಾರ್,
ಅನ್ನೈತ್ತುಕ್ಕುಮದಿ ಪತಿಯಾಯ್ ನಿರ್ಪಾರ್ ವಂದಾರ್,
ತಿನ್ನೈತ್ತನ್ನೈಯುಂ ತಿರುಮಹಳೈ ವಿಡಾದಾರ್ ವಂದಾರ್,
ದೇಶೊತ್ತಾರ್ ಮಿಕ್ಕಾರು ಮಿಲಾದಾರ್ ವಂದಾರ್
ನಿನ್ನೈಕ್ಕ ನಮಕ್ಕಿನ್ರಿವುತಂದಾರ್ ವಂದಾರ್,
ನಿಲೈನಿನ್ರವುಯಿರ್‌ತೋನ್ರ ನಿನ್ನೈಂದಾರ್ ವಂದಾರ್,
ಎನಕ್ಕಿವರ್ ನಾನ್ ಇವರ್ಕ್ಕೆನ್ನ ವಿನಿಯಾರ್ ವಂದಾರ್
ಎಳುತ್ತೂನ್ರಿಲ್ ತಿಹಳನಿನ್ರಾರ್ ವಂದಾರ್ ತಾಮೇ ॥ 3

ಅರ್ಥ :- ಅನ್ನೈತ್ತ್-ಉಲಹಂ = ಎಲ್ಲ ಲೋಕಗಳನ್ನೂ, ಕಾಕ್ಕುಂ = ಕಾಯುವ, ಅರುಳ್-ಆಳರ್ = ಕರುಣಾಳುವಾದ ಭಗವಂತನು, ವಂದಾರ್ = ಬಂದನು, ಅನ್ನೈತ್ತುಕ್ಕುಂ = ಎಲ್ಲಕ್ಕೂ, ಅಧಿಪತಿಯಾಯ್ = ಅಧಿಪತಿಯಾಗಿ, ನಿರ್ಪಾರ್ = ನಿಲ್ಲುವವನು, ವಂದಾರ್ = ದಯಮಾಡಿದನು, ತಿನ್ನೈತ್ತನ್ನೈಯುಂ = ಅತ್ಯಲ್ಪಕಾಲದಷ್ಟೂ, ತಿರು-ಮಹಳೈ = ಮಹಾಲಕ್ಷ್ಮಿಯನ್ನು, ವಿಡಾದಾರ್ = ಬಿಟ್ಟಿರದ ಪ್ರಭುವು, ವಂದಾರ್ = ಬಂದನು, ದೇಶೊತ್ತಾರ್ = ತೇಜಸ್ಸುಳ್ಳ, ಮಿಕ್ಕಾರುಂ-ಇಲಾದಾರ್ = ಮತ್ತಾರೂ (ತನಗೆ ಸರಿಸಾಟಿಯಾಗುವಂತಹವರು) ಇಲ್ಲದಿರುವ ಆ ಅದ್ವಿತೀಯ ಪುರುಷೋತ್ತಮನು, ವಂದಾರ್ = ಬಂದನು, ನಿನ್ನೈಕ್ಕ = ನೆನೆದೊಡನೆ, ನಮಕ್ಕ್ = ನಮಗೆ, ಇನ್ರ್ = ಇಂತಹ, ಅರಿವು = ಜ್ಞಾನವನ್ನು, ತಂದಾರ್ = ಕೊಟ್ಟವನಾದ ಆ ಸರ್ವಜ್ಞನು, ವಂದಾರ್ = ಬಿಜಯಮಾಡಿದನು, ನಿಲೈನಿನ್ರ = ನಿತ್ಯವಾದ, ಉಯಿರ್ = ಆತ್ಮಗಳು, ತೋನ್ರ = ಬೆಳಗಬೇಕೆಂದು, ನಿನ್ನೈಂದಾರ್ = ಸಂಕಲ್ಪಿಸಿದವನು, (ನೆನೆದವನು) ವಂದಾರ್ = ಬಂದನು; ಎನಕ್ಕ್ = ನನಗೆ, ಇವರ್ = ಈ ಪುರುಷೋತ್ತಮನು, ಇವರ್ಕ್ಕ = ಇವರಿಗೆ, ನಾನ್ = ನಾನು, (ದಾಸ) ಎನ್ನ = ಎಂಬಂತೆ, ಇನಿಯಾರ್ = ಅತಿ ಪ್ರಿಯರಾದವನು, ವಂದಾರ್ =

ದಯಮಾಡಿದನು, ಎಳುತ್ತ್ = ಅಕ್ಷರವಾದ, ಒನ್ರಿಲ್ = ಒಂದರಲ್ಲಿ(ಪ್ರಣವದಲ್ಲಿ) ತಿಹಳ್ = ಬೆಳಗಿ, ನಿನ್ರಾರ್ = ನಿಂತ ಪರಂಜ್ಯೋತಿಯು, ತಾಮೇ = ತಾನಾಗಿಯೇ, ವಂದಾರ್ = ಬಂದನು.

अखिलभुवनपाल: पूर्णकारुण्य आयात्
अधिपति रिह भूत्वा योऽखिलानां स आयात् ।
क्षणमपि न वियुक्त: पद्मया य स्स आयात्
अनितरसदृशो य स्तेजसा देव आयात् ॥ १

अदिशदमलवितिं य स्स्मृतो मे स आयात्
अमनुत हृदि जीवास्स्यु स्स्थिरा इत्युपायात्
अयमिव मम चास्याहं प्रियो य स्स आयात्
प्रणव इम मुदीर्याऽभ्राजतायात् स्वयं स: ॥ २

ಮೂಲ : ನಾಂವಣಂಗತ್ತಾಮಿಣಂಗಾನಿರ್ಪ್ಪಾರ್ ವಂದಾರ್,
ನಮ್ಮೈಯಡಕ್ಕಲಂ ಕೊಳ್ಳುಂನಾತರ್ ವಂದಾರ್,
ನಾಮೆಮಕ್ಕಾಂ ವಳಕ್ಕೆಲ್ಲಾ ಮರುಪ್ಪಾರ್ ವಂದಾರ್,
ನಮಕ್ಕಿದುವೆನ್ರುರೈಯಾಮಲ್‌ವೈತ್ತಾರ್ ವಂದಾರ್,
ಶೇಮಮೆಣ್ಣಿಯೆಮ್ಮೈಯನ್ಬರ್ಕ್ಕಡೈತ್ತಾರ್ ವಂದಾರ್,
ಶೆಳುಂತಹವಾಲ್ ತಿಣ್‌ಶರಣಾಮೀಶರ್ ವಂದಾರ್,
ತಾಮನೈತ್ತುಂ ತೀ ವಿನೈಯೈತ್ತವಿರ್ಪ್ಪಾರ್ ವಂದಾರ್,
ತಮಕ್ಕೇಯಾಯೆಮ್ಮೈಕ್ಕೊಳ್ವಾರ್ ವಂದಾರ್ ತಾಮೇ ॥ 4

ಅರ್ಥ :- ನಾಂ = ನಾವು, ವಣಂಗ = ನಮಿಸಿದರೆ (ಶರಣುಹೋದರೆ) (ಅದನ್ನು) ತಾಂ = ತಾನು, ಇಣಂಗಾನಿರ್ಪ್ಪಾರ್ = ಅಂಗೀಕರಿಸುವಂತಹ ಉದಾರ ದಯಾವಂತನು, ವಂದಾರ್ = ಬಂದನು, ನಮ್ಮೈ = ನಮ್ಮನ್ನು, ಅಡೈಕ್ಕಲಂ = ರಕ್ಷಣೀಯ ವಸ್ತುವನ್ನಾಗಿ, ಕೊಳ್ಳುಂ = ಕರೆದುಕೊಳ್ಳುವ, ನಾತರ್ = ಪ್ರಭುವು, ವಂದಾರ್ = ಬಂದನು, ನಾಂ = ನಾವು, ಎಮಕ್ಕ್-ಆಂ = ನಮಗಾಗಿಯೇ, (ಮತ್ತೊಬ್ಬರಿಗಾಗಿ ಅಲ್ಲ ಎನ್ನುವ) ವಳಕ್ಕೆಲ್ಲಾಂ = ನಡವಳಿಕೆಯೆಲ್ಲವನ್ನೂ, ಮರುತ್ತಾರ್ = ತೊಲಗಿಸಿದವರು, ವಂದಾರ್ = ಬಂದನು, ನಮಕ್ಕ್ = ನಮಗೆ, ಇದ್ = ಇದು, ಎನ್ರ್ = ಎಂದು, ಉರೈಯಾಮಲ್ = (ನಾವು) ಹೇಳಿದಂತೆ, ವೈತ್ತಾರ್ = (ನಮ್ಮನ್ನು ಬೋಧಿಸಿ) ಇಟ್ಟವನು, ವಂದಾರ್ = ಬಂದನು, ಶೇಮಂ

= (ನಮಗೆ) ಕ್ಷೇಮಕರವಾದುದು, (ಇದು ಎಂದು) ಎಣ್ಣಿ = ತಿಳಿದು, ಎಮ್ಮೈ = ನಮ್ಮನ್ನು, ಅನ್ಬರ್ಕ್ಕ = ಭಾಗವತರಿಗೆ, ಅಡ್ಮೈತ್ತಾರ್ = ದಾಸರನ್ನಾಗಿ ಮಾಡಿದವನು, ವಂದಾರ್ = ಬಂದನು, ಶೆಳುಂ = ಅಮಿತವಾದ, ತಹವಾಲ್ = ದಯೆಯಿಂದ, (ನಮಗೆ) ತಿಣ್ = ಬಲವಾದ, ಶರಣ್-ಆಂ = ರಕ್ಷಣೆ ಕೊಡುವ, ಈಶರ್ = ದೇವನು, ವಂದಾರ್ = ಬಂದನು, ತಾಂ = ತಾವಾಗಿಯೇ, (ನಮ್ಮ) ಅನ್ಯೆತ್ತುಂ = ಎಲ್ಲವಿಧವಾದ, ತೀ-ವಿನ್ಯೆಯ್ಯೆ = ಕಡುಪಾಪಗಳನ್ನೂ, ತವಿರ್ಪ್ಪಾರ್ = ಹೋಗಲಾಡಿಸುವ ಪರಮಾತ್ಮನು, ವಂದಾರ್ = ಬಂದನು, ತಮಕ್ಕೇ-ಆಯ್ = ತಮಗಾಗಿಯೇ, ಎಮ್ಮೈ = ನಮ್ಮೆಲ್ಲರನ್ನೂ, ಕೊಳ್ವಾರ್ = ಒಲಿದು ಕರೆದುಕೊಳ್ಳುವ ದೇವನು, ತಾಮೇ = ತಾನೇ. ವಂದಾರ್ = ಬಂದನು.

अस्मासु प्रणमत्सु य स्त्वतिमुदा तत्स्वीकरोत्याययौ
अस्मान् रक्ष्यतयाददान उभयाधीश स्समायात्प्रभुः ।
दुर्वृत्ताद्वय मस्मदर्थमिति न स्त्राता समायात्प्रभुः
न ब्रूमश्च न एव चेदमिति यश्चक्रे यथायात्प्रभुः ॥

क्षेमं संलक्ष्य नो य स्त्वकुरुत भगवद्भक्तभक्तान् स आयात्
कारुण्योत्कर्षतो य स्त्वितिदृढशरणो न स्स ईश स्समायात् ।
दुष्कर्माणि स्वयं यो हरति करुणया देवराज स्स आयात्
स्वस्मा एवाददान स्स्वयमिह परिचर्यार्थ मस्मान् स आयात् ॥ ४

ಮೂಲ : ಉಲಹೆಲ್ಲಾಮುಳ್ಳೇವೈತ್ತುಮಿಳ್‌ನ್ದಾರ್ ವಂದಾರ್,
ಉಲಹುಡುಂಬಾಯ್‌ತಾಂ ಉಯಿರಾಯ್ ನಿನ್ರಾರ್ ವಂದಾರ್,
ಅಲೈಕಡಲಾಯ್ ಆನಂದಂ ಅಡೈಂದಾರ್ ವಂದಾರ್,
ಅಳವಿಲ್ಲಾವರುಳಾಳಿಪ್ಪೆರುಮಾಳ್ ವಂದಾರ್,
ತಿಲಕಮೆನುಂ ತಿರುಮೇನಿಚ್ಚೆಲ್ವರ್ ವಂದಾರ್,
ಶೆಳುಂಗುಣಂಗಳ್ ಇರುಮೂನ್ರು ಮುಡೈಯಾರ್ ವಂದಾರ್,
ಇಲಹುಶುಡರ್‌ಮುಳುನಲಮಾಮಿನಿಯಾರ್ ವಂದಾರ್,
ಎಲ್ಲಾರ್ಕ್ಕುಂಗತಿಯಾನಾರ್ ವಂದಾರ್ ತಾಮೇ ॥ 5

ಅರ್ಥ :- ಉಲಹೆಲ್ಲಾಂ = ಲೋಕಗಳೆಲ್ಲವನ್ನೂ, ಉಳ್ಳೇ = ತನ್ನೊಳಗೇ, ವೈತ್ತ್ = ಇಟ್ಟುಕೊಂಡು (ಸೃಷ್ಟಿಸಿದಾಗ), ಉಮಿಳ್‌ನ್ದಾರ್ = ಹೊರಬರಸಿದ ಮಹಾಪುರುಷನು, ವಂದಾರ್ = ಬಿಜಯಮಾಡಿದನು, ಉಲಹ್ = ಲೋಕವು, ಉಡಂಬಾಯ್ = ಒಡಲಾಗಿ,

ತಾಂ = ತಾನು, (ಅದರ) ಉಯಿರಾಯ್ = ಉಸಿರಾಗಿ, ನಿನ್ರಾರ್ = ಇರುವ ಸರ್ವಾಧರನು, ವಂದಾರ್ = ಬಿಜಯಮಾಡಿದನು, ಅಲೈ = ಅಲೆಗಳಿಂದ ಕೂಡಿದ, ಕಡಲಾಯ್ = ಕಡಲಿನಲ್ಲಿರುತ್ತಾ, ಆನಂದಂ = ಆನಂದವನ್ನು, ಅಡ್ಯೆಂದಾರ್ = ಪಡೆದ ಆಶ್ಚರ್ಯಚರ್ಯನು, ವಂದಾರ್ = ಬಂದನು, ಅಳವ್-ಇಲ್ಲಾ = ಅಳೆಯಲಾಗದಷ್ಟು ಅರುಳ್ = ದಯೆಯುಳ್ಳ, ಆಳಿ = ಸುದರ್ಶನವೆಂಬ ಚಕ್ರದಿಂದ ಕಂಗೊಳಿಸುವ, ಪೆರುಮಾಳ್ = ಪರಮಾತ್ಮನು, ವಂದಾರ್ = ಬಂದನು, ತಿಲಕಂ-ಎನುಂ = ತಿಲಕದಂತೆ ಬೆಳಗುವ, ತಿರು = ಲಕ್ಷ್ಮಿಯನ್ನು ವಕ್ಷಸ್ಸಿನಲ್ಲಿ ಧರಿಸಿದ, ಮೇನಿ = ದಿವ್ಯ ದೇಹವುಳ್ಳ, ಚೆಲ್ವರ್ = ಚೆಲುವಿನ ಮೂರ್ತಿಯು, ವಂದಾರ್ = ಬಂದನು, ಶೆಳುಂ = ತೋರಿದಷ್ಟೂ ಹೆಚ್ಚುವ, ಗುಣಂಗಳ್ = ಕಲ್ಯಾಣಗುಣಗಳು, ಇರುಮೂನ್ರುಂ = (2 x 3) ಆರನ್ನೂ, ಉಡ್ಯೆಯಾರ್ = ಉಳ್ಳ ಪರಿಪೂರ್ಣನು, ವಂದಾರ್ = ಬಂದನು, ಇಲಹ್ = ಜ್ವಲಿಸುವ, ಶುಡರ್ = ಜ್ಯೋತಿಯೂ, (ಸೊಡರೂ) ಮುಳು = ಪರಿಪೂರ್ಣವಾದ, ನಲಂ-ಆಂ = ಆನಂದರೂಪನಾದ, ಇನಿಯಾರ್ = ಪ್ರಿಯನಾದ ಲೋಕೇಶ್ವರನು, ವಂದಾರ್ = ಬಿಜಯಮಾಡಿದನು, ಎಲ್ಲಾರ್ಕ್ಕುಂ = ಎಲ್ಲರಿಗೂ, ಗತಿ-ಆನಾರ್ = (ಪರಮಪ್ರಾಪ್ಯ) ಹೋಗಿ ಸೇರುವ ಸ್ಥಳವುಳ್ಳ ಆ ಸರ್ವಶರಣ್ಯನು, ತಾಮೇ = ತಾನಾಗಿಯೇ, ವಂದಾರ್ = ವಿಜಯಂಗೈದನು.

यस्यान्तर्भुवनानि योऽथ बहि रुद्धान्त स्स आयात्प्रभुः ।
यत्कायो निखिलं जगत्स्वयमभूत्प्राण स्स आयात्प्रभुः ॥
सोर्म्यब्धौ शयितोऽन्वभूच्च जगदानन्दं स आयात् हरिः
यो वात्यन्तकृपालुचक्रमधरत्पाणौ स आयाद्विभुः ॥

यो रम्य स्तिलकश्रिया शुभतनुश्चायात् स दिव्यःपुमान्
यः पूर्णः सुगुणै स्त्रिभि र्द्विगुणितैः आयात् दयालुर्हरिः ।
ज्योति र्यस्य परं त्वकाशि परिपूर्णानन्द आयात्प्रभुः
सर्वेषां परमा गतिः स भगवान् आयात्स्वयं देवराट् ।। ౯

ಮೂಲ : ಅರುಳಾಲೇ ಎಲಂಗಿರಂಡುಂ ಆಳಿಪ್ಪಾರ್‌ವಂದಾರ್
ಅಂಶಿರ್ಯೆಯ್ಕೆಳಿತ್ತರುಳುಂ ಅನ್ಬರ್‌ವಂದಾರ್
ಮರುಳ್‌ವಾರಾವಹ್ಯೆ ನಮ್ಮೈಕಾಪ್ಪಾರ್ ವಂದಾರ್
ವಾನೇರವಳಿನಡತ್ತಿವ್ವೆಪ್ಪಾರ್‌ವಂದಾರ್
ತೆರುಳಾರುಂ ತೆಳಿವಿಶುಂಬುತರುವಾರ್‌ವಂದಾರ್

ತಿಣ್‌ಕಳಲ್ ಕೀಳ್‌ವಾಳ ನಮಕ್ಕರುಳ್ವಾರ್ ವಂದಾರ್
ಪೆರುವಾನಿಲಡಿಮ್ಮೈನಮ್ಮೈಕ್ಕೊಳ್ವಾರ್‌ವಂದಾರ್
ಪಿರಿಯಾಮಲ್‌ಕಾತ್ತಳಿಪ್ಪಾರ್‌ವಂದಾರ್‌ತಾಮೇ ॥ 6

ಅರ್ಥ :- ಅರುಳಾಲೇ = ದಯೆಯಿಂದಲೇ, ವಿಲಂಗ್-ಇರಂಡುಂ = (ಪುಣ್ಯಪಾಪಗಳೆಂಬ) ಎರಡು ಸಂಕೋಲೆಗಳನ್ನೂ, ಅಳಿಪ್ಪಾರ್ = ನಿರ್ಮೂಲಗೊಳಿಸುವ ಅನಾಥ ರಕ್ಷಕನು, ವಂದಾರ್ = ಬಿಜಯಮಾಡಿದನು, ಅಂ = ಅಂದವೆನಿಸುವ, ಶಿರೈಯೈ = ಸೆರೆಯನ್ನು (ಸಂಸಾರಬಂಧನವನ್ನು) ಕಳಿತ್ತ್ = ಹೋಗಲಾಡಿಸಿ, ಅರುಳುಂ = ಕರುಣಿಸುವ, ಅನ್ಬರ್ = (ಭಕ್ತ) ಪ್ರಿಯನು, ವಂದಾರ್ = ಬಂದನು, ಮರುಳ್ = ಅಜ್ಞಾನವು, ವಾರಾ-ವಣ್ಣ = (ನಮಗೆ) ಬಾರದಂತೆ, ನಮ್ಮೈ = ನಮ್ಮನ್ನು, ಕಾಪ್ಪಾರ್ - ಕಾಪಾಡುವವನು, ವಂದಾರ್ = ಬಂದನು, ವಾನ್-ಏರ = ಪರಮಪದಕ್ಕೆ ಏರಲು, ವಳಿ = ಮಾರ್ಗವನ್ನು, ನಡತ್ತಿ = ನಡೆಸಿ, ವೈಪ್ಪಾರ್ = ಕೊಟ್ಟು ಕಾಪಾಡುವ ಪರಾತ್ಪರನು, ವಂದಾರ್ = ಬಿಜಯಮಾಡಿದನು, ತೆರುಳ್-ಆರುಂ = ತಿಳಿಯಾದರಿವಿನಿಂದ, ತೆಳಿ = ತಿಳಿಯಬಲ್ಲ, ವಿಶುಂಬು = ಪರಮಪದವನ್ನು, ತರುವಾರ್ = ಕೊಡುವವನು, ವಂದಾರ್ = ಬಂದನು, ತಿಣ್ = ದೃಢವಾದ, ಕಳಲ್ = ಅಡಿಗಳ, ಕೀಳ್ = ಕೆಳಗೆ, ವಾಳ = ಬಾಳಲು, ನಮಕ್ಕ = ನಮಗೆ, ಅರುಳ್ವಾರ್ = ಕರುಣಿಸುವ ಶರಣ್ಯನು, ವಂದಾರ್ = ಬಂದನು, ಪೆರು-ವಾನಿಲ್ = ಪರಮಪದದಲ್ಲಿ, ಅಡಿಮ್ಮೈ = ಸೇವೆಗಾಗಿ, (ಅಥವಾ ಅಡಿಮ್ಮೈ = ಕೈಂಕರ್ಯವೇ ಪುರುಷಾರ್ಥವೆಂದಿರುವ) ನಮ್ಮೈ = ಶೇಷರಾದ ನಮ್ಮನ್ನು, ಕೊಳ್ವಾರ್ = ಕೊಳ್ಳುವಂತಹ ಪರಮಾತ್ಮನು, ವಂದಾರ್-ಬಂದನು, ಪಿರಿಯಾಮಲ್ = (ನಮ್ಮನ್ನು) ಅಗಲಿರದೆ, ಕಾತ್ತ್-ಅಳಿಪ್ಪಾರ್ = ದಯೆಯಿಟ್ಟು ಪಾಲಿಸುವ ಸರ್ವೇಶ್ವರನು, ತಾಮೇ = ತಾನಾಗಿಯೇ, ವಂದಾರ್ = ಬಂದನು.

यो बन्धद्वयतो विमोचयति नः कारुण्यत श्चागतो
शर्माभासभवोग्रदुःखनिगळात् यो मोचयत्यागतः ।
अज्ञानं न यथा भवेदिह च न स्त्राता स आयात्तथा
आयात् य स्सुपथं ददर्श परमं धामाधिरोढुं प्रियः ॥

पूर्णज्ञानं विशुद्धं परमपदमपि प्राददात् य स्म आयात्
आयान्नो जीवनं यः स्वदृढपदयुगस्याध आकल्पयच्च ।
अस्मान् गृह्णाति सर्वान् परिचरणविधौ यः पुमर्थे स आयात्
विश्लिष्टाः स्याम यद्वन्न वय मुरुदयो य स्स्वयं चक्र आयात् ॥ ६

ಮೂಲ : ಅಹಲಹಿಲ್ಲಾತ್ತಿರುಮಹಳಾರನ್ಬರ್ ವಂದಾರ್,
ಅಡಿಯಿರಂಡುಂ ಆರಾಹತ್ತಂದಾರ್ ವಂದಾರ್
ಪುಹಲಿಲ್ಲಾರ್ ಪುಹಲಾಹುಂ ಪುನಿದರ್ ವಂದಾರ್,
ಪೊನ್ನುಲಹಿಲ್ ತಿರುವುಡನೇ ಪೊಲಿವಾರ್ ವಂದಾರ್,
ಅಖಿಲಮೆಲಾಮಾನಂದ ಮಾನಾರ್ ವಂದಾರ್,
ಅಡಿಯಿಣೈಕ್ಕೀಳ್‌ವೈತ್ತಡಿಮೈಕೊಳ್ವಾರ್ ವಂದಾರ್,
ಪಹಲ್‌ನಡುವೇ ಇರವಳೈಕ್ಕವಲ್ಲಾರ್ ವಂದಾರ್,
ಪಹಲೊನ್ರಾಯಿರವಳಿತ್ತಾರ್ ವಂದಾರ್ ತಾಮೇ ॥ 7

ಅರ್ಥ :- ಅಹಲಹಿಲ್ಲಾ = (ಎಂದಿಗೂ) ಅಗಲದಿರುವ, ತಿರು-ಮಹಳಾರ್ = ಮಹಾಲಕ್ಷ್ಮಿಯ, ಅನ್ಬರ್ = ಪ್ರಿಯನು, ವಂದಾರ್ = ಬಂದನು, ಅಡಿ-ಇರಂಡುಂ = ಅಡಿಗಳೆರಡನ್ನೂ, ಆರ್-ಆಹ = ಸಾಧನಗಳೆಂದು (ಉಪಾಯಗಳೆಂದು) ತಂದಾರ್ = ತೋರಿಸಕೊಟ್ಟ ಭಗವಂತನು, ವಂದಾರ್ = ಬಂದನು, ಪುಹಲ್-ಇಲ್ಲಾರ್ = ದಿಕ್ಕಿಲ್ಲದವರಿಗೆ, ಪುಹಲ್-ಆಹುಂ = ಆಶ್ರಯವನ್ನು ಕೊಡುವ, ಪುನಿದರ್ = ಪರಮಪಾವನನು, ವಂದಾರ್ = ಬಂದನು, ಪೊನ್ = ಸುಂದರವಾದ, ಉಲಹಿಲ್ = ಜಗತ್ತಿನಲ್ಲಿ, ತಿರು-ಉಡನೇ = ಲಕ್ಷ್ಮೀಸಹಿತನಾಗಿ, ಪೊಲಿವಾರ್ = ಪ್ರಕಾಶಿಸುವ ಲಕ್ಷ್ಮೀಕಾಂತನು, ವಂದಾರ್ = ಬಿಜಯಮಾಡಿದನು, ಅಖಿಲಂ-ಎಲಾಂ = ಸಮಸ್ತ ಲೋಕಗಳ, ಆನಂದಂ-ಆನಾರ್ = ಆನಂದವಾದ, (ಆನಂದರೂಪಿ) ಭಗವಂತನು, ವಂದಾರ್ = ಬಂದನು, ಅಡಿ-ಇಣೈ = ಅಡಿಗಳೆರಡರ, ಕೀಳ್ = ಕೆಳಗೆ, ವೈತ್ತು = (ನಮ್ಮನ್ನು) ಇರಿಸಿಕೊಂಡು, ಅಡಿಮೈ = ಸೇವೆಯನ್ನು, ಕೊಳ್ವಾರ್ = ತೆಗೆದುಕೊಳ್ಳುವ ದೇವರು, ವಂದಾರ್ = ಬಂದನು, ಪಹಲ್-ನಡುವೇ = ಹಗಲಿನ ನಡುವೆ, ಇರವ್ = ಇರುಳನ್ನು ಅಳೈಕ್ಕವಲ್ಲಾರ್ = ಬರುವಂತೆ ಮಾಡುವ ಆಶ್ಚರ್ಯಶಕ್ತಿಯುಳ್ಳ ಪರಮಾತ್ಮನು, ವಂದಾರ್ = ಬಂದನು, ಪಹಲ್-ಒನ್ರು-ಆಯ್ = ಹಗಲು ಒಂದೇ ಆಗಿ ಇರುವಂತೆ. ಇರವ್ = ಇರುಳನ್ನು, ಅಳಿತ್ತಾರ್ = ಅಳಿಸಿದ ಅದ್ಭುತ ಶಕ್ತಿಯುತನಾದ ಭಗವಂತನು, ತಾಮೇ = ತಾನಾಗಿಯೇ, ವಂದಾರ್ = ಬಂದನು.

विश्लेषासहमानलोकजननीकान्त स्स आयात् प्रियः
पादद्वन्द्व मुपायभूतमिति यस्तद्दत्तवान् आगतः ।
पूतो यः परमा गति र्गतिविहीनानां स आयात् दयी
लोको यो हि विराजतोऽतिरुचिरे लक्ष्म्या सहायात्प्रभुः ॥

विश्वेषा मभवत् स्वतश्च परमानन्द स्स अयात् परः
आयादात्मपदद्वये च निदधत् गृह्णाति सेवां स नः ।
मध्येऽह्नोऽपि निशां समाह्वयति य श्चित्रक्रियो ह्यायगौ
आयात् यो दिनमात्र मस्त्विति निशां प्रणाशयत् स स्वयम् ॥ ७

ಮೂಲ : ದರುಮ್ಮವಿಡತ್ತಾ್ ತೂದುಪ್ಪೋನಾರ್ ವಂದಾರ್
ದರಣಿಪ್ಪೊರಾತ್ತಿಣ್ಬಾರಂ ತವಿತ್ತಾರ್ ವಂದಾರ್,
ಅರುಮರೈಯಿನ್ ಪೊರುಳನೈತ್ತುಂ ವಿರಿತ್ತಾರ್ ವಂದಾರ್
ಅಂಜಿನ ನೀ ಯೆನ್ನೈ ಯಡ್ಯೆಯೆನ್ರಾರ್ ವಂದಾರ್,
ದರುಮಮೆಲಾಂ ತಾಮಾಹಿನಿರ್ಪಾರ್ ವಂದಾರ್,
ತಾಮೇ ನಂವಿನ್ಯೆಯನೈತ್ತುಂ ತವಿರ್ಪ್ಪಾರ್ ವಂದಾರ್,
ಪರಮೆನದ್ ನೀ ಪುಲಂಬಲೆನ್ರಾರ್ ವಂದಾರ್,
ಪಾರ್ತನುಕ್ಕು ತೇರೂರ್ನ್ದಾರ್ ವಂದಾರ್ ತಾಮೇ ॥ 8

ಅರ್ಥ :- ದರುಮನ್ = ಧರ್ಮರಾಜನು, ವಿಡ = (ಸಂಧಿಗಾಗಿ ಹೋಗಿಬರಲು) ಕಳುಹಿಸಲು, ತಾನ್ = ತಾನು, ಶೂದು = ದೂತನಾಗಿ, ಪೋನಾರ್ - ಹೋದವನಾದ ಭಗವಂತನು, ವಂದಾರ್ = ಬಂದನು, ದರಣಿ = ಭೂದೇವಿಯು, ಪೊರಾ = ಹೊರಲಾಗದಿದ್ದ, ತಿಣ್ = ಅಧಿಕವಾದ, ಬಾರಂ = ಭಾರವನ್ನು, ತವಿರ್ತ್ತಾರ್ = ಹೋಗಲಾಡಿಸಿದ ಕ್ಲೇಶನಿವಾರಕನು, ವಂದಾರ್ = ಬಂದನು, ಅರು-ಮರೈಯಿನ್ = ಸುಲಭವಾಗಿ ಅರಿಯಲು ಆಗದ ವೇದಗಳಲ್ಲಿರುವ, ಪೊರುಳ್-ಅನೈತ್ತುಂ = ಸಾರವಾದುದನ್ನೆಲ್ಲಾ, ವಿರಿತ್ತಾರ್ = ವಿಶದಪಡಿಸಿದ ಸರ್ವಜ್ಞನು, ವಂದಾರ್ = ಬಂದನು, ಅಂಜಿನ = ಅಂಜಿದ, ನೀ = ನೀನು, ಎನ್ನೈ = ನನ್ನನ್ನು, ಅಡೈ = 'ಶರಣುಹೋಗು', ಎನ್ರಾರ್ = ಎಂದು ಹೇಳಿದ ಅಭಯದಾತನು, ವಂದಾರ್ = ಬಂದನು, ದರುಮಂ-ಎಲಾಂ = ಧರ್ಮಗಳೆಲ್ಲಾ, ತಾಂ = ತಾನೇ, ಆಹಿ = ಆಗಿ, ನಿರ್ಪಾರ್ = ನಿಲ್ಲುವವನಾದ ಭಗವಂತನು, ವಂದಾರ್ = ಬಂದನು, ತಾಮೇ = ತಾನೇ, ನಂ = ನಮ್ಮ, ವಿನ್ಯೆ-ಅನೈತ್ತುಂ = ಪಾಪಗಳೆಲ್ಲವನ್ನೂ, ತವಿರ್ಪ್ಪಾರ್ = ತಪ್ಪಿಸಿ ಕಾಪಾಡುವ ದೇವರು, ವಂದಾರ್ = ಬಂದನು, ಪರಂ = ಪರಮ ಪದವನ್ನು, (ನಿನಗೆ ಕೊಡುವುದು) ಎನದ್ = ನನಗೆ ಸೇರಿದುದು, (ಇದಕ್ಕಾಗಿ) ನೀ = ನೀನು, ಪುಲಂಬಲ್ = ಹಲುಬಬೇಡ, ಎನ್ರಾರ್ = ಎಂದ ದೇವರು, ವಂದಾರ್ = ಬಂದನು, ಪಾರ್ತನುಕ್ಕು = ಅರ್ಜುನನಿಗೆ, ತೇರ್ = ರಥವನ್ನು, ಊರ್ನ್ದಾರ್ = ನಡೆಸಿಕೊಟ್ಟ ಭಗವಂತನು, ತಾಮೇ = ತಾನೇ, ವಂದಾರ್ = ಬಿಜಯಮಾಡಿದನು.

दूत स्सन् धर्मराजे प्रहितवति गतो य स्स देव स्समायात्
भारं विश्वंभराया व्यपनिनय हरिर्दुर्भरं य स्स आयात् ।
दुर्ज्ञेयं तत्वजातं व्यतनुत विशदं वेदराशे स्स आयात्
भीत स्त्वं मां श्रयस्वेत्यवददभयदो य स्स आयात् कृपालुः ॥

सर्वे धर्मा य एव स्वय मिति कलयन् सुस्थितो देव आयात्
योऽस्माकं सर्वपापन्यपमृजति पर स्स स्वतो देव आयात् ।
त्वद्रक्षाधू र्मदीया तदिह वह शुचं मेत्यवोच त्स आयात्
पार्थस्याचोदयत् यो रथ मथ वरद स्स स्वयं देव आयात् ॥ ८

ಮೂಲ : ವಂಚನ್ನೈಶೆಯ್ ಪೂತನಿಯ್ಯೈ ಮಾಯ್ತ್ತಾರ್ ವಂದಾರ್,
ಮಲ್ಲರ್ಮದಕರಿಮಾಳ ಮಲೈಂದಾರ್ ವಂದಾರ್,
ಕಂಜನ್ನೈಪ್ಪೋರ್ಕ್ಕಡುಂಶಿನತ್ತಾಲ್ ಕಡಿಂದಾರ್ ವಂದಾರ್,
ಕಣ್ನುದಲ್ ಮುಱ್ವಾಣಱ್ ತೋಳ್ಕಳಿತ್ತಾರ್ ವಂದಾರ್,
ವೆಂಜೊಲ್ತರವೀಡುಕೊಡುತ್ತುಹಂದಾರ್ ವಂದಾರ್,
ವಿಲಕ್ಕಿಲ್ಲಾ ವಳಿನಡತ್ತ ವಿರೈಂದಾರ್ ವಂದಾರ್,
ಪಂಜವರ್ವೈಪ್ಪಲವಹೈಯುಂ ಕಾತ್ತಾರ್ ವಂದಾರ್,
ಪಾಂಚಾಲಿಕುಳಲ್ ಮುಡಿತ್ತಾರ್ ವಂದಾರ್ ತಾಮೇ ॥ 9

ಅರ್ಥ :- ವಂಚನ್ನೈ = ವಂಚನೆಯನ್ನು, ಶೆಯ್ = ಮಾಡಲು (ಬಂದ), ಪೂತನಿಯ್ಯೈ = ಪೂತನಿಯನ್ನು, ಮಾಯ್ತ್ತಾರ್ = ಮಾಯೆಯಿಂದ ಕೊಂದ ಭಗವಂತನು, ವಂದಾರ್ = ಬಂದನು, ಮಲ್ಲರ್ = ಜಟ್ಟಿಗಳು, (ಮತ್ತು) ಮದಕರಿ = ಮದಿಸಿದ ಆನೆ, ಮಾಳ = ಹಾಳಾಗುವಂತೆ, ಮಲೈಂದಾರ್ = ಹೋರಾಡಿದ ಅಪ್ರತಿಮಬಲನು, ವಂದಾರ್ = ಬಂದನು, ಕಂಜನ್ನೈ = ಕಂಸನನ್ನು, ಪೋರ್ = ಹೋರಾಟದಲ್ಲಿ, ಕಡುಂ-ಶಿನತ್ತಾಲ್ = ಕಡುಕೋಪದಿಂದ, ಕಡಿಂದಾರ್ = ಕೆಡವಿಕೊಂದ ವೀರಾಗ್ರಣಿಯು, ವಂದಾರ್ = ಬಂದನು, ಕಣ್-ನುದಲ್ = ಹಣೆಗಣ್ಣನಾದ ಈಶ್ವರನ, ಮುಱ್ = ಎದುರಿಗೇ, ವಾಣನ್ = ಬಾಣಾಸುರನ, ತೋಳ್ = ತೋಳುಗಳನ್ನು, ಕಳಿತ್ತಾರ್ = ಕಡಿದ ಭಗವಂತನು, ವಂದಾರ್ = ಬಂದನು, ವೆಂ-ಶೊಲ್ = ಉಗ್ರವಾದ ಮಾತುಗಳನ್ನು, ತರ = ಹೇಳಿದರೆ, (ಶಿಶುಪಾಲನಿಗೆ) ವೀಡ್ = ಪರಮಪದವನ್ನು, ಕೊಡುತ್ತ್ = ಕೊಟ್ಟು, ಉಹಂದಾರ್ = ನಲಿದಾಡಿದ ಪರಮಾತ್ಮನು, ವಂದಾರ್ = ಬಿಜಯಮಾಡಿದನು, ವಿಲಕ್ಕ್-ಇಲ್ಲಾ =

ತಡೆಯಿಲ್ಲದ, ವಳಿ = ದಾರಿಯಲ್ಲಿ, ನಡತ್ತ = (ನಮ್ಮನ್ನು) ನಡೆಸಿಕೊಂಡು ಹೋಗಲು, ವಿರೈಂದಾರ್ = ತ್ವರೆಗೊಳಿಸುವ (ಸನ್ಮಾರ್ಗದರ್ಶಕ) ಭಗವಂತನು, ವಂದಾರ್ = ಬಂದನು, ಪಂಚವರೈ = ಪಂಚಪಾಂಡವರನ್ನು, ಪಲ-ವಹೈಯುಂ = ಹಲವಾರು ಬಗೆಯಲ್ಲಿಯೂ, ಕಾತ್ತಾರ್ = ಕಾಯ್ದ ಭಗವಂತನು, ವಂದಾರ್ = ಬಂದನು, ಪಾಂಚಾಲಿ = ದ್ರೌಪದಿಯ, ಕುಳಲ್ = ತುರುಬನ್ನು, ಮುಡಿತ್ತಾರ್ = (ಒಂದಾಗಿ ಸೇರಿಸಿ) ಗಂಟುಹಾಕಿಸಿದ (ಭೀಮನ ಮೂಲಕ) ಭಗವಂತನು, ತಾಮೇ = ತಾನೇ, ವಂದಾರ್ = ಬಂದನು.

**आयात् वञ्चनकारिणीं अगमयत् यः पूतनां पञ्चतां**
**मल्लान् मत्तगजं ममर्द च बली युध्यन् स आयाद्दयी ।**
**कंसं ध्वंसितवान् अतीव कुपितः वीरो य आयात्परः**
**फालाक्षस्य पुरोऽच्छिनद्भुजकुलं बाणस्य य श्चाययौ ॥**

**मुक्तिं यः प्रददौ दुरुक्त्यघकृते तुष्टाव चायात्प्रभुः**
**निर्बाधाध्वविचारणत्वर इहायातो य ईशः परः ।**
**यो वा पाण्डुसुतान् ररक्ष विविधै मार्गै स्स आयात्प्रभुः**
**पाञ्चालीचिकुरान् बबन्ध कृपया देव स्स आयात्स्वयम् ॥ ९**

**ಮೂಲ :** **ಅತ್ತಿಗ್ಗಿರಿಯರುಳಾಳಪ್ಪೆರುಮಾಳ್ ವಂದಾರ್,**
**ಆನೈಪರಿತೇರ್ಽಿ ಮೇಲ್ ಅಳಹರ್ ವಂದಾರ್,**
**ಕಚ್ಚಿತ್ತನಿಲ್ ಕಣ್‌ಕೊಡುಕ್ಕುಂ ಪೆರುಮಾಳ್ ವಂದಾರ್,**
**ಕರುದವರಂತರು ದೈವಪ್ಪೆರುಮಾಳ್ ವಂದಾರ್,**
**ಮುತ್ತಿಮಳೈಪೊಳಿಯುಂ ಮುಹಿಲ್ ವಣ್ಣರ್ ವಂದಾರ್,**
**ಮೂಲಮೆನ ವ್ವೋಲಮಿಡ ವಲ್ಲಾರ್ ವಂದಾರ್,**
**ಉತ್ತರವೇದಿಕ್ಕುಳ್ಳೇ ಉದಿತ್ತಾರ್ ವಂದಾರ್,**
**ಉಂಬರ್‌ತೊಳುಂ ಕಳಲುಡೈಯಾರ್ ವಂದಾರ್ ತಾಮೇ ॥ 10**

ಅರ್ಥ :- ಅತ್ತಿಗಿರಿ = ಹಸ್ತಿಗಿರಿಯಲ್ಲಿರುವ, ಅರುಳ್-ಆಳ = ಕರುಣೆಗೆ ಕಡಲಾದ, ಪೆರುಂ-ಆಳ್ = ಸರ್ವಾಧಿಕನಾದ ದೇವಾಧಿರಾಜನು, ವಂದಾರ್ = ದಯಮಾಡಿದನು, ಆನೈ = ಆನೆಯ, ಪರಿ = ಕುದುರೆಯ, ತೇರ್ಽಿ = ರಥದ, ಮೇಲ್ = ಮೇಲೆ (ಅಲಂಕೃತನಾಗಿ) ಅಳಹರ್ = ಚೆಲುವಿನ ಮೂರ್ತಿಯಾದ ವರದನು, ವಂದಾರ್ = ಬಿಜಯ ಮಾಡಿದನು,

ಕಚ್ಚಿ-ತನಿಲ್ = ಕಾಂಚಿಯಲ್ಲಿ, ಕಣ್ = ಕಣ್ಣುಗಳನ್ನು (ಕಣ್ಣಿಲ್ಲದವರಿಗೆ ಕಣ್ಣನ್ನೂ, ಕಣ್ಣಿರುವವರಿಗೆ ಒಳಗಣ್ಣನ್ನೂ) ಕೊಡುಕ್ಕುಂ = ಕೊಡುವಂತಹ, ಪೆರುಂ-ಆಳ್ = ಪರಮಾತ್ಮನು, ವಂದಾರ್ = ಬಂದನು. ಕರುದ = ಬೇಕೆನ್ನುವ, ವರಂ = ವರವನ್ನು, ತರುಂ = ಕೊಡುವ, ದೈವ-ಪೆರುಮಾಳ್ = ದೇವಾಧಿರಾಜನು, ವಂದಾರ್ = ಬಂದನು. ಮುತ್ತಿ = ಮುಕ್ತಿಯ, ಮಳೈ = ಮಳೆಯನ್ನು, ಪೊಳಿಯುಂ = ಸುರಿಸುವ, ಮುಹಿಲ್ = ಮುಗಿಲಿನ (ಮೋಡದ), ವಣ್ಣರ್ = ಬಣ್ಣದ ದೇವರು, ವಂದಾರ್ = ಬಂದನು, ಮೂಲಂ-ಎನ = 'ಆದಿಮೂಲ'' ಎಂದು ಕೂಗಿದಾಗ (ಗಜರಾಜನು ಅರಚಿಕೊಂಡಾಗ) ಓಲಂ-ಇಡ ವಲ್ಲಾರ್ = ರಕ್ಷಿಸಲು ಸಾಮರ್ಥ್ಯವುಳ್ಳ ದಯಾಳುವು, ವಂದಾರ್ = ಬಂದನು. ಉತ್ತರವೇದಿಕ್ಕುಳ್ಳೇ = ಬ್ರಹ್ಮನ ಯಾಗ ವೇದಿಕೆಯಲ್ಲಿ, ಉದಿತ್ತಾರ್ = ಉದಯಿಸಿಬಂದ ಭಗವಂತನು, ವಂದಾರ್ = ಬಂದನು. ಉಂಬರ್ = ದೇವತೆಗಳು, ತೊಳುಂ = ಸೇವಿಸುವಂತಹ, ಕಳಲ್-ಉಡ್ಡೆಯಾರ್ = ಚರಣಗಳುಳ್ಳ ಶರಣಾಗತ ರಕ್ಷಕನು, ತಾಮೇ = ತಾನೇ, ವಂದಾರ್ = ದಯಮಾಡಿದನು.

सर्वेशो देवराजः करिगिरिकरुणामूर्तिरायान्महात्मा
सौन्दर्योद्वर्षिवर्ष्मा करितुरगरथारूढ आयात्स देवः ।
काञ्च्यां अक्ष्णां प्रदाता गतनयननराणां स आयात्परेशः
योऽभीष्टानां वराणां वितरणनिपुणो देवदेव स्स आयात् ॥

भक्तेभ्यो मुक्तिवृष्टिं वितरति जलमुग्वर्ण आयात्स देवः
नागेन्द्रे मूलमूलेत्यनुरुवति तदुज्जीवकारी स आयात् ।
वेद्यां य श्चोत्तरस्यां वरद उदितवान् ब्रह्मयागे स आयात् ।
देवा स्सर्वे भजन्ते पदकमलयुगं यस्य चायात्स्वयं सः ॥ १०

ಮೂಲ : ಮರೈತ್ತಯಿಲ್ ಇಶೈಯೆಳುತ್ತಿಲ್ ವಣಂಗುಂ ವಾಕ್ಕಿಲ್,
ಮಂತಿರತ್ತಿಲ್ ನಾಲೆಳುತ್ತಾಂ ತಿರು ನಾಮತ್ತಿಲ್,
ನಿರೈತ್ತಿಲಹುಮೇತ್ತುಮ್ಮೈಯಿಲಿರಣ್ಡಾಮೊನ್ರಿಲ್,
ನೆಡುಮಾಲ್ ತರ್ಗೀತ್ತೈಯೆಲ್ಲಾಂನಿರೈಂದ ಶೊಲ್ಲಿಲ್,
ಉರೈತ್ತವರ್ ಕಂಡುರೈತ್ತ ಪೊರುಳಾನವೆಲ್ಲಾಂ,
ಉಯರ್ ವಿರತ ವರುಳಾಳಪ್ಪೆರುಮಾಳ್ ತೇಶಿನ್,
ತಿರತ್ತಿಲಿವೈ ತಿರುಚ್ಚಿನ್ನಮಾಲೈಪತ್ತುಂ,
ಶೆವಿಕ್ಕಿನಿತಾಂ ಶಿತ್ತಿನ್ಬಮಿಶೈಯಾದಾರ್ಕ್ಕೇ ॥ 11

ಅರ್ಥ :- ಮರೈ = ವೇದಗಳ, ತಲೈಯಿಲ್ = ತಲೆಗಳಲ್ಲಿ (ಉಪನಿಷತ್ತುಗಳಲ್ಲಿ), ಇಶೈ = ಪಾಡಲಾಗಿರುವ, ಎಳುತ್ತಿಲ್ = ಅಕ್ಷರದಲ್ಲೂ (ಪ್ರಣವದಲ್ಲೂ), ವಣಂಗುಂ = ನಮಿಸುವ, ವಾಕ್ಕಿಲ್ = ಮಾತಿನಲ್ಲೂ (ನಮಶ್ಶಬ್ದದಲ್ಲೂ) ಮಂತಿರತ್ತಿಲ್ = ಮಂತ್ರದಲ್ಲಿ, ನಾಲ್-ಎಳುತ್ತ್-ಆಂ = ನಾಲ್ಕು ಅಕ್ಷರಗಳುಳ್ಳ, ತಿರು-ನಾಮತ್ತಿಲ್ = ಉತ್ತಮವಾದ ಹೆಸರಿನಲ್ಲೂ (''ನಾರಾಯಣ''ವೆಂಬ ಶಬ್ದದಲ್ಲಿಯೂ) ನಿರೈತ್ತ್ = ಪೂರ್ತಿಯಾಗಿ, ಇಲಹುಂ = ಬೆಳಗುವ, ಏತ್ತುವ್ವೈಯಿಲ್ = ವಿಭಕ್ತಿಪ್ರತ್ಯಯದಲ್ಲಿಯೂ, ಇರಂಡ್-ಆಂ-ಒನ್ರಿಲ್ = ದ್ವಯವೆಂಬ ಮಂತ್ರದಲ್ಲಿಯೂ, ನೆಡು-ಮಾಲ್-ತರ್ = ಪರಮ ದೇವನಾದ ಶ್ರೀಕೃಷ್ಣನ, ಗೀತೈ-ಎಲ್ಲಾಂ = (ಅತಿ ದಯೆಯಿಂದ ಉಪದೇಶಿಸಿದ) ಗೀತೆಯೆಲ್ಲಾ, ನಿರೈಂದ = ತುಂಬಿ ತುಳುಕಾಡುವ, ಶೊಲ್ಲಿಲ್ = ಮಾತಿನಲ್ಲೂ, (ಚರಮ ಶ್ಲೋಕದಲ್ಲೂ) ಉರೈತ್ತ = ಹೇಳಿದ, ಪೊರುಳಾನ-ಎಲ್ಲಾಂ = ಸಾರವಾದುದೆಲ್ಲವನ್ನೂ, ಕಂಡ್ = ತಿಳಿದು, ಉರೈತ್ತವರ್ = ಹೇಳಿದವರು (ಹೇಳಿದ) ಇವ್ವೈ = ಇವು, ಉಯರ್ = ಬಲು ಮೇಲೆನಿಸಿದ, ವಿರತಂ = ವ್ರತವುಳ್ಳ, (ಶರಣಾಗತ ರಕ್ಷಣನೆಂಬ ವ್ರತ) ಅರುಳ್-ಆಳ-ಪೆರುಮಾಳ್ = ಪರಮ ಕರುಣಾಮೂರ್ತಿಯಾದ ವರದರಾಜನ, ತೇಶ್ ತಿರತ್ತಿಲವ್ವೈ = ತೇಜಸ್ಸನ್ನು ಕುರಿತು ಹೇಳಿರತಕ್ಕ (ಹೀಗಿರುವ), ತಿರು-ಚಿನ್ನಮಾಲೈ = ಉತ್ತಮವಾದ ಕಹಳೆಯ ಧ್ವನಿಯಮಾಲೆಯ, ಪತ್ತುಂ = ಈ ಹತ್ತು ಪದ್ಯಗಳು, ಶಿತ್ತ್-ಇನ್ಬಂ = ಅಲ್ಪವಾದ ಆನಂದವೂ, ಇಶೈಯಾದಾರ್ಕ್ಕೇ = ಒಂದು ಆನಂದವೆಂದು ಒಪ್ಪದೆ ಇರುವರಿಗೇನೇ, ಶೆವಿಕ್ಕ್ = ಕಿವಿಗಳಿಗೆ,ಇನಿದ್-ಆಂ = ಇಂಪಾಗಿರುವುದು (ಅಷ್ಟು ಅತ್ಯುತ್ತಮ)

वेदान्ते प्रणवेऽन्तिमे नम इति ह्युक्तौ चतुर्वर्णके
श्रीमन्नाम्नि मनौ तदन्तगचतुर्थ्यर्थे प्रधाने द्वये ।
श्लोकेऽन्त्ये भगवन्मुखोल्लसितवाक्सारे च सारार्थवित्
प्रोक्तं चैतदनुत्तमव्रतदयावद्देवतेजः परम् ॥

श्री चिह्नमालापद्यानि दशाप्यन्तर्हितानि वै ।
अल्पानन्दानभीप्सूनां श्रुतिरम्याणि सन्ति हि ।
श्री देशिकप्रबन्धस्थश्रीकाहळरवस्रजः ।
लिलेखार्थं तथा श्लोकान् गोपालो भावगर्भितान् ॥

॥ಶ್ರೀಃ॥

॥ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ॥

# ಪನ್ನಿರುನಾಮಂ

**ಶ್ರೀಮಾನ್ ವೇಂಕಟನಾಥಾರ್ಯಃ ಕವಿತಾರ್ಕಿಕಕೇಸರೀ ।**

**ವೇದಾನ್ತಾಚಾರ್ಯವರ್ಯೋ ಮೇ ಸನ್ನಿಧತ್ತಾಂ ಸದಾ ಹೃದಿ ॥**

ಪ್ರಾಯಶಃ ವಿಷ್ಣುಭಕ್ತರು ನಾಮವನ್ನು ಧರಿಸುವರು. ವಿಶೇಷವಾಗಿ ಶ್ರೀ ವೈಷ್ಣವರು ಧರಿಸುವುದೇ ಅಲ್ಲದೆ ತಾವು ಆಚರಿಸುವ ಕರ್ಮಗಳಿಗೆ ಅದು ಅಂಗವಾಗಿದ್ದು ಫಲಪ್ರದವಾಗುವುದೆಂದು ಅನೇಕ ಪ್ರಮಾಣಗಳಿಂದ ನಿರ್ಣಯಿಸಲ್ಪಟ್ಟಿರುವುದರಲ್ಲಿ ವಿಶ್ವಾಸವಿಟ್ಟಿರುವರು.

ಶ್ರೀಮದ್ದೇಶಿಕರು ತಮ್ಮ "ಸಚ್ಚರಿತ್ರರಕ್ಷೆ"ಯಲ್ಲಿ "ನಾಮಧಾರಣೆ", ಆದರ ಆಕಾರ, ಅಳತೆ, ಸಂಖ್ಯೆ, ಸ್ಥಳ, ಅಧಿದೇವತೆ, ಮತ್ತು ಆ ದೇವತೆಗಳ ರೂಪ, ವರ್ಣ, ಆಯುಧ, ಧ್ಯಾನ, ಹಾಗೆಯೇ ಫಲ" ಎಲ್ಲವನ್ನೂ ಸಪ್ರಮಾಣವಾಗಿಯೂ, ವಿಸ್ತಾರವಾಗಿಯೂ ವಿವರಿಸಿರುವರು. ಪ್ರಮಾಣಶರಣರಾದ ನಮಗೆ ಇದು ಬಹು ಮುಖ್ಯ. ಇದನ್ನೇ ತಿಳಿತಮಿಳಿನಲ್ಲಿ ಸಂಕ್ಷೇಪಿಸಿರುವರು. ಇದೇ "ಪನ್ನಿರುನಾಮಂ" ಎಂಬುದು.

ತಮ್ಮ "ಶ್ರೀರಹಸ್ಯಪದವೀ" ಮೊದಲಾಗಿ "ಶ್ರೀ ರಹಸ್ಯತ್ರಯಸಾರ"ದವರೆಗೆ ಇರುವ ಬಹು ಪ್ರಬಂಧಗಳಲ್ಲಿ ತಕ್ಕಂತೆ ಎಲ್ಲರಿಗೂ ತಿಳಿಯುವಂತೆ, ಸಂಕ್ಷೇಪವಾಗಿಯೂ ವಿಸ್ತಾರವಾಗಿಯೂ ತಾವೇ ವ್ಯಾಖ್ಯಾನರೂಪದಲ್ಲಿ ಉಪದೇಶಿಸಿರುವರು. "ವಿರೋಧ ಪರಿಹಾರ"ದಲ್ಲಂತೂ ಸಂಭವಿಸುವಂತಹ ಎಲ್ಲ ಸಂಶಯಗಳನ್ನೂ ಪರಿಹರಿಸಿರುವರು. ಅಂತಹ ರಹಸ್ಯತ್ರಯವಾದ "ಮೂಲಮಂತ್ರ, ದ್ವಯ, ಚರಮಶ್ಲೋಕ" ಎಂಬ ವಿಖ್ಯಾತವಾದ ಮಂತ್ರಗಳ ಸಾರಾರ್ಥಗಳನ್ನೂ ದ್ರವಿಡ ನುಡಿಯ ರಸಿಕರಿಗೆ ಶ್ರುತಿ ಮನೋಹರವಾದ ಪಾಶುರಗಳಿಂದ ವಿಶದಪಡಿಸಿರುವರು. ಇದು ಅತಿ ಸಂಗ್ರಹರೂಪ. ಕ್ರಮವಾಗಿ "ತಿರುಮಂತಿರಚ್ಚುರುಕ್ಕು, ದ್ವಯಚ್ಚುರುಕ್ಕು, ಚರಮ ಶ್ಲೋಕಚ್ಚುರುಕ್ಕು" ಎಂದಾಗಿವೆ. ಮೊದಲನೆಯ ಮಂತ್ರದಲ್ಲಿ 8 ಅಕ್ಷರಗಳೂ, 9 ಅರ್ಥಗಳೂ ಆಭರಣದಲ್ಲಿ ಹುದುಗಿ ಹೊಳೆಯುವಂತಿವೆ. ಎರಡನೆಯದು ಪ್ರಥಮದ ವಿವರಣರೂಪ. ಇದೇ ಪ್ರಪತ್ತಿಯ "ಕರಣಮಂತ್ರ". ಶ್ರೀಭಾಷ್ಯಕಾರರು ತಮ್ಮ ಗದ್ಯದಲ್ಲಿ ಇದನ್ನೇ ಹೇಳಿರುವರು. ಕಠಶ್ರುತಿ-ಭಗವಚ್ಛಾಸ್ತ್ರಾದಿಗಳಲ್ಲಿರುವ ಇದರ ಮಹಾತ್ಮ್ಯೆಯನ್ನೂ, ಸದಾಚಾರ್ಯಲಬ್ಧವಾದ 10 ಅರ್ಥಗಳನ್ನೂ 12 ಪದ್ಯಗಳಲ್ಲಿ ಹೇಳಿರುವರು. ಮೂರನೆಯದು "ಶ್ರೀಭಗವದ್ಗೀತೆ"ಯಲ್ಲಿ ಪ್ರಸಿದ್ಧವಾದುದು. ಹೀಗೆ ಇವೆಲ್ಲವನ್ನೂ ಕನ್ನಡಿಸಲಾಗಿದೆ. ಸದವಕಾಶವನ್ನು ಸಾರ್ಥಕಪಡಿಸಿಕೊಳ್ಳಬೇಕೆಂದು ಪ್ರಾರ್ಥನೆ.

ಇತಿ, ಸದಾಚಾರ್ಯದಯಾವಲಂಬೀ

**ವಿದ್ವಾನ್. ಹ. ಗೋಪಾಲಾಚಾರ್ಯಃ**

ನಂ. 14, 4ನೇ ಕ್ರಾಸ್, ಕಾಳಿದಾಸ ರಸ್ತೆ

ವಾಣಿವಿಲಾಸ್ ಮೊಹಲ್ಲ, ಮೈಸೂರು

ಶಾರ್ವರಿ

ಚೈತ್ರ-ವೈಶಾಖ-ಜ್ಯೇಷ್ಠ

1962

||ಶ್ರೀಃ||

||ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ||

# ಪನ್ನಿರುನಾಮಂ

ಮೂಲ : ಕೇಶವನಾಯ್ ನಿನ್ರು ಕೀಳ್ ದಿಶ್ಶೈಯಿಲು ನೆತ್ತಿಯಿಲುಂ
ತೇಶುಡೆಯ್ಯಾಳಿ ಹಳ್ ನಾನ್ಗುಡನ್ ಶೆಂಪಶುಂಪೊನ್ಮಲ್ಶೈ ಪೋಲ್,
ವಾಶಮಿಹುತ್ತೆನ್ನೈ ಮಂಗಾಮರ್ಕಾಕ್ಕು ಮರ್ಶೈಯದನಾಲ್,
ಆಶೈ ಮಿಹುತ್ತವಯನ್ ಮಕವೇದಿಯಿಲರ್ಬುದನೇ || 1

ಅರ್ಥ :- ಆಶೈ-ಮಿಹುಂದ = (ಭಗವದ್ವಿಷಯದಲ್ಲಿ) ನಿರತಿಶಯವಾದ ಭಕ್ತಿಯುಳ್ಳ ಅಯನ್ = ಬ್ರಹ್ಮನ, ಮಕ-ವೇದಿಯಿಲ್ = ಯಜ್ಞವೇದಿಕೆಯಲ್ಲಿ (ಉದ್ಭವವಾದ) ಅರ್ಬುದನ್ = ಅದ್ಭುತ ವ್ಯಾಪಾರವುಳ್ಳ ದೇವಾಧಿರಾಜನು. ಕೇಶವನಾಯ್ = ಕೇಶವನೆಂಬ ದಿವ್ಯವಾದ ಅವತಾರವುಳ್ಳವನಾಗಿ, ತೇಶುಡ್ಶೈ = ತೇಜಸ್ಸುಳ್ಳ. ಆಳಿಹಳ್-ನಾನ್ಗ್-ಉಡನ್ = ನಾಲ್ಕು ಚಕ್ರಗಳೊಂದಿಗೆ. ಶೆಂ-ಪಶುಂ-ಪೊರ್-ವಲ್ಶೈ-ಪೋಲ್ = ಕೆಂಪಾಗಿಯೂ, ಅರಿಶಿನದಂತೆಯೂ ಇರುವ ಚಿನ್ನದ ಪರ್ವತದಂತೆ, ಕೀಳ್-ದಿಶ್ಶೈಯಿಲುಂ = ಪೂರ್ವದಿಕ್ಕಿನಲ್ಲೂ, ನೆತ್ತಿಯಿಲುಂ = ಹಣೆಯಮೇಲೂ, ನಿನ್ರು = ಪ್ರತಿಷ್ಠಿತನಾಗಿ, ವಾಶಿ-ಮಿಹುತ್ತ್ = (ಪರವ್ಯೂಹಾದಿಗಳಿಗಿಂತ) ರಕ್ಷಣೆಯಲ್ಲಿ ಅತಿಶಯ ವ್ಯತ್ಯಾಸವನ್ನು ತೋರಿಸುತ್ತಾ, ಮರ್ಶೈಯದನಾಲ್ = ವೇದಗಳಿಂದ, ಎನ್ನೈ = ನನ್ನನ್ನು, ಮಂಗಾಮಲ್ = (ಅವಿದ್ಯೆಯಿಂದ) ನಾಶವಾಗದಂತೆ. ಕಾಕ್ಕುಂ = ರಕ್ಷಿಸುವನು.

ತಾತ್ಪರ್ಯ :- ಊರ್ಧ್ವ ಪುಂಡ್ರಗಳನ್ನು ಧರಿಸಿಕೊಳ್ಳುವಾಗ ಆಯಾ ಸ್ಥಾನಗಳಲ್ಲಿ ವಿಹಿತವಾಗಿರುವ ಮೂರ್ತಿಗಳನ್ನು ಧ್ಯಾನಮಾಡಬೇಕು, ಹೀಗೆ ಹನ್ನೆರಡು ನಾಮಗಳನ್ನು ಹಾಕಿಕೊಳ್ಳುವಾಗ, ಆಯಾ ಮೂರ್ತಿಯ, ನಾಮ, ವರ್ಣ, ಸ್ಥಾನ, ಆಯುಧ ಮೊದಲಾದ ವಿಶೇಷಾಕಾರಗಳನ್ನು ಬಿಡದೆ ಅನುಸಂಧಾನ ಮಾಡಬೇಕು. ಹಣೆಯಲ್ಲಿರುವ ನಾಮದೇವತೆ, ಕೇಶವ-ಸ್ವರ್ಣವರ್ಣ-ನಾಲ್ಕುಹಸ್ತಗಳಲ್ಲೂ ನಾಲ್ಕು ಚಕ್ರಗಳು. ಇವುಗಳಿಂದ ಅಲಂಕೃತವಾದ ಪರಮಾತ್ಮನು ರಕ್ಷಿಸಲೆಂದು ಧ್ಯಾನಿಸಬೇಕು. ಇದನ್ನೇ ''ಚತುಶ್ಚಕ್ರಂ ನಮಸ್ಯಾಮಿ ಕೇಶವಂ ಕನಕ ಪ್ರಭಂ||'' ಎಂಬ ಧ್ಯಾನ ಶ್ಲೋಕವು ತಿಳಿಸುತ್ತದೆ. ಅವಿದ್ಯೆಯೆಂಬ ಅಲೆಯಲ್ಲಿ ಸಿಕ್ಕಿ ನಶಿಸಿ ಹೋಗದಂತೆ ಕಾಪಾಡುವನು.

ಸೃಷ್ಟಿಕರ್ತನಾದ ಬ್ರಹ್ಮನು ಯಾಗ ಮಾಡಿದ ವೇದಿಕೆಯಲ್ಲಿ ಅವತರಿಸಿ, ಆಶ್ಚರ್ಯವನ್ನು ವ್ಯಕ್ತಪಡಿಸಿದ ಕಂಚಿಯ ವರದರಾಜನೇ ಅರ್ಚಾವತಾರವಾಗಿದ್ದರೂ ಕೇಶವನಾಗಿ ಬಂದು ನಾಮ ದೇವತೆಯಾಗಿರುತ್ತಾ ತನ್ನ ರಕ್ಷಣೆಯ ಸ್ಥಾನವಾದ ಪೂರ್ವದಿಕ್ಕನ್ನೂ ಮತ್ತು ನಮ್ಮ

ನೆತ್ತಿಯನ್ನೂ ಸಂರಕ್ಷಿಸುವನೆಂದುಭಾವ. ಇದನ್ನೇ ''ಪುರಸ್ತಾತ್ ಕೇಶವಃ ಪಾತು ಚಕ್ರೀ ಜಾಂಬೂನದ ಪ್ರಭುಃ'' ಎಂಬುದೂ ಹೇಳುವುದು.

**द्वादशनामप्रबन्धः ॥**

**श्रीकेखवो दिशि हरे रलिके च पाति ।**
**दीप्त श्चतुर्भि ररिभि स्त्वधिकोऽनवद्यम् ॥**
**वैदे स्सवुर्णनगवत् हरितारुणो मां ।**
**आशाधिकाजमखवेदिभवोऽभ्दुतो हि ॥** १

**ಮೂಲ :** **ನಾರಣನಾಯ್ ನಲ್ವಲಂಬುರಿ ನಾಲುಮುಹನ್ದೆಡುತ್ತು,**
**ಕಾರಣಿ ಮೇಗ ಮೆನವೇ ಯುದರಮುಮೇರ್ಕು ನಿನ್ರ್.**
**ಆರಣನೂಲ್ ತನ್ದರುಳಾಲಡೈಕ್ಕಲಂ ಕೊಂಡರುಳುಂ,**
**ವಾರಣ ವೆರ್ಪಿಲ್ ಮಳೈಮುಗಿಲ್ ಪೋಲ್ ನಿನ್ರ ಮಾಯವನೇ ॥**

ಅರ್ಥ :- ವಾರಣ-ವೆರ್ಪಿಲ್ = ಹಸ್ತಿಗಿರಿಯಲ್ಲಿ, ಮಳೈ-ಮುಗಿಲ್-ಪೋಲ್ = ಮಳೆಸುರಿಸುವ ಕಾಳಮೇಘದಂತೆ, ನಿನ್ರ = ಇರುವ, ಮಾಯವನ್ = ಆಶ್ಚರ್ಯ ಚರಿತನಾದ ವರದರಾಜನು, ನಾರಣನ್-ಆಯ್ = ನಾರಾಯಣನೆಂಬ ಮೂರ್ತಿ ವಿಶೇಷ ವಿಶಿಷ್ಟನಾಗಿ, ನಲ್-ವಲಂಬುರಿ-ನಾಲುಂ = ಅತ್ಯುತ್ತಮವಾದ ನಾಲ್ಕು ಶಂಖಗಳನ್ನು ಉಹನ್ದು = ಅತಿ ಪ್ರೀತಿಯಿಂದ, ಎಡುತ್ತು = ಧರಿಸಿ, ಕಾರ್-ಅಣಿ-ಮೇಗಂ-ಎನವೇ = ಶ್ಯಾಮಲವರ್ಣದಿಂದಲಂಕೃತವಾದ ಮೇಘದಂತೆಯೇ, ಉದರಮುಂ = ಉದರದಲ್ಲಿಯೂ, ಮೇರ್ಕುಂ = ಪಶ್ಚಿಮದಲ್ಲಿಯೂ, ನಿನ್ರು = ಸ್ಥಿರವಾಗಿದ್ದು, ಅರುಳಾಲ್ = ಕರುಣೆಯಿಂದ, ಆರಣ-ನೂಲ್ = ಉಪನಿಷತ್ ಶಾಸ್ತ್ರವನ್ನು, ತಂದು = ಕೊಟ್ಟು, ಅಡೈಕ್ಕಲಂ = ರಕ್ಷಿಸಲ್ಪಡಬೇಕಾದ ವಸ್ತುವೆಂದು, ಕೊಂಡು = ಸ್ವೀಕರಿಸಿ, ಅರುಳುಂ = ಕೃಪೆಮಾಡುವನು.

ತಾತ್ಪರ್ಯ : ''ನಾರಾಯಣಂ ಘನಶ್ಯಾಮಂ' ಚತುಶ್ಶಂಖಂ ನಮಾಮ್ಯಹಂ'' ''ಪಶ್ಚಾನ್ನಾರಾಯಣ ಶ್ಶಂಖೀ ನೀಲಜೀವಮೂತಸನ್ನಿಭಃ'' ಇತ್ಯಾದಿ ಪ್ರಮಾಣ ಪ್ರತಿಪಾದಿತವಾದ ದ್ವಿತೀಯ ಪುಂಡ್ರಾಧಿದೇವತೆಯ ವರ್ಣ-ಆಯುಧಾದಿಗಳನ್ನು ಇದರಲ್ಲಿ ತಿಳಿಸಲಾಗುವುದು.

ಹಸ್ತಿಗಿರಿಯ ಶಿಖರದಲ್ಲಿ ಸ್ನಿಗ್ಧ-ಶ್ಯಾಮಳ-ಶೀತಲ ಕಾಂತಿಯಿಂದ ನೀಲ ಮೇಘದಂತೆ ಭಕ್ತಾಭೀಷ್ಟಗಳನ್ನು ಸುರಿಸುವ ದಯಾಳು ವರದನೇ ನೀಲಮೇಘ ಶ್ಯಾಮಲನಾದ

ಶ್ರೀ ನಾರಾಯಣನೆಂಬ ವ್ಯೂಹಾಂತರಾವತಾರ ವಿಶೇಷನಾಗಿ, ನಮ್ಮ ಉದರದಲ್ಲೂ, ಪಶ್ಚಿಮದಿಕ್ಕಿನಲ್ಲೂ ಸುಪ್ರತಿಷ್ಠಿತನಾಗಿ, ವಿರಾಜಿಸುತ್ತಾ ಉಪನಿಷತ್ತುಗಳು ಸಾರುವ ಶರಣಾಗತ ಭಾರವನ್ನು ಪರಮಕರುಣೆಯಿಂದ ಸ್ವೀಕರಿಸಿ ಶರಣಾಗತಿಯನ್ನು ಸಾಂಗವಾಗಿ ನೆರವೇರಿಸುವವನಾಗಿ ಬೆಳಗಿ, ಕಾಪಾಡುವನು.

**मदावलधराधरस्थितवलाहको वार्षुकः ।**
**धृताग्र्यचतुरम्बुजोऽद्भुतकरो हि नारायणः ।।**
**स पाशिदिशि चोदरे रुचिरनीलपाथोदवत् ।**
**वितीर्य कृपया श्रुती रवति मां स्वरक्ष्यं विभुः ।। २**

**ಮೂಲ : ಮಾದವನಾಮಮುಂ ವಾನ್ ಗದ್ಯೆನಾನ್ಗು ಮಣಿನಿರಮುಂ**
**ಓದುಮುರ್ೈಪ್ಪಡಿಯೇನ್ದಿಯುರತ್ತಿಲುಂ ಮೇಲುಂನಲ್‌ಹಿ,**
**ಪೋದಲರ್ ಮಾದುಡನ್ ಪುಂದಿಯಿಲನ್ಬಾಲ್ ಪುಹುಂದಳಿಕ್ಕುಂ,**
**ತೂದನುಂ ನಾದನು ಮಾಹಿಯ ತೊಲ್ಲತ್ತಿಗಿರಿಚ್ಚುಡರೇ ॥ 3**

ಅರ್ಥ :- ತೂದನುಂ = ಆಳಾಗಿಯೂ, ನಾದನುಂ = ಸ್ವಾಮಿಯೂ, ಆಹಿಯ = ಆಗಿರುವ, ತೊಲ್ = ಅನಾದಿಯಾದ, ಅತ್ತಿಗಿರಿ = ಹಸ್ತಿಗಿರಿಯಲ್ಲಿ (ಬೆಳಗುವ), ಶುಡರೆ = ಜ್ಯೋತಿರೂಪನಾದ ವರದರಾಜನೇ, ಮಾದವನಾಮಮುಂ = ''ಮಾಧವ''ನೆಂಬ ಹೆಸರನ್ನೂ ವಾನ್ = ವಿಲಕ್ಷಣವಾದ, ಗದ್ಯೆ-ನಾನ್ಗುಂ = ನಾಲ್ಕು ಗದೆಗಳನ್ನೂ, ಮಣಿ-ನಿರಮುಂ = ಇಂದ್ರನೀಲಮಣಿಯ ಬಣ್ಣವನ್ನೂ, ಓದುಂ-ಉರ್ೈ-ಪ್ಪಡಿಯೇ = (ವೇದಕ್ಕೆ ಸಮಾನವಾದ) ಭಗವಚ್ಛಾಸ್ತ್ರಗಳಲ್ಲಿ ಹೇಳಿರುವಂತೆಯೇ, ಏಂದಿ = ಧರಿಸಿ, ಉರತ್ತಿಲುಂ = ಎದೆಯಲ್ಲಿಯೂ, ಮೇಲುಂ = ಮೇಲುಗಡೆಯೂ, ನಲ್‌ಹಿ = ಪ್ರೀತಿಯಿಂದ ಪ್ರತಿಷ್ಠಿತನಾಗಿ, ಪೋದು-ಅಲರ್-ಮಾದು-ಉಡನ್ = ಅರಳಿದ ತಾವರೆಯಲ್ಲಿರುವ ಲಕ್ಷ್ಮಿಯ ಸಹಿತನಾಗಿ ಪುಂದಿಯಿಲ್ = (ನನ್ನ) ಅಂತಃಕರಣದಲ್ಲಿ, ಅನ್ಬಾಲ್ = ವಾತ್ಸಲ್ಯಾತಿಶಯದಿಂದ, ಪುಹುಂದ್ = ಪ್ರವೇಶಿಸಿ, ಅಳಿಕ್ಕುಂ = ರಕ್ಷಿಸುವನು.

''ಮಾಧವಂ ಮಣಿಭಂಗಾಭಂ ಚಿಂತಯಾಮಿ ಚತುರ್ಗದಂ'' ''ಇಂದೀವರದಲ ಶ್ಯಾಮೋ ಮಾಧವ ಊರ್ಧ್ವಂ ಗದಾಧರಃ'' ''ಇಂದ್ರನೀಲದಲ ಶ್ಯಾಮಂ ಚತುರ್ಹಸ್ತಂ ಗದಾಧರಂ । ಹೃದಯೇ ಮಾಧವಾಯೇತಿ ಧಾರಯೇದಂಗುಲಾಷ್ಟಕಂ'' ॥ ಇತ್ಯಾದಿ ವಚನಗಳಂತೆ ಮೂರನೆಯ ನಾಮದ ಅದಿಧೇವತೆಯಾದ ''ಮಾಧವ''ನ ವರ್ಣಾಯುಧಗಳನ್ನು ವರ್ಣಿಸಲಾಗುವುದು.

ತಾತ್ಪರ್ಯ :- ಆಶ್ರಿತರ ವಿಷಯದಲ್ಲಿ ವಾತ್ಸಲ್ಯ ಸೌಲಭ್ಯಾದಿ ಗುಣಾತಿಶಯದಿಂದ, ದೌತ್ಯಾದಿ ಕೃತ್ಯಗಳನ್ನು ಮಾಡಿಯೂ ಅದರ ಪ್ರಯುಕ್ತ ಬಂದ ಮೇಲ್ಮೆಯಿಂದ ಸ್ವಯಂ ಸರ್ವಸ್ವಾಮಿಯಾಗಿಯೂ, ಅನಾದಿಕಾಲದಿಂದ ಹಸ್ತಿಗಿರಿಯಲ್ಲೇ ಬೆಳಗುವ ಸ್ವಯಂಜ್ಯೋತೀರೂಪನಾಗಿಯೂ ಇರುವ ವರದರಾಜನು ''ಮಾಧವ''ನೆಂಬ ಹೆಸರನ್ನೂ, ವಿಲಕ್ಷಣವಾದ ನಾಲ್ಕು ಗದೆಗಳನ್ನೂ ಮತ್ತು ನೀಲಮಣಿಯ ವರ್ಣವನ್ನೂ ಧರಿಸಿ, ಭಗವಚ್ಛಾಸ್ತ್ರೋಕ್ತವಾಗಿಯೇ ವಕ್ಷಸ್ಥಳದಲ್ಲೂ ಮತ್ತು ಮೇಲುಗಡೆಯೂ ಬಲು ಪ್ರೇಮದಿಂದ ನೆಲೆಸಿ, ಸರ್ವತ್ರ ಲಕ್ಷ್ಮೀಸಹಿತನಾಗಿಯೇ ಇರುವವನಾಗಿ ಈ ನನ್ನ ಅಂತಃಕರಣದಲ್ಲಿಯೂ ಅತ್ಯಂತ ವಾತ್ಸಲ್ಯದಿಂದ ಪ್ರವೇಶಿಸಿ ರಕ್ಷಿಸುವನು.

**नाथो दूतोऽप्यनादिद्विरदगिरिमहो माधव श्चित्रचर्यः ।**
**प्रीत्योरस्यूर्ध्वभागे चतृसृभिरसमाभि र्गदाभि स्समेतः ।।**
**देवाधीशानरत्नप्रभ इह विकसत्पुष्पयोषाविभूषः ।**
**बुद्धौ न स्सप्रविश्य स्वय मधिकदयो वत्सलो रक्षतीशः ।।** ३

**ಮೂಲ :** **ಗೋವಿಂದನೆನ್ನುಂ ಕುಳಿರ್ಮದಿಯಾಹಿಕ್ಕೊಡಿಯವರ್ರೈ,**
**ಏವುಂದನುಕ್ಕಳುಡನ್ ತೆರ್ಕ್ಕಿಲುಮುಳ್‌ಕಳುತ್ತು ನಿನ್ರು,**
**ಮೇವುಂತಿರುವರುಳಾಲ್ ವಿನ್ನೈತೀರ್ತ್ತೆಮ್ಮೈ ಯಾಣ್ಡರುಳುಂ,**
**ಪೂವನ್ ತೊಳವತ್ತಿ ಮಾಮಲೈಮೇಲ್ ನಿನ್ರಪುಣ್ಣಿಯನೇ ॥** 4

ಅರ್ಥ :- ಪೂವನ್ = (ಹೂವಿನಲ್ಲಿ ಜನಿಸಿದ) ಬ್ರಹ್ಮನು, ತೊಳಿ = ಸೇವೆಮಾಡುವಂತೆ, ಅತ್ತಿ-ಮಾ-ಮಲೈ-ಮೇಲ್ = ಹಸ್ತಿಗಿರಿಯ ಶಿಖರದಲ್ಲಿ, ನಿನ್ರ = ವಿರಾಜಮಾನವಾಗಿರುವ, ಪುಣ್ಣಿಯನ್ = ಶುಭಕರ ಕರ್ಮಪ್ರವರ್ತಕನಾಗಿ ಬೆಳಗುವ ವರದರಾಜನು, ಗೋವಿಂದನ್-ಎನ್ನುಂ = ಗೋವಿಂದನೆಂಬ ನಾಮವುಳ್ಳವನಾಗಿ, ಕುಳಿರ್-ಮದಿ-ಆಹಿ = ಶೀತಲ ಚಂದ್ರಪ್ರಭನಾಗಿ, ಕೊಡಿಯವರ್ರೈ = ಕ್ರೂರ ಜನರನ್ನು ಏವುಂ = ನಿಗ್ರಹಿಸುವಂತಹ, ದನುಕ್ಕಳ್-ಉಡನ್ = ನಾಲ್ಕು ಬಿಲ್ಲುಗಳ ಸಮೇತನಾಗಿ, ತೆರ್ಕ್ಕಿಲುಂ = ದಕ್ಷಿಣದಿಕ್ಕಿನಲ್ಲೂ, ಉಳ್-ಕಳುತ್ತುಂ = ಕಂಠದ ಮುಂಭಾಗದಲ್ಲೂ, ನಿನ್ರು = ಇದ್ದು, ಮೇವುಂ = ಸರ್ವಾದರಣೀಯವಾದ, ತಿರು-ಅರುಳಾಲ್ = ಮಹಾ ದಯೆಯಿಂದ, ವಿನ್ನೈ = ಕರ್ಮಗಳನ್ನು, ತೀರ್ತ್ತು = ನಾಶಗೊಳಿಸಿ, ಎಮ್ಮೈ = ನಮ್ಮನ್ನು, ಆಂಡ್-ಅರುಳುಂ = (ತನ್ನ ಸೇವೆಯಲ್ಲಿ) ವಿನಿಯೋಗಿಸಿ ರಕ್ಷಿಸುವನು.

ತಾತ್ಪರ್ಯ :- ''ಚಂದ್ರಭಾಸಂ ಚತುಶ್ಶಾರ್ಙ್ಗಂ ಗೋವಿಂದಮಭಿ ಸಂಶ್ರಯೇ'' ''ಗೋವಿಂದೋ ದಕ್ಷಿಣೇಪಾರ್ಶ್ವೇ ಧನ್ವೀ ಚಂದ್ರಪ್ರಭೋ ಮಹಾನ್'' ''ಚತುರ್ಭುಜಂ

ಧನುಷ್ಮಂತಂ ಚಂದ್ರಹಾಸ ಸಮದ್ಯುತಿಂ । ಗೋವಿಂದಾಯೇತಿ ಮಂತ್ರೇಣ ಕಂಠಾಗ್ರೇ ಚತುರಂಗುಳಂ ॥'' ಎನ್ನುವಂತೆ ನಾಲ್ಕನೆಯ ನಾಮದೇವತೆಯನ ವರ್ಣಾದಿಗಳನ್ನು ಇದರಲ್ಲಿ ತಿಳಿಸಲಾಗುವುದು.

ಬ್ರಹ್ಮನು ಯಾಗಮಾಡಿದ ವೇದಿಕೆಯಲ್ಲಿ ಆವಿರ್ಭವಿಸಿ, ಆತನಿಂದ ಸೇವೆಗೊಳ್ಳುವ, ಸ್ವಯಂಜ್ಯೋತಿರೂಪನಾದ ಹಸ್ತಿಗಿರಿಯ ದೇವರಾಜನು ''ಗೋವಿಂದ''ನೆಂಬ ಹೆಸರಿನಿಂದ ಆಶ್ರಿತರಿಗೆ ಶುಭಕರ್ಮ ಪ್ರವರ್ತಕನಾಗಿ ಕ್ರೂರ ಜನರನ್ನು ನಿರ್ನಾಮಗೊಳಿಸುವ ನಾಲ್ಕು ಧನುಸ್ಸುಗಳನ್ನೂ, ಅತಿ ಶೀತಲನಾದ ಚಂದ್ರನ ಪ್ರಭೆಯನ್ನೂ ಧರಿಸಿ, ದಕ್ಷಿಣದಿಗ್ಭಾಗದಲ್ಲೂ ಮತ್ತು ನಮ್ಮ ಕಂಠದ ಮುಂಭಾಗದಲ್ಲೂ ಸುಪ್ರತಿಷ್ಠಿತನಾಗಿ, ಸರ್ವಾದರಣೀಯವಾದ ಕೃಪೆಯಿಂದ ನಮ್ಮ ಅನಾದಿಕರ್ಮಗಳನ್ನು ಕೊನೆಗೊಳಿಸಿ, ಪರಿಶುದ್ಧರನ್ನಾಗಿ ಮಾಡಿ, ತನ್ನ ಸೇವೆಯಲ್ಲಿ ಭಾಗಿಗಳನ್ನಾಗಿ ಮಾಡಿ, ಕಾಪಾಡುವನು.

**गोविन्द शिशिरेन्दुभा धृतचतुश्चापश्च पापापहा ।**
**पाथोजासनसेवितः करिमहाद्रीशः शुभप्रेरकः ॥**
**ग्रीवायः पुरतश्च दक्षिणदिशि स्थित्वा दयालुः प्रभुः ।**
**कर्मोन्मूल्य नियोज्य न श्च परिपात्यात्मीयसेवाविधौ ॥** ४

**ಮೂಲ :** ವಿಟ್ಟುವಲವಯಿತ್ತಿನ್ ಕಣ್‌ವಡಕ್ಕುಂ ವಿಡಾದು ನಿನ್ರು,
ಮಟ್ಟವಿಳ್ ತಾಮರೈತ್ತಾದು ನಿರಂಕೊಂಡ ಮೇನಿಯನಾಯ್,
ತೊಟ್ಟ ಕಪ್ಪೈಹಳೀರಿರಣ್ಡಾಲುಂ ತುಯರರುಕ್ಕುಂ,
ಕಟ್ಟೆಳಿರ್ಶೋಲೈಕ್ಕರಿಗಿರಿಮೇಲ್ ನಿನ್ರ ಕರ್ಪಕಮೇ ॥ 5

**ಅರ್ಥ :-** ಕಟ್ಟು = ಸಾಂದ್ರತೆಯಿಂದ, ಎಳಿಲ್ = ಕಂಗೊಳಿಸುವ, ಶೋಲೈ = ತೋಟಗಳಿರುವ, ಕರಿ-ಗಿರಿ-ಮೇಲ್ = ಹಸ್ತಿಗಿರಿಯ ಮೇಲೆ, ನಿನ್ರ = ಪ್ರತಿಷ್ಠಿತನಾದ, ಕರ್ಪಕಂ = ಕಲ್ಪವೃಕ್ಷದಂತಿರುವ ವರದರಾಜನು, ವಿಟ್ಟು = ವಿಷ್ಣುವಾಗಿ, ವಲ-ವಯತ್ತಿನ್-ಕಣ್ = ಉದರದ ಬಲಗಡೆಯಲ್ಲಿಯೂ, ವಡಕ್ಕುಂ = ಉತ್ತರದಿಕ್ಕಿನಲ್ಲಿಯೂ, ವಿಡಾದೇ = ಅಗಲಿರದೇ, ನಿನ್ರ = ನೆಲೆಸಿ, ಮಟ್ಟು = ಮಕರಂದರಸವುಳ್ಳ, ಅವಿಳ್ = ಅರಳಿದ, ತಾಮರೈ = ತಾವರೆಯ, ತಾದು = ಕೇಸರಗಳ, ನಿರಂ = ಬಣ್ಣವನ್ನು, ಕೊಂಡ = ತಾಳಿದ, ಮೇನಿಯನಾಯ್ = ಮೈಯುಳ್ಳವನಾಗಿ, ತೊಟ್ಟ = ಧರಿಸಿರುವ, ಕಲಪ್ಪೈಹಳ್ = ನೇಗಿಲುಗಳ, ಈರ್-ಇರಂಡಾಲುಂ = ನಾಲ್ಕರಿಂದಲೂ, ತುಯರ್ = ದುಃಖಗಳನ್ನು, ಅರುಕ್ಕುಂ = ನಾಶಮಾಡುವನು.

**ತಾತ್ಪರ್ಯ** :- ''ವಿಷ್ಣುಂ ಚತುರ್ಹಲಂ ವಂದೇ ಪದ್ಮಕಿಂಜಲ್ಕಸನ್ನಿಭಂ'' ''ಉತ್ತರೇ ಹಲಧೃಗ್ವಿಷ್ಣುಃ ಪದ್ಮಕಿಂಜಲ್ಕಸನ್ನಿಭಃ'' ''ಚತುರ್ಹಲಧರಂ ದೇವಂ ಪದ್ಮ ಕಿಂಜಲ್ಕ ಸನ್ನಿಭಂ। ವೈಷ್ಣವೋಽಷ್ಟಾಂಗುಲಮಿತಂ ಧಾರಯೇದ್ದಕ್ಷಿಣೋದರೇ॥'' ಇತ್ಯಾದಿ ವಚನಗಳಂತೆ ಐದನೆಯ ನಾಮ ದೇವತೆಯ ವರ್ಣ-ಆಯುಧಾದಿಗಳನ್ನು ಇದರಲ್ಲಿ ಹೇಳಲಾಗಿದೆ.

ಒತ್ತಾಗಿ ಮರಗಳು ಬೆಳೆದಿರುವ ತೋಟಗಳಿರುವ ಹಸ್ತಿಗಿರಿಯ ಮೇಲೆ ವಿರಾಜಿಸುವ ವರದರಾಜನು ಇಂದ್ರನ ನಂದನವನದಲ್ಲಿರುವ ಕಲ್ಪವೃಕ್ಷದಂತೆ, ಆಶ್ರಿತರ ಸಕಲೇಷ್ಟಗಳನ್ನೂ ಕೊಡುವವನಾಗಿ, ''ವಿಷ್ಣು'' ಎಂಬ ಹೆಸರಿನಿಂದ ಸರ್ವವ್ಯಾಪಿಯಾಗಿದ್ದರೂ, ವಿಶೇಷವಾಗಿ ಉದರದ ಬಲಗಡೆಯಲ್ಲಿಯೂ ಉತ್ತರ ದಿಗ್ಭಾಗದಲ್ಲೂ ನೆಲೆಸಿ, ಬೆಳಗುತ್ತಾ, ಮಕರಂದರಸಭರಿತವಾದ ಕಮಲದ ಕೇಸರಗಳ ಬಣ್ಣದ ವಿಗ್ರಹವುಳ್ಳವನಾಗಿ, ತನ್ನ ನಾಲ್ಕು ಕೈಗಳಲ್ಲೂ ಹಲಗಳನ್ನು ಧರಿಸಿ, ನಮ್ಮ ದುಃಖಗಳೆಲ್ಲವನ್ನೂ ಪರಮ ದಯೆಯಿಂದ ಹೋಗಲಾಡಿಸಿ, ಕಾಪಾಡುವನು.

**विष्णु र्दक्षिणकुक्षिभाग मविहायैवोत्तराशां तथा ।**
**निष्यन्दन्मधुफुल्लपद्मसुमनः किञ्जल्कवर्णाकृतिः ।।**
**हस्तालङ्कृतिभि र्भिनत्ति सकलं पापं चतुर्भिर्हलैः ।**
**राजत्सान्द्रपलाशिषण्डकरिगिर्यूर्ध्वस्थकल्पद्रुमः ॥** ५

**ಮೂಲ :** **ಮದುಶೂದನನೆನ್ ವಲಬ್ಬುಯಮ್ತೆನ್ಕಿಳಕ್ಕೆನ್ರಿವತ್ತಿಲ್,**
**ಪದಿಯಾಯಿರುಂದು ಪಣ್ಮಾದುರ್ರೈ ಪಂಗಯವಣ್ಣನುಮಾಯ್,**
**ಮುದುಮಾವಿನ್ನೈಹಳರುಕ್ಕುಂ ಮುಯಲಙ್ಗಳೀರಿರಂಡಾಲ್,**
**ಮದುವಾರಿಳಂ ಪೊಳಿಲ್ ವಾರಣವೆರ್ಪಿನ್ ಮಳೈ ಮುಗಿಲೇ ॥** 6

**ಅರ್ಥ** :- ಮದು = ಜೇನಿನಿಂದ, ಆರ್ = ಪರಿಪೂರ್ಣವಾದ, ಇಳಂ-ಪೊಳಿಲ್ = ಬಾಲೋದ್ಯಾನಗಳಿಂದ ಕಂಗೊಳಿಸುವ, ವಾರಣ-ವೆರ್ಪಿನ್ = ಹಸ್ತಿಗಿರಿಯಲ್ಲಿರುವ, ಮಳೈ-ಮುಗಿಲ್ = ಮಳೆಯನ್ನು ಸುರಿಸುವ ನೀಲಮೇಘದಂತಿರುವ, ವರದ ರಾಜನು, ಮದುಶೂದನನ್ = ಮಧುಸೂದನನೆಂಬ ನಾಮಧೇಯದಿಂದ, ಎನ್ = ನನ್ನ, ವಲ-ಬುಯಂ = ಬಲ ಭುಜ ಮತ್ತು, ತೆನ್-ಕಿಳಕ್ಕು = (ದಕ್ಷಿಣ ಪೂರ್ವ) ಆಗ್ನೇಯದಿಕ್ಕು, ಎನ್ರ್-ಇವತ್ತಿಲ್ = ಎಂಬ ಈ ಸ್ಥಳಗಳಲ್ಲಿ, ಪದಿಯಾಯ್ = ವಾಸಮಾಡಿ, ಇರುಂದು = ಪ್ರತಿಷ್ಠಿತನಾಗಿ, ಪಣ್ = ಸ್ತುತಿಸಲ್ಪಡುವ, ಮಾದು = ಸ್ತ್ರೀಗೆ (ಲಕ್ಷ್ಮಿಗೆ) ಉರೈ = ವಾಸಸ್ಥಾನವಾದ, ಪಂಗಯ = ಕಮಲಪುಷ್ಪದ, ವಣ್ಣನುಂ-ಆಯ್ = ಬಣ್ಣವುಳ್ಳನಾಗಿ, ಮುಯಲಂಗಳ್ = ಮುಸಲಗಳ (ಒನಕೆಗಳ) ಈರ್-ಇರಂಡಾಲ್ = ನಾಲ್ಕರಿಂದ,

ಮುದು = ಹಿಂದಿನ, ಮಾ-ವಿನ್ನೈಹಳ್ = ಮಹಾಪಾತಕಗಳನ್ನು, ಅರುಕ್ಕುಂ = (ಛೇದಿಸಿ) ವಿನಾಶಮಾಡಿ, ಕಾಪಾಡುವವನು.

ತಾತ್ಪರ್ಯ :- ''ಚತುರ್ಮುಸಲಮಬ್ಜಾಭಂ ಸಂಶ್ರಯೇ ಮಧುಸೂದನಂ॥'' ಆಗ್ನೇಯ್ಯಾಂ ಅರವಿಂದಾಭೋ ಮುಸಲೀ ಮಧುಸೂದನಃ ॥ ಮುಸಲಾಸ್ತ್ರಂ ಮಹಾವಿಷ್ಣುಂ ಅರವಿಂದಾಭ ಮೇವಚ । ಮಧುಸೂದನ ಮಂತ್ರೇಣ ಧಾರಯೇತ್ ದಕ್ಷಿಣೇ ಭುಜೇ॥'' ಇತ್ಯಾದಿ ಪ್ರಮಾಣಗಳಂತೆ ಆರನೆಯ ಪುಂಡ್ರದ ಅಧಿದೇವತೆಯ ವರ್ಣ-ಆಯುಧಾದಿಗಳನ್ನು ಇದರಲ್ಲಿ ವಿವರಿಸಲಾಗಿದೆ.

ಮಧುಭರಿತವಾದ ಬಾಲೋಪವನಗಳಿಂದ ಕಂಗೊಳಿಸುವ ಹಸ್ತಿಶೈಲದಮೇಲೆ ಕಾರ್ಮುಗಿಲು ಸದ್ಯಃ ವೃಷ್ಟಿಯನ್ನು ವರ್ಷಿಸುವಂತೆ ಭಕ್ತಾಭೀಷ್ಟಗಳನ್ನು ಕೊಡುವ ವರದರಾಜನೇ, ಮಧುಸೂದನನೆಂಬ ಅಭಿಧಾನದಿಂದ ಅವತ್ತಾರ ವಿಶೇಷವುಳ್ಳವನಾಗಿ, ನಿಖಿಲ ಲೋಕಗಳಿಂದಲೂ ವೇದಗಳಿಂದಲೂ ಸ್ತುತಿಸಲ್ಪಡುವ ಕಮಲವಾಸಿನಿಯಾದ ಮಹಾಲಕ್ಷ್ಮೀರಮಣನಾಗಿ, ಆ ಕಮಲದ ವರ್ಣವನ್ನೇ ತಾನೂ ಧರಿಸಿ, ನಾಲ್ಕು ಮುಸಲಗಳನ್ನು ಹಿಡಿದು, ನಮ್ಮ ಬಲಭುಜದಲ್ಲಿಯೂ, ಆಗ್ನೇಯದಿಗ್ಭಾಗದಲ್ಲಿಯೂ, ಪ್ರತಿಷ್ಠಿತನಾಗಿ, ಪರಮ ದಯೆಯಿಂದ ನಮ್ಮ ಪ್ರಾಚೀನಮಹಾಪಾತಕಗಳನ್ನು ನಾಶಮಾಡಿ ಸಂರಕ್ಷಿಸುವನು.

**माध्वीपूर्णसुवृक्षकोपवनके नागाद्रिशीर्षे स्थितः ।**
**वर्षी सन् मधुसूदनो दिशि शुचेः बाहौ च मे दक्षिणे ॥**
**सर्वोद्गीतरमाधिवासिकमलश्रीः पूर्वकर्मानुगं ।**
**पापौघं मुसलैश्चतुर्भिरिह नः सम्मर्द्य संरक्षति ॥** ६

**ಮೂಲ :** **ತಿರುವಿಕ್ಕಿರಮನ್ ತಿಹಳ್ ತೀನಿರತ್ತನ್ ತೆಳಿವುಡ್ಯೆವಾಳ್,**
**ಉರುವಿಕ್ಕರಂಗಳಲೀರಿರಣ್ಡೇನ್ದಿವಲಕ್ಕಳುತ್ತುಂ,**
**ಶೆರುವಿಕ್ಕಿರಮತ್ತರಕ್ಕರ್ ದಿಕ್ಕುಂ ಶಿರನ್ದಾಡುಮಿರ್ಯೆ,**
**ಮರುವಿಕ್ಕರಿಗಿರಿಮೇಲ್ ವರಂತನ್ದಿಡುಂ ಮನ್ನವನೇ ॥** 7

ಅರ್ಥ :- ಇರ್ಯೆ = ಸರ್ವೇಶ್ವರನಾದ, ಕರಿಗಿರಿಮೇಲ್ = ಹಸ್ತಿಗಿರಿಯ ಮೇಲೆ, ಮರುವಿ = ನಿಯತವಾಗಿ ವಾಸಮಾಡುತ್ತಾ, ವರಂ = ಇಷ್ಟಾರ್ಥಗಳನ್ನು, ತಂದ್-ಇಡುಂ = ಕೊಡುವವನಾದ, ಮನ್ನವನ್ = ರಾಜನು, (ರಾಜನಂತಿರುವ ದೇವರಾಜನು) ತಿರುವಿಕ್ಕಿರಮನ್ = ತ್ರಿವಿಕ್ರಮನೆಂಬ ಅವತಾರ ವಿಶೇಷ ನಾಮಾಂಕಿತನಾಗಿ, ತಿಹಳ್ =

ಜ್ವಲಿಸುವ, ತೀ = ಬೆಂಕಿಯ, ನಿರತ್ತಿನ್ = ಬಣ್ಣವುಳ್ಳವನಾಗಿ, ತೆಳಿವ್-ಉಡೈ = ನಿರ್ಮಲವಾಗಿರುವ, ಈರ್-ಇರಂಡ್-ವಾಳ್ = ನಾಲ್ಕು ಖಡ್ಗಗಳನ್ನು, ಉರುವಿ = ಒರೆಗಳಿಂದ ಹೊರಕ್ಕೆ ತೆಗೆದು, ಕರಂಗಳಿಲ್-ಏಂದಿ = ಕೈಗಳಲ್ಲಿ ಹಿಡಿದು, ವಲ-ಕಳುತ್ತುಂ = ಕತ್ತಿನ ಬಲಗಡೆಯಲ್ಲಿಯೂ ಶೆರು = ಹೆಚ್ಚು, ವಿಕ್ಕಿರಮತ್ತು = ಪರಾಕ್ರಮವುಳ್ಳ, ಅರಕ್ಕರ್ = ರಾಕ್ಷಸರ, ದಿಕ್ಕುಂ = ದಿಕ್ಕಿನಲ್ಲಿಯೂ, (ನೈಋತ್ಯ ದಿಕ್ಕಿನಲ್ಲೂ) ಶಿರಂದು = ಅಟ್ಟಹಾಸದಿಂದ, ಆಡುಂ = ವಿಹರಿಸುವನು.

ತಾತ್ಪರ್ಯ :- ''ಅಗ್ನಿವರ್ಣಂ ಚತುಃಖಡ್ಗಂ ಭಾವಯಾಮಿ ತ್ರಿವಿಕ್ರಮಂ'' ''ತ್ರಿವಿಕ್ರಮಃ ಖಡ್ಗಪಾಣಿಃ ನೈಋತ್ಯಾಂಜ್ವಲನ ಪ್ರಭಃ॥'' ''ಖಡ್ಗಪಾಣಿಂ ಚತುರ್ಹಸ್ತಂ ಅಗ್ನಿಸನ್ನಿಭತೇಜಸಂ । ತ್ರಿವಿಕ್ರಮಂಚ ಮಂತ್ರೇಣ ಧಾರಯೇದ್ದಕ್ಷಿಣೇಗಲೇ॥'' ಇತ್ಯಾದ್ಯುಕ್ತಿಗಳಂತೆ ಏಳನೆಯ ಪುಂಡ್ರದ ಅಧಿದೇವತೆಯ ಹೆಸರು-ರೂಪ-ವರ್ಣ-ಆಯುಧಾದಿಗಳನ್ನು ಇದರಲ್ಲಿ ವಿವರಿಸಲಾಗಿದೆ.

ಒಬ್ಬ ರಾಜನು ತನ್ನ ವಾಸಕ್ಕೆ ದುರ್ಗವೊಂದನ್ನಾರಿಸಿಕೊಳ್ಳುವಂತೆ ವರದರಾಜನು ತಾನು ಸರ್ವೇಶ್ವರನಾಗಿದ್ದರೂ ಹಸ್ತಿಗಿರಿಯನ್ನು ತನ್ನ ನಿತ್ಯವಾಸಕ್ಕಾಗಿ ಆರಿಸಿಕೊಂಡು ಅಲ್ಲಿರುತ್ತಾ, ಭಕ್ತರಿಗೆ ಬೇಕಾದುದೆಲ್ಲವನ್ನೂ ಕಾಲಕಾಲಕ್ಕೆ ಕೊಡುತ್ತಾ, ತ್ರಿವಿಕ್ರಮನೆಂಬ ಹೆಸರಿನಿಂದ ಇಡೀ ಲೋಕವನ್ನೇ ಪಾವನಗೊಳಿಸುವವನಾಗಿ, ತನ್ನ ನಾಲ್ಕು ಕೈಗಳಲ್ಲೂ ಹೊಳೆಯುವ ಕತ್ತಿಗಳನ್ನು ಪಿಡಿದು, ಜಾಜ್ವಲ್ಯಮಾನವಾದ ಅಗ್ನಿಯಂತೆ ಜ್ವಲಿಸುವ ವರ್ಣನಾಗಿ, ನಮ್ಮ ಕಂಠದ ಬಲಗಡೆಯೂ, ಅತ್ಯಧಿಕ ಬಲರಾದ ರಾಕ್ಷಸರು ನೆಲೆಸಿರುವ ನೈಋತ್ಯ ದಿಗ್ಭಾಗದಲ್ಲೂ ವಿಜೃಂಭಿಸುತ್ತಾ ವಿಹರಿಸುವವ್ಯಾಜದಿಂದ ನಮ್ಮ ಅನಿಷ್ಟಗಳನ್ನು ನಿವಾರಿಸಿ ಸದಾ ಕಾಪಾಡುವನು.

**त्रिविक्रम इहेशिता करिगिरौ वसन्निष्टदः ।**
**ज्वलज्ज्वलनभास्वरो वरदराज उत्कोशितान् ।**
**विधृत्य विहरत्यसीन् निजकरै स्समुज्जृम्भितः ।**
**विवृद्धबलरक्षसां दिशि च मे गले दक्षिणे ॥** ೭

ಮೂಲ : ವಾಮನನ್ತೆನನ್ ವಾಮೋದರಮುಂ ವಾಯುವಿನ್ ದಿಶ್ಶೈಯುಂ,
ದಾಮಮಡೈನ್ದು ತರುಣವರುಕ್ಕನ್ ನಿರತ್ತನುಮಾಯ್,
ಶೇಮ ಮರಕ್ಕಲಂ ಶೆಂಪವಿ ಯೀರಿರಂಡಾಲ್ ತಿಹಳುಂ,
ನಾಮಚ್ಚ್ಗಮೇವಿಯ ನಾನ್ಮುಕನ್ ವೇದಿಯಿಲ್
(ವೇಳ್ವಿಯಿಲ್) ನಮ್ಬರನೆ ॥ 8

**ಅರ್ಥ** :- ನಾಮಂಗೈ = ಸರಸ್ವತೀದೇವಿಯಿಂದ, ಮೇವಿಯ = ಸೇವಿಸಲ್ಪಡುವ, ನಾನ್ಮುಹನ್ = ಬ್ರಹ್ಮನ, ವೇದಿಯಿಲ್ = ವೇದಿಕೆಯಲ್ಲಿ ಅವತರಿಸಿದ (ವೇಳ್ವಿಯಿಲ್ ಎಂದು ಪಾಠವಾದರೆ, ಯಾಗದಲ್ಲಿ ಆವಿರ್ಭವಿಸಿದ ಎಂದರ್ಥ), ನಂ = ನಮ್ಮ, ಪರ್ರ = ಸರ್ವಸ್ಮಾತ್ ಪರನಾದ ವರದರಾಜನು, ವಾಮನನ್ = ವಾಮನನೆಂಬ ಹೆಸರಿನಿಂದ, ಏ್ = ನನ್ನ, ವಾಮೋದರಂ = ಉದರದ ಎಡಗಡೆಯನ್ನೂ, ವಾಯುವಿ್ ದಿಶೈಯುಂ = ವಾಯವ್ಯದಿಗ್ಭಾಗವನ್ನೂ, ದಾಮುಂ = ವಾಸಸ್ಥಾನವನ್ನಾಗಿ, ಅಡ್ಡೆಂದ್ = ಪಡೆದು, ತರುಣ-ಅರುಕ್ಕನ್ = ಚಂಡ ಸೂರ್ಯನ, ನಿರತ್ತನುಂ-ಆಯ್ = ವರ್ಣವುಳ್ಳವನಾಗಿಯೂ, ಶೇಮಂ = ಕ್ಷೇಮದಿಂದ, ಮರಕ್ಕಲಂ = ಸಂಸಾರಸಾಗರವನ್ನು ದಾಟಿಸುವ ನಾವೆಯಂತಿರುವವನಾಗಿಯೂ, ಶೆಂ-ಪವಿ-ಈರ್-ಇರಂಡಾಲ್ = ಕೆಂಪಾದ ನಾಲ್ಕು ವಜ್ರಾಯುಧಗಳನ್ನು ಧರಿಸಿ, ತಿಹಳುಂ = ಪ್ರಕಾಶಿಸುವನು.

**ತಾತ್ಪರ್ಯ** :- "ವಾಮನಂ ಬಾಲಸೂರ್ಯಾಭಂ ಚತುರ್ವಜ್ರಂ ವಿಭಾವಯೇ ।"
"ವಾಯವ್ಯಾಂ ವಾಮನೋ ವಜ್ರೀ ತರುಣಾದಿತ್ಯದೀಪ್ತಿಮಾನ್ ॥"
"ಚತುರ್ವಜ್ರಧರಂದೇವಂ ತರುಣಾದಿತ್ಯಸನ್ನಿಭಂ ।"
"ವಾಮನಾಯನಮೋಂತೇನ ವಾಮೇಕುಕ್ಷೌತು ಧಾರಯೇತ್ ॥"
ಇತ್ಯಾದಿ ಪ್ರಮಾಣ ವಚನಾನುಗುಣವಾಗಿ ಎಂಟನೆಯ ನಾಮದ ಅಧಿದೇವತೆಯ. ಹೆಸರು-ರೂಪ-ವರ್ಣ-ಆಯುಧಾದಿಗಳನ್ನು ಇಲ್ಲಿ ತಿಳಿಸಲಾಗಿದೆ.

ಸರಸ್ವತೀವಲ್ಲಭನಾದ ಬ್ರಹ್ಮನು ಸ್ವಾಧೀನ ಸಕಲವೇದನಾಗಿ ನಡೆಸಿದ ಯಾಗದಲ್ಲಿ ವೇದಿಕೆಯಂತಿರುವ ಹಸ್ತಿಶೈಲದಲ್ಲಿ ಆವಿರ್ಭವಿಸಿ, ಪರಾತ್ಪರನಾಗಿ ವಿರಾಜಮಾನನಾದ ವರದರಾಜನು, ಪರಮದಯೆಯಿಂದ ವಾಮನಾವತಾರ ವಿಶೇಷವುಳ್ಳವನಾಗಿ ನಮ್ಮ ಉದರದ ಎಡಭಾಗವನ್ನೂ, ವಾಯವ್ಯದಿಕ್ಕನ್ನೂ ಆಶ್ರಿತಸಂರಕ್ಷಣಾರ್ಥವಾಗಿ ತನ್ನ ನಿತ್ಯ ವಾಸಸ್ಥಾನವನ್ನಾಗಿ ಮಾಡಿಕೊಂಡು, ಪ್ರಚಂಡ ಸೂರ್ಯನಂತೆ ದೇದೀಪ್ಯಮಾನನಾಗಿ, ಸಂಸಾರಿ ಚೇತನರಾದ ತನ್ನ ಭಕ್ತರ ವೃಂದವನ್ನು ಸಂಸಾರ ಸಮುದ್ರದಿಂದ ದಾಟಿಸುವ ನಾವೆಯಂತಾಗಿ, ನಾಲ್ಕು ಕೈಗಳಲ್ಲೂ ವಜ್ರಾಯುಧಗಳನ್ನು ಧರಿಸಿ, ಸರ್ವದಾ ಪ್ರಜ್ವಲಿಸುತ್ತಾ ಸಂರಕ್ಷಿಸುವನು.

**वाग्देवीसमुपासितस्य चतुरास्यस्याध्वरे चोदितः ।**
**स्वामी वामन आददान उदरं वामं च वायो दिशम् ।।**
**धामत्वेन युवार्कसन्निभतनुः क्षेमंकरो नः प्लवः ।**
**वज्रै स्तैश्च चतुर्भिरायुधवरै र्देव श्चकास्ते परः ।। ೭**

ಮೂಲ : ಶೀರಾರ್ ಶಿರೀದನಾಯ್ ಶಿವ‌ರ್ ದಿಕ್ಕುಮಿಡಬ್ಬುಯಮುಂ,
ಏರಾರಿಡಂಕೊಂಡಿಲಂಗುವೆಣ್ತಾಮರೈಮೇನಿಯನಾಯ್,
ಪಾರಾಯಪಟ್ಟಯುಮೀರಿರಣ್ಡಾಲುಂಬಯಮರುಕ್ಕುಂ,
ಆರಾವಮುದತ್ತಿಮಾಮಲೈಮೇಲ್ ಮೇಲ್ ನಿನ್ರವಚ್ಚುತನೇ ॥ 9

ಅರ್ಥ :- ಆರಾ = ತೃಪ್ತಿಯಾಗುವಂತಹ, ಅಮುದು = ಅಮೃತವಾದ, (ಅತ್ಯಂತ ಭೋಗ್ಯತಮನಾದ) ಅತ್ತಿ-ಮಾ-ಮಲೈ-ಮೇಲ್-ನಿನ್ರ = ಹಸ್ತಿಗಿರಿ ಶಿಖರ ನಿವಾಸಿಯಾದ, ಅಚ್ಚುತನೇ = ವರದರಾಜನೇ, ಶೀರ್-ಆರ್ = ಸಕಲ ಕಲ್ಯಾಣಗುಣ ಪರಿಪೂರ್ಣನಾದ, ಶಿರೀದರ್-ಆಯ್ = ಶ್ರೀಧರನೆಂಬ ಹೆಸರಿನಿಂದ, ಶಿವನ್-ದಿಕ್ಕುಂ = ಈಶಾನ ದಿಕ್ಕಾದ ಈಶಾನ್ಯ ದಿಗ್ಭಾಗವನ್ನೂ, ಇಡ-ಬುಯಮುಂ = ಎಡ ಭುಜವನ್ನೂ, ಏರ್-ಆರ್-ಇಡಂ-ಕೊಂಡು = ಅತ್ಯಂತೌಚಿತ್ಯಪೂರ್ಣವಾದ ಸ್ಥಾನವನ್ನಾಗಿ ಸ್ವೀಕರಿಸಿ, ಇಲಂಗು = ಹೊಳೆಯುತ್ತಿರುವ, ವೆಣ್-ತಾಮರೈ = ಬಿಳಿದಾವರೆಯಂತಿರುವ, ಮೇನಿಯನ್-ಆಯ್ = ದಿವ್ಯದೇಹವುಳ್ಳವನಾಗಿ, ಪಾರಾಯ = ಭಾರವಾದ, ಪಟ್ಟಯಂ-ಈರ್-ಇರಂಡಾಲುಂ = ನಾಲ್ಕು ಪಟ್ಟಸವೆಂಬ ಖಡ್ಗವಿಶೇಷಗಳಿಂದಲೂ, ಬಯಂ = (ಆಶ್ರಿತರ) ಭಯವನ್ನು, ಅರುಕ್ಕುಂ = ಕತ್ತರಿಸುವನು (ನಾಶಮಾಡುವನು).

ತಾತ್ಪರ್ಯ :- ''ಶ್ರೀಧರಂ ಪುಂಡರೀಕಾಭಂ ಚತುಃಪಟ್ಟಸಮಾಶ್ರಯೇ ।''
''ಐಶಾನ್ಯಾಂ ಪುಂಡರೀಕಾಭಃ ಶ್ರೀಧರಃಪಟ್ಟಸಾಯುಧಃ॥''
''ಪಟ್ಟಸಾಯುಧಹಸ್ತಂಚ ಪುಂಡರೀಕಾಭಮೇವ ಚ ।''
''ಶ್ರೀಧರಾಯೇತಿ ಮಂತ್ರೇಣ ಭುಜೇ ವಾಮೇತು ಧಾರಯೇತ್ ॥''

ಇತ್ಯಾದಿ ಪ್ರಮಾಣೋಕ್ತಿಗಳಿಗನುಸಾರವಾಗಿ ಒಂಭತ್ತನೆಯ ನಾಮದ ಅಧಿದೇವತೆಯ ಹೆಸರು-ವರ್ಣ-ಆಯುಧಾದಿಗಳು ಇಲ್ಲಿ ನಿರೂಪಿಸಲ್ಪಡುವುವು.

ಎಷ್ಟು ದರ್ಶನಮಾಡಿದರೂ ತೃಪ್ತಿಯೇ ಆಗದಷ್ಟು ಭೋಗ್ಯತಮನಾದ, ಭಕ್ತರ ಹೃದಯದಿಂದೆಂದೂ ಚ್ಯುತನಾಗದಂತಹ, ಹಸ್ತಿಗಿರಿ ಶಿಖರದಲ್ಲಿ ಬೆಳಗುತ್ತಿರುವ ಶ್ರೀ ವರದರಾಜನೇ ಸಮಸ್ತಕಲ್ಯಾಣಗುಣಾಭಿರಾಮನಾದ ''ಶ್ರೀಧರ'' ನೆಂಬ ನಾಮಧೇಯದಿಂದ ಈಶಾನ್ಯ ದಿಗ್ಭಾಗವನ್ನೂ, ಆಶ್ರಿತರಾದ ನಮ್ಮ ಎಡಭುಜವನ್ನೂ ಪರಮಕೃಪೆಯಿಂದ ತನ್ನ ವಾಸಸ್ಥಾನವನ್ನಾಗಿ ಅಂಗೀಕರಿಸಿ, ಪೊಳೆವ ಬಿಳಿದಾವರೆಯಂತೆ ಹೊಳೆಯುತ್ತಾ, ತತ್ಸವರ್ಣ ದಿವ್ಯಮಂಗಳ ವಿಗ್ರಹನಾಗಿ, ಅನ್ಯ ದುರ್ಧರವಾದ ನಾಲ್ಕು ಪಟ್ಟಸವೆಂಬ ಕತ್ತಿಯ ಜಾತಿಯ ಆಯುಧಗಳನ್ನು ಧರಿಸಿ, ಧರ್ಮಾರ್ಥಕಾಮ ಮೋಕ್ಷಗಳೆಂಬ ಪುರುಷಾರ್ಥಗಳಿಗೆ ವಿರೋಧಿಯಾಗುವುದೆಲ್ಲವನ್ನೂ ಒಂದೇ ಸಲಕ್ಕೆ ಕತ್ತರಿಸುವಂತೆ ಸ್ವಾಶ್ರಿತರಿಗೆ ಅಭಯವನ್ನೀಯುತ್ತಾ, ಅವರ ಸರ್ವವಿಧ ಭಯವನ್ನೂ ನಿವಾರಿಸಿ ಪರಿಪಾಲಿಸುವನು.

पूर्णो भव्यगुणै रिभाद्रिशिखरेऽपूर्णामृतः श्रीधरः ।
स्वीकृत्योचित्तधाम वामभुज मप्यैशीं दिशं चाच्युतः ॥
सन्धार्येतरदुर्धरांश्च चतुर स्तान् पट्टसाख्यानसीन् ।
राजत्पाण्डरपद्मसन्निभतनु र्भीतिं भिनत्तीह नः ॥ ९

ಮೂಲ : ಎನ್ನಿರುಡೀಕೇಶನಿರೈ ಕೀಳಿಡಕ್ಕಳುತ್ತೆನ್ರಿವತ್ತಿಲ್,
ನನ್ನಿಲೈಮಿನ್ನುರುವಾಯ್ ನಾಲು ಮುರ್ಗರಂ ಕೊಣ್ಡಳಿಕ್ಕುಂ
ಪೊನ್ನಕಿಲ್ ಶೇರ್‌ನ್ದಲೈಕ್ಕುಂ ಪುನಲ್‌ವೇಗೈವಡಕರೈಯಿಲ್,
ತೆನ್ನನುಹನ್ದುತೊಳುಂ ತೇನ್ನೈವೇದಿಯರ್ ದೆಯ್ವಮೊನ್ರೇ ॥ 10

ಅರ್ಥ :- ಪೊನ್ = ಎಲ್ಲರೂ ಆಸೆಪಡುವಂತಹ, ಅಹಿಲ್ = ಸುಗಂಧದ ವೃಕ್ಷವಿಶೇಷಗಳೊಂದಿಗೆ, ಶೇರ್‌ನ್ದು = ಸೇರಿ, ಅಲೈಕ್ಕುಂ = ಅಲೆಗಳಿಂದ, ಪುನಲ್ = ಹರಿಯುವ, ವೇಗೈ = ವೇಗವತಿಯ, ವಡ-ಕರೈಯಿಲ್ = ಉತ್ತರದ ತೀರದಲ್ಲಿ, ತೆನ್ನನ್ = ದಕ್ಷಿಣ ದಿಕ್ಪತಿಯಾದ ರಾಜನಿಂದ, ಉಹನ್ದು = ಅತ್ಯಾಸೆಪಟ್ಟು,ತೊಳುಂ = ಸೇವಿತನಾದ, ತೇನ್ನೈ = ''ತೇನಂ'' ಎಂಬ ಕಾಂಚಿಯ ಉಪಗ್ರಾಮದಲ್ಲಿವಾಸವಾಗಿರುವ, ವೇದಿಯರ್ = ವೇದಾಧ್ಯಯನ ಮಾಡಿದವರ, ದೆಯ್ವಂ-ಒನ್ರೇ = ಅನನ್ಯದೇವತೆಯಾದ ವರದರಾಜನು, ಎನ್ = ನನ್ನ, ಇರೈ = ಸ್ವಾಮಿಯಾದ, ಇರುಡಿಕೇಶನ್ = ಹೃಷೀಕೇಶನೆಂಬ ಹೆಸರಿನಿಂದ, ಕೀಳ್ = ಕೆಳಗಡೆ, ಇಡ-ಕಳುತ್ತು = ಕುತ್ತಿಗೆಯ ಎಡಭಾಗ, ಎನ್ರ್-ಇವತ್ತಿಲ್ = ಎಂಬ ಸ್ಥಳಗಳಲ್ಲಿ, ನಲ್-ನಿಲೈ = ಒಳ್ಳೆಯ ಸ್ಥಿತಿಯುಳ್ಳವನಾಗಿಯೂ, ಮಿನ್-ಉರುವಾಯ್ = ಮಿಂಚಿನಂತೆ ರೂಪವುಳ್ಳವನಾಗಿಯೂ, ನಾಲು-ಮುರ್ಗರಂ = ನಾಲ್ಕು ಮುದ್ಗರ (ಹಾರೆ)ಗಳನ್ನು, ಕೊಂಡು = ಧರಿಸಿ, ಅಳಿಕ್ಕುಂ = ಸಂರಕ್ಷಿಸುವನು.

ತಾತ್ಪರ್ಯ :- ''ಚತುರ್ಮುದ್ಗರ ಮಭ್ಯೇಮಿ ಹೃಷೀಕೇಶಂ ತಟಿತ್ಪ್ರಭಂ !''
''ವಿದ್ಯುತ್ಪ್ರಭೋ ಹೃಷೀಕೇಶೋಽಹ್ಯವಾಚ್ಯಾಂ ದಿಶಿಮುದ್ಗರೀ ॥''
''ಧರಂತಂ ಮುದ್ಗರಾನ್ ದೋರ್ಭಿಶ್ಚತುರ್ಭಿಃ ವೈದ್ಯುತದ್ಯುತಿಂ ।''
ಹೃಷೀಕೇಶೇತಿ ಮಂತ್ರೇಣ ಧಾರಯೇದ್ವಾಮ ಕಂಧರೇ ॥''

ಇತ್ಯಾದಿ ಪ್ರಮಾಣವಚನಗಳಂತೆ ಹತ್ತನೆಯ ನಾಮದ ದೇವತೆಯ ಹೆಸರು-ವರ್ಣ-ಆಯುಧಾದಿಗಳನ್ನು ತಿಳಿಸಲಾಗುವುದು.

ಅತ್ಯಂತ ಸ್ಪೃಹಣೀಯವಾದ ಅಗರು-ಗಂಧ ಮೊದಲಾದ ವೃಕ್ಷಗಳ ಸಂಬಂಧದಿಂದ ಸುವಾಸನೆಯಾಗಿ ಹರಿಯುವ ವೇಗವತೀನದಿಯ ಉತ್ತರದ ದಡದಲ್ಲಿ ದಕ್ಷಿಣ ದಿಕ್ಕಿನ ಕಡೆ ಇರುವ ರಾಜರಿಂದ ಸುಸೇವಿತನಾಗಿಯೂ, ''ತೇನಂ'' ಎಂಬ ಊರಿನ ಅಧ್ಯಯನ

ಸಂಪನ್ನರೂ, ಜ್ಞಾನ-ವೈರಾಗ್ಯ-ಅನುಷ್ಠಾನನಿಷ್ಠರೂ ಆದ ಭಾಗವತೋತ್ತಮರಿಂದ ಕುಲದೇವತೆಯಂತೆ ಸಮಾರಾಧಿತನಾದ, ಹಸ್ತಿಗಿರಿಯ ವರದರಾಜನು ''ಹೃಷೀಕೇಶ''ನೆಂಬ ಹೆಸರಿನಿಂದ ಮಿಂಚಿನ ಪ್ರತಿಭೆಯುಳ್ಳವನಾಗಿ, ಕಬ್ಬಿಣದ ಹಾರೆಗಳನ್ನು ಹಿಡಿದು ಸದಾ ಆಶ್ರಿತ ಸಂರಕ್ಷಣೆಗಾಗಿಯೇ ಬದ್ಧ ದೀಕ್ಷಿತನಾಗಿ ನನ್ನ ಕಂಠದ ಎಡಭಾಗದಲ್ಲೂ, ಕೆಳದಿಕ್ಕಿನಲ್ಲೂ ನೆಲೆಸಿ ಪರಮ ದಯೆಯಿಂದ ಪರಿಪಾಲಿಸುವನು.

**रोधस्यत्यन्तहृद्ये सुरभितमहितस्रोतसो वेगवत्याः ।**
**नागाद्रीशो ह्यवाच्यां दिशिनृपतिवरै स्सेवितोऽत्यादरेण ।।**
**तेनं ग्रामस्थसाङ्गश्रुतिविदभिजनेशो हृषीकेश एषः ।**
**विद्युद्धा वामकण्ठे ममच धृतचतुर्मुद्गरः पात्यधश्च ॥** १०

**ಮೂಲ :** **ಎಮ್ಬರ್ಪನಾಬನು ಮೆನ್ಪಿನ್ಮನಂ ಪತ್ತಿಮನ್ನಿನಿನ್ರು,**
**ವಮ್ಪೊರ್ಕತಿರವನ್ ಆಯಿರಂಮೇವಿಯ ಮೆಯ್ಯುರುವಾಯ್,**
**ಅಂಪೊರ್ಕರಂಗಳಿಲೈಮ್ಪಡೈಕೊಣ್ಡಂಜಲೆನ್ರಳಿಕ್ಕುಂ,**
**ಶೆಮ್ಪೊನ್ ತಿರುಮದಿಳ್‌ಶೂಳ್ ಶಿನ್ದುರಾಶಲಚ್ಚೇವಕನೇ ॥** **11**

ಅರ್ಥ :- ಶೆಂ-ಪೊನ್ = ಹೊಳೆಯುವ ಚಿನ್ನದಂತಿರುವ, ತಿರು-ಮದಿಳ್ = ಪ್ರಾಕಾರದಿಂದ, ಶೂಳ್ = ಪರಿವೃತವಾದ, ಶಿಂದುರಾಚಲ = ಹಸ್ತಿಶೈಲದಲ್ಲಿರುವ, ಶೇವಕನ್ = ಮಹಾಭಟನಂತಿರುವ ವರದರಾಜನು, ಎಂ = ನಮ್ಮ, ಪರ್ಪನಾಬನ್ = ಪದ್ಮನಾಭನೆಂಬ ಹೆಸರಿನಿಂದ, ಎನ್-ಪಿನ್ = ನನ್ನ ಬೆನ್ನುಭಾಗವನ್ನೂ, ಮನಮುಂ = (ಉಂ ಎಂಬುದನ್ನು ಇಲ್ಲಿಸೇರಿಸಬೇಕು) ಮನಸ್ಸನ್ನೂ, ಪತ್ತಿ = ಆಶ್ರಯಿಸಿ, ಮನ್ನಿ = ಸ್ಥಿರವಾಗಿ, ನಿನ್ರು = ನಿಂತು, ಅಂ = ಸುಂದರವಾದ, ಪೊನ್ = ಬಹಳ ಆಸೆಯಾಗುವಂತಹ, ಕದಿರವನ್-ಆಯಿರ್ = ಸಾವಿರ ಸೂರ್ಯರಂತೆ, ಮೇವಿಯ = ಅತ್ಯಾದರಣೀಯವಾದ, (ಮತ್ತು) ಮೆಯ್ - ಸತ್ಯಸ್ವರೂಪವಾದ, ಉರುವಾಯ್ = ರೂಪವುಳ್ಳವನಾಗಿ, ಅಂ-ಪೊನ್-ಕರಂಗಳಿಲ್ = ರಮಣೀಯ ಸುವರ್ಣವರ್ಣ ಕೈಗಳಲ್ಲಿ, ಐಂ-ಪಡೈ = ಐದು ಆಯುಧಗಳನ್ನು (ಶಂಖ-ಚಕ್ರ-ಗದಾ-ಧನುಸ್ಸು-ಖಡ್ಗಗಳನ್ನು) ಕೊಂಡು = ಹಿಡಿದು, ಅಂಜಲ್ = ಭಯಪಡಬೇಡ, ಎನ್ರು = ಎಂದು, ಅಳಿಕ್ಕುಂ = ಸಂರಕ್ಷಿಸುವನು.

ತಾತ್ಪರ್ಯ :- ''ಪಂಚಾಯುಧಂ ಪದ್ಮನಾಭಂ ಪ್ರಣಮಾಮ್ಯರ್ಕರೋಚಿಷಂ।''
''ಹೃತ್ಪದ್ಮೇ ಪದ್ಮನಾಭೋ ಮೇ ಸಹಸ್ರಾರ್ಕಸಮಪ್ರಭಃ ।''
''ಪಂಚಾಯುಧಧರಂ ದೇವಂ ಸಹಸ್ರಾರ್ಕಸಮಪ್ರಭಂ ।''
''ಪೃಷ್ಠೇ ಸಂಧಾರಯೇತ್ಪದ್ಮನಾಭಾಯೇತಿ ಚ ಮಂತ್ರತಃ ॥''

ಇತ್ಯಾದಿ ವಚನಗಳಂತೆ ಹನ್ನೊಂದನೆಯ ನಾಮದ-ದೇವತೆಯ ಹೆಸರು-ವರ್ಣ-ಆಯುಧಾದಿಗಳು ಇಲ್ಲಿ ನಿರೂಪಿಸಲ್ಪಡುತ್ತವೆ.

ಕಲಿಪುರುಷನು ಪ್ರವೇಶಿಲಾಗದಂತಹುದೂ, ಸುವರ್ಣದಂತೆ ಹೊಳೆಯುವುದೂ ಆದ ಪ್ರಾಕಾರದಿಂದ ಪರಿವೃತವಾದ, ದುರಾರೋಹವಾದ ಪ್ರಬಲ ಗಜದಮೇಲೇರಿ ಕಂಗೊಳಿಸುವ ಯೋಧ ಪುರುಷನಂತೆ, ಹಸ್ತಿಶೈಲದ ಶಿಖರದಲ್ಲಿ ವಿರಾಜಿಸುವ ಪುರುಷೋತ್ತಮನಾದ ವರದರಾಜನು ''ಪದ್ಮನಾಭ''ನೆಂಬ ಹೆಸರಿನಿಂದ ನಮ್ಮ ಬೆನ್ನು ಭಾಗದಲ್ಲೂ, ಮನಸ್ಸಿನಲ್ಲೂ ನೆಲೆಸಿಗೊಂಡು, ಅತಿ ರಮ್ಯವೂ, ಸ್ವರ್ಣವರ್ಣನೂ ಆದ ಸೂರ್ಯನು ಸಾವಿರ ಸಂಖ್ಯೆಯಲ್ಲಿದ್ದಂತೆ ಪ್ರಭೆಯಿಂದ ಕಂಗೊಳಿಸುತ್ತಾ, (ಪಂಚಭೂತಗಳನ್ನೂ, ಇಂದ್ರಿಯಗಳನ್ನೂ, ಪ್ರಾಣಗಳನ್ನೂ ಈ ಪ್ರಪಂಚದಲ್ಲಿ ಏಕಕಾಲದಲ್ಲಿ ಕಾಪಾಡುವವನಾಗಿದ್ದೇನೆಂದು ತೋರುತ್ತಿಹನೋ ಎಂಬಂತೆ) ಪಂಚಾಯುಧಗಳನ್ನೂ ಸುವರ್ಣ ಸುಂದರಹಸ್ತಗಳಲ್ಲಿ ಧರಿಸಿ ಭಕ್ತರಿಗೆ ''ಭಯಪಡಬೇಡಿ'' ಎಂದು ಅಭಯವನ್ನು ನೀಡುತ್ತಾ, ಅನವರತವಾಗಿ ಸಂರಕ್ಷಿಸುವನು.

**संराजत्काश्चन श्रीवरणपरिवृतानेकपाहार्ययोधः ।**
**स्वामीनः पद्मनाभो दृढ मधिहृदय पृष्ठदेशे स्थितश्च ॥**
**सत्याकारोऽभिकाङ्क्ष्यो रुचिररुचिसहस्रार्कवत् रम्यहस्तैः ।**
**धृत्वा पञ्चायुधानि स्वयमवति वदन् माच भैषीरितीह ॥ ११**

**ಮೂಲ : ದಾಮೋದರನೆನ್ತನ್ ದಾಮಂಗಳ್ ನಾಲುಕರಂಗಳಿಲ್‌ಕೊಂಡು,**
**ಆಮೋತರಮೆನ ವಾಹತ್ತಿನುಳ್ ಪುರಂಪಿರ್‌ಕಳುತ್ತುಂ,**
**ತಾಮೋರಿಳಂಕದಿರೋನೆನ ವೆನ್ನುಳಿರುಳರುಕ್ಕುಂ**
**ಮಾಮೋಹಂಮಾತ್ತುಂ ಮದಿಳತ್ತಿಯೂರಿನ್ ಮರಕತಮೇ ॥ 12**

**ಅರ್ಥ** :- ಮಾ-ಮೋಹಂ = ದುರ್ವಾರವೆನಿಸಿರುವ ಅಜ್ಞಾನವನ್ನೂ, ಮಾತ್ತುಂ = ನಾಶಮಾಡುವ, ಮದಿಳ್ = ಪ್ರಾಕಾರವುಳ್ಳ, ಅತ್ತಿ-ಊರಿಲ್ = ಹಸ್ತಿಗಿರಿಯಿಂದಲಂಕೃತವಾದ ಕಾಂಚಿಯಲ್ಲಿ ಪ್ರಕಾಶಿಸುವ, ಮರಕತಂ = ಮರಕತರತ್ನದಂತಿರುವ ವರದರಾಜನು, ಎರ್ತ್-ದಾಮೋದರನ್ = ನನ್ನಸ್ವಾಮಿ ದಾಮೋದರನೆಂಬ ಹೆಸರಿನಿಂದ, (ಆಮೋತರಂ ಎಂಬುದನ್ನು ಹಿಂದುಮುಂದಾಗಿ ''ತರಂ-ಆಮೋ'' ಎಂದು ಅನ್ವಯಿಸಬೇಕು) (ಮತ್ತಾರಾದರೂ) ತರಂ-ಆಮೋ ! = ಸಮಾನವಾಗುವನೋ ! ಎನ = ಎಂಬಂತೆ, ಆಹತ್ತಿನ್-ಉಳ್ = ದೇಹದ ಒಳಗಡೆಯೂ, ಪುರಂ = ಹೊರಗಡೆಯೂ, ಪಿರ್‌ಕಳುತ್ತುಂ = ಕತ್ತಿನ ಹಿಂದುಗಡೆಯೂ, ತಾಂ = ತಾನು, ಓರ್ = ಅಸದೃಶನಾದ, ಇಳಂ = ಎಳೆಯ, ಕದಿರೋನ್-ಎನ = ಸೂರ್ಯನೋ ಎನ್ನುವಂತೆ, (ಪ್ರತಿಷ್ಠಿತನಾಗಿ), ನಾಲು-ಕರಂಗಳಿಲ್

= ನಾಲ್ಕು ಕೈಗಳಲ್ಲೂ, ದಾಮಂಗಳ್ = ಪಾಶಗಳನ್ನು, ಕೊಂಡು = ಧರಿಸಿ, ಎನ್-ಉಳ್ = ನನ್ನ ಅಂತಃಕರಣದಲ್ಲಿರುವ, ಇರುಳ್ = ಅಜ್ಞಾನಾಂಧಕಾರವನ್ನು, ಅರುಕ್ಕುಂ = ನಿರ್ಮೂಲಗೊಳಿಸಿ, ಜ್ಞಾನ ಬೆಳಕನ್ನು ಕೊಟ್ಟು ಪರಿಪಾಲಿಸುವನು.

ತಾತ್ಪರ್ಯ :- ''ದಾಮೋದರಂ ಚತುಃಪಾಶಂ ಇಂದ್ರಕೋಪನಿಭಂ ಭಜೇ ।''
''ಇಂದ್ರಕೋಪಕಸಂಕಾಶಃ' ಪಾಶಹಸ್ತೋಽಪರಾಜಿತಃ ॥''
''ಚತುಃಪಾಶಕರಂ ದೇವಂ ಬಾಲಾರ್ಕಸದೃಶದ್ಯುತಿಂ ।''
''ದಾಮೋದರಾಯ ಮಂತ್ರೇಣ ಧಾರಯೇತ್ಪಶ್ಚಿಮೇ ಗಲೇ ॥''
ಇತ್ಯಾದಿ ಸೂಕ್ತಿಗಳಂತೆ ಹನ್ನರಡನೆಯ ಪುಂಡ್ರದ ದೇವತೆಯ ಹೆಸರು-ವರ್ಣ-ಆಯುಧಾದಿಗಳನ್ನು ಪ್ರತಿಪಾದಿಸಲಾಗುವುದು.

ದೇಹಾತ್ಮಭ್ರಮ-ಸ್ವತಂತ್ರಾಭ್ರಮ-ತತ್ಕಾರ್ಯಗಳನ್ನುಂಟುಮಾಡುವ ಅಜ್ಞಾನವನ್ನು ವಿನಾಶಗೊಳಿಸುವ, ಪ್ರಾಕಾರಗಳಿಂದ ಭೂಷಿತವಾದ, ಹಸ್ತಿಶೈಲದಿಂದ ಅಲಂಕಾರಗೊಂಡ ಕಾಂಚಿಯಲ್ಲಿ ದೇದೀಪ್ಯಮಾನವಾದ ಮರಕತರತ್ನದಂತೆ ಸ್ನಿಗ್ಧಶ್ಯಾಮಲ ಮಂಜುಲೋಜ್ವಲ ದಿವ್ಯಮಂಗಳ ವಿಗ್ರಹನಾದ ವರದರಾಜನು'' ''ದಾಮೋದರ''ನೆಂಬ ಹೆಸರಿನಿಂದ ತನ್ನಂತಹ ಮೂರ್ತಿ ಮತ್ತೊಂದಿಲ್ಲವೆನ್ನುವಂತೆ ಅಭಿವ್ಯಕ್ತನಾಗಿ, ನಮ್ಮಂತರಂಗದಲ್ಲೂ, ಹೊರಗೂ, ಕುತ್ತಿಗೆ ಹಿಂಭಾಗದಲ್ಲೂ ಸುಪ್ರತಿಷ್ಠಿತನಾಗಿ, ಬಾಲಸೂರ್ಯಪ್ರಕಾಶನಾಗಿ, ಸ್ವೇತರಸಮಸ್ತ ಮೂರ್ತಿ ವಿಲಕ್ಷಣನಾಗಿ, ನಾಲ್ಕು ಕೈಗಳಲ್ಲೂ ಪಾಶಗಳನ್ನು ಧರಿಸಿ, ಪ್ರಜ್ವಲಿಸುತ್ತಾ, ನನ್ನ ಅಂತಃಕರಣದಲ್ಲಿರುವ ಅಜ್ಞಾನವೆಂಬ ಕತ್ತಲನ್ನು ನಿವಾರಿಸಿ, ಜ್ಞಾನಪ್ರಕಾಶವನ್ನು ಕೊಟ್ಟು ಸಂರಕ್ಷಿಸುವನು.

**महामोहापोहक्षमवरणकाञ्चीमरकतः ।**
**प्रभुश्चैको दामोदर इह भवेत् किन्विह गले ।।**
**प्रतीचीने मूर्ते बहिरप गतोऽन्तश्च वरदः ।**
**छिनत्ति व्यामोहं दिनमणिनिभ श्च स्वय महो ॥** १२

ಮೂಲ : ಕತ್ತುತ್ತಿರಿಯುಂ ಕಲೈಹಳೈವೆಲ್ಲುಂ ಕರುತ್ತಿಲ್‌ವೈತ್ತು,
ಪತ್ತಿಕ್ಕುರುತುಣ್ಣೈ ಪನ್ನಿರುನಾಮಂ ಪಯಿಲ್ಪವರ್ಕ್ಕು,
ಮುತ್ತಿಕ್ಕುಮೂಲಮೆನವೇ ಮೊಳಿನ್ದವಿಮ್ಮೂನ್ರುನಾನ್ಗುಂ
ತಿತ್ತಿಕ್ಕುಮೆಂಗಳ್‌ತಿರುವತ್ತಿಯೂರರೈಚ್ಚೇರ್ಬವರ್ಕ್ಕೇ ॥ 13

ಅರ್ಥ :- ಪತ್ತಿಕ್ಕು = ಭಕ್ತಿಗೆ, ಉರು = ಅತಿಸಮೀಪವಾದ, ತುಣ್ಣೈ-ಆಂ = ಸಹಾಯವಾಗುವ, ಪನ್ನಿರುನಾಮಂ = (ಕೇಶವಾದಿ) ಹನ್ನೆರಡು ನಾಮಗಳನ್ನು, ಕತ್ತು =

ಕಲಿತು, ತಿರಿಯುಂ = ಸಂಚರಿಸುವ, ಕಲೈಹಳ್ಳೈ = ವಿದ್ಯೆಗಳನ್ನು, ವೆಲ್ಲುಂ = ಜಯಿಸುವಂತಹ, ಕರುತ್ತಿಲ್ = ಮನಸ್ಸಿನಲ್ಲಿ, ವೈತ್ತು = ಇರಿಸಿ (ಗ್ರಹಿಸಿ), ಪಯಿಲ್‌ಬವರ್ಕ್ಕು = ಅಭ್ಯಾಸಮಾಡುವವರಿಗೆ, ಎಂಗಳ್ = ನಮ್ಮ; ತಿರು-ಅತ್ತಿ-ಊರರೈ = ಶ್ರೀ ಹಸ್ತಿಗಿರಿಯಲ್ಲಿ ವಾಸಿಸುವ ವರದರಾಜನನ್ನು, ಶೇರ್ಬವರ್ಕ್ಕು = ಆಶ್ರಯಿಸುವವರಿಗೆ, ಮುತ್ತಿಕ್ಕು = ಮೋಕ್ಷಕ್ಕೆ, ಮೂಲಂ-ಎನ = ಮುಖ್ಯಕಾರಣವೆಂದು, ಮೊಳಿಂದ = ಹೇಳಲಾಗಿರುವ, ಇ-ಮೂನ್ರು-ನಾನ್ಗುಂ = ಈ ಹನ್ನೆರಡು ನಾಮಗಳಿಂದ ಕೂಡಿದ ಗಾಥೆಗಳು, ತಿತ್ತಿಕ್ಕುಂ = ಅಮೃತದಂತೆ ಅತ್ಯಂತ ಭೋಗ್ಯವಾಗುವುವು. ("ಶಿದ್ದಿಕ್ಕುಂ" ಎಂದು ಪಾಠವುಂಟು. ಆಗ ಸಿದ್ಧಿಸುವುವು ಎಂದರ್ಥ.)

ತಾತ್ಪರ್ಯ :- ಭಗವದ್ಭಕ್ತಿವರ್ಧಕಗಳಾಗಿಯೂ, ಭಕ್ತಿಪರೀವಾಹಗಳಾಗಿಯೂ, ಇರುವುದರಿಂದ ಈ ಹನ್ನೆರಡು ನಾಮಗಳನ್ನೂ, "ಸ್ಥಾನ-ರೂಪ-ವರ್ಣ-ಆಯುದಾಧಿ"ಗಳ ಸಹಿತ ಅಭ್ಯಾಸಮಾಡಿ, ಸಕಲ ವಾದಿಗಳನ್ನೂ ಜಯಿಸುವ ಸಾಮರ್ಥ್ಯವನ್ನು ಸಮಸ್ತ ವಿದ್ಯೆಗಳ ಧಾರಣಕ್ಕೆ ವಿದ್ಯಾಸ್ಥಾನದಂತಿರುವ ಮನಸ್ಸಿಗೆ ಉಂಟು ಮಾಡಿಕೊಂಡು, ಜಯಿಸಿ, ತತ್ವಾರ್ಥಗಳನ್ನರಿತು ಈ ನಾಮಾನುಸಂಧಾನವು ಮುಕ್ತಿಗೆ ಮೂಲಕಾರಣವೆಂಬುದನ್ನು ಎಲ್ಲರಿಗೂ ತಿಳಿಸಿ, ಈ ಹನ್ನೆರಡು ಪದ್ಯಗಳನ್ನು ಅಮೃತಲಾಭವಾದಂತೆ ತಿಳಿಯುವರು ಉತ್ತಮ ಭಾಗವತರು. ಈ ಹಸ್ತಿಗಿರಿ ನಾಥನಾದ ವರದರಾಜನ ಪಾದಾರವಿಂದಗಳನ್ನು ಆಶ್ರಯಿಸಿದ ಭಕ್ತಶ್ರೇಷ್ಠರಿಗಲ್ಲದೆ ಮತ್ತಾರಿಗೂ ಇಂತಹ ನಾಮಾಮೃತವು ರುಚಿಸುವುದೂ ಇಲ್ಲ, ಲಭಿಸುವುದೂ ಇಲ್ಲ. ಇದನ್ನು ಕಲಿತವರಿಗೆ ಸಕಲ ಸಿದ್ಧಿಗಳೂ ಸಿದ್ಧಿಸುವುವು.

नामानि द्वादशैतान्यतिनिकटचराण्येव भक्तेरधीत्य ।
भ्राम्यद्वादार्थितन्त्रोद्विदलनविजयिन्यात्मनि ध्यायतां च ॥
श्रीमन्नागाद्रिभूषाश्रितपुरवरदं संश्रितानां प्रभुं नः ।
गाथा श्रैता स्सुभोग्याः परमपदनिदानं हि सिध्यन्ति चार्थाः ॥ १३

॥ श्रीमते निगमान्त महादेशिकाय नमः ॥

वेदान्तार्यगुरूत्तमा अभिदधु र्लोकोपदेशेच्छया ।
गाथा द्वादशनामवैभवजुषः पुण्ड्राधिदेवाश्रिताः ॥
अर्थं देशगिरा गिरा सुमनसां श्लोकांश्च तासां पुनः ।
श्रीमद्देशिकवर्य एव कृपया गोपालतोऽकारयत् ॥

श्री देशिकप्रबन्धस्य: भागो द्वादशनामकः ।
सार्थः संश्लोकित ष्चाप पूर्णतां प्रीयतां गुरुः ॥

॥ಶ್ರೀ ॥

॥ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ॥

# ತಿರುಮಂತಿರಚ್ಚುರುಕ್ಕು

ಮೂಲ : ನಾವಲರ್ ಮರ್ೈನಾಲೊನ್ರುಂ ನಲನ್ತಿಹಳ್‌ಮರ್ೈಯೊನ್ರೋರ,
ತಾವಲುಪ್ಪಲೈಕ್ಕು ಮೋಹತ್ತುಳುಂದಿನಿನ್ರಲಮರ್‌ಕಿನ್ರೀರ್ !
ತೂವಲಂಬುರಿಯಾಮೊನ್ರಿಲ್‌ತುಲಕ್ಕಮಾಮಣಿವಣ್ಣನೊನ್ರಾಲ್
ಕಾವಲೆನ್ರಕರತ್ತವ್ವಾಯ್‌ಕ್ಕರುತ್ತರಕ್ಕಾಣ್ಮಿನೀರೇ ॥ 1

ಅರ್ಥ :- ತಾವು = ಧಾವನ (ಓಟ)ದಿಂದಲೂ, ಅಲುಪ್ಪು = ನಿರ್ವೇದನದಿಂದಲೂ, ಅಲೈಕ್ಕುಂ = ಅಲೆದಾಡಿಸುವ, ಮೋಹತ್ತು = ಅಜ್ಞಾನದಲ್ಲಿ, ಅಳುಂದಿ -ನಿನ್ರು = ಮಗ್ನರಾಗಿರುತ್ತಾ, ಅಲಮರುಹಿನ್ರೀರ್ = ಗಾಬರಿಗೊಂಡಜನರೇ ! ನಾವ್ = ನಾಲಿಗೆಯಲ್ಲಿ, ಅಲರ್ = ವಿಕಾಸಗೊಳ್ಳುವ, ಮರ್ೈ-ನಾಲುಂ = ನಾಲ್ಕು ವೇದಗಳೂ, ಒನ್ರು = ಒಂದಾಗಿ ನಲಂ-ತಿಹಳ್ = ಆನಂದದಿಂದ ಪ್ರಕಾಶಿಸುವ, ಮರ್ೈ-ವೇದವೆಂದು, ಓರ = ಭಾವಿಸುವಂತಿರುವ, ತೂ = ಪರಿಶುದ್ಧವಾದ, ವಲಂಬುರಿ-ಆಂ = (ಶಂಖರೂಪದ) ಅಕ್ಷರಾತ್ಮಕವಾದ, ಒನ್ರಿಲ್ = ಒಂದರಲ್ಲಿ (ಪ್ರಣವದಲ್ಲಿ) ತುಲಕ್ಕ = ನಿರ್ಮಲವಾದ, ಮಾ-ಮಣಿವಣ್ಣಂ = ಮಹಾಮಣಿ ಸ್ವಭಾವದ, ಒನ್ರಾಲ್ = ಒಂದು ವಸ್ತುವಿನಿಂದ (ಭಗವಂತನಿಂದ) ಕಾವಲ್ = ರಕ್ಷಣೆಯು, ಎನ್ರ = ಎಂಬ, ಅಕರತ್ತಹವಾಯ್ = ಅಕಾರದ ತಾತ್ಪರ್ಯಾರ್ಥ್ಯವನ್ನು, ಕರುತ್ತು = ಮನಸ್ಸಿನಲ್ಲಿ, ಉರ = ನೆಲೆಗೊಳ್ಳುವಂತೆ, ಕಾಣ್ಮಿನೀರ್ = (ಉಪದೇಶವು ವ್ಯರ್ಥವಾಗದಂತೆ) ಕಾಣುವವರಾಗಬೇಕು.

ತಾತ್ಪರ್ಯ :- ಅನಾದಿಕರ್ಮದಿಂದ ವಿವಿಧ ಜನ್ಮಗಳಲ್ಲಿ ಓಡೋಡಿ, ನಿರ್ವಿಣ್ಣರಾಗುವಂತೆ ಅಲೆದಾಡಿಸುವ ಅಜ್ಞಾನಾಂಧಕಾರದಲ್ಲೇ ಚಿರಕಾಲವಿದ್ದು, ಗಾಬರಿಗೊಂಡ ಮಾನವರೇ! ಅಧ್ಯಯನಮಾಡಿದಷ್ಟೂ ನಾಲಿಗೆಗೆ ಉಲ್ಲಾಸಕರವಾದ ನಾಲ್ಕು ವೇದಗಳೂ ಒಂದೇ ಆಗಿ ಅತಿ ಸಂತೋಷದಿಂದ ಬೆಳಗುವ ವೇದವೋ ಎಂಬಂತೆಯೂ, ಅತಿಧವಳವಾದ ಶಂಖವೋ (ಶಂಖಧ್ವನಿಯೋ) ಎಂಬಂತೆಯೂ, ಇರುವ ಅಕ್ಷರಾತ್ಮಕವಾದ ಪ್ರಣವದಲ್ಲಿ ಅಡಗಿರುವ ಮೊದಲಾಕ್ಷರವಾದ ಅಕಾರದ ಅರ್ಥವು ''ಮಹಾಮಣಿ ವರ್ಣನಾದ ಭಗವಂತನೇ ಸರ್ವರಕ್ಷಕನು'' ಎಂದು ದೃಢವಾಗಿ ಮನಸ್ಸಿನಲ್ಲಿ ಅನುಸಂಧಾನ ಮಾಡಿ, ಲಭಿಸಿದ ಉಪದೇಶವು ವ್ಯರ್ಥವಾಗದಂತೆಯೂ, ಅಪಾರ್ಥೋಪದೇಶಕರ ಬಲೆಗೆ ಸಿಗದಂತೆಯೂ ಬಾಳಿ, ಉಜ್ಜೀವಿತರಾಗಿ.

निर्वेदात् प्रविधावनात् अटयितर्यज्ञानवार्धौ चिरं ।
मग्नाः ! विह्वलिताः उपेत्य रसनोल्लासागमा एकताम् ।
एकैव श्रुति रेकवर्णकलितेवानन्ददात्रादिमे ।
वर्णे च प्रणवस्य निर्मलमहामण्येकशीलावनम् ॥
व्यक्तं तात्पर्यमेवं हीत्यनुसन्धाय मानसे ।
स्थिरीकुरुत निर्बाधं अकारार्थविमर्शनम् ॥ २

ಮೂಲ : ಇಳಕ್ಕಮಿಲ್ಮಯಕ್ಕಂತನ್ನಾಲ್ ಎನಕ್ಕುನಾನುರಿಯೇನೆನ್ನುಂ,
ಕಳಕ್ಕರುತ್ತೊನ್ರೇಕೊಂಡು ಕಡುನರಹಡ್ಯೆಂದುನಿನ್ರೀರ್,
ವಿಳಕ್ಕು ಮವ್ವೆಳುತ್ತಿನಾಲಾಂ ವೇಟ್ರುಮೈಯೇಟ್ರಿವಾಂಗಿ,
ತುಳಕ್ಕಮಿಲಡಿಮೈಪೂಣ್ಡು ತೂಯರಾಯ್‌ವಾಳ್‌ಮಿನೀರೇ ॥ 2

ಅರ್ಥ :– ಇಳಕ್ಕಂ-ಇಲ್ = ಶಿಥಿಲವಾಗದ (ದೃಢವಾದ) ಮಯಕ್ಕಂ-ತನ್ನಾಲ್ = ಅಜ್ಞಾನದಿಂದ, ಎನಕ್ಕು-ನಾನ್-ಉರಿಯೇನ್-ಎನ್ನುಂ = ನನಗೆ ನಾನೇ ಸ್ವತಂತ್ರನೆಂಬ, ಕಳ-ಕರತ್ತು-ಒನ್ರೇ = ವಿರುದ್ಧವಾದ ಬುದ್ಧಿಯೊಂದನ್ನೇ, ಕೊಂಡು = ಅವಲಂಬಿಸಿ, ಕಡು-ನರಹು = ಕ್ರೂರನರಕಗಳನ್ನು (ಸ್ವರೂಪವಿರುದ್ಧವಾದ ಸಾಂಸಾರಿಕ ಜಗತ್ತುಗಳನ್ನು) ಅಡ್ಯೆಂದು=ಪಡೆದು, ನಿನ್ರೀರ್ = ಚಿರಕಾಲನಿಂತಿರುವ ಮಾನವರೇ ! ಅ-ಎಳತ್ತು = ''ಅ'' ಎಂಬ ಅಕ್ಷರವನ್ನು, ವಿಳಕ್ಕುಂ = ಪ್ರಕಾಶ ಪಡಿಸುವ, ನಾಲಾಂ = ನಾಲ್ಕನೆಯ, ವೇಟ್ರುಮೈ = ವಿಭಕ್ತಿಯನ್ನು, ಏತ್ತಿ = ಸೇರಿಸಿ, ವಾಂಗಿ = ಲೋಪಮಾಡಿ, ತುಳಕ್ಕಂ-ಇಲ್ = ಚಲನವಿಲ್ಲದ (ಮರೆಯದ) ಅಡಿಮೈ = ದಾಸ್ಯವನ್ನು, ಪೂಂಡು = ಬಿಡದೆ ಕೈಗೊಂಡು, (ಒಪ್ಪಿಕೊಂಡು) ತೂಯರಾಯ್ = ಅತಿಪರಿಶುದ್ಧರಾಗಿ, ವಾಳ್ = ಮಿನೀರ್ = ಬಾಳಿರಿ.

ತಾತ್ಪರ್ಯ :– ಏ ಮಾನವರೇ ! ಸ್ವರೂಪಕ್ಕೆ ವಿರುದ್ಧವಾದ ಸಾಂಸಾರಿಕ ಜಗದ್ರೂಪವಾದ ಕ್ರೂರನರಕದಲ್ಲೇ ಚಿರಕಾಲದಿಂದಿರುವಿರಿ. ಕಾರಣ: ಸ್ವಲ್ಪವೂ ಕಡಿಮೆಯಾಗದ ಅಜ್ಞಾನದಿಂದ ''ನನಗೆ ನಾನೇ ಸ್ವತಂತ್ರ'' ಎಂಬ ಅತಿವಿರುದ್ಧ ಬುದ್ಧಿಯುಳ್ಳವರಾಗಿರುವಿರಿ. ಅಕಾರ-ಉಕಾರ-ಮಕಾರಾತ್ಮಕವಾದ ಪ್ರಣವದಲ್ಲಿರುವ ಅಕಾರಕ್ಕೆ ಶಬ್ದಸಾಧುತ್ವ ದೃಷ್ಟಿಯಿಂದಲೂ, ಅರ್ಥಸಾಧುತ್ವ ದೃಷ್ಟಿಯಿಂದಲೂ ಬಲು ಸೊಗಸಾಗಿ ಪರಿಷ್ಕರಿಸುವಂತಹ ಚತುರ್ಥೀ ವಿಭಕ್ತಿಯನ್ನು ಸೇರಿಸಿಯೂ, ಲೋಪಮಾಡಿಯೂ ''ಲುಪ್ತಚತುರ್ಥಿಯ ತಾತ್ಪರ್ಯ ವಿಷಯವಾದ ಭಗವದ್ದಾಸ್ಯವು ನಮ್ಮಲ್ಲೇ'' ಎಂದು ಅನುಸಂಧಾನಮಾಡಿ, ''ಕ್ಷೇತ್ರಜ್ಞಸ್ಯೇಶ್ವರ ಜ್ಞಾನಾತ್ ವಿಶುದ್ಧಿಃಪರಮಾಮತಾ'' ಎಂಬಂತೆ ಉಪಾಯಾನರ್ಹತೆ ಯಿಲ್ಲದವದಾಗಿ, ಸಕಲ ಚೇತನರೂ ಶ್ರೀಮನ್ನಾರಾಯಣನ ಶೇಷಭೂತರು. ದಾಸ್ಯವು ನಮಗೆಂದು ಭಾವಿಸಿ, ಪರಿಶುದ್ಧ ಬುದ್ಧಿಯುತರಾಗಿ, ಬಾಳನ್ನುಹಸನಾಗಿಸಿ, ಬೆಳಗಿಸಿಕೊಳ್ಳಿ.

आत्मा स्वस्मै स्वतन्त्र स्त्वितिविमतमनीषैकनिष्ठाः प्रगाढात् ।
मोहात् क्रूराघलोकान् अधिवसनपराः ! द्योतयन्ती मवर्णम् ।।
संयोज्यपोह्य सार्थां समवनकृदकारस्य तुर्यां विभक्तिं ।
शेषत्वं चाभ्युपेता अशिथिल मिह संजीवतात्यन्तपूताः ।। २

ಮೂಲ : ಅಪ್ಪೊರುಳಿಹಳ್‌ನ್ದು ಮತ್ತುಂಕಳಿನ್ದೆಳುವಾರ್‌ತಾಳಿಲ್,
ಇಪ್ಪೊರುಳಿಹಳ್‌ನ್ದನವನ್ಬಾಲ್ ಇರಂಗಿನೀರ್ ವಣಂಗಿವೀಳ್‌ವೀರ್,
ಉಪ್ಪೊರುಳುಳ್ಳಿಮತ್ತೋರುಯಿರ್ ಹಳುಕ್ಕುರಿಮ್ಮೈಮಾತ್ತಿ,
ಎಪ್ಪೊರುಳ್‌ಪಯನುಮೀದೆನ್ರೆಣ್ಣೀರೆಳುಮಿನೀರೇ ॥ 3

ಅರ್ಥ :- ನೀರ್ = (ಅನ್ಯಶೇಷತಾ ಭ್ರಮವನ್ನು ಬಿಡದ) ನೀವು, ಅ-ಪೊರುಳ್ = (ಪೂರ್ವೋಕ್ತ) ಅಕಾರಾರ್ಥವನ್ನು, ಇಹಳ್‌ನ್ದು = ತ್ಯಜಿಸಿ, (ಒಪ್ಪದೆ) ಮತ್ತುಂ = ಮತ್ತೂ ಉಳಿದ ಐಶ್ವರ್ಯಾದಿಗಳೂ, ಕಳಿನ್ದು = ಬಿಡಲ್ಪಟ್ಟು, ಅಳಿನ್ದು = ಅಳಿದು, ಎಳುವಾರ್ = ಉತ್ಪನ್ನರಾಗುವವರ, (ಅತ್ಯಲ್ಪೈಶ್ವರ್ಯರಾಗಿ ಉತ್ಪತ್ತಿವಿನಾಶ ಯೋಗಿಗಳಾದ ಕ್ಷುದ್ರದೇವತೆಗಳ) ತಾಳಿಲ್ = ಪಾದಗಳಲ್ಲಿ, ಇಪ್ಪೊರುಳ್ = ಈ ಅರ್ಥದಲ್ಲಿ (ಕಾಣುವ ಅಲ್ಪಪುರುಷಾರ್ಥಗಳಲ್ಲಿ) ಇಹಳ್‌ನ್ದ-ಅನ್ಬಾಲ್ = ಪ್ರೀತಿಯನ್ನು ಬಿಟ್ಟು, ಇರಂಗಿ = ಇಳಿದುಹೋದ ಮನಸ್ಸುಳ್ಳವರಾಗಿ, ವಣಂಗಿ = ಪ್ರಣತರಾಗಿ, ವೀಳ್‌ವೀರ್ = ಅಧೋಗತಿಗಿಳಿಯುವ ಮಾನವರೇ ! ಉಪ್ಪೊರುಳ್ = ಉದಾರವಾದರ್ಥಗಳನ್ನು, ಉಳ್ಳಿ = ಮನಸ್ಸಿಗೆ ತಂದುಕೊಂಡು, ಮತ್ತೋರ್ = ಭಗವದ್ವ್ಯತಿರಿಕ್ತವಾದ, ಉಯಿರ್‌ಹಳುಕ್ಕು = ಚೇತನರಿಗೆ, ಉರಿಮ್ಮೈ = ಶೇಷವಾಗುವಿಕೆಯನ್ನು, ಮಾತ್ತಿ = ಪರಿತ್ಯಜಿಸಿ, (ದೇವತಾಂತರ ಸಂಸರ್ಗಾದಿಗಳನ್ನು ಬಿಟ್ಟು) ಎಪ್ಪೊರುಳ್ ಪಯನುಂ = ಸಮಸ್ತಾರ್ಥಗಳ ಫಲವೂ, ಈದು = ಇದುವೇ, ಎನ್ರು-ಎಣ್ಣಿ = ಎಂದು ತಿಳಿದು, ನೀರ್ = (ಇಂತಹ ನಿಷ್ಠೆಯುಳ್ಳ) ನೀವು, ಎಣ್ಣೀನೀರ್ = ಪರಿಗಣಿಸಿದವರಾಗಿ, ಎಳುಮಿನೀರ್ = ಪ್ರಕಾಶಿಸಿರಿ, (ಭಗವದೇಕ ಮಾಶ್ರಿತರಾಗಿ ಬಾಳಿರಿ.)

ತಾತ್ಪರ್ಯ :- ಓ ಮಾನವರಿರಾ ! ''ಭಗವದಿತರರಿಗೆ ಶೇಷರು ನಾವು'' ಎಂಬ ಅಜ್ಞಾನವನ್ನು ಬಿಡದಿರುವ ನೀವು ಹಿಂದೆ ಹೇಳಿದಂತಹ ಅಕಾರಾರ್ಥವನ್ನು ಮನಸ್ಸಿಗೆತಂದುಕೊಳ್ಳದೆ ಉಳಿದೈಶ್ವರ್ಯವನ್ನು ಕಳೆದುಕೊಂಡಿರಿ. ಜನನ ಮರಣ ಯೋಗಿಗಳಂತಹ ಕ್ಷುದ್ರದೇವತೆಗಳಕಾಲಿಗೆಬಿದ್ದು ಅತ್ಯಲ್ಪ ಪುರುಷಾರ್ಥ ಪ್ರಾಪ್ತಿಯುಳ್ಳವರಾದಿರಿ. ಕೊನೆಗೆ ಅದರಲ್ಲೂ ನಿರಾಶರಾಗಿ ಅಧೋಗತಿಗಿಳಿದು ವಿನಾಶೋನ್ಮುಖರಾಗುತ್ತಿರುವಿರಿ. ಆದುದರಿಂದ ''ಆ ಪರಮಾತ್ಮನಾದ

ಶ್ರೀಮನ್ನಾರಾಯಣನೇ ಸರ್ವಶೇಷಿಯು, ಉಳಿದವರೆಲ್ಲ ಅವನ ಶೇಷಭೂತರು, ಅವನೇ ಸಕಲಸಂರಕ್ಷಕನು'' ಎಂಬ ಉದಾರವಾದ ಅರ್ಥವನ್ನು ಕೊಡುವ ಪ್ರಣವಾಕಾರದರ್ಥವನ್ನು ಅರಿತು, ಅನುಸಂಧಾನ ಮಾಡಿ, ಭಗವದ್‌ವ್ಯತಿರಿಕ್ತರಿಗೆ ಶೇಷರೆಂಬುದನ್ನು ಬಿಟ್ಟು, ಸಮಸ್ತವೇದಗಳೂ, ಶಾಸ್ತ್ರಗಳೂ ಈ ಅರ್ಥವನ್ನೇ ಸಾರುತ್ತವೆಂದು ತಿಳಿದು, ಆ ವೇದಶಾಸ್ತ್ರಗಳ ಫಲಿತಾರ್ಥವೇ ಇದೆಂದು ದೃಢವಾಗಿ ನಂಬಿ, ಭಗವದೇಕಸಮಾಶ್ರಯಣಪ್ರವಣರಾಗಿ, ನಿಮ್ಮ ಬಾಳನ್ನು ಬೆಳಗಿರಿ.

त्यक्तोक्ताकारवाच्या व्यपगतविभवा ये विनश्यन्ति भूयः ।
जायन्ते चेदृशानां प्रणमितशिरसः पादयोः प्रीत्यपेताः ।।
यातारोऽथ श्च मर्त्याः ! भगवदितरशेषत्वरिक्ताः उदारान् ।
वेदार्थान्ध्यायमाना अखिलफलमिदं हीति राराजतेह ।। ६

ಮೂಲ : ಎನ್ರುಮೋರೇತಮಿನ್ರಿ ಯಿರವಿಯುಮೊಳಿಯುಂಪೋಲ,
ಒನ್ರಿನಿನ್ರುಲಹಳಿಕ್ಕುಮುಗಮಿಹಳ್‌ನ್ದಡಿಮ್ಮೈವೈತ್ತೀರ್,
ಒನ್ರುಮೂನ್ರೆಳುತ್ತಾಯೊನ್ರುಮೊನ್ರಿಲೊನ್ರುಡೈಯಮುನ್ನೇ,
ಒನ್ರಿಯವಿರಂಡ್ಡೈಯುಳ್ಳಿಯುಳರೆನವುಯ್‌ಮಿನೀರೇ ॥ 4

ಅರ್ಥ :- ಎನ್ರುಂ = ಯಾವಕಾಲದಲ್ಲೂ, ಓರ್-ಏತಂ-ಇನ್ರಿ = ಯಾವುದೊಂದು ಅವದ್ಯವೂ ಇಲ್ಲದೆ, ಇರವಿಯುಂ-ಒಳಿಯಂ-ಪೋಲ = ಸೂರ್ಯನೂ ಪ್ರಭೆಯೂ ಇರುವಂತೆ, ಒನ್ರಿ-ನಿನ್ರು = ಒಂದಾಗಿದ್ದು (ನಿತ್ಯಸಂಶ್ಲಿಷ್ಟರಾಗಿ) ಉಲಹು = ಲೋಕಗಳನ್ನು, ಅಳಿಕ್ಕುಂ = ರಕ್ಷಿಸುವಂತಹ, ಉಗಂ = ಜೋಡಿಯನ್ನು (ದಿವ್ಯದಂಪತಿಗಳನ್ನು) ಇಹಳ್‌ನ್ದು = ತ್ಯಜಿಸಿ, ಅಡಿಮ್ಮೈ = ದಾಸ್ಯವನ್ನು (ಕೇವಲ ಭಗವಂತನಲ್ಲಿ) ವೈತ್ತೀರ್ = ಇಟ್ಟಿರುವ ಮನುಜರೇ ! ಒನ್ರು = ಒಂದಾಗುವ, ಒನ್ರಿಲ್ = ಒಂದು ಪದದಲ್ಲಿ, ಒನ್ರುಡೈಯ = ಒಂದುವರ್ಣದ, ಮುನ್ನೇ = ಪೂರ್ವಭಾಗದಲ್ಲಿ, ಒನ್ರಿಯ = ಏಕೀಭವಿಸಿದ ಇರಂಡ್ಡೈ = ಎರಡು ವರ್ಣಗಳನ್ನು, ಉಳ್ಳಿ = ಅನುಸಂಧಾನ ಮಾಡಿ, ಉಳರೆನ = ಸಾತ್ವಿಕರೆಂದು, ಉಯ್‌ಮಿನ್ = ಉಜ್ಜೀವಿಸಿರಿ.

ತಾತ್ಪರ್ಯ :- ಸೂರ್ಯ ಮತ್ತು ಅವನ ಪ್ರತಿಭೆಯಂತೆ ಒಬ್ಬರನ್ನೊಬ್ಬರು ಎಂದಿಗೂ ಅಗಲದೆ ಒಂದಾಗಿರುತ್ತಾ ಲೋಕಗಳನ್ನು ಸಂರಕ್ಷಿಸುವ ಆ ದಿವ್ಯದಂಪತಿಗಳಾದ ಲಕ್ಷ್ಮೀನಾರಾಯಣರಿಗೆ ಸ್ವತಃ ಶೇಷರು ತಾವು ಎಂದರಿಯದೇ, ಭಗವಂತನಿಗೆ ಮಾತ್ರ ದಾಸಭೂತರೆಂದಿರುವ ಮಾನವರೇ ! ವೇದದಲ್ಲಿ ಮೂರಕ್ಷರಗಳ ಸಮುದಾಯ ರೂಪವು ಒಂದೇ ಅಕ್ಷರ ಎಂದು ಪ್ರಸಿದ್ಧವಾಗಿ, ಸಂಹಿತೇತರದೆಸೆಯಲ್ಲಿ ಒಂದೇ ಅಕ್ಷರವಾಗುವ

ಪ್ರಣವರೂಪ ವಿಲಕ್ಷಣಶಬ್ದದಲ್ಲಿ ಅಕಾರ-ಉಕಾರಗಳು ಏಕಾರ್ಥಭಾವದಿಂದ ಇತರೇತರ ದ್ವಂದ್ವಸಮಾಸಾನುಸಾರವಾಗಿ ಸರ್ವಶೇಷಿ ನಾರಾಯಣನನ್ನೂ ಸ್ವಪತೀತರಸರ್ವಶೇಷಿಣೀ ಮಹಾಲಕ್ಷ್ಮಿಯನ್ನೂ, ''ಅಕಾರೇಣೋಚ್ಯತೇವಿಷ್ಣುಃ'' ಸರ್ವಲೋಕೇಶ್ವರೋಹರಿಃ । ಉಕಾರೇಣೋಚ್ಯತೇಲಕ್ಷ್ಮೀಃ ಸರ್ವಲೋಕೇಶ್ವರೀತಥಾ ।।'' ಎಂಬಂತೆ ತಿಳಿಸುತ್ತವೆ. ಅನಂತವಿರುವ ಮಕಾರಾರ್ಥ ಜೀವನು ''ಮಕಾರಸ್ತು ತಯೋರ್ದಾಸಃ'' ಎಂಬಂತೆ ''ಆ ದಿವ್ಯದಂಪತಿಗಳಿಗೆ ಶೇಷನು'' ಎಂದು ಅನುಸಂಧಾನ ಮಾಡಿ, ಸಜ್ಜನರಾಗಿ, ಉಜ್ಜೀವಿಸಿರಿ.

**नित्याश्लिष्टानवद्यौ दिनमणिरिव भा चैकभावौ पती नः ।**
**त्यक्त्वा लोकावितारौ कृतपरिचरणा मानवाः ! विष्णुमात्रे ।।**
**एकीभूतत्रिवर्णात्मकपदगतयो वर्णयो स्सार मर्थं ।**
**ध्यायं ध्यायं प्रबुद्धाः विमृशत सततं सन्त उज्जीवतेह ।।** ४

**ಮೂಲ :** ತತ್ತುವಮರುನಾನ್ಗೋಡು ತನಿಯಿರೈಯನ್ರಿ ನಿನ್ರ,
ಶಿತ್ತಿನೈಯುಣರಾದೆನ್ರುಂ ತಿರಳ್‌ತೊಹೈಯಾಹಿ ನಿನ್ರೀರ್,
ಮತ್ತನೈತ್ತನಿವಿಡಾದೇ ಮೈಯಿಲಾವಿಳಕ್ಕಮಾಕ್ಕಿ,
ಉತ್ತಮನಡಿಮೈಯಾನ ವುಯಿರ್‌ನಿಲೈಯುಣರ್‌ಮಿನೀರೇ ॥ 5

**ಅರ್ಥ** :- ತತ್ತುವಂ = ತತ್ವಗಳ, ಆರು ನಾನ್ಗು - ಓಡು = (6 x 4) ಇಪ್ಪತ್ತು ನಾಲ್ಕರೊಂದಿಗೆ, ತನಿ = ಅದ್ವಿತೀಯನಾದ, ಇರೈ = ಸ್ವಾಮಿಯು, ಅನ್ರಿ = ಆಗದೆ, ನಿನ್ರ = ಇರುವ, (ಪ್ರಕೃತಿಮಹದಹಂಕಾರಾದಿಗಳಿಗಿಂತಲೂ, ಭಗವಂತನಿಗಿಂತಲೂ, ವಿಲಕ್ಷಣನಾದ) ಶಿತ್ತಿನೈ = ಜೀವಾತ್ಮನನ್ನು, ಎನ್ರುಂ = ಎಂದಿಗೂ, ಉಣರಾದು = ತಿಳಿದುಕೊಳ್ಳದೆ, ತಿರಳ್ = ಗುಂಪಾಗಿರುವ, ತೊಹೈ-ಆಹಿ = ನವಿಲುಗರಿ ಕಂತೆಯಾಗಿಮಾಡಿ, ನಿನ್ರೀರ್ = ನಿಂತಿರುವಮಾನವರೇ ! ಮತ್ತನೈ = ಮಕಾರಾರ್ಥವಾದ ಜೀವನನ್ನು, ತನಿ-ವಿಡಾದೇ = ಬೇರೆಯಾಗಿಮಾಡದೆ, ಮೈ-ಇಲಾ = ಕಾಡಿಗೆಕಟ್ಟದ, ವಿಳಕ್ಕಂ-ಆಕ್ಕಿ = ದೀಪವನ್ನಾಗಿ ಮಾಡಿ, (''ಮನ-ಜ್ಞಾನೇ'' ಎಂಬುದರಿಂದ ನಿಷ್ಪನ್ನವಾದ ರೂಪದರ್ಥ) ಉತ್ತಮನ್ = ಪುರುಷೋತ್ತಮನಿಗೆ, ಅಡಿಮೈಯಾನ-ದಾಸ್ಯರೂಪವಾದ, ಉಯಿರ್-ನಿಲೈ = ಜೀವನ ಸ್ಥಿತಿಯನ್ನು (ಭಗವದ್ದಾಸ್ಯಾತ್ಮಕವಾದ ಜೀವಾತ್ಮನ ಸ್ವಾಭಾವಿಕವಾದ ಆಕಾರವನ್ನು) ಉಣರ್‌ಮಿನೀರ್ = ಅನುಸಂಧಾನಮಾಡಿರಿ.

**ತಾತ್ಪರ್ಯ** :- ಪ್ರಕೃತ್ಯಾದಿಗಳಿಗಿಂತಲೂ, ಬುದ್ಧಿ-ಕಾಲ-ಶುದ್ಧಸತ್ವಗಳಿಗಿಂತಲೂ, ಮತ್ತು ಪರಮಾತ್ಮನಿಗಿಂತಲೂ ಬೇರೆಯಾಗಿರುವ ಜೀವಾತ್ಮನನ್ನು ಎಂದೂ ನಿಜವಾಗಿ ಅರಿಯದೆ, ನವಿಲುಗರಿಯ ಕಂತೆಯಂತೆ ಎಲ್ಲದರೊಂದಿಗೂ ಬೆರೆಸಿ, ಸಮೂಹಾತ್ಮಕವಾಗಿ ತಿಳಿದು,

ಅನುಭವಿಸುತ್ತಿರುವ ಮಾನವರೇ ! ಈ ಜೀವನನ್ನು ''ಪ್ರಕೃತಿ-ಮಹತ್-ಅಹಂಕಾರ-ಪಂಚಜ್ಞಾನೇಂದ್ರಿಯ-ಪಂಚಕರ್ಮೇಂದ್ರಿಯ- ಮನಸ್ಸು- ಪಂಚತನ್ಮಾತ್ರೆಗಳು-ಪಂಚಭೂತಗಳು'' ಎಂಬ 24 ತತ್ವಗಳಿಗಿಂತ ಬೇರ್ಪಟ್ಟವನೆಂದೂ, ''ಮನ-ಜ್ಞಾನೇ'' ಎಂಬ ಧಾತುವಿನಿಂದ ಕರ್ತರಿ ಲ್ಯುಡಂತವಾಗಿಸಿ, ಜ್ಞಾನಾಶ್ರಯನೆಂದೂ,,ಇದರಿಂದಲೇ ಅಚೇತನವಲ್ಲವೆಂದೂ, ''ಮನ-ಪರಿಮಾಣೇ'' ಎಂಬ ಪರಿಮಾಣ ಸಾಮಾನ್ಯಾರ್ಥಕ ಧಾತುವಿನಿಂದ ರೂಪಗೊಳಿಸಿ, ಪರಿಮಾಣವಿಶೇಷದಲ್ಲಿ ಕೊನೆಗೊಳಿಸಿ, ಅಣುಪರಿಮಾಣನೆಂದೂ, ಇದರಿಂದಲೇ ವಿಭುವಾದ ಈಶ್ವರನಲ್ಲವೆಂದೂ, ವಿಶದವಾಗಿತಿಳಿದು, ಈ ತತ್ವಗಳಿಂದ ನಿರಾಕಾಂಕ್ಷವಾಗುವಂತೆ ಮಾಡದೆ. ''ಮನ-ಜ್ಞಾನೇ'' ಎಂಬ ಧಾತುವಿನಿಂದ ಜ್ಞಾನಸ್ವರೂಪನೆಂದೂ, ಸ್ವಯಂಪ್ರಕಾಶನೆಂದೂ, ಕಿಟ್ಟಕಟ್ಟದ ದೀಪದಂತೆ, ಇರುವನೆಂದೂ ಅರಿಯಿರಿ. ಅಷ್ಟೇ ಅಲ್ಲದೆ ಪರಮಪುರುಷನಾದ ಶ್ರೀಮನ್ನಾರಾಯಣನಲ್ಲಿ ತನ್ನ ದಾಸ್ಯವೃತ್ತಿಯೇ ತನ್ನ ಸ್ವರೂಪವೆಂಬುದನ್ನು ಪ್ರಣವದ ಮಕಾರಾರ್ಥಲಬ್ಧವಾದ ಜೀವಾತ್ಮನ ಸ್ವಭಾವವೆಂದು ಅನುಸಂಧಾನಮಾಡಿ, ತತ್ವಯಾಥಾರ್ಥ್ಯಜ್ಞಾನಿಗಳಾಗಿ ಉಜ್ಜೀವಿಸಿರಿ. ನಿತ್ಯ ಸುಖವನ್ನು ಅನುಭವಿಸುವವರಾಗಿರಿ.

**तत्वेभ्य षट्चतुर्भ्योऽप्यपरमनुपमात् ब्रह्मणोऽन्यं परस्मात् ।**
**आत्मानं नावगत्य क्वचिदपि कथमप्यात्तसङ्गातबोधाः ।।**
**मर्त्याः पिच्छोपमानाः पृथगकृतमकारार्थकं तं प्रदीपं ।**
**कृत्वाथात्मीयदास्यं ह्यनुभवत परे पुंसि चामोदयध्वम् ।। ५**

**ಮೂಲ :** **ತನದಿವ್ವೆಯನ್ನೆತ್ತುಮಾಹ ತ್ತಾನಿರೈಯಾಹು ಮಾಯನ್,**
**ಉನದೆನುಮುಣರ್ತ್ತಿ ತಾರಾದುಮಕ್ಕು ನೀರುರಿಮ್ಮೈಯುತ್ತೀರ್,**
**ಎನದಿವ್ವೆಯನ್ನೆತ್ತುಂ ಯಾನೇಯಿರೈಯೆನು ಮಿರಣ್ಡುತೀರ,**
**ಮನವೆನುಮಿರಣ್ಡಿನ್ ಮಾರಾವಲ್ಲಿನ್ನೈ ಮಾತ್ತುವೀರೇ ॥ 6**

ಅರ್ಥ :- ಇವ್ವೈ-ಅನ್ನೆತ್ತುಂ = ಈ ಸಮಸ್ತ ವಸ್ತುಗಳೂ, ತನದು-ಆಹ = ತನ್ನಾಳ್ವಿಕೆಗೊಳಪಟ್ಟು, ತಾನ್ = ತಾನು, ಇರೈ-ಆಹುಂ = ಈಶ್ವರನೂ ಆಗಿರುವನು, ಮಾಯನ್ = ಅದ್ಭುತಸ್ವಭಾವದವನು, ಉನದು = ನಿಮ್ಮದು, ಎನುಂ-ಉಣರ್ತ್ತಿ = ಎಂಬ ಜ್ಞಾನವನ್ನು, ತಾರಾದು = ಕೊಟ್ಟಿರುವುದಿಲ್ಲ, ನೀರ್ = ನೀವು, ಉಮಕ್ಕು = ನಿಮಗೆ, ಉರಿಮ್ಮೈ = ಪರತಂತ್ರವಾಗಿರುವಿಕೆಯನ್ನು, ಉತ್ತೀರ್ = ಹೊಂದಿರುವಿರಿ, ಮನ-ಎನುಂ-ಇರಂಡಿನ್ = 'ಮ,ನ'' ಎಂಬ ಎರಡುಪದಗಳಿಂದ (ನಮಃ ಎಂಬುದನ್ನು ಹಿಂದುಮುಂದಾಗಿ

ಮಾಡಿಕೊಳ್ಳಬೇಕು) ಇವ್ವೈ-ಅನ್ನೈತ್ತುಂ = ಈ (ದೇಹೇಂದ್ರಿಯಾದಿಗಳು) ಎಲ್ಲವೂ, ಎನದು = ನನ್ನವು, ಯಾನೇ = ನಾನೇ ತಾನೇ, ಇರೈ = ಸ್ವಾಮಿಯು, (ಸ್ವತಂತ್ರನು) ಎನುಂ-ಇರಣ್ಡು = ಎಂಬ ದುರಭಿಮಾನವೆರಡೂ, ತೀರ = ನಶಿಸುವಂತೆ ಮಾಡಿದರೆ, ಮಾರಾ = (ಪ್ರವಾಹದಂತೆ) ಸದಾ ಮೇಲೆ ಮೇಲೆ ಬರುತ್ತಾ ಇರುವ, ವಲ್-ವಿನ್ನೈ = ಪ್ರಬಲವಾದ ಪಾಪಗಳನ್ನು ,ಮಾತ್ತುವೀರ್ = ಹೋಗಲಾಡಿಸಿಕೊಳ್ಳುವಂತಾಗುವಿರಿ.

**ತಾತ್ಪರ್ಯ** :- ''ಶ್ರುತಿಃ ಸ್ಮೃತಿಃ ಮಮೈವಾಜ್ಞಾ'' ಎಂದೂ, ''ತಸ್ಮಾತ್ ಶಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ । ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮಕರ್ತುಮಿಹಾರ್ಹಸಿ ॥'' ಎಂದು ಸರ್ವನಿಯಂತಾವಾದ ಪರಮಾತ್ಮನ ಆದೇಶದಂತೆ, ಉಪದೇಶದಂತೆ ಶಾಸ್ತ್ರವು ಭಗವಂತನ ಆಜ್ಞಾರೂಪಕವೆಂದೂ, ಅದರಲ್ಲಿ ಪೂರ್ಣನಂಬಿಕೆಯಿರಬೇಕೆಂದೂ, ಮೊದಲು ಅರಿಯಬೇಕು. ಆ ಶಾಸ್ತ್ರಗಳು ''ಸಮಸ್ತವಸ್ತುಗಳೂ ಪರಮಾತ್ಮನವು. ಆತನೇ ಸರ್ವೇಶ್ವರನು, ಜೀವಾತ್ಮರಿಗೆ ಸಹಜವಾದ ಸ್ವಾತಂತ್ರ್ಯವಾಗಲೀ ಸ್ವಾಮಿತ್ವವಾಗಲೀ ಇಲ್ಲ'' ಎಂದು ಘೋಷಿಸುತ್ತವೆ. ಹೀಗಿದ್ದರೂ ಪ್ರಕೃತಮಂತ್ರದ ''ನಮಃ'' ಎಂಬುದರ ಅರ್ಥವನ್ನು ಅರಿಯದ ನರರೇ ! ನೀವು ''ಸಮಸ್ತಕ್ಕೂ ನಾವೇ ಪ್ರಭುಗಳು, ಎಲ್ಲವೂ ನಮ್ಮವು'' ಎಂದು ಭಾವಿಸಿರುವಿರಿ, ಅದು ಕೇವಲ ಭ್ರಮೆ, ಅದು ಹೋಗಬೇಕು. ಅದಕ್ಕಾಗಿ ತತ್ತ್ವಾರ್ಥವಡಗಿರುವ ಮಂತ್ರಾರ್ಥವನ್ನು ತಿಳಿಯಿರಿ. ಅಹಿರ್ಬುಧ್ನ್ಯರು ಉಪದೇಶಿಸಿರುವುದನ್ನು ಆಲಿಸಿ, ''ನಮಃ'' ಎಂಬುದನ್ನು ಒಡೆದು ಎರಡು ಪದಗಳನ್ನಾಗಿಯೂ, ಅವನ್ನೂ ಹಿಂದುಮುಂದಾಗಿಯೂ, ಮಾಡಿದರೆ ''ಮ,ನ'' ಎಂದಾಗುವುದು. ''ಮ'' ಎಂಬುದು ಅಸ್ಮತ್ ಶಬ್ದದ ಷಷ್ಠೀವಿಭಕ್ತ್ಯಂತದ ರೂಪ. ''ಕಿಂಚಿತ್'' ''ಸ್ವಾತಂತ್ರ್ಯಂ'' ಎಂಬೆರಡು ಪದಗಳನ್ನು ಅಧ್ಯಾಹಾರ ಮಾಡಿಕೊಂಡು, ''ಯಾವುದರವಿಷಯದಲ್ಲಿಯೂ ನನಗೆ ಸ್ವಲ್ಪವೂ ಸಹಜವಾದ ಸ್ವಾತಂತ್ರ್ಯವಿಲ್ಲ'' ಎಂಬ ಜ್ಞಾನವನ್ನು ದೃಢಪಡಿಸಿಕೊಳ್ಳಿರಿ. ಹಿಂದಿನ ಭ್ರಮವು ಹೋಗುವುದು. ಅನನ್ಯತ್ವ ಜ್ಞಾನ ನೆಲೆಗೊಳ್ಳುವುದು. ಹಾಗಲ್ಲದೆ ಪ್ರಬಲ ಪಾಪಗಳು ಹೋಗುವುದಿಲ್ಲ. ತತ್ವಜ್ಞಾನಮಾತ್ರದಿಂದಲೇ ನಿವಾರಣೆಯಾಗುವ ಬೇರಾವುದರಿಂದಲೂ ನಶಿಸದ ಪಾಪಗಳನ್ನು ನೀಗಿಕೊಂಡು, ನಿತ್ಯಸುಖಿಗಳಾಗಿ ಬಾಳಿರಿ.

**स्वार्थायत्ताखिलस्व: स्वय मिह सकलाधीश आश्चर्यचर्य: ।**
**यौष्माकीणं किलेदं त्विति किमपि न दत्तं च व: पारतन्त्र्यम् ।।**
**मध्येमन्त्रं विभिन्नं ''नम'' इति ''मन'' इत्येत्य सर्वं मदीयं ।**
**स्वाम्यस्मीत्यज्ञतां च व्यपनयत बलैनांसि च ध्वंसयध्वम् ।।** ६

**ಮೂಲ :** ಅಳಿವಿಲಾವುಯಿರ್‌ಹಳ್ಕೆಲ್ಲಾಮರುಕ್ಕನಾಯಳಿಯಾ ವೀಶನ್,
ವಳಿಯಲಾವಳಿವಿಲಕ್ಕು ಮತಿಯೆಳ ಮಾಯಮೂರ್ತಿ
ವಳುವಿಲಾದಿವೈಯನೆತ್ತುಂ ವಯಿತ್ತಿಲ್‌ವೈತ್ತುಮಿಳ್‌ನ್ದಮಾಲೈ,
ನಳುವಿಲಾ ನಾರವಾಕ್ಕಿಲ್ ನಾಡಿನೀರ್ ನಣುಹುವಿರೇ ॥ 7

**ಅರ್ಥ :-** ಅಳಿವು-ಇಲಾ = ಅಳಿವಿಲ್ಲದ, ಉಯಿರ್‌ಹಳ್ಕು-ಎಲ್ಲಾಂ = ಸಮಸ್ತಾತ್ಮರಿಗೂ, ಮತಿ = ಜ್ಞಾನವು, ಎಳ = ಉದಯಿಸುವಂತೆ, ಅರುಕ್ಕನ್-ಆಯ್ = ಸೂರ್ಯನಂತೆ ಪ್ರಕಾಶಿಸುವವನಾಗಿ, ವಳಿಯಲಾ = ಸನ್ಮಾರ್ಗವಾಗದ, ವಳಿ = ಮಾರ್ಗದಿಂದ, ವಿಲಕ್ಕುಂ = ನಿವಾರಣೆಮಾಡಿದವನಾದ, ಅಳಿಯಾ = ನಾಶವಿಲ್ಲದ, ಈಶನ್ = ಸರ್ವೇಶ್ವರನಾದ, ಮಾಯ = ಆಶ್ಚರ್ಯವನ್ನುಂಟುಮಾಡುವ, ಮೂರ್ತಿ = ವಿಗ್ರಹವುಳ್ಳವನಾದ, ಇವೈ-ಅನೈತ್ತುಂ = ಈ ಸಕಲ ವಸ್ತುಗಳನ್ನೂ, ವಳುವಿಲಾದು = ಚಲಿಸದಂತೆ, ವಯಿತ್ತಿಲ್ = ಹೊಟ್ಟೆಯಲ್ಲಿ, ವೈತ್ತು = ಇರಿಸಿ, ಉಮಿಳ್‌ನ್ದ = ಹೊರಕ್ಕೆಬರಸಿದವನಾದ, ಮಾಲೈ = ಸ್ವಾಮಿಯನ್ನು, ನಳುವಿಲಾ = ಬಿಟ್ಟುಹೋಗದಿರುವ ನಾರ-ವಾಕ್ಕಿಲ್ = ನಾರಶಬ್ದದಲ್ಲಿ, ನಾಡಿ-ಹುಡುಕಿ (ಸಾವಧಾನವಾಗಿ ಅನುಸಂಧಾನ ಮಾಡಿ) ನೀರ್ = ಜ್ಞಾನವನ್ನು ಸಂಪಾದಿಸಿದ ನೀವು, ನಣುಹುವೀರ್ = ಆಶ್ರಯಿಸಿದವರಾಗುವಿರಿ.

**ತಾತ್ಪರ್ಯ :-** ನಾವು ಬಹಳ ವಿದ್ಯಾವಂತರಾಗಿರಬಹುದು, ಆದರೆ ಸತ್ಸಂಪ್ರದಾಯಾಗತ ತತ್ವಾರ್ಥಗಳನ್ನರಿತು, ಉಪದೇಶಿಸುವ ಸದಾಚಾರ್ಯರನ್ನು ಆಶ್ರಯಿಸಲೇಬೇಕು. ಸರ್ವಂಮನ್ಯರೆಂಬ ದುರಭಿಮಾನದಿಂದ ಲಜ್ಜೆಗೊಂಡು ಆಶ್ರಯಿಸದೆ ಇರಬಾರದು, ಓ ಮಾನವರೇ ! ''ಅಂತಃ ಬಹಿಃ ಸರ್ವತ್ರಚ'' ವ್ಯಾಪಿಸಿರುವ ಆ ಪರಮಾತ್ಮನ ಯಾಥಾರ್ಥ್ಯವು ''ನಾರಾಯಣ'' ಎಂಬುದರಲ್ಲಿದೆ. ಶರಣ್ಯಗುಣಪೂರ್ಣನೂ ಸರ್ವರಕ್ಷಕನೂ, ಮತ್ತು ಸರ್ವಶೇಷಿಯೂ ಆದ ಪರಮಾತ್ಮನ, ಮತ್ತು ಶರಣಾಗತನೂ, ಆತ್ಮಗುಣ ಪೂರ್ಣನೂ, ರಕ್ಷಣೀಯನೂ ಮತ್ತು ಶೇಷಭೂತನೂ ಆದ ಜೀವಾತ್ಮನ ರೀತಿಗಳನ್ನು ಬೇರೆ ಬೇರೆ ಆಕಾರಗಳಿಂದ ಪ್ರಕಾಶಪಡಿಸುವುದು. ''ನಾರ''ಗಳನ್ನು ''ಅಯನ''ವಾಗಿ ಉಳ್ಳವನು, ಅಥವಾ ''ನಾರ''ಗಳಿಗೆ ''ಅಯನ'' ವಾಗಿರುವನು ಎಂದು, ಬಹುವ್ರೀಹಿ-ತತ್ಪುರುಷ ಸಮಾಸಗಳಿಂದ ತಿಳಿಯುವುದು. (ಸರ್ವಕಾರಣನೂ ಸರ್ವರಕ್ಷಕನೂ ಮತ್ತು ಸರ್ವಶೇಷಿಯೂ ಆದ ಶ್ರಿಯಃಪತಿಗೇ ಜೀವಾತ್ಮನಾದ ನಾನು ನಿತ್ಯ ನಿರುಪಾಧಿಕ ಶೇಷನು). ಇದನ್ನು ಅನುಸಂಧಾನ ಮಾಡಿ, (ಸಂಕೀರ್ತನೆಮಾಡಿ, ಪರಮಾತ್ಮನನ್ನು ಸೇರುವಿರಿ, ಆನಂದಿಸುವಿರಿ, ಈ ಸಾರಾರ್ಥವನ್ನೇ ''ಯಚ್ಚಕಿಂಚಿತ್ ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಪಿ ವಾ । ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಸ್ಸ್ಥಿತಃ'' ಎಂಬ ಉಪನಿಷದ್ವಾಕ್ಯವು ಸ್ಪಷ್ಟೀಕರಿಸುತ್ತದೆ.)

नित्यानां निखिलात्मनां सुमतिदो भास्वान् सहस्रांशुवत् ।
दुर्मार्गाद्विनिवारकोऽद्भुतवपुः नित्य स्समस्ताधिपः ।।
विश्वं न्यस्यति निश्चलं स्वजठरे काले बहिर्न्यस्यति ।
श्रीशो यश्च विमृश्य संश्रयत तं नारेति शब्दे नराः ।। ೭

ಮೂಲ : ವಯನಮೊನ್ರರಿನ್ದುರೈಪ್ಪಾರ್ ವನ್‌ಕಳಲ್ ವಣಂಗವೆಳ್‌ಹಿ,
ನಯನಮುಳ್ಳಿನ್ರಿನಾಳುಂ ನಳ್ಳಿರುಳ್ ನಣ್ಣಿನಿನ್ರೀರ್,
ಅಯನಮಿವ್ವನೈತ್ತುಕ್ಕುಂ ತಾನವೈ ತನಕ್ಕಯನಮೆನ್ನ,
ಪಯನುಮಾಯ್‌ಪದಿಯುಮಾನ ಪರಮನೈಪ್ಪಾಡುಮಿನೀರೇ ॥ 6

ಮೂಲ :- ವಯನಂ-ಒನ್ರು = ವಚನ (ಶಾಸ್ತ್ರ)ವೊಂದನ್ನು, ಅರಿನ್ದು = ಅರಿತು (ನಿರೂಪಿಸಿ) ಉರೈಪ್ಪಾರ್ = ಉಪದೇಶಿಸಿರುವವರ (ಆಚಾರ್ಯರ) ವನ್-ಕಳಲ್ = (ಆಶ್ರಿತರನ್ನು ಬಿಡದ) ದೃಢವಾದ ಪಾದಗಳನ್ನು, ವಣಂಗ = ನಮಿಸಲು, ವೆಳ್‌ಹಿ = ಲಜ್ಜೆಪಟ್ಟು, ನಾಳುಂ = ಒಂದು ದಿನವೂ, ಉಳ್-ನಯನಂ-ಇನ್ರಿ = ಅಂತರ್ದೃಷ್ಟಿಯಿಲ್ಲದೆ, ನಳ್-ಇರುಳ್-ನಣ್ಣಿನಿನ್ರೀರ್ = ಗಾಢಾಂಧಕಾರದಲ್ಲಿರುವ ಮಾನವರೇ ! ತಾನ್ = ವಿಭುವಾದ ತಾನು, ಇವ್ವನೈತ್ತುಕ್ಕುಂ = ಈ ಎಲ್ಲಕ್ಕೂ, ಅಯನಂ = ಪ್ರಾಪ್ಯವಾದ (ಸೇರಬೇಕಾದ ಸ್ಥಾನ) ಅವೈ = ಆ ವಸ್ತುಗಳೆಲ್ಲವೂ, ತನಕ್ಕು = (ಪ್ರತೀಕಾರಾನರ್ಹನಾದ) ತನಗೆ, ಅಯನಂ = ಪ್ರಾಪ್ಯಗಳು, ಎನ್ರ = ಎನ್ನುವ, ಪಯನುಮಾಯ್-ಫಲವೂ ಆಗಿ, ಪದಿಯುಮಾನ = ಆಧಾರವೂ ಆದ, ಪರಮನೈ = ಪರಮಪುರುಷನನ್ನು, ಪಾಡುಮಿನೀರ್ = ಗಾನಮಾಡಿರಿ.

ತಾತ್ಪರ್ಯ :- ''ರಃ'' ಅಳಿಯುವುವು. ''ನ-ರಃ'' ಎಂದಿಗೂ ಅಳಿಯವು. ಚೇತನಗಳು. ''ನಾರ'' ಚೇತನರ ಸಮೂಹ, ಅದೂ ಅನೇಕ. ಎಂದೂ, ''ನರಃ'' ಯಾವುದರಿಂದಲೂ ನಾಶವಿಲ್ಲದ, ನೇತಾ ಸರ್ವೇಶ್ವರ, ಅವನೊಡನೆ ಪ್ರಮಾಣಾನುಗುಣವಾಗಿ ಸಂಬಂಧವುಳ್ಳವೆಲ್ಲವೂ ''ನಾರ'' ಎಂದೂ ಅರ್ಥ. ಓ ಮನುಜರೇ ! ಈ ಅರ್ಥವನ್ನು ಸಾವಧಾನದಿಂದ ಅನುಸಂಧಾನ ಮಾಡುತ್ತಾ ನೀವು ''ನಾಶವಿಲ್ಲದ ಎಲ್ಲ ಜೀವರಿಗೂ ಜ್ಞಾನೋದಯವಾಗುವಂತೆ ಸೂರ್ಯನಹಾಗೆ ಪ್ರಕಾಶಿಸುವವನೂ, ದುರ್ಮಾರ್ಗದಿಂದ ನಿವಾರಿಸುವವನೂ, ಸಮಸ್ತವನ್ನೂ ಪ್ರಳಯದಲ್ಲಿ ತನ್ನುದರದಲ್ಲಿರಿಸಿಕೊಂಡು ಮತ್ತೆ ಸೃಷ್ಟಿಸುವಾಗ ಹೊರಬರಸುವವನೂ, ನಿತ್ಯನೂ, ಅದ್ಭುತ ದಿವ್ಯಮಂಗಳ ವಿಗ್ರಹನೂ, ಮತ್ತು ಸರ್ವೇಶ್ವರನೂ ಆದ ಶ್ರಿಯಃಪತಿಯನ್ನು ''ನಾರ'' ಎಂಬ ಶಬ್ದದಲ್ಲಿ ವಿಮರ್ಶಿಸಿ ತಿಳಿಯಿರಿ. ಚೆನ್ನಾಗಿ ಅರಿತರೆ ಸಾಕ್ಷಾನ್ನಾರಾಯಣನನ್ನು ಕಾಣುವಿರಿ.

शास्त्रीयं वचनं सदोपदिशता मङ्गी गुरूणां दृढौ ।
नन्तुं वीतनिजान्तरङ्गनयना दुर्मानिनो व्रीडिताः ।।
गाढध्वान्तचिरोषिताः ! अयनतां प्राप्तोऽखिलानां च यः ।
यस्यैतेऽयन मीदृशं फलममुं नाथं परं गायत ।। ८

ಮೂಲ : ಉಯರ್‍ನ್ದವರುಣರ್‍ನ್ದವಾತ್ತಾಲುಹನ್ದಕುತ್ತೇವಲೆಲ್ಲಾಂ,
ಅಯರ್‍ನ್ದುನೀರ್ಹೆಂಬುಲನ್ ಹಳ್ಕಡಿಮೈಪೂಣ್ಡಲಮರುಹಿನ್ರೀರ್,
ಪಯನ್ದಿವೈಯನ್ಯೆತ್ತುಮೇನ್ದುಂ ಪರಮನಾರ್ ನಾಮಮೊನ್ರಿಲ್,
ವಿಯನ್ದಪೇರಡಿಮೈತೋನ್ರುಂವೇಟ್ರುಮೈಮೇವುವೀರೇ ॥ 9

ಅರ್ಥ :- ಉಯರ್‍ನ್ದವರ್ = (ಸರ್ವಸ್ಮಾತ್ಪರನಾದ) ಪರಮಾತ್ಮನು, ಉಣರ್‍ನ್ದವಾತ್ತಾಲ್ = ಸಂಕಲ್ಪಿಸಿದಂತೆಯೇ, ಉಹನ್ದ = ನಿತ್ಯಸೂರಿಗಳು ಆಸೆಯಿಂದಮಾಡುವ, ಕುತ್ತೇವಲೆಲ್ಲಾಂ = ಸಕಲವಿಧ ಕೈಂಕರ್ಯಗಳನ್ನೂ, ಅಯರ್‍ನ್ದು = ಮರೆತುಬಿಟ್ಟು, ನೀರ್ = (ಪರಮಪುರುಷಾರ್ಥವನ್ನು ಪಡೆಯಲು ಸಮರ್ಥರಾದ) ನೀವು, ಐಂ-ಪುಲನ್‌ಗಳ್ಕು = ಪಂಚೇಂದ್ರಿಯಗಳಿಗೆ, ಅಡಿಮೈ = ಸೇವೆಯನ್ನು, ಪೂಂಡು = ಮಾಡುವುದರಲ್ಲಿ ಸಂಲಗ್ನರಾಗಿ, ಅಲಮರುಹಿನ್ರೀರ್ = ತಡಬಡಾಯಿಸುತ್ತಿರುವವರೇ ! ಪಯನ್ದು = ವ್ಯಾಪಿಸಿಕೊಂಡು, ಇವೈ-ಅನ್ಯೆತ್ತುಂ-ಏಂದುಂ = ಈ ಸಮಸ್ತವನ್ನು ಧರಿಸಿಕೊಂಡಿರುವ, ಪರಮನಾರ್ = ಪರಮಪುರುಷನ, ನಾಮಂ-ಒನ್ರಿಲ್ = (ಇತರ ಹೆಸರುಗಳಿಗಿಂತ ಬಹಳ ವ್ಯಾಪಕತಮವಾದ) ''ನಾರಾಯಣ'' ಎಂಬ ಒಂದು ಹೆಸರಿನಶಬ್ದದಲ್ಲಿ, ವಿಯಂದ = ವಿಲಕ್ಷಣವಾದ, ಪೇರ್ = ಬಲುಹಿರಿಯದಾದ, ಅಡಿಮೈ = ಸೇವೆಯನ್ನು, ತೋನ್ರುಂ = ತೋರಿಸುವ (ಬೋಧಿಸುವ) ವೇಟ್ರುಮೈ = (ಚತುರ್ಥೀ) ವಿಭಕ್ತಿಯನ್ನು, ಮೇವುವೀರ್ = ಆದರದಿಂದ ಪರಿಶೀಲಿಸಿರಿ.

ತಾತ್ಪರ್ಯ :- ಓ ಮಾನವರೇ! ನೀವು ಪರಮಪುರುಷಾರ್ಥವನ್ನು ಪಡೆಯಲು ಅರ್ಹರು. ನಿಸ್ಸಮಾಭ್ಯಧಿಕನಾದ ಆ ಪರಮಾತ್ಮನ ಸಂಕಲ್ಪಕ್ಕೆ ಅನುಸಾರವಾಗಿ, ಅತಿ ಸಂತೋಷದಿಂದ ನಿತ್ಯಸೂರಿಗಳುಮಾಡುವ ಕೈಂಕರ್ಯಗಳನ್ನೆಲ್ಲಾ ಮಾಡತಕ್ಕವರು. ಆದರೆ ಅದೆಲ್ಲವನ್ನೂ ಮರೆತು, ನಶ್ವರವಾದ ಪಂಚೇಂದ್ರಿಯಗಳಿಗೆ ಅಡಿಯಾಳಾಗಿ, ಆ ಸೇವೆಯಲ್ಲಿಯೇ ಮಗ್ನರಾದಿರಿ. ಪೇಚಾಡುತ್ತಿರುವಿರಿ. ಸಮಸ್ತಕ್ಕೂ ಆಧಾರನಾಗಿರುವ ಪರಮಪುರುಷನ ನಾಮಗಳಲ್ಲಿ ಅತ್ಯಂತ ಮೇಲೆನಿಸಿದ ''ನಾರಾಯಣ'' ಎಂಬುದರಲ್ಲಿ ಪೂರ್ಣತೆಳುವಳಿಕೆ ಹೊಂದಿ, ಮೂಲಮಂತ್ರದ ಮೂರನೆಯಪದವಾದ ಇದರಕೊನೆಯಲ್ಲಿರುವ ''ಚತುರ್ಥೀ'' ವಿಭಕ್ತಿಯಯ ಅರ್ಥವನ್ನು ಪರಿಶೀಲಿಸಿರಿ. ಸಕಲೇಷ್ಟಗಳನ್ನೂ ಪಡೆಯುವಿರಿ.

संकल्पस्यानुरूपा बहुविधवरिवस्या उपास्याः परस्य ।
पुंसो विस्मृत्य पञ्चेन्द्रियमरिचणव्याकुलीभूतमर्त्याः ! ।।
व्याप्येदं य स्समस्तं विधरति परम स्तस्य नारायणेति ।
प्राह्वे चित्रां दिशन्तीं परिचरणविधिं चाद्रियध्वं विभक्तिम् ।। ९

ಮೂಲ : ಎಣ್ದಿಶ್ಶೈಪರವುಂ ಶೀರೋರೆಂಗಳುಕ್ಕೀನ್ದವೆಟ್ಟಿಲ್,
ಉಣ್ಡವಾರುರೈಪ್ಪಾರ್‌ಪೋಲ ವೊನ್ಬದುಪೊರುಳುರೈತ್ತೋಂ,
ಪಣ್ಡುನಾಲ್ಮರೈಯೋರ್‌ಕಾಕ್ಕುಂ ಮಾನಿದಿಯಿವ್ವೈಯನೈತ್ತುಂ,
ಕಣ್ಡವರ್‌ವಿಳ್ಳಾರ್‌ವಿಳ್ಳಕ್ಕರುದುವಾರ್‌ಕಾಣ್ಗಿಲಾರೇ ॥ 10

ಅರ್ಥ :- ಎಣ್-ದಿಶ್ಶೈ = ಎಂಟುದಿಕ್ಕುಗಳಲ್ಲೂ (ಎಲ್ಲಕಡೆಯೂ) ಪರವುಂ = ಹರಡುವ, ಶೀರ್-ಓರ್ = (ಸದ್ಗುಣಗಳಿಂದ ಬರುವ) ಕೀರ್ತಿಯುಳ್ಳ ಸದಾಚಾರದಿಂದ, ಎಂಗಳಕ್ಕು = ನಮಗೆ, ಈಂದ = ಉಪದೇಶಿಸಲ್ಪಟ್ಟ, ಎಟ್ಟಿಲ್ = ಎಂಟಕ್ಷರದಲ್ಲಿ (ಮೂಲಮಂತ್ರದಲ್ಲಿ) ಒನ್ಬದು-ಪೊರುಳ್ = ಒಂಬತ್ತು (ಅಕಾರ, ಲುಪ್ತಚತುರ್ಥೀ ಉಕಾರ, ಮಕಾರ, ನಮಶ್ಶಬ್ದ, (ನ,ಮ,ಕಾರ) ನಾರಶಬ್ದ, ಅಯನಶಬ್ದ, ಚತುರ್ಥೀ, ಹೀಗೆ ಇವುಗಳ) ಅರ್ಥಗಳನ್ನು, ಉಂಡವಾರು =ಅನುಭವಿಸಿದಂತೆಯೇ, ಉರೈಪ್ಪಾರ್-ಪೋಲ = ಹೇಳುವವರ ಹಾಗೆ, ಉರೈತ್ತೋಂ = ಪ್ರತಿಪಾದಿಸಿರುವೆನು, ಪಂಡು = ಅನಾದಿಯಾದ, ನಾಲ್-ಮರೈಯೋರ್ = ನಾಲ್ಕು ವೇದಗಳನ್ನು ಅರಿತವರಿಂದ, ಕಾಕ್ಕುಂ = ರಕ್ಷಿತವಾದ, ಮಾ-ನಿದಿ = ದೊಡ್ಡನಿಧಿಯಂತೆ, ಇವ್ವೈ-ಅನೈತ್ತುಂ = ಈ ಸಕಲಾರ್ಥಗಳನ್ನೂ, ಕಂಡವರ್ = ಅರಿತವರು, ವಿಳ್ಳಾರ್ = ಪ್ರಕಾಶಪಡಿಸರು, ವಿಳ್ಳಕ್ಕರುದುವಾರ್ = ಪ್ರಕಟಪಡಿಸಲು ಇಷ್ಟವುಳ್ಳವರು, ಕಾಣ್ಗಿಲಾರ್ = ಕಾಣುವುದಿಲ್ಲ.

ತಾತ್ಪರ್ಯ :- ಎಂಟುದಿಕ್ಕುಗಳಲ್ಲೂ ಕೀರ್ತಿಯನ್ನು ಪಡೆದ ಸದಾಚಾರ್ಯರು ಉಪದೇಶಿಸಿದುದು ಎಂಟೇ ಅಕ್ಷರ. ಆದರೆ ಅದರಲ್ಲಿರುವ 9 ಅರ್ಥಗಳನ್ನೂ ಅವರು ಅನುಭವಿಸಿರುವಂತೆಯೇ ಅವರ ಅನುಗ್ರಹದಿಂದ ವಿಶದಪಡಿಸಿರುವೆನು. ಸಮಸ್ತವೇದಗಳನ್ನೂ ಅಧ್ಯಯನಮಾಡಿ, ಅದರಲ್ಲಿನ ಸಕಲಾರ್ಥವಿಶೇಷಗಳನ್ನೂ, ಅರಿತಿದ್ದರೂ, ಅಂತಹವರು ಇದನ್ನುಪ್ರಕಟಿಸುವುದಿಲ್ಲವಲ್ಲಾ! ಮನಸ್ಸಿನಲ್ಲೂ ತಿಳಿಸಬೇಕೆಂಬ ಇಷ್ಟವಿಲ್ಲವಲ್ಲಾ! ಹಾಗಿರುವವರು ಕಾಣಿಸಲಿಲ್ಲವಲ್ಲಾ! ಎಂದು ಮರುಗುವರು. ರಹಸ್ಯವನ್ನು ರಹಸ್ಯವಾಗಿಯೇ ಇರಿಸಬೇಕೆಂಬ ನಿಯಮಕ್ಕೆ ಹೆದರಿ ಸುಮ್ಮನಾಗಿದ್ದಿರಬಹುದಾದರೂ, ಸಮಯಬಂದಾಗ ಸ್ಪಷ್ಟಪಡಿಸಬೇಕು. ಅದರಿಂದ ಉಜ್ಜೀವನಗೊಳಿಸುವುದು ಅತ್ಯುತ್ತಮನ ಅವಶ್ಯ ಕರ್ತವ್ಯ, ಎಂಬುದನ್ನುವ್ಯಕ್ತಗೊಳಿಸಿರುವರು. ಅಪಾರವಾದ ವೇದಗಳನ್ನು ಅಧ್ಯಯನ

ಮಾಡಿಯೂ, ಅದರಲ್ಲಿ ಕಂಗೊಳಿಸುವ ಸಕಲೋಜ್ಜೀವಕವಾದ ಮಹಾನಿಧಿಯಂತಿರುವ ಮಂತ್ರದ ಅರ್ಥವನ್ನು ತಿಳಿಯದವರಾಗಿ, ಉಪದೇಶಿಸಲೂ ಆಗದೆ ಆಯಿತಲ್ಲಾ! ಎಂದು ಮರುಗಿ, ಮುಂದಾದರೂ ಸಂಪ್ರದಾಯಾಗತಾರ್ಥವು ನಶಿಸದಿರಲೆಂದು ಗ್ರಂಥರೂಪವಾಗಿ ಪರಮದಯಾಳುವಾದ ಸ್ವಾಮಿ ದೇಶಿಕರು ಈ ರೀತಿಯಲ್ಲಿ ಕರುಣಿಸಿರುವರು.

अष्टास्वाशासु येषां सुचरितसुगुणा व्यापृता देशिकै स्तैः ।
उक्तेष्वस्माक मष्टास्वतनव मिह चार्थान् नवाहं यथावत् ।
चित्तारूढानुभूता अभिदधत इवानादिवेदाभिगुप्तं ।
न्यासं न ब्रूयु रेतान् प्रकटनमनसो वा न दृश्यन्त एव ।। १०

श्रीदेशिकप्रबन्धस्थः ''तिरुमन्त्रार्थसङ्ग्रहः'' ।
गोपालार्येण सश्लोक स्सार्थोऽतन्यत सन्मुदे ।।
श्रीमते निगमान्तमहादेशिकाय नमः ।।

||ಶ್ರೀಃ||

||ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ||

# ದ್ವಯಚುರುಕ್ಕು

ಮೂಲ : ಇನ್ನಮುದಿಲ್ ಪಿರನ್ದಾಳಿತಂ ಕೇಳ್ಕವುರೈತ್ತಪಿರಾನ್,
ಪೊನ್ನರುಳಾನ್ಮರೈಮೌಲಿಯಿಲ್ ಪೂಣ್ಡವಿರಣ್ಡೆಶೈತ್ತು,
ತನ್ನುರೈಮಿಕ್ಕ ದನಮಿದೆನತ್ತನ್ದ ವೇದಹತ್ತಿಲ್
ತುನ್ನುಪೊರುಳ್‌ಹಳ್ ಪತ್ತುಂ ತೊಲೈಯಾನಿದಿ ಯಾಹಿನ್ರದೇ || 1

ಅರ್ಥ :- ಇನ್-ಅಮುದಿಲ್ = ಭೋಗ್ಯವಾದ ಅಮೃತದಲ್ಲಿ, ಪಿರಂದಾಳ್ = ಹುಟ್ಟಿದ ಮಹಾಲಕ್ಷ್ಮಿಯು, ಇತಂ = ಹಿತವನ್ನು, ಕೇಳ್ಕ = (ವಿಷ್ಣುವನ್ನು) ಕೇಳಲು, ಉರೈತ್ತ = ಉಪದೇಶಿಸಿದ, ಪಿರಾನ್ = ಮಹೋಪಕಾರಕನಾದ, ಪೊನ್-ಅರುಳಾಲ್ = ಆದರಣೀಯವಾದ ದಯೆಯಿಂದ, ಮರೈ-ಮೌಳಿಯಲ್ = ವೇದಾಂತದಲ್ಲಿ, ಪೂಂಡ = ಹುದುಗಿಕೊಂಡಿರುವ, ಇರಂಡು = ಎರಡುವಾಕ್ಯಗಳನ್ನು, ಇಶೈತ್ತು = ಒಂದಾಗಿಸೇರಿಸಿ, ಇದು = ಈ ಮಂತ್ರವು, ತನ್-ಉರೈ = ತನ್ನ ಮಾತುಗಳಲ್ಲಿ, ಮಿಕ್ಕ = ಅತಿಶಯವಾದ, ದನಂ-ಎನ = ಧನವೆಂದು, ತಂದ = ಹೇಲ್ಪಟ್ಟ, ವೇದಹತ್ತಿಲ್ = ವೇದವೆಂಬ ನಿವಾಸದಲ್ಲಿ (ಅಥವಾ ತಿಳಿಸುವಸ್ಥಳದಲ್ಲಿ) ತುನ್ನು = ವ್ಯಾಪ್ತವಾದ , ಪೊರುಳ್ ಹಳ್-ಪತ್ತುಂ = ಹತ್ತುಅರ್ಥಗಳೂ, ತೊಲೈಯಾ = ನಾಶವಾಗದ, ನಿದಿ-ಆಹಿನ್ರದ್ = ನಿಧಿಯಾಗಿವೆ.

ತಾತ್ಪರ್ಯ :- ಸಕಲಜಗನ್ಮಾತೆಯು ಸಕಲ ಜಗತ್ಪಿತಾವಾದ ಶ್ರೀಮನ್ನಾರಾಯಣನನ್ನು ತನ್ನ ನಿರ್ವ್ಯಾಜವಾತ್ಸಲ್ಯಾತಿಶಯದಿಂದ ''ಸಮಸ್ತ ಚೇತನರೂ ಉಜ್ಜೀವಿಸುವುದು ಹೇಗೆ ?'' ಎಂದು ಪ್ರಶ್ನಿಸಿದಳು. ಆದಕ್ಕೆ ''ಪ್ರಶ್ನಸಂಹಿತೆ'' ಎಂಬ ಗ್ರಂಥವನ್ನೇ ಪ್ರತ್ಯುತ್ತರವಾಗಿ ಹೇಳಿ ಲೋಕಕ್ಕೆ ಮಹೋಪಕಾರ ಮಾಡಿದನು. ಅದರಲ್ಲಿ ತನ್ನಡಿಗಳನ್ನು ಆಶ್ರಯಿಸುವುದೇ ಪರಮ ಹಿತತಮವಾದುದು'' ಎಂಬುದು ವಿಶದವಾಗಿದೆ. ಪ್ರಕೃತ ಅಕಿಂಚನರಾಗಿರುವರು ಆಚರಿಸುವ ಸಾಂಗಪ್ರಪತ್ತಿಯನ್ನು ಈ ದ್ವಯ ತಿಳಿಸುತ್ತದೆ. ಇದನ್ನು ''ಪ್ರಪತ್ತಿಯ ಕರಣಮಂತ್ರ''ವೆನ್ನುವರು ಸಂಪ್ರದಾಯಾಭಿಜ್ಞರು. ಎರಡು ಭಾಗವಾಗಿರುವುದನ್ನು ಕೂಡಿಸಿ, ಅರ್ಥಸಮೇತ ಒಂದು ಸಲ ಅನುಷ್ಠಿಸಿದರೆ ಸಂಸಾರತಾರಕವಾಗುವುದು. ಇದರಲ್ಲಿ 10 ಅರ್ಥಗಳಿವೆ. (ಶ್ರೀಶಬ್ದ-ಮತುಪ್‌ಪ್ರತ್ಯಯ-ನಾರಾಯಣ-ಚರಣ-ಶರಣ ಶಬ್ದಗಳು-ಉಪಸರ್ಗಸಹಿತ-ಧಾತು-ಉತ್ತಮಪುರುಷ - ಉತ್ತರಖಂಡದ ಸವಿಶೇಷಣ ನಾರಾಯಣಶಬ್ದ - ಅದರ ಮುಂದಿನ ಚತುರ್ಥಿ-ನಮಃ ಶಬ್ದ) ಹೀಗೆ ಮಹಾಧನದಂತೆ ಪರಮ ಗೋಪ್ಯವೂ ಪರಮಭೋಗ್ಯವೂ ಆಗಿದೆ. ಇವೆಲ್ಲವನ್ನೂ ಸದಾಚಾರ್ಯರ ಮೂಲಕ

ಚೆನ್ನಾಗಿ ಅರಿತು ಉಜ್ಜೀವಿತರಾಗಬೇಕು. ಸದಾ ಇದನ್ನು ಮನನ ಮಾಡುವುದೇ ಪ್ರಪನ್ನನ ಮುಖ್ಯಕರ್ತವ್ಯ.

पृच्छन्त्या मिन्दिराया ममृतभुवि हितं संप्रवक्त्रोपकर्त्रो
कारुण्यात्सस्पृहाच्च श्रुतिशिस्वरलसद्वाक्ययुग्मं मिलित्वा ॥
मन्त्र श्चेत्यात्मवाचा धन मतिशयितं चोपदिष्टं त्रयीषु
व्याप्तै रर्थै र्विशिष्टो दशभिरपि भवत्यक्षयोऽस्मन्निधि र्हि ॥ १

ಮೂಲ : ಆರುವುರುವಾನವ್ವೈತನ್ನೈ ಯಡ್ದೈನ್ದಿಡತ್ತಾನಡ್ದೈಂದು,
ವೆರುವುರೈಕೇಟ್ಟವ್ವೈ ಕೇಳ್ಪಿತ್ತಕತ್ತುಂ ವಿನ್ನೈವಿಲಕ್ಕಿ ,
ಇರುತಲ್ಯೆ ಯನ್ಬುತನಾಲೆಮ್ಮೈಯಿನ್ನಡಿಶೇರ್ತ್ತರುಳುಂ,
ತಿರುವುಡನೇ ತಿಹಳ್‌ವಾರ್ ಶಿರಿನ್ದಾರೆಂಗಳ್‌ಶಿನ್ದೈಯುಳ್ಳೇ ॥ 2

ಅರ್ಥ :- ಅರು-ಉರು-ಆನವ್ವೈ = ಚೇತನಾಚೇತನಗಳೆಲ್ಲವೂ, ತನ್ನೈ = ತನ್ನನ್ನು, ಅಡ್ದೈಂದಿಡ = ಆಶ್ರಯಿಸಿರಲು, (ಸಮಸ್ತಕ್ಕೂ ಆಧಾರಳಾದ) ತಾನ್ = ತಾನು, ಅಡ್ದೈಂದು = ಆಶ್ರಯಿಸಿ (ಅಂತರ್ವ್ಯಾಪಿನಿಯಾಗಿ) ವೆರು-ಉರೈ = ಭಯದ ಮಾತುಗಳನ್ನು, (ಸಂಸಾರಿಗಳ ಆರ್ತನಾದವನ್ನು) ಕೇಟ್ಟು = ಕೇಳಿ, ಅವ್ವೈ = ಅವನ್ನು, ಕೇಳ್ಪಿತ್ತು = (ತನ್ನವಲ್ಲಭನಿಗೆ) ಕೇಳಿಸುವಂತೆ ಮಾಡಿ, ಅಹತ್ತುಂ = ಅಗಲುವಂತೆ ಮಾಡುವ, ವಿನ್ನೈ = ಕರ್ಮಗಳನ್ನು, ವಿಲಕ್ಕಿ = ಹೋಗಲಾಡಿಸಿ, ಇರು-ತಲ್ಯೆ = ಎರಡು ಕಡೆಗಳಲ್ಲೂ, ಅನ್ಬುತನಾಲ್ = ಪ್ರೇಮ ವಾತ್ಸಲ್ಯಗಳಿಂದ , ನಮ್ಮೈ = ನಮ್ಮನ್ನು , ಇನ್-ಅಡಿ = ಭೋಗ್ಯವಾದ ಅಡಿಗಳನ್ನು , ಶೇರ್ತು-ಅರುಳುಂ = ಸೇರಿಸಿ ಕೃಪೆ ಮಾಡುವವಳಾದ, ತಿರುವುಡನೇ = ಮಹಾಲಕ್ಷ್ಮಿಯೊಡನೇ, ತಿಹಳ್‌ವಾರ್ = ಪ್ರಕಾಶಿಸುವ ಪರಮಾತ್ಮನು, ಎಂಗಳ್ = ನಮ್ಮ, ಶಿಂದೈಯುಳ್ಳೇ = ಹೃದಯದಲ್ಲಿ, ಶಿರಿಂದಾರ್ = ವಿಜೃಂಭಿಸಿದರು.

ತಾತ್ಪರ್ಯ :- ಚೇತನಾಚೇತನ ವಸ್ತುಗಳಿಂದ ಆಶ್ರಯಿಸಲ್ಪಟ್ಟವಳೂ, ಸಮಸ್ತಕ್ಕೂ ಆಶ್ರಯಳೂ, ಆಶ್ರಿತರ ಆರ್ತನಾದವನ್ನು ತಾನು ಕೇಳಿ, ತನ್ನ ವಲ್ಲಭನೂ ಅದನ್ನು ಕೇಳುವಂತೆ ಮಾಡುವವಳೂ, ಸಕಲ ಪಾಪನಿವಾರಕಳೂ ಮತ್ತು ಶೇಷರಾದ ನಮ್ಮಲ್ಲೂ ಶೇಷಿಯಾದ ಪರಮಾತ್ಮನಲ್ಲೂ ಅತ್ಯಂತ ಪ್ರೇಮವುಳ್ಳವಳಾಗಿ, ಭಗವಂತನ ಪಾದಪದ್ಮಾಮೃತವನ್ನು ನಾವು ಸದಾ ಸವಿಯುವಂತೆ ಮಾಡುವವಳೂ ಆದ ಶ್ರೀದೇವಿಯೊಡನೆ ವಿಭ್ರಾಜಮಾನನೂ, ದಯಾನಿಧಿಯೂ ಆದ ವರದರಾಜನು ನಮ್ಮ ಚಿತ್ತದಲ್ಲಿ ಸರ್ವದಾ ಧ್ಯಾನವಿಷಯನಾಗಿ ವಿರಾಜಿಸುವನು. (ಶ್ರೀಯಾಮುನರು ''ಶ್ರೀರಿತ್ಯೇವಚ ನಾಮತೇ ಭಗವತಿ ! ಬ್ರೂಮಃಕಥಂ ತ್ವಾಂ ವಯಂ'' ಎಂದೂ ಶ್ರೀಭಾಷ್ಯಕಾರರು ಗದ್ಯದಲ್ಲಿ

''ಭಗವನ್ನಾರಾಯಣ'' ಎಂದಾರಂಭಿಸಿ, ''ಭಗವತೀಂ ಶ್ರಿಯಂ'' ಎಂದು ಪ್ರಯೋಗಿಸಿ, ಇಬ್ಬರ ಆನುರೂಪ್ಯವನ್ನೂ ಕೊಂಡಾಡಿ, ಸ್ಫುಟಪಡಿಸಿರುವರು.)

**आत्मानं संश्रितेषु स्वत इह सततं चेतनाचेतनेषु ।**
**व्याप्यैवात्माऽपि सर्वाण्यतिभयवचनाऽन्याश्रितानां निशम्य ॥**
**नाथं चाऽऽश्राव्य याऽघं विघटक मवमद्योभयोः प्रमभूम्ना ।**
**प्राप्यांघ्रोः प्रापिका यो लसति सह मयोज्जृम्भतेऽन्त स्तया नः ॥ २**

**ಮೂಲ :** ಓರುಯಿರಾಯ್‌ನಿನ್ರ ಒಣ್‌ಶುಡರಿನ್ಬವುರುತ್ತನಿಲ್ಲುಂ,
ಪೇರುರುವತ್ತಿಲುಂ ಪಿನ್ನದಿಲ್‌ತೋನ್ರುಮುರುಕ್ಕಳಿಲುಂ
ಓರುರುವಾನ ವುಲಹಿಲುಮೇರ್ಕು ಮುರುಕ್ಕಳಿನಾಲ್,
ಶೇರುದಲ್‌ಮನ್ನು ಶೆಯ್ಯಾಳನ್ಬರ್ ನಮ್ಮನಂ ಶೇರ್‌ನ್ದನರೇ ॥ 3

**ಅರ್ಥ** :- ಓರ್-ಉಯಿರಾಯ್-ನಿನ್ರ = (ಸಕಲ ಜಗತ್ತಿಗೂ) ಒಬ್ಬನೇ ಅಂತರಾತ್ಮನಾಗಿರುವ, ಒಣ್ = ಉಜ್ವಲವಾದ (ಸತ್ಯೈಕರೂಪವಾದ) ಶುಡರ್ = ಜ್ಯೋತೀರೂಪವಾದ (ಜ್ಞಾನಾತ್ಮಕವಾದ) ಇನ್ಬ= ಆನಂದರೂಪವಾದ, (ಸತ್ಯನೂ, ಅನಂತನೂ, ಜ್ಞಾನರೂಪನೂ, ಆನಂದನೂ, ಅಮಲನೂ ಆದ) ಉರುತ್ತನಿಲುಂ = ರೂಪದಲ್ಲಿಯೂ, (ಸ್ವರೂಪ ನಿರೂಪಕ ಗುಣಪಂಚಕದಿಂದ ನಿರೂಪಿತವಾದ ದಿವ್ಯಾತ್ಮ ಸ್ವರೂಪದಲ್ಲಿಯೂ) ಪೇರ್ = ಮಹತ್ತರವಾದ, ಉರುವತ್ತಿಲುಂ = ರೂಪದಲ್ಲಿಯೂ, ಪಿನ್ = ಅನಂತರ, ಅದಿಲ್ = ಆ ಪರವಿಗ್ರಹದಿಂದ, ತೋನ್ರುಂ = ಉಂಟಾಗುವ, ಉರುಕ್ಕಳಿಲುಂ = ರೂಪಗಳಲ್ಲಿಯೂ, (ವ್ಯೂಹಾದಿಗಳಲ್ಲೂ) ಓರ್-ಉರುವಾನ = ಏಕರೂಪವಾದ, (ದಿವ್ಯದಂಪತಿ ಶೇಷತ್ವೈಕರೂಪವಾದ) ಉಲಹಿಲುಂ = ಲೋಕದಲ್ಲೂ, ಏರ್ಕುಂ = ಅನುರೂಪವಾದ, ಉರುಕ್ಕಳಿನಾಲ್ = ರೂಪಗಳಿಂದಲೂ, (ಸ್ವರೂಪ-ವಿಗ್ರಹ ಸಾಧಾರಣವಾದುದು ರೂಪ) ಶೇರುದಲ್ = ಸೇರಿಕೊಳ್ಳುವುದರಲ್ಲಿ, ಮನ್ರು = ಸ್ಥಿರಳಾದ (ಬಿಡದೆ ಕೂಡಿಕೊಂಡಿರುವ) ಶೆಯ್ಯಾಳ್ = ಋಜು ಪ್ರಕೃತಿಯಾದ ಮಹಾಲಕ್ಷ್ಮಿಯಲ್ಲಿ, ಅನ್ಬರ್ = ಪ್ರೇಮವುಳ್ಳ, (ಶ್ರೀವಲ್ಲಭನು) ಭಗವಂತನು, ನಂ-ಮನಂ = ನಮ್ಮ ಮನಸ್ಸಿನಲ್ಲಿ, ಶೇರ್‌ನ್ದನರ್ = ಸೇರಿರುವನು.

**ತಾತ್ಪರ್ಯ** :- ಸಮಸ್ತ ಜಗತ್ತಿಗೂ ಒಬ್ಬನೇ ಅಂತರಾತ್ಮನೂ, ಅತ್ಯುಜ್ವಲ ಜ್ಯೋತಿರೂಪನೂ, ಆನಂದರೂಪನೂ, ದಿವ್ಯಾತ್ಮರೂಪನೂ, ಮಹಾರೂಪನೂ, ಪರರೂಪನೂ ಮತ್ತು ವ್ಯೂಹಾದಿರೂಪನೂ ಆದ ಭಗವಂತನು ಸರ್ವತ್ರ ಏಕರೂಪವಾದ ಲೋಕದಲ್ಲಿರುವ ಅನುರೂಪವಾದ ಸಮಸ್ತ ರೂಪಗಳೊಂದಿಗಿರುವುದರಲ್ಲಿ ಸ್ಥಿರ

माध्वीपूर्णारुणश्रीचरण उपवसन् धाम नित्योपसेव्यं ।
नित्याकारः क्रमेण ह्युपगतचतुराकार इच्छाविसारः ।।
लीलाकूर्मो वराहाकृति रिति विभवाकार आत्मान्तरात्मा ।
सर्वालोकोचितार्चाकृतिरिह चरणौ न्यस्तवान् मानसे नः ।। ೫

ಮೂಲ : ವೇರೋರಣಂಗುತೊಳುಂ ವಿನ್ನೈತೀರ್ ತ್ತೆಮ್ಮೈ ಯಾಣ್ಡುವಾನ್,
ಆರುಮದನ್ಪಯನುಂ ತನ್ದಳಿಕ್ಕು ಮರುಳುಡ್ಯೆಯಾನ್,
ಮಾರಿಲದಾಯಿಲಹುಂ ಮದುಮೆಲ್ಲಡಿ ಪ್ಪೋದಿರಂಡಾಲ್,
ನಾರುತುಳಾಯ್ ಮುಡಿಯಾನ್ ನಮಕ್ಕುಚರಣಾಯಿನನೇ ॥ 6

ಅರ್ಥ :- ವೇರ್-ಓರ್-ಅಣಂಗು = (ವಿಷ್ಣುವನ್ನು ಬಿಟ್ಟು) ಬೇರೆ ಒಂದು ದೇವತೆಯನ್ನು, ತೊಳುಂ-ವಿನ್ನೈ = ಸೇವಿಸುವುದನ್ನು, ತೀರ್ತ್ತು = ನಿವಾರಿಸಿ, ಎಮ್ಮೈ = ನಮ್ಮನ್ನು, ಆಣ್ಡುವಾನ್ = ವಿನಿಯೋಗಿಸಿಕೊಳ್ಳುವವನಾದ, ಆರುಂ = ಉಪಾಯವನ್ನೂ, ಅದನ್-ಪಯನುಂ = ಅದರಫಲವನ್ನೂ, ತಂದ್ = ಕೊಟ್ಟು, ನಾರು-ತುಳಾಯ್-ಮುಡಿಯಾನ್ = ಪರಿಮಳಿಸುವ ತುಳಸೀಮಾಲೆಯ ಮೌಳಿಯ ಭಗವಂತನು, ಮಾರಿಲದಾಯ್= (ಆಶ್ರಿತರಿಗೆ) ಚ್ಯುತಿಯಿಲ್ಲದಂತೆ, ಇಲಹುಂ = ಬೆಳಗುವ, ಮದು = ರಸಭರಿತವಾದ, ಮೆಲ್ = ಮೃದುವಾದ, ಅಡಿ-ಪೋದು = ಪಾದಗಳೆಂಬ ಹೂವಿನ, ಇರಂಡಾಲ್ = ಪಿರಡರಿಂದ, ನಮಕ್ಕು = ನಮಗೆ, ಶರಣ್-ಆಯಿನನ್ = ರಕ್ಷಕನಾಗಿ ಆಗಿರುವನು.

ತಾತ್ಪರ್ಯ :- ಶ್ರೀಮನ್ನಾರಾಯಣನು ನಮ್ಮನ್ನು ತನ್ನ ಸೇವೆಯಲ್ಲೇ ರಸಿಕರನ್ನಾಗಿಯೂ, ಇತರ ದೇವತೆಗಳನ್ನು ಸೇವಿಸದಂತೆಯೂ ಮಾಡಿದನು. ದಯಾನಿಧಿಯಾಗಿ, ಉಪಾಯವನ್ನೂ ಅದರ ಫಲವನ್ನೂ ನಮಗೆ ಕೊಟ್ಟನು. ಪರಿಮಳಭರಿತತುಲಸೀದಾಮ ಮೌಳಿಯಾಗಿ, ಯಾವಕೊರತೆಯೂ ಇಲ್ಲದೆ ಬೆಳಗುವ, ಮಧುರಸಪರಿಪೂರ್ಣವಾದ, ಮತ್ತು ಅತಿಮೃದುವಾದ ಚರಣಕಮಲಗಳಿಂದಲೇ ಶರಣಾಗತರಾದ ನಮ್ಮನ್ನು ಸಂರಕ್ಷಿಸುವವನಾಗಿರುತ್ತಾನೆ. (''ಶರಣ'' ಶಬ್ದಾರ್ಥದ ವಿವರಣೆಯಿದು.)

अस्मान् देवान्नरोपासनकरदुरितान्मोचयन् सन्नियन्ता ।
दत्वोपायं तदीयं फलमपि करुणालु श्च सन्त्रायमाणः ।।
सौरभ्यावासभूतां स्वशिरसि तुलसीमालिकां धारयन् सन् ।
संरक्षत्यच्युतश्रीमधुरमृदुलेनाङ्घ्रिपुष्पद्वयेन ।। ೬

ಮೂಲ : ಪೆರುವದುನಾಂ ಪೆರಿಯೋರ್ ಪೆರುಂಪೇರೆನ ನಿನ್ರವೆಮ್ಮೈ,
ವೆರುಮ್ಮೈಯುಣರ್ತ್ತಿ ವಿಲಕ್ಕಾದ ನನ್ನಿಲೈಯಾದರಿಪ್ಪಿತ್ತು,
ಉರುಮತಿಯಾಲ್ ತನ್ನೈಯೊಣ್ ಶರಣೆನ್ನ ವುಣರ್ವು ತನ್ದ,
ಮರುವುಡ್ಮೈ ಮಾರ್ಬನುಕ್ಕೇ ಮನ್ನಡೈಕ್ಕಲಮಾಯಿನಮೇ ॥ 7

ಅರ್ಥ :- ಪೆರಿಯೋರ್ = ಹಿರಿಯರಾದಮಹಾತ್ಮರು, ಪೆರುಂ = ಪಡೆಯುವ, ಪೇರು = ಪುರುಷಾರ್ಥವನ್ನು, ಪೆರುವದು = ಪಡೆಯೋಣ. ಎನ = ಎಂದು, ನಿನ್ರ = ಇಚ್ಛಿಸುವ, ಎಮ್ಮೈ = ನಮ್ಮನ್ನು, ವೆರುಮ್ಮೈ = ಏನೂ ಇಲ್ಲದಿರುವಿಕೆಯನ್ನು (ಆಕಿಂಚನ್ಯವುಳ್ಳವರೆಂದು) ಉಣರ್ತ್ತಿ = ತಿಳಿಸಿ, ವಿಲಕ್ಕಾದ = ಅಗಲುವಂತೆ ಮಾಡದ, ನಲ್-ನಿಲೈ = ಒಳ್ಳೆಯ ನಿಷ್ಠೆಯನ್ನು, ಆದರಿಪ್ಪಿತ್ತು = ಆದರಿಸುವಂತೆಮಾಡಿ, ಉರು-ಮತಿಯಾಲ್ = ದೃಢವಾದ ಜ್ಞಾನದಿಂದ (ಮಹಾವಿಶ್ವಾಸದಿಂದ) ತನ್ನೈ = ತನ್ನನ್ನು, (ಶ್ರಿಯಃಪತಿಯನ್ನು) ಒಣ್ = ಉಜ್ವಲವಾದ (ಉಪಾಯಾಂತರ ನಿರಪೇಕ್ಷವಾದ) ಶರಣ್-ಎನ್ನ = ಶರಣು ಎಂದು ಹೇಳುವಂತೆ, ಉಣರ್ವು = ಜ್ಞಾನವನ್ನು, ತನ್ದ = ಕೊಟ್ಟ, (ಮತ್ತು) ಮರು-ಉಡ್ಮೈ-ಮಾರ್ಬನುಕ್ಕೇ = ಶ್ರೀವತ್ಸದಿಂದ ಅಲಂಕೃತವಾದ ವಕ್ಷಸ್ಸ್ಥಳದ ಆ ಪರಮಾತ್ಮನಿಗೇ, ನಾಂ = ನಾವು, ಮನ್-ಅಡೈಕ್ಕಲಂ = ದೃಢವಾದ ರಕ್ಷಣೀಯವಸ್ತುವಾಗಿ, ಆಯಿನಂ = ಆದೆವು.

ತಾತ್ಪರ್ಯ :- "ಮಹಾತ್ಮರಿಗೆ ಲಭಿಸುವ ಪುರುಷಾರ್ಥಕ್ಕೆ ಆಸೆಪಡುವ ನಾವು ತೀರ. ಅಕಿಂಚನರು" ಎಂಬುದನ್ನು ತಿಳಿಸಿದನು. ಎಂದೂ ಅಗಲದಂತಹ ಒಳ್ಳೆಯ ನಿಷ್ಠೆಯನ್ನು ನಾವು ಆದರಿಸುವಂತೆ ಮಾಡಿದನು. ದೃಢವಿಶ್ವಾಸದಿಂದ, "ಶ್ರಿಯಃಪತಿಯೇ ಶರಣು" ಎಂದು ಮೊರೆಯಿಡುವಂತೆ ಪೂರ್ಣ ಜ್ಞಾನವನ್ನಿತ್ತನು. ನಾವು ಅಂತಹ ಶ್ರೀವತ್ಸ ಶೋಭಿತ ವಕ್ಷಸ್ಸ್ಥಳನಾದ ಆ ಭಗವಂತನಿಗೇ ಸಂರಕ್ಷಣೀಯ ವಸ್ತುವಾಗಿರುವೆವು. ('ಪ್ರಪದ್ಯೇ' ಎಂಬುದರ ವಿವರಣೆ).

प्राप्स्याम स्तं पुमर्थं वय मिति महतां लभ्य माशावतो नः ।
आवेद्याकिञ्चनत्वं त्वपगतविरहावस्थितावादृतांश्च ।।
कृत्वा स्वं गाढमत्योज्ज्वलशरणमितीवानुभूतेः प्रदातुः ।
श्रीवत्सोरस्स्थलस्यैव हि परपुरुषस्याभवामाभिरक्ष्याः ।। ७

ಮೂಲ : ಅರುಮರೈಯಾದುಂ ತುರವೋಮೆನವರಿನ್ದಾರ್ ಕವರುಂ,
ಕರುಮಮುಂ ಜ್ಞಾನಮುಂ ಕಾದಲುಂ ಕಣ್ಡುಮುಯಲಕಿಲ್ಲೋಂ

ವರುವದು ಮಿನ್ನಿಲೈಯಾಯ್ ಮಯಲುತ್ತವೆಮಕ್ಕುಳದೋ,
ತಿರುಮಹಳಾರ್ ಪಿರಿಯಾತ್ತಿರುಮಾಲನ್ರಿ ನರ್‌ಚರಣೆ ॥ 8

**ಅರ್ಥ** :- ಅರು-ಮರೈ-ಯಾದುಂ = ಅತಿಗಹನವೂ ಪಾವನವೂ ಆಗಿರುವ ವೇದಗಳೆಲ್ಲವನ್ನೂ, ತುರವೋಂ = ತೊರೆಯಲಾರೆವು, ಎನ = ಎಂದು, ಅರಿಂದಾರ್ = ದೃಢವಾಗಿ ಅರಿತಿರುವವರಿಂದ, ಕವರುಂ = ಸ್ವೀಕರಿಸಲ್ಪಟ್ಟ, ಕರುಮಮುಂ = ಕರ್ಮಯೋಗವನ್ನೂ, ಜ್ಞಾನಮುಂ = ಜ್ಞಾನಯೋಗವನ್ನೂ, ಕಾದಲುಂ = ಭಕ್ತಿಯೋಗವನ್ನೂ, ಕಂಡು = (ಅವು ದುಷ್ಕರಗಳೆಂದು) ವಿಮರ್ಶಿಸಿ ತಿಳಿದು, ಮುಯಲ = ಪ್ರವರ್ತಿಸಲು, ಹಿಲ್ಲೋಂ = ಶಕ್ತರಲ್ಲವಷ್ಟೆ, ವರುವದುಂ = ಮುಂದೆ ಬರುವುದೂ ಸಹ, ಇನ್ನಿಲೈಯಾಯ್ = ಇದೇಸ್ಥಿತಿಯಾಗಿ, ಮಯಲ್ = ವ್ಯಾಮೋಹವನ್ನು, (ಅಜ್ಞಾನವನ್ನು) ಉತ್ತ = ಹೊಂದಿದ, ಎಮಕ್ಕು = ನಮಗೆ, ತಿರು-ಮಗಳಾರ್ = ಮಹಾಲಕ್ಷ್ಮಿಯೊಂದಿಗೆ, ಪಿರಿಯಾ = (ಎಂದಿಗೂ) ಅಗಲದಿರುವ, ತಿರು-ಮಾಲ್-ಅನ್ರಿ = ಎರಡು ವಿಭೂತಿಗಳಿಗೂ ಅಧಿಪತಿಯಾದ ಲಕ್ಷ್ಮೀವಲ್ಲಭನ ಹೊರತು, (ಬೇರೆ) ನಲ್-ಶರಣ್-ಉಳದೋ ? = ಒಳ್ಳೆಯ ಉಪಾಯವು (ಶರಣವು) ಉಂಟೋ ? (ಇಲ್ಲ)

ತಾತ್ಪರ್ಯ :- ಪಾವನವೂ, ಅತಿಗಹನವೂ ಆದ ವೇದಗಳನ್ನು ಬಿಡಲಾಗುವುದಿಲ್ಲವೆಂದು ದೃಢವಾಗಿ ನಂಬಿರುವವರು ಆಚರಿಸುವ ಕರ್ಮ-ಜ್ಞಾನ-ಭಕ್ತಿಯೋಗಗಳನ್ನು ನಡೆಸಲು ನಾವು ಶಕ್ತರಲ್ಲ. ಅಕಿಂಚನತೆಯೊಂದೇ ನಮ್ಮಲ್ಲಿರುವುದು. ಮುಂದೆಯೂ ನಮ್ಮ ಸ್ಥಿತಿ ಹೀಗೆಯೇ ಇರಬಹುದು. ಆದ್ದರಿಂದ ಮಹಾಲಕ್ಷ್ಮಿಯನ್ನೆಂದಿಗೂ ಅಗಲದವನಾಗಿಯೂ, ಲೀಲಾ-ಭೋಗ ವಿಭೂತಿಗಳಿಗೆ ಅಧಿಪತಿಯಾಗಿಯೂ, ಇರುವ ಶ್ರೀಪತಿಯೇ ನಮಗೆ ಪರಮೋಪಾಯವು, ಮತ್ತಾವುದೂ ಇಲ್ಲ.

सर्वान् दुर्ज्ञेयवेदानपि न हि विसृजाम स्त्विति ज्ञातवद्भिः ।
कर्म ज्ञानं च भक्तिं त्रितय मुपगृहीतं समीक्ष्य प्रवृत्ताः ।।
नानुष्ठाने किल स्म स्थिति रिय मनुवर्तेत पश्चादपीति ।
व्यामुग्धानां विना नः क उभयपतिमाश्लिष्टमं रक्षकोऽस्ति ।। ८

ಮೂಲ : ಶುರುಂಗಾವಕಲಮೆಲ್ಲಾಂ ತುಳಂಗಾ ವಮುದಕ್ಕಡಲಾಯ್,
ನೆರುಂಗಾದನ್ನೆತ್ತುಡನೇ ನಿನ್ರ, ನಂ ತಿರುನಾರಣನಾರ್,
ಇರಂಗಾದಕಾಲಂಗಳೆಲ್ಲಾ ಮಿಳನ್ದ ಪಯನ್ ಪೆರವ್ರೋರ್,
ಪೆರುಂಕಾದಲುತ್ತಿ ನಿಮೇಲ್ ಪಿರಿಯಾಮ್ಮೆ ಯುಹನ್ದನಮೇ ॥ 9

ಅರ್ಥ :- ಶುರುಂಗಾ = ಸೊರಗದ (ಸಂಕೋಚವಾಗದ) ಅಹಲಂ-ಎಲ್ಲಾಂ = ವಿಸ್ತಾರವಾದುವೆಲ್ಲವೂ, ತುಳಂಗಾ = ತುಳುಕದ (ಚಲಿಸದ) ಅಮುದ-ಕಡಲಾಯ್ = ಅಮೃತಸಾಗರದಂತೆ (ಪರಮಭೋಗ್ಯಳಾಗಿರುವ) ಅನ್ನೈತ್ತುಡನೇ = ಸಮಸ್ತ ವಸ್ತುಗಳೊಂದಿಗೂ, ನೆರುಂಗಾದ = ಬಿಟ್ಟಿರದೆ, ನಿನ್ರ = ಕೂಡಿಕೊಂಡಿರುವ, ನಂ-ತಿರು-ನಾರಣನಾರ್ = ಶ್ರೀಮನ್ನಾರಾಯಣನು, ಇರಂಗಾದ = ಕರುಣಿಸದ, ಕಾಲಂಗಳೆಲ್ಲಾಂ = ಕಾಲಗಳಲ್ಲೆಲ್ಲಾ, ಇಳಿನ್ದ = ಲಭಿಸದ, ಪಯನ್ = ಫಲವನ್ನು (ಮೋಕ್ಷ) ನಾಂ = (ಸ್ವರೂಪ ಯೋಗ್ಯತೆಯುಳ್ಳ) ನಾವು, ಪೆರ = ಪಡೆಯಲು, ಓರ್ = ಅಸಾಧಾರಣವಾದ, ಪೆರುಂಕಾದಲ್ = ಉತ್ಕಟವಾದ ಆಕಾಂಕ್ಷೆಯನ್ನು, ಉತ್ತು = ಪಡೆದು, ಇನಿಮೇಲ್ = ಇನ್ನು, ಪಿರಿಯಾಮೈ = ಅವನನ್ನು ಅಗಲದೆ, ಉಹನ್ದನಂ = ಆನಂದಿತರಾದೆವು.

ತಾತ್ಪರ್ಯ :- ಬದ್ಧದೆಸೆಯಲ್ಲಿ ಪ್ರತಿಕೂಲಳಾಗಿಯೂ, ಉದಾಸೀನಳಾಗಿಯೂ, ಅಲ್ಪಾನುಕೂಲಳಾಗಿಯೂ, ತೋರುವವಸ್ತುಗಳೆಲ್ಲವೂ ಕರ್ಮಬಂಧ ನಿವೃತ್ತಿದೆಸೆಯಲ್ಲಿ ತರಂಗರಹಿತ ಸುಧಾಸಾಗರದಂತೆ ಪರಮಭೋಗ್ಯಳಾಗಿರಲು ಕಾರಣ ಶ್ರೀಮನ್ನಾರಾಯಣನು ಅವುಗಳೊಂದಿಗೆ ಸದಾ ಬಿಡದೆ ಕೂಡಿಕೊಂಡಿರುವುದೆ. ಇದೀಗ ನಮಗೆ ಅರಿವಾಯಿತು. ಇದುವರೆಗೆ ನಮಗೆ ಅವನು ಕರುಣಿಸದಿದ್ದ ಫಲಗಳೆಲ್ಲವನ್ನೂ ಕೊಡುವನು. ನಾವೂ ಪಡೆಯಲರ್ಹರಾದೆವು ಮತ್ತು ಆಸೆಪಡುವವರಾದೆವು. ಇನ್ನು ಅವನನ್ನು ಅಗಲದೆ, ಅತ್ಯಂತ ಹರ್ಷಚಿತ್ತರಾದೆವು. (ಸವಿಶೇಷಣ ನಾರಾಯಣಪದದಲ್ಲಿ ಪತ್ನೀವಿಭೂತಿ ವೈಶಿಷ್ಟ್ಯ ಪ್ರಯುಕ್ತವಾದ ಪರಮಭೋಗ್ಯತೆಯನ್ನೂ ತತ್ಫಲವಾಗಿ ಚೇತನನಲ್ಲುಂಟಾಗುವ ಭಗವದ್ವಿರಹಾಸಹಿಷ್ಣುತೆಯನ್ನೂ, ತದ್ಗತ ಪ್ರೇಮಪರವಶತೆಯನ್ನೂ ವಿಶದ ಪಡಿಸಿದಂತಾಯಿತು).

**निस्सङ्कोचं समस्तं विसृत मविचलं सौधपाथोधिवच्च ।**
**श्रीमान्नायणो न स्त्वविरत मविनाभावसंरक्षितात्मा ।।**
**येष्वप्राप्तं फलं तद्व्यवहितकरुणोष्वत्र कालेषु लब्धुं ।**
**विश्वासं प्रप्य चेतः पर ममित मविश्लेषिता मोदिता स्स्मः ।। ९**

ಮೂಲ : ಕಡಿಶೂಡುಮೂನ್ರುಂ ಕಳಲ್ ಪಣಿನ್ದಾರ್ಕ್ಕಡಿಂದಿಡವೇ,
ಮುಡಿಶೂಡಿನಿನ್ರ ಮುಹಿಲ್‌ವಣ್ಣನಾರ್ ಮುನ್ನುಲಹಳಂದ,
ಅಡಿಶೂಡು ನಾಮವರಾದರತ್ತಾಲುಡುತ್ತುಕ್ಕಳೈಯುಂ
ಪಡಿಶೂಡಿಯನ್ಬುಡನೇ ಪಣಿಶೆಯ್ಯ ಪ್ಪಣಿಂದನಮೇ ॥ 10

**ಅರ್ಥ** :- ಕಳಲ್-ಪಣಿಂದಾರ್ಕ್ಕು = (ತನ್ನ) ಪಾದಗಳನ್ನು ಶರಣವೆಂದು ಆಶ್ರಯಿಸಿದವರಿಗೆ, ಕಡಿ = ಸಹಿಸಲಾಗದ (ಕಡುತರವಾದ) ಶೂಡು-ಮೂನ್ರುಂ = ಮೂರು ತಾಪಗಳನ್ನೂ (ಆಧ್ಯಾತ್ಮಿಕಾದಿಗಳನ್ನೂ), ಕಡಿಂದ್-ಇಡವೇ = ನಿವಾರಿಸುವುದಕ್ಕಾಗಿಯೇ ಮುಡಿ-ಶೂಡಿ-ನಿನ್ರ = ಕಿರೀಟವನ್ನು ಧರಿಸಿಕೊಂಡಿರುವ, (ಭಕ್ತರ ತಾಪಗಳನ್ನು ಕಡಿಯುವುದಕ್ಕಾಗಿಯೇ ಸಾರ್ವಭೌಮತ್ವವನ್ನು ಧರಿಸಿದೆಯೋ ಎಂಬಂತಿರುವ) ಮುಗಿಲ್-ವಣ್ಣನ್-ಆರ್ = ನೀಲಮೇಘವರ್ಣನಾದ ಮತ್ತು ಸರ್ವೋದಾರನಾದ ಭಗವಂತನ, ಮುನ್ = ಹಿಂದೆ (ತ್ರಿವಿಕ್ರಮಾವತಾರದಲ್ಲಿ) ಉಲಹು = ಲೋಕಗಳನ್ನು, ಅಳಂದ = ಅಳೆದ, ಅಡಿ = ಪಾದಗಳನ್ನು, ಶೂಡು = ಶಿರಸ್ಸಿನಲ್ಲಿಧರಿಸಿರುವ, ನಾಂ = ನಾವು, ಅವರ್-ಆದರತ್ತಾಲ್ = ಆ ನೀಲಮೇಘನ ಆದರದಿಂದ, ಉಡುತ್ತು-ಕ್ಕಳೈಯುಂ-ಪಡಿ = ಧರಿಸಿ, ಮತ್ತೆ ತೆಗೆಯುವ ರೀತಿಯನ್ನು, ಶೂಡಿ = ವಹಿಸಿಕೊಂಡು, ಅನ್ಬುಡನೇ = ಪ್ರೇಮದಿಂದ, ಪಣಿ = ಕೈಂಕರ್ಯಗಳನ್ನೂ, ಶೆಯ್ಯ = ಮಾಡಲು, ಪಣಿಂದನಂ = ನಮಿಸಿ, ಅದರಲ್ಲೇ ಹುದುಗಿದೆವು.

**ತಾತ್ಪರ್ಯ** :- ಶ್ರೀಮನ್ನಾರಾಯಣನು ವರ್ಣದಲ್ಲೂ ಗುಣದಲ್ಲೂ ನೀಲಮೇಘಸನ್ನಿಭನಾಗಿ, ತನ್ನಾಶ್ರಿತರ ತಾಪತ್ರಯವನ್ನು ನಿವಾರಿಸಲು, ತ್ರಿವಿಕ್ರಮವ್ಯಾಜದಿಂದ ಜಗತ್ತನ್ನೇ ಅನುಗ್ರಹಿಸಿದನು. ಆ ಪರಮಾತ್ಮನ ಅಡಿದಾವರೆಗಳನ್ನು ಶಿರೋಭೂಷಣವಾಗಿ ಮಾಡಿಕೊಂಡಿರುವೆವು. ನಿರತಿಶಯ ಪ್ರೀತಿಯಿಂದ ಆ ಚರಣಸೇವೆಯಲ್ಲಿ ಅನವರತವೂ ಸಂಸಕ್ತರಾದೆವು. (ತಾದರ್ಥ್ಯವು ಚತುರ್ಥೀ ಪ್ರತಿಪಾದ್ಯವು. ಅದರ ಕಾರ್ಯವು ಕೈಂಕರ್ಯವು. ಆ ಕೈಂಕರ್ಯವೇ ಪುರುಷಾರ್ಥವು. ಈ ಅರ್ಥವು ಇಲ್ಲಿ ನಿರೂಪಿಸಲ್ಪಟ್ಟಿತು.

**तीव्रं तापत्रयं तन्निजपदशरणानां च हर्तुं विधर्तुः ।**
**दीक्षाबद्धं किरीटं धृतजलदरुचेः पादयो र्लोकमात्रोः ।।**
**धर्तारो ह्युतमाङ्गे वय मिह तदुदारादरादेत्य रीतिं ।**
**न्यासान्यासक्रियायाः प्रियतरपरिचर्या विधातुं नता स्स्मः ॥** १०

ಮೂಲ : ತನದನ್ರಿವೈಯೆನ ತ್ತಾನನ್ರಿನ ಮರೈಶೊನ್ನದೆಲ್ಲಾಂ,
ತನದೆನ್ರುಂ ತಾನೆನ್ರುಮೆಣ್ಣುದಲಾಲ್ ವರುಮೀನಮೆಲ್ಲಾಂ,
ಮನದೊನ್ರಿಯಿನ್ರು ನಮವೆನ್ರದೇ ಕೊಣ್ಡುಮಾತ್ತುದಲಾಲ್
ತನದನ್ರಿಯೊನ್ರುಮಿಲ್ಲಾತ್ತನಿತ್ತಾದ್ವೆ ಶದಿರ್‌ತ್ತನನೇ ॥ 11

ಅರ್ಥ :- ಇವ್ವೈ = ಈ ಪದಾರ್ಥಗಳು, (ದೇಹೇಂದ್ರಿಯಾದಿಗಳು) ತನದ್-ಎನ್ರು = ತನ್ನವಲ್ಲ, ತಾನ್-ಅನ್ರು = ತಾನೂ, (ಆತ್ಮವೂ) ಅಲ್ಲ, ಎನ = ಎಂದು, ಮರೈ-ಶೊನ್ನದು-ಎಲ್ಲಾಂ = ವೇದಗಳು ಹೇಳಿದುವೆಲ್ಲವೂ, ತನದು-ಎನ್ರುಂ = ತನ್ನವೆಂದೂ, ತಾನ್-ಎನ್ರುಂ = ತಾನೆಂದೂ, (ಆತ್ಮನೆಂದೂ) ಎಣ್ಣುದಲಾಲ್ = ತಿಳಿಯುವುದರಿಂದ, ವರುಂ = ಬರುವ, ಈನಂ = ಹೀನತೆಯು, (ಅಥವಾ ಹಾನಿಯು) ಎಲ್ಲಾಂ = (ಅಹಂಕಾರ ಮಮಕಾರ ಮೂಲಕವಾದ ಸಾಂಸಾರಿಕ ದೋಷಗಳು) ಎಲ್ಲವೂ, ಇನ್ರು = ಈಗ, ಮನದು = ಮನಸ್ಸಿನಲ್ಲಿ, ಒನ್ರಿ = ಊರಿ, ನಮ-ಎನ್ರದೇ-ಕೊಂಡು = ''ನಮಃ'' ಎಂಬ ಪದವನ್ನೇ ಹೇಳಿ, ಮಾತ್ತುದಲಾಲ್ = ಹೋಗಲಾಡಿಸುವುದರಿಂದ, ತನದ್-ಅನ್ರಿ = ತನ್ನದಲ್ಲದುದು, (ತನಗೆ ಶೇಷವಾಗದ) ಒನ್ರು-ಇಲ್ಲಾ = ಯಾವುದೊಂದೂ ಇಲ್ಲದವನಾದ, (ಸ್ವಶೇಷಾರ್ಥನಾದ) ತನಿ-ತಾದೈ = ಅಸಾಧಾರಣ ತಂದೆಯಾದ್ದ ಸರ್ವಶರಣ್ಯನೂ, ಶದಿರ್ತನನ್ = ಚತುರನಾದನು.

ತಾತ್ಪರ್ಯ :- ದೇಹಾದಿವಸ್ತುವಾವುದೂ ಆತ್ಮನದಲ್ಲವೆಂದೂ, ಆತ್ಮನೂ ಅಲ್ಲವೆಂದೂ, ಶ್ರುತಿಗಳು ಘೋಷಿಸಿದರೂ, ಅವಿವೇಕದಿಂದ ಎಲ್ಲವೂ ತನ್ನದೆಂದೂ, ತಾನೆಂದೂ, ಭಾವಿಸಿದ್ದರಿಂದ ಈ ಹೀನಸಂಸಾರಚಕ್ರಕ್ಕೆ ಸಿಕ್ಕಿರುವೆವು. ಇಂದು ವಿವೇಕಗೊಂಡು, ''ನಮಃ'' ಎನ್ನಲಾರಂಭಿಸಲು, ನನ್ನದೆಂಬುದಾವುದೂ ಇಲ್ಲ, ಆ ಪರಮಾತ್ಮನದಲ್ಲದುದು ಯಾವುದೂ ಇಲ್ಲ, ಎಲ್ಲವೂ ಅವನ ಶೇಷಭೂತವು, ಎಂಬರ್ಥವು ಮನಮುಟ್ಟಿತು. ಇಂತಹ ಅರ್ಥದ ಮಂತ್ರವನ್ನು ಕರುಣಿಸಿ, ಸರ್ವಶರಣ್ಯನೂ, ಜಗತ್ಪಿತೃನೂ ಆದ ಭಗವಂತನು ಅತಿಚತುರನಾಗಿ, ತನ್ನದು ತನ್ನನ್ನು ಸೇರಿತೆಂದು ಅತ್ಯಾನಂದಭರಿತನಾದನು. ('ನಮಃ' ಶಬ್ದಾರ್ಥನು ಸಂಧಾನದಿಂದ ಅಹಂಕಾರ ಮಮಕಾರಗಳೆಂಬುವು ಅನಿಷ್ಟ ನಿವೃತ್ತಿಯಾಗಿ, ಇಷ್ಟಸಿದ್ಧಿಸುವುದೆಂದು ವಿವರಿಸಲ್ಪಟ್ಟಿತು).

**स्वीया नैते न चापि स्वय मिति निगमोदीरितं सर्वमेव ।**
**स्वीयं चेति स्वयं चेत्यवगतिसुलभां हीनतां स्वान्तरूढाम् ।**
**विज्ञायाद्यैवतूक्तेः नम इति विगमात् हीनताया श्च तस्याः**
**तातोऽसाधारणोऽयं चतुरतम इह ह्यात्माशेषाखिलार्थः ।।** ११

ಮೂಲ : ಶೇರ್ಕುಂತಿರುವಾಳರ್ ಶೇತ್ತಿಯಿಲ್‌ಮನ್ನುದಲ್ ಶೀರ್ ಪೆರಿಯೋರ್ಕು
ಏರ್ಕುಂ ಗುಣಂಗಳಿಲಕ್ಕಾಂ ವಡಿವಿಲಿನ್ಪೈ ಯಡಿಹಳ್,
ಪಾರ್ಕುಂಶರಣತ್ತಿಲ್ ಪತ್ತುದಲ್ ನನ್ನಿಲೈನಾಂ ಪೆರುಂ ಪೇರು,
ಏರ್ಕಿನ್ರವೆಲ್ಲೈಹಳೆಲ್ಲಾಂ ಕಳೈಯರ ವಣ್ಣನಮೇ ॥ 12

**ಅರ್ಥ :-** ಶೇರ್ನ್ದುಂ - (ಚೇತನರನ್ನು ತನ್ನ ಪತಿಯೊಡನೆ) ಸೇರಿಸುವ, ತಿರುವಾಳರ್ = ಮಹಾಲಕ್ಷ್ಮಿಯೊಡನಿರುವ ನಾರಾಯಣನು, ಶೇರ್ತ್ತಿಯಿಲ್ = (ತಾನು) ಕೂಡಿರುವುದರಲ್ಲಿ, ಮನ್ನುದಲ್ = ಸ್ಥಿರತೆಯ (ನಿತ್ಯಸಂಬಂಧವು) ಪೆರಿಯೋರ್ಕ್ಕು = ಪರಾತ್ಪರ ಪರಮ ಪುರುಷನಿಗೆ, ಏರ್ನ್ದುಂ = ತಕ್ಕಂತಹ, ಗುಣಂಗಳ್ = ಗುಣಗಳಿಗಿಂತಲೂ, ಇಲಕ್ಕಾಂ = ಲಕ್ಷ್ಯವಾಗುವ, (ಮನಸ್ಸಿಗೆ ವೇದ್ಯವಾಗುವ) ವಡಿವಿಲ್ = ವಿಗ್ರಹದಲ್ಲಿ, ಶೀರ್ = ಮಂಗಳಗುಣ ಪೂರ್ಣವಾದ, ಇಣೈ-ಅಡಿಹಳ್ = ಎರಡುಪಾದಗಳು (ಎಂದು), ಪಾರ್ನ್ದುಂ = ವಿಮರ್ಶಿಸಿ ನಿರ್ಣಯಿಸಿರುವ, ಶರಣತ್ತಿಲ್ = ಉಪಾಯದಲ್ಲಿ, ಪತ್ತುದಲ್ = ಆಶ್ರಯಿಸುವುದು, ನನ್ನಿಲೈ = ಒಳ್ಳೆಯ ಸ್ಥಿತಿಯನ್ನು (ಆಕಿಂಚನ್ಯವನ್ನು), ನಾಂ = (ಸಂಸಾರಿಗಳಾದ) ನಾವು, ಪೆರುಂ-ಪೇರು = ಪಡೆಯುವ ಪರಮ ಪುರುಷಾರ್ಥವು, ಏರ್ಕಿನ್ರ = ಇವುಗಳಿಗೆ ಉಚಿತವಾದ, ಎಲ್ಲೈಹಳ್-ಎಲ್ಲಾಂ = ಎಲ್ಲೆಗಳೆಲ್ಲವೂ, ಕಳೈ-ಅರ (ಪೈರಿಗೆ ಕಳೆಯಂತಿರುವ) ವಿರೋಧಿಗಳು ನಾಶವಾಗಲು, ಎಣ್ಣಿನಂ = ಪರಿಗಣಿಸಿದೆವು.

**ತಾತ್ಪರ್ಯ :-** ''ಪುರುಷಕಾರಳಾದ ಶ್ರೀಯೊಂದಿಗೆ ನಾರಾಯಣನಿಗಿರುವ ನಿತ್ಯ ಸಂಬಂಧ, ದಿವ್ಯಮಂಗಳ ವಿಗ್ರಹೋಪಲಕ್ಷಕ ಚರಣದ್ವಂದ್ವ, ಅದನ್ನೇ ಉಪಾಯವನ್ನಾಗಿ ಪಡೆಯುವಿಕೆ, ಅಕಿಂಚನತೆ, ಪಡೆಯುವ ಪುರುಷಾರ್ಥ, ಇವುಗಳಿಗೆ ತಕ್ಕ ಸ್ವರೂಪ ಸ್ವಭಾವಗಳು, ಎಲ್ಲವೂ ವಿಶದಪಡಿಸಲ್ಪಟ್ಟಿವೆ'' ಎಂದು ಆರಂಭಾನುಗುಣವಾಗಿ ಹಿಂದೆ ಹೇಳಿರುವ ವಿಷಯಗಳನ್ನೇ ಓದುಗರಿಗೆ ಮನದಟ್ಟಾಗಲು ಸಂಗ್ರಹಿಸಿ, ಮುಕ್ತಾಯಗೊಳಿಸಿರುವರು.

**सन्धात्र्या लोकमातु र्नियमयितु रियं नित्यसम्बन्धता च ।**
**सर्वस्मादुत्तमस्योचितगुणगणतो लक्ष्यभूते स्वरूपे ।।**
**भव्यात्मीयांघ्रियुग्मं शरणवरणताऽकिंचनत्वं पुमर्थः ।**
**इत्येषां युक्तसीमाभुव इव गणयामासिमाद्याऽनवद्याः ।। १२**

**श्रीमते निगमान्तमहादेशिकाय नमः ।**
**श्रीदेशिक प्रबन्धस्थाः द्वयसङ्ग्रहगाथिकाः ।**
**सार्थाः श्लोकीकृता स्सर्वाः गोपालार्येण सन्मुदे ।।**

॥ಶ್ರೀಃ॥

॥ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ॥

# ಚರಮಶ್ಲೋಕಚ್ಚುರುಕ್ಕು

**ಮೂಲ :** ಕಲ್ಲಾರಹಲುಂ ಕರುಮಮುಂ ಞಾನಮುಂ ಕಾದಲುಂ ಮತ್ತು,
ಎಲ್ಲಾನಿಲೈಹಳುಕ್ಕೇರ್ಕ ವಿದಿತ್ತ ಕಿರಿಶೈಹಳುಂ,
ವಲ್ಲಾರ್ ಮುಯಲ್‌ಹ ವಲಿಯಿಳನ್ನಾರೆನ್ರನೈತ್ತೊತ್ತುಹೆನ್ರು,
ಎಲ್ಲಾತ್ತರುಮಮುರೈತ್ತವರಿನ್ನಡಿ ಶೇರ್‌ನ್ದನಮೇ ॥ 1

ಅರ್ಥ :- ಕಲ್ಲಾರ್ = ಸಮ್ಯಕ್ ಜ್ಞಾನವಿಲ್ಲದವರು, ಅಹಲುಂ = ಬಿಟ್ಟುಬಿಡುವ, ಕರುಮಮುಂ = ಕರ್ಮ ಯೋಗದಲ್ಲೂ, ಜ್ಞಾನಮುಂ = ಜ್ಞಾನಯೋಗದಲ್ಲೂ, ಕಾದಲುಂ = ಭಕ್ತಿಯೋಗದಲ್ಲೂ, ಮತ್ತು = ಮತ್ತು, ಎಲ್ಲಾ-ನಿಲೈಹಳುಕ್ಕು = ಅವಸ್ಥೆಗಳೆಲ್ಲಕ್ಕೂ, ಏರ್ಕ = ತಕ್ಕಂತೆ, ವಿದಿತ್ತ = (ಗೀತೆಯಲ್ಲಿ ಶ್ರೀ ಕೃಷ್ಣನು) ವಿಧಿಸಿದ, ಕಿರಿಶೈಹಳುಂ = ಕ್ರಿಯೆಗಳಲ್ಲೂ, ವಲ್ಲಾರ್ = ಶಕ್ತಿಯುಳ್ಳವರು, ಮುಯಲ್‌ಹ = ಪ್ರವರ್ತಿಸುವರು, ವಲಿ-ಯಿಳನ್ನಾರ್ = ಸಾಮರ್ಥ್ಯವಿಲ್ಲದವರು, ಎನ್-ತನ್ನೈ = ನನ್ನನ್ನೇ, ತೊಳುಹ = ಉಪಾಯಾಂತರ ಸ್ಥಾನದಲ್ಲಿರಿಸಿ ಕೊಳ್ಳುವರು, ಎನ್ರು = ಹೀಗೆ, ಎಲ್ಲಾ-ದರುಮಂ = ಧರ್ಮವೆಲ್ಲವನ್ನೂ, ಉರೈತ್ತವರ್ = ಉಪದೇಶಿಸಿದ ಶ್ರೀಕೃಷ್ಣನ, ಇನ್-ಅಡಿ = ಭೋಗ್ಯವಾದ ಪಾದಗಳನ್ನು, ಶೇರ್‌ನ್ದನಂ = ಸೇರಿದವರಾದೆವು.

ತಾತ್ಪರ್ಯ :- ಜ್ಞಾನಹೀನರು ಬಿಟ್ಟುಬಿಡುವಂತಹ ಕರ್ಮ ಜ್ಞಾನ-ಭಕ್ತಿಯೋಗಗಳಲ್ಲೂ, ಸಮರ್ಥರಾದವರು ತಮತಮಗೆ ರುಚಿಸಿದ ಕ್ರಿಯೆಯಲ್ಲಿ ಪ್ರವೃತ್ತರಾಗುವರು. ಶಕ್ತಿಯಿಲ್ಲದವರು ತನ್ನನ್ನೇ (ಪರಮಾತ್ಮನನ್ನೇ) ಉಪಾಯಾಂತರಸ್ಥಾನದಲ್ಲಿರಿಸಿಕೊಳ್ಳುವರು. ಎಂದು ಎಲ್ಲಾ ಧರ್ಮವನ್ನೂ ಅವರವರಿಗೆ ತಕ್ಕಂತೆ ಎಲ್ಲರೂ ಪರಿಗ್ರಹಿಸಿಕೊಳ್ಳುವುದಕ್ಕೇ ಅರ್ಜುನನ್ನು ವ್ಯಾಜೀಕರಿಸಿಕೊಂಡು ಉಪದೇಶಿಸಿದ ಗೀತಾಚಾರ್ಯನ ಪಾದಾರವಿಂದಗಳನ್ನೇ ಸದಾಚಾರ್ಯ ಕಟಾಕ್ಷದಿಂದ ತತ್ವಪುರುಷಾರ್ಥವನ್ನು ಪಡೆದ ನಾವು ಉಪಾಯಾಂತರಗಳಲ್ಲಿ ಪ್ರವರ್ತಿಸಲಾಗದೆ ವಿಶ್ವಾಸಾತಿಶಯದಿಂದ ವಿಳಂಬಾಕ್ಷಮರಾಗಿ ಉಪಾಯವನ್ನಾಗಿಯೂ ಉಪೇಯವನ್ನಾಗಿಯೂ ಪಡೆದೆವು.

**सम्यक्ज्ञानेन हीना यदिह च विजहुः कर्मयोगादिकांश्च ।**
**तेष्वप्यन्यास्ववस्थास्वनुगुणविधिनोपात्तसर्वक्रियासु ।।**
**सम्यक्ज्ञानाः प्रवृत्ता स्स्युरपि तदबला मां ह्युपयं न्यसेयुः ।**
**एवं सर्वांश्च धर्मान् उपदिशत उपाशिश्रयामोऽङ्घ्रियुग्मम् ।। १**

ಮೂಲ : ವೆರುಮ್ಮೈಯುಣ್ಣರ್‍ನ್ದದು ಮುನ್ನಿಟ್ಟು ವೇರಂಗಮಿಲ್ಲೈ ಯೆನ,
ಕುರಿಯವನಿನ್ರವೈಯೆಟ್ಟಕ್ಕುದಿತ್ತಿಡುಂ ಕೋಣ್ಶೈತುರಂದು,
ಉರುಮಯನತ್ತಿರಮೆನ್ನ ಪ್ಪೊರ್ರಾನಿಲೈ ಯೋರ್‍ನ್ದಿಡವ್ವೋರ್,
ಅರನೆರಿಯನ್ರುರೈತ್ತಾನಳಿಯಾ ವರಮಾಯಿನನೇ ॥ 2

ಅರ್ಥ:- ವೆರುಮ್ಮೈ = ಅಕಿಂಚನತೆಯನ್ನು, ಉಣರ್‍ನ್ದು = ತಿಳಿದುಕೊಂಡು, ಅದು-ಮುನ್ನಿಟ್ಟು = ಆಕಿಂಚನ್ಯವನ್ನೇ ಮುಂದಿಟ್ಟುಕೊಂಡು, ವೇರು-ಅಂಗಂ-ಇಲ್ಲೈ-ಎನ = ಬೇರೆ ಯಾವ ಅಂಗಗಳೂ ಇಲ್ಲವೆಂದು, ಕುರಿಯವನ್ = ಕುಳ್ಳ ಮನುಷ್ಯನು, ನಿನ್ರ-ಅವೈ = ಇರುವ ಹಣ್ಣು- ಹೂ ಮೊದಲಾದುವನ್ನು, ಎಟ್ಟ = ಎಟುಕಿಸಿಕೊಳ್ಳಲು, ಕುದಿತ್ತಿಡುಂ = ನೆಗೆಯುವ, ಕೋಣ್ಶೈ = ಪೀಡೆಯನ್ನು, (ಕ್ಲೇಶವನ್ನು) ತುರಂದು = ಬಿಟ್ಟು, ಉರು = ದೃಢವಾದ, ಅಯನ್-ಅತ್ತಿರಂ-ಎನ್ನ = ಬ್ರಹ್ಮಾಸ್ತ್ರದಂತೆ, ಪ್ಪೋರಾ = ಸಹಾಯಾಂತರಾಪೇಕ್ಷೆಯಿಲ್ಲದ, ನಿಲೈ = (ಪ್ರಪತ್ತಿಯ) ಸ್ಥಿತಿಯನ್ನು, ಓರ್‍ನ್ದ್ = ತಿಳಿದು, ಇಡ = (ಭಾರವನ್ನು) ಇರಿಸಲು, ಓರ್ = ಅಸಾಧಾರಣವಾದ, ಅರ-ನೆರಿ = ಧರ್ಮಮಾರ್ಗವನ್ನು, ಅಳಿಯಾ = ಎಂದಿಗೂ ಅಳಿಯದ, ಅರಂ = ಆಯಿನರ್ = ಧರ್ಮನೆನೆಸಿದ (ಶ್ರೀಕೃಷ್ಣನು) ಅನ್ರು = ಆ ಕಾಲದಲ್ಲಿ, ಉರೈತ್ತಾನ್ = ಉಪದೇಶಿಸಿದನು.

ತಾತ್ಪರ್ಯ :-ಪರಮಾತ್ಮನನ್ನು ಪಡೆಯಲು ನಮ್ಮಲ್ಲಿ ಏನೂ ಇಲ್ಲದಿರುವುದನ್ನು ಮೊದಲು ತಿಳಿಯಬೇಕು. ಆಭಾವನೆಯನ್ನು ಪುರಸ್ಕರಿಸಿಕೊಂಡು, ಪ್ರಪತ್ತಿಗೆ ನಿಯತವಾದ ಆನುಕೂಲ್ಯ ಸಂಕಲ್ಪಾದ್ಯಂಗಗಳ ಹೊರತು ಬೇರೆ ಯಾವುದೂ ಬೇಕಿಲ್ಲವೆಂಬುದನ್ನರಿಯಬೇಕು. ಯತ್ನಿಸಿದರೂ ಎಟುಕಿಸದಷ್ಟು ಎತ್ತರದಲ್ಲಿ ಹಣ್ಣಿಗಾಗಿ ಕುಳ್ಳನು ನೆಗೆನೆಗೆದು ವೃಥಾಕ್ಲೇಶಪಡುವಂತೆ ಶ್ರಮಪಡದೆ, ಇತರ ಸಹಕಾರ್ಯಪೇಕ್ಷೆಯಿಲ್ಲದ ಬ್ರಹ್ಮಾಸ್ತ್ರನ್ಯಾಯದಂತೆ ಎಂದು ದೃಢವಾಗಿ ನಂಬಿ, ಆತ್ಮಭರವನ್ನು ದೇವರಲ್ಲಿ ಒಪ್ಪಿಸಬೇಕು. ''ಎಂದಿಗೂ ಅಳಿಯದ ಧರ್ಮ'' ನೆಂದೆನಿಸಿದ ಕೃಷ್ಣಪರಮಾತ್ಮನು ಅರ್ಜುನನಿಗೆ ಉಪದೇಶಿಸುವ ನೆಪದಲ್ಲಿ ಈ ಪರಮರಹಸ್ಯವನ್ನು ಜಗತ್ತಿಗೇ ಕರುಣಿಸಿರುವನಲ್ಲವೆ ! ಸದಾಚಾರ್ಯೋಪದೇಶದಿಂದ ಇದನ್ನರಿತು ಉಜ್ಜೀವಿತರಾಗಬೇಕು. (''ಸರ್ವಧರ್ಮಾನ್ ಪರಿತ್ಯಜ್ಯ'' ಎಂಬುದರ ವಿವರಣೆಯಿದು).

आकिंचन्यं विदित्वा तदनु तदु पुरस्कृत्य चान्या: प्रतीका: ।
नापेक्ष्या इत्यवेत्योन्नतफल मिव तत् प्राप्तु मुत्पत्य खर्व: ।।
खिन्न सन्त्यज्य तच्चाप्यतिदृढचतुरास्यास्त्ररीतिं च बुध्वा ।
न्यस्तव्यं चैकधर्मायनमतिशयित: प्राह धर्मस्तदानीम् ।। २

ಮೂಲ : ವಾರಿದಿವಿಟ್ಟು ಮಲರ್ ಮಹಳೋಡು ಮದುರೈವಂದು,
ಬಾರತ ವೆಂಶಮರ್ ಪಾರ್ಮಹಳ್ ಬಾರಂ ಶೆಹವುಹಂದು,
ಶಾರತಿಯಾಯ್ ಮುನ್ಬು ತೂದನುಮಾಯ್ತ್ತಳರುಂವಿಶಯನ್,
ತೇರದಿಲ್ನಿನ್ರವನ್ನೈ ತ್ತೇತ್ತಿನ್ನಾನ್ ತಿರಮಾಯಿನಮೇ ॥ 3

ಅರ್ಥ :- ವಾರದಿ-ವಿಟ್ಟು = ಕ್ಷೀರಸಮುದ್ರವನ್ನು ಬಿಟ್ಟು, ಮಲರ್-ಮಹಳ್-ಓಡು = ಮಹಾಲಕ್ಷ್ಮಿಯೊಡನೆ, ಮದುರೈ-ವಂದ್ = ಉತ್ತರ ಮಧುರೆಯಲ್ಲಿ ಬಂದವತರಿಸಿ, ಬಾರತ-ವೆಂ-ಶಮರ್ = ಕ್ರೂರವಾದ ಭಾರತಯುದ್ಧದಲ್ಲಿ, ಪಾರ್-ಮಹಳ್ = ಭೂದೇವಿಯ, ಬಾರಂ = ಭಾರವನ್ನು, ಶೆಹ = ನಾಶಮಾಡುವುದಕ್ಕೆ, ಉಹಂದು = ಕಲ್ಪಿಸಿ, ಶಾರತಿಯಾಯ್ = ಸಾರಥಿಯಾಗಿಯೂ, ಮುನ್ಬ್ = (ಇದಕ್ಕಿಂತ) ಮೊದಲು, ತೂದನುಮಾಯ್ = ದೂತನಾಗಿಯೂ (ನಂತರ) ತಳರುಂ = ವ್ಯಾಕುಲ ಚಿತ್ತನಾದ, ವಿಶಯರ್ = ಅರ್ಜುನನ, ತೇರ್-ಅದಿಲ್-ನಿನ್ರ್ = ರಥದಲ್ಲಿದ್ದುಕೊಂಡೇ, ಅವನ್ನೈ = ಆ ಅರ್ಜುನನ್ನನ್ನು, ತೇತ್ತಿನ್ನಾನ್ = ತತ್ತ್ವೋಪದೇಶಮಾಡಿ, ಉದ್ಧರಿಸಿ ಗೀತಾಚಾರ್ಯನ, ತಿರಂ-ಆಯಿನಂ = ವಶವಾದೆವು ("ಮಾಂ" ಎಂಬುದರ ವಿವರಣೆ)

ತಾತ್ಪರ್ಯ :- ಶ್ರೀಮನ್ನಾರಾಯಣನು ಕ್ಷೀರಸಮುದ್ರದಲ್ಲಿ ಮಹಾಲಕ್ಷ್ಮೀ ಸಮೇತನಾಗಿದ್ದಂತೆಯೇ ಉತ್ತರ ಮಧುರೆಯಲ್ಲೂ ಲಕ್ಷ್ಮಿಯೊಡನೆಯೇ ಅವತರಿಸಿದನು. ಅಧರ್ಮವನ್ನು ನಿರ್ಮೂಲಗೊಳಿಸಿ, ಭೂಭಾರವನ್ನು ಕಡಿಮೆಮಾಡಿ ಧರ್ಮವನ್ನು ನೆಲೆಗೊಳಿಸಲು, ಪಾಂಡವರ ದೂತನೂ ಆದನು. ಯುದ್ಧದಲ್ಲಿ ಅರ್ಜುನನಿಗೆ ಸಾರಥಿಯಾಗಿದ್ದನು. ಧರ್ಮಾಧರ್ಮಬುದ್ಧಿ ವ್ಯಾಕುಲನಾಗಿ ಶರಣುಹೊಂದಿದ ಅರ್ಜುನನಿಗೆ ತತ್ತ್ವೋಪದೇಶಮಾಡಿದನು. ಅವನನ್ನು ಉದ್ಧರಿಸಿದನು. ಅಂತಹ ಪರಮಾತ್ಮನಿಗೆ ವಶವಾಗಿಹೆವು. ನಮ್ಮನ್ನೂ ಅಂತೆಯೇ ಉಜ್ಜೀವಿತರನ್ನಾಗಿ ಮಾಡುವನು. ಅವನ ನಿತ್ಯಸೇವೆಗೈದು ಆನಂದಿಸೋಣ. (ಅರ್ಜುನವ್ಯಾಜದಿಂದ ಲೋಕಕ್ಕೆ ಅನುಗ್ರಹಿಸಿದ "ಚರಮಶ್ಲೋಕ"ದಲ್ಲಿರುವ "ಮಾಂ" ಎಂಬುದರ ತತ್ತ್ವಾರ್ಥವನ್ನು ಸದಾಚಾರ್ಯೋಪದೇಶದಿಂದ ಅರಿತು, ನಿತ್ಯಸುಖಿಗಳಾಗಬೇಕು.)

त्यक्त्वा क्षीरपयोनिधिं च मधुरां लक्ष्म्या सहागत्य तं ।
भूभारं त्ववतार्य भारतरणे भूत्वा च सूतः पुरा ।।
दूतोऽतीवभयार्तफल्गुनरथात् यस्तं ररक्ष स्वयम् ।।
तस्यैतस्य हरेः पदाम्बुजमहादासा वयं स्मोऽधुना ।। ३

**ಮೂಲ :** ತನ್ನರುಳಾಲ್ ಪೆರುಂ ಶಾದನಂ ಶಾದಕನೆನ್ರಿವತ್ತೈ,
ತನ್ನುಡನೆಣ್ಣುದಲ್ ನೀಂಗ ತನಿತ್ತೊರು ಶಾದನಮಾಯ್,
ಪೊನ್ನರುಳೋಡುಮಪ್ಪೂಮಹಳೋಡುಂ ಪುಹಳನಿನ್ರ,
ಇನ್ನುರೈ ಯೀಶನ್ನೈಯೇ ಯೇಕಮೆಣ್ಣ ವಿಶ್ಶೆಂದನಮೇ ॥ 4

ಅರ್ಥ :- ತನ್ನರುಳಾಲ್ = ತನ್ನ (ಪರಮಾತ್ಮನ) ದಯೆಯಿಂದಲೇ, (ಚೇತನನು) ಪೆರುಂ = ಪಡೆಯುವ, ಶಾದನಂ = ಉಪಾಯವು, ಶಾದರ್ಕ = (ತಾನು) ಸಾಧಕನಾಗಿರುವುದೂ, ಎನ್ರಿವತ್ತೈ = ಎಂಬ ವಿಷಯವನ್ನು, ನೀಂಗ = ನಿವಾರಿಸಲು, ತನಿತ್ = ತಾನೇ ಆದ, ಒರು = ಅಸದೃಶನಾದ, ಶಾದನಮಾಯ್ = ಉಪಾಯವಾಗಿ, ಪೊರ್-ಅರುಳೋಡು = ಸರ್ವಭೋಗ್ಯವಾದ ಪರಮಕರುಣೆಯೊಂದಿಗೂ, ಪೂ-ಮಹಳೋಡುಂ = ಮಹಾಲಕ್ಷ್ಮಿಯೊಂದಿಗೂ (ಕೂಡಿಯೇ) ಪುಹಳ್ = ಹೊಗೊಳಿಸಿಕೊಳ್ಳುವಂತೆ, ನಿನ್ರ = ಇರುವ, ಇನ್-ಉರೈ = ಇಂಪಾದ ಮಾತುಗಳುಳ್ಳ, ಈಶನ್ನೈಯೇ = ಸರ್ವೇಶ್ವರನಾದ ನಾರಾಯಣನನ್ನೇ, ''ಏಕಂ'' ಮಂತ್ರದಲ್ಲಿರುವ ಏಕಪದದರ್ಥವೆಂದು, ಎಣ್ಣ = ತಿಳಿಯಲು, ಇಶ್ಶೆಂದನಂ = ಅನುಸಂಧಾನ ಮಾಡಿದೆವು.

ತಾತ್ಪರ್ಯ :- ಚೇತನನು ತಾನು ಸಾಧಕನೆಂದೂ, ತಾನಾಚರಿಸುವುದು ಉಪಾಯವೆಂದೂ, ಮತ್ತು ಅದರ ಫಲವನ್ನು ತಾನು ಪಡೆಯುವನೆಂದೂ ತಿಳಿದಿರುವನಷ್ಟೆ, ಈ ಭಾವನೆ ತಪ್ಪು. ಇದು ಹೋಗಬೇಕು. ಹೇಗೆ ಹೋಗುವುದೆಂದರೆ, ''ಮಾಂ'' ಶಬ್ದದಲ್ಲಿರುವ ಆ ಅರ್ಥಗಳನ್ನರಿಯಬೇಕು. ''ಪರಮಾತ್ಮನ ನಿರವಧಿಕವೂ, ನಿರ್ವ್ಯಾಜವೂ ಆದ ಪರಮಕರುಣೆಯಿಂದಲೇ ಉಪಾಯವು ಲಭಿಸಿದುದು. ಆ ಉಪಾಯವಾದರೋ ಅವನೇ, ಬೇರೆಯಲ್ಲ, ಅವನಿತ್ತ ಕರಣ ಕಳೇಬರಾದಿಗಳಿಂದ ಕೂಡಿದ ಚೇತನನು ಅವನು ದಯಪಾಲಿಸಿದ ಸ್ವರೂಪಜ್ಞಾನದಿಂದ ''ಹಾಲು ಕುಡಿಯುವಮಗುವು ಅಳುವಂತೆ'' ಪ್ರಾರ್ಥಿಸಿಕೊಳ್ಳುವನಷ್ಟೆ, ತಾನು ಆಚರಿಸುವ ಪ್ರಪತ್ತ್ಯುಪಾಯವು ವ್ಯಾಜಮಾತ್ರ. ಚೇತನನ ಭರವನ್ನು ಸ್ವೀಕರಿಸುವ ಸ್ವಾಮಿಯು ತಾನೇ ಉಪಾಯಾಂತರ ಸ್ಥಾನದಲ್ಲಿರುವನು. ಹಾಗೆ ಸ್ವೀಕರಿಸುವುದೂ ಲಕ್ಷ್ಮೀ ಸಮೇತನಾಗಿಯೇ ಮತ್ತು ನಿರತಿಶಯ ದಯೆಯಿಂದಲೇ, ಎಂಬ ಈ ವಿಶದವಾದ ಅರ್ಥವೆಲ್ಲಾ ಅವನ ಮುಖಕಮಲದಿಂದ ಬಂದ ಉಪದೇಶಾಮೃತ ರೂಪವಾದ ರಹಸ್ಯೋಕ್ತಿಯಲ್ಲಿರುವ ''ಮಾಂ'' ಎಂಬ ಪದದಲ್ಲಿ ಅಡಗಿದೆ. ಇದನ್ನೇ ''ಪ್ರಾಪ್ಯಸ್ಯೈವಪ್ರಾಪಕತ್ವಂ'' ಸ್ವಪ್ರಾಧಾನ್ಯ ನಿವಾರಣಂ, ಪ್ರಪತ್ತೇಃ ವ್ಯಾಜಮಾತ್ರತ್ವಂ, ಅನ್ಯೋಪಾಯೈಃ ಅನನ್ವಯಃ, ತದಂಗೈರಪಿ ಅಸಂಬಂಧಃ, ಸರ್ವಸಾಧ್ಯೇಷು ಅಭಿನ್ನತಾ'', ಎಂದು ಶ್ರೀಮದಾಚಾರ್ಯರು ಸಂಗ್ರಹಿಸಿರುವರು.

लभ्यं साधन मात्मनीनकृपया तत् साधकश्च स्वयं ।
प्राप्नोतीत्यपनेतु माश्रितजनैकोपायभूतं हरिम् ॥

अत्यन्तस्पृहणीयया करुणया लक्ष्म्या च साकं स्तुतं ।
रस्योक्तिं प्रभु मभ्युपेयीय परं चेहैकवाच्यं वयम् ॥ ४

ಮೂಲ : ಊನಿಲಿಣ್ಣೈತ್ತುಳಲ್ ವಿಕ್ಕುಂ ವಿನ್ನೈಕ್ಕಡಲುಳ್‌ವಿಳುಂದ,
ಯಾನೆನದಾನಗುಣಂಗಳೆನಕ್ಕಿಶ್ಶೈ ನಲ್ವಳಿಯುಂ,
ತಾನುದವಿತ್ತನ್ನೈ ತ್ತನ್ದಿಡನಿನ್ರ ತನಿತ್ತರುಮಮಂ,
ನಾ ನಿನಿ ವೇರೋರ್ ಪರಂ ನಣುಹಾವಹ್ಹೈ ನಲ್‌ಹಿನ್ರದೇ ॥ 5

ಅರ್ಥ :- ಊನಿಲ್ = ಮಾಂಸಮಯವಾದ ದೇಹದಲ್ಲಿ, ಇಣ್ಣೈತ್ತ್ = ಒಂದಾಗಿ ಸೇರಿಸಿ, ಉಳಲ್‌ವಿಕ್ಕುಂ = ಭ್ರಮಿಸುವಂತೆಮಾಡುವ, ವಿನ್ನೈ-ಕಡಲುಳ್ = ಕರ್ಮ ಮೂಲವಾದ ಪಾಪಸಮುದ್ರದಲ್ಲಿ, ವಿಳುಂದ = ಬಿದ್ದಿರುವ, ಯಾನ್ = ನನ್ನನ್ನೂ, ಎನದಾನ = ನನ್ನದಾದ, ಗುಣಂಗಳ್ = ಗುಣಗಳನ್ನೂ, (ಅನನ್ಯಾರ್ಹದಾಸತ್ವಾದಿಗಳನ್ನು) ಎನಕ್ಕ್-ಇಶ್ಶೈ = ನನ್ನ ಸ್ವಭಾವಕ್ಕೆ ಅನುಗುಣವಾದ, ನಲ್-ವಳಿಯುಂ = ಸನ್ಮಾರ್ಗವನ್ನೂ, ತಾನ್ = (ನಿರವಧಿಕದಯೆಯುಳ್ಳ) ತಾನೇ, ಉದವಿ = ಒದಗಿಸಿಕೊಟ್ಟು, ತನ್ನೈ = ತನ್ನನ್ನು, ತಂದಿಡ = ಲಭಿಸುವಂತೆ ಮಾಡುವುದಕ್ಕಾಗಿಯೇ, ನಿನ್ರ = ಇರುವಂತಹ, ತನಿ-ದರುಮಂ = ಅದ್ವಿತೀಯ ಧರ್ಮನೆನಿಸಿರುವ ಪರಮಾತ್ಮನು, ಇನಿ = ಇನ್ನುಮುಂದೆ, ನಾ್ = ನಾನು, ವೇರ್-ಓರ್-ಪರಂ = ಬೇರೊಂದುಭಾರವನ್ನು, ನಣುಹಾವಹ್ಹೈ = ಹೊಂದದಹಾಗೆ, ನಲ್‌ಹಿನ್ರದ್ = ಅತ್ಯಂತ ಪ್ರೀತಿಯಿಂದಲಲ್ಲವೆ ಮಾಡಿರುವುದು.

ತಾತ್ಪರ್ಯ :- ಮಾಂಸಾದಿಮಯಕಾಯದಲ್ಲಿ ಏಕೀಭವಿಸಿರುವಂತೆ ಇದ್ದು, ಅನಾದಿ ಕರ್ಮ ಪ್ರವಾಹದಲ್ಲಿ ಸಿಕ್ಕಿ ಸಾಕಾಗಿರುವೆನು. ನನಗೆ ಒಳ್ಳೆಯ ಗುಣಗಳನ್ನೂ, ಒಳ್ಳೆಯ ಮಾರ್ಗವನ್ನೂಸಹ ಆ ಪರಮಕೃಪಾಳುವಾದ ಪರಮಾತ್ಮನು ತಾನೇ ಕರುಣಿಸಿದನು. ಇಂತಹ ನನಗೆ ತಾನು ಲಭಿಸುವಂತೆ ಇರುವ ಅಸದೃಶಧರ್ಮನೆನಿಸಿದ ಆ ಗೀತಾಚಾರ್ಯನು ಮತ್ತೆ ಬೇರೊಂದು ಭಾರವನ್ನುನಾನು ವಹಿಸದಂತೆ ಮಾಡಿರುವನು. ಹೀಗೆ ಮಾಡಿದುದು ಕೇವಲ ಅವನ ನಿರ್ವ್ಯಾಜಕರುಣಾತಿಶಯದಿಂದಲೇ ಹೊರತು ಬೇರಾವುದರಿಂದಲೂ ಅಲ್ಲ. (ಇದೇ ''ಶರಣಂ'' ಎಂಬುದರ ಸಾರಾರ್ಥ).

देहे संयोज्य संभ्रमयति च दुरिताम्भोनिधौ मां निमग्नं ।
शेषत्वादीन् मदीयान् अपिच शुभगुणान् स्वानुरूपं सुगार्गम् ॥
कारुण्यब्धि स्स्वयं मे स्वमिह वितरितुं धर्म एवाद्वितीयः ।
नान्यं लप्स्ये यथेतः पर मिह परमं मय्यभिस्निह्यतीशः ॥ ५

ಮೂಲ : ಕಡುವಿನ್ನೈನಾಂ ಪೆರುಂಪೇತ್ತೈತ್ತಹನ್ದಮೈಕೊಣ್ಡುನಮ್ಮೇಲ್,
ನಡೈ ವಿಲಹಾಮಲಿಶೈನ್ದೊರುಕಾಲಂ ತುಣಿವುಡನೇ,
ಉಡಮೈಯಡೈಕ್ಕಲಮಾಹ ಅಡೈಕ್ಕು ಮುಹಪ್ಪದನಾಲ್,
ಅಡೈ ಯೆನ ವನ್ರುರೈತ್ತಾನ ಡೈವಿತ್ತನನ್ ತನ್ನಡಿಯೇ ॥ 6

ಅರ್ಥ :- ನಾಂ = ನಾವು, ಪೆರುಂ-ಪೇತ್ತೈ = ಪಡೆಯಬಹುದಾದ ಪುರುಷಾರ್ಥವನ್ನು, ಕಡು-ವಿನ್ನೈ = ಕ್ರೂರವಾದ ಪ್ರಾರಬ್ಧಕರ್ಮಗಳು, ತಹಂದಮೈ-ಕೊಣ್ಡು = ತಡೆಗಟ್ಟಿವೆಯೆಂದು ತಿಳಿದು, ನಮ್ಮೇಲ್ = ಆಶ್ರಿತರಾದ ನಮ್ಮ ವಿಷಯದಲ್ಲಿ, ನಡೈ = ಆಚರಣೆಯು (ಅನುಗ್ರಹಿಸಿವುದು) ವಿಲಹಾಮಲ್ = ಬಿಟ್ಟುಹೋಗದಂತೆ, ಇಶೈಂದ್ = ಅಂಗೀಕರಿಸಿ, ತುಣಿವುಡನೇ = ಮಹಾವಿಶ್ವಾಸದೊಂದಿಗೆ, ಒರುಕಾಲಂ = ಒಂದುಸಲ, ಉಡಮೈ = (ರಕ್ಷಿಸಲ್ಪಡುವ) ವಸ್ತುವನ್ನು, ಅಡೈಕ್ಕಲಮಾಹ = ರಕ್ಷಿಸಬೇಕಾದುದನ್ನಾಗಿ, ಅಡೈಕ್ಕುಂ = ಒಪ್ಪಿಸಿಡುವ, ಉಹಪ್ಪದನಾಲ್ = ಸಂತೋಷದಿಂದ, ಅಡೈ = ಹೊಂದು, ಎನ = ಎಂದು, ಅನ್ರು = ಆಗ, ಉರೈತ್ತಾನ್ = ಉಪದೇಶಿಸಿದ ಶ್ರೀಕೃಷ್ಣನು, ತನ್ನಡಿ = ತನ್ನ ಪಾದಗಳನ್ನು, ಅಡೈವಿತ್ತನನ್ = (ನಾನು) ಪಡೆಯುವಂತೆ ಮಾಡಿದನು.

ತಾತ್ಪರ್ಯ :- ಭಗವತ್ಕೈಂಕರ್ಯ ರೂಪಪುರುಷಾರ್ಥವು ನನಗೆ ಪಿತ್ರಾರ್ಜಿತವಾದ ಆಸ್ತಿಯಂತೆ ಸ್ವತಃ ಲಭಿಸಬೇಕಾದುದು. ಆದರೂ ಪ್ರಾರಬ್ಧಕರ್ಮವು ಅದು ಲಭಿಸದಂತೆ ಮಾಡುವುದು. ಪರಮಾತ್ಮನು ತನ್ನ ಅಸದೃಶಕೃಪೆಯಿಂದ ಅದನ್ನು ದೊರಕಿಸಿಕೊಡುವನು. ಅದು ಅವನ ಅನನ್ಯ ಸಾಧಾರಣವಾದ ಆಚರಣೆ. ''ನನ್ನನ್ನು ರಕ್ಷಿಸಬೇಕು'' ಎಂದು ಮಹಾವಿಶ್ವಾಸದಿಂದ ಒಂದು ಸಲ ಕೇಳಿಕೊಂಡು, ಭರವನ್ನು ಒಪ್ಪಿಸಿ, ಆಶ್ರಯಿಸಿದರೆ ರಕ್ಷಿಸುವೆನೆಂದು ಹೇಳಿರುವನು. ಆ ಗೀತಾಚಾರ್ಯನ ಅಡಿಗಳನ್ನು ನಾನು ಪಡೆಯುವಂತೆ ಅವನೇ ಮಾಡಿರುವನು. (''ವ್ರಜ'' ಎಂಬುದರ ವಿವರಣೆಯಿದು)

कर्मस्वत्यन्तकृच्छ्रेष्विह पुरुषफलावाप्तिविघ्नायितेषु ।
स्वीकृत्याचार मस्मास्वविरत मिह तत्पूर्णविश्वासयुक्तः ।
वस्त्वेतत्स्वैकरक्ष्यं न्यसनकरणतश्चैकदैवातिहृष्टः ।
गीताचार्यो व्रजेति श्रित मुवद तदाऽलम्भयच्चात्मपादौ ॥ ६

ಮೂಲ : ಕಾನೆನ್ರ ವೇದಂಗಳ್ ಕರ್ರುಂ ಪರನೆನ್ರುಕಾಟ್ಟನಿನ್ರ,
ತಾನಿನ್ರರಿಯ ಹಿಲ್ಲಾರ್ಕ್ಕರಿವಿಕ್ಕುಂ ತನಿತ್ತಿರಲೋನ್,
ವಾನೊನ್ರಿನಾರೋಡು ಮಾನಿಡನೆನ್ನಅವತರಿಪ್ಪಾನ್,
ನಾನೆನ್ರ ನಂತಿರುಮಾಲ್ ನಮ್ಮೈನರ್‌ಪದಂ ಶೇರ್ತ್ತಿಡುಮೇ ॥ 7

**ಅರ್ಥ :-** ಕಾನ್-ಎನ್ರ = ಕಾಡುಗಳಂತಿರುವ (ಅತಿಗಹನವಾದ) ವೇದಂಗಳ್ = ವೇದಗಳಿಂದ, ಕರ್ಕುಂ = ಅಭ್ಯಸಿಸಲ್ಪಡುವ, ಪರನ್ = ಪರಮಪುರುಷನು, (ಪರತತ್ವವು) ಎನ್ರ್ = ಎಂದು, ಕಾಟ್ಟ-ನಿನ್ರ = ತೋರಿಸುವುದಕ್ಕಾಗಿಯೇ ಇರುವ, ತಾನ್ = ತಾನು, ಇನ್ರ್ = ಈಗ (ಗೀತಾಚಾರ್ಯನಾಗಿ ಬಂದಾಗ) ಅರಿಯಹಿಯಿಲ್ಲಾರ್ಕ್ಕು = ಅರಿಯಲಾರದವರಿಗೆ, ಅರಿವಿಕ್ಕುಂ = ಅರಿಯುವಂತೆಮಾಡುವ, ತನಿ = ಅಸಮಾನವಾದ, ತಿರಲೋನ್ = ಪ್ರಭಾವುಳ್ಳವನೂ, ವಾನ್ = ಪರಮಪದದಲ್ಲಿ, ಒನ್ರಿನಾರೋಡು = ತನ್ನಹಾಗೆಯೇ ಇರುವ ನಿತ್ಯಸೂರಿಗಳೊಡನೆ, ಮಾನಿಡನ್-ಎನ್ನ = ಮನುಷ್ಯನಂತೆ, ಅವತರಿಪ್ಪಾರ್ = ಅವತರಿಸಿರುವವನೂ, ''ನಾನ್'' = ನಾನು, ಎನ್ರ = ಎಂದು ಹೇಳಿದವನೂ ಆದ, ನಂ-ತಿರು-ಮಾಲ್ = ನಮ್ಮ ಶ್ರೀವಲ್ಲಭನು, ನಮ್ಮೈ = ನಮ್ಮನ್ನು, ನರ್-ಪದಂ = ಉತ್ತಮವಾದ ಪರಮಪದವನ್ನು, ಶೇರ್ತ್ತಿಡುಂ = ಸೇರಿಸುವನು.

**ತಾತ್ಪರ್ಯ :-** ಅರಿಯಲು ಸುಲಭವಲ್ಲದ ವೇದಗಳು ಪ್ರತಿಪಾದಿಸುವ ಪರಾತ್ಪರ ತತ್ವವು ''ತಾನೇ'' ಎಂದು, ತಾನೇ ಗೀತೆಯಲ್ಲಿ, ''ವೇದೈಶ್ಚಸರ್ವೈರಹಮೇವ ವೇದ್ಯಃ'' ಎಂದು ಅರಿವಿಲ್ಲದ ತನ್ನ ಭಕ್ತರಿಗೆ ಚೆನ್ನಾಗಿ ಬೋಧಿಸುವ ಪ್ರಭಾವವುಳ್ಳನಾಗಿಯೂ, ಪರಮ ಪದದಲ್ಲಿ ನಿತ್ಯಸೂರಿಗಳೊಡನಿದ್ದಂತೆಯೇ ಅನಂತನೇ ಬಲರಾಮನಾಗಿಯೂ, ಗರುಡನೇ ಅರ್ಜುನನಾಗಿಯೂ, ತಾನು ಶ್ರೀಕೃಷ್ಣರೂಪನಾಗಿಯೂ, ಸಾಮಾನ್ಯ ಮಾನವರಂತೆ ಅವತರಿಸಿ, ''ನಾನು'' ಎಂದ ಶ್ರೀಮನ್ನಾರಾಯಣನು ಪ್ರಪನ್ನರಾದ ನಮ್ಮನ್ನು ತನ್ನ ನಿತ್ಯನಿವಾಸವಾದ ಪರಮಪದಕ್ಕೆ ಸೇರಿಸಿಕೊಳ್ಳುವನು. (''ಅಹಂ'' ಎಂಬುದರ ಅರ್ಥವಿದು.)

वेद्यो दुर्ज्ञेयवेदैः पर इति सकलात् य स्स्वयं चाधुना स्वं ।
मर्त्याकारं य एवं न विदुरिह तदावेदनात्तप्रभावः ।।
सार्धं तै र्नित्यसङ्घै स्त्ववतरति जगत्युत्तमः पूरुषोऽहं- ।
शब्दार्थः श्रीप्रियोऽस्मान् निजपरमपदं प्रापयत्येव भक्तान् ।। ೭

ಮೂಲ : ತನ್ನಿಲೈ ಕಾಟ್ಟಿತ್ತನಿಮೈಯುಹನ್ದು ತನಿತ್ತಹವಾಲ್,
ನಂನಿಲೈತೀರ ಅಡೈಕ್ಕಲಂ ಕೊಂಡಡಿಶೇರ್ತ್ತಿಡವೇ,
ಪನ್ನಿಲೈಮೂಲವೆಳುತ್ತಿಲುಂ ಪಾಂಡವರ್ ತೇರ್‌ತನಿಲುಂ,
ಮುನ್ನಿಲೈಕೊಂಡಪಿರಾನ್ ಎಮ್ಮೈಮುನ್ನಿಲೈ ಕೊಣ್ಡನನೇ ॥ 8

**ಅರ್ಥ :-** (ಪರಮಾತ್ಮನು) ತನ್-ನಿಲೈ-ಕಾಟ್ಟಿ = ತನ್ನ ಅನನ್ಯಸಾಧಾರಣ ಸ್ವರೂಪವನ್ನು ತೋರಿಸಿ, ತನಿಮೈ = (ಆಶ್ರಿತರ) ಅಸಹಾಯಕತೆಯನ್ನು (ನೋಡಿ) ಉಹಂದ್ = ಹರ್ಷಿಸಿ,

ತನಿ-ತಹವಾಲ್ = ತನ್ನದೇ ಆದ ದಯೆಯಿಂದ, ನಂ-ನಿಲೈ-ತೀರ = (ಅನಾದಿಯಾದ) ನಮ್ಮಸ್ಥಿತಿ ಪರಿಹಾರವಾಗುವುದಕ್ಕಾಗಿ, ಅಡೈಕ್ಕಲಂ-ಕೊಂಡು = (ನಮ್ಮನ್ನು) ರಕ್ಷಿಸಬೇಕಾದ ವಸ್ತುವೆಂದು ಅಂಗೀಕರಿಸಿ, ಅಡಿ-ಶೇರ್ತ್ತಿಡವೇ = ತನ್ನಡಿಸೇವೆಯಲ್ಲಿ ಸೇರಿಸಿಕೊಳ್ಳುವುದಕ್ಕಾಗಿಯೇ, ಪಲ್-ನಿಲೈ-ಮೂಲ-ಎಳುತ್ತಿಲುಂ = ಹಲವಾರು ತೆರನಾಗಿರುವ ಪ್ರಣವದ ಆದ್ಯಕ್ಷರದಲ್ಲೂ, ಪಾಂಡವರ್-ತೇರ್-ತನಿಲುಂ = ಅರ್ಜುನನ ರಥದಲ್ಲಿಯೂ, ಮುನ್-ನಿಲೈ-ಕೊಂಡ = (ಪ್ರಣವದಲ್ಲಿ) ಮೊದಲೂ, (ತೇರಿನಲ್ಲಿ) ಮುಂದೆಯೂ, ಇರುವಂತೆ ಸಂಕಲ್ಪಿಸಿರುವ, ಪಿರಾ‌ನ್ = ಮಹೋಪಕಾರಮಾಡಿದ ಶ್ರೀಕೃಷ್ಣನು, ಎಮ್ಮೈ = ನಮ್ಮನ್ನು, ಮುನ್-ನಿಲೈ-ಕೊಂಡನನ್ = ತನ್ನ ಎದುರಿಗೆ ಇರುವಂತೆ (ನಾವು ಅವನನ್ನು ಸದಾ ಸೇವಿಸುವಂತೆ) ಮಾಡಲು ಸ್ವೀಕರಿಸಿದನು.

ತಾತ್ಪರ್ಯ :- ಪರಮಾತ್ಮನು ತನ್ನ ಚಿದಚಿದ್ವಿಲಕ್ಷಣವಾದ ಸ್ವರೂಪವನ್ನು ಅರ್ಜುನನ ನೆಪದಲ್ಲಿ ಜಗತ್ತಿಗೇ ತೋರಿಸಿಕೊಟ್ಟನು. ಪರಮಪುರುಷಾರ್ಥವನ್ನು ಪಡೆಯಬೇಕೆಂಬ ಉತ್ಕಟಾಭಿಲಾಷೆಯೊಂದೇ ತನ್ನಾಶ್ರಿತರಲ್ಲಿದ್ದು, ಬೇರಾವುದೂ ಇಲ್ಲದುದನ್ನು ನೋಡಿ ಹರ್ಷಿಸಿ, ತನ್ನ ಪಾದಸೇವೆಯನ್ನು ಅವರಿಗೆ ಸರ್ವದಾ ಕೊಡಬೇಕೆಂದು ಸಂಕಲ್ಪಿಸಿದನು. ಅದಕ್ಕಾಗಿಯೇ ಪ್ರಣವದ ಮೊದಲಕ್ಷರವಾದ 'ಅ'ಕಾರದಲ್ಲಿಯೂ, ಅರ್ಜುನನ ರಥದ ಮುಂದೆಯೂ ಕಂಗೊಳಿಸಿದನು. 'ನಿನ್ನನ್ನು' ಎಂದು ಸಂಬೋಧಿಸುವುದರ ಮೂಲಕ ಆಶ್ರಿತರೆಲ್ಲರನ್ನೂ ಉಜ್ಜೀವನಗೊಳಿಸಿ ಮಹೋಪಕಾರಮಾಡಿದನು. ನಮ್ಮನ್ನು ತನ್ನೆದುರಿಗಿರುವಂತೆಯೇ ಕರುಣಿಸಿದನು. ('ತ್ವಾ ಎಂಬುದು ನಿರ್ಭರನಾದ ನಿನ್ನನ್ನು' ಎಂಬರ್ಥಕೊಡುವುದೆಂದು ಭಾವ)

**आत्मीयां दर्शयित्वा स्थिति मतिमुदित श्चासहायान् विलोक्य ।**
**तामस्माकं ह्यपोढुं स्थिति मिह परिगृह्यात्मरक्ष्यान् प्रपन्नान् ।।**
**आत्मांघ्री एवदातुं विविधगतियुते मूलवर्णे शताङ्गे ।**
**पार्थस्याप्यास्थितोऽस्मान् उपकृदुपगतान् स्वीचकाराद्यधर्मान् ॥८**

**ಮೂಲ :** **ಶಾಡುಹಳೋ ನರಕೋ ಕಡಿತಾಂಗರಳತ್ತಿರಳೋ,**
**ಶೂಡುವಿಡಾವನಲೋ ತೊಲೈಯಾನಿಲೈ ನಳ್ಳಿರುಳೋ,**
**ಶಾಡುಪಡಚ್ಚರಣಾಲನ್ರು, ಶಾಡಿಯ ಶಾರತಿಯಾರ್,**
**ವೀಡು ಶೆಯ್‌ವಿತ್ತು ನಮ್ಮೈ ವಿಡುವಿಕ್ಕಿನ್ರ, ಪಾವಂಗಳೇ ॥** 9

ಅರ್ಥ :- ಶಾಡು = ಗಾಡಿಯು (ಶಕಟಾಸುರನು) ಪಡ = ನಾಶವಾಗುವಂತೆ, ಅನ್ರು = ಆಗ, ಚರಣಾಲ್ = ಕಾಲುಗಳಿಂದ, ಶಾಡಿಯ = ಒದ್ದಂತಹ, ಶಾರದಿಯಾಯ್ =

ಸಾರಥಿಯೂ ಆಗಿದ್ದ ಶ್ರೀಕೃಷ್ಣನು, ವೀಡು = ತ್ಯಾಗವನ್ನು (ಭರನ್ಯಾಸವನ್ನು), ಶೆಯ್‌ವಿತ್ತು = ಮಾಡಿಸಿ, ನಮ್ಮೈ = ನಮ್ಮನ್ನು, ವಿಡುವಿಕ್ಕಿನ್ರ = ಬಿಡಿಸುವಂತಹ, ಪಾವಂಗಳ್ = ಪಾಪಗಳು, (ಏನಾದುವು ಎಂದರೆ) ಕಾಡುಹಳೋ = ಕಾಡುಗಳೋ, ನರಕೋ = ತಾರವಾದಿ ನರಕಗಳೋ, ಕಡಿದಾಂ = ಕ್ರೂರವಾದ, ಗರಳ-ತ್ತಿರಳೋ = ವಿಷದರಾಶಿಯೋ, ಶೂಡು-ವಿಡಾ = ಬಿಸಿಯಾರದ, ಅನಲೋ = ಬೆಂಕಿಯೋ, ತೊಲ್ಲೈಯಾ = ತೊಲಗದ, ನಿಲ್ಲೈ = ಸ್ಥಿತಿಯುಳ್ಳ, ನಳ್-ಇರುಳೋ-ಕಾಳರಾತ್ರಿಯೋ, (ಎಂಬಂತಾಧುವು)

ತಾತ್ಪರ್ಯ :- ಆಶ್ಚರ್ಯ ಚೇಷ್ಟಿತನಾದ ಪರಮಾತ್ಮನು ಕೃಷ್ಣಾವತಾರದಲ್ಲಿ ಶಿಶುವಾಗಿರುವಾಗಲೇ ಶಕಟಾಸುರನನ್ನು ಒದ್ದು ಸಂಹರಿಸಿದನು. ಅರ್ಜುನನಿಗೆ ಸಾರಥಿಯಾಗಿ ಆಶ್ರಿತರನ್ನು ರಕ್ಷಿಸಿದನು. ಅಂತಹ ಪರಾತ್ಪರನು ತನ್ನಲ್ಲಿ ನಾವು ನಮ್ಮ ರಕ್ಷಾಭರವನ್ನು ಸಮರ್ಪಿಸುವಂತೆ ಮಾಡಿ, ಸಮಸ್ತ ವಿಧಪಾಪಗಳನ್ನೂ ನಿವಾರಿಸಿ, ಕಾಪಾಡಿದನು. ಆ ಪಾಪಗಳು, ಕಾಡುಗಳೋ, ನರಕಗಳೋ, ಉಗ್ರವಿಷವೋ, ಜ್ವಲಿಸುವ ಬೆಂಕಿಯೋ, ಕಾಳರಾತ್ರಿಯೋ ಎಂಬತಿದ್ದುವು. ಅಂದರೆ ಪ್ರಾಪ್ತಿ ವಿರೋಧಿಗಳಾದ ಪುಣ್ಯಪಾಪಗಳು ದುಸ್ತರವಾದುದರಿಂದ ಕಾಡುಗಳಿಗೂ, ದುಸ್ಸಹದುಃಖಕರವಾದುದರಿಂದ ನರಕಗಳಿಗೂ, ದುಃಖಮಿಶ್ರವಾಗಿಯೂ ಇರುವುದರಿಂದ ವಿಷಕ್ಕೂ, ತಾಪತ್ರಯಕರಗಳಾದ್ದರಿಂದ ಬೆಂಕಿಗೂ, ಸ್ವರೂಪವನ್ನೇ ತಿಳಿಯದಂತೆ ಮಾಡುವುದರಿಂದ ನಿವಾರಿಸಲಾಗದ ಕಾಳರಾತ್ರಿಗೂ ಹೋಲಿಸಿರುವರು. ಇಷ್ಟುಕಡುತರವಾದ ಪಾಪವೆಲ್ಲವನ್ನೂ ನಾಶಮಾಡಿ ಸಂರಕ್ಷಿಸುವನು ಆ ದಯಾಮೂರ್ತಿಯಾದ ಶ್ರೀಮನ್ನಾರಾಯಣನು ಎಂದು ಭಾವ. (''ಸರ್ವಪಾಪೇಭ್ಯಃ'' ಎಂಬುದರ ವಿವರಣೆ)

**पादाभ्यां च तदा जघान शकटं य श्चाभवत्सारथिः ।**
**चक्रे न्यस्तभरां श्च नो विघटकान्यस्माकमेनांसि च ॥**
**आरण्यान्युत नारकानुत महाक्ष्वेडौघमाहोऽनलं ।**
**सोष्णां वा दुरपोढगाढतिमिरां रात्रिं समीयु र्ध्रुवम् ॥** ९

ಮೂಲ : ಶೆನ್ರುಯರ್ ವಾನಮರ್‌ನ್ದವ್ವಡಿಯಾರುಡನ್ ಶೇರ್‌ನ್ದಿಡವೇ,
ಇನ್ರೆನಿಲಿನ್ರುನಾಳೈಯೆನಿಲ್ ನಾಳೈಯಿನಿ ಶೆರಿನ್ದು,
ನಿನ್ರನಿಲ್ಲೈ ನಿನ್ನನ್ನೆತ್ತುವಿನ್ನೈಯುಂ ನಿನ್‌ವಿಟ್ಟಹಲ,
ಕ್ಕನ್ರಿವಿಡುಪ್ಪನೆನ್ರಾನ್‌ಕರುತ್ತಾಲ್ ನಮ್ಮೈಕಾತ್ತಿಡುಮೇ ॥ 10

ಅರ್ಥ :- ಇನಿ = (ನೀನು ನನ್ನಲ್ಲಿ ಭರವನ್ನು ಅರ್ಪಿಸಿದ) ಮೇಲೆ, ಶೆರಿಂದ್ = ದೇಹವನ್ನು ಬಿಟ್ಟು, ನಿನ್ರ = ಇರತಕ್ಕ, ನಿಲ್ಲೈ-ನಿನ್ರ = ಸ್ಥಿರವಾಗಿದ್ದ, ನಿನ್ = ನಿನ್ನ,

ಅನ್ನೈತ್ತು-ವಿನ್ನೈಯುಂ = ಸಮಸ್ತಪಾಪಗಳೂ, ನಿನ್ -ವಿಟ್ಟು = ನಿನ್ನನ್ನು ಬಿಟ್ಟು, ಅಹಲ = ಅಗಲಿ ಹೋಗುವಂತೆ, ಶೆನ್ರು = (ಅರ್ಚಿರಾದಿಗತಿಯಿಂದ) ಸೇರಿ, ಉಯರ್ = ಸರ್ವೋತ್ಕೃಷ್ಟವಾದ, ವಾನ್ = ಪರಮಪದದಲ್ಲಿ, ಅಮರ್‌ನ್ದು = ಸ್ಥಿರವಾಗಿದ್ದು, ಅ-ಅಡಿಯಾರ್-ಉಡನ್ = (ನನ್ನಂತೆ ಇರುವ) ನಿತ್ಯಸೂರಿಗಳೊಡನೆ, ಶೇರ್‌ನ್ದಿಡ = ಒಂದಾಗಿ ಸೇರುವಂತೆ, ಇನ್ರು-ಎನಿಲ್ = ಇಂದೇ ಹೋಗಬೇಕೆಂದರೆ, ಇನ್ರು = ಈವತ್ತೇ, ನಾಳೈ-ಎನಿಲ್ = ನಾಳೆಯೆಂದರೆ, ನಾಳೈ = ನಾಳೆಯೇ, ವಿಡುಪ್ಪನ್ = ಬಿಡುಗಡೆ ಮಾಡುವೆನು. ಕನ್ರಿ = ಕೋಪಿಸಿಕೊಂಡು, (ಬಿಡಿಸುವೆನು.) ಎನ್ರಾನ್ = ಎಂದು ಹೇಳಿದ ಭಗವಂತನ, ಕರುತ್ತಾಲ್ = ಸಂಕಲ್ಪದಿಂದ, ನಮ್ಮೈ = (ಪ್ರಪನ್ನರಾದ) ನಮ್ಮನ್ನು, ಕಾತ್ತಿಡುಂ = ಸಂರಕ್ಷಿಸುವನು.

ತಾತ್ಪರ್ಯ :- "ನೀನು ನಿನ್ನ ಸಮಸ್ತಭಾರವನ್ನು ನನ್ನಲ್ಲಿ ಒಪ್ಪಿಸು. ಪ್ರಾಪ್ತಿವಿರೋಧಿಗಳಾಗಿ ಹಿಂದಿದ್ದ ಮತ್ತು ಮುಂದೆ ಬರುವಂತಹ ಎಲ್ಲ ಪಾಪಗಳನ್ನೂ ನಾಶಮಾಡುವೆನು. ಅರ್ಚಿರಾದಿ ಮಾರ್ಗದಿಂದ ಪರಮಪದಕ್ಕೆ ಸೇರಿಸಿ, ಅಲ್ಲಿ ನಿತ್ಯಸೂರಿಗಳೊಂದಿಗೆ ಆನಂದಿಸುವಂತೆ ಮಾಡುವೆನು. ನೀನು ಈವತ್ತೇ ಸೇರಬೇಕೆಂದರೆ ಈವತ್ತೇ, ನಾಳೆಯೆಂದರೆ ನಾಳೆಯೇ, ಯಾವಾಗಲಾದರೂ ಸರಿಯೆ ನಿನಗಿಷ್ಟ ಬಂದಾಗ ಸೇರಿಸುವೆನು" ಎಂದು ಹೇಳಿ, ಸಂಕಲ್ಪಿಸಿದ ಶ್ರೀಮನ್ನಾರಾಯಣನು ನಮ್ಮನ್ನು ಸಂರಕ್ಷಿಸಿದನು. ("ಮೋಕ್ಷಯಿಷ್ಯಾಮಿ" ಎಂಬುದರ ವಿವರಣೆ.)

संन्यस्तात्मीयभारात् परमिह जनितैनांसि नो मोचयित्वा ।
पद्धत्याऽर्चिःप्रभृत्या परमपद मसौ प्रापयन् मोचयित्वा ।
तत्रत्यैः नित्यमुक्तैः रमयितु मनिशं त्वद्य चेदद्य एव ।
श्वश्चेत् श्वश्चैव संकल्पत उरुकरुणो मोक्षयन् त्रायते नः ।। १०

ಮೂಲ : ಅರಿವುಮನ್ನೈತ್ತುವಿಲಾ ವಡಿಯೋಮ್ಮೈಯಡ್ಡೈಕ್ಕಲಂಕೊಂಡು,
ಉರವೆನನಿನ್ರದೆಲ್ಲಾಮುರವೇನಿನ್ರ, ತಾನೆಮಕ್ಕಾಯ್
ಮರುಪಿರವಿತ್ತುಯರ್‌ವಾರಾವಹೈಮನಂಕೊಂಡಹಲಾ,
ಇರೈಯವನಿನ್ನರುಳಾಲೆಂಗಳ್ ಶೋಕಂ ತವಿರ್ತ್ತನನೇ ॥ 11

ಅರ್ಥ :- ಅನ್ನೈತ್ತ್- ಅರಿವುಂ-ಇಲಾ = ಯಾವ ಒಂದು ಅವಶ್ಯಕವಾದ ಅರಿವೂ ಇಲ್ಲದ, ಅಡಿಯೋಮ್ಮೈ = (ಸದಾಚಾರ್ಯರ ಅನುಗ್ರಹದಿಂದ) ದಾಸರೆಂದರಿತ ನಮ್ಮನ್ನು, ಅಡ್ಡೈಕ್ಕಲಂ-ಕೊಂಡು = ರಕ್ಷಿಸಬೇಕಾದ ವಸ್ತುವೆಂದು ಅಂಗೀಕರಿಸಿ, ಉರವ್-ಎನ-ನಿನ್ರದ್-ಎಲ್ಲಾ = (ಮಾತಾಪಿತ್ರಾದಿ) ಸಂಬಂಧವೆಂದು ಇರತಕ್ಕವೆಲ್ಲವನ್ನೂ, ಉರವೇ = ಹೊಂದುವುದಕ್ಕಾಗಿಯೇ, ನಿನ್ರ = ಇರುವಂತಹ, ತಾನ್ = (ಭಗವಂತನು) ತಾನು,

ಎಮಕ್ಕಾಯ್ = ನಮಗಾಗಿಯೇ ಆಗಿ; ಮರು-ಪಿರವಿ-ತುಯರ್ = ಪುನಃ ಜನನಾದಿಯಾದ ದುಃಖವು, ವಾರಾವಹ್ಯೆ = ಬಂದಿರುವ ಹಾಗೆ, ಮನಂ-ಕೊಂಡು = ಮನಸ್ಸಿಗೆ ತಂದುಕೊಂಡು, (ಸಂಕಲ್ಪಿಸಿ) ಅಹಲಾ = (ನಮ್ಮ ಮನವನ್ನು) ಬಿಟ್ಟಗಲಧೆ ಇರುವ, ಇರೈಯವನ್ = ಸರ್ವಸ್ವಾಮಿಯೂ ಆದ ಪರಮಾತ್ಮನ, ಇನ್-ಅರುಳಾಲ್ = ಭೋಗ್ಯವಾದ ಕೃಪೆಯಿಂದ, ಎಂಗಳ್ = (ನ್ಯಸ್ತಭರರಾದ) ನಮ್ಮ, ಶೋಕಂ = ಶೋಕವನ್ನು, ತವಿರ್ತ್ತನನ್ = ಹೋಗಲಾಡಿಸಿದನು. (ಮಾಶುಚಃ'' ಎಂಬುದರರ್ಥ.)

ತಾತ್ಪರ್ಯ :- ಅತ್ಯಾವಶ್ಯಕವಾಗಿರಬೇಕಾದ ದೇಹಾತ್ಮಜ್ಞಾನವನ್ನಾಗಲೀ ಶೇಷಶೇಷಿಭಾವ ಜ್ಞಾನವನ್ನಾಗಲೀ, ಸ್ವರೂಪಾನುರೂಪವಾದ ಪುರುಷಾರ್ಥ ಜ್ಞಾನವನ್ನಾಗಲೀ ಯಾವುದೊಂದನ್ನೂ ನಾವು ಪಡೆದಿರಲಿಲ್ಲ. ಸದಾಚಾರ್ಯರ ಅನುಗ್ರಹ ವಿಶೇಷದಿಂದ ಭಗವಂತನ ನಿರುಪಾಧಿಕದಾಸರೆಂದೂ, ಅವನೇ ಸರ್ವವಿಧ ಬಂಧುವೆಂದೂ ಅರಿತೆವು. ನಮಗೆ ವಿಪರೀತಜ್ಞಾನವುಂಟಾಗದಂತೆಯೂ, ಪುನರ್ಜನ್ಮಾದಿಗಳು ಸಂಭವಿಸದಂತೆಯೂ ಇರುವುದಕ್ಕಾಗಿಯೇ ರಕ್ಷಣೀಯವಸ್ತುವನ್ನಾಗಿ ಅವನು ನಮ್ಮನ್ನು ಅಂಗೀಕರಿಸಿದನು. ಆ ಸರ್ವೇಶ್ವರನಾದ ಶ್ರೀಮನ್ನಾರಾಯಣನು ಪ್ರಪನ್ನರಾದ ನಮ್ಮನ್ನು ಅಗಲದಂತೆ ಪರಮದಯೆಯಿಂದ ಸಮಸ್ತ ದುಃಖವನ್ನೂ ಹೋಗಲಾಡಿಸಿ, ಸಂರಕ್ಷಿಸಿದನು.

स्वीकुर्वन् नः प्रपन्नान् धुतसकलमतीन् आत्मसंरक्षणीयान् ।
बन्धूक्त्यर्हान् समस्तान् स्वय मिह विधरन् अस्मदर्थं हि भूत्वा ।।
दुःखं माभूत पुर्नभूकृत मिति हृदयं चाजहत्संवसंश्च ।
स्वामी सर्वाणि दुःखान्यतिशयकृपया भोग्ययाऽनाशयन्नः ॥ ११

श्रीमते निगमान्तमहादेशिकाय नमः ।
श्रीदेशिकप्रबन्धस्थः चरमश्लोकसङ्ग्रहः ।
सश्लोक स्सार्थतात्पर्यः कृतो गोपालसूरिणा ।।

इति श्री देशिकप्रबन्धान्तर्गत-रहस्यत्रय संग्रहस्य सारार्थप्रकाशः विदुषा गोपालार्येण कृतःसम्पूर्णः ।।

श्रीमते वेदान्तरामानुजमहादेशिकाय नमः ॥

श्री:

श्रीमते निगमान्तमहादेशिकाय नमः ।

# ಮುಮ್ಮಣಿ ಕೋವೈ

ಶ್ರೀಮನ್ನಿಗಮಾಂತ ಮಹಾದೇಶಿಕರು ತಿರುವಹೀಂದ್ರಪುರದ ''ಶ್ರೀದೇವ ನಾಯಕನ'' ವಿಷಯವಾಗಿ ಏಳು ಪ್ರಬಂಧಗಳನ್ನು ಬರೆದರು. ಅವು ''ಊಶಲ್ ಏಶಲ್, ಪಂದ್, ಕಳಲ್, ಅಮ್ಮಾನೈ, ಮುಮ್ಮಣಿಕೋವೈ, ನವಮಣಿಮಾಲೈ'' ಎಂದು. ಇವುಗಳಲ್ಲೊಂದು ''ಮುಮ್ಮಣಿಕೋವೈ''. ತಮಿಳಿನ ಪ್ರಬಂಧ ಲಕ್ಷಣದಂತೆ 30 ಪಾಶುರಗಳಿರಬೇಕು, ಹಾಗಿಲ್ಲದೆ ನಮಗೆ ದೊರಕಿರುವುದು 10 ಪಾಶುರಗಳು ಮಾತ್ರ. ಉಳಿದ 20 ಪಾಶುರಗಳೂ ಮತ್ತು ''ಊಶಲ್'' ಆದಿ 5 ಪ್ರಬಂಧಗಳೂ ನಮ್ಮ ದುರದೃಷ್ಟದಿಂದ ಲುಪ್ತವಾಗಿವೆ.

''ಮುಮ್ಮಣಿಕೋವೈ'' ಮೂರು ವಿಧರತ್ನಗಳಿಂದ ಕೂಡಿದ ಮಾಲೆಯಂತೆ ಮೂರು ವಿಧವೃತ್ತಗಳಿಂದ (ಅಹವಲ್, ವೆಣ್ಬಾ, ಕಲಿತ್ತುರೈ) ಕೂಡಿದೆ. ಆದುದರಿಂದಲೇ ಈ ಹೆಸರು ಬಂದಿದೆ. ಹಾಗೂ ಅಂತಾದಿ ರೂಪವಾಗಿದೆ. ಇದರಲ್ಲಿ ಮೊದಲು ಶ್ರೀದೇವಿಯ ಪ್ರಭಾವವನ್ನೂ, ''ಶ್ರೀ'' ಶಬ್ದದ 6 ಅರ್ಥಗಳಲ್ಲಿ ಪುರುಷಾಕಾರ ಪ್ರಪತ್ತಿ ಮಾಡುವರು. ಬಳಿಕ ಶ್ರೀ ದೇವನಾಯಕನ ಕಲ್ಯಾಣಗುಣಗಳನ್ನು ಹೊಗಳಿ ಎಲ್ಲಾ ವಸ್ತುವೂ ಎಲ್ಲಾ ವಿಧ ಬಂಧುವೂ ಅವನೇ ಎಂದು ಸಕಾರಣವಾಗಿ ತಿಳಿಸಿ, ಅವನ ಪಾದಾರವಿಂದಗಳನ್ನು ಶರಣು ಹೊಂದಿದವರು ಅವನಿಗೆ ಸಮಾನರಾಗುವರು ಎಂದು ವ್ಯಕ್ತಪಡಿಸಿರುವರು ಈ ನಮ್ಮ ದೇಶಿಕೇಂದ್ರರು.

ಶ್ರೀ ದೇವನಾಯಕನಲ್ಲಿ ದೇಶಿಕರಿಗೆ ಅತಿಶಯವಾದ ಭಕ್ತಿಯಿರುವುದರಿಂದ ಆಳ್ವಾರ್ಗಳಂತೆ, ತಾವೂ ಅವನನ್ನು ನಾಯಕನನ್ನಾಗಿಯೂ, ತನ್ನನ್ನೂ ನಾಯಕಿಯಂತೆಯೂ, ಮಾಡಿಕೊಂಡು, ಗೆಳತಿಯ ಮತ್ತು ತಾಯಿಯ ಮಾತುಗಳಂತೆ ಹಾಡಿರುವ ಕೆಲವು ಪಾಶುರಗಳು ಓದುಗರಾದ ರಸಿಕರನ್ನು ಮುಗ್ಧರನ್ನಾಗುವಂತೆ ಮಾಡುವುವು.

ಶುಭಕೃತ್
1962

*ವಿದ್ವಾನ್ ಹ. ಗೋಪಾಲಾಚಾರ್ಯ*
ಮೈಸೂರು

||ಶ್ರೀಃ||

||ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ||

# ಮುಮ್ಮಣಿ ಕೋವೈ

ಮೂಲ : ಅರುಳ್‌ತರುಂ ಅಡಿಯರ್‌ಪಾಲ್‌ಮೆಯ್ಯೈವೈತ್ತು,
ತೆರುಳ್‌ತರನಿನ್ರದ್ದೈವನಾಯಕಾ ! ನಿನ್,
ಅರುಳೆನುಂ ಶೀರೋರ್ ಅರಿವೈಯಾನದೆನ,
ಇರುಳ್‌ಶೆಹವೆಮಕ್ಕೋರ್ ಇನ್ನೊಳಿವಿಳಕ್ಕಾಯ್,
ಮಣಿವರೈಯನ್ನನಿನ್‌ತಿರುವುರುವಿಲ್,
ಅಣಿಯಮರಾಹ ಅಲಂಗಲಾಯಿಲಂಗಿ,
ನಿನ್ಪಡಿಕ್ಕೆಲ್ಲಾಂ ತನ್ಪಡಿಯೇರ್ಕ
ಅನ್ಬುಡನ್ ಉನ್ನೋಡವತರಿತ್ತರುಳಿ,
ವೇಂಡುರೈಕೇಟ್ಟುಮೀಂಡವೈಕೇಳ್ವಿತ್ತು,
ಈಂಡಿಯ ವಿನೈಹಳ್ ಮಾಂಡಿಡಮುಯನ್ರು,
ತನ್ನಡಿಶೇರ್‌ನ್ದಮರ್ ಉನ್ನೈಅಣುಹ,
ನಿನ್ನುಡನ್‌ಶೇರ್‌ನ್ದುನಿರ್ಕುಂನಿನ್ ತಿರುವೇ || 1

ಅರ್ಥ:- ಅರುಳ್-ತರುಂ = ದಯೆಯನ್ನು ಬೀರುವ, ಅಡಿಯರ್-ಪಾಲ್ = ನಿನ್ನ ಭಕ್ತರ ವಿಷಯದಲ್ಲಿ, ಮೆಯ್ಯೈ = ಸತ್ಯವನ್ನೂ (ಅಥವಾ ದಿವ್ಯಮಂಗಳ ವಿಗ್ರಹವನ್ನೂ) ವೈತ್ತು = ಸ್ಥಾಪಿಸಿ, ತೆರುಳ್-ತರ = ಜ್ಞಾನವನ್ನು ಕೊಡುವುದಕ್ಕಾಗಿ, ನಿನ್ರ = ಇರುವ, ದೈವನಾಯಕ = ದೇವನಾಯಕನೇ ! ನಿ‌ನ್-ಅರುಳ್-ಎನುಂ = ನಿನ್ನ ಕರುಣೆಯೆಂಬ, ಶೀರ್ = ಕಲ್ಯಾಣ ಗುಣವು, ಓರ್-ಅರಿವೈ-ಆನದು-ಎನ = ಒಂದು ಸ್ತ್ರೀರೂಪವನ್ನು ತಾಳಿರುವುದೋ ಎಂಬಂತೆ, ಇರುಳ್ = ಅಜ್ಞಾನವೆಂಬ ಕತ್ತಲು, ಶೆಹ = ನಾಶವಾಗುವಂತೆಯೂ, ಎಮಕ್ಕು = ನಮಗೆ, ಓರ್-ಇನ್-ಒಳಿ-ಅಸದೃಶವಾದ ಮತ್ತು ಭೋಗ್ಯವಾದ ಪ್ರಕಾಶವುಳ್ಳ, ವಿಳಕ್ಕಾಯ್ = ದೀಪವಾಗಿ, ಮಣಿ-ವರೈ-ಅನ್ನ = ರತ್ನಪರ್ವತದಂತಹ, ನಿನ್-ತಿರು-ಉರುವಿಲ್ = ನಿನ್ನ ಚೆಲುವಿನ (ತನುವಿನಲ್ಲಿ) ರೂಪದಲ್ಲಿ, ಅಣಿ-ಅಮರ್ = ಆಭರಣ ಭೂಷಿತವಾದ, ಆಹ = ವಕ್ಷಸ್ಸ್ಥಳದಲ್ಲಿ, ಅಲಂಗಲಾಯ್ = ಮಾಲೆಯಂತೆ ಅಲಂಕಾರವಾಗಿ, ಇಲಂಗಿ = ಪ್ರಕಾಶಿಸಿ, ನಿನ್-ಪಡಿಕ್ಕ್-ಎಲ್ಲಾಂ = ನಿನ್ನ

ಪ್ರಕಾರಗಳಿಗೆಲ್ಲಾ, ತರ್-ಪಡಿ = ತನ್ನ ಪ್ರಕಾರಗಳನ್ನೂ, ಏರ್ಕ = ಒಪ್ಪಿರುವಂತೆ, ಅನ್ಬುರ್ದ = ಪ್ರೀತಿಯಿಂದ, ಉನ್ನೋಡು = ನಿನ್ನೊಡನೆ, ಅವತರಿತ್ತರುಳಿ = ಅವತಾರಮಾಡಿ, ವೇಂಡು ಉರೈ = ಬೇಕಾದ ಸಂಗತಿಗಳನ್ನು, ಕೇಟ್ಟು = ಕೇಳಿ, ಮೀಂಡು-ಅವ್ವೈ = ಮತ್ತೆ ಅವನನ್ನು, ಕೇಳ್ಪಿತ್ತು = ಕೇಳುವಂತೆ ಮಾಡಿ, ಈಂಡಿಯ-ವಿನೈಹಳ್ = ಪಾಪಸಮೂಹವು, ಮಾಂಡಿಡ = ನಾಶವಾಗುವಂತೆ, ಮುಯನ್ರು = ಯತ್ನಿಸಿ, ತರ್-ಅಡಿ-ಶೇರ್‌ನ್ದ-ತಮರ್ = ತನ್ನಡಿಯಿಡಿದ ಭಕ್ತರು, ಉನ್ನೈ = ಅಣುಹ = ನಿನ್ನನ್ನು ಸೇರುವಂತೆ, ನಿನ್ನುರ್ದಶೇರ್‌ನ್ದ = ನಿನ್ನೊಡನೆ (ಎಂದಿಗೂ ಅಗಲದಂತೆ) ಸೇರಿ, ನಿರ್ಕುಂ = ಇರುವ, ನಿರ್-ತಿರುವೇ = ನಿನ್ನ ಲಕ್ಷ್ಮಿಯೇ ಅಲ್ಲವೇ.

ತಾತ್ಪರ್ಯ :- ಭಕ್ತರಾದ ನಮಗೆ ಜ್ಞಾನಜ್ಯೋತಿಯನ್ನು ಬೆಳಗುವುದರಲ್ಲಿ ''ದಾಸಸತ್ಯ'' ಎಂಬ ಬಿರುದನ್ನು ಪಡೆದು, ದಿವ್ಯವಾದ ಜ್ಞಾನ ನಯನಗಳನ್ನು ಕೊಟ್ಟು, ಕರುಣಿಸುವ ಶ್ರೀ ದೇವನಾಯಕನೇ ! ದಿವ್ಯ ಭೂಷಣಗಳಿಂದ ವಿಭೂಷಿತಳಾಗಿದ್ದರೂ, ಸುಸವರ್ಣತೆಯನ್ನು ಹೊಂದಲು, ಇಂದ್ರನೀಲ ಶೈಲದಂತಿರುವ ನಿನ್ನ ದಿವ್ಯಮಂಗಳ ಮೂರ್ತಿಯ ವಕ್ಷಸ್ಥಳದಲ್ಲಿ ವಿರಾಜಿಸುತ್ತಾ, ದಿವ್ಯ ಮಾಲಿಕೆಯಂತೆ ಕ್ಷಣವೂ ಅಗಲಿರದೆ ಶ್ರೀದೇವಿಯು ನಿತ್ಯ ವಾಸಮಾಡುತ್ತಿರುವಳು. ಈ ಲೋಕದಲ್ಲಿ ನೀನು ಅವತರಿಸುವಾಗಲೆಲ್ಲಾ ಆಕೆಯೂ ನಿನ್ನ ದಿವ್ಯರೂಪಕ್ಕೆ ಅನುರೂಪವಾದ ರೂಪಳಾಗಿಯೇ ಅವತರಿಸುವಳು. ದಿವ್ಯರತ್ನಪ್ರದೀಪದಂತೆ ತಾನಿರುತ್ತಾ ನಮ್ಮ ಹೃದಯಾಂಧಕಾರವನ್ನು, ನಿವಾರಿಸಿ ಬೆಳಗುವಳು. ಭಕ್ತರ ಕೋರಿಕೆಗಳನ್ನು ತಾನು ಆಲಿಸಿ, ನಿನ್ನಲ್ಲಿ ಅರಿಕೆ ಮಾಡಿ, ಅವರ ಕರ್ಮಗಳನ್ನು ಹೋಗಲಾಡಿಸುವಳು. ತನ್ನನ್ನು ಆಶ್ರಯಿಸಿದವರನ್ನು ನಿನ್ನನ್ನು ಪಡೆಯುವಂತೆ ಮಾಡಿ, ನಿನ್ನದಯೆಯೇ ಮೂರ್ತಿಮತ್ತಾಗಿ ಬಂದಂತೆ ತಾನಿರುವಳು. ಅನವರತವೂ ನಿನ್ನೊಡನೆ ಬೆಳಗಿ, ನಿನ್ನ ಪ್ರಭಾವವನ್ನು ಹೆಚ್ಚಿಸಿರುವ ಈ ಮಹಾಲಕ್ಷ್ಮಿಯೇ ನಮ್ಮ ಈ ಪ್ರಪತ್ತಿಯಿಂದ ಪ್ರಸನ್ನಳಾಗಿ ಸಕಲ ವಿಧದಿಂದಲೂ ನಮಗೆ ಜ್ಞಾನ ಜ್ಯೋತಿಯನ್ನು ಬೀರಿ, ಕೃಪೆಮಾಡುವಳು.

सत्यं रूपं निधाय स्वक मिह करुणादियिषु स्वाश्रितेषु ।
ज्ञानं दातुं स्थित ! श्रीदिविषदधिपते ! सद्गुण स्ते कृपाख्यः ।।
एकं स्त्रीरूप मन्यादृश मिव गतवानज्ञतोच्छित्तये नः ।
भूत्वा न्तदीप्तदीपो मरिधर इव ते विग्रहे दिव्यभव्ये ।।
आविर्भूय त्वया या सह वृतवच आकर्ण्य भूय स्तदेव ।
प्रश्राव्योन्मूलने ये स्वदुरितनिचयस्योद्यता स्वाङ्घ्रिरक्ताः ।।
त्वा मेवाप्ता यथा स्यु भगवदनुगुणा स्त्वत्सनाथा तदर्थं ।
दीव्यन्ती सुस्थिता सा भवति भगवती त्वत्प्रिया पद्मसद्मा ।। १

ಮೂಲ : ತಿರುಮಾಲಡಿಯವರಕ್ಕು ಮೆಯ್ಯನಾರ್‌ಶೆಯ್ಯ,
ತಿರುಮಾಮಹಳ್ ಎನ್ರುಂ ಶೇರುಂ-ತಿರುಮಾರ್‌ಬಿಲ್,
ಇಮ್ಮಣಿಕ್ಕೋವೈಯುಡನ್ ಏರ್ಕಿನ್ರಾರೆನ್ತನ್,
ಮುಮ್ಮಣಿಕ್ಕೋವೈಮೊಳಿ ॥ 2

ಅರ್ಥ :- ತಿರುಮಾಲ್ = ಶ್ರೀಮನ್ನಾರಾಯಣನು, ಅಡಿಯವರ್ಕ್ಕು = ಭಕ್ತರ ವಿಷಯದಲ್ಲಿ, ಮೆಯ್ಯನಾರ್ = ಸತ್ಯವನ್ನು ಬಿಡದವನೂ, (ತನ್ನ ನಿಜರೂಪ ತೋರಿಸಿಕೊಳ್ಳುವವನೂ) ಶೆಯ್ಯ = ಕೆಂಪಿಡಿದ, ತಿರು-ಮಾ-ಮಹಳ್ = ಮಹಾಲಕ್ಷ್ಮಿಯು, ಎನ್ರುಂ = ಯಾವಾಗಲೂ, ಶೇರುಂ = ಸೇರಿರುವ, ತಿರುಮಾರ್‌ಬಿಲ್ = ತನ್ನ ಚೆಲುವಾದ ಹೃದಯದಲ್ಲಿ, ಇ-ಮಣಿ-ಕೋವೈ-ಉಡ್ರ್ = ಈ ಮಣಿಗಳಿಂದಾದ ಮಾಲೆಯೊಡನೆ, ಏನ್-ತರ್ = ತನ್ನದಾದ, ಮು-ಮ್ಮಣಿಕೋವೈಮೊಳಿ = ಮುಮ್ಮಣಿಕ್ಕೋವೈಯೆಂಬ ಮಾತನ್ನು, ಏರ್ಕಿನ್ರಾರ್ = ಒಪ್ಪಿಕೊಂಡು ಆನಂದಿಸುವನು.

ತಾತ್ಪರ್ಯ :- ಶರಣಾಗತರಿಗೆ ಸತ್ಯರೂಪನಾದ ದೇವನಾಯಕನು, ಅನವರತವೂ ಮಹಾಲಕ್ಷ್ಮಿಯು ನಿತ್ಯವಾಸರಸಿಕಳಾಗಿರುವ ತನ್ನ ವಕ್ಷಸ್ಥಳದಲ್ಲಿ ಕೌಸ್ತುಭಾದಿ ಭೂಷಣಗಳಿಂದ ಶೋಭಿತನಾಗಿರುವಂತೆ ಈ ದಾಸನ ಈ ದಿವ್ಯ ಪ್ರಬಂಧವನ್ನು (ಮುಮ್ಮಣಿಕೋವೈ) ಅತ್ಯಾದರದಿಂದ ತನ್ನ ಹೃದಯದಲ್ಲಿ ಧರಿಸಿ, ಕೊಂಡಾಡುವನು. ("ಶ್ರೀದೇವನಾಯಕನು ಈ ಕೃತಿಯನ್ನು ಪ್ರೇಮದಿಂದ ಆಲಿಸುವುದರಿಂದ ಅವನ ಭಕ್ತ ಶಿರೋಮಣಿಗಳಿಗೂ ಅತಿಭೋಗ್ಯದಾಯಕವೆಂಬುದರಲ್ಲಿ ಸಂಶಯವೇ ಇಲ್ಲ." ಎಂದು ಭಾವ).

श्रीलोल स्स्वपदाश्रितेषु सततं सत्यानपेतोक्तिमान् ।
ऋज्व्या रक्तरुचा च शोभितमहावक्षस्स्थले हि श्रिया ।।
रम्यै रत्नवरैर्युता मिह महामाला मिवेमां स्वकां ।
मालामप्युररीकरोति सुवचस्त्रैविध्यक्लृप्तां मुदा ।। २

ಮೂಲ :

ಮೊಳಿವಾರ್‌ಮೊಳಿವನಮುಮ್ಮರೈಯಾಹುಂಅಯಿಂದೈಯಿಲ್ ವಂದ್,
ಇಳಿವಾರಿಳಿಹವೆನ್ರು, ಇನ್ನಮುದಕ್ಕಡಲಾಹಿನಿನ್ರ,
ವಿಳಿವಾರ್ ಅರುಳ್‌ಮೆಯ್ಯರ್ ಮೆಲ್ಲಡಿ ವೇಂಡಿಯಮೆಲ್ಲಿಯಳ್‌ಮೇಲ್
ಪೊಳಿವಾರ್ ಅನಂಗರ್ ತಂಪೂಂಕರುಂಬುಂದಿಯಪೂಮಳೈಯೇ ॥ 3

ಅರ್ಥ :- ಮೊಳಿವಾರ್ = ಮಾತಾಡುವವರು, ಮೊಳಿವನ = ಆಡುವ ಮಾತುಗಳೆಲ್ಲಾ, ಮುಮ್ಮರೈ-ಆಹುಂ = ಮೂರು ವೇದಗಳೋ ಎಂಬಂತಾಗುವ, ಅಯಿಂದ್ಬೈಯಿಲ್ = ತಿರುವಹೀಂದ್ರಪುರದಲ್ಲಿ, ವಂದು = ಬಂದು, ಇಳಿವಾರ್ = ಅನುಭವಿಸಲಾಸೆಯುಳ್ಳವರು, ಇಳಿಹ-ಎನ್ರು = ಬಂದನುಭವಿಸಿರೆಂದು ಹೇಳುವಂತೆ, ಇನ್-ಅಮುದ-ಕಡಲ್-ಆಹಿ = (ಅನುಭವಿಸುವವರಿಗೆ) ಅಮೃತಸಾಗರವೋ ಎಂಬಂತೆ, ನಿರ್ಕ = ಇರುವ, ವಿಳಿವಾರ್-ಅರುಳ್ = ಕಟಾಕ್ಷಕೃಪೆಯುಳ್ಳ, ಮೆಯ್ಯರ್ = (ಭಕ್ತರಿಗೆ) ಸತ್ಯರೂಪನಾಗಿಯೇ ದರ್ಶನವೀಯುವ ದೇವನಾಯಕನ, ಮೆಲ್-ಅಡಿ = ಅತಿಮೃದುಚರಣ ಕಮಲವನ್ನು, ವೇಂಡಿಯ = ಅನುಭವಿಸುವ, ಮೆಲ್-ಇಯಳ್-ಮೇಲ್ = ಕೋಮಲಾಂಗನೆಯಾದ ಇವಳ ಮೇಲೆ, ಅನಂಗರ್ = ಮನ್ಮಥನು, ತಂ-ಪೂಂ-ಕರುಂಬು-ಉಂದಿಯ = ತನ್ನ ಅಂದವಾದ ಕಬ್ಬುಬಿಲ್ಲಿನಿಂದ ಹೊರಡುವ, ಪೂ-ಮಳೈಯೇ = ಹೂಮಳೆಯನ್ನು, ಪೊಳಿವಾರ್ = ಸುರಿಸುವರು.

ತಾತ್ಪರ್ಯ :- ತಿರುವಹೀಂದ್ರಪುದಲ್ಲಿರುವ ಸಮಸ್ತ ಜೀವರಾಶಿಗಳ ಉಕ್ತಿಗಳು ಸಾಮಾನ್ಯವಲ್ಲ, ಎಲ್ಲವೂ ವೇದಸಾರಗಳು. ಇಂತಹ ದಿವ್ಯಕ್ಷೇತ್ರದಲ್ಲಿ ದೇವನಾಯಕನು ''ಸಕಲ ಮನುಜರೂ ಸೇವಿಸಿ, ಉಜ್ಜೀವಿಸಲೆಂದು ಬಂದು ದರ್ಶನವಿತ್ತು, ಭಕ್ತರಿಗೆ ಅಮೃತಸಾಗರದಂತಹ ತನ್ನ ಕಟಾಕ್ಷಗಳನ್ನು ಬೀರುವನು. ಅಂತಹ ಸುಂದರ ಮತ್ತು ಕರುಣಾಳುವನ್ನು ನಿರತಿಶಯ ಭಕ್ತಿಯಿಂದ ಕೂಡಲು ಉತ್ಕಟಾಕಾಂಕ್ಷೆಯಿಂದ ಹಂಬಲಿಸಿದರೂ ದೊರಕದಿರಲು, (ನಾಯಕಿಗೆ) ಮನ್ಮಥನು ಸಮಯ ಸಿಕ್ಕಿತೆಂದು ತನ್ನ ಪುಷ್ಪಬಾಣಗಳನ್ನುಸುರಿಸುತ್ತಾ ತುಂಬಾ ಕಂಗೆಡಿಸುವನಲ್ಲಾ! ಮಾಡುವುದೇನು ? ಎಂದು ನಾಯಕಿಯ ಸ್ನೇಹಿತೆ ಮರುಗುವಳು.

ಶ್ರೀ ದೇಶಿಕರವರು ನಾಯಕಿಯ ಭಾವದಿಂದ ಅನುಭವಿಸಿದ ಅವಸ್ಥಾವಿಶೇಷವಿದು. ಇದನ್ನು ನೋಡಿದ ಸಖಿಯ ಮಾತಿನಂತಿದು ಇದು. ಆಳ್ವಾರ್ರುಗಳೂ ಹೀಗೆಯೇ ನಾಯಿಕಾಭಾವಾವೇಶದಿಂದ ಅನುಭವಿಸಿರುವರು. ಭಕ್ತಿಯು ಎಲ್ಲೆಮೀರಿ ಶೃಂಗಾರಭಾವವನ್ನು ತಾಳುವುದು. ''ಭಕ್ತಿಃ ಶೃಂಗಾರವತ್ಯಾಪರಿಣಮತಿ'' ಎಂದೂ, ''ಭಕ್ತಿಂನಿಜಾಂ ಪ್ರಣಯ ಭಾವನಯಾಗೃಣಂತಃ'' ಎಂದು ಗೋದಾಸ್ತುತಿಯಲ್ಲೂ ಶ್ರೀ ದೇಶಿಕರೇ ಹೇಳಿರುವರು. ಇಂತಹ ಪಾಶುರಗಳು ಇದರಲ್ಲಿ ಮೂರು ಇವೆ. ಇದೊಂದು, ಆರನೆಯದೊಂದು ಮತ್ತು ಒಂಭತ್ತನೆಯದೊಂದು, ಈ ಮೂರು ಪರಭಕ್ತಿ, ಪರಜ್ಞಾನ, ಪರಮಭಕ್ತಿಸ್ಥಾನದಲ್ಲಿರುವಂತೆ ಇವೆ. (ಸಖಿಯ ಉಕ್ತಿಯಿದು)

यत्रोदीरयतां व्रजन्ति समतां त्रय्युक्तिभिश्चोक्तयः ।
तत्राहीन्द्रपुरेऽवतीर्य भगवान् ''आत्मानुभूत्युत्सुकाः ॥

आस्तेऽत्रानुभवन्त्वि''ति ह्यमृतवाराशेर्दयालोकिनः ।
तस्य तस्य मृदू पदा वभिलषन्त्याः कोमलाङ्ग्याः तनौ ।।
अनङ्ग स्त्वात्मरम्येक्षुचापनिस्सृतमार्गणान् ।
पुष्ववर्षै र्निर्विशेषां प्रवर्षति मुदा सदा ।। ३

ಮೂಲ : ಮಳೈಯಿಲೆಳುಂದ ಮೊಕ್ಕುಳ್‌ಪೋಲ್‌ವೈಯಂ,
ಅಳಿಯವೊನ್ರ್ರಳಿಯಾವಡಿಯವರ್‌ಮೆಯ್ಯ,
ಅರುಮರೈಯಿನ್ ಪೊರುಳ್ ಆಯ್‌ನ್ದೆಡುಕ್ಕುಂಗಾಲ್
ತಿರುವುಡನ್ನಮರ್‌ನ್ದ ದೈವನಾಯಕನ್ ನೀ,
ನಿನ್ತಿರುತನುಕ್ಕು ನೀ ತಿರುವಾಹಿ,
ಇಂದು ತನ್ನಿಲವುಡನ್ ಇಲಂಗು ತನ್ಮೈಯಿನ್ನೈ,
ನಂದುದಲಿಲ್ಲಾ ನಲ್‌ವಿಳಕ್ಕಾಹಿ,
ಅಂದಮಿಲಮುದ ವಾಳಿಯಾಯ್ ನಿತ್ತಿ,
ಪಾರ್ಕಡಲ್ ತನ್ನಿಲ್ ಪನ್ಮಣಿಯನ್ನ,
ಶೀರ್ಕಣಂ ಶೇರ್‌ನ್ದ ಶೀಲ ಮೆಲ್ಲೈಯಿನ್ನೈ,
ಅಡಿಯವರ್ ಪಿಳೈಕಳ್ ನಿನ್ ಕರುತ್ತಡೈಯಾದು,
ಅಡೈಯ ವಾಣ್ಡರುಳುಂ ಅರಶನುಮ ನೀಯೇ,
ಉಯರ್ನ್ದ ನೀಯುನ್ನೈ ಯೆಮ್ಮುಡನ್ ಕಲನ್ದನ್ನೈ,
ಅಯಿಂದೈ ಮಾನಕರಿಲಮರ್‌ನ್ದನ್ನೈ ಯೆಮಕ್ಕಾಯ್,
ಶಿತ್ತಿರಮಣಿಯೆನ ವನ್ನೈತ್ತು ನೀ ಯಣಿದಿ,
ಅತ್ತಿರಮಣಿಯೆನ ಅನ್ನೈತ್ತುಂ ನೀ ಅಣುಹಿ
ವಿಣ್ಣಿನುಳಮರ್‌ನ್ದ ವಿಯನುರುವದನಾಲ್,
ಎಣ್ಣಿಯವೀರಿರಂಡು ಉರುಕ್ಕಳು ಮಡೈದಿ,
ಪನ್ನಿರುನಾಮಂ ಪಲಪಲ ವುರುವಾಯ್,
ಎನ್ನುರುವೆಂಗುಂ ಎಯ್ದಿ ನೀ ನೀನಿತ್ತಿ
ಮೀನೋಡಾಮೈಕೇಳಲ್ ಕೋಳರಿಯಾಯ್,
ವಾನಾರ್ ಕುರಳಾಯ್ ಮಳುಪ್ಪಡೈಮುನಿಯಾಯ್,

ಪಿನ್ನುಮಿರಾಮರಿರುವರಾಯ್ ಪಾರಿಲ್
ತುನ್ನಿಯ ಪರಂತೀರ್‌ತುವರ್ಥೆ ಮನ್ನನುಮೂಯ್,
ಕಲಿ ತವಿರ್ತ್ತಳಿಕ್ಕುಂ ಕರ್ಕಿ ಯಾಯ್ ಮತ್ತುಂ,
ಮಲಿವದರ್ಕೆನ್ರುಂವಲ್ ವಿನ್ವೈ ಮಾತ್ತ,
ನಾನಾಉರುವುಂ ಕೊಂಡು ನಲ್ಲಡಿಯೋರ್,
ವಾನಾರಿನ್ಬಮಿಂಗುರವರುದಿ,
ಓರಯಿರುಲಹಕ್ಕೆನ ನೀ ತಿರುವ್ಪೋಡು,
ಏರುಯಿರೆಲ್ಲಾ ಮೇಂದಿಯಿನ್‌ಪುರುದಿ
ಯಾವರುಮರಿಯಾದೆಂಗು ನೀ ಕರಂದ್,
ಮೇವುರುಚ್ಚೊಳ್‌ನ್ದುವಿಯಪ್ಪಿನಾಲ್ ಮಿಹುದಿ,
ಕೊಂಡಿಡವೆಮ್ಮೈ ಯಡ್ವೈಕ್ಕಲಮುಲಹಿಲ್,
ಕಂಡಿಲಂಗತಿಯುನ್ನೈಯನ್ರಿ ಮತ್ತೊನ್ರುಂ,
ಪಲ್ಪಹೈನಿನ್ರ ನಿನ್ನಡಿಯನ್ವೈತ್ತುಂ,
ತೊಲ್ಪಹೈಕಾಟ್ಟುಂ ತುಣಿನ್ದುತೂಮರ್ರೈಯೇ ॥ 4

ಅರ್ಥ :- ಮಳೈಯಿಲ್-ಎಳುಂದ = ಮಳೆಯನೀರಿನಿಂದುಂಟಾದ, ಮೊಕ್ಕುಳ್-ಪೋಲ್ = ಗುಳ್ಳೆಗಳಂತೆ, ವೈಯಂ = ಲೋಕವೆಲ್ಲಾ, ಅಳಿಯ = ಅಳಿದರೂ, ಒನ್ರು-ಅಳಿಯಾ = ಸ್ವಲ್ಪವೂ ಅಳಿಯದಿರುವ, ಅಡಿಯವರ್-ಮೆಯ್ಯ = ಭಕ್ತರಿಗೆ ಸತ್ಯರೂಪಿಯಾದ ದೇವನಾಯಕನೇ ! ಅರುಮರ್ರೈಯಿರ್-ಪೊರುಳ್ = ಅತಿಗಹನವಾದ ವೇದಾರ್ಥಗಳನ್ನು, ಆಯ್‌ನ್ದ್-ಎಡುಕ್ಕುಂ-ಕಾಲ್ = ಆರಿಸಿ ಸಾರಾರ್ಥವನ್ನು ನಿರ್ಧರಿಸುವ ಸಮಯದಲ್ಲಿ, ತಿರು-ಉಡನ್-ಅಮರ್‌ನ್ದ = ಮಹಾಲಕ್ಷ್ಮೀಸಮೇತನಾದ, ದೈವ-ನಾಯಕನ್ = ಎಲ್ಲಾ ದೇವತೆಗಳಿಗೂ ನಾಯಕನು, ನೀ = ನೀನೊಬ್ಬನೇ. ನೀ = (ಅಂತಹ) ನೀನು, ನಿರ್-ತಿರು-ತನಕ್ಕು = (ಯಾರ ಸಂಬಂಧದಿಂದ ನಿನಗೆ ದೇವನಾಯಕ ತನವು ಸಿದ್ಧಿಸಿತೋ, ಅಂತಹ) ನಿನ್ನ ಹಿರಿಯ ಪ್ರೇಯಸಿಗೆ, ತಿರು-ಆಹಿ = ಅವಳ ಹಿರಿಮೆಗೆ ಕಾರಣವಾಗಿ, ಇಂದು = ಚಂದ್ರನು, ತನ್-ನಿಲವ್-ಉಡನ್ = ತನ್ನ ಬೆಳದಿಂಗಳಿನೊಡನೆ, ಇಲಂಗ್-ತನ್ಮೈಯಿನ್ವೈ = ಪ್ರಕಾಶಿಸುವಂತಹ, ನಲ್-ವಿಳಕ್ಕ್ ಆಹಿ = ಒಳ್ಳೆಯದೀಪವಾಗಿ, ಅಂತಂ - ಇಲ್ = ಅಪಾರವಾದ, ಅಮುದ್-ಆಳಿಯಾಯ್ = ಅಮೃತಸಾಗರದಂತೆ, ನಿತ್ತಿ = ನಿಂತಿರುವೆ, ಪಾಲ್-ಕಡಲ್-ತನ್ನಿಲ್ = ಕ್ಷೀರಸಮುದ್ರದಲ್ಲಿನ, ಪಲ್-ಮಣಿಯನ್ನ = ಹಲವು ಬಗೆಯ ರತ್ನಗಳಿರುವಂತೆ, ಶೀರ್-ಕಣಂ-ಶೇರ್‌ನ್ದ = ಕಲ್ಯಾಣಗುಣಗಳ

ಸಮೂಹದಲ್ಲಿ ಸೇರಿದ, ಶೀಲಂ = ಸೌಶೀಲ್ಯವೆಂಬ ಗುಣವಿಶೇಷಣವನ್ನು (ಕೀಳುತನದವರೊಡನೆ ಬೇಸರಿಸದೆ ಕೂಡಿರುವುದು) ಎಲ್ಲೈ-ಇಲ್ಲೈ = ಅಳೆಯಲಾಗದಷ್ಟು ಪಡೆದಿರುವೆ. ಅಡಿಯವರ್-ಪಿಳ್ಳೈಹಳ್ = ನಿನ್ನ ಆಶ್ರಿತರ ಅಪರಾಧಗಳು, ನಿನ್-ಕರುತ್ತು-ಅಡ್ಯೆಯಾದು = ನಿನ್ನ ಅಭಿಪ್ರಾಯಗಳನ್ನು ಪಡೆಯದಂತೆ, ಅಡ್ಯೆಯ = ಎಲ್ಲವನ್ನೂ, ಆಂಡು = ಪರಿಪಾಲಿಸಿ, ಅರುಳುಂ = ಕೃಪೆಮಾಡುವ, ಅರಶನುಂ-ನೀಯೇ = ಅರಸನೂ ನೀನೇ, ಉಯರ್ನ್ದ-ನೀ = ಎಲ್ಲಕ್ಕಿಂತಲೂ ಹಿರಿಮೆಯುಳ್ಳವನು ನೀನು, ಉನ್ನೈ = ಅಂತಹ ನಿನ್ನನ್ನು, ಎಮ್ಮುಡನ್ = ಅತ್ಯಂತ ನಿಹೀನರಾದ ನಮ್ಮೊಡನೆ, ಕಲಂದನ್ಯೆ = ಸೇರಿಸಿಕೊಂಡಿರುವೆ. ಅಯಿಂದ್ಯೆ-ಮಾ-ನಗರಿಲ್ = ತಿರುವಹೀಂದ್ರಪುರದಲ್ಲಿ, ಎಮಕ್ಕಾಯ್ = ನಮಗಾಗಿ, ಅಮರ್ನ್ದನ್ಯೆ = ನಿತ್ಯವಾಸಮಾಡುತ್ತೀಯೆ, ಶಿತ್ತಿರ-ಮಣಿ-ಎನ = ಅಂದವಾದ ನೀಲರತ್ನದಂತೆ, ತಿಹಳುಂ = ಪ್ರಕಾಶಿಸುವ, ಮನ್ನೆರವಿಲ್ = ನಿತ್ಯವಾದ ದಿವ್ಯಮಂಗಳವಿಗ್ರಹದಲ್ಲಿ, ಅತ್ತಿರಂ-ಅಣಿ-ಎನ = ಅಸ್ತ್ರಗಳು ಆಭರಣಗಳೆಂದು, ಅನ್ಯೆತ್ತುಂ = ಎಲ್ಲವನ್ನೂ, ನೀ = ನೀನು, ಅಣಿದಿ = ಧರಿಸಿರುವೆ, ವಿಣ್ಣುಳ್. ಅಮರ್ನ್ದ = ಶ್ರೀ ವೈಕುಂಠದಲ್ಲಿ ವಿಜಯಮಾಡಿರುವ, ವಿಯನ್-ಉರು = ವಿಲಕ್ಷಣವಾದ ಪರವಾಸುದೇವರೂಪವನ್ನೂ, ಅದನಾಲ್-ಎಣ್ಣಿಯ = ಆದರಿಂದ ಸಂಕಲ್ಪಿಸಲ್ಪಟ್ಟ, ಈರಿರಂಡು-ಉರುಕ್ಕಳುಂ = (ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ) ನಾಲ್ಕು ರೂಪಗಳನ್ನೂ, ಅಡ್ಯೆದಿ = ಪಡೆದಿರುತ್ತೀಯೆ. ಪನ್ನಿರುನಾಮಂ = (ಕೇಶವಾದಿ) ಹನ್ನೆರಡು ಹೆಸರುಗಳುಳ್ಳ, ಪಲಪಲ-ಉರುವಾಯ್ = ಬೇರೆ ಬೇರೆ ವಿಗ್ರಹಗಳುಳ್ಳವನಾಗಿ, ಎನ್-ಉರು-ಎಂಗುಂ = ನನ್ನ ಶರೀರದ ಎಲ್ಲ ಭಾಗವನ್ನೂ, ಎಯ್ದ್ = ಪಡೆದು, ನೀ-ನಿತ್ತಿ = ನೀನು ಇರುತ್ತೀಯೆ, ಮೀನೊಡು = ಮತ್ಸ್ಯಾವತಾರವೂ, ಆಮೈ = ಕೂರ್ಮ, ಕೇಳಲ್ = ವರಾಹ, ಕೋಳರಿಯಾಯ್ = ನರಸಿಂಹನೂ ಆಗ, ವಾನಾರ್-ಕುರಳಾಯ್ = ವಾಮನ ರೂಪಿಯಾಗಿಯೂ, ಮಳುಪ್ಪಡ್ಯೆ-ಮುನಿಯಾಯ್ = ಪರುಶರಾಮನಾಗಿಯೂ, ಪಿನ್ನುಂ = ಅಷ್ಟೇ ಅಲ್ಲದೆ, ಇರಾಮರ್-ಇರುವರಾಯ್ = (ದಾಶರಥಿರಾಮ-ಬಲರಾಮ) ಇಬ್ಬರುರಾಮರಾಗಿ, ಪಾರಿಲ್-ತುನ್ನಿಯ = ಭೂಮಿಯಮೇಲಿರುವ, ಪರಂ-ತೀರ್ = ಭಾರವನ್ನೂ ಹೋಗಲಾಡಿಸಿದ, ತುವರ್ಯೆ-ಮನ್ನನಾಯ್ = ದ್ವಾರಕಾಧೀಶನಾದ ಶ್ರೀಕೃಷ್ಣನಾಗಿಯೂ, ಕಲಿ-ತವಿರ್ತು-ಅಳಿಕ್ಕುಂ = ಕಲಿಯಲ್ಲಿಬರುವ ದುಃಖಗಳನ್ನು ನೀಗಿ ರಕ್ಷಿಸುವ, ಕರ್ಕಿಯಾಯ್ = ಕಲ್ಕಿ ಎಂಬ ರೂಪನಾಗಿಯೂ, ಮಟ್ರುಂ = ಮತ್ತು, ಮಲಿವದರ್ಕು = ಎಲ್ಲರಿಗೂ ಅತ್ಯಂತ ಸುಲಭನಾಗಿರುವುದಕ್ಕಾಗಿ, ಎನ್ರುಂ - ಎಂದೆಂದಿಗೂ, ವಲ್-ವಿನ್ಯೆ = (ಆಶ್ರಿತರ) ಬಲವಾದಪಾಪಗಳನ್ನೂ, ಮಾತ್ತ = ನಿವಾರಿಸುವುದಕ್ಕಾಗಿ, ನಾನಾ-ಉರುವುಂ = ಬೇರೆ ಹಲವು ದಿವ್ಯಮಂಗಳ ವಿಗ್ರಹಗಳನ್ನೂ, ಕೊಂಡು = ಪರಿಗ್ರಹಿಸಿ, ನಲ್ಲಡಿಯೋರ್ = ಒಳ್ಳೆಯ ಭಕ್ತರು, ವಾನ್-ಆರ್-ಇನ್ಬಂ = ಶ್ರೀವೈಕುಂಠದಲ್ಲಿರುವ ಪರಿಪೂರ್ಣಾ

ನಂದವನ್ನೂ, ಇಂಗ್-ಉರ = ಇಲ್ಲೇಪಡೆಯುವಂತೆ, ವರುದಿ = ಅವತರಿಸುತ್ತೀಯೆ, ಉಲಹರ್ಕ್ಕು = ಜಗತ್ತಿನ ಸಕಲ ಚೇತನಾ ಚೇತನಗಳಿಗೂ, ಉಯಿರ್-ಎನ್ನುಂ = ಅಸಾಧಾರಣವಾದ, ಅಂತರಾತ್ಮನಾಗಿರುವ, ನೀ = ನೀನು, ತಿರುವೋಡು = ಲಕ್ಷ್ಮಿಯೊಡನೆ, ಏರ್-ಉಯಿರ್-ಎಲ್ಲಾಂ = ಸುಂದರವಾದ ಆತ್ಮವರ್ಗವನ್ನೆಲ್ಲಾ, ಏನ್ದಿ = (ಅಂತರ್ಯಾಮಿ) ಸ್ವರೂಪನಾಗಿ ಧರಿಸಿ, ಇನ್ಬುರುದಿ = ವಿಶೇಷವಾದ ಆನಂದವನ್ನು ಪಡೆಯುತ್ತೀಯೆ, ಯಾವರುಂ-ಅರಿಯಾದು = ಯಾರೂ ತಿಳಿಯದಂತೆ, ಎಂಗುಂ = ಎಲ್ಲಾಕಡೆಯಲ್ಲೂ, ನೀ-ಕರನ್ದು = (ಹಾಲಿನಲ್ಲಿತುಪ್ಪದಂತೆ) ನೀನು ಮರೆಯಾಗಿದ್ದುಕೊಂಡು, ಮೇ-ಉರು = ಮೇಲ್ಮೆಯನ್ನು ಪಡೆಯಲು, ಶೂಳ್ನ್ದು = (ಎಲ್ಲವನ್ನೂ) ವ್ಯಾಪಿಸಿ, ವಿಯಪ್ಪಿನಾಲ್ = (ಆ) ಆಶ್ಚರ್ಯದಿಂದ, ಮಿಹುದಿ = ಮೇಲಾಗಿರುವೆ. ಎಮ್ಮೈ = ನಮ್ಮನ್ನು, ಅಡೈಕ್ಕಲಂ-ಕೊಂಡಿಡ = ರಕ್ಷಿಸಲ್ಪಡುವ ವಸ್ತುವಾಗಿ ಸ್ವೀಕರಿಸುವ, ಉಲಹಿಲ್ = ಈ ಲೋಕದಲ್ಲಿ, ಉನ್ನೈ-ಅನ್ರಿ = ನಿನ್ನನ್ನು ಬಿಟ್ಟು, ಗತಿ-ಮತ್ತು-ಒನ್ರುಂ = ಬೇರೆ ಯಾವ ರಕ್ಷಣೆಯನ್ನೂ, ಕಂಡಿಲಂ = (ನಾವು) ಕಾಣಲಿಲ್ಲ, ಪಲ್-ವಹೈ-ನಿನ್ರ = ಹಲವಾರು ಬಗೆಯಾಗಿರುವ, ನಿನ್-ಪಡಿ-ಅನ್ನೈತ್ತುಂ = ನಿನ್ನ ರೀತಿಯೆಲ್ಲವನ್ನೂ, ತೊಲ್-ವಹೈಯೇ = ಶುದ್ಧವಾದ, ಪಳಗಿದ ಹಿಂದಿನ ದಾರಿಯಿಂದ ಬಂದಿರುವ, ತೂ-ಮರೈಯೇ = ಪರಿಶುದ್ಧವಾದ ವೇದವೊಂದೇ, ತುಣಿಂದ್ = ಧೈರ್ಯವಾಗಿ (ನಿಶ್ಚಯವಾಗಿ) ಕಾಟ್ಟುಂ = ತೋರಿಸಿಕೊಡುವುದು.

ತಾತ್ಪರ್ಯ :- ದಾಸವರ್ಗಕ್ಕೆ ಸತ್ಯನೆನಿಸಿದ ದೇವನಾಯಕನೇ ! ಮಳೆಬೀಳುವಾಗ ಹುಟ್ಟಿ ಮರುಘಳಿಗೆಯಲ್ಲೇ ಅಳಿದುಹೋಗುವ ನೀರಿನ ಗುಳ್ಳೆಗಳಂತೆ, ಈ ಲೋಕಗಳು ಪ್ರಳಯಕಾಲದಲ್ಲಿ ಅಳಿದರೂ ನಿನ್ನ ಸ್ವರೂಪ, ರೂಪ, ಗುಣಗಳಾದಿಯಾಗಿ ಎಲ್ಲವೂ ಯಾವ ವಿಕಾರವನ್ನೂ ಹೊಂದದೆ ಪ್ರಕಾಶಿಸುತ್ತೀಯೆ. ವೇದವೇದಾಂತಗಳಲ್ಲಿ ಎಲ್ಲಿ ವಿಮರ್ಶಿಸಿದರೂ ಶ್ರೀ ವಲ್ಲಭನಾದ ನೀನೇ ಪರತತ್ವವೆಂಬುದರಲ್ಲಿ ಸಂಶಯವಿಲ್ಲದಂತೆ ಪ್ರತಿಪಾದಿತನಾಗಿದ್ದೀಯೆ. ನಿನಗೆ ಹಿರಿಮೆಯನ್ನು ತರುವ ಶ್ರೀದೇವಿಗೂ ಶ್ರೀಯನ್ನು ಕೊಡುವವನಾಗಿ, ಚಂದ್ರನು ಚಂದ್ರಿಕೆಯನ್ನು ಬಿಡದೆ ಕೂಡಿಕೊಂಡಿರುವಂತೆ ಅನವರತವೂ ಆಕೆಯನ್ನಗಲದೆ ಕೂಡಿಯೇ ಬೆಳಗುತ್ತಿರುವೆ. ಎಂದಿಗೂ ನಂದದಂತಹ ರತ್ನದೀಪವಾಗಿರುತ್ತಾ, ಲೋಕಕ್ಕೆ ಜ್ಞಾನಜ್ಯೋತಿಯನ್ನು ಕೊಡುತ್ತಾ, ಭಕ್ತರು ಅನುಭವಿಸಲು ಸುಲಭನಾಗಿ ಅಮೃತಸಾಗರನಾಗಿರುತ್ತೀಯೆ. ಸಮುದ್ರದಲ್ಲಿ ಹಲವಾರು ಬಗೆಯ ರತ್ನಗಳು ಕಂಗೊಳಿಸುವಂತೆ, ಕಲ್ಯಾಣಗುಣಗಳಿಂದ ಅಲಂಕೃತನಾಗಿದ್ದರೂ, ಅವುಗಳಲ್ಲಿ ಹೆಚ್ಚಳಿಕೆಯನ್ನು ಗಳಿಸಿದ ಸೌಶೀಲ್ಯವೆಂಬ ಗುಣವು ಎಲ್ಲೆಮೀರಿರುವಂತಿರುತ್ತೀಯೆ. ಪ್ರಜೆಗಳ ಅಪರಾಧಗಳನ್ನು ಮನ್ನಿಸಿ ರಕ್ಷಿಸುವ ರಾಜನಂತೆ ಆಶ್ರಿತರ ಅಪರಾಧಗಳನ್ನೆಲ್ಲಾ ಕ್ಷಮಿಸಿ, ಪರಮಕರುಣಾಳುವಾಗಿ ಸಂರಕ್ಷಿಸುತ್ತೀಯೆ. ಸರ್ವಪ್ರಕಾರದಿಂದಲೂ ಎಲ್ಲಕ್ಕಿಂತ ಮೇಲೆನಿಸಿದ ನೀನು ಎಲ್ಲರಿಗಿಂತ ಅತಿನೀಚನಾದ ನನ್ನಂತಹವರೊಡನೆ ಏಕದೇಹದಂತೆ ಕಲೆತಿರುತ್ತಾ,

ಒಳ್ಳೆಯ ಅರಿವನ್ನು ಕರುಣಿಸಲು, ತಿರುವಹೀಂದ್ರಪುರದಲ್ಲಿ ಬಿಜಯಮಾಡಿ, ಅರ್ಚಾಮೂರ್ತಿಯಾಗಿ ಬೆಳಗುತ್ತಿರುವೆ. ಇಂದ್ರನೀಲಶೈಲದಂತಿರುವ ನಿನ್ನ ದಿವ್ಯ ದೇಹದಲ್ಲಿ ಸಮಸ್ತ ತತ್ತ್ವಗಳನ್ನು ಅಸ್ತ್ರಗಳಂತೆಯೂ ಆಭರಣಗಳಂತೆಯೂ ಧರಿಸಿರುವೆ. ಶ್ರೀವೈಕುಂಠದಲ್ಲಿ ಪರವಾಸುದೇವನಾಗಿರುವೆ. ಭಕ್ತರ ಧ್ಯಾನಕ್ಕೆ ಅನುಕೂಲವಾಗಿ ವಾಸುದೇವಾದಿ ವ್ಯೂಹಮೂರ್ತಿಯಾಗಿರುವುದಲ್ಲದೆ ಅದರಿಂದ ಕೇಶವಾದಿ ದ್ವಾದಶನಾಮಮೂರ್ತಿಯಾಗಿಯೂ, ಭಾಗವತರ ಶರೀರಗಳಲ್ಲೂ ಈ ಹನ್ನೆರಡು ಸ್ಥಾನಗಳಲ್ಲಿ ಅದೇ ಹೆಸರಿನಿಂದ ಅನುಗ್ರಹಿಸುತ್ತಿರುವೆ. ಸಂಸಾರಿ ಚೇತನರನ್ನು ಸಂರಕ್ಷಿಸಲು ಮತ್ಸ್ಯಾದಿ ಅವತಾರವೆತ್ತಿ, ಭಕ್ತೋತ್ತಮರು ಪರಮಪದದಲ್ಲಿ ಅನುಭವಿಸುವ ಪರಮಾನಂದವನ್ನು ಇಲ್ಲೇ ಅನುಭವಿಸುವಂತೆ ಮಾಡುತ್ತೀಯೆ. ಲೋಕಕ್ಕೆಲ್ಲಾ ಆತ್ಮವೊಂದೇ ಎಂಬಂತೆ ಶ್ರೀಸಮೇತನಾಗಿರುತ್ತಾ ಚೇತನಾ ಚೇತನಗಳನ್ನೆಲ್ಲಾ ತನ್ನ ವಿಗ್ರಹದ ಒಂದು ಭಾಗದಲ್ಲಿ ಧರಿಸಿ, ತೋರಿಸಿ, ನಿನ್ನ ವಿರಾಟ್ ರೂಪವನ್ನು ತೋರಿಸಿಕೊಳ್ಳುತ್ತೀಯೆ. ಅರಿಯುವುದು ಅತಿಗಹನವಾಗುವಂತೆ, ಸಕಲದರಲ್ಲೂ ಅಂತರ್ಯಾಮಿಯಾಗಿರುತ್ತಾ ಅದನ್ನರಿತ ಸಮಸ್ತರೂ ಅತಿಮೇಲೆನಿಸುವಂತೆ ಇರುತ್ತೀಯೆ. ಈ ರೀತಿಯಾದ ಹಿರಿಮೆಯನ್ನು ಪಡೆದ ನಿನ್ನ ಹೊರತು ನಮ್ಮನ್ನು ಕಾಪಾಡುವ ಮತ್ತೊಂದುಗತಿಯನ್ನರಿಯೆನು. ನಿನ್ನಸ್ವರೂಪ, ರೂಪ, ಗುಣ, ವಿಭೂತಿ ಮೊದಲಾದುವನ್ನು ಹೇಳಲು ಹೊರಟ ಅಪೌರುಷವಾಗಿಯೂ ಅನಾದಿಯಾಗಿಯೂ ಇರುವ ವೇದವು ಒಂದೇ ಧೈರ್ಯಮಾಡಿ ಮುನ್ನುಗ್ಗಿದುದಲ್ಲದೆ ಮತ್ತಾರಿಂದ ಸಾಧ್ಯ ?

वर्षोत्था इव बुद्बुदाः प्रविलयं याताश्च लोका अमी ।
यो नैवेषदपि प्रयाति विकृतिं सत्याकृति भेंजुषाम् ।।
दुर्ज्ञेयागमवेदनीयविषये सश्रीक एवेष्यते ।
तादृग्वैभवदेवनायक ! भवानेकोऽस्ति तत्तादृशः ।। १

श्रीस्त्वं ते श्रिय एव चन्द्र इव सज्योत्स्नः स्वभावान्वितः ।
सद्दीप स्त्वविनाश्यभा निरवधिः पीयूषपायोनिधिः
क्षीराब्धिर्विविधै र्यथा मणिवरै रापूरितो भ्राजते ।
त्वं कल्याणवगुणवलिप्रविलसच्छीलप्रभावान् सदा ।। २

भक्तानां दुरितानि नेयु रपि ते स्वान्तं यथा तान्यहो ।
सर्वाण्यप्यनुशास्य रक्षसि तथा त्वं चैव तादृक् प्रभुः ।
त्वं सन्नप्यसम स्समं च कृतवान् त्वां सक्त मस्मादृशैः ।
स्थित्वाहीन्द्रमहापुरे करुणया संदृश्यसे नः कृते ।। ३

चारुश्यामलरत्नवत्प्रविलसन्नित्याग्र्यमूर्तौ हि ते ।
अस्त्रालङ्करणाख्यत स्त्व मखिलं तत्वं बिभर्ष्यन्वहम् ।।
वैकुण्ठे परवासुदेवतनुतो धत्से चतूरूपतां ।
नामद्वादशनैकरूपमहितो व्याप्तोऽसि देहं च मे ।। ४

मत्स्यः कूर्मो वराहो नरहरि रमराधिष्ठिते स्सम्प्रमाता ।
मायावी वामनोऽसौ परशुधरमुनि स्तौ द्विधाभूतरामौ ।।
उर्वीभारापनेता यदुकुलतिलको द्वारकाधीशकृष्णः ।
कल्की कल्युग्रपापप्रशमननिपुण स्सर्वसन्त्राणदक्षः ।। ५

स्थातुं सौलभ्यतोऽत्राप्यतिबलदुरितोन्मूलनार्थं सदा त्वं ।
नानारूपाणि गृह्णन् स्वचरणशरणा स्साधुचर्या महान्तः ।।
वैकुण्ठे दिव्यधामन्यतिशयमहिमा शोभिते सर्वभोग्यं ।
तं चानन्दं महान्तं त्वनुभवितु मिवेहावतीर्य स्थितोऽसि ।। ६

विश्वात्मैकान्तरात्मा ह्यनितरसदृश स्त्वं सदा श्री समेतः ।
अन्तर्यन्तात्मवर्गं सरुचिरमखिलं धारयन् मोदसे त्वम् ।।
सर्वत्रान्यै खेद्यो घृत मिव पयसि व्यापृतं स्सन् समस्तं ।
कुर्वाणोऽत्युत्तमं त्वं समधिकमहिमा व्याप्यचाश्चर्यभूम्ना ।। ७

संरक्ष्यत्वेन चास्मान् जगति परिगृहीतुं समर्थंविनात्वं ।
पश्यामो नैव चान्यां वय मिह सुगतिं प्रोक्तनानाप्रकारैः ।।
सर्वं विद्योतयन्तं प्रतनतमपथा त्यन्तशुद्धाः प्रसिद्धाः ।
धैर्येणाग्रप्रवृत्ता निगमफणितयश्चैव सन्दर्शयन्ति ।। ८

ಮೂಲ : ತೂಮಱೈಯಿನುಳ್ಳುಂ ತುಳಂಗಾತ್ತುಣಿವುತರುಂ,
ಆಮಱಿವಾಲ್ ಆರ್ನ್ದಡಿಮೈಯಾಹಿನ್ಱೋಂ, ಪೂಮಱೈಯೋರ್
ಪಾರಾಯಣತ್ತಿಲ್ ಪಣಿಯುಂ ಅಯಿಂದೈನಗರ್,
ನಾರಾಯಣನಾರ್ಕ್ಕೇನಾಮ್ ॥ 5

ಅರ್ಥ :- ತೂ-ಮರೈಯಿನ್ = ಪರಿಶುದ್ಧವಾದ ವೇದದ, ಉಳ್ಳಂ = ತಾತ್ಪರ್ಯವು, ತುಳಂಗಾ = ಸಂಶಯವಿಲ್ಲದಂತೆ, ತುಣಿವ್-ತರುಂ = ನಿರ್ಣಯವನ್ನು ಕೊಡುವ, ಆಂ-ಅರಿವಾಲ್ = ತಕ್ಕ ಜ್ಞಾನವಿಶೇಷದಿಂದ, ಆರ್ನ್ದ್ = ತುಂಬಿ, ಅಡಿಮ್ಮೈ-ಆಹಿನ್ರೋಂ = ಸೇವಕರಾಗುವೆವು. (ಯಾರಿಗೆಂದರೆ) ಪೂಮರೈಯೋನ್ = ಕಮಲ ಸಂಭವನಾದ ಬ್ರಹ್ಮನ, ಪಾರಾಯಣತ್ತಿಲ್ = ವೇದ ಪಾರಾಯಣದಲ್ಲಿ, ಪಣಿಯುಂ = ನಮಸ್ಕರಿಸಲ್ಪಟ್ಟು, ಅಯಿಂದೈ-ನಗರ್ = ತಿರುವಹೀಂದ್ರ ಪುರದಲ್ಲಿ ಬಿಜಯಮಾಡಿರುವ, ನಾರಾಯಣನಾರ್ಕ್ಕೇ = ನಾರಾಯಣ ಶಬ್ದವಾಚ್ಯದ ಭಗವಂತನಿಗೇ, ನಾಂ = ನಾವು, (ಸೇವಕರಾಗಿರುವೆವು).

ತಾತ್ಪರ್ಯ :- ನಾವು ಉಪನಿಷತ್ತುಗಳಲ್ಲಿ ತುಂಬ ಪರಿಶ್ರಮವುಳ್ಳವರಾಗಿ, ಯಾರಿಂದಲೂ ಯಾವ ರೀತಿಯಿಂದಲೂ ಕಲಕಲ್ಪಡಲಾಗದಂತಹ ನಿಶ್ಚಯಜ್ಞಾನವನ್ನು ಪಡೆದವರಾಗಿರುವೆವು. ವೇದಗಳನ್ನು ಸರ್ವದಾ ಹೇಳಿಕೊಂಡಿರುವ ಬ್ರಹ್ಮನಿಂದ ಆ ವೇದಗಳಿಂದಲೇ ಸ್ತುತಿಸಲ್ಪಟ್ಟು, ಆಶ್ರಯಿಸಲ್ಪಟ್ಟ ಶ್ರೀ ದೇವನಾಯಕನ ಅಡಿದಾವರೆಗಳಲ್ಲಿಯೇ ಅನನ್ಯವಾಸರಾಗಿ ಬೆಳಗುವ ಹಿರಿಮೆಯನ್ನು ಪಡೆದವರಾಗಿರುವೆವು. (ಇಲ್ಲಿ ''ಶ್ರೀಮತೇ ನಾರಾಯಣಾಯ ನಮಃ'' ಎಂಬ ಭಾಗದರ್ಥವು ವಿವರಿಸಲ್ಪಟ್ಟಿದೆ)

**तात्पर्य परिशुद्धवेदनिहितं निस्संशयं निश्चितं ।**
**वेदान्तप्रविबोधनातिशयत स्संप्राप्य पूर्णा वयम् ।।**
**अम्भोजासनवेदपाठसमये वेद्याय वन्द्याय हि ।**
**श्रीनारायणनाम्न एव नियता दासा अभूम ध्रुवम् ।। ८**

**ಮೂಲ :** ಆರ್ಕ್ಕುಂ ಕರುಣೈಪೊಳಿವಾನ್, ಆಯಿಂದೈಯಿಲ್ ವಂದಮರ್ನ್ದ
ಕಾರ್ಕ್ಕೊಂಡಲೈಕ್ಕಂಡ ಕಾದರ್ ಪುನಮಯಿಲ್ ಕಣ್‌ಪನಿಯಾ
ವೇರ್ಕ್ಕುಂ ಮುಕಿಳ್‌ಕ್ಕುಂ ವಿದಿರ್ ವಿದಿರ್ಕ್ಕುಂವೆಳ್ಳಿ ವೆವ್ವುಯಿರ್ಕ್ಕುಂ,
ಪಾರ್ಕ್ಕಿನ್ರವರ್ಕ್ಕಿದು ವೆನ್‌ಕೊಲ್ ಎನ್ರುಪಯಿಲುವಮೇ ॥ 6

ಅರ್ಥ :- ಯಾರ್ಕ್ಕುಂ = ಯಾರಿಗೂ (ಎಲ್ಲರಿಗೂ), ಕರುಣೈ = ದಯೆಯನ್ನೂ, ಪೊಳಿವಾನ್ = ಬೀರುವನೂ (ದಯಾರೂಪ ಮಳೆಯನ್ನು ಸುರಿಸುವನು), ಅಯಿಂದೈಯಿಲ್ = ತಿರುವಹೀಂದ್ರಪುರದಲ್ಲಿ, ವಂದ್ = ಬಂದು, ಅಮರ್ನ್ದ = ಸ್ಥಿರವಾಗಿನಿಂತ, ಕಾರ್-ಕೊಂಡಲೈ = ನೀಲಮೇಘವನ್ನು (ಕಾರ್ಮುಗಿಲನ್ನು) ಕಂಡ = ನೋಡಿದ, (ನೋಡಿದಕೂಡಲೇ ಉಂಟಾದ) ಕಾದಲ್-ಭಕ್ತಿಯುಂಟಾದ, ಪುನಮಯಿಲ್ = ವನದ ನವಿಲು, (ನವಿಲಿನಂತೆ ಚಲುವಾದ ಈ ನಾಯಿಕೆಯು) ಕಣ್-ಪನಿಯಾ =

ಕಂಬನಿತುಂಬುವಳು. ವೇರ್ಕುಂ = ಮೈಬೆವರುವಳು, ಮುಕಿಳ್ಕುಂ = ರೋಮಾಂಚಿತಳಾಗುವಳು, (ಮೈ ನವಿರೇಳುವುದು) ವಿದಿರ್, ವಿದಿರ್ಕುಂ = ನಡುಗುವಳು, ವೆಳ್ಗಿ = ನಾಚಿಕೊಂಡು, ವೆವ್ವುಯಿರ್ಕುಂ = ನಿಟ್ಟುಸಿರುಬಿಡುವಳು, ಪಾರ್ಕಿನ್ರವರ್ಕುಂ = ನೋಡಿ ಗಮನಿಸುವವರಿಗೆ, ಇದ್-ಎನ್-ಕೊಲ್-ಎನ್ರು = ಇದು ಎಂತಹ ಸ್ಥಿತಿಯೆಂದು, ನಾಂ = ನಾವು, ಪಯಿಲುವಂ = ಹೇಳೋಣ (ಈ ಬಗೆಯಾದುದೆಂದು ಹೇಳಲಾಗುವುದಿಲ್ಲ)

**ತಾತ್ಪರ್ಯ** :- ಮೇಲುಕೀಳೆನಿಸದ ಆಶ್ರಿತರಾದವರೆಲ್ಲರನ್ನೂ ತನ್ನ ಸ್ವರೂಪರೂಪ ಗುಣಗಳನ್ನು ವ್ಯಕ್ತಪಡಿಸುವುದರ ಮೂಲಕ ನೀಲಮೇಘದಂತಿರುವ ಶ್ರೀದೇವನಾಯಕನು ಕರುಣೆಯೆಂಬ ನೀರನ್ನು ವರ್ಷಿಸುವುದನ್ನು ನೋಡಿ, ಮಲೆಪ್ರದೇಶದಲ್ಲಿ ಪ್ರಮೋದಿಸುವ ಸುಂದರ ನವಿಲಿನಂತಿರುವ (ಶ್ರೀದೇಶಿಕರೆಂಬ ನಾಯಕಿಯು) ಈಗ ಆ ಮೇಘವನ್ನು ಕಾಣದೆ ಅಗಲಿ ವಿರಹವೇದನೆಯಿಂದ ಕಣ್ಣೀರಿಡುತ್ತಾ, ಮೈ ಬೆವರಿ, ಮೈನವಿರೆದ್ದು, ಕಂಪಿಸಿ, ನಾಚಿಕೆಗೊಂಡು, ಬಿಸಿ ಬಿಸಿ ನಿಟ್ಟುಸಿರುಬಿಡುತ್ತಿರುವ ಅವಸ್ಥೆಯನ್ನು ನೋಡಿ ಕೇಳುವವರಿಗೆ ಇದು ಯಾತರಿಂದಾಯಿತೆಂದು ಹೇಳಲಿ ?

ಹಿಂದೆ ನಾಯಕಿಗೆ ತನ್ನ ರೂಪಾದಿಗಳನ್ನು ತೋರಲು ಹಿಗ್ಗಿ ಆನಂದಿಸುತ್ತಿರಲು ಕೂಡಲೇ ಮರೆಯಾಗಲು, ಅವಳು ಪಡುವ ಪಾಡನ್ನು ಸಖಿಯು ನೋಡಿ ಹೇಳುವಳು. ಇಲ್ಲಿಯೂ ನಾಯಕಿಯ ಭಾವೋದ್ರೇಕಸ್ಥಿತಿಯನ್ನು ಹೇಳಿರುವರು.

**वर्षन्तं यस्य कस्या प्यहिपतिपुर मास्थाय कारुण्यवर्षं ।**<br>
**नीलं तं प्रेक्ष्य मेघं वनरुचिरमयूर्युत्कटप्रेमभावा ।**<br>
**जाताश्रु स्स्विन्नगात्री पुलकिततनु रुत्कम्पमानात्तलज्जा ।**<br>
**किं चास्ते निश्वसन्ती किमिदमिति वयं पश्यतां वा वदाम ।। ६**

**ಮೂಲ :** ಪಯಿನ್ಮತಿ ನೀಯೇ ಪಯಿನ್ಮತಿತರುದಲಿನ್<br>
ವೆಳಿಯುಂ ನೀಯೇ ವೆಳಿಯುರನಿತ್ತಲಿನ್,<br>
ತಾಯುಂ ನೀಯೇ ಚಾಯ್ಕೈ ತಂದುಹಂದುದಲಿನ್,<br>
ತಂದೆಯುಂ ನೀಯೇ ಮುಂದಿ ನಿನ್ರಳಿತ್ತಲಿನ್,<br>
ಉರುವುಂ ನೀಯೇ ತುರವಾದೊಳುದಲಿನ್,<br>
ಉತ್ತದುಂ ನೀಯೇ ಶಿತ್ತಿನ್ಬ ಮಿನ್ಮೆಯಿನ್,<br>
ಆರುಂ ನೀಯೇ ಆತುಕ್ಕರುಳದಲಿನ್<br>
ಅರುಮುಂ ನೀಯೇ ಮರನಿಲೈಮಾಯ್ತ್ತದಲಿನ್,

ತುಣ್ಣೈವನುಂನೀಯೇ ಇಣ್ಣೈಯಿಲ್ಲೈಯಾದಲಿನ್
ತುಯ್ಯನುಂ ನೀಯೇ ಶೆಯ್ಯಾಳುರೈದಲಿನ್,
ಕಾರಣಂ ನೀಯೇ ನಾರಣನಾದಲಿನ್,
ಕರ್ಪಕಂ ನೀಯೇ ನರ್‌ಪದಂ ತರುದಲಿನ್,
ಇರೈವನುಂ ನೀಯೇ ಕುರೈಯೊನ್ರಿಲಾಮೈಯಿನ್,
ಇನ್ಬಮುಂ ನೀಯೇ ತುನ್ಬಂ ತುಡೈತ್ತಲಿನ್,
ಯಾನುಂ ನೀಯೇ ಎನ್ನುಳ್ ಉರೈದಲಿನ್,
ಎನದುಂ ನೀಯೇ ಯುನದನ್ರಿಯಿನ್ಮೈಯಿರ್ಱ್,
ನಲ್ಲಾಯ್ ನೀಯೇ ಪೊಲ್ಲಾಂಗಿಲಾಮೈಯಿರ್ಱ್,
ವಲ್ಲಾಯ್ ನೀಯೇ ವೈಯಮುಂಡುಮಿಳ್‌ತ್ತಲಿನ್,
ಎಂಗನಮಾಹುಂ ವೈಯ್ಯ ನಿನ್ ವಿಯಪ್ಪೇ,
ಅಂಗನೇ ಯೊಕ್ಕ ಅರಿವ ದಾರಣಮೇ ॥ 7

ಅರ್ಥ :- ಪಯಿಲ್-ಮತಿ-ತರುದಲಿನ್ = (ನಿನ್ನನ್ನು) ಅನುಭವಿಸಬಲ್ಲ ಅರಿವನ್ನು ಕೊಡುವುದರಿಂದ, ಪಯಿಲ್-ಮತಿ-ನೀಯೇ = ಅನುಭವಿಸುವ ಚಂದ್ರನೂ, ನೀನೇ,

ವೆಳಿ-ಉರ-ನಿತ್ತಲಿನ್ = (ಸಮಸ್ತವಸ್ತುಗಳೂ) ನಿನ್ನಿಂದಲೇ ಪ್ರಕಾಶಿಸಲ್ಪಡುವುದರಿಂದ, ವೆಳಿಯುಂ-ನೀಯೇ = ಜ್ಯೋತಿಯೂ (ಸೂರ್ಯನೂ) ನೀನೇ,

ಚಾಯ್ಯೆ-ತಂದು-ಉಹಂದುದಲಿನ್ = ನಿನ್ನ ಪಾದದ ನೆರಳನ್ನು ಕೊಟ್ಟು ಸಂತೋಷಪಡಿಸುವುದರಿಂದ, ತಾಯುಂ-ನೀಯೇ = ತಾಯಿಯೂ ನೀನೇ.

ಮುಂದಿ-ನಿನ್ರು = ಸೃಷ್ಟಿಗೆ ಹಿಂದೆ ಒಬ್ಬನೇ ಇದ್ದು, ಅಳಿತ್ತಲಿನ್ = ಸಂರಕ್ಷಿಸುವುದರಿಂದ, ತಂದೆಯುಂ -ನೀಯೇ = ತಂದೆಯೂ ನೀನೇ,

ತುರವಾದು-ಒಳುದಲಿನ್ = ನಮ್ಮನ್ನು ಕೈಬಿಡದ ಸ್ವಭಾವವಾದುದರಿಂದ ಉರವುಂ-ನೀಯೇ = (ಸಕಲವಿಧ) ಬಂಧುವೂ ನೀನೇ.

ಶಿತ್ತ್-ಇನ್ಬಂ-ಇನ್ಮೈಯಿನ್ = ನೀನು ಈ ಲೋಕದ ಅಲ್ಪಸುಖವಿಲ್ಲದವನಾಗಿರುವುದರಿಂದ, ಉತ್ತದುಂ-ನೀಯೇ = (ನನಗೆ ಬೇಕಾದ) ಪುರುಷಾರ್ಥವೂ ನೀನೇ,

ಆತುಕ್ಕು = (ನಾನು ಆಚರಿಸುವ) ಉಪಾಯಕ್ಕೆ, ಅರುಳ್-ತಲಿನ್ = ಫಲವನ್ನು ಕೊಡುವುದರಿಂದ, ಆರುಂ-ನೀಯೇ = ಉಪಾಯವೂ ನೀನೇ,

ಇಣ್ಣೈ-ಇಲ್ಲೈಯಾದಲಿನ್ = ನಿನಗೆ ಸರಿಸಮನಾದವರು ಮತ್ತೊಬ್ಬರಿಲ್ಲ ದಿರುವುದರಿಂದ, ತುಣ್ಣೈವನುಂ-ನೀಯೇ = (ನಾನುಪಡೆದ) ಸಹಾಯಕನೂ ನೀನೇ,

ಶಯ್ಯಾಳ್-ಉರೈದಲಿನ್ = ಮಹಾಲಕ್ಷ್ಮಿಯು (ನಿನ್ನ ವಕ್ಷಸ್ಥಳದಲ್ಲಿ) ನಿತ್ಯವಾಸ ಮಾಡುವುದರಿಂದ, ತುಯ್ಯನುಂ-ನೀಯೇ = ಪರಿಶುದ್ಧನೂ ನೀನೇ,

ನಾರಣನ್-ಆದಲಿನ್ = ಶ್ರೀಮನ್ನಾರಾಯಣನಾಗಿರುವುದರಿಂದ, ಕಾರಣಂ-ನೀಯೇ = ಸಮಸ್ತಕ್ಕೂ ಕಾರಣನಾಗಿರುವವನು ನೀನೇ,

ನಲ್-ಪದಂ ತರುದಲಿನ್ = ಅತ್ಯುತ್ತಮ ಪದವಿಯನ್ನು (ವೈಕುಂಠವನ್ನು) ಕೊಡುವುದರಿಂದ, ಕರ್ಪಕಂ-ನೀಯೇ = ಕಲ್ಪತರುವೂ ನೀನೇನೆ,

ಕುರೈ-ಒನ್ರು-ಇಲಾವ್ಮೈಯಿನ್ = ಯಾವದೊಂದೂ ಕೊರತೆಯೂ ಇಲ್ಲದಿರುವದರಿಂದ, ಇರೈವಮುಂ-ನೀಯೇ = ಸರ್ವಸ್ವಾಮಿಯೂ ನೀನೇ,

ತುನ್ಬಂ-ತುಡೈತ್ತಲಿನ್ = ದುಃಖಗಳನ್ನು ಹೋಗಲಾಡಿಸುವುದರಿಂದ, ಇನ್ಬಮುಂ-ನೀಯೇ = ಆನಂದಸ್ವರೂಪನೂ ನೀನೇನೆ,

ಎನ್ನುಳ್-ಉರೈದಲಿವ್ = ನನ್ನಲ್ಲಿ ಅಂತರ್ಯಾಮಿಯಾಗಿ ವಾಸಿಸುವುದರಿಂದ, ಯಾನುಂನೀಯೇ = ''ನಾನು'' ಎಂದು ಹೇಳಿಕೊಳ್ಳುವ ಆತ್ಮವಸ್ತುವೂ ನಿನ್ನಿಂದ ಬೇರೆಯಾಗಿರದೆ ನೀನಾಗಿಯೇ ಆಗಿರುವೆ,

ಉನದ್-ಅನ್ರಿ-ಇನ್ಮೈಯಿನ್ = (ಲೋಕದಲ್ಲಿ) ನಿನ್ನದಲ್ಲದವಸ್ತುವು ಯಾವುದೂ ಇಲ್ಲದಿರುವುದರಿಂದ, ಎನದುಂ-ನೀಯೇ = ನನ್ನದೆಂದು ಅಭಿಮಾನಿಸಿದ ವಸ್ತುವೂ ನೀನೇತಾನೆ,

ಪೊಲ್ಲಾಂಗು-ಇಲಾವ್ಮೈಯಿನ್ = ಯಾವವಿಧವಾದ ದೋಷವೂ ಇಲ್ಲದಿರುವುದರಿಂದ, ನಲ್ಲಾಯ್-ನೀಯೇ = ಉತ್ತಮೋತ್ತಮನೂ ನೀನೇಯೇ,

ವೈಯಂ-ಉಂಡು-ಉಮಿಳ್‌ದಲಿನ್ = (ಪ್ರಳಯದಲ್ಲಿ ಲೋಕವೆಲ್ಲವನ್ನೂ) ನುಂಗಿ (ಸೃಷ್ಟಿಯಲ್ಲಿ) ಹೊರಪಡಿಸುವುದರಿಂದ, ವಲ್ಲಾಯ್-ನೀಯೇ = ನಿಸ್ಸಮಶಕ್ತನೂ ನೀನೇ.

ಮೈಯ್ಯ = ಸತ್ಯರೂಪಿಯೇ ! ನಿನ್-ವಿಯಪ್ಪೇ = ನಿನ್ನ ಅತ್ಯದ್ಭುತಸ್ವಭಾವವನ್ನು, ಎಂಗನಂ-ಆಹುಂ = ಯಾವರೀತಿ ಇರುವುದೋ, ಅಂಗನೇ-ಒಕ್ಕ = ಆ ರೀತಿಯಾಗಿಯೇ ಒಪ್ಪಾಗಿರುವುದರಿಂದ, ಅರಿವದ್ = ಅದನ್ನು ಅರಿಯಬಲ್ಲುದು, ಆರಣಮೇ = ವೇದಗಳೇ (ಬೇರೆಯಾವುದರಿಂದಲೂ ಸಾಧ್ಯವಿಲ್ಲ)

मत्याः प्रदानात् प्रतिभान्विताया: ।
मति र्नवोन्मेषवती त्वमेव ।।
त्वतो हि सर्वाणि चकासते ततः ।
त्वमेव तेजोवसतिः प्रभाकरः ।। १

छायाप्रदानाहितसंप्रमोदात् ।
माता त्वमेवापि समेत्य पूर्वम् ।।
संरक्षितत्वाच्च पिता त्वमेव ।
त्वमेव जात्वप्यविसृष्टबन्धुः ।। २

आशाश्वतात्यल्पसुचेतरत्वात् ।
त्वमेव नित्यः पुरुषार्थभूतः ।।
फलानपेक्षाकरणादुपायः ।
त्वमेव सर्वार्थपुमर्थ रूपः ।। ३

अधर्ममार्गप्रविमोचकत्वात् ।
त्वमेव धर्मः परमोऽसमश्च ।
त्वमेव चान्यादृशरूपवत्वात् ।
त्वमेव लक्ष्मीवसतेर्विशुद्धः ।। ४

नारायणेति व्यपदिष्टनाम्नः ।
त्वमेव वेदोदितसर्वकारणम् ।।
अनन्यलभ्योत्तमधामदानात् ।
त्वमेव सर्वप्रदकल्पवृक्षः ।। ५

अन्यूनभावात् किल सर्वथापि ।
त्वमेव सर्वाधिपतीश्वरश्च ।।
दुःखापनेदैकसमर्थ भावात् ।
त्वमेव चानन्दमहागुणाकृतिः ।। ६

मय्यन्तरात्माभिधया निवासात् ।
त्वमेव चाहंपदवाच्य आत्मा ।।

न किंचिदस्तीति विनात्वदीयं ।
त्वमेव सर्ववसु मामकीनम् ।। ७

कस्यप्यभावादसतश्च कर्मणः ।
''सत्'' शब्दवाच्यः सुमहान् त्वमेव ।।
अन्तर्निवेशात् जगता मथैषां ।
त्वं सर्वशक्तश्च बहिर्निवेशात् ।। ८

सत्य ! त्वदीया भवतीह यादृशी ।
माया तथैवोपमितास्ति नान्या ।।
तादृक्प्रभावानुभव प्रवृत्ताः ।
आम्नायवाचः खलु निर्विशङ्काः ।। ९

ಮೂಲ : ಆರಂಣಗಳ್ ತೇಡ ಅಯಿಂದೈ ನಗರ್ ವಂದುದಿತ್ತ,
ಕಾರಣರಾಯ್ ನಿನ್ರ ಕಡಲ್ ವಣ್ಣರ್, ನಾರಣನಾರ್,
ಇಪ್ಪಡಿಕ್ಕ್ ಮಿಕ್ಕ್ ಅನ್ರೆಡುತ್ತಪಾದಂ ಕಳುವ,
ಮೆಯ್‌ಪ್ಪಡಿಕ್ಕ ಮಾನದು ಪೊನ್‌ವೆರ್ಪ್ಪು,.॥ 8

ಅರ್ಥ :- ಆರಣಂಗಳ್-ತೇಡ = ವೇದಗಳು (ಪರಮಾತ್ಮನನ್ನು ಕಾಣದೇ) ಹುಡುಕುತ್ತಿರಲಾಗಿ, ಅಯಿಂದೈ-ನಗರ್-ವಂದ್-ಉದಿತ್ತ = ತಿರುವಹೀಂದ್ರಪುರದಲ್ಲಿ ಬಂದು ಅವತರಿಸಿದರೂ, ಕಾರಣರ್-ಆಯ್-ನಿನ್ರ = ಸಕಲ ಜಗತ್ತಿಗೂ ಕಾರಣನಾಗಿಯೂ, ಕಡಲ್-ವಣ್ಣರ್ = ಸಮುದ್ರ ಬಣ್ಣವುಳ್ಳವನೂ ಆದ, ನಾರಣನಾರ್ = ಶ್ರೀಮನ್ನಾರಾಯಣನಾಗಿರುವ, (ಆಶ್ರಿತರ ವಿಷಯದಲ್ಲಿ ಸತ್ಯರೂಪಿಯಾದ ದೇವನಾಯಕನು, ಅನ್ರು = ತ್ರಿವಿಕ್ರಮಾವತಾರದಲ್ಲಿ, ಇ-ಪಡಿಕ್ಕ್-ಮಿಕ್ಕ್ = ಈ ಭೂಮಿಯಿಂದ ಮೇಲ್ಗಡೆಗೆ, ಎಡುತ್ತ = (ಬ್ರಹ್ಮ ಲೋಕದವರೆಗೆ) ಎತ್ತಿದ, ಪಾದಂ = ಪಾದವನ್ನು, ಕಳುವ = (ಬ್ರಹ್ಮನು) ತೊಳೆಯಲು, ಪೊನ್-ವೆರ್ಪ್ಪು = ಚಿನ್ನದ ಪರ್ವತವಾದ ಮೇರುವು, ಮೆಯ್-ಪಡಿಕ್ಕಂ-ಆನದು = ನಿಜವಾಗಿಯೂ ಪ್ರತಿಗ್ರಹಪಾತ್ರವಾಯಿತು.

ತಾತ್ಪರ್ಯ :- ದಾಸಸತ್ಯನಾದ ದೇವನಾಯಕನು ತ್ರಿವಿಕ್ರಮಾವತಾರದಲ್ಲಿ ಈ ಭೂಮಂಡಲವನ್ನೆಲ್ಲಾ ಒಂದಡಿಯಿಂದಳೆದು, ಮತ್ತೊಂದನ್ನು ಬ್ರಹ್ಮಲೋಕದವರೆಗೆ ಮೇಲಕ್ಕೆ ನೀಡಿದ ಕಾಲದಲ್ಲಿ ಬ್ರಹ್ಮನು ಆ ಪಾದವನ್ನು ಅಭಿಷೇಕಿಸಲು, ಆ ತೀರ್ಥವನ್ನು ಧರಿಸಲು ಮೇರುಪರ್ವತವೇ ಪ್ರತಿಗ್ರಹ ಬಟ್ಟಲಿನಂತಾಯಿತು. ಹೀಗಲ್ಲವೇ ಅವನ

ಮಹಿಮೆಯಿರುವುದು. ವೇದಗಳೂ, ಸಕಲ ಜಗತ್ಕಾರಣವಾದ ಅವನ ಪ್ರಭಾವವನ್ನು ಕಂಡರಿಯದೇ ಹುಡುಕುತ್ತಿರಲು, ಅವನು ಈ ಕರ್ಮಭೂಮಿಯಲ್ಲಿರುವ ಭಕ್ತರನ್ನು ಸಂರಕ್ಷಿಸುವುದಕ್ಕಾಗಿ, ತಿರುವಹೀಂದ್ರಪುರದಲ್ಲಿ ಬಂದವತರಿಸಿ, ಸಮಸ್ತರಿಗೂ ಇಷ್ಟಾರ್ಥಗಳನ್ನು ಕೊಟ್ಟು ನಿಂತಿರುವನು. ಆಹಾ ! ಅವನ ಸೌಲಭ್ಯ ಎಂತಹುದು.

**आम्नायेषु गवेषयत्स्वहिपुरी मेत्यावतीर्य स्थितः ।**
**पाथोनिध्युपमो निदान मखिलस्यापीह नारायणः ।।**
**ऊर्ध्वं पादमुदक्षिपच्च तमिमं प्राक्षालयत् विश्वसृट् ।।**
**तत्तीर्थग्रहणैकपात्र मभवन्नूनं सुवर्णाचलः ।। ೮**

**ಮೂಲ : ವೆರ್ಪುಡನೊನ್ರಿ ಆಯಿಂದ್ಯೆಯಿಲ್, ವೆವ್ವಿನೈತೀರ್ ಮರುಂದೊನ್ರು,**
**ಅರ್ಪುದಮಾಹ ಪಮರ್ನ್ದದೈಕೊಂಡು, ಅರುಳ್ ವೇಂಡಿ ನಿರ್ಕ,**
**ಪರ್ಪಿಲಮರ್ನ್ದ ಶೆಯ್ಯಾಳ್ ಪಡಿಕಾಟ್ಟಿಯ ಪಣ್ಪುಡೈ ಎಂ**
**ವಿರ್ಪುರುವಕ್ಕೊಡಿಕ್ಕೋರ್ ವಿಲಂಗಾ ಮಯಲ್ ಪೆತ್ತನಮೇ ॥ 9**

ಅರ್ಥ :- ಅಯಿಂದ್ಯೆಯಿಲ್ = ತಿರುವಹೀಂದ್ರಪುರದಲ್ಲಿ, ವೆವ್ವಿನೈ-ತೀರ್ = ಕ್ರೂರಪಾಪಗಳನ್ನೂ ನಾಶಪಡಿಸುವ, ಒನ್ರು-ಮರುಂದ್ = ಅನುಪಮವಾದ (ದೇವನಾಯಕನೆಂಬ) ಔಷಧವು, ವೆರ್ಪು-ಉಡನ್-ಒನ್ರಿ = (ಓಷಧಾದ್ರಿ ಎಂಬ) ಪರ್ವತದೊಂದಿಗೆ ಹೊಂದಿಕೊಂಡು, ಅರ್ಪುದಮಾಹ = ಆಶ್ಚರ್ಯಕರವಾಗಿ, ಅಮರ್ನ್ದದೈ-ಕೊಂಡು = ನಿತ್ಯವಾಸಮಾಡುತ್ತಿರುವುದನ್ನು ಕೇಳಿ, ಅರುಳ್-ವೇಂಡಿ-ನಿರ್ಕ = (ಅದರ) ಕರುಣೆಯನ್ನು ಬೇಡಿಕೊಂಡಿರಲು, ಪರ್ಪಿಲ್-ಅಮರ್ನ್ದ = ಪದ್ಮದಲ್ಲಿ ಅವತರಿಸಿ ನೆಲೆಸಿದ, ಶೆಯ್ಯಾಳ್ = ಮಹಾಲಕ್ಷ್ಮಿಯ, ಪಡಿ-ಕಾಟ್ಟಿಯ = ಪ್ರಕಾರಗಳನ್ನು (ನಾವು ತಿಳಿಯುವಂತೆ) ತೋರಿಸಿಕೊಟ್ಟ, ಪಣ್ಪ್-ಉಡೈ-ಸ್ವಭಾವವುಳ್ಳ, ಎಂ-ವಿಲ್-ಪುರುವ-ಕೊಡಿಕ್ಕು = ಬಿಲ್ಲಿನಂತಿರುವ ಹುಬ್ಬುಗಳುಳ್ಳ ಬಳ್ಳಿಯನ್ನು ಹೋಲುವ, ನಮ್ಮ ಹುಡುಗಿಗೆ, ವಿಲಂಗಾ-ಓರ್-ಮಯಲ್ = ಅದ್ವಿತೀಯವಾದ ಮತ್ತು ನೀಗಲಾರದ (ಅವನೊಡನಿರುವ) ಆಸೆಯನ್ನು, ಪೆತ್ತನಂ = ಪಡೆದೆವು. (ಇದು ನಾಯಿಕೆಯ ತಾಯಿಯ ಉಕ್ತಿ.)

ತಾತ್ಪರ್ಯ :- ಪರ್ವತಸಾಮಾನ್ಯದಲ್ಲಿರುವ ಔಷಧವು ಶರೀರಕ್ಕೆ ಬರುವ ರೋಗಗಳನ್ನು ಪರಿಹರಿಸುವುದಷ್ಟೆ. ತಿರುವಹೀಂದ್ರಪುರದಲ್ಲಿರುವ ಓಷಧಾದ್ರಿಯಲ್ಲಿ ಕಂಗೊಳಿಸುವ ದೇವನಾಯಕನೆಂಬ ಔಷಧವಾದರೋ ಅತಿವಿಲಕ್ಷಣವಾದುದು. ರೋಗ ಹಿಡಿಯುವ ದೇಹ ಪ್ರಾಪ್ತಿಗೆ ಕಾರಣವಾದ ಪಾಪಗಳನ್ನೇ ಪರಿಹರಿಸಿ, ಮತ್ತೆ ದೇಹವನ್ನು ಪಡೆಯದೆ, ಶಾಶ್ವತ ಆನಂದವನ್ನು ಪಡೆಯುವ ಅಮೃತವನ್ನೀಯುವುದು. ಈ

ಆಶ್ಚರ್ಯಗುಣಚೇಷ್ಟಿತಗಳನ್ನು ಕೇಳಿ ನೋಡಿ ನನ್ನ ಮಗಳೂ ಅದನ್ನು ಪಡೆಯಲು ಆಸೆಪಟ್ಟು ದೊರಕದೆ ತವಕಿಸುವಳು. ಪದ್ಮಾವಾಸಿನಿಯಂತೆ ನನ್ನ ಮಗಳೂ ಆಶ್ರಿತರಸತ್ಯನಾದ ಭಗವಂತನನ್ನು ಬಿಟ್ಟು ಅಗಲಿರಲಾರಳು. ಬಿಲ್ಲಿನಂತೆ ಬಾಗಿದಹುಬ್ಬೂ, ಸುವರ್ಣಲತೆಯಂತೆ ಇರುವ ಅವಳ ಒಡಲೂ, ಎಂತಹವರನ್ನೂ ಆಕರ್ಷಿಸುವಂತಲ್ಲವೆ ಇವೆ, ಈಗ ನನ್ನ ಮಗಳು ಆ ದಾಸಸತ್ಯನನ್ನು ಕೂಡಿರಲು ಆಸೆಪಟ್ಟು ತುಂಬ ಕಷ್ಟಪಡುವಳಲ್ಲ. ಏನು ಮಾಡುವುದು ? ಎಂದು ಅವಳ ಸ್ಥಿತಿಯನ್ನು ಹೇಳುವಳು.

**अद्रावौषधमोषधे रहिपुरे क्रूराघनिर्मूलन ।**
**श्रुत्वाश्चर्य मिहोषितं तदमितप्रेमेप्सुयोषिन्मणेः ।।**
**पद्मायाः विविधानुभूतिनिवहान् सन्दर्शयन्त्याश्च नः ।**
**चापभ्रूव्रतते स्सुदुस्त्यजपरोत्कण्ठाऽऽविरासातुला ।। ९**

ಮೂಲ : ಪೆತ್ತನೈನೀಯೇ ಮತ್ತುಳವೆಲ್ಲಾಂ
ಪೆರುವದು ನಿನ್ನೈ ಯುರುವದುಕೊಳ್ವಾರ್
ನಿನ್ನಾಲನ್ರಿ ಮನ್ನಾರಿನ್ಬಂ
ನಿನ್ಪೊರುಟ್ಟುನೀ ಎನ್ಪೊರುಟ್ಟಿಲ್ಲೈ,
ನಿನ್ನುರು ನಿನ್ರು ಮಿನ್ನುರುತ್ತೋನ್ರುಂ,
ನಿನ್ ತನಕ್ಕು ನಿಹರ್ ನಿನ್ನಡಿಯಡೈವಾರ್
ನಿನ್ಪಾಲನ್ನಿ, ಅನ್ಪಾಲುಯ್ಯಾರ್
ವಾರಣ ಮಳೈಕ್ಕ ವಂದಕಾರಣಮೇ ॥ **10**

ಅರ್ಥ :- ವಾರಣಂ = ಗಜೇಂದ್ರನು, ಅಳೈಕ್ಕ = ಕೂಗಿದಾಗ, ವಂದ = ಬಂದ, ಕಾರಣಮೇ = ಸಮಸ್ತಕ್ಕೂ ಕಾರಣನಾದ ಪರಮಾತ್ಮನೇ ! ಮತ್ತು-ಉಳ-ಎಲ್ಲಾಂ = ಉಳಿದ ಚೇತನಾ ಚೇತನಗಳನ್ನೆಲ್ಲಾ, ಪೆತ್ತನೈ-ನೀಯೇ = ಪಡೆದವನು ನೀನೇ ಅಲ್ಲವೆ, ಉರುವದು-ಕೊಳ್ವಾರ್ = ಉಪಾಯವನ್ನೂ ಅದರ ಫಲವನ್ನೂ ಬೇಕೆನ್ನುವವರು, ಪೆರುವದು-ನಿನ್ನೈ = ಪಡೆಯುವುದು ನಿನ್ನನ್ನೇ ಅಲ್ಲವೆ, ನಿನ್ನಾಲ್-ಅನ್ರಿ = ನಿನ್ನಿಂದಲ್ಲದೆ ಮತ್ತಾರಿಂದಲೂ; ಇನ್ಬಂ = ಸುಖವನ್ನು, ಮನ್ನಾರ್ = ಸ್ಥಿರವಾಗಿ ಪಡೆಯಲಾರರು, ನೀ = ನೀನು, ನಿನ್-ಪೊರುಟ್ಟು = ನಿನಗೋಸ್ಕರವೇ, (ನಿನ್ನ ಕಾರ್ಯನಿಗಾಗಿಯೇ) ಎನ್-ಪೊರುಟ್ಟು-ಇಲ್ಲೈ = ನನಗಾಗಿ ಅಲ್ಲವೇ ಅಲ್ಲ, ನಿನ್-ಉರು-ನಿನ್ರುಂ = ನಿನ್ನ ದಿವ್ಯಮಂಗಳಕಾಯದಿಂದಲೇ, ಮಿನ್-ಉರು-ತೋನ್ರುಂ = ಮಿಂಚಿನಂತೆ ಹೊಳೆಯುವ ಸ್ಥಿರವಲ್ಲದ ಈ ಸ್ಥಾವರ ಜಂಗಮಗಳೆಲ್ಲಾ ಕಾಣಿಸಿಕೊಳ್ಳುವುವಲ್ಲವೇ, ನಿನ್-ಅಡಿ-ಅಡೈವಾರ್

= ನಿನ್ನ ಪಾದಗಳನ್ನು ಪಡೆಯುವವರು, ನಿ೯-ತನಕ್ಕು = ನಿನಗೆ, ನಿಹರ್ = ಸರಿಸಮಾನನಾಗುವರು, ನಿ೯-ಪಾಲ್-ನಿನ್ನ ವಿಷಯದಲ್ಲಿ, ಅನ್ಬಾಲ್-ಅನ್ರಿ = ಭಕ್ತಿಯೊಂದರಿಂದಲ್ಲದೆ ಮತ್ತಾವುದರಿಂದಲೂ, ಉಯ್ಯಾರ್ ಉಜ್ಜೀವಿಸಲಾರರೈ,

ತಾತ್ಪರ್ಯ :- ಹಿಂದೆ ಮೊಸಳೆಯ ಬಾಯಿಯ ಸೆಳೆತಕ್ಕೆ ಸಿಕ್ಕಿದ ಗಜೇಂದ್ರನು "ಆದಿಮೂಲವೇ" ಎಂದು ಮೊರೆಯಿಡಲು ಕೂಡಲೇ ಬಂದು ರಕ್ಷಿಸಿ, "ಸಕಲ ಜಗತ್ಕಾರಣವಸ್ತು ನೀನೇ" ಎಂಬುದನ್ನುಳಿಸಿ ಕೊಂಡೆಯಲ್ಲವೇ, ದಾಸಸತ್ಯನಾದ ದೇವನಾಯಕನೇ ! ಲೋಕವನ್ನೆಲ್ಲವನ್ನೂ ಪಡೆದ ನಿನ್ನನ್ನೇ ಪ್ರಪನ್ನರು ತಮ್ಮ ಸ್ವರೂಪಕ್ಕೆ ತಕ್ಕ ಉಪಾಯವನ್ನಾಗಿಯೂ, ಫಲವನ್ನಾಗಿಯೂ ಕೊಳ್ಳುವರು. ನಿಸ್ಸಮಾನಂದವೆಂಬ ಮುಕ್ತಿಯನ್ನು ಕೊಡುವವನು ನೀನೇ, ಮತ್ತಾರಿಗೂ ಈ ಶಕ್ತಿಯಿಲ್ಲ. ನೀನು ಇತರರಿಗಾಗಿ ಏನು ಮಾಡಿದರೂ ಅದರ ಫಲವು ನಿನಗೇ. ಸಕಲವೂ ನಿನ್ನ ಒಡಲಿನಿಂದಲೇ ಉಂಟಾಗುವುದು. ನಿನ್ನನ್ನು ಆಶ್ರಯಿಸಿ, ಸೇವಿಸುವವರು ನಿನಗೆ ಸಮನಾಗುವರು. ನಿನ್ನಲ್ಲಿ ಭಕ್ತಿಯಿಲ್ಲದವರಿಗೆ ಉಜ್ಜೀವಿಸಲು ಬೇರೆ ಮಾರ್ಗವೇ ಇಲ್ಲವೈ.

(ಇಷ್ಟೇ ದೊರತಿರುವುದು ಉಳಿದುವು ಕಣ್ಮರೆಯಾಗಿವೆ)

समाह्वयति वारणे सपदि कारणोपागतः ।
त्वमेव हि ससर्जिथ त्वदितराणि सर्वाण्यपि ।।

उपायफललिप्सव स्समुपयन्ति च त्वांपरं ।
प्रयन्त्यमितसम्मदं भवत एव न त्वन्यतः ॥

त्वदर्थमिह ते कृतिः ममकृते कथं वापि न ।
त्वदीयवपुषा जगत्समभवत्तटिच्चश्चलम् ।।

भवत्पदसमाश्रिताः खलु भवत्समाना श्च ते ।
त्वयि त्वकृतभक्तयो जगति ते च नोज्जीविताः ।। १०

श्रीमते निगमान्त महादेशिकाय नमः ।।

वेदान्तार्यः कवीन्द्रो गुरुमणि रिह यां "मुम्मणिक्कोवै" नाम्नीं ।
चक्रे मालां प्रक्लृप्तां त्रिभिरिव मणिभिः द्राविडीं सूक्तिमालाम् ।।
श्रीमत्त्रय्यन्तरामानुजगुरुकरुणापात्रगोपालसूरिः ।
कर्णाटोक्त्या विवव्रे त्रिदशभणितिभि श्श्लोकयामास मोदात् ।।

||ಶ್ರೀಃ||

||ಶ್ರೀಮತೇ ನಿಗಮಾಂತಮಹಾದೇಶಿಕಾಯ ನಮಃ ||

# ನವರತ್ನಮಾಲೈ

ಶ್ರೀಮದಾಚಾರ್ಯಮಣಿಗಳು ಶ್ರೀದೇವನಾಯಕನೆಂಬ ತಿರುವಹೀಂದ್ರಪುರದ ದೇವರ ವಿಷಯವಾಗಿ 9 ಕೃತಿ ರತ್ನಗಳನ್ನು ರಚಿಸಿರುವರು. ಈ ''ನವರತ್ನಮಾಲೈ'' ಅವುಗಳಲ್ಲೊಂದು. ಇದರ ಕೊನೆಯ ಪಾಶುರದಲ್ಲಿ ತಾವೇ ''ದೇವನಾಯಕ ಪಂಚಾಶತ್, ಅಚ್ಯುತಶತಕ, ಮುಮ್ಮಣಿಕೋವೈ, ಪಂದ್, ಕಳಿಲ್, ಊಶಲ್, ಏಶಲ್, ಅಮ್ಮಾನೈ ಮತ್ತು ನವರತ್ನಮಾಲೈ''. ಈ ಒಂಬತ್ತನ್ನೂ ಮಾಡಿ ಭಗವಂತನಿಗೆ ಒಪ್ಪಿಸಿದಂತೆ ಹೇಳಿರುವರು.

ಪ್ರಕೃತ ಇದರಲ್ಲಿ ಮೊದಲು ಆ ಪರಮಾತ್ಮನ ಪದಪದ್ಮಗಳ ಹಿರಿಮೆ ಮಹಿಮೆಗಳನ್ನೂ, ದಶಾವತಾರವೆತ್ತಿ ಬಂದು ತೋರಿದ ಪ್ರಭಾವವನ್ನೂ, ಬ್ರಹ್ಮ-ಗರುಡ-ಆದಿಶೇಷ-ಮತ್ತು ಭೂದೇವಿ ಇವರ ಪುಣ್ಯತೀರ್ಥಗಳಿಗೆ ಒಲಿದು, ಅವುಗಳ ತೀರಗಳಲ್ಲೇ ಬಿಜಯಮಾಡಿರುವುದನ್ನೂ, ಮಾಘಮಾಸದಲ್ಲಿ ದೇವರು ಕಡಲಿನತಡಿಗೆ ಬಲು ಬೆಡಗಿನ ನಡಿಗೆಯಿಂದ ಬಂದು, ಅಲ್ಲಿ ಮರಳಿನ ಮೇಲಿನ ಉತ್ಸವವನ್ನು ಪಡೆವ ರೀತಿಯನ್ನೂ ವರ್ಣಿಸಿ ಆ ದಿವ್ಯಮಂಗಳ ವಿಗ್ರಹದಲ್ಲಿ ಮಾರು ಹೋದುದನ್ನೂ, ಆ ಸನ್ನಿವೇಶವನ್ನು ನೋಡಿ, ಮರೆಯದೆ, ಅಡಿಗಡಿಗೆ ನೆನೆಯುವವರಿಗೆ ಈ ಸಂಸಾರ ಬಂಧನವು ನೀಗುವುದೆಂಬುದನ್ನೂ ಸ್ಪಷ್ಟಪಡಿಸಿ, ತಮ್ಮ ಅಂತ್ಯಕಾಲದಲ್ಲಿ ತಮಗೆ ಅಭಯ ಪ್ರದಾನಮಾಡುವಂತೆ ಪ್ರಾರ್ಥಿಸಿ, ಕೊನೆಗೆ ಆ ದೇವರಿತ್ತ ಆಜ್ಞೆಯಂತೆ ತಾವು ಈ 9 ಗ್ರಂಥಗಳನ್ನು ಮಾಡಿ, ಅವನ ಸಾನ್ನಿಧ್ಯದಲ್ಲಿ ಪಾಡಿದುದಾಗಿ ತಿಳಿಸಿ, ಮುಗಿಸಿರುವರು.

ಇತಿ, ಶ್ರೀ ದೇಶಿಕಮಣಿಕೃಪಾಭಾಜನಂ

ವಿದ್ವಾನ್-ಹ-ಗೋಪಾಲಾಚಾರ್ಯಃ
ನಂ.1 4, ನಾಲ್ಕನೆಯ ಬೀದಿ, ಕಾಳಿದಾಸ ರಸ್ತೆ
ವಾಣಿವಿಲಾಸ ಮೊಹಲ್ಲ, ಮೈಸೂರು - 2

ಶುಭಕೃತು

1962

॥ಶ್ರೀ ॥

।।श्रीमते निगमान्तमहादेशिकाय नमः ।।

# ನವರತ್ನಮಾಲೈ

ಮೂಲ : ಒರುಮತಿಯನ್ಬರುಳಂಕವರ್‌ನ್ದನ ಉಲಹಮಡಙ್ಗವಳರ್‌ನ್ದಳನ್ದನ,
ಒರುಶಡೈಯೊನ್ರಿಯ ಗಂಗೈತನ್ದನ ಉರಗಪಡಂಗಳರಙ್ಗ ಕೊಣ್ಡನ,
ದರುಮಮುಯರ್‌ನ್ದದಿದೆನ್ನ ನಿನ್ರನ ದರುಮನಿರನ್ದದಿಶೈನ್ದುಶೆನ್ರನ,
ಶಕಡಮುಡೈನ್ದುಕಲಙ್ಗವೆನ್ರನ ತಮರ್‌ಹಳರುನ್ದು ಮರುನ್ದಿದೆನ್ಬನ,
ತಿರುಮಗಳ್‌ಶೆಯ್ಯಕರಙ್ಗಳೊನ್ರಿನ
ತಿಗಳ್‌ತುಳವುನ್ದಮಣಙ್ಗಮಳ್‌ನ್ದನ,
ಶೆಳುಮಣಿಕೊಂಡಶಿಲಮ್ಬಿಲಙ್ಗಿನ ಶಿಲೈತನಿಲ
ನ್ರೊರಣಙ್ಗು ಮಿಳ್‌ನ್ದನ,
ಅರುಮರೈಯನ್ದಮಮರ್‌ನ್ದಪಣ್ಬಿನ
ಅಯನ್ಮುಡಿ ತನ್ನಿಲಮರ್ ನ್ದುಯರ್‌ನ್ದನ,
ಅರುಳ್‌ತರವೆಣ್ಣೆಯಯಿನ್ದೈವನ್ದನ
ಅಡಿಯವರ್ ಮೆಯ್ಯರ್ ಮಲರ್‌ಪ್ಪದಙ್ಗಳೇ ॥ 1

ಅರ್ಥ :- ಅಡಿಯವರ್ = ಭಕ್ತರಿಗೆ, ಮೆಯ್ಯರ್ = ಸತ್ಯನಾದವನ (ದೇವನಾಯಕನ), ಮಲರ್-ಪದಂಗಳ್ = ಪಾದಾರವಿಂದಗಳು, ಒರು-ಮತಿ-ಅನ್ಬರ್ = (ತನ್ನಲ್ಲಿ) ಒಂದೇ ವಿಧವಾದ ಭಕ್ತಿಯುಳ್ಳ ಭಾಗವತರ, ಉಳಂ = ಮನಸ್ಸನ್ನು, ಕವರ್‌ನ್ದನ = ವಶಪಡಿಸಿಕೊಳ್ಳುವುವು, ಉಲಹಂ-ಅಡಂಗ = ಲೋಕಗಳೆಲ್ಲ ತನ್ನಲ್ಲಿ ಅಡಗುವಂತೆ, ವಳರ್‌ನ್ದು = ಬೆಳೆದು, ಅಳಂದನ = ಅಳೆದವು, ಒರು-ಶಡೈ-ಒನ್ರಿಯ = ಅಸದೃಶವಾದ ಜಟೆಯಲ್ಲಿ ಒಂದಾಗಿ ಸೇರಿದ, ಗಂಗೈ = ಗಂಗೆಯನ್ನು, ತಂದನ = ತಂದುಕೊಟ್ಟವು, ಉರಗ-ಪಡಂಗಳ್ = ಕಾಳಿಂಗನ ಹೆಡೆಗಳನ್ನು, ಅರಂಗು-ಕೊಂಡನ = ನಾಟ್ಯರಂಗವನ್ನಾಗಿ ಮಾಡಿಕೊಂಡವು, ಉಯರ್‌ನ್ದದು-ದರುಮಂ-ಇದು-ಎನ್ರ-ನಿನ್ರನ = ಉತ್ತಮೋತ್ತಮವಾದ ಉಪಾಯವು ಈ ಜೋಡಿಯೇ ಎಂದು ತಿಳಿಯುವಂತೆ ಇರುವುವು ಇವೇ, ದರುಮನ್ = ಧರ್ಮರಾಜನು, ಇರಂದುದು = ಪ್ರಾರ್ಥಿಸಿದುದನ್ನು, ಇಶೈಂದು = ಕೇಳಿ, ಒಪ್ಪಿಕೊಂಡು, ಶೆನ್ರನ = (ದೂತ್ಯಕ್ಕೆ) ಹೋದುವು, ಶಕಟಂ-ಉಡೈಂದ್-ಕಲಂಗ = ಶಕಟಾಸುರನು ನುಚ್ಚುನೂರಾಗುವಂತೆ, ವೆನ್ರನ = ಒದ್ದು ಧ್ವಂಸಮಾಡಿದುವು,ಇದು = ಈ

ಪಾದಗಳ ಜೋಡಿಯು, ತಮರ್-ಹಳ್-ಅರುಂದುಂ = ಭಾಗವತರು (ಸಂಸಾರ ದುಃಖ ನೀಗುವಂತೆ) ಅನುಭವಿಸುವ (ಸವಿಯುವ), ಮರುಂದು ಎನ್ನನ = ಅಮೃತ ವೆನಿಸಿಕೊಳ್ಳುವುವು, ತಿರು-ಮಗಳ್ = ಮಹಾಲಕ್ಷ್ಮಿಯ, ಶೆಯ್ಯ-ಕರಂಗಳ್ = ಕೋಮಲವೂ ಅರುಣವೂ ಆದ ಕೈಗಳೊಂದಿಗೆ, ಒನ್ರಿನ = ಒಂದಾಗಿ ಸೇರಿದುವು, ತಿಗಳ್-ತುಳವು-ಉನ್ದುಂ = ಪ್ರಕಾಶಿಸುವ ತುಲಸಿಯಲ್ಲಿ ಉಂಟಾಗುವ, ಮಣಂ-ಕಮಳ್ನ್ದನ = ಪರಿಮಳವನ್ನು ಬೀರುವಂತಾದುವು, ಶೆಳುಂ-ಮಣಿ-ಕೊಂಡ = ಪ್ರಜ್ವಲಿಸುವ ರತ್ನಗಳನ್ನು ಕೆತ್ತಿದ, ಶಿಲಂಬು-ಇಲಂಗಿನ = ಕಾಲಂದಿಗೆಗಳಿಂದ ಬೆಳಗಿದವು, ಅನ್ರು = ಆಗ (ರಾಮಾವತಾರ ದಲ್ಲಿ), ಶಿಲೈ-ತನಿಲ್ = ಶಿಲೆಯ ರೂಪವನ್ನುತಾಳಿದ್ದ, ಓರ್-ಅಣಂಗು = ಒಬ್ಬ ಸ್ತ್ರೀಯನ್ನು, ಉಮಿಳ್ನ್ದನ = ನಿಜರೂಪಗೊಳಿಸಿದುವು, ಅರು-ಮರೈ-ಅಂತಂ = ಅರಿಯುವುದು ಕಷ್ಟವೆಂದಿರುವ ಉಪನಿಷತ್ತುಗಳಲ್ಲಿ, ಅಮರ್ನ್ದ = ಹೊಂದಿಕೊಂಡು, ಪಣ್ಬಿನ = ಹೊಗಳಿಸಿಕೊಂಡವು, ಅಯನ್-ಮುಡಿ-ತನ್ನಿಲ್ = ಬ್ರಹ್ಮನ ಶಿರಸ್ಸಿನಲ್ಲಿ, ಅಮರ್ನ್ದು = ಹೊಂದಿಕೊಂಡು, ಉಯರ್ನ್ದನ = ಮೇಲೆ ಮೇಲೆ ಬೆಳಗುತ್ತಾ ಬೆಳೆದುವು, ಅರುಳ್-ತರ-ಎಣ್ಣಿ = ಕರುಣಿಸಬೇಕೆಂದು ಭಾವಿಸಿ, ಅಯಿಂದೈ = ತಿರುವಹೀಂದ್ರಪುರಕ್ಕೆ, ವಂದನ = ಬಂದವತರಿಸಿದುವು.

ತಾತ್ಪರ್ಯ :- ಭಕ್ತರಿಗೆ ಸತ್ಯರೂಪನಾಗಿ ಬೆಳಗುವ ದೇವನಾಯಕನ ಈ ಪಾದಾರವಿಂದ ಗಳೆರಡೂ ಬೇರೆ ಯಾವ ಉಪಾಯವನ್ನಾಗಲೀ ಫಲವನ್ನಾಗಲೀ ಬಯಸದ ಪರಮೈ ಕಾಂತಿಗಳ ಚಿತ್ತಗಳನ್ನು ವಶೀಕರಿಸಿ ಅವುಗಳಿಂದ ಸದಾ ಧ್ಯಾನಿಸಲ್ಪಡದ ತಕ್ಕವು. ತ್ರಿವಿಕ್ರಮ ವಾಗಿ ಅವತರಿಸಿದಾಗ ಸಮಸ್ತವೂ ತನಗೆ ಒಳಪಡುವಂತೆ ಹಿರಿದಾಗಿ ಬೆಳೆದು ಬೆಳಗಿದವು. ಈಶ್ವರನ ಜಟೆಯಲ್ಲಿ ತಂಗಿಸಿ, ಅದರಿಂದ ಅವನನ್ನು ಪಾವನಗೊಳಿಸಲು ಗಂಗೆಯನ್ನು ತಂದವು. ಕಾಳಿಯ ಸರ್ಪದ ಹೆಡೆಗಳನ್ನೇ ನರ್ತನಕ್ಕೆ ರಂಗಸ್ಥಲವನ್ನಾಗಿ ಮಾಡಿಕೊಂಡು ದುಷ್ಟದಮನವನ್ನೂ ಶಿಷ್ಟ ಸಂಮೋದನವನ್ನೂ ಉಂಟು ಮಾಡಿದುವು. ಉಪಾಸಕರಿಗೆ ಪ್ರಧಾನವಾದ ಉಪಾಯವಾಗಿ ಶಿಷ್ಟಸಮ್ಮೋದವನ್ನೂ ಫಲವನ್ನು ಕೊಡುವುವು. ಧರ್ಮರಾಯನು ಪ್ರಾರ್ಥಿಸಿಕೊಂಡಂತೆ ದೂತ ಕಾರ್ಯಕ್ಕಾಗಿ ದುರ್ಯೋಧನನ ಬಳಿಗೆ ಹೋದುವು. ಶ್ರೀಕೃಷ್ಣನನ್ನು ಕೊಲ್ಲಲು ಬಂದ ಶಕಟಾಸುರನನ್ನು ನುಚ್ಚುನೂರಾಗಿಸಿ ಜಯಗಳಿಸಿದುವು. ಸಂಸಾರವನ್ನು ನೀಗುವ ಔಷಧವೂ ಅಮೃತವೂ ಇವೇ ಎಂದು ಶ್ಲಾಘಿಸಲ್ಪಟ್ಟುವು. ಮಹಾಲಕ್ಷ್ಮಿಯು ಪರಮಪುರುಷನ ಪಾದ ಕಮಲಗಳನ್ನು ಒತ್ತುವಾಗ ಆಕೆಯ ಕಮಕಮಲಗಳೊಂದಿಗೆ ಒಂದಾದುವು. ಸದಾ ತುಲಸಿಯ ಪರಿಮಳವು, ಘಮಘಮಿಸುವಂತೆ ಮಾಡಿದುವು. ಅಮೂಲ್ಯ ನವರತ್ನಖಚಿತವಾದ ನೂಪುರಗಳನ್ನು ಧರಿಸಿ ಬೆಳಗಿದುವು. ಗೌತಮ ಪತ್ನಿಯಾದ ಅಹಲ್ಯೆಗೆ ಶಿಲೆಯ ರೂಪವನ್ನು ಹೋಗಲಾಡಿಸಿ, ಆವಳನ್ನು ಭವ್ಯರೂಪಳನ್ನಾಗಿ ಮಾಡಿ ಬೆಳಗಿದವು. ಇವೇ ಪರತತ್ವವೆಂದು ಸಮಸ್ತ ವೇದಾಂತಗಳೂ ಮೊಳಗುವಂತೆ ಆಗಿರುವುವು. ತ್ರಿವ್ರಿಕಮಾವತಾರದಲ್ಲಿ ಪಾದವನ್ನು

ಮೇಲಕ್ಕೆ ನೀಡಿದಾಗ ಬ್ರಹ್ಮನ ಶಿರಸ್ಸಿನ ಮೇಲೆ ಅಲಂಕರಿಸಿ, ಮುಂದಕ್ಕೂ ಬೆಳೆದು ಬೆಳಗಿದುವು. ''ಇಂತಹ ಪಾದಗಳನ್ನು ಈ ಕರ್ಮಭೂಮಿಯಲ್ಲಿ ಇರುವವರೆಲ್ಲರೂ ಸೇವಿಸಿ, ಉಜ್ಜೀವಿಸಲಿ'' ಎಂದು ಸಂಕಲ್ಪಿಸಿ, ತಿರುವಹೀಂದ್ರಪುರಕ್ಕೆ ಬಿಜಯ ಮಾಡಿಸಿವೆ. ಇಂತಹ ಮಹಿಮೆಯ ಅಡಿಗಳ ಸೌಲಭ್ಯಾತಿಶಯವನ್ನು ಎಷ್ಟೆಂದು ವರ್ಣಿಸೋಣ !

निजपदाश्रितसत्यपदाम्बुजे सममतिप्रियभक्तहृदावृते ।
मितवती जगतीरभिवर्धिताः सरितमाहरतां हरमौलिगाम् ।। १

अकुरुतां निजनाट्यभुवं फणाः परमधर्म इवाभवतातीममे ।
अगमतां यमजार्थितकर्मणे शकलशोऽकुरुतां शकटासुरम् ।। २

पदजुषामतिभोग्यसुधेव ते कमलजारुणपाणिविमर्दिते ।
द्युततुलस्युदितातिसुगन्धिनी प्रविलसन्मणिनूपुरभूषिते ।। ३

अतनुतां सुतनुं च तदोपलात् दुरवबोधनवेदशिरोनुते ।
उपचितेऽजशिरस्युचिते धृते उपगतेऽहिपुरं करुणाप्रदे ।। ४

ಮೂಲ : ಮಕರಂವಳರುಮಳವಿಲ್ ಪೌವ ಮಡ್ಡೈಯ ವುತ್ತಲೈತ್ತನ್ನೈ,
ವಡಿವುಕಮಟಮೆನವಮರ್‌ನ್ದುಗಿರಿತನ್ನೈದರಿತ್ತನ್ನೈ,
ಮಲಿಯುಮಶುರನುರಮಿಡನ್ದುವಶುದೈಪೇರ್ತ್ತೆಡುತ್ತನ್ನೈ,
ವಲಿಕೊಳವುಣನುಡಲ್ ಪಿಳನ್ದು ಮದಲೈ ಮೆಯ್‌ಕ್ಕುದಿತ್ತನ್ನೈ,
ಪಹರುಮುಲಗಮಡಿಯಳನ್ದು ತಮರ್‌ಹಳುಕ್ಕಳಿತ್ತನ್ನೈ
ಪರುಶುಮುನಿವನ್‌ವಡಿವುಕೊಂಡು ಪಕೈವರೈತ್ತುಣಿತ್ತನ್ನೈ,
ಪಣಿಯವಿಶೈವಿಲ್‌ದಶಮುಕನ್ತನ್ ಮುಡಿಹಳ್‌ಪತ್ತರುತ್ತನ್ನೈ,
ಪಡಿಯುಮುರುವಿಲ್ ವರುಪಿಲಮ್ಬವಶುರನ್ನೈತ್ತಗರ್ತ್ತನ್ನೈ
ನಗರಿತುವರೈಯೆನವುಹನ್ದುವರೈ ಕರತ್ತೆಡುತ್ತನ್ನೈ
ನಡಮೊಡಿಯಲುಪರಿಯಿಲ್‌ವನ್ದು ನಲಿವರುಕ್ಕವುತ್ತನ್ನೈ,
ನಲಿಯುಂವಿನ್ನೈಹಳ್‌ಶೆಗುಮರುನ್ದಿ ನಲಮುರೈನ್ದವೆರ್ಪ್ಪನ್ನೈ,
ನಣುಗುಗರುಡನದಿಕಳರ್‌ನ್ದಪುನಲುಹಪ್ಪಿಲ್ ವೈತ್ತನ್ನೈ,
ಅಕರಮುದಲವುರೈಹೊಣ್‌ಮಂಗೈಕಣವನುಕ್ಕಳಿತ್ತನ್ನೈ,

ಅಡ್ಡೈಯುಂ ವಿನತ್ತೈಶಿರುವನುಯ್ಯವರುಳ್‌ಕೊಡುತ್ತುಯರ್‌ತ್ತಿನ್ನೈ,
ಅಡಿಯುಮಣ್ಣೈಯುಮೆನುಮನನ್ದನಡಿತೊಳಕ್ಕಳಿತ್ತನ್ನೈ,
ಅವನಿಮರುವುತಿರುವಯಿನ್ದ್ರೈಯಡಿಯವರ್ಕ್ಕುಮೆಯ್ಯನೇ ॥ 2

ಅರ್ಥ :- ಅವನಿ = ಭೂದೇವಿಯು, ಮರುವು = ಪಡೆದ, ತಿರು-ಅಯಿನ್ದ್ರೈ = ತಿರುವಹೀಂದ್ರಪುರದಲ್ಲಿ (ಬಿಜಯಮಾಡಿಸಿರುವ) ಅಡಿಯವರ್ಕ್ಕು-ಮೆಯ್ಯನೇ = ಭಕ್ತರ ಸತ್ಯನೆ ! ಮಕರಂ-ವಳರುಂ-ಅಳವಿಲ್ = ಮತ್ಸ್ಯರೂಪವನ್ನು ಪಡೆದು ಬೆಳೆದಾಗ, ಪೌವಂ-ಅಡ್ಡೈಯ = ಸಮುದ್ರವನ್ನೆಲ್ಲಾ, ಉತ್ತು = ಆವರಿಸಿ, ಅಲೆನ್ದನ್ನೈ = ಕಲಕಿದೆಯಲ್ಲವೇ, ವಡಿವು-ಕಮಟಂ-ಎನ = (ಪಡೆದ) ರೂಪವು ನಿಜವಾದ ಆಮೆಯೇಯೋ ಎಂಬಂತೆ, ಅಮರ್‌ನ್ದು = ನೆಲೆಯಾಗಿದ್ದು, ಗಿರಿ-ತನ್ನೈ-ದರಿತ್ತನ್ನೈ = ಮಂದರ ಪರ್ವತವನ್ನು ಧರಿಸಿನಿಂತೆಯಷ್ಟೆ, ಮಲಿಯುಂ-ಅಶುರರ್ = ಮೇಲೆಬೀಳಲು ಬಂದ ಹಿರಣ್ಯಾಕ್ಷನೆಂಬ ರಾಕ್ಷಸನ, ಉರಂ-ಇಡಂದು = ಎದೆಯನ್ನು ಸೀಳಿ, ವಶುದ್ದೈಯ್ಯೈ = ವಸುಧೆಯನ್ನು (ಭೂಮಿಯನ್ನು), ಪೆಯರ್ತ್ತೆಡುತ್ತನ್ನೈ = ಉದ್ಧರಿಸಿದೆ, ವಲಿಹೊಳ್-ಅವುಣನ್ = ಬಲಿಷ್ಠನಾದ ಹಿರಣ್ಯಕಶುಪುವಿನ, ಉಡಲ್-ಪಿಳಂದು = ಹೊಟ್ಟೆಯನ್ನು ಬಗೆದು, ಮದಲೈ-ಮೆಯ್‌ಕ್ಕು = ಅವನ ಹಿರಿಯ ಮಗನಾದ ಪ್ರಹ್ಲಾದನನ್ನು ಕಾಪಾಡಲು, ಉದಿತ್ತನ್ನೈ = ಉದಯಿಸಿದೆ, ಪಹರುಂ-ಉಲಹಂ = (ಬಲಿಯು ತನ್ನದೆಂದು ಹೇಳಿದ) ಸಮಸ್ತ ಲೋಕಗಳನ್ನೂ, ಅಡಿ-ಅಳಂದು = ತನ್ನಡಿಗಳಿಂದ ಅಳೆದು, ತಮರ್‌ಹಳುಕ್ಕು = ಭಕ್ತರಾದ ದೇವತೆಗಳಿಗೆ, ಅಳಿತ್ತನ್ನೈ = ಕೊಡಿಸಿದೆಯ್ಯೈ, ಪರಶುಮುನಿವನ್-ವಡಿವು-ಕೊಂಡು = ಪರುಶರಾಮನ ರೂಪವನ್ನು ಹೊಂದಿ, ಪಗೈವರ್ೈ = ಶತ್ರುಗಳೆನಿಸಿದ್ದ ಕ್ಷತ್ರಿಯರನ್ನು, ತುಣಿತ್ತನ್ನೈ = ಕೊಂದೆಯಲ್ಲವೇ, ಪಣಿಯ-ಇಶ್ಶೈವು-ಇಲ್ = (ಶ್ರೀರಾಮನಾಗಿದ್ದ ನಿನ್ನ) ಅಡಿಗಳನ್ನು ಸ್ತುತಿಸಲು ಸಮ್ಮತಿಸದಿದ್ದ, ದಶಮುಕನ್ ತನ್ = ರಾವಣನ, ಮುಡಿಹಳ್-ಪತ್ತು = ಹತ್ತು ತಲೆಗಳನ್ನೂ, ಅರುತ್ತನ್ನೈ = ಕತ್ತರಿಸಿ ಕೆಡವಿದೆಯಲ್ಲವೆ, ಪಡಿಯುಂ-ಉರುವಿಲ್-ವರು = (ಬಹಳ ಚೆನ್ನಾಗಿ) ಒಪ್ಪುವಂತಹ (ಗೊಲ್ಲನ) ರೂಪದಲ್ಲಿ ಬಂದ, ಪಿಲಂಬ-ಅಶುರನ್ನೈ = ಪ್ರಲಂಬಾಸುರನನ್ನು, ತಹರ್ತನ್ನೈ = (ಬಲರಾಮನಾಗಿ ಬಂದು) ಕೊಂದೆಯಲ್ಲವೇ, ನಗರಿ-ತುವರೈ-ಎನ-ಉಹನ್ದು = (ತನಗೆ ವಾಸಕ್ಕೆ) ದ್ವಾರಕಾನಗರವೇ ಸರಿಯಾದುದೆಂದು ಸಂತೋಷಿಸಿ, ವರೈ = ಗೋವರ್ಧನ ಗಿರಿಯನ್ನು, ಕರತ್ತು-ಎಡುತ್ತನ್ನೈ = ಕೈಯಲ್ಲಿ ಎತ್ತಿದೆಯಲ್ಲವೇ, ನಡಂ-ಒಡು-ಇಯಲು-ಪರಿಯಲ್ = ನರ್ತಿಸುವ ವಿಚಿತ್ರ ನಡಿಗೆಯುಳ್ಳ ಕುದುರೆಯ ಮೇಲೆ, ವಂದು = (ಕಲ್ಕಿಯಾಗಿ) ಬಂದು, ನಲಿವು-ಅರುಕ್ಕ = (ಕಲಿಯಿಂದ ಬರುವ) ಪಾಪಗಳನ್ನು ನಾಶಮಾಡುವುದಕ್ಕೆ, ಉತ್ತನ್ನೈ = ಒಪ್ಪಿದೆಯಲ್ಲವೇ, ನಲಿಯುಂ-ವಿನ್ನೈಹಳ್ = (ಸಂಸಾರಿಗಳನ್ನು) ದುಃಖಕ್ಕೆ ಈಡುಮಾಡಿ ನಲಿಯುವ ಪುಣ್ಯಪಾಪಕರ್ಮಗಳನ್ನು, ಶೆಹುಂ-ಮರುಂದಿನ್ = ಹೋಗಲಾಡಿಸುವ ಔಷಧದಂತೆ,

ನಲಂ-ಉರ್ೖೆಂದ-ವೆರ್ಪ್ಪೈ = ನಮಗೆ ನೆಲೆಯಾಗಿರುವ ಔಷಧಾದ್ರಿಯನ್ನು ವಾಸಸ್ಥಾನವನ್ನಾಗಿ ಮಾಡಿಕೊಂಡಿರುವೆ, ನಣುಹು = ಸಮೀಪದಲ್ಲಿರುವ, ಗರುಡ-ನದಿ-ಕಿಳರ್ನ್ದ = ಗರುಡ ನದಿಯಿಂದ ಬರುವ, ಪುನಲ್ = ಹೊನಲನ್ನು (ದಿವ್ಯವಾದ ತೀರ್ಥವನ್ನು) ಉಹಪ್ಪಿಲ್-ವೈತ್ತನ್ನೈ = ಬಹಳ ಸಂತೋಷದಿಂದ ಒಲಿದಿರುವೆ, ಉರೈ-ಕೊಳ್-ಮಂಗೈ = ವಾಕ್ಕನ್ನೇ (ತನ್ನ) ರೂಪವಾಗಿಯುಳ್ಳ ಸರಸ್ವತೀದೇವಿಯ, ಕಣವನುಕ್ಕು = ಪ್ರಿಯನಾದ ಬ್ರಹ್ಮನಿಗೆ, ಅಕರಂ-ಮುದಲ = ಅಕಾರಾದಿಯಾದ ವೇದರಾಶಿಯನ್ನು, ಅಳಿತ್ತನ್ನೈ = ಉಪದೇಶಿಸಿ ಸಂರಕ್ಷಿಸಿದೆಯಲ್ಲವೆ, ಅಡೈಯುಂ = (ತನ್ನನ್ನು) ಆಶ್ರಯಿಸಿ, ವಿನತೈ-ಶಿರುವನ್ = ವಿನತೆಯ ತನಯನಾದ ಗರುಡನು, ಉಯ್ಯ = ಉಜ್ಜೀವಿಸಲು, ಅರುಳ್-ಕೊಡುತ್ತು = ಕೃಪೆಯಿಟ್ಟು, ಉಯರ್ತ್ತಿನ್ನೈ = (ಅವನನ್ನು) ಧ್ವಜದಲ್ಲಿರುವಂತೆ ಮಾಡಿರುವೆ, ಅನಂತನ್ = ಆದಿಶೇಷನು, ಅಡಿ-ತೊಳ = ಪಾದಗಳನ್ನು ಸೇವೆಮಾಡಲು, ಕಳಿತ್ತನ್ನೈ = (ಅದರಿಂದ) ಉಲ್ಲಾಸಗೊಂಡೆಯೈ.

ತಾತ್ಪರ್ಯ :- ಭಕ್ತರ ಸತ್ಯ ಮೂರ್ತಿಯೇ ಹಯಗ್ರೀವನೆಂಬ ಅಸುರನು ವೇದಗಳನ್ನು ಅಪಹರಿಸಿ, ಸಮುದ್ರದಲ್ಲಿ ಅವಿತುಕೊಂಡಿರಲು, ಮತ್ಸ್ಯಾವತಾರ ಮಾಡಿ, ಅವನನ್ನು ಮರ್ದಿಸಿ, ಮತ್ತೆ ಆ ವೇದಗಳನ್ನು ಬ್ರಹ್ಮನಿಗೆ ಉಪದೇಶಿಸಿ, ಕರುಣಿಸಿದೆ. ದೇವಾಸುರರು ಮಂದರ ಗಿರಿಯನ್ನು ಕಡೆಗೋಲಾಗಿ ಮಾಡಿಕೊಂಡು ಕಡಲನ್ನು ಕಡೆಯುವಾಗ ಕೂರ್ಮಾವತಾರದಿಂದ, ಆ ಪರ್ವತವು ಕೆಳಕ್ಕೆ ಬೀಳದಂತೆ ಬೆನ್ನಿನ ಮೇಲೆ ಹೊತ್ತು ಜಗತ್ತನ್ನು ಪೊರೆದಿಹೆ. ಹಿರಣ್ಯಾಕ್ಷನು ಭೂದೇವಿಯನ್ನು ಚಾಪೆಯಂತೆ ಸುತ್ತಿಕೊಂಡು ಸಮುದ್ರದಲ್ಲಿ ಅಡಗಿಕೊಳ್ಳಲು, ವರಾಹರೂಪದಿಂದ ಅವನನ್ನುಸಂಹರಿಸಿ, ಭೂಮಾತೆಯನ್ನು ಉದ್ಧರಿಸಿ ಎಂದಿನಂತೆ ವಿಸ್ತರಿಸಿರುವೆ. ಭಕ್ತಶಿರೋಮಣಿಯಾದ ಪ್ರಹ್ಲಾದನ ನುಡಿಯು ಸತ್ಯವಾದುದೆಂದು ಬೆಳಗಿ, ಅವನ ತಂದೆಯನ್ನು ಸಂಹರಿಸಲು ನರಸಿಂಹನಾಗಿ ಕಂಬದಿಂದ ಆವಿರ್ಭವಿಸಿದೆ. ಬಲಿಯು ದೇವೇಂದ್ರನ ರಾಜ್ಯವನ್ನು ಪಡೆದು, ಮಹಾಯಾಗವನ್ನು ಮಾಡಿದಾಗ ವಾಮನಮೂರ್ತಿಯಾಗಿ ಬಂದು, ಮೂರಡಿ ನೆಲವನ್ನು ಯಾಚಿಸಿ, ಕಡೆಗೆ ತ್ರಿವಿಕ್ರಮನಾಗಿ ಮೂರು ಲೋಕಗಳನ್ನು ಅಳೆದು, ಸಕಲ ಚೇತನರನ್ನೂ ಪಾವನಗೊಳಿಸಿ, ದೇವೇಂದ್ರನಿಗೆ ಮತ್ತೆ ಅವನ ಸಿರಿಯನ್ನು ಕೊಡಿಸಿದೆ. ಪರಶುರಾಮನಾಗಿ ಬಂದು ಮಹೀತಲದ ದುಷ್ಟ ಕ್ಷತ್ರಿಯರನ್ನು ಸದೆಬಡಿದೆ. ಶ್ರೀರಾಮನಾಗಿ, ನಿನ್ನನ್ನು ಆಶ್ರಯಿಸದ ದಶಮುಖ ರಾವಣನ ದಶ ಶಿರಸ್ಸುಗಳನ್ನೂ ಕಡಿದುರುಳಿಸಿದೆ. ಬಲರಾಮ ನಾಮದಿಂದವತರಿಸಿ, ಬೃಂದಾವನದಲ್ಲಿ ಗೋಪವೇಷಧಾರನಾಗಿ ಬಂದು ಉಪದ್ರವ ಗೊಳಿಸಿದ ಪ್ರಲಂಬನನ್ನು ಸಂಹರಿಸಿದೆ. ಶ್ರೀಕೃಷ್ಣನಾಗಿ ಗೋವರ್ಧನಗಿರಿಯನ್ನು ಕರದಿಂದೆತ್ತಿ ಸಕಲ ಗೋ ಗೋಪಾಲಕರನ್ನೂ ಪರಿಪಾಲಿಸಿದೆ. ಕಲ್ಕಿಯಾಗಿ ಬಿಳಿಯ ಕುದುರೆಯನ್ನೇರಿ ಬಂದು ಕಲಿಯ ಹಾವಳಿಯನ್ನು ನೀಗುವೆ. ಕ್ರೂರ ಪಾಪಗಳನ್ನು ನಿವಾರಿಸಲು

ಓಷಧಾದ್ರಿಯನ್ನು ನೆಲವೀಡಾಗಿ ಮಾಡಿಕೊಂಡಿರುವೆ. ಅದರ ಹತ್ತಿರದಲ್ಲೇ ಹರಿಯುವ ಗರುಡ ನದಿಯ ತಿಳಿನೀರನ್ನು ನೋಡಿ ಮನವೊಲಿದಿರುವೆ. ಬ್ರಹ್ಮನಿಗೆ ಅಕಾರಾದಿ ವೇದರಾಶಿಗಳನ್ನುಪದೇಶಿಸಿದೆ. ನಿನ್ನಡಿಗಳನ್ನು ಮುಡಿಯಮೇಲೆ ಪಡೆದ ಗರುಡನನ್ನು ನಿನ್ನ ಧ್ವಜದಲ್ಲಿ ಉನ್ನತನಾಗಿ ರಾರಾಜಿಸುವಂತೆ ಮಾಡಿರುವೆ. ನಿನಗೆ ಪಾದುಕೆಯಾಗಿಯೂ, ಹಾಸಿಗೆಯಾಗಿಯೂ, ನಿತ್ಯಕೈಂಕರ್ಯ ಮಾಡುವ ಆದಿಶೇಷನನ್ನು ಅನುಗ್ರಹಿಸಿರುವೆ. ಭೂಮಿಗೆ ಭಾರವಾಗಿರುವವರನ್ನು ಕೊಂದು, ಹೊರೆಯನ್ನಿಳುಹಿ, ಪೊರೆದು, ಆಕೆಯು ಸದಾ ನಮ್ರಳಾಗಿರುವಂತೆ ಮಾಡಿರುವೆ. ಹೀಗೆ ಪರಮೋಪಕಾರ ಮಾಡಿ ಹಿರಿಮೆಯನ್ನು ತೋರಿದ ನಿನ್ನನ್ನು ನಾವು ಇನ್ನೇನೆಂದು ವರ್ಣಿಸಬಲ್ಲೆವು.

(ತಿರುವಹೀಂದ್ರ ಪುರದಲ್ಲಿ ''ಬ್ರಹ್ಮತೀರ್ಥ, ಗರುಡತೀರ್ಥ, ಶೇಷತೀರ್ಥ, ಭೂಮಿತೀರ್ಥ'' ಎಂದು 4 ಪುಣ್ಯತೀರ್ಥಗಳಿವೆ. ಇವುಗಳಲ್ಲಿ ಅಭಿಷೇಕಗೊಂಡು ಸಂತೋಷಿಸಿ, ಅವನ್ನು ಕಟಾಕ್ಷಿಸಿ, ಅವುಗಳ ತೀರಪ್ರದೇಶಗಳಲ್ಲಿ ಸರ್ವದಾ ಸರ್ವಪ್ರದನಾಗಿ ಶ್ರೀ ದೇವನಾಯಕನು ವಾಸಮಾಡುತ್ತಿರುವನು. ಆ ತೀರ್ಥಾದಿದೇವತೆಗಳ ಪ್ರಾರ್ಥನೆಯಂತೆ ಆಯಾತೀರ್ಥಗಳಲ್ಲಿ ಸ್ನಾನ ಮಾಡಿದ ಭಾಗವೋತ್ತಮರಿಗೆ ಗಂಗಾ ಸ್ನಾನ ಫಲವನ್ನೂ ಕೊಟ್ಟಿರುವನು. ಆಹಾ ! ಆ ದೇವರ ಮತ್ತು ಆ ತೀರ್ಥಾಧಿ ದೇವರ ಔದಾರ್ಯವೆಂತಹದು ?)

विधृतमकरतनुविवृद्धविचलिताखिलाम्बुधे ।
मथनशिखरिविधरणाय कमठरूप मापिथ ।।
समभिपतितदनुजहृद्विदीर्य भूमि मुदधरः ।
बलवदसुरजठरदारणादुदैश्च ऋतभृते ।। १

निजपदमितनिखिललोक ! पुन रदापयश्च तान् ।
परशुमुनिपतनुरमारयोऽरिराजमण्डलम् ।।
विनुतिविमुखदशमुखास्यादशक माशु दधरिथ ।
पशुपतनयतनुधरं च समहोऽसुरं हरे ।। २

दधिथ मुदित इह गिरिं हि द्वारकापुरीति कृष्ण ! ।
सुगतिकलिततुरगवाह ! कलिमलघ्न ! निरुपम ।।
कलिजदुरितहरमहौषधादि मास्थितोऽन्वहं ।
निकटगरुडसरिदुदेतसलिलसेवनोत्सुकः ।। ३

वचनदेवतेश्वराय चाक्षराण्युपादिशः ।
प्रणतगरुड मवितु मध्यवासयो निजं ध्वजम् ।।
अहिपविहितचरणशयनसेवया हि मुमुदिषे ।
धरणिकलितफणिपुरेश ! विनतसत्य ! देवराट् ।। ४

ಮೂಲ : ಪುರಮುಯರ್ತ್ತವಶುರರ್‌ಕಳ್ಕೋರ್ ಪುರಮುರೈತ್ತಪ್ಪೊಯ್ಯಿನಾನ್,
ವರೆಎಡುತ್ತು ಮಳೈತಡುತ್ತ ಮಳೈಯೊಡೊತ್ತಮೈಯ್ಯಿನಾನ್,
ತಿರೈನಿರೈತ್ತ ಕಡಲೆರಿತ್ತ ಶಿಲೈವಳೈತ್ತಕೈಯಿನಾನ್,
ಅರುಳ್ ಕೊಡುತ್ತುವಿನ್ನೈತವಿರ್ಕ್ಕುಮಡಿಯವರ್ಕ್ಕುಮೆಯ್ಯನೇ ॥ 3

ಅರ್ಥ :- ಪುರಂ-ಉಯರ್ತ = (ತಮ್ಮ) ನಗರಗಳು ಮೇಲೆದ್ದು ಹಾರಾಡುವಂತಹ ವರಗಳನ್ನು ಪಡೆದ, ಅಶುರರ್‌ಹಳುಕ್ಕು = ಅಸುರರಿಗೆ, ಓರ್-ಪುರಂ-ಉರೈತ್ತ-ಪೊಯ್ಯಿನಾನ್ = ಒಂದು ಬಾಹ್ಯಮತವನ್ನುಪದೇಶಿಸಿ ಸುಳ್ಳಾದವನಂತಾಗಿಯೂ, ವರೈ-ಎಡುತ್ತು = (ಗೋವರ್ಧನ) ಗಿರಿಯನ್ನೆತ್ತಿ, ಮಳೈ-ತಡುತ್ತ = ಮಳೆಯನ್ನು ತಡೆದ, ಮಳೈ-ಒಡು-ಒತ್ತ-ಮೆಯ್ಯಿನಾನ್ = ನೀಲಮೇಘ ಶ್ಯಾಮಸುಂದರ ವಿಗ್ರಹನೂ, ತಿರೈ-ನಿರೈತ್ತ-ಕಡಲ್ = ಅಲೆಗಳಿಂದ ತುಂಬಿದ ಸಮುದ್ರವನ್ನು, ಎರಿತ್ತ = ಬತ್ತಿಹೋಗುವಂತೆ ಮಾಡಿದವನೂ, ಶಿಲೈ-ವಳೈತ್ತ-ಕೈಯಿನಾನ್ = ಬಿಲ್ಲನ್ನೆತ್ತಿ ಬಾಗಿಸಿದ ಕೈಗಳಿಂದಲಂಕೃತನೂ, ಅರುಳ್-ಕೊಡುತ್ತು = ದಯೆಯನ್ನು ಬೀರಿ, ವಿನ್ನೈ-ತವಿರ್ಕ್ಕಂ = ಪಾಪಗಳನ್ನು ನಿವಾರಿಸುವವನೂ ಆದ ಆ ಪರಮಾತ್ಮನು, ಅಡಿಯವರ್ಕ್ಕು-ಮೆಯ್ಯನೇ = ಭಕ್ತರಿಗೆ ಸತ್ಯನೆಂದು ಖ್ಯಾತಿಪಡೆದ ಈ ದೇವನಾಯಕನೇ ಅಲ್ಲದೆ, ಬೇರಾರು ?

ತಾತ್ಪರ್ಯ :- "ಮೂರು ಜನ ಅಸುರರು ರುದ್ರನನ್ನು ಕುರಿತು ತಪಸ್ಸುಮಾಡಿ, ಅದರ ಫಲವಾಗಿ ಆಕಾಶದಲ್ಲಿ ಸಂಚರಿಸುವಂತಹ ಮೂರು ಮಹಾನಗರಗಳನ್ನು ಪಡೆದು, ಕಂಡ ಕಂಡ ಕಡೆ ತಿರುಗುತ್ತಾ, ವಿಪರೀತ ಹಾವಳಿ ಮಾಡುತ್ತಿದ್ದರು. ಇವರ ಕಾಟವನ್ನು ಸಹಿಸಲಾರದೆ ದೇವತೆಗಳು ಭಗವಂತನನ್ನು ಶರಣುಹೊಂದಿ ಮೊರೆಯಿಟ್ಟರು. ಪರಮಾತ್ಮನು ಆಗ ಅವರಿಗೆ ಅಭಯವನ್ನಿತ್ತು, ತಾನೊಬ್ಬ ಬೌದ್ಧನ ವೇಷವನ್ನು ತಾಳಿ, ಆ ಅಸುರರಿರುವ ಸ್ಥಳಕ್ಕೆ ಹೋಗಿ ತನ್ನನ್ನು ಎಲ್ಲರೂ ಪರಮಧಾರ್ಮಿಕನೆಂದು ಹೇಳುವಂತೆ ಅವರಿಗೆ ಉಪದೇಶಿಸಿ, ಅವರೂ ಅದು ನಿಜವೆಂದು, ನಿಜವಾದ ಧರ್ಮದಲ್ಲಿದ್ದ ಅಲ್ಪಸ್ವಲ್ಪ ಆಸಕ್ತಿಯನ್ನೂ ಕಳೆದುಕೊಂಡು, ಅಧರ್ಮವನ್ನೇ ಮಾಡುತ್ತ, ಕಡೆಗೆ ನರಕಗಾಮಿಗಳಾಗುವಂತೆ ಮಾಡಿ, ಲೋಕೋಪಕಾರಮಾಡಿದನು (ಇದು ಮೊದಲನೆಯ ಪಾದದಪೂರ್ವಕಥೆ ಸಹಿತ ತಾತ್ಪರ್ಯ) ಗೋಕುಲದಲ್ಲಿ ಗೋವರ್ಧನ ಪರ್ವತವನ್ನೆತ್ತಿ, ಮಳೆಯಿಂದ ರಕ್ಷಿಸಿ ಗೋವುಗಳನ್ನೂ, ಗೋಪರನ್ನೂ, ಲೋಕವನ್ನೂ ಕಾಪಾಡಿದನು. ಸೀತೆಯನ್ನು ಕರೆತರಲು

ಮತ್ತು ರಾವಣನನ್ನು ಸಂಹರಿಸಲು, ಕಡಲ ದಡದಲ್ಲಿ ಬೀಡುಗೈದು, ಅಡ್ಡಲಾಗಿದ್ದ ಸಮುದ್ರವನ್ನು ಶೋಷಿಸುವಂತೆ ಕೋಪಗೊಳ್ಳಲು ಸಮುದ್ರರಾಜನು ಮರೆಹೊಕ್ಕು, ಪರಮ ಭಕ್ತನಾದನು. ಹೀಗೆ ಶರಣಾಗತರನ್ನು ಕೈಬಿಡದೆ ಪೊರೆದನು. ಮೇಲೆ ಹೇಳಿದ ಅಸಾಧಾರಣ ರೂಪಿಯಾಗಿ ದೇವನಾಯಕ ನಾಮಧೇಯದಿಂದ ಸಕಲರ ನಯನ ವಿಷಯನಾಗಿ, ಸಮಸ್ತ ಪಾಪಗಳನ್ನು ನಿವಾರಿಸುತ್ತಿರುವನು.

**समुत्पतत्पुरासुरेभ्य आह योऽनृतं मतं ।**
**समुद्धरन् गिरिं निवार्य वृष्टि मभ्रविग्रहः ।।**
**तरङ्गपूर्णसिन्धुशोषणात्तधन्वहस्त ! भोः !**
**दयां प्रबाय पापनाशकोऽसि सत्य ! सेविनाम् ।।** ३

**ಮೂಲ : ತೇಶೊತ್ತಾರಿಲ್ಲ್ಯೆನುಂ ದೆಯ್ವನಾಯಕರ್,**
**ವಾಶಕ್ಕುಳಲ್ ಮಾಮಲರಾಳ್ ಮಣವಾಳರ್,**
**ವಾಶಿತ್ತೆಳುಂ ಮನ್ಮದನಾರ್ ಮಣತ್ತೋಪ್ಪಿಲ್,**
**ಮಾಶಿಕ್ಕಡಲಾಡಿ ಮಗಿಳ್‌ನ್ದುವರುವಾರೇ ॥** 4

ಅರ್ಥ :- ವಾಶ-ಕುಳಿಲ್ = ಘಮಘಮಿಸುವ ಕೇಶವುಳ್ಳ, ಮಾ-ಮಲರ್-ಆಳ್ = ಮಹಾಲಿಕ್ಷ್ಮಿಯು, ಮಣವಾಳರ್ = ಪ್ರಿಯನಾದ (ಮತ್ತು), ತೇಶು-ಒತ್ತಾರ್-ಇಲ್ಲೈ-ಎನುಂ = ತೇಜಸ್ಸುಳ್ಳವರಲ್ಲಿ ತನ್ನಂತೆ ಮತ್ತಾರೂ ಇಲ್ಲವೆನ್ನುವಂತಹ, ದೈವನಾಯಕರ್ = ದೇವನಾಯಕನು, ಮಾಶಿ-ಕಡಲ್-ಅಡಿ = ಮಾಘಮಾಸದ ಮಖಾನಕ್ಷತ್ರದಲ್ಲಿ ಕಡಲಿನಲ್ಲಿ ಅಭಿಷೇಕಗೊಂಡು, ವಾಶಿತ್ತು-ಎಳುಂ = ಹೆಚ್ಚು ಸುಗಂಧವುಳ್ಳ, ಮನ್ಮತನ್-ಆರ್ = ಅತಿಸೌಂದರ್ಯಪೂರ್ಣವಾದ, ಮಣಲ್-ತೊಪ್ಪಿಲ್ = ಆನಂದದಾಯಕವಾದ ಸಮುದ್ರ ತೀರಪ್ರದೇಶದಲ್ಲಿ, ಮಹಿಳ್‌ನ್ದು-ವರುವಾರ್ = ಸಂತೋಷವಾಗಿ ಬರುವವರು, (ಮನ್ಮತನಾರ್-ವಾಶಿ-ತೊಳುಂ = ಎಂದೂ ಅನ್ವಯಮಾಡಬಹುದು. ಆಗ ಮನ್ಮಥನು ರೂಪದಲ್ಲಿ ಭಗವಂತನಿಗೆ ಸೋತು ಸೇವೆ ಮಾಡಲು ಬಂದವನಂತೆ ಎಂದರ್ಥ).

ತಾತ್ಪರ್ಯ :- ದಿವ್ಯಮಂಗಳ ವಿಗ್ರಹದ ದಿವ್ಯಗಂಧಕ್ಕೆ ಸರಿಸಾಟಿಯಿಲ್ಲದವನಾಗಿಯೂ, ತುಂಬ ಪರಿಮಳವನ್ನು ಬೀರುವ ಮತ್ತು ಅಂದವಾದ ಕೂದಲುಳ್ಳ ಮಹಾಲಕ್ಷ್ಮಿಯವಲ್ಲಭನಾದ ದೇವನಾಯಕನು ಮಾಘಮಾಸದ ಮಖಾನಕ್ಷತ್ರದಲ್ಲಿ ಸಮುದ್ರ ತೀರಕ್ಕೆ ಬಿಜಯಮಾಡಿ, ತೀರ್ಥಾಭಿಷೇಕಗೊಂಡು ತೀರ್ಥಪ್ರಸಾದಾದಿಗಳನ್ನಿತ್ತು ಸುಗಂಧಿತವಾದ ಆ ಕಡಲಿನ ತೀರದ ಮರಳಿನಲ್ಲಿ ವಿಜಯಯಾತ್ರೆಯಾಗಿ ದಯ

ಮಾಡುವನು. ಆ ಸುಂದರ ದೃಶ್ಯವನ್ನು ನಮ್ಮ ದೇಶಿಕವರ್ಯರು "ರೂಪದಲ್ಲಿ ತಾನೇ ಸುಂದರತಮನೆಂದು ತಿಳಿದಿದ್ದ ಮನ್ಮಥನೂ ಈ ದರ್ಶನದಿಂದ ನಿಗರ್ವಿಯಾಗಿ ತನ್ನ ಸೋಲನ್ನೊಪ್ಪಿ, ದೇವನಾಯಕನನ್ನುಸೇವೆ ಮಾಡಲು ಬಂದಿಹನೋ ಎಂಬಂತಿದೆ" ಎಂದು ವರ್ಣಿಸಿರುವರು. (ಇಂದಿಗೂ ಈ ಉತ್ಸವವು ಅತಿ ವಿಜೃಂಭಣೆಯಿಂದ ನಡೆಯುತ್ತಿದೆ.)

**तेजस्विष्वधिको नचान्य इति यो बाभाति देवाधिराट् ।**
**तस्मिन् याति सुगन्धिकुन्तलमहापद्मासिनीवल्लभे ।।**
**माघे मासि मखे महोदधिमहातीरेऽभिषेकोत्सवे ।**
**लोकानन्दनसैकते स मदनः प्रैतीव तं प्रार्चितुम् ।।** ४

**ಮೂಲ : ಉರುಳುಂಶಕಡಮೊನ್ರುದೈತ್ತಾಯ್ ಉಲಹಮೇಳುಣ್ಡುಮಿಳ್
ನ್ದಳನ್ದಾಯ್, ಪೊರುಳು ಮಳಲು ಮಿರೈಯಾಗಪ್ಪೂಣ್ಡೇನಡಿಮೈ
ಯಿನಿನ್ ಮೀಣ್ಡೇನ್. ಇರುಳುಂ ಮರುಳುಂ ತರುಮನ್ನಾಳ್ ಎಳಿ
ಲಾರಾಳಿಶಙ್ಗೇನ್ದಿ, ಅರುಳುಂತೆರುಳುಂತರವೆನ್ ಪಾಲ್ ಅಡಿ
ಯೋರ್ ಮೆಯ್ಯವನ್ದರುಳೇ ॥** 5

ಅರ್ಥ :- ಉರುಳುಂ = (ತನ್ನನ್ನು ಕೊಲ್ಲಲು) ಉರುಳಿಕೊಂಡು ಬಂದ, ಒನ್ರು-ಶಕಟಂ = (ಅಸುರಾವಿಷ್ಟವಾದ) ಒಂದು ಗಾಡಿಯನ್ನು, ಉದೈತ್ತಾಯ್ = ಒದ್ದು ನುಚ್ಚುನೂರಾಗಿಸಿದವನೇ ! ಏಳು-ಉಲಹಂ = ಏಳು ಲೋಕಗಳನ್ನೂ, ಉಂಡು = ಉದರದಲ್ಲಿರಿಸಿಕೊಂಡು, ಉಮಿಳ್‌ನ್ದು = ಹೊರಪಡಿಸಿ (ಪಡೆದು) ಅಳಂದಾಯ್ = ಅಳೆದವನೇ ! ಅಡಿಯೋರ್-ಮೆಯ್ಯ = ಆಶ್ರಿತರ ಸತ್ಯಮೂರ್ತಿಯೇ ! ಪೊರುಳುಂ = ಐಶ್ವರ್ಯವನ್ನೂ, ಅಳಲುಂ = (ಅಗ್ನಿಯಂತೆದಹಿಸಬಲ್ಲ) ಕಾಮವನ್ನೂ, ಮಿರೈಯಾಹ-ಪೂಂಡೇನ್ = ದೋಷವುಳ್ಳವುಗಳೆಂದು ಪಡೆದೆನು. ಅಡಿಮೈಯಿನಿಲ್ = (ನಿನ್ನ) ಸೇವೆಯಲ್ಲಿ, ಮೀಂಡೇನ್ = ಮತ್ತೆ ಹಿಂತಿರುಗಿ ಬಂದೆನು. ಇರುಳುಂ = (ಅಜ್ಞಾನವೆಂಬ) ಕಗ್ಗತ್ತಲನ್ನೂ, ಮರುಳುಂ = ವಿಪರೀತ ಜ್ಞಾನವನ್ನೂ, ತರುಂ = ಕೊಡುವ, ಅನ್ನಾಳ್ = ಆ (ಮರಣ) ಸಮಯದಲ್ಲಿ, ಎಳಿಲ್-ಆರ್ = ಸೌಂದರ್ಯ ಪೂರ್ಣವಾದ, ಆಳಿ-ಶಂಗಂ = ಚಕ್ರವನ್ನೂ, ಶಂಖವನ್ನೂ, ಏನ್ದಿ = ಧರಿಸಿ, ಅರುಳುಂ = ಕೃಪೆಯನ್ನೂ, ತೆರುಳುಂ = ಜ್ಞಾನವನ್ನೂ, ತರ = (ನನಗೆ) ಕೊಡುವುದಕ್ಕಾಗಿ, ಎನ್-ಪಾಲ್-ವಂದು-ಅರುಳ್ = ನನ್ನ ಹತ್ತಿರ ಬಂದು ಕರುಣಿಸು.

ತಾತ್ಪರ್ಯ :- ಶಿಶುತನದಲ್ಲಿಯೇ ತೊಟ್ಟಿಲಲ್ಲಿ ಮಲಗಿರುವಾಗ ನಿನ್ನನ್ನು ಕೊಲ್ಲಲು ಬಂದ ಶಕಟಾಸುರನನ್ನು ಒದ್ದು ಕೊಂದವನೇ ! ಏಳು ಲೋಕಗಳನ್ನೂ, ಪ್ರಳಯಕಾಲದಲ್ಲಿ

ತನ್ನುದರಲ್ಲಿರಿಸಿಕೊಂಡು, ಮತ್ತೆ ಸೃಷ್ಟಿಕಾಲದಲ್ಲಿ ಹೊರಪಡಿಸಿ, ತ್ರಿವಿಕ್ರಮಾವತಾರದಲ್ಲಿ ಅದನ್ನು ಅಳೆದವನೇ ! ನಿನ್ನಡಿಯ ಸೇವಕರ ಸತ್ಯಮೂರ್ತಿಯಾಗಿ, ತಿರುವಹೀಂದ್ರಪುರದಲ್ಲಿ ವಿರಾಜಿಸುವ ದೇವನಾಯಕನೇ ! ಅರ್ಥಗಳಿಂದಲೂ, ಕಾಮಗಳಿಂದಲೂ ಬರುವ ಕೇಡುಗಳನ್ನು ನೆನೆದು, ಅವು ನನಗೆ ಸರಿಯಲ್ಲವೆಂದು ಅವನ್ನು ಪರಿತ್ಯಜಿಸಿದೆನು. ಈಗ ನಿನ್ನ ಸೇವೆಯೊಂದೇ-ಉತ್ತಮ ಫಲದಾಯಕವೆಂದು ಚೆನ್ನಾಗಿ ಅರಿತುಮಾಡುತ್ತಿರುವೆನು. ಅಜ್ಞಾನವೂ ವಿಪರೀತಜ್ಞಾನವೂ ತುಂಬಿರುವಂತಹ ಅಂತ್ಯಕಾಲದಲ್ಲಿ ನಿನ್ನನ್ನು ನಾನು ನೆನೆಯದಿದ್ದರೂ ಈಗ ಪ್ರಾರ್ಥಿಸುತ್ತಿರುವುದನ್ನೇ ಕೊಂಡು, ಅಜ್ಞಾನವೆಂಬ ಶತ್ರುವನ್ನು ಅಳಿಸಬಲ್ಲ ಚಕ್ರದೇವನನ್ನೂ, ಒಳ್ಳೆಯ ಜ್ಞಾನವನ್ನು ಕೊಡಬಲ್ಲ ಶಂಖವನ್ನೂ ಧರಿಸಿ ಬಂದು, ನಿನ್ನಡಿಯ ಅಡಿಗನಾದ ನನ್ನ ಮೇಲೆ ದಯೆಯನ್ನು ಬೀರಬೇಕು.

चलितशकटमर्दिन् ! सप्तलोकीं ग्रसित्वा ।
पुनरपि मितवन् ! तामुद्वमन् दाससत्य ! ।।
अनलसदृशकामं वित्त मप्यत्यजं तत् ।
पुनरपि वरिवस्या मेव ते प्राप्नवं च ।। १

अज्ञानेनान्यथाज्ञाने काले त्वं चक्रशङ्खधृत् ।
कारुण्यज्ञानदानाय तनुष्वानुग्रहं मयि ।। २

ಮೂಲ : ವಂಚನೈಶೆಯ್‌ಪೂತನಿಯೈಮಲಿಯುಂ ಶಾಟ್ಟೈ,
ಮಲ್ಲರೈಯೋರ್ ಮದಕಳಿತ್ತೈವಾನೋರಂಜುಂ,
ಕಂಜನೈಮುನ್‌ಕಡಿನ್ದವನಿಬಾರಂ ತೀರ್ತ್ತ,
ಕಾವಲನೇ ! ಕೋವಲನಾಯ್ ನಿನ್ರಕೋವೇ,
ಅಂಜನಮುಂ ಕಾಯಾವುಮನ್ನೈಯಮೇನಿ,
ಅಡಿಯವರ್ಕ್ಕು ಮೆಯ್ಯನೇ ! ಅಯಿನ್ದೈವಾಳುಂ,
ಮಂಜೆನವೇಯರುಳ್ ಪೊಳಿಯುಂವಳ್ಳಲೇನಿನ್,
ವಡಿವಳಹುಮರವಾದಾರ್ ಪಿರವಾದಾರೇ ॥ 6

ಅರ್ಥ :- ವಂಚನೈ-ಶೆಯ್-ಪೂತನಿಯೈ = ವಂಚಿಸಕೊಲ್ಲಲು ಬಂದ ಪೂತನಿಯನ್ನೂ, ಮಲಿಯುಂ-ಶಾಟ್ಟೈ = ಹಿಂಸಿಸಿ ಪ್ರಾಣಕಳೆಯಲು ಬಂದ ಶಕಟಾಸುರನನ್ನೂ, ಮಲ್ಲರೈ = ಜಟ್ಟಿಗಳನ್ನೂ, ಓರ್-ಮದ-ಕಳಿತ್ತೈ = ಅಪ್ರತಿಮವಾದ ಮತ್ತು

ಮದಿಸಿದ ಆನೆಯಾದ ಕುವಲಯಾ ಪೀಡವನ್ನೂ, ವಾನೋರ್-ಅಂಜುಂ-ಕಂಜನ್ನೈ = ದೇವಾಧಿದೇವತೆಗಳೂ ಹೆದರುವಂತಹ ವೀರ್ಯವುಳ್ಳ ಕಂಸನನ್ನೂ, ಮುನ್-ಕಡಿನ್ದು = ಹಿಂದೆಯೇ ಕೊಂದು, ಅವನಿ-ಬಾರಂ-ತೀರ್ತ = ಭೂದೇವಿಯ ಭಾರವನ್ನು ಕಡಿಮೆಮಾಡಿದ, ಕಾವಲನೇ = ಸಜ್ಜನಪರಿಪಾಲಕನೇ ! ಕೋವಲನಾಯ್-ನಿನ್ರ-ಕೋವೇ = ಗೋಪಕುಮಾರನಾಗಿ ಸಂರಕ್ಷಿಸುವ ಗೋಪಾಲನೇ ! ಅಂಜನ ಮುಂಕಾಯಾವುಂ-ಅನ್ನೈಯ-ಮೇನಿ = ಕಣ್ಣಿಗೆ ಹಚ್ಚುವ ಕಪ್ಪಿನ ಮತ್ತು ಅಗಸೆಯ ಬಣ್ಣವನ್ನು ಹೋಲುವ ದಿವ್ಯಮಂಗಳ ವಿಗ್ರಹನಾದ, ಅಡಿಯವರ್ಕ್ಕ-ಮೆಯ್ಯನೇ = ಭಕ್ತರಸತ್ಯನೇ ! ಅಯಿಂದ್ಯೆ-ವಾಳುಂ-ಮಂಶು-ಎನವೇ = ತಿರುವಹೀಂದ್ರಪುರದಲ್ಲಿ ನಿತ್ಯವಾಸಮಾಡುವ ಮೇಘವೋ ಎಂಬಂತೆ, ಅರುಳ್-ಪೊಳಿಯುಂ-ವಳ್ಳಲೇ= ದಯೆಯೆಂಬ ನೀರನ್ನು ಸುರಿಸುವ ಉದಾರನೇ ! ನಿನ್-ವಡಿವು-ಅಳಹು = ನಿನ್ನ ದಿವ್ಯರೂಪದ ಸೌಂದರ್ಯವನ್ನೂ, ಮರವಾದಾರ್ = ಮರೆಯದ ಮಹಾನುಭಾವರು, ಪಿರವಾದಾರೇ = ಮತ್ತೆ ಜನ್ಮತಾಳರು, ನಿತ್ಯಾನಂದವನ್ನನುಭವಿಸುವರು.

ತಾತ್ಪರ್ಯ :- ಭಕ್ತಶಿರೋಮಣಿಗಳ ಸತ್ಯನೇ ! ಹಿಂದೆ ಪೂತನಿ-ಶಕಟಾಸುರ-ಮುಷ್ಟಿಕಾಸುರ-ಚಾಣೂರಾದಿ ಮಲ್ಲರು-ಕುವಲಯಾಪೀಡವೆಂಬ ಮದ್ದಾನೆ-ವೀರಾಗ್ರಣಿಯಾದ ಕಂಸ ಮೊದಲಾದವರನ್ನು ಧ್ವಂಸಮಾಡಿ, ಭೂದೇವಿಯ ಹೊರೆಯನ್ನು ಇಳಿಸಿ, ಸಾಧುಸಂತರನ್ನು ಸಂರಕ್ಷಿಸಿದೆ, ಇಷ್ಟೊಂದು ಹಿರಿಮೆ ಮಹಿಮೆಗಳಿಂದ ಕೂಡಿದವನಾಗಿದ್ದರೂ ಗೊಲ್ಲಕೇರಿಯಲ್ಲಿ ಗೋಪಾಲಕನಾಗಿರುತ್ತಾ, ನಿನ್ನ ಸೌಲಭ್ಯ ಸೌಶೀಲ್ಯಾದಿ ದಿವ್ಯಗುಣಗಳನ್ನು ಜಗತ್ತಿಗೇ ತೋರಿಸಿದೆ. ತಿರುವಹೀಂದ್ರಪುರದಲ್ಲಿ ನಿತ್ಯ ವಾಸಮಾಡುವ ನೀಲಮೇಘವೊಂದು ಭಕ್ತರೊಡನೆ ಮಾತಾಡುವಂತೆ ಕರುಣೆಯೆಂಬ ನೀರನ್ನು ಸುರಿಸುತ್ತಿರುವ ನಿನ್ನ ಔದಾರ್ಯಗುಣವನ್ನು ಏನೆಂದು ಬಣ್ಣಿಪೆನು. ಅಂಜನವರ್ಣನೂ ಅತಸಿಯವರ್ಣದ ವಿಗ್ರಹನೂ ಆದ ನಿನ್ನ ದಿವ್ಯಕಾಂತಿಯನ್ನು ಮರೆಯದೆ ಅನುಭವಿಸುವವರು ಕರ್ಮಬಂಧವನ್ನು ಬಿಡಿಸಿಕೊಂಡು, ನಿತ್ಯಾನಂದ ಸುಖವನ್ನು ಪಡೆಯುವರು.

वञ्चनाकृतिं च नूतनां नृशंसशाकटं
मल्लमत्तवारणांश्च भीकरं दिवौकसाम् ।
कंस मादितः प्रमर्द्य भूमिधूर्निवारण !
विश्वपाल ! गोकुलेश ! गोपबाल ! गोपते ।। १

अञ्जनातसीसवर्णवर्णनीयविग्रह !
भोगिपूरधिष्ठवारिमुक्दयैकवार्षुक ! ।

भो वदान्य ! भक्तसत्य! दिव्यमङ्गलाकृते:
ये हि तेऽतिचारुतां न विस्मरन्ति तेऽमराः ।। २

ಮೂಲ : ಮೈಯುಮಾಕಡಲುಂ ಮಯಿಲುಮಾಮಳೈಯುಂ
ಮಣಿಹಳುಂಕುವಳೈಯುಂಕೊಂಡ,
ಮೆಯ್ಯನೇ ! ಯಡಿಯೋರ್‌ಮೆಯ್ಯನೇ ! ವಿಣ್ಣೋ
ರೀಶನೇ! ನೀಶನೇನಡೈನ್ದೇನ್,
ಕೈಯುಮಾಳಿಯುಮಾಯ್‌ಕ್ಕಳಿರುಕಾತ್ತವನೇ !
ಕಾಲನಾರ್ ತಮರೆನ್ನೈಕ್ಕವರಾದು,
ಐಯನೇ ! ವನ್ದನ್ರಿಞ್ಜಲೆನ್ರರುಳ್‌ತೆನ್
ಅಯಿನ್ದೈಮಾನಗರಮರ್‌ನ್ದಾನೇ ॥ 7

ಅರ್ಥ :– ಮೈಯುಂ = (ಕಣ್ಣಿಗಿಡುವ) ಕಪ್ಪೂ, ಮಾ-ಕಡಲುಂ = ಮಹಾಸಾಗರವೂ, ಮಯಿಲುಂ = ನವಿಲೂ, ಮಾ-ಮಳೈಯುಂ = ಹಿರಿಮೆಯುಳ್ಳ ಮೇಘವೂ, ಮಣಿಹಳುಂ = ಇಂದ್ರನೀಲಮಣಿಗಳೂ, ಕುವಳೈಯುಂ = ಕನ್ನೈದಿಲೆಹೂವು, (ಅಂದರೆ ಇವುಗಳ ಸ್ವಭಾವವನ್ನೂ) ಕೊಂಡ = ಹೊಂದಿರುವ, ಮೆಯ್ಯನೇ ! ಶರೀವುಳ್ಳವನೇ ! ಅಡಿಯೋರ್-ಮೆಯ್ಯನೇ = ದಾಸರ ಸತ್ಯನೇ ! ವಿಣ್ಣೋರ್-ಈಶನೇ = ನಿತ್ಯಸೂರಿಗಳಧಿಪತಿಯೇ!, ನೀಶನೇನ್ = ನೀಚನಾದ ನಾನು, ಅಡೈಂದೇನ್ = (ನಿನ್ನನ್ನು ಶರಣು) ಹೊಂದಿದೆನು. ಕೈಯ್ಯುಂ- ಆಳಿಯುಂ-ಆಯ್ = ಕೈಯಲ್ಲಿ ಚಕ್ರವನ್ನು ಧರಿಸಿದವನಾಗಿ, ಕಳಿರು-ಕಾತ್ತವನೇ = ಗಜೇಂದ್ರನನ್ನು ಸಂರಕ್ಷಿಸಿದವನೇ ! ತೆನ್-ಅಯಿಂದೈ-ಮಾ-ನಗರ್-ಅಮರ್‌ನ್ದಾನೇ = ರಮ್ಯವಾದ ತಿರುವಹೀಂದ್ರಪುರದಲ್ಲಿನಿತ್ಯವಾಸಮಾಡುವವನೇ ! ಐಯನೇ = ಸ್ವಾಮಿಯೇ! ಕಾಲನಾರ್-ತಮರ್ = ಯಮಭಟರು, ಎನ್ನೈ-ಕವರಾದು = ನನ್ನನ್ನು ಕರೆದುಕೊಂಡು ಹೋಗದಂತೆ, ಅನ್ರು-ವಂದು = ಅಂದು ಬಂದು, ಅಂಜಲ್-ಎನ್ರು-ಅರುಳ್ = ಅಂಜದಿರು ಎಂದು ಹೇಳಿ ಕರುಣಿಸು.

ತಾತ್ಪರ್ಯ :– ಕಣ್ಣಿಗಿಡುವ ಕಾಡಿಗೆಯೂ ಗಂಭೀರವಾದ ಮಹಾಸಾಗರವೂ ಬಣ್ಣಬಣ್ಣಗೊಂಡ ನವಿಲೂ, ನೀರು ಸುರಿಸುವ ಮೇಘವೂ, ನೀಲಮಣಿಯೂ ಮತ್ತು ಕನ್ನೈದಿಲೆ ಹೂವು ಇವೆಲ್ಲವನ್ನೂ ಹೋಲುವ ದಿವ್ಯ ದೇಹಕಾಂತಿಯುಳ್ಳ ದೇವನಾಯಕನೇ ! ನಿನ್ನನ್ನು ಶರಣುಹೋಗಿರುವೆನು. ಕೈಯಲ್ಲಿರುವ ಚಕ್ರದಿಂದ ಮೊಸಳೆಯ ಬಾಯಿಗೆ ಸಿಕ್ಕಿದ್ದ ಗಜೇಂದ್ರನನ್ನು ಸಂರಕ್ಷಿಸಿದಂತೆ, ನನ್ನ ಅಂತ್ಯಕಾಲದಲ್ಲಿ ಯಮದೂತರು ಬಂದು, ಸೆಳೆದುಕೊಂಡು ಹೋಗಿ ನೋಯಿಸದಹಾಗೆ ನೀನು ನನಗೆ ಅಭಯವನ್ನಿತ್ತು ಕಾಪಾಡಿ, ಕರುಣಿಸಬೇಕು.

सावर्ण्यस्याञ्जनाम्भोनिधिमुदिरमयूरेन्द्रनीलोत्पलैश्च ।
प्राप्तः ! नित्यप्रभो !ऽहं त्वधम इव विभोः ! त्वां श्रितो भक्तसत्य !
सन्त्रातः ! चक्रपाणे ! करिण उपवसन् ! पत्तनं चार्वहेस्तत् ।
मा भी रित्येव चोक्त्वा नहि यमभटसात् स्यां तथा पाहि काले ॥ ७

ಮೂಲ : ಮಂಜುಲಾವು ಶೋಲೈಶೂಳಯಿನ್ದೈಮನ್ನುಮನ್ನುಶೀರ್,
ವರೈಯೆಡುತ್ತುನಿರೈಯಳಿತ್ತುಮಾಶಿಲ್ ವಾಶುದೇವನೇ,
ಶೆಂಜೊಲನ್ಬರ್‌ಶಿನ್ದೈಕೊಂಡು ತೀದಿಲಾದತೂದನಾಯ್,
ತೇರುಮೂರ್‌ನ್ದು ತೇಶುಯರ್‌ನ್ದ ಶೆಲ್ವದೆಯ್ವನಾಯಕಾ,
ವೆಂಜೊಲಾಳರ್‌ಕಾಲದೂತರ್‌ವೀಶುಪಾಶಂವನ್ದೆನ್‌ಮೇಲ್,
ವಿಳುನ್ದಳುನ್ದಿಯಾನಯರ್‌ನ್ದು ವೀಳ್‌ವದರ್ಕುಮುನ್ನನೀ
ಅಂಜಲಂಜಲಂಜಲೆನ್ರಳಿಕ್ಕ ವೇಂಡುಮಚ್ಯುತಾ
ಅಡಿಯವರ್ಕ್ಕುಮರುಳಿಯಕ್ಕುಮಡಿಯವರ್ಕುಮೆಯ್ಯನೇ ॥ 8

ಅರ್ಥ :- ಮಂಜು-ಉಲಾವು = ಮೇಘಗಳು ಸಂಚರಿಸುವ, ಶೋಲೈ-ಶೂಳ = ವನಗಳಿಂದ ಸುತ್ತಗಟ್ಟಲ್ಪಟ್ಟ, ಅಯಿಂದೈ-ಮನ್ನುಂ = ತಿರುವಹೀಂದ್ರಪುರದಲ್ಲಿ ನಿತ್ಯ ವಾಸಮಾಡುವ, ಶೀರ್ = ಕಲ್ಯಾಣಗುಣಗಳುಳ್ಳವನೂ, ವರೈ-ಎಡುತ್ತು = ಗೋವರ್ಧನಗಿರಿಯನ್ನು ಎತ್ತಿ, ನಿರೈ-ಅಳಿತ್ತ = ಹಸುಗಳ ಮಂದೆಯನ್ನು ಕಾಯ್ದು ಮಾಶು-ಇಲ್ = ನಿರ್ದೋಷಿಯಾದ, ವಾಸುದೇವನೇ = ವಸುದೇವ ಕುಮಾರನೇ ! ಶೆಂಜೊಲ್-ಅನ್ಬರ್ = ಕ್ಷೇಮವಾಗುವ ಮಾತುಗಳನ್ನಾಡಿ, ಪ್ರಿಯರಾದ ಪಾಂಡವರ, ಶಿಂದೈ-ಕೊಂಡು = ಚಿಂತೆಯನ್ನೇ ಮಾಡುತ್ತಾ, ತೀದು-ಇಲಾದ-ದೂತನಾಯ್ = ಯಾವ ದೋಷವೂ ಇಲ್ಲದ ದೂತನಾಗಿ, ತೇರುಂ-ಊರ್‌ನ್ದು = ರಥವನ್ನೂ ನಡೆಸಿ, ದೆಯ್ವನಾಯಕಾ = ದೇವನಾಯಕನೇ ! ಅಚ್ಚುತಾ = (ಆಶ್ರಿತರನ್ನು) ಕೈಬಿಡದವನೇ ! ಅಡಿಯವರ್ಕು = ಭಕ್ತರಿಗೆ, ಮರುಳ್-ಇಯಕ್ಕುಂ = ಅಜ್ಞಾನವನ್ನು ಹೋಗಲಾಡಿಸುವ, ಅಡಿಯವರ್ಕು-ಮೆಯ್ಯನೇ = ಭಕ್ತರ ಸತ್ಯನೇ ! ವೆಂ-ಶೊಲ್-ಆಳರ್ = ಕಟೂಕ್ತಿಗಳನ್ನು ಹೇಳುವ, ಕಾಲದೂತರ್ = ಯಮದೂತರಿಂದ, ಪೀಶು-ಪಾಶಂ = ಬೀಸಲ್ಪಡುವ ಬಲೆಯು, ಎನ್-ಮೇಲ್ = ನನ್ನಮೇಲೆ, ವಂದು ವಿಳುನ್ದು = ಬಂದು ಬಿದ್ದು (ಅದಕ್ಕೆ) ಸಿಕ್ಕಿಕೊಳ್ಳುವಾಗ, ಯಾನ್-ಅಯರ್‌ನ್ದು = ನಾನು ಹೆದರಿ ಬೆಪ್ಪಾಗಿ, ವೀಳ್‌ವದರ್ಕು-ಮುನ್ನಂ = ಬೀಳುವುದಕ್ಕೆ ಮೊದಲೇ, ನೀ = ನೀನು, ಅಂಜಲ್-ಅಂಜಲ್-ಅಂಜಲ್-ಎನ್ರು = ಹೆದರಬೇಡ, ಹೆದರಬೇಡ, ಹೆದರಬೇಡ ಎಂದು. ಅಳಿಕ್ಕವೇಂಡುಂ = ಕಾಪಾಡಬೇಕು.

ತಾತ್ಪರ್ಯ :- ಮೋಡಗಳು ಬಂದು ತಂಗಿ ಅಲ್ಲಲ್ಲೇ ಓಡಾಡುವಂತೆ ಬಹಳ ಉನ್ನತವಾದ, ತೋಟಗಳಿಂದ ಕಂಗೊಳಿಸುವ ತಿರುವಹೀಂದ್ರಪುರದಲ್ಲಿ ನಿತ್ಯವಾಸಮಾಡಿ, ಭಕ್ತರಿಗೆ ಅಜ್ಞಾನವನ್ನು ನೀಗಿ, ಅನುಗ್ರಹಿಸುವ ಭಕ್ತರ ಸತ್ಯನೇ ! ಗೋವರ್ಧನ ಗಿರಿಯನ್ನೆತ್ತಿ ಗೋ ಗೋಪರೆಲ್ಲರನ್ನೂ ಕಾಪಾಡಿದೆ, ಸತ್ಯವನ್ನೇ ನುಡಿಯುವ ಪಾಂಡವರ ಪ್ರಾರ್ಥನೆಯನ್ನು ಅಂಗೀಕರಿಸಿ, ಅವರಿಗಾಗಿ ದೂತತನವನ್ನು ಆಶ್ರಯಿಸಿ, ಕೃಪೆ ಮಾಡಿದೆ, ಅರ್ಜುನನಿಗೆ ಸಾರಥಿಯಾಗಿದ್ದು, ತತ್ವೋಪದೇಶಮಾಡಿದ್ದರಿಂದ ನಿನ್ನ ಹಿರಿಮೆಯನ್ನು ಹೆಚ್ಚಾಗಿ ತೋರಿಸಿಕೊಂಡೆ. ಹೀಗೆ ಹಲವಾರು ಮಂದಿ ನಿನ್ನ ಭಕ್ತರಿಗೆ ಆಪತ್ಕಾಲದಲ್ಲಿ ರಕ್ಷಣೆಯನ್ನಿತ್ತೆ. ಇವನ್ನೆಲ್ಲಾ ಚಿಂತಿಸಿ, ನಿನ್ನನ್ನು ಶರಣುಹೋದ ನಾನು ಯಮದೂತರು ಬಂದು ಪಾಶವನ್ನು ಬೀಸಲು, ಅದರಿಂದ ಗಾಬರಿಗೊಳ್ಳುವ ಮುನ್ನವೇ ನೀನು ಬಂದು ಅಭಯಪ್ರದಾನಮಾಡಿ ನನ್ನನ್ನು ಕಾಪಾಡಿ, ದಯೆಗೈಯ್ಯಬೇಕು.

विचारिमेघकाननावृताहिपूस्स्थ ! सद्गुणिन् ! ।
उदूढशैल ! धेनुपाल ! शुद्ध ! वासुदेव ! भोः ।।
स्वकीयाकौशलोक्तिसक्तचित्त ! पूतदूत्यभाक् ।
नियन्तृताभिवृद्धकीर्तिवित्त ! देवनायक !
स्वभक्तमोहनाशक ! स्वपादरक्तसत्य ! भोः ।
यदा कटूक्तिकालदूतपाशपाशितो भयात् ।।
पतेय माशु पूर्व मेव मेऽभयप्रदोऽच्युत !
बिभीहि मा बिभीहि मा बिभीहि मेति पाहि माम् ।। २

ಮೂಲ : ಪೊರುತ್ತಂ ಪೊರುನ್ದಲುಂ ಪೋಕಿನ್ರವತ್ತುಡನ್ಪೊಯ್ಮದಿಮೇಲ್,
ವಿರುತ್ತಂ ಕಲಿತ್ತುರೈಮೇವುಮಳಲ್ ಮದಂವೇರಿನಿಯೆನ್,
ತಿರುತ್ತಮನತ್ತಿನಿಲ್ ಶೇರಾವೆಮ್ಮೈದ್ದೈಯ್ವನಾಯಕನಿನ್,
ವರುತ್ತಂ ಪೊರಾವರುಳಾಲ್ ಮನ್ನಡೈಕ್ಕಲಂ ಕೊಣ್ಡರುಳೇ ॥ 9

ಅರ್ಥ :- ದೆಯ್ವನಾಯಕಾ = ದೇವನಾಯಕನೇ ! ಪೊರುತ್ತಂ-ಪೊರುಂದಲುಂ = (ನಿನ್ನ ಸಂಕಲ್ಪಕ್ಕೆ ತಕ್ಕಂತೆ ಚೇತನರೊಂದಿಗೆ) ಹೊಂದಿಕೆಯುಂಟಾದಾಗ, ತವತ್ತುಡನ್ = ತಪ್ಪುಗಳೊಂದಿಗೆ, ಪೊಯ್‌ಮತಿ = ಅಜ್ಞಾನವೂ, ಮೇಲ್ = ಅದಕ್ಕೂ ಮೇಲೆ, ವಿರುತ್ತಂ = ವಿಪರೀತಜ್ಞಾನವೂ, ಕಲಿತ್ತು-ಉರೈ-ಮೇವುಂ = ಉಂಟಾಗಿ ನೆಲೆಯಾಗಿರುವ, ಅಳಿಲ್ = ಬೆಂಕಿಯಂತಹ ಕಾಮವೂ, ಮದಂ = ಕೊಬ್ಬು, ಪೋಹುಂ = ಬಿಟ್ಟುಹೋಗುವುವು,

ಮನತ್ತಿನಿಲ್-ತಿರುತ್ತಂ-ಶೇರಾ-ಎಮ್ಮೈ = ಮನಸ್ಸಿನಲ್ಲಿ ತಿದ್ದಿಕೊಳ್ಳದ ನಮ್ಮನ್ನು, ವರುತ್ತಂ-ಪೊರಾ = (ಇತರರ) ದುಃಖವನ್ನು ಸಹಿಸಲಾರದ, ನಿನ್-ಅರುಳಾಲ್ = ನಿನ್ನ ಕರುಣೆಯಿಂದ, ಮನ್-ಅಡ್ಶೈಕ್ಕಲಂ-ಕೊಂಡು-ಅರುಳ್ = ಸ್ಥಿರವಾಗಿ ರಕ್ಷಿಸಲ್ಪಡುವ ವಸ್ತುವನ್ನಾಗಿ ಸ್ವೀಕರಿಸಿಕೊಳ್ಳುವಂತೆ ಕೃಪೆಮಾಡು, ಇನಿ-ವೇರು-ಎನ್ = ಇದಕ್ಕಿಂತ ಬೇರೆ ಉತ್ತಮವಾದುದು ಏನಿದೆ ? ನಾವು ಬೇಡುವಂತಹುದು.

**ತಾತ್ಪರ್ಯ** :- ದೇವನಾಯಕನೇ ! ನಿನ್ನ ಸತ್ಯಸಂಕಲ್ಪಕ್ಕೆ ಅನುಗುಣವಾಗಿಯೇ ತಾನು ನಡೆದುಕೊಳ್ಳುವ ಚೇತನನಿಗೆ, ಅವನು ಮಾಡಿದ ಅಪರಾಧಗಳು, ಅಜ್ಞಾನ, ವಿಪರೀತ ಜ್ಞಾನ, ಬೆಂಕಿಯಂತೆ ಮೇಲೆಮೇಲೆ ಬೆಳೆದು ಬರುವ ಕಾಮ ಮತ್ತು ಗರ್ವ ಇವೆಲ್ಲವೂ ನಶಿಸಿಹೋಗುವುವು. ನನ್ನ ಮನಸ್ಸಾದರೋ ಅಂತಹ ಪರಿಪಕ್ವವಾದ ಸ್ಥಿತಿಯನ್ನು ಪಡೆಯದೇ ಇದೆ. ಆದರೂ ಇತರರ ದುಃಖವನ್ನು ನೋಡಲು ಸಹಿಸದ ನಿನ್ನ ಕರುಣೆಯಿಂದ ನನ್ನನ್ನೂ ರಕ್ಷಿಸಲ್ಪಡಬೇಕಾದ ವಸ್ತುವೆಂದು ನಿನ್ನ ಪಾದಗಳಲ್ಲಿಯೇ ಸೇರಿಸಿಕೊಳ್ಳಬೇಕು. ಇಷ್ಟವಿಲ್ಲದೇ ಇನ್ನೇನುತಾನೇ ನಾನು ಬೇಡಲಿ ? ಬೇಡಲು ಮತ್ತೇನೂ ಇಲ್ಲ.

**त्वत्सङ्कल्पोऽनुकूलो भवति यदि तदा चेतने देवनाथः! ।**
**अज्ञानं चापराधाः विमतिरपि समारूढकामोऽग्निकल्पः ।।**
**गर्वश्चापि त्यजन्ति ह्यनुपदमपितु स्वान्तशिक्षाविहीनं ।**
**सोढुं मामक्षम स्त्वं समव करुणया रक्ष्यमन्यद्वृणे किम् ? ९**

ಮೂಲ : ಅನ್ದಮಿಲ್‌ಶೀರಯಿನ್ದೈನಗರಮರ್‌ನ್ದನಾದನ್
ಅಡಿಯಿಣೈಮೇಲಡಿಯುರ್ರೈ ಯಾಲೈಮ್ಬದೇತ್ತಿ,
ಶಿನ್ದೈಕವರ್‌ಪಿರಾಕಿರುತನೂರುಕೂರಿ
ಶೆನ್ದಮಿಳ್‌ಮುಮ್ಮಣಿಕ್ಕೋವೈಶೆರಿಯಚ್ಚೇರ್ತ್ತು,
ಪನ್ದುಕಳಲಮ್ಮಾನೈಯೂಶಲೇಶಲ್
ಪರವುನವಮಣಿಮಾಲೈಯಿವೈಯುಂಶೊನ್ನೇನ್,
ಮುನ್ದೈಮರೈಮೊಯ್ಯವಳಿಮೊಳಿನೀಯೆನ್ರು
ಮುಕುನ್ದನರುಳ್ ತನ್ದಪಯನ್ ಪೆತ್ತೇನ್‌ನಾನೇ ॥ 10

**ಅರ್ಥ** :- ಅಂತಂ-ಇಲ್-ಶೀರ್ = ನಿರವಧಿಕ ಮಹಿಮೆಯುಳ್ಳ, ಅಯಿಂದ್ರೈ, ನಗರ್ = ತಿರುವಹೀಂದ್ರಪುರದಲ್ಲಿ, ಅಮರ್‌ನ್ದ-ನಾದನ್ = ಸರ್ವದಾ ವಾಸಮಾಡುವ ದೇವನಾಯಕನ, ಅಡಿ-ಇಣೈ-ಮೇಲ್ = ಎರಡು ಪಾದಾರವಿಂದಗಳ ಮೇಲೂ,

ಅಡಿ-ಉರೈಯಾಲ್ = (ಎಲ್ಲಾ ಭಾಷೆಗಳಿಗೂ) ಮೂಲವಾದ ಸಂಸ್ಕೃತ ಭಾಷೆಯಲ್ಲಿ, ಐಂ-ಪತ್ತು-ಏತ್ತಿ = (ದೇವನಾಯಕ ಪಂಚಾಶತ್) ಐವತ್ತು ಶ್ಲೋಕಗಳಿಂದ ಸ್ತುತಿಸಿ, ಶಿಂದೈ-ಕವರ್ = ಮನಸ್ಸನ್ನು ಆಕರ್ಷಿಸುವ, ಪಿರಾಕಿರುತಂ-ನೂರು-ಕೂರಿ = (ಅಚ್ಯುತ ಶತಕಂ) ಪ್ರಾಕೃತದಲ್ಲಿ ನೂರು ಪದ್ಯಗಳನ್ನು ಹೇಳಿ, ಶೆಂ-ತಮಿಳ್ = ಅಂದವಾದ ತಮಿಳಿನಲ್ಲಿ, ಮುಮ್ಮಣಿಕ್ಕೋವೈ = ಈ ಹೆಸರಿನ ಪ್ರಬಂಧವನ್ನೂ, ಶೆರಿಯ-ಶೇರ್ತು = ಅರ್ಥವು ಬಹಳ ಚೆನ್ನಾಗಿ ಒಪ್ಪುವಂತೆ ಸೇರಿಸಿ, ಪಂದು-ಕಳಲ್-ಅಮ್ಮಾನೈ- ಊಶಲ್-ಏಶಲ್-ಪರವುನಮಣಿಮಾಲೈ = ''ಪಂದ್, ಕಳಲ್, ಅಮ್ಮಾನೈ, ಊಶಲ್, ಏಶಲ್, ಎಲ್ಲರೂ ಕೊಂಡಾಡುವಂತಹ ನವರತ್ನಮಾಲೈ,'' ಎಂಬ, ಇವೈಯುಂ-ಶೊನ್ನೇನ್ = ಇವಲ್ಲೆವನ್ನೂ ಪಾಡಿದೆನು. ಮುಂದೈ-ಮರೈ-ಮೊಯ್ಯ = ಅನಾದಿವೇದಗಳು ಕೊಂಡಾಡಿದ, ವಳಿ = ಮಾರ್ಗದಲ್ಲೇ (ಅದೇ ಅರ್ಥವನ್ನು), ನೀ-ಮೊಳಿ-ಎನ್ರು = ನೀನು ಈ ಪ್ರಬಂಧಗಳ ಮೂಲಕ ಪಾಡು ಎಂದು, ಮುಕುಂದರ್. ಅರುಳ್-ತಂದ-ಪಯನ್ = ಪರಮಾತ್ಮನು ತೋರಿದ ದಯೆಗೆ ಅವನ ಆಜ್ಞೆಯ ಫಲವನ್ನು, ನಾನ್-ಪೆತ್ತೇನ್ = ನಾನು ಪಡೆದೆನು.

ತಾತ್ಪರ್ಯ :- ಹಿರಿಮೆಯಲ್ಲಿ ಮುಂದಾಗಿ ಮೆರೆಯುವ ತಿರುವಹೀಂದ್ರಪುರದಲ್ಲಿ ಕಂಗೊಳಿಸುವ ದೇವನಾಯಕನು ನನಗೆ ''ವೇದಗಳು ಮೊಳಗುವ ಅರ್ಥಗಳನ್ನು ಸ್ತೋತ್ರರೂಪವಾಗಿ ನೀನು ಪಾಡು'' ಎಂದು ಅಣಿತಿಯಿತ್ತನು. ಅದನ್ನು ಶಿರಸಾವಹಿಸಿ, ಎಲ್ಲಾ ಭಾಷೆಗಳಿಗೂ ಮೂಲವೆನಿಸಿರುವ ಸಂಸ್ಕೃತದಲ್ಲಿ ''ದೇವನಾಯಕ ಪಂಚಾಶತ್ತ''ನ್ನೂ, ಸರಸ್ವತಿಗೆ ಅತಿಮೆಚ್ಚಿಗೆಯಾದ ಮತ್ತು ಸರ್ವರ ಮನಸ್ಸನ್ನೂ ಆಕರ್ಷಿಸುವಂತಹ ಪ್ರಾಕೃತಭಾಷೆಯಲ್ಲಿ ''ಅಚ್ಯುತಶತಕಂ'' ಎಂಬುದನ್ನೂ. ಸರಳವೂ, ರಮ್ಯವೂ ಆದ ತಮಿಳಿನಲ್ಲಿ(ಪಂದು, ಕಳಲ್, ಅಮ್ಮಾನೈ, ಊಶಲ್, ಏಶಲ್, ಇವಿಷ್ಟೂ ಉಪಲಬ್ಧಿಯಿಲ್ಲ) ನವಮಣಿಮಾಲೈಯನ್ನೂ ಸೊಗಸಾಗಿ ಪಾಡಿ, ಅವನ ಆಜ್ಞಾಫಲಕ್ಕೆ ಭಾಗಿಯಾದೆ, ಈ ಒಂಬತ್ತೂ ದೇವನಾಯಕನ ವಿಷಯವಾದುದೆಂದು ತಂತ್ರವಾಗಿ ನವಮಣಿಮಾಲೈ ಎಂಬ ಪದದಿಂದ ಸೂಚಿಸಿ, ಮುಕುಂದನೆಂಬ ಪದದಿಂದ ಭೋಗಮೋಕ್ಷಗಳೆರಡನ್ನೂ ಕೊಡುವವನಾದುದರಿಂದ, ಪರಿಪಕ್ವಮನದವರು ಇಲ್ಲೇ ಪೂರ್ಣ ಬ್ರಹ್ಮಾನಂದಾನುಭವವನ್ನು ಪಡೆಯುವರು. ಪರಮಪದದಲ್ಲಿ ಅನುಭವಿಸುವುದನ್ನು ಹೇಳಬೇಕೇ ಎಂಬ ಭಾವವನ್ನು ಸೂಚಿಸಿರುವರು.

अध्यासीनविसीमवैभवगुणाहीशानपूरीशितुः ।
पादाम्भोजयुगे गिरा सुमनसां पञ्चाशतं प्रोचिवान् ।।
हृद्यप्राकृतभाषया च शतकं सुद्राविडोक्त्याकृतीः ।
स्वस्वाख्यानुगुणा स्त्रिरत्नविलसन्मालां सुबन्धां तथा ।। १

गाधां कन्तु प्रधानां सुललितघटिकागाधिका हास्यपूर्णाः ।
कौबेराक्षिप्रमोदां नवमणिकलितां डोलिकागाधिकाश्च ।
एताः प्रीत्या ह्यवोचं नव च भगवत श्शासनस्यानुरूपं ।
''त्र्य्यन्तोक्तार्थजातं त्वमिह विशदये'' त्याप्नवं तत्फलं च ।। २

श्रीमान् आम्नायचूडागुरुमणि रफणीत् रत्नमालां नवाद्यां ।
रम्यां तामादितेयोक्तिभिरभिरचित्तैः हृद्यपद्यैस्समिद्धाम् ।।
कर्णाटोक्त्यर्थपूर्णां सकलबुधमुदेऽचीकरद्देवनाथः ।
श्रीमद्वेदान्तरामानुजगुरुकरुणाशालिगोपालवाचा ।।

॥ಶ್ರೀಃ ॥

॥ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ॥

# ಗೀತಾರ್ಥ ಸಂಗ್ರಹಃ

ಶ್ರೀಭಗವದ್ಗೀತೆಯು ಭಗವನ್ಮುಖಕಮಲದಿಂದ ಬಂದುದು. ಶ್ರೀವೇದವ್ಯಾಸರ ಶ್ರೀಮನ್ಮಹಾಭಾರತವೆಂಬ ಕ್ಷೀರಸಾಗರದ ಅಮೃತವಿದು. ಉಪನಿಷತ್ತುಗಳು ಘೋಷಿಸುವ ವ್ಯಕ್ತವಾಗಿ ತೋರುವ ತತ್ವಗಳ ನಿಧಿ. ಭಾರತದ 18 ಪರ್ವಗಳ ಸಾರವು ಇದರ 18 ಅಧ್ಯಾಯಗಳಾದಂತಿವೆ. ಇದಕ್ಕೆ ಇರುವ ವ್ಯಾಖ್ಯಾನಗಳು ಅಷ್ಟಿಷ್ಟಲ್ಲ. ಮಹರ್ಷಿಗಳಾದಿಯಾಗಿ ''ತತ್ವಂಜಿಜ್ಞಾಸಮಾನಾನಾಂಹೇತುಭಿಸ್ಸರ್ವತೋಮುಖೈಃ। ತತ್ವಮೇಕೋ ಮಹಾಯೋಗೀ ಹರಿರ್ನಾರಾಯಣಃ ಪರಃ ॥'' ''ಆಲೋಡ್ಯಸರ್ವಶಾಸ್ತ್ರಾಣಿ ವಿಚಾರ್ಯಚಪುನಃಪುನಃ। ಇದಮೇಕಂ ಸುನಿಷ್ಪನ್ನಂ ಧ್ಯೇಯೋನಾರಾಯಣಸ್ಸದಾ ॥'' ''ಅತ್ರೋಪನಿಷದಂ ಪುಣ್ಯಾಂಕೃಷ್ಣದ್ವೈಪಾಯನೋಽಬ್ರವೀತ್।'' ''ಭಾರತೇ ಭಗವದ್ಗೀತಾ''। ''ಸ್ವಧರ್ಮಜ್ಞಾನವೈರಾಗ್ಯಸಾಧ್ಯಭಕ್ತ್ಯೇಕಗೋಚರಃ। ನಾರಾಯಣಃ ಪರಬ್ರಹ್ಮ ಗೀತಾಶಾಸ್ತ್ರೇಸಮೀರಿತಃ ॥'' ಇತ್ಯಾದಿ ಬಹುಸೂಕ್ತಿಗಳಿಂದ ವ್ಯಕ್ತಪಡಿಸಿರುವರು. ಸಾತ್ವಿಕತಮವೂ ಆಗಿರುವ ಇದರಲ್ಲಿಪ್ರತಿಪಾದಿತವಾದ ತತ್ವವೂ ''ಶ್ರೀಮನ್ನಾರಾಯಣನೇ'' ಎಂಬುದಂತೂ ಸುಸ್ಪಷ್ಟ, ಹೀಗಿದ್ದರೂ ಸಮಂಜಸವೆನಿಸದ ಎಷ್ಟೋ ಅಭಿಪ್ರಾಯಗಳು ''ಗೀತೆಯಮೇಲೆ'' ಇದ್ದುವು. ಎಲ್ಲರನ್ನೂ ಉಜ್ಜೀವನಗೊಳಿಸುವ ಜ್ಞಾನಿಗಳಲ್ಲಿ ತಿಲಕಪ್ರಾಯರಾಗಿದ್ದ ಶ್ರೀಯಾಮುನಾಚಾರ್ಯರು ಅಸಮಂಜಸವಾದ ಅಭಿಪ್ರಾಯಗಳನ್ನು ಖಂಡಿಸಿ, ಮುಂದೆ ಇಂತಹುದು ಮತ್ತೆ ತಲೆಯೆತ್ತದಂತಾಗಲೆಂದು, ''ಶ್ರೀಗೀತಾರ್ಥ ಸಂಗ್ರಹ''ವೆಂಬ ಸಂಕ್ಷೇಪ ಗ್ರಂಥವನ್ನು ಅವರು ಕರುಣಿಸಿದರು. ಈ ಮಹಿಮರ ಮಾರ್ಗ ನಿಷ್ಕಂಟಕವೂ ಸುಗಮವೂ ಆಗಿದ್ದರಿಂದಲೇ ''ಶ್ರೀರಾಮಾನುಜರು'' ಗೀತಾಭಾಷ್ಯವನ್ನು ಇದನ್ನು ಅನುಸರಿಸಿಯೇ ವಿರಚಿಸಿದರು. ಈ ಗೀತಾ ಭಾಷ್ಯದ ಅರ್ಥವೇ ಸತ್ಯವಾದುದೆಂದು ಸಾರಿ ''ತಾತ್ಪರ್ಯ ಚಂದ್ರಿಕಾ'' ಎಂಬ ಹೆಸರಿನಿಂದ ಗೀತಾ ಭಾಷ್ಯವನ್ನು ವಿಸ್ತಾರವಾಗಿ ವ್ಯಾಖ್ಯಾನಮಾಡಿ, ಸ್ವೇತರ ಸಮಸ್ತಮತಗಳನ್ನೂ ಖಂಡಿಸಿ, ಶ್ರೀಭಾಷ್ಯಕಾರರ ಅಭಿಮತವೇ ಗೀತಾಚಾರ್ಯನಾದ ಶ್ರೀಕೃಷ್ಣ ಪರಮಾತ್ಮನ ಅಭಿಮತವೆಂದೂ, ಸಕಲ ವೇದಗಳ ಪರಮ ತಾತ್ಪರ್ಯವೂ ಅದೇ ಎಂದೂ ನಮ್ಮೀ ಗುರುಮಣಿಗಳು ಸ್ಥಾಪಿಸಿದರು. ಶ್ರೀಯಾಮುನರ ''ಗೀತಾರ್ಥಸಂಗ್ರಹ''ಕ್ಕೆ ''ಗೀತಾರ್ಥ ಸಂಗ್ರಹ ರಕ್ಷಾ'' ಎಂಬ ಪುಟ್ಟ ವ್ಯಾಖ್ಯಾನವನ್ನು ಬರೆದು, ಆ ಹೆಸರಿನಿಂದಲೇ ಅದರ ಭಾವಾನುವಾದವೂ ಎಂಬಂತೆ ತಿಳಿ ತಮಿಳಿನಲ್ಲಿ ತಮಿಳುನಾಡಿನೊಳನಾಡಿಗಳಿಗೂ ಅದರ ಸವಿ ಸವಿಯುವಂತಾಗಲೆಂದು ಈ ''ಗೀತಾರ್ಥ ಸಂಗ್ರಹವೆಂಬ'' ದಿವ್ಯ ಪ್ರಬಂಧವನ್ನು ಅನುಗ್ರಹಿಸಿದರು.

ಹೀಗೆ ಕ್ರಮವಾಗಿ ದೊರಕಿರುವ ಈ ತತ್ತ್ವಸಾರಾಸ್ವಾದನೆಯು ನಮ್ಮ ನಾಡಿನ ತಮಿಳೊಡನಾಡಿಗಳಿಗೂ ಲಭಿಸಬೇಕಾದುದು ಅತ್ಯಗತ್ಯವೆಂದೆಣಿಸಿ, ಪ್ರಯತ್ನಿಲಸಾಗಿದೆ. ಶ್ರೀಮದಾಚಾರ್ಯರ ಪರಮಾನುಗ್ರಹದಿಂದಲೂ, ಸತ್ಸಂಪ್ರದಾಯಾಭಿಮಾನಿಗಳ ನೆರವಿನಿಂದಲೂ ಈ ಸೇವೆಯು ಪೂರ್ಣ ಬೆಂಬಲವನ್ನುಪಡೆದು, ಸಫಲಗೊಳ್ಳುವುದೆಂದು ನಂಬಿರುವೆನು.

ಶುಭಕೃತ್
1962

ಇತಿ, ಶ್ರೀ ದೇಶಿಕಮಣಿಕೃಪಾಭಾಜನಂ

**ವಿದ್ವಾನ್.ಹ. ಗೋಪಾಲಾಚಾರ್ಯಃ**
ನಂ.1 4, ನಾಲ್ಕನೆಯ ಬೀದಿ, ಕಾಳಿದಾಸ ರಸ್ತೆ
ವಾಣಿವಿಲಾಸ ಮೊಹಲ್ಲ, ಮೈಸೂರು - 2

—

॥ಶ್ರೀಃ ॥

॥ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ॥

# ಶ್ರೀ ಗೀತಾರ್ಥ ಸಂಗ್ರಹಃ

ತನಿಯ್ಗ

ಮೂಲ : ಕಟ್ಟಪ್ಪೊರುಳ್ ವಿರಿತ್ತ ಕಾಶಿನಿಯಲ್ ನಾನ್ಮರೈಯಿನ್,
ಇಟ್ಟಪ್ಪೊರುಳಿಯಮ್ಬುಮಿನ್‌ಪೊರುಳೈ, ಶಿಟ್ಟರ್‌ತೊಳುಂ
ವೇದಾನ್ತದೇಶಿಕನ್ನೈಮೇವುವಾರ್‌ತಂಗಳ್‌ತಿರು
ಪ್ಪಾದಾಂಬುಯಮಡಿಯೇನ್‌ಪತ್ತು ॥ 1

ಗೀತ್ತೈಮೊಳಿನ್ದರುಳುಂ ವೇದಾಂತದೇಶಿಕನಾರ್
ಪಾದಾರವಿಂದಮಲರ್‌ಪತ್ತು ॥ 2

ಅರ್ಥ :- ಕಟ್ಟ-ಪೊರುಳ್-ವಿರಿತ್ತ-ಕಾಶಿನಿಯಲ್ = ಅನುಚಿತವಾದ ಅರ್ಥವನ್ನೇ ಹರಡಿರುವ ಈ ಜಗತ್ತಿನಲ್ಲಿ, ನಾನ್ಮರೈಯಿನ್ = ವೇದಗಳಲ್ಲಿ, ಇಟ್ಟ-ಪೊರುಳ್ = ಗೂಢವಾಗಿರುವ ಸಾರಾರ್ಥವನ್ನು, ಇಯಂಬುಮಿನ್ = ಅವಲಂಬಿಸಿರಿ, (ಅಂತಹ) ಪೊರುಳೈ = ಅರ್ಥವನ್ನು ಸ್ಪಷ್ಟಪಡಿಸಿದ, (ಮತ್ತು) ಶಿಟ್ಟರ್-ತೊಳುಂ = ಶಿಷ್ಟರಾದವರು ಸೇವಿಸುವಂತಹ, ವೇದಾಂತದೇಶಿಕನ್ನೈ = ನಿಗಮಾಂತದೇಶಿಕರನ್ನು, ಮೇವುವಾರ್-ತಂಗಳ್ = ಸೇವಿಸುವ ಮಹಿಮರ, ಪಾದಾಂಬುಯಂ = ಅಡಿದಾವರೆಗಳು, ಅಡಿಯೇನ್ = ನನಗೆ, ಪತ್ತು = ಆಶ್ರಯವು.

ಗೀತ್ತೈ-ಮೊಳಿಂದ್-ಅರುಳುಂ = ಗೀತಾರ್ಥವನ್ನು ಕರುಣಿಸಿದ, ವೇದಾಂತ ದೇಶಿಕನ್ = ನಿಗಮಾಂತ ಮಹಾದೇಶಿಕರ, ಆರ್ = ಸಕಲಗುಣಭರಿತವಾದ, ಪಾದಾರವಿಂದ-ಮಲರ್ = ಅಡಿದಾವರೆಗಳು, ಪತ್ತು = ಆಶ್ರಯವು.

दृष्टार्थैकप्रचारे भुवन इह चतुर्वेदनिष्ठं सदर्थं ।
गृह्णीध्वं, शिष्टसेव्यं श्रुतिशिखरगुरुं ये भजन्तेऽतिभक्त्या ।।
तेषां पादाम्बुजानि श्रयणपद महो मे तथा योऽन्वगृह्णात् ।
गीतार्थं वेदचूडागुरुमणि रनघ स्तत्पदाब्जे श्रयध्वम् ।।

ಮೂಲ : ಕರುಮಮುಂ ಞಾನಮುಂ ಕೊಂಡೆಳುಂಕಾದಲುಕ್ಕೋರಿಲಕ್ಕೆನ್ರು,
ಅರುಮರೈಯುಚ್ಚಿಯುಳಾದರಿತ್ತೋದುಮರುಂ ಪಿರಮಂ,
ತಿರುಮಹಳೋಡುವರುಂ ತಿರುಮಾಲೆನ್ರುತಾನುರೈತ್ತಾನ್,
ದರುಮಮುಹನ್ದ ದನಂಜಯನುಕ್ಕವನ್ ಶಾರತಿಯೇ ॥ 1

ಅರ್ಥ :- ದರುಮಂ = ಧರ್ಮವನ್ನು, ಉಹಂದ = ಅನುಭವಿಸಿದ, ದನಂಜಯನುಕ್ಕು = ಅರ್ಜುನನಿಗೆ, ಶಾರತಿ = ಸಾರಥಿಯಾದ, ಅವನ್ = ಆ ಪರಮಾತ್ಮನು, ಕರುಮಮುಂ = ಕರ್ಮಯೋಗವನ್ನೂ, ಞಾನಮುಂ = ಜ್ಞಾನಯೋಗವನ್ನೂ, ಕೊಂಡು = ಅವಲಂಬಿಸಿಕೊಂಡು, ಎಳುಂ = ಉಂಟಾಗುವ, ಕಾದಲುಕ್ಕು = ಭಕ್ತಿಯೋಗಕ್ಕೆ, ಓರ್-ಇಲಕ್ಕು-ಎನ್ರು = ಒಂದೇ ಗುರಿಯೆಂದು, ಆದರಿತ್ತು = ಆದರದಿಂದ, ಅರುಂ-ಮರೈ-ಉಚ್ಚಿಯುಳ್ = ದುರವಗಾಹವಾದ ಉಪನಿಷತ್ತುಗಳಲ್ಲಿ, ಅರುಂ = ದುರ್ಜ್ಞೇಯನೂ, ದುರ್ಲಭನೂ (ಆದ) ಪಿರಮಂ = ಪರಬ್ರಹ್ಮವು, ತಿರು-ಮಗಳೋಡು = ಮಹಾಲಕ್ಷ್ಮಿಯೊಡನೆಯೇ, ವರುಂ = ಬುದ್ಧಿಗೆ ಕಾಣುವವನಾದ, ತಿರು-ಮಾಲ್ = ಉಭಯ ವಿಭೂತಿಗೂ ಸರ್ವೇಶ್ವರನಾದ ಶ್ರೀಮನ್ನಾರಾಯಣನು, ತಾನ್ = ತಾನೇ, ಉರೈ-ಎನ್ರುತ್ತಾನ್ = (ಶ್ರೀ ಗೀತೆಯನ್ನು) ಹೇಳಿದನು.

ತಾತ್ಪರ್ಯ :- "ಸ್ವಧರ್ಮ ಜ್ಞಾನ ವೈರಾಗ್ಯ ಸಾಧ್ಯ ಭಕ್ತ್ಯೇಕಗೋಚರಃ ।
ನಾರಾಯಣಃ ಪರಬ್ರಹ್ಮ ಗೀತಾಶಾಸ್ತ್ರೇ ಸಮೀರಿತಃ ॥"

ಶ್ರೀ ಕೃಷ್ಣನು ಪರಮಪ್ರಿಯನಾದ ಅರ್ಜುನನಿಗೆ ಸಾರಥಿಯಾಗಿದ್ದು, ಸರಿಯಾದ ಸಮಯದಲ್ಲಿ ಬಹಳ ಆದರದಿಂದ "ಕರ್ಮಯೋಗ, ಜ್ಞಾನಯೋಗಗಳಿಂದ ಬರುವ ಭಕ್ತಿಯೋಗಕ್ಕೆ ಏಕಮಾತ್ರ ಲಕ್ಷ್ಯಭೂತನೂ ತಾನೆಂದೂ, ಹಾಗೆಯೇ ಅತಿ ಗಹನವಾದ ಉಪನಿಷತ್ತುಗಳಲ್ಲಿ ಲಕ್ಷ್ಮೀಸಮೇತನಾಗಿಯೇ ವೇದ್ಯನಾಗುವನೂ ತಾನೇ ಎಂದೂ, ಮತ್ತು ಉಭಯ ವಿಭೂತಿಯ ಸರ್ವೇಶ್ವರನೂ ತಾನೇ" ಎಂದೂ ಚೆನ್ನಾಗಿ ತಿಳಿಸಿದನಷ್ಟೆ. ಇದರಲ್ಲಿ ಕ್ರಮವಾಗಿ ಆರಾರು ಅಧ್ಯಾಯಗಳ ಮುಖ್ಯಾರ್ಥಗಳಾದ ಕರ್ಮ, ಜ್ಞಾನ, ಭಕ್ತಿಗಳು ಸಂಗ್ರಹಿಸಲ್ಪಟ್ಟವು. (ಈ ಸಾರವಾದ ಅರ್ಥವನ್ನೇ ಮೇಲಿನ ಯಾಮುನಾಚಾರ್ಯರ ಸಂಗ್ರಹ ಶ್ಲೋಕವೂ ವಿವರಿಸುವುದು)

यो वाधर्मानुभोक्तुः प्रभुरपि जगतां सारथिः पाण्डवस्य ।
कर्मज्ञानोदिताया भवति पदजुषा मेकलक्ष्यं च भक्तेः ।।
दर्ज्ञेयाम्नायमौलिष्वधिगतपरमब्रह्मनारायण स्सः ।
श्रीमानेवोपयात स्स्वयमुभयविभूतीश इत्याह तस्मै ।। १

ಮೂಲ : ಉಹವ್ವೈಯಡ್ಡೈಂದ ಪುರವುಡ್ಡೈಯಾರ್ ಉರವತ್ತವನ್ನಾಳ್,
ತಹವುಡನನ್ಬುಕರೈಪುರಳದ್ದರುಮತ್ತಳವಿಲ್,
ಮಿಹವುಳಮಂಜಿವಿಳುನ್ದಡಿಶೇರ್ನ್ದವಿಶಯನುಕ್ಕೋರ್.
ನಹೈಯುಡನುಣ್ಮೈಯುರೈಕ್ಕವಮ್ಮೈನ್ದನರ್ ನಾರಣರೇ ॥ 2

ಅರ್ಥ :- ಉಹವ್ವೈ-ಅಡ್ಡೈಂದ = ಪ್ರೀತಿಯುಳ್ಳವರೂ, ಉರವ್-ಉಡ್ಡೈಯಾರ್ = ಸಂಬಂಧವುಳ್ಳವರೂ (ಆಗಿದ್ದರೂ) ಉರವ್-ಅತ್ತ = ಸಂಬಂಧವನ್ನು ಬಿಟ್ಟ, ಅ-ನಾಳ್ = ಆ ಸಮಯದಲ್ಲಿ, ತಹವ್-ಉಡನ್ = ದಯಾಸಹಿತವಾದ, ಅನ್ಬ್ = ಸ್ನೇಹವು, ಕರೈ-ಪುರಳ = ಮಿತಿಮೀರಿಹೋಗಲು, ದರುಮತ್ತು-ಅಳವಿಲ್ = ಧರ್ಮದ ಅಳತೆಯಲ್ಲಿಯೂ, ಉಳಂ = ಮನಸ್ಸು, ಮಿಹ-ಅಂಜಿ = ತುಂಬ ಹೆದರಿ, ಮಿಳುಂದ್ = ನಮಿಸಿ, ಅಡಿ-ಶೇರ್ನ್ದ = ಚರಣಗಳನ್ನು ಆಶ್ರಯಿಸಿದ, (ಶಿಷ್ಯನಾಗಿದ್ದ) ವಿಶಯನುಕ್ಕು = ಅರ್ಜುನನಿಗೆ, ಓರ್-ನಗೈ-ಉಡನ್ = ವಿಲಕ್ಷಣವಾದ ನಗುವೊಡನೆ, ಉಣ್ಮೈ = ನಿಜತತ್ವವನ್ನು, ಉರೈಕ್ಕ = ಉಪದೇಶಿಸುವುದಕ್ಕಾಗಿ, ನಾರಣರ್ = ನಾರಾಯಣನೇ ಅಲ್ಲವೆ, ಅಮ್ಮೈಂದನರ್ = ಉಚಿತತಮ ಗುರುವಾಗಿ ಆದನು.

ತಾತ್ಪರ್ಯ :- ಅಸ್ಥಾನಸ್ನೇಹಕಾರುಣ್ಯ ಧರ್ಮಾಧರ್ಮಧಿಯಾಕುಲಂ ।
ಪಾರ್ಥಂ ಪ್ರಪನ್ನಮುದ್ದಿಶ್ಯ ಶಾಸ್ತ್ರಾವತರಣಂ ಕೃತಂ ॥''

ದ್ರೋಣ, ಭೀಷ್ಮಾದಿ ಗುರುಹಿರಿಯರ ಪ್ರೀತ್ಯಾದರಗಳಿಗೆ ಅರ್ಜುನನು ಪೂರ್ಣ ಪಾತ್ರನಾಗಿದ್ದನು. ಆದರೂ ಅವರು ಇವನನ್ನೆದುರಿಸಿ ಯುದ್ಧಕ್ಕೆ ನಿಂತರು. ಇದನ್ನು ಕಂಡು ಅರ್ಜುನ ನು ತನ್ನ ವೀರಕ್ಷತ್ರಿಯ ಧರ್ಮವಾದ ಯುದ್ಧ ಮಾಡುವುದನ್ನು ಬಿಟ್ಟು, ಅದಕ್ಕೆ ಬದಲು ಅವರಲ್ಲಿ ಅತ್ಯಂತ ಪ್ರೀತಿಯನ್ನೂ ಕರುಣೆಯನ್ನೂ ತೋರಿದನು. ಕರ್ತವ್ಯಲೋಪವನ್ನರಿಯದವನಾದನು. ಖಿನ್ನನಾಗಿ ಏನೂಮಾಡಲೂ ತೋಚದೆ, ಬೆಪ್ಪಾಗಿ, ಬಿಲ್ಲುಬಾಣಗಳನ್ನು ಬಿಸುಟು, ರಥದಡಿಯಲ್ಲಿ ಸುಮ್ಮನೆ ಕುಳಿತನು. ಶ್ರೀಕೃಷ್ಣನನ್ನು ತನಗಿರುವ ಮೋಹ ತೊಲಗುವಂತೆ ಬೇಡಿದನು. ಆಗ ಪ್ರಪನ್ನನಾದ ಅರ್ಜುನನಿಗೆ ಜೀವ ಪರಮಾತ್ಮರ ಸ್ವರೂಪ ಸ್ವಭಾವಗಳನ್ನೂ, ಜೀವನು ಪರಮಾತ್ಮನನ್ನು ಪಡೆವ ಉಪಾಯವನ್ನೂ ಮತ್ತು ಪರಮ ಪುರುಷಾರ್ಥವನ್ನೂ ಮನವರಿಕೆಯಾಗುವಂತೆ ಸುಲಭವಾಗಿ ಬೋಧಿಸಿ, ಅವನನ್ನು ಕರ್ತವ್ಯನಿರತನನ್ನಾಗಿಯೂ, ಪರಮಜ್ಞಾನಿಯಾಗಿಯೂ, ವಿಜಯ ಗಳಿಸುವಂತೆಯೂ ಮಾಡಲು ಉಪದೇಶಿಸತೊಡಗಿದನು.

बान्धव्यप्रीतिमन्तोऽप्युभयविरहिता स्सन्त आसन् तदा वै ।
कारुण्यस्नेहयो स्स्वा मिति मतिवहतो: मानसे धर्ममाने ॥

**भीतेऽत्यन्तं प्रणम्य स्वचरण मयमाने च पार्थेऽथ तस्मै ।**
**तत्वं बोद्धुं स्मितास्यो गुरुमणि रुपयाति स्म नारायण स्सन् ॥ २**

**ಮೂಲ : ಉಡಲಮಳಿನ್ದಿಡುಮುಳ್ಳುಯಿರೊನ್ರಳಿಯಾದೆನ್ನೈಪ್ಪೋಲ್,**
**ವಿಡುಮದುಪತ್ತುವಿಡಾದದಡ್ಡೈನ್ದಕಿರಿಶೈಹಳೇ,**
**ಕಡುಹವುನಕ್ಕುಯಿರ್ ಕಾಟ್ಟುಂ ನಿನ್ನೈವದನಾಲುಳದಾಂ,**
**ವಿಡುಮಯಲೆನ್ರು ವಿಶಯನ್ನೈ ತೇತ್ತಿನನ್‌ವಿತ್ತಹನೇ ॥ 3**

ಅರ್ಥ :- ಉಡಲಂ = ಒಡಲು (ಶರೀರವು), ಅಳಿನ್ದಿಡುಂ = ಅಳಿದುಹೋಗುವುದು ಉಳ್ = ಒಳಗಿರುವ, ಉಯಿರ್ = ಜೀವನು, ಒನ್ರು = ಒಂದು ಮಾತ್ರ, ಅಳಿಯಾದೆ = ನಾಶವಾಗದೆ, ಎನ್ನೈ-ಪ್ಪೋಲ್ = ನನ್ನಹಾಗೆ ಇರುವುದು (ಅದು ಅನಿತ್ಯವು) ಅಡ್ಡೈಂದ = (ಶಾಸ್ತ್ರಬೋಧಿತವಾಗಿ) ಪ್ರಾಪ್ತವಾದ, ಕಿರಿಶೈಹಳ್ = ಕರ್ಮಗಳು, ವಿಡಾದದ್ = ಬಿಡತಕ್ಕವಲ್ಲ (ಮಾಡಲೇಬೇಕಾದುವು), ಪತ್ತು = ಸಂಗವು (ಸಂಬಂಧವು), ವಿಡುಮದ್ = ಬಿಡಲ್ಪಡತಕ್ಕದ್ದು, ಅದನಾಲ್ = ನಿಷ್ಕಾಮಕರ್ಮಯೋಗದಿಂದ, ಉನಕ್ಕು = ನಿನಗೆ, ಉಯಿರ್ = ಆತ್ಮಸ್ವರೂಪವನ್ನು, ಕಾಟ್ಟುಂ = ಸಾಕ್ಷಾತ್ಕಾರ ಮಾಡಿಸುವ, ನಿನ್ನೈವು = ಧ್ಯಾನವು (ಸ್ಮೃತಿ ಸಂತತಿರೂಪವಾದ ಜ್ಞಾನಯೋಗವು), ಕಡುಹ = ಬೇಗನೆ, ಉಳದಾಂ = ಉಂಟಾಗುವುದು, ಮಯಲ್ = ಮೋಹವನ್ನು, ವಿಡು = ಬಿಡು, ಎನ್ರು = ಎಂದು, ವಿತ್ತಹನ್ = ವಿಸ್ಮಯನೀಯ ಚರಿತನಾದ ಆ ಪರಮಾತ್ಮನು, ವಿಶಯನ್ನೈ = ವಿಜಯಶೀಲನಾಗುವ ಅರ್ಜುನನ್ನು, ತೇತ್ತಿನನ್ = ಆಶ್ವಾಸನಗೊಳಿಸಿದನು.

ತಾತ್ಪರ್ಯ :- ''ನಿತ್ಯಾತ್ಮಾಸಂಗಕರ್ಮೇಹಾಗೋಚರಾ ಸಾಂಖ್ಯಯೋಗಧೀಃ ॥
ದ್ವಿತೀಯೇ ಸ್ಥಿರಧೀಲಕ್ಷಾ ಪ್ರೋಕ್ತಾತನ್ಮೋಹಶಾಂತಯೇ ॥''

ಇದು ಎರಡನೆಯ ಅಧ್ಯಾಯದ ಸಾರಾಂಶ.

ಅರ್ಜುನ ! ನಾನು ಸರ್ವೇಶ್ವರ, ಅಳಿವಿಲ್ಲದೆ ನಿತ್ಯವಾಗಿರುವೆನು. ಹೀಗೆಯೇ ಜೀವಾತ್ಮರೂ ನಿತ್ಯರು. ಇದರಲ್ಲಿ ಸಂಶಯಬೇಡ. ಆದರೆ ''ಹುಟ್ಟಿದನು'' ''ಸತ್ತನು'' ಎಂಬುದು ಹೇಗೆಂಬ ಪ್ರಶ್ನೆ ಇದೆ ಅದಕ್ಕೆ ಅವಕಾಶವಿಲ್ಲ. ಬಾಲ್ಯ, ಯೌವ್ವನ, ಮುಪ್ಪುಗಳು ಶರೀರದ ಧರ್ಮಗಳು. ಇವುಗಳನ್ನು ಒಂದಾದಮೇಲೊಂದನ್ನು ಜೀವನು ಅನುಭವಿಸುವಾಗ ಸತ್ತೆನೆಂದಾಗಲೀ, ಹುಟ್ಟಿದೆನೆಂದಾಗಲೀ ಅವನಿಗೆ ವ್ಯಥೆಯಾಗುವುದಿಲ್ಲ. ಕಾರಣ ಆತ್ಮ ನಿತ್ಯನಾಗಿರುವುದರಿಂದಲೇ ಅಲ್ಲವೆ, ಹಾಗೆಯೇ ಆತ್ಮನು ಒಂದು ದೇಹವನ್ನು ಬಿಟ್ಟು ತನ್ನ ಕರ್ಮಾನುಸಾರವಾಗಿ ಮತ್ತೊಂದನ್ನು ಪ್ರವೇಶಿಸುವ ಮತ್ತು ಬಿಡುವ ವ್ಯವಹಾರಗಳು. ಅದಕ್ಕೆ ವಿವೇಕಿಯಾದವನು ಮರುಗುವುದಿಲ್ಲ. ಈಗ ಈ ಯುದ್ಧದಲ್ಲಿ ನಿನ್ನಿಂದ ಕೊಲ್ಲಲ್ಪಡುವ

ರೆಂದಿರುವ ಈ ಜೀವರು ಸ್ವರ್ಗಕ್ಕೆ ಹೋಗಿ, ಉತ್ತಮ ದೇಹವನ್ನು ಹೊಂದಿ ಉತ್ತಮ ಸುಖಪಡುವರು. ಆದ್ದರಿಂದ ಶಾಸ್ತ್ರಗಳಿಂದ ಆತ್ಮಸ್ವರೂಪವನ್ನರಿತು ಕರ್ಮ ಮಾಡುವಾಗ ಅದರಫಲದ ಅಪೇಕ್ಷೆಯಿಲ್ಲದೆ ಭಗವತ್ಸೇವಾ ದೃಷ್ಟಿಯಿಂದ ಮಾಡಬೇಕು. ಫಲಮಾತ್ರ ಬಿಟ್ಟು ಕರ್ಮಗಳನ್ನು ಬಿಡದೆ ಮಾಡಲೇಬೇಕು. ಯುದ್ಧವು ಕ್ಷತ್ರಿಯನಿಗೆ ವಿಹಿತಕರ್ಮ. ಧರ್ಮ ಯುದ್ಧಕ್ಕಿಂತ ಬೇರೆ ಕರ್ಮ ನಿನಗಿಲ್ಲ, ಮಾಡು, ಅದರಿಂದ ಮುಕ್ತಿಯುಂಟು. ಕರ್ಮಯೋಗದಿಂದ ಮನಸ್ಸು ಶುದ್ಧವಾಗಿ ವಶವಾದಮೇಲೆ ಪರಮಾತ್ಮನಿಗೆ ಶರೀರವಾಗಿರುವ ಜೀವಾತ್ಮ ಸ್ವರೂಪವನ್ನು ಸದಾ ಚಿಂತಿಸುವುದರಿಂದ ಜ್ಞಾನಯೋಗವೂ ಸಿದ್ಧಿಸಿ, ಆತ್ಮಸಾಕ್ಷಾತ್ಕಾರವೂ ಆಗುವುದು. ಆದ್ದರಿಂದ ಆತ್ಮಸ್ವರೂಪವನ್ನೂ ಮತ್ತು ಯುದ್ಧವೆಂಬ ಕರ್ಮಯೋಗವು ಆತ್ಮಸಾಕ್ಷಾತ್ಕಾರಕ್ಕೆ ಸಾಧನವೆಂಬುದನ್ನೂ ಅರಿತುಕೊಂಡು, ''ದೇಹವೇ ಆತ್ಮಾ'' ಎಂಬ ಅಜ್ಞಾನವನ್ನು ಬಿಡುವವನಾಗು ಎಂದು ಶ್ರೀಕೃಷ್ಣನು ಉಪದೇಶಿಸಿದನು.

**नश्यत्येव शरीर मन्त रुषितो जीव स्तु नाहं यथा ।**
**त्याज्य स्सङ्ग उपातकर्मनिकरो न त्याज्य एवाशु ते ।।**
**तस्मादात्मविबोधनस्मृतितति जायेत मोहं त्यजे- ।**
**त्युक्त्वा तं विजयं विचित्रचरितः श्रीश स्समाश्वासयत् ।। ३**

**ಮೂಲ : ಶಂಗಂತವಿರ್ನ್ದ ಶಗಂಶದಿರ್ ಪೆತ್ತದನಂಜಯನೇ !**
**ಪೊಂಗುಂಗುಣಂಗಳ್ ಪುಣರ್ಪ್ಪನ್ವೈತ್ತುಂ ಪುಹವಿಟ್ಟವೈತ್ತು,**
**ನಂಕಣ್ಣನುರ್ವೈತ್ತಕಿರಿಶೈಯೆಲ್ಲಾ ಮೆನವುಂನವಿನ್ರಾರ್,**
**ಎಂಗುಮರಿವಾರ್ಹಳೇಯೆನ್ರು, ನಾತನಿಯಂಬಿನನೇ ॥ 4**

ಅರ್ಥ :- ಶಗಂ = ಜಗತ್ತಿನಲ್ಲಿ, ಶದಿರ್-ಪೆತ್ತ = ಸಾರಾಸಾರ ವಿವೇಕ ಚತುರನೆಂದು ಖ್ಯಾತಿ ಪಡೆದ, ಧನಂಜಯನೇ ! = ಅರ್ಜುನನೇ !, ''ಶಂಗಂ = (ಕರ್ಮಫಲದ) ಸಂಬಂಧವನ್ನು, ತವಿರ್ನ್ದ್ = ತ್ಯಜಿಸಿ, ಪೊಂಗುಂ = ಮೇಲೆ ಮೇಲೆ ಬರುವ, ಗುಣಂಗಳ್ = ಗುಣಗಳುಳ್ಳ, ಅನ್ವೈತ್ತು-ಪುಣರ್ಪ್ಪುಂ = ಸಮಸ್ತ ಸಾತ್ವಿಕ ಕ್ರಿಯೆಗಳನ್ನೂ, ಅವ್ವೈತ್ತು = ಆ ಸಾತ್ವಿಕ ಗುಣಗಳಲ್ಲಿಯೇ, ಪುಹವಿಟ್ಟು = ಆರೋಪಿಸಿ, ಉರ್ವೈತ್ತ = ಶಾಸ್ತ್ರವಿಹಿತವಾದ, ಕಿರಿಶೈಯೆಲ್ಲಾಂ = ಕ್ರಿಯೆಗಳೆಲ್ಲವನ್ನೂ, ನಂ-ಕಣ್ = ನನ್ನಲ್ಲಿ, ಎನ = ಎಂದು, ನವಿನ್ರಾರುಂ = ಹೇಳಿದವರೂ ಸಹ, ಎಂಗುಂ = ಸರ್ವ ವಿಷಯದಲ್ಲಿಯೂ, ಅರಿವಾರ್ಹಳೇ = ಜ್ಞಾನಿಗಳು ತಾನೇ, ಎನ್ರು = ಎಂದು, ನಾತನ್ = ಸ್ವಾಮಿಯಾದ ಶ್ರೀ ಕೃಷ್ಣನು, ಇಯಂಬಿನನ್ = ಹೇಳಿದನು.

ತಾತ್ಪರ್ಯ :- ''ಅಸತ್ವಾಲೋಕರಕ್ಷಾಯೈ ಗುಣೇಷ್ವಾರೋಪ್ಯಕರ್ತೃತಾಂ ।
ಸರ್ವೇಶ್ವರೇ ವಾನ್ಯಸ್ಯೋಕ್ತಾ ತೃತೀಯೇ ಕರ್ಮಕಾರ್ಯತಾ ॥''

''ಕ್ಷತ್ರಿಯನಧರ್ಮ ಯುದ್ಧಮಾಡುವುದೇ ಹೊರತು ಬಿಡುವುದಲ್ಲ.''

ಅರ್ಜುನ ! ಇಡೀ ಜಗತ್ತಿನಲ್ಲೇ ನಿನ್ನ ಕೀರ್ತಿ ಹರಡಿದೆ. ಕರ್ಮಯೋಗವನ್ನೇ ಆಚರಿಸು. ಆದರೆ ಫಲದೃಷ್ಟಿಯಿಡಬೇಡ. ನೇರವಾಗಿ ಜ್ಞಾನಯೋಗವನ್ನಾಚರಿಸಬಾರದು. ಕರ್ಮಯೋಗವಿಲ್ಲದೆ ಜ್ಞಾನಯೋಗ ಸಿದ್ಧಿಸದು. ಪ್ರಳಯ ಕಾಲಬಿಟ್ಟು ಉಳಿದ ಎಲ್ಲ ಕಾಲದಲ್ಲಿಯೂ ಸಕಲ ಜೀವರೂ ಏನಾದರೊಂದು ಮಾಡುತ್ತಲೇ ಇರುವರಲ್ಲವೆ ? ಇಲ್ಲವೆಂದರೆ ಬದುಕುವುದೇ ಕಷ್ಟವಾಗುವುದಲ್ಲವೇ ? ನಿನ್ನಂತಹ ಕರ್ಮಯೋಗಾಧಿಕಾರಿಯು ಅದನ್ನು ಬಿಟ್ಟು ಸಾಕ್ಷಾತ್ ಜ್ಞಾನಕ್ಕೇ ಯತ್ನಿಸುವುದಾದರೆ ಅನಧಿಕಾರಿಗಳೂ ಮಾಡಲು ತೊಡಗಿ ವೃಥಾ ಹಾಳಾಗುವರು. ಆ ದೋಷವು ನಿನ್ನಂತಹವರಿಗೆ ತಟ್ಟದೆ ಬಿಡದು. ಸತ್ತ್ವಾದಿ ಗುಣಗಳೇ ಹಾಗೆ ಕರ್ಮವನ್ನು ಮಾಡಿಸುತ್ತವೆಯೆಂದಾಗಲೀ, ಜೀವಾತ್ಮನೇ ಈ ಗುಣಗಳಿಗೆ ವಶನಾಗಿ ಮಾಡುವನೆಂದಾಗಲಿ ಹೇಳಿದರೂ ಆಗಲೂ ಆಯಾ ಕರ್ಮಫಲ ಸಂಗವನ್ನು ಬಿಟ್ಟು ಭಗವನ್ಮುಖೋಲ್ಲಾಸಕ್ಕಾಗಿ ಮಾಡುವೆನೆಂದೇ ಮಾಡಬೇಕು. ಹೀಗೆ ಆಚರಿಸುವವರೇ ಜ್ಞಾನಿಗಳು. ಈ ವಿಷಯವನ್ನೇ ಶಾಸ್ತ್ರಗಳೂ ಮೊಳಗುವುದು. ಸಮಸ್ತವನ್ನೂ ಪರಮಾತ್ಮನೇ ತನ್ನ ಸಂಕಲ್ಪಕ್ಕನುರೂಪವಾಗಿ ತನ್ನ ಸಂತೋಷಕ್ಕಾಗಿಯೇ ಆಯಾ ಚೇತನನನ್ನು ಸಾಧನವನ್ನಾಗಿ ಮಾಡಿಕೊಂಡು ಮಾಡಿಸುವನೆಂದು ತಿಳಿ. ನಿನಗೆ ಯಾವ ಪಾಪಲೇಪವೂ ಅಂಟುವುದಿಲ್ಲ. ಇವೇ ಮೊದಲಾಗಿ ಮೂರನೆಯ ಅಧ್ಯಾಯದಲ್ಲಿ ಉಪದೇಶಿಸಿ, ಕರ್ಮಯೋಗವನ್ನುಪದೇಶಿಸಿ, ಅರ್ಜುನನ್ನು ಕರ್ತವ್ಯೋನ್ಮುಖನನ್ನಾಗಿ ಮಾಡಿದನು.

''सारासारज्ञ एक श्चतुरमतिरिति ख्यातिपात्रार्जुनात्र ।
त्यक्त्वा सङ्गं समुद्यद्गुणकृतिमखिलां सत्वं आरोपय त्वम् ।।
सर्वाण्युक्तानि कर्माण्यपि मयि विनिवेश्यानि चेत्यब्रुवन् ये ।
सर्वत्र ज्ञानिन स्तेऽप्यतिशययशस'' श्चेति नाथो जगाद ।। ४

ಮೂಲ ಪಿರವಾಮೈತನ್ದಿಡತ್ತಾನೇಪಿರಕ್ಕುಂ ಪೆರುಮೈಹಳುಂ,
ತುರುವಾಕ್ಕಿರಿಶೈಹಳ್‌ತೂಯ್‌ಮತಿತನ್ನಾಲ್ ತುಲಂಗುಹೈಯುಂ,
ಇರವಾವುಯಿರ್‌ನಿಲೈಯುಂ ಕಂಡಿಡುಮುಲಹಿನ್ನಿಲೈಯುಂ,
ಮರೈವಾಳಿಮಾಯವನೇಯೆನಕ್ಕಿನ್ರರಿವಿತ್ತನನೇ ॥ 5

ಅರ್ಥ :- ಮರೈ-ವಾಳು = ವೇದಗಳಲ್ಲಿ ಬೆಳಗುವಂತಹ, ಮಾಯವನೇ = ತನ್ನ ಸಂಕಲ್ಪದಿಂದಲೇ ವಿಧವಿಧವಾಗಿ ಅವತರಿಸುವ ಪರಮಾತ್ಮನೇ, ಪಿರಿವಾಮೈ = ಮತ್ತೆ ಜನಿಸದೇ ಇರುವುದನ್ನು, ತಂದಿಡ = ಕೊಡುವುದಕ್ಕಾಗಿ (ಮೋಕ್ಷವನ್ನು ಕೊಡುವುದಕ್ಕೆ), ತಾನೇ = ಸಮಸ್ತ ಗುಣಭೂಷಿತನಾದ ತಾನೇ, ಪಿರಕ್ಕುಂ-ಪೆರುಮೈಹಳುಂ = ಅವತರಿಸುವ

ಮಾಹಾತ್ಮ್ಯ ಗಳನ್ನೂ, ತುರವಾ = ಬಿಡಬಾರದಾದ, ಕಿರಿಶೈಹಳ್ = ಕರ್ಮಗಳು, ತೂಯ್-ಮತಿಯಾಲ್ = ಪರಿಶುದ್ಧವಾದ ಜ್ಞಾನದಿಂದ, ತುಲಂಗುಹೈಯುಂ = ನಿರ್ಮಲವಾಗುವುದನ್ನೂ, ಇರವಾ = ನಶಿಸಿದ, ಉಯಿರ್ = ಆತ್ಮನ, ನಿಲೈಯುಂ = ನಿಷ್ಠೆಯ ಮಾರ್ಗವನ್ನೂ, ಕಂಡಿಡುಂ = ತಿಳಿಯುವಂತಹ, ಉಲಹಿನ್ = ಲೋಕದ, ನಿಲೈಯುಂ = ಸ್ಥಿತಿಯನ್ನೂ, ಎನಕ್ಕು = (ಮೋಹಗೊಂಡಿದ್ದ) ನನಗೆ, ಇನ್ರು = (ಸದಾಚಾರ್ಯಕಟಾಕ್ಷ ಪಡೆದ) ಈ ದಿನ, ಅರಿವಿತ್ತನನ್ = ಅರಿಯುವಂತೆ ಮಾಡಿದನು.

ತಾತ್ಪರ್ಯ :- ''ಪ್ರಸಂಗಾತ್ಸ್ವಸ್ವಭಾವೋಕ್ತಿಃ ಕರ್ಮಣೋಕರ್ಮತಾಸ್ಯಚ ।
ಭೇದೋಜ್ಞಾನಸ್ಯ ಮಾಹಾತ್ಮ್ಯಂ ಚತುರ್ಥೇಽಧ್ಯಾಯ ಉಚ್ಯತೇ ॥''

ಸಕಲ ವೇದ್ಯನೂ, ಸಮಸ್ತ ಚೇತನರನ್ನು ರಕ್ಷಿಸಲು ತಾನೇ ತನ್ನ ಸಂಕಲ್ಪದಿಂದ ವಿವಿಧವಾಗಿ ಅವತರಿಸುವವನೂ, ಆದ ಆ ಪರಮಾತ್ಮನೆಂಬುದನ್ನೂ, ತನ್ನನ್ನಾಶ್ರಯಿಸಿದ ಜೀವರು ಮತ್ತೊಮ್ಮೆ ಜನಿಸದೇ ಮುಕ್ತಿಯನ್ನು ಪಡೆಯುವಂತಾಗಲೆಂದು ತನ್ನ ಅವತಾರಮಹಿಮೆಯನ್ನೂ ಅವರವರಿಗೆ ಉಚಿತವಾದ ಕರ್ಮವನ್ನು ಬಿಡದೇ ಮಾಡಬೇಕೆಂಬುದನ್ನೂ, ಹಾಗೆ ಮಾಡುವ ಕರ್ಮವೂ ಸಹ ಫಲಸಂಗವಿಲ್ಲದೇ ಮಾಡಿದರೇನೇ ಪರಿಶುದ್ಧವಾಗುವುದೆಂಬುದನ್ನೂ, ನಿತ್ಯರಾದ ಜೀವಾತ್ಮರ ನಿಷ್ಠೆಯನ್ನು ಅರಿಯುವ ಲೋಕದ ಸ್ಥಿತಿಯನ್ನೂ ಸಹ ಸದಾಚಾರ್ಯರೂಪಿಯಾದ ಶ್ರೀಕೃಷ್ಣನು ತನ್ನ ಕೃಪಾಕಟಾಕ್ಷಕ್ಕೆ ಪಾತ್ರನಾದ ಅರ್ಜುನನಿಗೆ ಉಪದೇಶಿಸುವನು. (ಇದು 4ನೇ ಅಧ್ಯಾಯ)

**मायावी वेदजीवी वितरितु मपुनर्जन्मभावं मुकुन्दः ।**
**स्वाविर्भावानुभावान् स्वय मिह निखिलावर्ज्यकर्माणि चैव ।।**
**शुद्धज्ञानात्तशुद्धीन्यपि हतिरहितात्मस्थितिं लोकनिष्ठां ।**
**एवं प्रावेदयन्मे सुविशद मधुनाचार्यसम्प्रेक्षिताय ।। ५**

**ಮೂಲ : ಕಂಡೆಳಿತಾಂ ಕರುಮಮುಯಿರ್ ಕಾಟ್ಟುಂ ಕಡುಹುದಲುಂ ।**
**ಮಂಡಿಯ ತನ್ನಡಿಯಿಲ್ ಮನಂಕೊಳ್ಳುಂ ವರಿಶೈಹಳುಂ,**
**ಕಂಡರಿಯಾವುಯಿರೈಕಾಣಲುತ್ತ ನಿನ್ರೈವುಹಳುಂ,**
**ವಣ್ಣುವರೀಶನಿಯಂಬಿನನ್ ವಾಶವನ್ ಮೈಂದನುಕ್ಕೇ ॥ 6**

ಅರ್ಥ :- ಕಂಡ್ = ಅರಿತರೆ, ಎಳಿದಾಂ = ಸುಖಕರವಾದ, ಕರುಮಂ = ಕರ್ಮಯೋಗವು, ಉಯಿರ್ = ಆತ್ಮವನ್ನು, ಕಾಟ್ಟುಂಕಡುಹುದಲುಂ = ತೋರಿಸುವ ಶೀಘ್ರತೆಯನ್ನೂ, ಅದನ್ನಡಿಯಿಲ್ = ಆ ಯೋಗದ ಪ್ರಕಾರಗಳಲ್ಲಿ, ಮಂಡಿ = ಬಹಳ

ಆಸಕ್ತನಾಗಿ, ಮನಂ = ಮನಸ್ಸನ್ನೂ, ಕೊಳ್ಳುಂವರಿಶೈಹಳುಂ = ಇರಿಸುವ ಕರ್ಮಗಳನ್ನೂ, ಕಂಡರಿಯಾ = ಎಂದೂ ನೋಡಲಾಗದ ಉಯಿರ್ಯೆ = ಆತ್ಮನನ್ನು, ಕಾಣಲ್-ಉತ್ತ = ನೋಡುವುದನ್ನು ಹೊಂದಿದ, ನಿನ್ನೈವುಹಳುಂ = ಜ್ಞಾನಗಳನ್ನೂ, ವಾಶವನ್ = ಇಂದ್ರನ, ಮೈಂದನುಕ್ಕು = ಮಗನಿಗೆ (ಅರ್ಜುನನಿಗೆ) ವಣ್ = ಸುಂದರವಾದ, ತುವರ್ = ದ್ವಾರಕೆಗೆ, ಈಶನ್ = ಪ್ರಭುವಾದ ಗೀತಾಚಾರ್ಯನು, ಇಯಂಬಿನನ್ = ಹೇಳಿದನು.

ತಾತ್ಪರ್ಯ :- ''ಕರ್ಮಯೋಗಸ್ಯಸೌಕರ್ಯಂ ಶೈಘ್ರ್ಯಂ ಕಾಶ್ಚಿಗತದ್ವಿಧಾಃ ।
ಬ್ರಹ್ಮಜ್ಞಾನಪ್ರಕಾರಶ್ಚ ಪಂಚಮೇಽಧ್ಯಾಯ ಉಚ್ಯತೇ ॥''

ಜ್ಞಾನಯೋಗಕ್ಕಿಂತ ಕರ್ಮಯೋಗವು ಸುಲಭ. ಫಲವೂ ಬೇಗ ಲಭಿಸುವುದು. ಶಾಸ್ತ್ರವಿಹಿತವಾದುದನ್ನು ಭಗವತ್ಸೇವೆಯೆಂದು ಮಾಡುವುದರಿಂದ ರಜಸ್ತಮೋಗುಣಗಳು ಹೋಗಿ, ಮನಸ್ಸು ತಿಳಿಗೊಳ್ಳುವುದು. ಮನವು ಶುದ್ಧವಾಗುವುದರಿಂದ ಇತರ ಇಂದ್ರಿಯಗಳು ವಿಧೇಯವಾಗುವುವು. ನಿಜವಾದ ಆತ್ಮಸ್ವರೂಪವನ್ನು ಬಲ್ಲವನು ಇತರ ಎಲ್ಲಾ ಆತ್ಮಗಳ ಸ್ವರೂಪವೂ ಒಂದೇ ರೀತಿಯಾದುದು ಎಂದರಿಯುವನು. ಇದರಿಂದಾಗಿ ಆತ್ಮಸಾಕ್ಷಾತ್ಕಾರವೂ ಸುಲಭವಾಗುವುದು. ಇಂದ್ರಿಯಗಳೂ, ಪ್ರಾಣಗಳೂ ಕರ್ಮಸಂಬಂಧದಿಂದ ಜೀವನಿಗೆ ಸಹಕರಿಸುತ್ತವೆ. ಅವು ಮಾಡುವುದನ್ನು ಜೀವನೆಂದು ತಿಳಿಯಬಾರದು. ಸದಾಚಾರ್ಯರ ಉಪದೇಶದಿಂದ ಜೀವನು ತನ್ನ ಸ್ವರೂಪವನ್ನರಿಯಬೇಕು. ಶರೀರಗಳು ವಿಧವಿಧವಾಗಿದ್ದರೂ ಅವುಗಳಲ್ಲಿರುವ ಆತ್ಮರು ಸಮಾನರು ಅಂದರೆ ಜ್ಞಾನಸ್ವರೂಪರೂ, ಜ್ಞಾನಗುಣಕರೂ ಆಗಿ ಒಂದೇ ವಿಧವಾದವರೆಂಬುದು ದೃಢಪಡಿಸುವುದು. ಇದನ್ನೇ 5ನೇ ಅಧ್ಯಾಯದಲ್ಲಿ ವಿವರಿಸಿರುವುದು.

**आत्मालोके च शैघ्र्यं सुविदितसुकरोपात्तकर्मोदितं तत् ।**
**संसक्त स्तत्प्रकारोष्वधिकमपि मनः प्रापिका स्ताः क्रियाश्च ।।**
**दुष्प्रेक्ष्यामावलोकीकरणपरिकरज्ञानयोगप्रकारान् ।**
**रम्याया द्वारकाया अधिपति रवदद्वासवस्यात्मजाय ।।** ६

ಮೂಲ : **ಯೋಗಮುಯರ್ಚಿಯುಂ ಯೋಗಿಲ್‌ಸಮನಿಲ್ಯೆನಾಲ್ವಹೈಯುಂ,**
**ಯೋಗಿನುಪಾಯಮುಂ ಯೋಗುತನ್ನಾಲ್‌ವರುಂ ಪೊರುಳುಂ,**
**ಯೋಗುತನಿಲ್‌ರ್ತ್ತಿರಮಡ್ವೈಯೋಗುತನ್ಮುಕ್ಕಿಯಮುಂ,**
**ನಾಕಣ್ಣೈಯೋಗಿನವಿನ್ರನನ್ ನನ್ಮುಡಿವೀರನುಕ್ಕೇ ॥** 7

ಅರ್ಥ:- ಯೋಗ = ಯೋಗದ, ಮುಯರ್ಚಿಯುಂ = ಅಭ್ಯಾಸವನ್ನೂ, (ಜ್ಞಾನ ಕರ್ಮಯೋಗ ಸಾಧ್ಯವಾದ ಆತ್ಮಾವಲೋಕನರೂಪ ಯೋಗಾಭ್ಯಾಸವನ್ನು) ಯೋಗಿಲ್

= ಯೋಗದಲ್ಲಿರುವ, ನಾಲ್ವಹೈ = ನಾಲ್ಕು ವಿಧವಾದ, ಸಮ-ನಿಲ್ಯೆ = ಸಮವಾದ ನಿಷ್ಠೆಯನ್ನೂ, ಯೋಗಿಗ್-ಉಪಾಯಮುಂ = ಯೋಗದ ಸಾಧನಗಳನ್ನೂ, ಯೋಗು-ತನ್ನಾಲ್-ವರುಂ = ಯೋಗದಿಂದ ಸಿದ್ಧಿಸುವ, ಪೊರುಳುಂ = ಫಲಗಳನ್ನೂ, ಯೋಗು-ತನಿಲ್ = ಯೋಗಗಳಲ್ಲಿ, ತನ್-ತಿರಂ-ಉಡ್ಡೈ = ತನ್ನನ್ನೇ ವಿಷಯವಾಗಿಟ್ಟು ಕೊಂಡಿರುವ, ಯೋಗು-ತನ್-ಮುಕ್ಕಿಯಮುಂ = ಯೋಗದ ಮುಖ್ಯತೆಯನ್ನೂ, ನಲ್-ಮುಡಿ = ಒಳ್ಳೆಯ ಕಿರೀಟಧರನಾದ, ವೀರನುಕ್ಕು = ವೀರನಾದ ಅರ್ಜುನನಿಗೆ, ನಾಕಣೈ-ಯೋಗಿ = ನಾಗಶಯನ ಯೋಗಿಯೆನಿಸಿದ ಪರಮಾತ್ಮನು, ನವಿನ್ರನನ್ = ಉಪದೇಶಿಸಿದನು.

ತಾತ್ಪರ್ಯ :- ''ಯೋಗಾಭ್ಯಾಸವಿಧಿರ್ಯೋಗೀ ಚತುರ್ಧಾಯೋಗಸಾಧನಂ ।
ಯೋಗಸಿದ್ಧಿಸ್ಸ್ವಯೋಗಸ್ಯಪಾರಮ್ಯಂ ಷಷ್ಠ ಉಚ್ಯತೇ ॥''

ಜ್ಞಾನಕರ್ಮ ಸಾಧ್ಯವಾದ ಆತ್ಮಾವಲೋಕನರೂಪವಾದ ಯೋಗವನ್ನು ವಿಹಿತಸಮಯದಲ್ಲಿ ವಿಧಿಸಿರುವಂತೆ ಆಚರಿಸಬೇಕು. ಸಮದರ್ಶನ ನಿಷ್ಠೆಯು ನಾಲ್ಕು ವಿಧವಾಗಿದೆ. ಜೀವಾತ್ಮನು ಪ್ರಕೃತಿಸಂಬಂಧವಿಲ್ಲದ ಶುದ್ಧದೆಸೆಯಲ್ಲಿ ಜ್ಞಾನಸ್ವರೂಪನಾಗಿ ತೋರುವನು. ಇದರಿಂದ ಇತರ ಜೀವರೂ ಹೀಗೆಯೇ ಎಂಬ ಸಾಮ್ಯದರ್ಶನದ ಪರಿಪಕ್ವತೆಯುಂಟಾಗುವುದು. ಪುಣ್ಯ ಪಾಪಗಳನ್ನು ನೀಗಿಕೊಂಡು ಈಶ್ವರ ಸಾಮ್ಯತೆಯನ್ನು ಪಡೆಯುವನು. ಎಲ್ಲರೂ ಹೀಗೆಯೇ ಎಂದು ಎಲ್ಲ ಜೀವರಲ್ಲೂ ಸಮಾನತೆ ಮೂಡುವುದು. ಕರ್ಮಸಂಬಂಧವಿಲ್ಲದೆಯೂ ಜ್ಞಾನ ಸಂಕೋಚವಿಲ್ಲದೆಯೂ ಈಶ್ವರನಿಗೆ ಅಪೃಥಕ್ಸಿದ್ಧ ವಿಶೇಷಣರೂಪನಾಗಿ ಸಮದರ್ಶಿಯಾಗುವನು. ಸುಖದುಃಖಗಳೆರಡರಲ್ಲೂ ಸಮಾನ ಜ್ಞಾನವುಳ್ಳವನಾಗಿ, ದೋಷವನ್ನು ಬಿಟ್ಟು ವೈರಾಗ್ಯ ಪಡೆದು ಫಲ ಹೊಂದುವನು. ಹೀಗೆ ಸಾಧನಗಳನ್ನೂ, ಯೋಗಸಿದ್ಧಿಯಾಗಿ ಬರುವ ಫಲವಿಶೇಷವನ್ನೂ, ಅದರಲ್ಲೂ ಆ ಯೋಗ ತನ್ನನ್ನೇ ಕುರಿತು ಆದರೆ ಅತಿಶಯ ಮಹಿಮೆಯುಳ್ಳದಾಗುವುದೆಂಬುದನ್ನೂ ವಿಶದವಾಗಿ 6ನೆಯ ಅಧ್ಯಾಯದಲ್ಲಿ ಅರ್ಜುನನಿಗೆ ಉಪದೇಶಿಸಿರುನು ಪರಮಾತ್ಮ ಶ್ರೀಕೃಷ್ಣ.

योगाभ्यासं प्रभेदांश्चतुर इह समानस्थितींश्चापि योगे ।
योगोपायांश्च योगादधिगतपरमार्थांश्च योगेषु तेषु ॥
स्वात्मोद्देशैकयोगं सकलजनहितं मुख्यतां योगनिष्ठां ।
वीराग्रण्ये त्ववोचद्वरमकुटभृते भोगिपर्यङ्कयोगी ॥ ೬

ಮೂಲ : ತಾನಿನ್ರವುಣ್ಮೈಯೈ ತ್ತನಿಮಾಯ್ಯೆಮರ್ತ್ತನವುಂ,
ತಾನನ್ರಿಮಾಯ್ಯೆತನ್ನೈ ತವಿರ್ಪಾನ್ ವಿರಹತ್ತಮ್ಮೈಯುಂ,

ಮೇನಿನ್ರಬತ್ತರ್‌ಹಳ್ ನಾಲ್ವರಿಲ್ ಜ್ಞಾನಿರ್ತಮೇನ್ಮೈಹಳುಂ,
ತೇನಿನ್ರಶೆಜ್ಕಳಲಾನ್ ತೆಳಿವಿತ್ತನನ್ ಪಾರ್ತನುಕ್ಕೇ ॥ 8

**ಅರ್ಥ :-** ತೇನ್ = ಮಧುರರಸವು, ನಿನ್ರ = ಭರಿತವಾದ, ಶೆಂ-ಕಳಲಾನ್ = ಅರುಣಿತ ಚರಣನಾದ ಪರಮಪುರುಷಾರ್ಥನು, ತಾನ್ = ತಾನು, ನಿನ್ರ = ಇರುವ, ಉಣ್ಮೈಯ್ಯೈ = ಯಥಾರ್ಥತೆಯನ್ನೂ, ತರ್ = ತನ್ನ, ತನಿ = ಅಸದೃಶವಾದ, ಮಾಯ್ಯೆ = ಪ್ರಕೃತಿಯ, ಮರ್ರೈತ್ತನವುಂ = (ತೆರೆಯಂತೆ) ಮರೆಸುವಿಕೆಯನ್ನೂ, ಮಾಯ್ಯೈ-ತನ್ನೈ = ಆ ಮಾಯೆಯನ್ನು(ದಾಟಲು) ತಾನ್, ಅನ್ರಿ = ತಾನೇ ಅಲ್ಲದೆ, ವಿರಹು = ಬೇರೆ ಉಪಾಯವು, ಅತ್ತಮೈಯುಂ = ಇಲ್ಲದಿರುವುದನ್ನೂ, ಮೇಲ್-ನಿನ್ರ = ಮೇಲಾದವರೆಂದೆನಿಸಿಸುವ, ನಾಲ್ವರ್-ಬತ್ತರ್ ಹಳಿಲ್ = ನಾಲ್ಕುವಿಧ (ಆರ್ತ, ಜಿಜ್ಞಾಸು, ಅರ್ಥಾರ್ಥೀ, ಜ್ಞಾನೀ) ಭಕ್ತರಲ್ಲಿ, ಞಾನಿ-ತನ್ = ಜ್ಞಾನಿಯ, ಮೇನ್ಮೈಹಳುಂ = ಪ್ರಭಾವಗಳನ್ನೂ, ಪಾರ್ತನುಕ್ಕು = ಅರ್ಜುನನಿಗೆ, ತೆಳಿವಿತ್ತನನ್ = ವಿಶದವಾಗಿ ತಿಳಿಸಿದನು.

**ತಾತ್ಪರ್ಯ :-** ''ಸ್ವಯಾಥಾತ್ಮ್ಯ ಪ್ರಕೃತ್ಯಾ ಸ್ಯತಿರೋಧಿಶ್ಶರಣಾಗತಿಃ ।
ಭಕ್ತಭೇದಃಪ್ರಬುದ್ಧಸ್ಯ ಶ್ರೈಷ್ಠ್ಯಂ ಸಪ್ತಮ ಉಚ್ಯತೇ ॥

ಪರಬ್ರಹ್ಮನೂ, ಉಪಾಸ್ಯನೂ, ಸಮಸ್ತ ಶೇಷಿಯೂ, ಸರ್ವ ಕಾರಣನೂ, ಸರ್ವಾಧಾರನೂ, ಸರ್ವಶರೀರಿಯೂ ಸರ್ವಪ್ರಕಾರವಾಗಿಯೂ ಆಗಿರುವುದರಿಂದ ಸರ್ವಶಬ್ದವಾಚ್ಯನೂ, ಸರ್ವ ನಿಯಾಮಕನೂ, ಸಮಸ್ತ ಕಲ್ಯಾಣಗುಣನಿಧಿಯೂ ಆದ ಪುರುಷೋತ್ತಮನು ಶ್ರೀ ವಾಸುದೇವನೇ ; ಬೇರೆಯಲ್ಲ. ಇದೇ ಅವನ ಯಾಥಾತ್ಮ್ಯ. ಈ ಅರಿವು ತಿಳಿಗೊಂಡರೆ ಸಕಲಚೇತನರೂ ಉಜ್ಜೀವಿತರಾಗುವರು.

ಸತ್ವರಜಸ್ತಮೋಮಯವಾಗಿ ದೇಹೇಂದ್ರಿಯರೂಪವಾಗಿಯೂ, ಭೋಗ್ಯವಾಗಿಯೂ, ಅನಾದಿಕಾಲದಿಂದ ಪ್ರವೃತ್ತವಾದ ದುಷ್ಕೃತಪ್ರವಾಹಕ್ಕೆ ಕಾರಣವಾಗಿಯೂ, ಪರಮಾತ್ಮನಿಗೆ ಶೇಷಭೂತವಾಗಿಯೂ, ಅವನ ವಿಚಿತ್ರ ಸೃಷ್ಟಿಗೆ ಉಪಕರಣವಾಗಿಯೂ ಇರುವ ಭಗವನ್ಮಾಯೆಯೆಂಬ ಪ್ರಕೃತಿಯೇ ಮೇಲೆಹೇಳಿದ ಭಗವದ್ಯಾಥಾತ್ಮ್ಯವನ್ನು ಮರೆಮಾಡುವುದು.

ಈ ಮರೆಸುವ ಮಾಯೆಯನ್ನು ದಾಟಿ ಪರಮಾತ್ಮೋಪಾಸನೆ ಮಾಡಲು ಇರುವ ಸಾಧನವೆಂದರೆ ಅವರ ಅಡಿದಾವರೆಗಳಲ್ಲಿ ಶರಣುಹೋಗುವುದೊಂದೇ ಮತ್ತಾವುದರಿಂದಲೂ ಅದು ನಿವೃತ್ತಿಯಾಗುವುದಿಲ್ಲ.

ಈರೀತಿ ಶರಣಾಗತರಾಗಿ ಉಪಾಸನೆ ಮಾಡುವವರು ನಾಲ್ಕುವಿಧವಾಗಿರುವರು. ಅವರಲ್ಲಿ ಭಗವದನುಭವವನ್ನೇ ಪರಮಫಲವಾಗಿ ಕೊಂಡಿರುವ ಜ್ಞಾನಿಯೆಂದೆನೆಸಿ

ಕೊಂಡವನೇ ಎಲ್ಲರಿಗಿಂತ ಅತ್ಯುತ್ತಮನು. ಹೀಗೆ ಈ ವಿಷಯಗಳನ್ನು 7ನೆಯ ಅಧ್ಯಾಯದಲ್ಲಿ ತಿಳಿಯಾಗಿ ಉಪದೇಶಿಸಿರುವನು ಆ ಕರುಣಾಮಯ ಪರಮಾತ್ಮ ಶ್ರೀಕೃಷ್ಣ.

**याथार्थ्यं स्वीय मात्मप्रकृतिनिरुपमाच्छादकत्वं च तां च ।**
**माया मात्मैकतार्यां समधिकचतुरात्मीयभक्तेषु तेषु ।।**
**''ज्ञानी त्वात्मैव मे'' हीत्यसदृशमहिमोत्कर्षतां ज्ञानिन श्च ।**
**माध्वीपूर्णारुणश्रीचरण उपदिदेशात्र पार्थाय शौरिः ॥ ८**

**ಮೂಲ : ಆರಾದಶೆಲ್ವಮುಮಾರುಯಿರ್ ಕಾಣುಮರುಂಪಯನುಂ,**
**ಪೇರಾದು ತನ್ಕಳಲ್ ಕೀಳಮರುಂ ಪೆರುವಾಳ್‌ಚ್ಚಿಹಳುಂ,**
**ಶೋರಾದುಹಂದವರ್ ತೂಮತಿಕೊಳ್ವದುಂ ಶೆಯ್‌ವನವುಂ,**
**ತೋರಾವಿಶಯನುಕ್ಕುತ್ತಿರುನಾರಣನ್ ಶೆಪ್ಪಿನನೇ ॥ 9**

**ಅರ್ಥ** :- ತಿರುನಾರಾಯಣನ್ = ಶ್ರೀಮನ್ನಾರಾಯಣನು, ಆರಾದ = ತೃಪ್ತಿಯಾಗದ, ಶೆಲ್ವಮುಂ = ಐಶ್ವರ್ಯವನ್ನೂ, ಆರ್ = ತೃಪ್ತಿಕರವಾದ, ಉಯಿರ್ = ಆತ್ಮನನ್ನು, ಕಾಣುಂ = ಸಾಕ್ಷಾತ್ಕರಿಸುವಂತಹ, ಅರುಂ = ದುರ್ಲಭವಾದ, ಪಯನುಂ = ಫಲವನ್ನೂ, ಪೇರಾದ = ಪುನರ್ಜನ್ಮವಿಲ್ಲದಂತಹ, ತ್ತ-ಕಳಲ್-ಕೀಳ್ = ತನ್ನ ಪಾದಗಳಡಿಯಲ್ಲಿ, ಅಮರುಂ = ಹೊಂದಿಕೊಂಡು ಸೇವಿಸುವಂತಹ, ಪೇರು-ವಾಳ್‌ಚ್ಚಿಹಳುಂ = ಮಹಾ ಪುರುಷಾರ್ಥಗಳನ್ನೂ, ಶೋರಾದು = ಅನವರತವೂ, ಉಹಂದವರ್ = ಆಸೆಪಡುವವರು, ಶೆಯ್‌ವನವುಂ = ಅನುಷ್ಠಿಸತಕ್ಕವನ್ನೂ, ತೋರಾ = ಯಾರಿಗೂ ಸೋಲದ, ವಿಶಯನುಕ್ಕು = ಅರ್ಜುನನಿಗೆ, ಶೆಪ್ಪಿನನ್ = ಹೇಳಿದನು.

**ತಾತ್ಪರ್ಯ** :- ''ಐಶ್ವರ್ಯಾಕ್ಷರ ಯಾಥಾತ್ಮ್ಯ ಭಗವಚ್ಚರಣಾರ್ಥಿನಾಂ ।
ವೇದ್ಯೋಪಾದೇಯ ಭಾವಾನಾಮಷ್ಟಮೇ ಭೇದ ಉಚ್ಯತೇ ।।''

ಇಂದ್ರ, ಬ್ರಹ್ಮ, ರುದ್ರಾದಿ ದೇವತೆಗಳ ಭೋಗಕ್ಕಿಂತ ಮೇಲಾದ ಭೋಗವೆಂಬ ಐಶ್ವರ್ಯವನ್ನೂ, ಪ್ರಕೃತಿಯ ಸಂಬಂಧವನ್ನೂ ನೀಗಿಕೊಂಡು, ಪರಿಶುದ್ಧವಾದ ಆತ್ಮ ಸ್ವರೂಪ ಸಾಕ್ಷಾತ್ಕಾರವೆಂಬ ಕೈವಲ್ಯವನ್ನೂ ಮತ್ತು ಪರಮಪುರುಷನಾದ ಶ್ರೀಮನ್ನಾರಾಯಣನ ಅಡಿದಾವರೆಗಳನ್ನೂ ಕ್ಷಣಕಾಲವೂ ಬಿಟ್ಟಿರದೆ ಸರ್ವತ್ರ, ಸರ್ವದಾ ಸರ್ವಾವಸ್ಥೆಯಲ್ಲೂ ಸಕಲ ವಿಧ ಕೈಂಕರ್ಯಗಳನ್ನೂ ಮಾಡಬಹುದಾದ ಸನ್ನಿವೇಶವೆಂಬ ಮೋಕ್ಷವನ್ನೂ ಇಚ್ಛಿಸುವ ಭಗವದ್ಭಕ್ತರು ತಿಳಿಯಬೇಕಾದ ಮತ್ತು ಕೈಗೊಳ್ಳಬೇಕಾದುವನ್ನೂ, ಅವರವರ ಇಷ್ಟಫಲಾನು ರೂಪವಾದ ಪರಮಪುರುಷನ ಚಿಂತೆ-ಚರಮ ದೆಸೆಯಲ್ಲಿನ ಸ್ಮೃತಿ, ಮತ್ತು ಗತಿಚಿಂತನಾದಿ ಗಳನ್ನೂ ಆಯಾ ಅಧಿಕಾರಾನುಗುಣವಾಗಿ 8ನೇ ಅಧ್ಯಾಯದಲ್ಲಿ ವಿಶದವಾಗಿ ಉಪದೇಶಿಸಿರುವನು.

ऐश्वर्यं चानलंधीकरमखिलमलंबुद्धिपूर्णं फलं तत् ।
दुष्प्रापं चात्मसाक्षात्कृतिमदनुभवं वीतभूयोभवं च ।।
सेवास्स्वांघ्रो रधस्तादभिलषितसदासेवनेन्छानुरूपाः ।
श्रीमन्नारायणोऽस्मा अविजितविजयायाह सर्वानुकम्पी ।। ९

ಮೂಲ : ತನ್ಮೇನ್ಮೈಯುಂ ತನ್‌ಪಿರಪ್ಪಿಲ್ ತಳರಾತ್ತನಿಮೆಯ್ಯೈಯುಂ,
ಪನ್ಮೇನಿ ನಣ್ಣಿನನ್ಪಾಲ್ ಪಿರಿಯಾವನ್ಬರಾಶ್ಯೈಹಳುಂ,
ಪುನ್ಮೇನಿ ವಿಣ್ಣವರ್‌ಪಾಲ್ ಪುರಿಯಾದತನ್ಪತ್ತಿಯ್ಯೈಯುಂ,
ನನ್ಮೇನಿ ನಾರಣನ್‌ತಾನ್ ನರನುಕ್ಕು ನವಿನ್ರನನೇ ॥ 10

ಅರ್ಥ :- ನಲ್-ಮೇನಿ = ದಿವ್ಯವೂ ಮಂಗಳಕರವೂ ಆದ ವಿಗ್ರಹವುಳ್ಳ, ನಾರಣ್ = ನಾರಾಯಣನು, ತಾನ್ = ತಾನೇ, ತನ್-ಮೇನ್ಮೈಯುಂ = ತನ್ನ ಉತ್ಕರ್ಷವನ್ನೂ, ತನ್-ಪಿರಪ್ಪಿಲ್ = ತನ್ನ ಅವತಾರದಲ್ಲಿ, ತಳರಾ = ಕಡಿಮೆಯಾಗದ, ತನಿಮ್ಯೈಯ್ಯೈಯುಂ = ಇತರ ವೈಲಕ್ಷಣ್ಯವನ್ನೂ, ಪಲ್-ಮೇನಿ = ಬಹುವಿಧ ಶರೀರಗಳನ್ನೂ, ನಣ್ಣಿನನ್-ಪಾಲ್ = ಪಡೆದವನ ವಿಷಯದಲ್ಲಿ, ಪಿರಿಯಾ = ಅಗಲದ, (ಬೇರೆಯಾಗದ) ಅನ್ಬರ್-ಆಶ್ಯೈಹಳುಂ = ಪ್ರೀತಿಯುಳ್ಳವರ ಪ್ರೀತಿಯನ್ನೂ, ಪುಲ್-ಮೇನಿ = ಅತ್ಯಲ್ಪ ಶರೀರಗಳುಳ್ಳ, ವಿಣ್ಣವರ್‌ಪಾಲ್ = ದೇವತೆಗಳ ವಿಷಯದಲ್ಲೂ, ಪುರಿಯಾದ = ಪ್ರವರ್ತಿಸದ, ತನ್ = ಸ್ವ ವಿಷಯವಾದ, ಪತ್ತಿಯ್ಯೈಯುಂ = ಪರಭಕ್ತಿಯ ಸ್ವರೂಪವನ್ನೂ, ನರನುಕ್ಕು = ಅರ್ಜುನನಿಗೆ, ನವಿನ್ರಾನ್ = ಹೇಳಿದನು.

ತಾತ್ಪರ್ಯ :- ''ಸ್ವಮಹಾತ್ಮ್ಯಂ ಮನುಷ್ಯತ್ವೇ ಪರತ್ವಂ ಚ ಮಹಾತ್ಮನಾಂ ।
ವಿಶೇಷೋ ನವಮೇ ಯೋಗೋ ಭಕ್ತಿರೂಪಃ ಪ್ರಕೀರ್ತಿತಃ ॥

ಶ್ರೀಕೃಷ್ಣನು ತಾನು ಮಾನುಷಾವತಾರವರ್ತಿದಾಗಲೂ ಅಂತೆಯೇ ಇತರ ಅವತಾರಗಳಲ್ಲೂ ಅತಿಮಾನುಷನೆನಿಸಿಕೊಂಡು, ನಿರವಧಿಕ ಮಹಿಮೆಯುಳ್ಳವನೂ, ಪರತ್ವನಿಷ್ಕರ್ಷಕ ಸಮಸ್ತಗುಣ ಪರಿಪೂರ್ಣನೂ, ಆಗಿರುವುದನ್ನೂ, ಜ್ಞಾನಿಗಳಾದ ಮಹಾತ್ಮರ ವಿಶೇಷವನ್ನೂ ಮತ್ತು ಭಕ್ತಿರೂಪವಾದ ಉಪಾಸನಾ ಸ್ವರೂಪವನ್ನೂ ಸಹ 9ನೆಯ ಅಧ್ಯಾಯದಲ್ಲಿ ವಿಶದವಾಗಿ ಉಪದೇಶಿಸಿರುವನು.

श्रीमानप्राकृतात्मा स्वय मतुलसमुत्कर्ष मात्मावतारे ।
वैलक्षण्यं त्वनूनं धृतविविधतनौ प्रीति मेत त्सुवित्सु ।।

भक्तिं त्यक्ताल्पकायत्रिदशपरिषदि स्वं प्रतीतां तदीयां ।
सर्वं चैवं नराय स्वपरहितपरः प्राह नारायणोऽस्मै ॥ १०

ಮೂಲ : ಎಲ್ಲೈಯಿಲಾದ ತನ್ ಶೀಲಮುಂ ಇನ್ನಮುದಕ್ಕಡಲುಂ,
ಎಲ್ಲೈಯಿಲಾದ ವಿಬೂತಿಯೆಲಾಂ ತನದಾನವ್ವೈಯುಂ,
ಎಲ್ಲೈಯಿಲ್‌ಪತ್ತಿತನ್ನೈ ಎಳುವಿಕ್ಕತ್ತಿರುವರುಳಾಲ್,
ಎಲ್ಲೈಯಿಲ್ ಈಶನಿಯಂಬಿನನ್ ಇಂದಿರನ್ ಮೈಂದನುಕ್ಕೇ ॥ 11

ಅರ್ಥ :- ಎಲ್ಲೈ-ಇಲ್-ಈಶನ್ = ನಿರವಧಿಕೈಶ್ವರ್ಯಶಾಲಿಯಾದ ಸರ್ವೇಶ್ವರನು, ತಿರು-ಅರುಳಾಲ್ = ನಿರ್ವ್ಯಾಜಕಾರುಣ್ಯದಿಂದ, ಎಲ್ಲೈಯಿಲಾದ = ಎಲ್ಲೆಯೇ ಇಲ್ಲದಂತಹ, ಪತ್ತಿ-ತನ್ನೈ = ಭಕ್ತಿಯನ್ನು ಎಳುವಿಕ್ಕ = ಉಂಟಾಗುವುದಕ್ಕೂ, ವೃದ್ಧಿಪಡಿಸುವುದಕ್ಕೂ, ಎಲ್ಲೈ-ಇಲಾದ = ಅಪಾರವಾದ, ತನ್ = ತನ್ನ, ಶೀಲಮುಂ = ಸೌಶೀಲ್ಯವನ್ನೂ, ಇನ್ = ಭೋಗ್ಯವಾದ, ಅಮುದ-ಕಡಲುಂ = ಅಮೃತಸಾಗರದಂತಿರುವ ಕಲ್ಯಾಣಗುಣಗಳನ್ನೂ, ಎಲ್ಲೈಯಿಲಾದ = ಅಸಂಖ್ಯೇಯವಾದ, ಎಲ್ಲಾಂ = ಎಲ್ಲವಸ್ತುಗಳೂ, ತನದ್ = ತನ್ನದಾದ, ವಿಬೂತಿ-ಆನ-ಅವ್ವೈಯುಂ = ವಿಭೂತಿಯಾದ ರೀತಿಯನ್ನೂ, ಇಂದಿರನ್ = ದೇವೇಂದ್ರನ, ಮೈಂದನುಕ್ಕು = ಮಗನಾದ ಅರ್ಜುನನಿಗೆ, ಇಯಂಬಿನನ್ = ಹೇಳಿದನು.

ತಾತ್ಪರ್ಯ :- 'ಸ್ವಕಲ್ಯಾಣಗುಣಾನಂತ್ಯಕೃತ್ಸ್ನಸ್ವಾಧೀನತಾಮತಿಃ ।
ಭಕ್ತ್ಯುತ್ಪತ್ತಿವಿವೃದ್ಧ್ಯರ್ಥಾ ವಿಸ್ತೀರ್ಣಾದಶಮೋದಿತಾ ॥''

ಶ್ರೀಕೃಷ್ಣಪರಮಾತ್ಮನು ತನ್ನ ಸ್ವಾಭಾವಿಕವೂ, ನಿರವಧಿಕವೂ ಆದ ಐಶ್ವರ್ಯಾದಿ ಸಮಸ್ತ ಕಲ್ಯಾಣ ಗುಣಗಳನ್ನೂ, ಚೇತನಾಚೇತನಾತ್ಮವಾದ ಇಡೀ ಜಗತ್ತೇ ತನಗೆ ಶರೀರವಾಗಿರುವುದನ್ನೂ ಮತ್ತು ಅದಕ್ಕೆ ತಾನು ಆತ್ಮಭೂತನಾಗಿ ಅದರ ಸ್ವರೂಪ ಸ್ಥಿತಿ ಪ್ರವೃತ್ತಿಗಳೆಲ್ಲವೂ ತನ್ನಧೀನವೆಂಬುದನ್ನೂ ವಿಶದವಾಗಿ 10ನೆಯ ಅಧ್ಯಾಯದಲ್ಲಿ ಅರ್ಜುನನಿಗೆ ಉಪದೇಶಿಸಿರುವನು. ಈ ಉಪದೇಶವನ್ನು ಚೆನ್ನಾಗಿ ಅರಿತವರಿಗೆ ತನ್ನಷ್ಟಕ್ಕೆ ತಾನೇ ಆ ಭಗವಂತನಲ್ಲಿ ಭಕ್ತಿಯುಂಟಾಗುವುದು ಮತ್ತು ಅವನ ಅತಿಮಾನುಷವಾದ ಆಶ್ಚರ್ಯ ಕ್ರಿಯೆಗಳನ್ನೇ ಪ್ರಶಂಸಿಸುತ್ತಾ ಕಾಲ ಕಳೆಯುವಂತೆಯೂ ಅಂತಹ ಗುಣಾನುಭವ ಮಾಡದ ಕ್ಷಣಕಾಲವೂ ಕೂಡ ಜೀವಿಸಿರಲಾಗುವುದಿಲ್ಲವೆಂಬುವಷ್ಟು ಭಕ್ತಿಯೂ ಬೆಳದು ಉಜ್ಜೀವಿಸಲು ತುಂಬ ನೆರವಾಗುವುದೆಂದೇ ಇಷ್ಟು ವಿಸ್ತಾರವಾಗಿ ಉಪದೇಶಿಸುದುದು. ಇದೇ ಇದರ ಪರಮೋದ್ದೇಶ್ಯ.

श्रीकारुण्येन भक्तिं निरवधि मुदयार्थं विवृध्द्यर्थमस्याः ।
सौशील्यं च स्वकीयं निरवधि सुगुणापारभोग्यामृताब्धिम् ॥

सर्वामेतां विभूतिं निरवधिविभवा मात्ममात्राधिनाथां ।
निस्सीमैश्वर्यशाली हरि रमरपते र्व्याजहारात्मजाय ।। ११

ಮೂಲ : ಎಲ್ಲಾಂತನಕ್ಕುರುವಾಯಿಲಂಗುಂವಕ್ಕೈ ತಾನುರೈತ್ತು,
ಶೊಲ್ಲಾಲರಿಂದದ್ ಶೋರಾಮಲ್ ಕಂಡಿಡವೇಂಡುಮೆನ್ರು,
ವಿಲ್ಲಾಳನುಕ್ಕನ್ರು ಮೆಯ್‌ಕ್ಕಣ್ ಕೊಡುತ್ತಿದುವೇರುಮುಂಡೋ ?
ನಲ್ಲಾಹರ್‌ಹಳ್ ಕಾಣ್ಬರೆನ್ರುಂ ನವಿನ್ರಾನ್ ಎಂಗಳ್ ನಾಯಕನೇ ॥ 12

ಅರ್ಥ :- ಎಂಗಳ್-ನಾಯಕನ್ = ನಮ್ಮ ನಾಯಕನು, ಎಲ್ಲಾಂ = ಎಲ್ಲವೂ, ತನಕ್ಕು = ತನಗೆ, ಉರುವಾಯ್ = ಶರೀರವಾಗಿ, ಇಲಂಗುಂ-ವಹೈ = ಬೆಳಗುವ ರೀತಿಯನ್ನೂ, ತಾನ್ = ತಾನು, ಉರೈತ್ತು = ಉಪದೇಶಿಸಿ, ಶೊಲ್ಲಾಲ್ = (ಶ್ರೀಕೃಷ್ಣನ) ಉಕ್ತಿಗಳಿಂದ, ಅರಿಂದದ್ = ತಿಳಿದುದನ್ನೂ, ಶೋರಾಮಲ್ = ಬಿಡದೆ, ಕಂಡಿಡವೇಂಡುಂ = ಸಾಕ್ಷಾತ್ಕರಿಸಬೇಕು, ಎನ್ರು = ಎಂದು ಪ್ರಾರ್ಥಿಸಿದ, ವಿಲ್ಲಾಳನುಕ್ಕು = ಬಿಲ್ಲಾಳನೆನಿಸಿದ ಅರ್ಜುನನಿಗೆ, ಅನ್ರು = ಆಗ, ಮೆಯ್-ಕಣ್ = ದಿವ್ಯವಾದ ಕಣ್ಣನ್ನು, ಕೊಡುತ್ತು = ಕೊಟ್ಟು, ಇದು = ಇದು, ವೇರುಂ = ಭಕ್ತಿಗಿಂತ ಸಾಧನ ಬೇರೊಂದು, ಉಂಡೋ ? = ಉಂಟೋ ?, ನಲ್ಲಾರ್‌ಹಳ್ = ಸಾಧುಗಳು, ಕಾಣ್ಬರ್ = ನೋಡುವವರು, ಎನ್ರುಂ = ಎಂದೂ, ನವಿನ್ರಾನ್ = ಹೇಳಿದನು.

ತಾತ್ಪರ್ಯ :- "ಏಕಾದಶೇಸ್ವಯಾಥಾ ಸಾಕ್ಷಾತ್ಕಾರಾವಲೋಕನಂ ।
ವ್ಯಕ್ತಮುಕ್ತಾವಿದಿಪ್ರಾಪ್ತ್ಯೋಃ ಭಕ್ತ್ಯೇಕೋಪಾಯತಾತಥಾ ॥"

ಪರಮ ಪುರುಷನಾದ ಶ್ರೀಕೃಷ್ಣನು ತನ್ನ ಅತಿವಿಲಕ್ಷಣವಾದ ಸ್ವಭಾವವನ್ನೂ ನಿರಂಕುಶ ಐಶ್ವರ್ಯವನ್ನೂ ಮತ್ತು ಚೇತನಾಚೇತನಾತ್ಮಕಸರ್ವ ಜಗತ್ತೂ ತನಗೆ ಶರೀರವಾಗಿಯೂ, ತಾನು ಅದಕ್ಕೆ ಆತ್ಮಭೂತನಾಗಿಯೂ ಇರುವುದನ್ನೂ ವಿಸ್ತಾರವಾಗಿ ಉಪದೇಶಿಸಿದ ಮೇಲೆ ಅರ್ಜುನನು ಆ ಪರಮಾತ್ಮನನ್ನು ಯಥಾವತ್ತಾಗಿ ನೋಡಿ, ಆನಂದಿಸಬೇಕೆಂದು ಇಚ್ಛಿಸಲು, ಆಗ ನಿರವಧಿಕಾತಿಶಯ ದಯಾೌದಾರ್ಯ ಸೌಶೀಲ್ಯ ವಾತ್ಸಲ್ಯಾದ್ಯನೇಕ ಗುಣ ಮಹೋದಧಿಯಾದ ಪುರುಷೋತ್ತಮನು ತನ್ನ ನಿಜರೂಪವನ್ನು ನೋಡಲು ದಿವ್ಯ ಚಕ್ಷುಸ್ಸನ್ನು ಕೊಟ್ಟು ಅವನಿಗೆ ತೋರಿಸಿದುದನ್ನೂ ಮತ್ತು ಜ್ಞಾನವೂ-ದರ್ಶನವೂ ಪ್ರಾಪ್ತಿಯೂ ಸಹ ಕೇವಲ ಸ್ವವಿಷಯ ಭಕ್ತಿಯೊಂದರಿಂದಲೇ ಲಭ್ಯವಾಗತಕ್ಕವೆಂಬುದನ್ನೂ 11ನೆಯ ಅಧ್ಯಾಯದಲ್ಲಿ ಸ್ಪಷ್ಟವಾಗಿ ಅಪ್ಪಣೆ ಕೊಡಿಸಿರುವನು.

सर्वस्वं नायको न स्स्वतनु रिति लसत्तत्प्रकारं ब्रुवन् सन् ।
साक्षात्कर्तुं विभूतिं सपदि तदुदितां प्रार्थयामास धन्वी ॥
दत्वास्मै दिव्यचक्षुः कि मुचित मितर त्साधनं वास्ति भक्तेः ।
साक्षात्कुर्वन्ति सन्त स्त्विति च सुविशदं प्राब्रवीत् वासुदेवः ॥ १२

ಮೂಲ : ತನ್‌ಕಳಲಿಲ್‌ಪತ್ತಿತ್ತಾಳಾದದುಮದಿನ್‌ಕಾರಣಮಾಂ,
ಇನ್‌ಗುಣರ್‌ಶಿಂದೈಯು ಮೀದರಿಯಾರ್‌ಕ್ಕವ್ವಡಿಮೈಹಳುಂ,
ತನ್‌ಕರುಮಂಗಳರಿಯಾದವರ್ಕ್ಕುಲಗುನಿಲೈಯುಂ,
ತನ್‌ಕಳಲನ್ಬರ್ಕ್ಕು ನಲ್ಲವನ್ ಶಾತ್ತಿನನ್ ಪಾರ್ತನುಕ್ಕೇ ॥ 13

ಅರ್ಥ :- ತನ್-ಕಳಲ್-ಅನ್ಬರ್ಕ್ಕು = ತನ್ನ ಚರಣಗಳಲ್ಲಿ ಅತಿಪ್ರೀತಿಯುಳ್ಳವರಿಗೆ ನಲ್ಲವನ್ = (ಅತ್ಯಂತ ಪ್ರೀತನಾದ) ಸಾಧುತಮನಾದ ಪರಮಪುರುಷನು, ತನ್-ಕಳಲಿಲ್ = ತನ್ನಡಿಗಳಲ್ಲಿ, ಪತ್ತಿ = (ಮಾಡುವ) ಭಕ್ತಿಯೋಗವು, ತಾಳಾದದುಂ = ಫಲ ವಿಳಂಬವಾಗದಿರುವುದನ್ನೂ, ಅದಿನ್ = ಆ ಭಕ್ತಿಯೋಗಕ್ಕೆ, ಕಾರಣಂ-ಆಂ = ಸಾಧನವಾಗುವ, ಇನ್ = ಭೋಗ್ಯವಾದ, ಗುಣರ್ = ಗುಣವುಳ್ಳವರ, ಶಿಂದೈಯುಂ = ಅಭ್ಯಾಸವನ್ನೂ, ಈದ್ = ಈ ಗುಣಚಿಂತನೆಯನ್ನು, ಅರಿಯಾದಾರ್ಕ್ಕು = ಅರಿಯದವರಿಗೆ, ಅ-ಅಡಿಮೈಹಳುಂ = ಆ ಕೈಂಕರ್ಯಗಳನ್ನೂ, ತನ್‌ಕರುಮಂಗಳ್-ಅರಿಯಾದವರ್ಕ್ಕು = (ಮೇಲೆ ಹೇಳಿದ) ಭಗವತ್ಕರ್ಮಗಳನ್ನು ಅರಿಯದವರಿಗೆ, ಲಗು-ನಿಲೈ= ಲಘುವಾದ ನಿಷ್ಠೆಯನ್ನೂ, (ಆತ್ಮಸ್ವಭಾವಾನುಸಂಧಾನರೂಪವಾದ ಆತ್ಮನಿಷ್ಠೆಯನ್ನೂ) ಪಾರ್ತನುಕ್ಕು = ಅರ್ಜುನನಿಗೆ, ಶಾತ್ತಿನನ್ = ವಿಶದವಾಗಿ ಉಪದೇಶಿಸಿದನು.

ತಾತ್ಪರ್ಯ :- ''ಭಕ್ತೇಃಶ್ರೈಷ್ಠ್ಯಮುಪಾಯೋಕ್ತಿಃ ಅಶಕ್ತಸ್ಯಾತ್ಮನಿಷ್ಠತಾ ।
ತತ್ಪ್ರಕಾರಸ್ತ್ವತಿಪ್ರೀತಿಃ ಭಕ್ತೇರ್ದ್ವಾದಶ ಉಚ್ಯತೇ ॥''

ಆತ್ಮ ಪ್ರಾಪ್ತಿಗೆ ಸಾಧನವಾದ ಆತ್ಮೋಪಾಸನ (ಜ್ಞಾನಯೋಗ)ಕ್ಕಿಂತ ಪರಮಾತ್ಮಪ್ರಾಪ್ತಿಗೆ ಸಾಧನವಾದ ಭಕ್ತಿರೂಪವಾದ ಭಗವದುಪಾಸನವು ಅತಿ ಸುಕರವೂ ಶೀಘ್ರ ಫಲದಾಯಕವೂ ಆಗಿರುವುದರಿಂದ ಅತಿ ಶ್ರೇಷ್ಠವೆಂದೂ, ''ಅಥ ಚಿತ್ತಂ ಸಮಾಧಾತುಂ'' ಮೊದಲಾಗಿ 2 ಶ್ಲೋಕಗಳಿಂದ ಆ ಭಕ್ತಿಯೋಗದ ಉಪಾಯವನ್ನೂ, ಭಗವಂತನಲ್ಲಿ ಚಿತ್ತವನ್ನು ನೆಲೆಗೊಳಿಸಲು ಆಗದವರಿಗೆ ಭಗವದ್ಗುಣಾನುಭವವನ್ನೂ, ಅದರಲ್ಲೂ ಅಶಕ್ತರಿಗೆ ಪ್ರೀತಿಪೂರ್ವಕನಾದ ಭಗವದಂತರಂಗ ಕೈಂಕರ್ಯಗಳನ್ನೂ, ಅದರಲ್ಲೂ ಅಸಮರ್ಥನಾದವನಿಗೆ ಆತ್ಮನಿಷ್ಠೆಯನ್ನೂ, ಅದರ ಪ್ರಕಾರಗಳನ್ನೂ, ಕೊನೆಗೆ

ಭಕ್ತನಾದವನಲ್ಲಿ ತನಗಿರುವ ಅತಿ ಪ್ರೀತಿಯನ್ನೂ 12ನೆಯ ಅಧ್ಯಾಯದಲ್ಲಿ ವಿಶದಪಡಿಸಿರುವನು ಶ್ರೀಕೃಷ್ಣ.

**भक्ति स्स्वाङ्घ्रिसमर्पिताऽऽशुफलदा ह्येषा विलम्बाक्षमा ।**
**तस्यास्साधन मेव भोग्यगुणिनो ध्यानं तदज्ञानिनाम् ।।**
**कैङ्कर्याणि लघु स्स्वकर्ममतिहीनाना मुपायस्त्विति ।**
**श्रीश स्स्वीयपदप्रियप्रियतमः पार्थाय चोपादिशत् ।। १३**

**ಮೂಲ : ಊನಿನ್ಪಡಿಯು ಮುಯಿರಿನ್ ಪಿರವುಮುಯಿರ್ ಪೆರುವಾರ್,**
**ಞಾನಂಪೆರುವಹೈಯುಂ ಞಾನಮೀನ್ರವುಯಿರ್ ಪಯನುಂ,**
**ಊನಿನ್ರದರ್ಕಡಿಯುಂ ಉಯಿರ್ ವೇರಿಡುಮುಳ್ ವಿರಹುಂ,**
**ತೇನಿನ್ರಪಾದನ್ ತೆಳಿವಿತ್ತನನ್ ಶಿಲ್ಯೈಪ್ಪಾರ್ತನುಕ್ಕೇ ॥ 14**

**ಅರ್ಥ** :- ತೇನ್-ನಿನ್ರ-ಪಾದನ್ = ಮಕರಂದ ಭರಪಾದಾರವಿಂದನಾದ ವಾಸುದೇವನು, ಊನಿನ್-ಪಡಿಯುಂ = ಶರೀರದ ಪ್ರಕಾರವನ್ನೂ, ಉಯಿರಿನ್-ಪಿರವುಂ = ಆತ್ಮದ ವಿಭಾಗವನ್ನೂ, ಉಯಿರ್-ಪೆರುವಾರ್ = ಆತ್ಮವನ್ನು ಪಡೆದವರ, ಞಾನಂ-ಪೆರುವಹೈಯುಂ = ಜ್ಞಾನವನ್ನು ಪಡೆಯುವ ಪ್ರಕಾರವನ್ನೂ, ಞಾನಂ-ಈನ್ರ = ಜ್ಞಾನದಿಂದುಂಟಾಗುವ, ಉಯಿರ್-ಪಯನುಂ = ಆತ್ಮಪ್ರಾಪ್ತಿರೂಪ ಫಲವನ್ನೂ, ಊನ್-ನಿನ್ರವರ್ಕ್ಕು = ಶರೀರದಲ್ಲಿರುವವರಿಗೆ, ಅಡಿಯುಂ = ಮೂಲಕಾರಣವನ್ನೂ (ನಾನಾವಿಧ ಶರೀರ ಧಾರಣೆಗೆ ಕಾರಣವನ್ನೂ) ಉಯಿರ್ = ಆತ್ಮವನ್ನು, ವೇರ್-ಇಡುಂ = ಬೇರ್ಪಡಿಸುವ, ಉಳ್-ವಿರಹುಂ = ಅಂತರಂಗೋಪಾಯವನ್ನೂ, ಶಿಲ್ಯೈ = ಬಿಲ್ಲಾಳನಾದ, ಪಾರ್ತನುಕ್ಕು = ಪಾರ್ಥನಿಗೆ, ತೆಳವಿತ್ತನನ್ = ವಿಶದವಾಗಿ ಉಪದೇಶಿಸಿದನು.

**ತಾತ್ಪರ್ಯ** :- ''ದೇಹಸ್ವರೂಪಮಾತ್ಮಾಪ್ತಿ ಹೇತುರಾತ್ಮವಿಶೋಧನಂ ।
ಬಂಧಹೇತುರ್ವಿವೇಕಶ್ಚ ತ್ರಯೋದಶ ಉದೀರ್ಯತೇ ॥''

ಗೀತಾಚಾರ್ಯನು 13ನೆಯ ಅಧ್ಯಾಯದಲ್ಲಿ ದೇಹದ ಮತ್ತು ಜೀವಾತ್ಮರ ಸ್ವರೂಪವನ್ನೂ, ದೇಹಯಾಥಾತ್ಮ್ಯ ಶೋಧನೆಯನ್ನೂ, ''ಅಮಾನಿತ್ವಂ'' - ಮೊದಲಾದವುಗಳಿಂದ ಶರೀರದಿಂದ ಬೇರ್ಪಟ್ಟ ಆತ್ಮನ ಪ್ರಾಪ್ತಿಗೆ ಉಪಾಯವನ್ನೂ, ''ಜ್ಞೇಯಂಯತ್ತತ್ಪ್ರವಕ್ಷ್ಯಾಮಿ'' ಎಂದು ಉಪಕ್ರಮಿಸಿ ದೇಹದಿಂದ ಬಿಡಲ್ಪಟ್ಟ ಆತ್ಮದ ಸ್ವರೂಪ ಶೋಧನೆಯನ್ನೂ, ''ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು'' ಎಂಬುದರಿಂದ ಆತ್ಮನು ಅಚಿತ್ತಿನೊಡನೆ ಸಂಬಂಧವನ್ನು ಹೊಂದಲು ಕಾರಣವನ್ನೂ ಮತ್ತು

''ಧ್ಯಾನೇನಾತ್ಮನಿ ಪಶ್ಯಂತಿ'' - ಇತ್ಯಾದಿಗಳಿಂದ ಜೀವಾತ್ಮನು ದೇಹದಿಂದ ಬೇರೆಯಾದವನೆಂದರಿಯುವ ವಿವೇಕಾನುಸಂಧಾನ ಪ್ರಕಾರವನ್ನೂ ಯಥಾಧಿಕಾರವಾಗಿ ಪಾರ್ಥನಿಗೆ ಉಪದೇಶಿಸಿರುವನು.

**देहानां च स्वरूपं श्रुतिशतविदितं जीवमेदं तथात्म- ।**
**प्रेप्सूनां ज्ञानलाभक्रम मथ च फलं स्वात्मनो ज्ञानजस्य ।।**
**मूलं देहोपलब्धेः पृथगपि करणं चात्मनोऽन्तस्स्थमार्गं ।**
**पीयूषस्यन्दिपादो हरि रवगमयत् धन्विपार्थाय सम्यक् ।।** १४

**ಮೂಲ :** **ಮುಕ್ಕುಣಮೇಯ್ಯುಯಿರ್ಮುತ್ತವುಂ ಕಟ್ಟಿಡಮೂಂಡಮ್ಮೈಯುಂ,**
**ಮುಕ್ಕುಣಮೇ ಯನ್ನೈತ್ತುಂ ವಿನ್ನೈಕೊಳ್ಳ ಮುಯನ್ರಮ್ಮೈಯುಂ,**
**ಮುಕ್ಕುಣ ಮಾಯ್ಯೈಕಡತ್ತಲುಂ ಮುಕ್ಕತಿತಂದಳಿಪ್ಪುಂ,**
**ಮುಕ್ಕುಣ ಮತ್ತಪಿರಾನ್ಮೊಳಿನ್ದಾನ್ ಮುಡಿಯೋನ್ತನಕ್ಕೆ ॥** **15**

**ಅರ್ಥ** :- ಮುಕ್ಕುಣಂ-ಅತ್ತ = ತ್ರಿಗುಣಾತೀತನಾದ, ಪಿರಾನ್ = ಉಪಕಾರಕನಾದ ನಾರಾಯಣನು, ಮುಕ್ಕುಣಮೇ = ಮೂರು ಗುಣಗಳೇ, ಉಯಿರ್ = ಆತ್ಮನನ್ನು, ಮುತ್ತುವುಂ = ಸಂಪೂರ್ಣವಾಗಿ, ಕಟ್ಟಿಡ = ಬಂಧಿಸಲು, ಮೂಂಡಮ್ಮೈಯುಂ = ಪ್ರವರ್ತಿಸುವ ರೀತಿಯನ್ನೂ, ಮುಕ್ಕುಣಮೇ = ಮೂರು ಗುಣಗಳೇ, ಅನ್ನೈತ್ತುಂ = ಸಮಸ್ತವಾದ, ವಿನ್ನೈ = ಕರ್ಮಗಳನ್ನು, ಕೊಳ್ಳ = ಮಾಡಲು, ಮುಯನ್ರ್-ಅಮ್ಮೈಯುಂ = ವ್ಯಾಪಿಸಿರುವುದನ್ನೂ, ಮುಕ್ಕುಣ-ಮಾಯ್ಯೈ = ತ್ರಿಗುಣಾತ್ಮಕವಾದ ಮಾಯೆಯನ್ನು, ಕಡತ್ತಲುಂ = ದಾಟುವುದನ್ನೂ, ಮುಕ್ಕತಿ = (ಕೈವಲ್ಯ-ಐಶ್ವರ್ಯ-ಅಪವರ್ಗ) ಮೂರು ಗತಿಗಳನ್ನೂ, ತಂದ್-ಅಳಿಪ್ಪುಂ = ಕೊಟ್ಟು ರಕ್ಷಿಸುವುದನ್ನೂ, ಮುಡಿಯೋರ್-ತನಕ್ಕು = ಕಿರೀಟಿಯಾದ ಅರ್ಜುನನಿಗೆ, ಮೊಳಿಂದಾನ್ = ಹೇಳಿದನು.

**ತಾತ್ಪರ್ಯ** :- ಗುಣ ಬಂಧ ವಿಧಾ ತೇಷಾಂ ಕರ್ತೃತ್ವಂ ತನ್ನಿವರ್ತನಂ ।
ಗತಿತ್ರಯಸ್ಯ ಮೂಲತ್ವಂ ಚತುರ್ದಶ ಉದೀರ್ಯತೇ ॥

ಗುಣಗಳಲ್ಲಿ ಸತ್ವವು ಸುಖಜ್ಞಾನದಿಂದಲೂ, ರಜಸ್ಸು ಕರ್ಮಸಂಸರ್ಗದಿಂದಲೂ, ತಮಸ್ಸು-ಪ್ರಮಾದ-ಆಲಸ್ಯ-ನಿದ್ರಾದಿಗಳಿಂದಲೂ ಜೀವನನ್ನು ಬಂಧಿಸುತ್ತವೆ. ಇದೇ ''ಗುಣಬಂಧವಿಧಾ'' ಎನಿಸಿರುವುದು, ಈ ವಿಷಯವನ್ನೂ, ''ನಾನ್ಯಂ ಗುಣೇಭ್ಯಃ ಕರ್ತಾರಂ'' - ಇತ್ಯಾದಿಗಳಿಂದ ಹಿಂದೆ ಹೇಳಿದಂತೆ ಪ್ರಾಪ್ತಾಪ್ರಾಪ್ತ ವಿವೇಕದಿಂದ ಆ ಗುಣಗಳಲ್ಲಿ ಕರ್ತೃತ್ವಾರೋಪವನ್ನೂ, ''ಮಾಂಚ ಯೋऽವ್ಯಭಿಚಾರೇಣ'' -

ಇತ್ಯಾದಿಗಳಿಂದ ಗುಣ ನಿವರ್ತಿಸುವ ಪ್ರಕಾರವನ್ನೂ ಮತ್ತು ಆ ಗುಣ ನಿವೃತ್ತಿಪೂರ್ವಕ ಆತ್ಮಯಾಥಾತ್ಮ್ಯ ಮತ್ತು ಭಗವತ್ಪ್ರಾಪ್ತಿಗೆ ಭಗವಂತನಲ್ಲಿ ಮಾಡುವ ಭಕ್ತಿಯೇ ಮೂಲವೆಂದೂ, ತತ್ಪೂರ್ವಕ ಬ್ರಹ್ಮಾನುಭವವನ್ನೂ ಸಹ ಶ್ರೀಕೃಷ್ಣ ಪರಮಾತ್ಮನು ಕಿರೀಟಿಯಾದ ಅರ್ಜುನನಿಗೆ 14ನೆಯ ಅಧ್ಯಾಯದಲ್ಲಿ ಉಪದೇಶಿಸಿರುವನು.

बन्धुं त्रेगुण्यमेवाखिलपुरुष मिहानूनतः सम्प्रवृत्तं ।
कर्तुं त्रैगुण्यमेव प्रसृतवदखिलं दुष्कृतं बन्धमूलम् ।।
एवं त्रैगुण्यमायोत्तरण मपि गतीनां च दानाभिरक्षे ।
निस्त्रैगुणयोपकारी निजगद मकुटालङ्कृतायार्जुनाय ।। १५

ಮೂಲ : ಮೂವೆಟ್ಟಿಲುಂ ಅದಿನ್ ಮೋಹಮಡೈನ್ದವುಯಿರ್‌ಹಳಿಲುಂ,
ನಾವೆಟ್ಟೆಳುತ್ತೊಡು ನಲ್ವೀಡುನಣ್ಣಿನ ನಮ್‌ಪರಿಲುಂ,
ಮೇವೆಟ್ಟುವನ್‌ಗುಣವಿಣ್ಣೋರ್‌ಹಳಿಲುಂ ವಿಶಯನುಕ್ಕು,
ತಾವಿಟ್ಟುಲಹಳನ್ದಾನ್ ತನ್ನೈವೇರೆನ್ರುಶಾತ್ತಿನನೇ ॥ 16

ಅರ್ಥ:- ತಾವಿಟ್ಟು = ಧಾವಿಸಿ (ವ್ಯಾಪಿಸಿ) ಉಲಹ್-ಅಳನ್ದಾನ್ = ಜಗತ್ತನ್ನಳೆದ ಪರಮಾತ್ಮನು, ಮೂವೆಟ್ಟಿಲುಂ = (3 x 8 = 24) 24 ತತ್ವಗಳಿಗಿಂತಲೂ, ಅದಿಲ್-ಮೋಹಂ-ಅಡೈಂದ-ಉಯಿರ್‌ಹಳಿಲುಂ = ಆ ತತ್ವಗಳಲ್ಲಿ ಮೋಹಗೊಂಡ ಜೀವಾತ್ಮರಿಗಿಂತಲೂ, (ಬದ್ಧಚೇತನನಿಗಿಂತಲೂ) ನಾ-ಎಟ್ಟು-ಎಳಿತ್ತು-ಒಡು = ನಾಲಿಗೆಯಿಂದ ಅಷ್ಟಾಕ್ಷರವನ್ನೂ, ನಲ್-ವೀಡುಂ = ಪರಮಪದವನ್ನೂ ಪಡೆದ, ನವ್‌ಪರಿಲುಂ = ವಿಶ್ವಾಸವುಳ್ಳವರಿಗಿಂತ (ಮುಕ್ತರಿಗಿಂತಲೂ) ಮೇವು = ಆದರಣೀಯವಾದ, ವನ್ = ನಿತ್ಯವಾಸಿಗಳಿಗಿಂತಲೂ, (ನಿತ್ಯರಿಗಿಂತಲೂ) ತನ್ನೈ = ತನ್ನನ್ನು, ವೇರೆನ್ರು = ಬೇರೆ ವಿಲಕ್ಷಣವಾಗಿರುವೆನೆಂದು, ವಿಶಯನುಕ್ಕು = ಅರ್ಜುನನಿಗೆ, ಶಾತ್ತಿನನ್ = ವಿಶದವಾಗಿ ಹೇಳಿದನು.

ತಾತ್ಪರ್ಯ :- ಅಚಿನ್ನಿಶ್ರಾದ್ವಿಶುದ್ಧಾಚ್ಚ ಚೇತನಾತ್ ಪುರುಷೋತ್ತಮಃ ।
ವ್ಯಾಪನಾದ್ಭರಣಾತ್‌ಸ್ವಾಮ್ಯಾತ್ ಅನ್ಯಃ ಪಂಚದಶೋದಿತಃ ॥''

ಪ್ರಕೃತಿ, ಮಹತ್, ಅಹಂಕಾರ, 5 ಜ್ಞಾನೇಂದ್ರಿಯ, 5 ಕರ್ಮೇಂದ್ರಿಯ, ಮನಸ್ಸು, 5 ಮಹಾಭೂತಗಳು, 5 ತನ್ಮಾತ್ರೆಗಳು ಇವೇ 24 ತತ್ವಗಳು. ಇವನ್ನು ಶರೀರವಾಗಿ ಮಾಡಿಕೊಂಡಿರುವ ಭಗವಂತನು ಇವುಗಳಿಗಿಂತ ಬೇರ್ಪಟ್ಟಿರುವನು. ಪ್ರಕೃತಿಯಲ್ಲೇ ಮೋಹಗೊಂಡು ಇದರಲ್ಲೇ ತೊಳಲುತ್ತಾ ಆಯಾ ಕರ್ಮಫಲಗಳನ್ನು ಅನುಭವಿಸುವವನೇ

ಬದ್ಧಜೀವನು. ಸಂಸಾರದಲ್ಲಿ ಮೊದಲು ಸಿಕ್ಕಿದ್ದರೂ ಸನ್ಮಾರ್ಗ ಗಮನದಿಂದ ಅಷ್ಟಾಕ್ಷರಾದಿ ರಹಸ್ಯಾರ್ಥಗಳನ್ನರಿತು ಪ್ರಪತ್ತ್ಯನುಷ್ಠಾನದಿಂದ ಮುಕ್ತಿ ಪಡೆಯುವವನು ಮುಕ್ತನು. ಸಂಸಾರಗಂಧವನ್ನು ಎಂದೂ ಅರಿಯದೆ, ಪರಮ ಪುರುಷನಂತೆಯೇ ಗುಣಾಷ್ಟಕ ವಿಶಿಷ್ಟರಾಗಿ, ಜ್ಞಾನಸಂಕೋಚವಿಲ್ಲದೆ ಇರುವವರು ನಿತ್ಯರು. ಹೀಗೆ ಅಚೇತನ ವಸ್ತುಗಳಿಗಿಂತಲೂ, ತ್ರಿವಿಧ ಚೇತನ ವರ್ಗಕ್ಕಿಂತಲೂ ಬೇರ್ಪಟ್ಟು ಅವುಗಳಲ್ಲೇ ಅಂತರ್ಯಾಮಿಯಾಗಿರುತ್ತಾ ಅವನ್ನು ಧರಿಸಿ, ಪ್ರಭುವೆನಿಸಿಕೊಂಡು ಬೆಳಗುವನು. ಈ ಕಾರಣದಿಂದಲೇ ಅಲ್ಲವೆ ಶ್ರುತಿ ಸ್ಮೃತಿ ಇತ್ಯಾದಿಗಳು ಅವನನ್ನು ಪುರುಷೋತ್ತಮನೆಂದು ಪ್ರಶಂಸಿಸುವುವು. ಈ ವಿಷಯಗಳೆಲ್ಲವನ್ನೂ ಶ್ರೀಕೃಷ್ಣನು 15ನೆಯ ಅಧ್ಯಾಯದಲ್ಲಿ ಅರ್ಜುನನಿಗೆ ಉಪದೇಶಿಸಿರುವನು.

**तत्वेभ्य स्त्र्यष्टकेभ्य स्तनुगतपुरुषेभ्योऽपि तन्मोहितेभ्यः ।**
**जिह्वाप्रोक्ताष्टवर्णै स्सहपरमपदप्रेप्सुविश्वारसिपुम्भ्यः ।।**
**आदर्तव्यैः परव्योम्न्यपि विमलगुणै रष्टभि र्भासूरेभ्यः ।**
**व्यापी विक्रान्तलोको निजगद विजयाय स्वमन्यं विचित्रम् ।। १६**

**ಮೂಲ : ಆಣೈಮರಾದವರ್‌ದೇವರ್ ಅಲ್ಲಾವಳಕ್ಕೋರುಶುರರ್,**
**ಕೋನೈಮರಾದ ಗುಣಚ್ಚೆಲ್ವನೀಕುರಿಕ್ಕೊಣ್ಮರೈಯೈ,**
**ಪೇಣಿಯತತ್ತುವಮುಂ ಪಿಣಿಯತ್ತಕಿರಿಶೈಹಳುಂ,**
**ಕಾಣೆದನಾಲ್ ವಿಶಯಾ ವೆನ್ರುಕಣ್ಣನಿಯಂಬಿನನೇ ॥ 17**

ಅರ್ಥ :– ವಿಶಯಾ = ಅರ್ಜುನ!, ಆಣೈ = ಆಜ್ಞೆಯನ್ನು, ಮರಾದವರ್ = ಮೀರಿದವರು, ದೇವರ್ = ದೇವತೆಗಳು (ಭಗವದಾಜ್ಞಾಭೀರುಗಳು) ಅಲ್ಲಾ = ದುಷ್ಟವಾದ, ವಳಕ್ಕೋರ್ = ವ್ಯವಹಾರವುಳ್ಳವರು, (ಆಜ್ಞಾತಿಲಂಘನರುಚಿಯುಳ್ಳವರು) ಅಶುರರ್ = ರಾಕ್ಷಸರು, ಕೋನೈ = ಸ್ವಾಮಿಯನ್ನು, ಮರಾದ = ಮೀರದಂತಿರುವ, ಗುಣ = ಗುಣಗಳುಳ್ಳ, ಶೆಲ್ವಂ = ಸಂಪತ್ತುಳ್ಳ, ನೀ = ನೀನು, ಮರೈಯೈ = ವೇದವನ್ನು (ಶಾಸ್ತ್ರವನ್ನು), ಕುರಿಕ್ಕೊಳ್ = ಅವಲಂಬಿಸು, ಇದನಾಲ್ = ಈ ಶಾಸ್ತ್ರದಿಂದ, ಪೇಣಿಯ = ಅತ್ಯಾದರಣೀಯವಾದ, ತತ್ತುವಮುಂ = ಪರತತ್ವವನ್ನೂ, ಪಿಣಿ-ಅತ್ತ = ದುಃಖವಿಲ್ಲದ, (ದುಃಖವನ್ನು ನಿವಾರಿಸುವ) ಕಿರಿಶೈಹಳುಂ = ಕಾರ್ಯಗಳನ್ನೂ (ಬಂಧಕ್ಲೇಶ ನಿವರ್ತಕವಾದ ಕರ್ಮಜ್ಞಾನ ಭಕ್ತಿಗಳನ್ನೂ), ಕಾಣ್ = ವಿಶದವಾಗಿ ಅರಿತುಕೋ, ಎನ್ರು = ಎಂದು, ಕಣ್ಣನ್ = ಶ್ರೀಕೃಷ್ಣನು, ಇಯಂಬಿನನ್ = ಹೇಳಿದನು.

ತಾತ್ಪರ್ಯ :– ''ದೇವಾಸುರ ವಿಭಾಗೋಕ್ತಿಪೂರ್ವಿಕಾ ಶಾಸ್ತ್ರವಶ್ಯತಾ !
ತತ್ತ್ವಾನುಷ್ಠಾನ ವಿಜ್ಞಾನಸ್ಥೇಮ್ನೇ ಷೋಡಶ ಉಚ್ಯತೇ ॥''

ಭಗವದಾಜ್ಞೆಯೇ ಶಾಸ್ತ್ರ ಅದನ್ನು ಅನುವರ್ತಿಸುವವರೇ ದೇವತೆಗಳು. ಅಂತಹವರೇ ಭಗವದನುಗ್ರಹ ಪಾತ್ರರು. ಭಗವದಾಜ್ಞೆಯನ್ನು ಮೀರಿ ನಡೆಯುವವರೇ ಅಸುರರು. ಅವರು ಅವನ ನಿಗ್ರಹಕ್ಕೆ ಪಾತ್ರರು. ನಾವು ಅಸುರರಂತಿರಬಾರದು. ದೇವತೆಗಳಂತೆ ನಡೆದುಕೊಳ್ಳಬೇಕು. ಹೀಗೆ ಅವರವರ ಗುಣ ಕ್ರಿಯಾದಿಗಳಿಂದ ವಿಭಾಗಮಾಡಿ, ಆ ಮೂಲಕ ಶಾಸ್ತ್ರವಶ್ಯರಾಗಿರಬೇಕೆಂದೂ, ಇದಿಷ್ಟೂ ಪ್ರಾಪ್ಯತತ್ವಜ್ಞಾನವೂ ಪ್ರಾಪ್ಯಪ್ರಾಪ್ಯುಪಾಯ ಜ್ಞಾನವೂ ವೈದಿಕಮೂಲವೆಂದು ಶಾಸ್ತ್ರವಿಹಿತಾನುಷ್ಠಾನವು ನೆಲೆಗೊಳ್ಳಬೇಕೆಂಬುದಕ್ಕಾಗಿಯೇ ಎಂದು ಗೀತಾಚಾರ್ಯನು ಅರ್ಜುನನಿಗೆ 16ನೆಯ ಅಧ್ಯಾಯದಲ್ಲಿ ಉಪದೇಶಿಸಿರುವನು.

**ये स्वाज्ञापरिपालका स्सुकृतिनो देवा मता स्ते तथा ।**
**ये वा तद्विपरीतकर्मनिरता स्ते राक्षसा दुष्कृताः ।।**
**त्वं तावत् प्रभुशासनानुगगुणैश्वर्यः श्रुतीराश्रय ।**
**ग्राह्यं तत्त्व मदुः स्वकर्म विजयावेहीति कृष्णोऽब्रवीत् ॥ १७**

**ಮೂಲ : ಮಱೈಪ್ಪೊರುಂದಾದವೈ ವಲ್ಲಶುರರ್ಕ್ಕು ವಹುತ್ತಮೈಯುಂ,**
**ಮಱೈಪ್ಪೊರುಂದುಂ ನಿಲೈಯುಂ ವರ್ಗುಣಪ್ಪಡಿ ಮೂವಹೈಯುಂ,**
**ಮಱೈನಿಲೈತನ್ನೈ ವಹುಕ್ಕುಂ ಕುಱಿಮೂನ್ರಿನ್ ಮೇನ್ಮೈಯೈಯುಂ,**
**ಮಱೈಯುಮಿಳ್ನ್ದಾನುರೈತ್ತಾನ್ ವಾಶವನ್‌ತನ್‌ಶಿರುವನುಕ್ಕೇ ॥ 18**

ಅರ್ಥ :- ಮಱೈ = ವೇದಗಳನ್ನು, ಉಮಿಳ್ನ್ದಾನ್ = ಪ್ರಕಾಶಪಡಿಸಿದ, ಪರಮಾತ್ಮನು, ಮಱೈ-ಪೊರುಂದಾದವೈ = ವೇದಸಮ್ಮತಿಯಿಲ್ಲದ ಕರ್ಮಗಳು, ವಲ್-ಅಶುರರ್ಕ್ಕು = ಪ್ರಬಲರಾದ ಅಸುರರಿಗಾಗಿ, ವಹುತ್ತಮೈಯುಂ = ವಿಭಾಗಿಸಲ್ಪಟ್ಟಿರುವುದನ್ನು, ಮಱೈ-ಪೊರುಂದುಂ = ವೇದವಿಹಿತವಾದ, ನಿಲೈಯುಂ = ಕರ್ಮನಿಷ್ಠೆಯನ್ನೂ, ವನ್ = ದೃಢವಾದ, ಗುಣ = ಗುಣಗಳ, ಪಡಿ = ಪ್ರಕಾರಗಳ, ಮೂ-ವಹೈಯುಂ = ಮೂರು ಪ್ರಕಾರವನ್ನೂ, ಮಱೈ-ನಿಲೈ-ತನ್ನೈ = ಶ್ರುತಿಸಮ್ಮತ ಕರ್ಮನಿಷ್ಠೆಯನ್ನು, ವಹುಕ್ಕುಂ = ವಿಭಜಿಸುವ, ಕುಱಿ-ಮೂನ್ರಿನ್ = ಮೂರು ಲಕ್ಷಣಗಳ, ಮೇನ್ಮೈಯೈಯುಂ = ಉತ್ಕರ್ಷವನ್ನೂ, ವಾಶವನ್-ತನ್ = ವಾಸವನ (ಇಂದ್ರನ) ಶಿರುವನುಕ್ಕು = ಮಗನಾದ ಅರ್ಜುನನಿಗೆ, ಉರೈತ್ತಾನ್ = ಹೇಳಿದನು.

ತಾತ್ಪರ್ಯ :- ''ಅಶಾಸ್ತ್ರಮಾಸುರಂ ಕೃತ್ಸ್ನಂ ಶಾಸ್ತ್ರೀಯಂ ಗುಣತಃ ಪೃಥಕ್ ।
ಲಕ್ಷಣಂ ಶಾಸ್ತ್ರಸಿದ್ಧಸ್ಯ ತ್ರಿಧಾ ಸಪ್ತದಶೋದಿತಂ ॥''

ಮುಕ್ತಿ ಮತ್ತು ಇತರ ಪುರುಷಾರ್ಥಗಳ ಪ್ರಾಪ್ತಿಗೆ ಮುಖ್ಯ ಕಾರಣ ಯಜ್ಞ. ದಾನ-ತಪಸ್ಸು ಮುಂತಾದ ವೇದವಿಹಿತ ಕರ್ಮಗಳೇ ಹೊರತು ಬೇರೆಯಲ್ಲ. ಅವುಗಳ ಅನುಷ್ಠಾನವೂ ಫಲಾಭಿಸಂಧಿರಹಿತವಾಗಿಯೇ ಇರಬೇಕು. ವೈದಿಕ ಕರ್ಮದ ಸಾಮಾನ್ಯ ಲಕ್ಷಣವು ಪ್ರಣಯಾನ್ವಯವು. ಹಾಗೂ ಪರಸ್ಪರ ಭೇದವು "ತತ್" "ಸತ್" ಎಂಬ ಶಬ್ದಗಳಿಂದ ನಿರ್ದೇಶಿಸಲ್ಪಡುವುದು. ಇದೇ ಅವುಗಳ ಶಾಸ್ತ್ರಸಿದ್ಧ ಲಕ್ಷಣವೆನಿಸುವುದು. ಇಂತಹ ಕರ್ಮಾನುಷ್ಠಾನಾರಂಭವೂ ಸತ್ವಗುಣೋದ್ರೇಕದಿಂದಲೇ ಆಗುವುದು. ಆ ಗುಣವೂ ಸಹ ಸತ್ವ ಗುಣಮಯವಾದ ಆಹಾರ ಸೇವನೆಯಿಂದಲೇ ಅಭಿವೃದ್ಧಿಯಾಗುವುದು. ಹೀಗೆ ಇಂತಹವನನ್ನು ಆಚರಿಸುವವರೇ ಸುರರೆನಿಸುವರು. ಇದಕ್ಕೆ ವಿರುದ್ಧವಾದುವೆಲ್ಲ ಆಸುರವೆನಿಸುವುವು. ಅದರ ಫಲವು ನರಕವೇ. ಆದ್ದರಿಂದ ಶಾಸ್ತ್ರ ನಿಷಿದ್ಧವಾದುವನ್ನು ಬಿಟ್ಟು, ಶಾಸ್ತ್ರೀಯವೂ ಹಾಗೂ ಗುಣಬೇಧದಿಂದ ಬೇರೆ ಬೇರೆಯಾಗಿ ಶಾಸ್ತ್ರಸಿದ್ಧ ಲಕ್ಷಣದಿಂದ ಕೂಡಿರುವುದನ್ನೇ ಆಚರಿಸಿ, ಅಭ್ಯುದಯ ಮತ್ತು ನಿಶ್ರೇಯಸ್ಸನ್ನು ಪಡೆಯುವವರಾಗಬೇಕೆಂದು 17ನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣನು ಅರ್ಜುನನಿಗೆ ಉಪದೇಶಿಸಿರುವನು.

**वेदानुक्तानि कर्माण्यतिबलदितिजेभ्यो विभक्तानि तद्वत् ।**
**वेदोक्तां कर्मनिष्ठां दृढतरगुणत स्त्रीन् प्रकारांस्तदीयान् ।।**
**वेदोक्तायाश्च तस्या स्त्रिविधविभजने लक्षणं तत्प्रभावं ।**
**वेदोद्गारी मुरारि र्निजगद विशदं वासवस्यात्मजाय ।।** १८

**ಮೂಲ :** **ಶತ್ತುವವೀಡುಡ್ಡೈ ನರ್ಕರುಮಂ ತಾನುಹಂದಮ್ಮೈಯುಂ,**
**ಶತ್ತುವಮುಳ್ಳದುತಾನ್ ಕುರಿಕ್ಕೊಳ್ಳವ್ವೈಶೆಯ್‌ದದುವುಂ,**
**ಶತ್ತುವನಲ್ ಕಿರಿಶೈಪ್ಪಯನುಂ ಶರಣಾಗತಿಯುಂ,**
**ಶತ್ತುವಮೇ ತರುವಾನುರ್ರೈತ್ತಾನ್ ತನಿಪ್ಪಾರ್ತನುಕ್ಕೇ ॥** 19

ಅರ್ಥ :- ಶತ್ತುವಮೇ : ಸತ್ವಗುಣವನ್ನೇ, ತರುವಾನ್ = ಕೊಡುವಂತಹ ಪರಮಪುರುಷನು, ಶತ್ತುವ = ಸತ್ವದ, ವೀಡುಡ್ಡೈ = ತ್ಯಾಗವುಳ್ಳ (ಸಾತ್ವಿಕತ್ಯಾಗದಿಂದ ಕೂಡಿದ) ನಲ್-ಕರುಮಂ = ಒಳ್ಳೆಯ ಕರ್ಮವನ್ನು, ತಾನ್ = ತಾನು, ಉಹಂದಮ್ಮೈಯುಂ = ಬಹಳ ಪ್ರೀತಿಸುವುದನ್ನೂ, ಶತ್ತುವಂ-ಉಳ್ಳದ್ = ಸಾತ್ವಿಕವ್ಯಾಪಾರವನ್ನು, ತಾನ್ = ತಾನು, ಕುರಿಕ್ಕೊಳ್ -ವಶ್ವೈ = ಗುರಿಯಾಗಿ ಸ್ವೀಕರಿಸುವಂತೆ, ಶೆಯ್ದದುವುಂ = ಮಾಡುವುದನ್ನೂ, ಶತ್ತುವ-ನಲ್-ಕಿರಿಶೈ = ಸಾತ್ವಿಕವಾದ ಒಳ್ಳೆಯ ಕಾರ್ಯದ, ಪಯನುಂ = ಫಲವನ್ನೂ, ಶರಣಾಗತಿಯುಂ = ಶರಣಾಗತಿಯನ್ನೂ, ತನಿ = ಅಸಾಧಾರಣನಾದ, ಪಾರ್ತನುಕ್ಕು = ಅರ್ಜುನನಿಗೆ, ಉರ್ರೈತ್ತಾ = ಹೇಳಿದನು.

ತಾತ್ಪರ್ಯ :- ''ಈಶ್ವರೇ ಕರ್ತೃತಾಬುದ್ಧಿಃ ಸತ್ವೋಪಾದೇಯತಾಂತಿಮೇ।
ಸ್ವಕರ್ಮಪರಿಣಾಮಶ್ಚ ಶಾಸ್ತ್ರಸಾರಾರ್ಥ ಉಚ್ಯತೇ ॥''

ಮುಕ್ತಿಗೆ ಸಾಧನವೆಂದಿರುವ ತ್ಯಾಗ ಮತ್ತು ಸನ್ಯಾಸಗಳು ಬೇರೆಬೇರೆಯಲ್ಲ. ಎರಡೂ ಒಂದೇ ಎಂಬುದನ್ನೂ, ತ್ಯಾಗಸ್ವರೂಪವನ್ನೂ, ಸಕಲಕರ್ಮಸಮಾರಾಧ್ಯನೂ ಸಕಲಕರ್ಮಗಳ ಕರ್ತೃವೂ ಆದ ಶ್ರೀಮನ್ನಾರಾಯಣನೇ ಎಂದು ಅನುಸಂಧಾನ ಮಾಡಬೇಕೆಂಬುದನ್ನೂ, ಸತ್ವರಜಸ್ತಮೋಗುಣಗಳ ಕಾರ್ಯವನ್ನೂ ವರ್ಣಿಸಿರುವುದರಿಂದ ಅವುಗಳಲ್ಲಿ ಸತ್ವಗುಣವೇ ಉಪಾದೇಯವೆಂಬುದನ್ನೂ, ಸ್ವಸ್ವವರ್ಣಾಶ್ರಮೋಚಿತ ಕರ್ಮಗಳನ್ನು ಯಾವಜ್ಜೀವಿತ ಬಿಡದೆ ಮಾಡಲೇಬೇಕೆಂದೂ, ಅವು ಭಗವದಾರಾಧನರೂಪವಾದುವೆಂದೂ, ಅವೇ ಕಡೆಗೆ ಪರಮಪುರುಷಾರ್ಥಪ್ರಾಪ್ತಿಯನ್ನುಂಟುಮಾಡುತ್ತವೆಯಾಗಿ ಅವುಗಳ ಪ್ರಕಾರಗಳನ್ನೂ ಮತ್ತು ಇಡೀ ಗೀತೆಯಲ್ಲಿ ಸಾರವಾದ ಅರ್ಥವು ಭಕ್ತಿಯೋಗವೇ ಎಂಬುದನ್ನೂ ಈ 18ನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಉಪದೇಶಿಸಿದನು. (ಗೀತಾಭಾಷ್ಯದಲ್ಲಿ ಅಂಗಾಧಿಕಾರದಲ್ಲಿ ಪ್ರಪತ್ತಿಗೂ ಭಕ್ತಿಯೇ ಅಂಗಿಯೆಂಬ ಕಾರಣದಿಂದ ಭಕ್ತಿಗೆ ಪ್ರಾಧಾನ್ಯವಿರುವುದರಿಂದಲೂ, ಆರಂಭದಲ್ಲಿ ಗೀತಾರ್ಥಸಂಗ್ರಹದ ಯಾಮುನರ ಶ್ಲೋಕದಲ್ಲಿ - ''ಭಕ್ತ್ಯೇಕಗೋಚರಃ'' ಎಂದಿರುವುದರಿಂದಲೂ ಈ ವಿವರಣೆ ಎಂದು ಭಾವ.)

**सत्कर्मातिप्रियं मे तदिह यदि भवेत्सात्विकत्यागयुक्तं ।**
**सत्वानुष्ठाननिष्ठो यदपि विहितवानात्मलक्ष्यत्वत स्तत् ।।**
**सत्वानुष्ठानलभ्यं फलमपि शरणागत्यनुष्ठान मेवं ।**
**सत्वस्यैव प्रदाता ह्यतिशयशसे प्राह पार्थाय शौरिः ।। १९**

**ಮೂಲ : ವನ್‌ಪತ್ತರುಕ್ಕು ಮರುನ್ದೆನ್ರು, ಮಾಯವನ್ ತಾನುರೈತ್ತ,**
**ಇನ್ಬಕ್ಕಡಲಮುದಾಮೆನನಿನ್ರ, ಇಕ್ಕೀತ್ತೈತನ್ನೈ,**
**ಅನ್ಬರ್ಕ್ಕುರೈಪ್ಪವರ್ ಕೇಳ್‌ಪವರಾದರಿತ್ತೋದುಮವರ್,**
**ತುನ್ಬಕ್ಕಡಲಿಲ್ ತುಳಂಗುಹೈ ನೀಂಗಿತ್ತುಲಂಗುವರೇ ॥ 20**

ಅರ್ಥ :- ವನ್ = ಪ್ರಬಲವಾದ, ಪತ್ತ್ = ಸಂಗವನ್ನು, ಅರುಕ್ಕುಂ = ಕತ್ತರಿಸುವ (ನಿವಾರಿಸುವ) ಮರುಂದ್ = ಔಷಧ, ಎನ್ರ್ = ಎಂದು, ಮಾಯವನ್ = ಆಶ್ಚರ್ಯ ಚೇಷ್ಟಿತನಾದ ಪರಮಾತ್ಮನು, ತಾರ್ = ತಾನೇ, ಉರೈತ್ತ = ಹೇಳಿದ, ಇನ್ಬ-ಕಡಲ್-ಅಮುದಾಂ -ಎನ-ನಿನ್ರ = ಪರಮಭೋಗ್ಯವಾದ ಸಮುದ್ರದಿಂದ ತೆಗೆದ ಅಮೃತದಂತಿರುವ, ಇ-ಗೀತ್ತೈ-ತನ್ನೈ = ಈ ಭಗವದ್ಗೀತೆಯನ್ನು, ಅನ್ಬರ್ಕ್ಕು = ಭಗವದ್ಭಕ್ತರಿಗೆ, ಉರೈಪ್ಪವರ್ = ಹೇಳುವವರೂ, ಕೇಳ್‌ಪವರ್ = ಕೇಳುವವರೂ, ಆದರಿತ್ತು-ಓದುಂ-ಅವರ್ =

ಶ್ರದ್ಧೆಯಿಂದ ಓದುವವರೂ (ಕಲಿಯುವವರೂ) ತುನ್ಬ-ಕಡಲಿಲ್ = ದುಃಖಸಾಗರದಲ್ಲಿ, ತುಳಂಗುಹೈ = ಪರಿಭ್ರಮಿಸುವುದನ್ನು, ನೀಂಗಿ = ಹೋಗಲಾಡಿಸಿಕೊಂಡು, ತುಲಂಗುವರ್ = ನಿರ್ಮಲರಾಗಿ ಬೆಳಗುವರು.

ತಾತ್ಪರ್ಯ :- ಪ್ರಬಲವಾದ ಸಂಸಾರ ಬಂಧನಕ್ಕೆ ಸಿಕ್ಕಿ ನರುಳುವವರಿಗೆ ದಿವ್ಯವಾದ ಮಹೌಷಧವು ಈ ಗೀತೆ. ಅತ್ಯಾಶ್ಚರ್ಯಚರ್ಯವುಳ್ಳ ಶ್ರೀಕೃಷ್ಣ ಪರಮಾತ್ಮನೇ ನೇರವಾಗಿ ಅರ್ಜುನನಿಗೆ ಉಪದೇಶಿಸಿದುದು. ಅತ್ಯಂತ ಭೋಗ್ಯವಾದ ಕಡಲಿನಿಂದ ಕಡೆದು ತೆಗೆದ ಅಮೃತದಂತಿದೆ. ಇಂತಹ ಹಿರಿಮೆಯ ಮಹಿಮೆಯುಳ್ಳ ಈ ಭಗವದ್ಗೀತೆಯನ್ನು ಶ್ರದ್ಧೆಯಿಂದ ಓದುವ ಶಿಷ್ಯರಿಗೆ ಉಪದೇಶಿಸುವವರೂ, ಆದರದಿಂದ ಕೇಳುವವರೂ ಮತ್ತು ಪ್ರೀತಿಯಿಂದ ಓದುವವರೂ ಸಹ ಸಂಸಾರ ದುಃಖಸಾಗರದಲ್ಲಿ ಮುಳುಗಿ ತೊಳಲುವುದನ್ನು ನೀಗಿಕೊಂಡು ನಿರ್ಮಲಚಿತ್ತರಾಗಿ ಕಂಗೊಳಿಸ್ತಿ ಸಕಲ ಪುರುಷಾರ್ಥಗಳನ್ನು ಪಡೆಯುವರು.

**सङ्गोन्मूलौषधं हीत्यतिबल ममुना मायिना शौरिणोक्तां ।**
**भोग्याम्भोधेरिवेमा मतिमधुरसुधां सर्वदात्रीं च गीताम् ।।**
**भक्तेभ्यो ये प्रयच्छन्त्यथ च निशमयन्त्यादराद्वा पठन्ति ।**
**भ्राजन्ते धूतदुःखाम्बुधिगतविविधभ्रान्तय स्ते कृतार्थः ।। २०**

ಮೂಲ : **ತೀದತ್ತನಲ್ ಗುಣಪ್ಪಾರ್ಕಡಲ್ ತಾಮರೈಚ್ಚೆಮ್ಮಲರ್ಮೇಲ್,**
**ಮಾದುತ್ತಮಾಯನ್ಮರುವವಿನ್ಗೀತ್ತೈಯಿನ್ ವಣ್ಪೊರುಳ್ಳೈ,**
**ಕೋದತ್ತನಾನ್ಮರೈಮೌಲಿಯಿನಾಶರಿಯನ್ಕುರಿತ್ತಾನ್,**
**ಕಾದಲ್ತುಣಿವುಡ್ಡೈಯಾರ್ಕರ್ಕುಂವಣ್ಣಂಕರುತ್ತುಡನೇ ॥ 21**

ಅರ್ಥ :- ಕೋದು-ಅತ್ತ = ಅವದ್ಯವಿಲ್ಲದ (ದೋಷವಿಲ್ಲದ) ನಾಲ್-ಮರೈ = ನಾಲ್ಕು ವೇದಗಳ, ಮೌಲಿ = ಶಿರಸ್ಸುಗಳಿಗೆ (ಉಪನಿಷತ್ತುಗಳಿಗೆ) ಆಶರಿಯರ್ = ಆಚಾರ್ಯರಾಗಿರುವ ಶ್ರೀವೇದಾಂತಾಚಾರ್ಯವರ್ಯರು, ತೀದು-ಅತ್ತ = ಹೇಯವಲ್ಲದ, ನಲ್-ಗುಣ = ಒಳ್ಳೆಯ ಗುಣಗಳಿಗೆ, ಪಾರ್ಕಡಲ್ = ಕ್ಷೀರಸಮುದ್ರದಂತಿರುವ, ತಾಮರೈ-ಶೆಂ-ಮಲರ್-ಮೇಲ್-ಮಾದು+ಉತ್ತ = ವಿಕಸಿತ ವಿಶಾಲಾರುಣ ರಮಣೀಯ ಕಮಲವಾಸಿನಿಯಾದ ಮಹಾಲಕ್ಷ್ಮೀಸಮೇತನಾದ, ಮಾಯರ್ = ಅದ್ಭುತ ವ್ಯಾಪಾರನಾದ ಶ್ರೀಕೃಷ್ಣನು, (ಉಪದೇಶಿಸಿದ) ಮರುವ = ಆದರಿಸಿರುವಂತಹ, ಇರ್ = ಅತಿಭೋಗ್ಯವಾದ, ಗೀತ್ತೈಯಿನ್ = ಗೀತೆಯಲ್ಲಿರುವ, ವಣ್-ಪೊರುಳ್ಳೈ = ಸುಂದರವಾದ ಅರ್ಥಗಳನ್ನು, (ಗೀತಾಶಾಸ್ತ್ರಸಾರಾರ್ಥವನ್ನು) ಕಾದಲ್ = ಭಕ್ತಿ, ತುಣಿವ್ = ವಿಶ್ವಾಸ (ಪ್ರಪತ್ತಿ), ಉಡ್ಡೈಯಾರ್ = ಇವೆರಡನ್ನೂ ಉಳ್ಳವರು, (ಭಕ್ತರೂ, ಪ್ರಪನ್ನರೂ ಎಂದರ್ಥ)

ಕರ್‍ಕುಂ-ವಣ್ಣಂ = ಅಭ್ಯಾಸಮಾಡುವ, ಕರುತ್ತುಡನೇ = ಅಭಿಪ್ರಾಯದಿಂದ, ಸುಲಭವಾಗಿ ಅರಿತು ಧರಿಸುವಂತಾಗಲೆಂದು, ಕುರಿತ್ತಾನ್ = ಸಂಗ್ರಹಿಸಿ ಕರುಣಿಸಿರುವರು.

ತಾತ್ಪರ್ಯ :- ಹೇಯಗುಣರಹಿತನೂ, ಸಮಸ್ತ ಕಲ್ಯಾಣಗುಣಾಮೃತ ಮಹೋದಧಿಯೂ, ವಿಕಸಿತಾಯತಾರುಣ ರಮಣೀಯ ನಳಿನವಾಸಿನಿಯಾದ ಮಹಾಲಕ್ಷ್ಮೀ ಸಮೇತನೂ ಆದ ಶ್ರೀ ನಾರಾಯಣನು, ಶ್ರೀ ಕೃಷ್ಣನಾಗಿ ಅತ್ಯಾಶ್ಚರ್ಯಕ್ರಿಯನಾಗಿ, ಅರ್ಜುನನ ಪ್ರಿಯನಾಗಿ, ಅವನಿಗೆ ಉಪದೇಶಿಸಿದ ಗೀತೆಯಲ್ಲಿರುವ ಮನೋಹರವಾದ ಸಾರಾರ್ಥಗಳನ್ನು ಭಕ್ತರೂ, ಪ್ರಪನ್ನರೂ ಹಾಗೂ ಸರ್ವರೂ ಅತಿಸುಲಭವಾಗಿ ತಿಳಿದುಕೊಳ್ಳಲೆಂದು, ದೋಷಗಂಧವಿಲ್ಲದ ವೇದಾಂತಗಳಿಗೆಲ್ಲಾ ಆಚಾರ್ಯರೆಂಬ ಬಿರುದನ್ನು ಪಡೆದ ನಮ್ಮ ಶ್ಲೋಕ ಶ್ರೀ ದೇಶಿಕರು ತಮ್ಮ ಈ ಪ್ರಬಂಧದಲ್ಲಿ ತಿಳಿಸಿ, ಕರುಣಿಸಿರುವರು. ಒಂದೇ ಶ್ಲೋಕದಲ್ಲಿ ಈ 18 ಅಧ್ಯಾಯಗಳ ಸಾರಾರ್ಥವನ್ನು ಹೀಗೆ ಸಂಗ್ರಹಿಸಿರುವರು.

''ಅಧ್ಯಾಯೈಃಶಿಷ್ಯಮೋಹಸ್ತದುಪಶಮವಿಧಿಃ ಕರ್ಮಯೋಗೋಽಸ್ಯಭೇದಾಃ ।
ತತ್ಕೈಂಕರ್ಯಾದಿಯೋಗಃ ತದುಚಿತಮಹಿಮಾ ಭೂತಿಕಾಮಾದಿಭೇದಃ ॥
ಭಕ್ತಿಸ್ತನ್ಮೂಲ ಭೂಮಾ ಭಜನ ಸುಲಭತಾ ಭಕ್ತಿಶೈಘ್ರ್ಯಾದಿಜೀವ ।
ತ್ರೈಗುಣ್ಯಂಶಾಸಿತಾಜ್ಞಾತದಧಿಗಮಪರಃ ಸಾರವರ್ಗಶ್ಚಗೀತಾಃ ॥''

ಇದು ತಾತ್ಪರ್ಯಚಂದ್ರಿಕೆಯ ಕೊನೆಯಲ್ಲಿರುವುದು.

निर्धूताखिलदोषमङ्गलगुणक्षीराब्धिपद्मासिनी- ।
वक्षोऽत्यद्भुतचेष्टितप्रियतमा गीता तदीयं हि तं ।।
निर्दोषागममौलिदेशिकवरो भक्तिप्रपत्त्यर्थिनो : ।
सारार्थं सुखबोधधारणकृते सङ्गृह्य चान्वग्रहीत् ।। २१

।। श्रीमते निगमान्तमहादेशिकाय नमः ।।

श्रीमद्यामुनयोगिदर्शितपथे गीतार्थसंग्राहकः ।
ग्रन्थ श्श्रीनिगमान्तदेशिककृतो वर्वर्ति यो द्राविडः ।।
गोपालो गुरुराडनुग्रहफलः तत्सूक्तिलोलो मुदा ।
व्याख्यात् कन्नडभाषया च विबुधव्याहारतोऽश्लोकयत् ।।

॥ಶ್ರೀಃ॥

॥ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ॥

# ಪ್ರಬಂಧಸಾರ

ಶ್ರೀಮದಾಚಾರ್ಯರು ಈ ಪ್ರಬಂಧಸಾರದಲ್ಲಿ ಆಳ್ವಾರ್ರುಗಳ ಪ್ರಬಂಧಗಳ ಸಾರಾರ್ಥವನ್ನು ಅವರವರ ಪಾಶುರಗಳಲ್ಲಿ ಚಿಕ್ಕ ಚಿಕ್ಕ ವಿಶೇಷಣಗಳಮೂಲಕ ಅಳವಡಿಸಿರುವುದರಿಂದ ಈ ಗ್ರಂಥದ ಹೆಸರು ಅನ್ವರ್ಥವಾಗಿ ಬಹಳ ಸಮಂಜಸವಾಗಿ ಒಪ್ಪಿದೆ. ನಾಲ್ಕು ಸಾವಿರ ಪಾಶುರಗಳಲ್ಲಿ ತಮಗೆ ಪರಮಾದರವೂ ಆಲೋಡನೆಯೂ ಇರುವುದರಿಂದಲೇ ಆಳ್ವಾರ್ರುಗಳು ಅವತರಿಸಿದ ದಿವ್ಯದೇಶ, ತಿಂಗಳು, ನಕ್ಷತ್ರ ಮತ್ತು ಅವರವರ ಹಿರಿಮೆ ಮಹಿಮೆಗಳು, ಆಯಾ ಪ್ರಬಂಧದ ಹೆಸರು ಅದರಲ್ಲಿರುವ ಪಾಶುರಗಳ ಸಂಖ್ಯೆ ಮತ್ತು ಆಯಾ ಪ್ರಬಂಧದ ಜೀವನಾಡಿಯಂತಿರುವ ಸಾರಾಂಶ ಇವೆಲ್ಲವನ್ನೂ ಸ್ಪಷ್ಟಪಡಿಸಿ, ತಮ್ಮ ಅನುಸಂಧಾನಕ್ಕಾಗಿ ಆಯಾ ಪ್ರಬಂಧಗಳನ್ನು ತಮಗೆ ಅನುಗ್ರಹಿಸುವಂತೆ ಆಯಾ ಆಳ್ವಾರ್ರುಗಳನ್ನು ಪ್ರಾರ್ಥಿಸಿ, ಕೊನೆಗೆ 2 ಪಾಶುರಗಳಲ್ಲಿ ಎಲ್ಲಾ ಆಳ್ವಾರ್ರುಗಳ ಹೆಸರುಗಳನ್ನೂ ಅವರವರ ದಿವ್ಯ ಪ್ರಬಂಧಗಳಲ್ಲಿರುವ ಒಟ್ಟು ಪಾಶುರಗಳ ಸಂಖ್ಯೆಯನ್ನೂ ಹೇಳಿ, ಒಂದು ಪಾಶುರದಲ್ಲಿ ಒಂದೇ ಶ್ರೇಣಿಯಲ್ಲಿ ಎಲ್ಲರನ್ನೂ ಸಂಕೀರ್ತಿಸಿ,, ಆ ಪ್ರಬಂಧಗಳೇ ತಮ್ಮ ಉಜ್ಜೀವನ ಸಾಧನವೆಂದು ಮೊಳಗಿ, ಅವುಗಳಲ್ಲಿ ತಮಗಿರುವ ಅನಿತರ ಸಾಧಾರಣ ಜ್ಞಾನ ಭಕ್ತಿಗಳ ಸಂಕೇತವೆಂಬಂತೆ ತಮ್ಮನ್ನು ತಾವೇ "ತಮಿೞ್ಮರ್ೞೈಯೋನ್" ಎಂದು ಹೆಮ್ಮೆಯಿಂದ ಹೊಮ್ಮಿ ಹೇಳಿಕೊಂಡಿರುವರು. ಈ ಪ್ರಬಂಧಸಾರವನ್ನೂ ಅನುಸಂಧಾನ ಮಾಡುವವರಿಗೆ ಭಗವಂತನ ಕೃಪೆಯಿಂದ ಸಕಲ ಕ್ಷೇಮವೂ ಆಗುವುದೆಂದು ಅನುಗ್ರಹಿಸಿರುವರು. ಶ್ರೀಮದಾಚಾರ್ಯರು ತಮ್ಮ ಸರ್ವವಿಧ ಶಕ್ತಿಯನ್ನೂ ಈ ಪ್ರಬಂಧದಲ್ಲಿ ತೋರ್ಪಡಿಸಿಕೊಂಡಿರುವರು.

ಅವರು ಅನುಗ್ರಹಿಸಿರುವಂತೆ ನಮ್ಮ ನಾಡಿನವರೂ ಅದರ ಪೂರ್ಣಫಲವನ್ನು ಅನುಭವಿಸುವಂತಾಗಲೆಂದು ಪ್ರಯತ್ನಿಸಲಾಗಿದೆ. ಸದಭಿಮಾನಿಗಳ ಸಹಾಯದಿಂದ ಸಾರ್ಥಕವಾಗಲೆಂದು ಪ್ರಾರ್ಥಿಸುತ್ತೇನೆ.

*ಇತಿ, ಸದಾಚಾರ್ಯದಯಾವಲಂಬೀ*

**ವಿದ್ವಾನ್ ಹ- ಗೋಪಾಲಾಚಾರ್ಯಃ**
ನಂ. 14, 4ನೇ ಕ್ರಾಸ್, ಕಾಳಿದಾಸ ರಸ್ತೆ,
ವಾಣಿವಿಲಾಸ ಮೊಹಲ್ಲ, ಮೈಸೂರು

ಶುಭಕೃತ್
ಕಾರ್ತಿಕ - ಮಾರ್ಗಶಿರ
1962

॥ಶ್ರೀಃ॥

॥ ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ॥

# ಪ್ರಬಂಧಸಾರಃ

## ತನಿಯರ್

ಮೂಲ : ಆರಣನಾರ್ನ್ಗಿಪ್ಪೊರುಳ್ಳೈಯಾಳ್‌ವಾರ್‌ಹಳಾಯ್‌ನ್ದಡೈವೇ
ಅನ್ಬುಡನೇ ಅಂಬುವಿಯೋರನೈವರು ಮೀಡೇರವೆನ್ರು,
ನಾರಣನಾರ್‌ತಾಳ್‌ಹಳಿಲೇನಾಲಾಯಿರಂ ತಮಿಳಾಲ್
ನಣ್ಣಿಯುರೈಶೈಯ್‌ದವತ್ತೈ ನಾಡಿವಹೈತೊಹೈಶೆಯ್‌ದಾಯ್
ಪೂರಣಮಾಞಾನಿಯರ್ ಶೇರ್‌ಪೊಂಗು ಪುಗಳ್‌ತೂಪ್ಪುಲ್ ವರುಂ
ಪುನಿತನೆನ್ರುಂ ಪಿಳ್ಳೈಯೆನ್ರುಂಬುವಿಯೋರ್ ಪುಗಳ್‌ವೇಂಗಡವಾ ।
ದಾರಣಿಯೋರಿಂಗುಹಕ್ಕಶಾತ್ತಿಯ ನಲ್ ಪ್ರಬಂದಶಾರಂ
ತನ್ನೈಯುರೈತ್ತುವಾಳುಮನಂ ತಂದರುಳಾಯೆನ್ತನಕ್ಕೇ ॥

ಅರ್ಥ :- ಅಂ-ಬುವಿಯೋರ್-ಅನೈವರುಂ = ರಮಣೀಯವಾದ ಈ ಮಹೀತಲದ ಸಮಸ್ತರೂ, ನಾರಣನಾರ್-ತಾಳ್‌ಹಳಿಲ್-ನಣ್ಣಿ = ಶ್ರೀಮನ್ನಾರಾಯಣನ ಅಡಿದಾವರೆಗಳನ್ನು ಆಶ್ರಯಿಸಿ, ಈಡೇರ-ಎನ್ರು = ಉಜ್ಜೀವಗೊಳಿಸಲೆಂದು, ಆಳ್‌ವಾರ್‌ಹಳ್ = ಆಳ್ವಾರ್ರುಗಳು, ಅನ್ಬುಡನೇ = ಪ್ರೀತಿಯಿಂದ, ಆರಣಂ-ನಾರ್ನ್ಗಿ-ಪೊರುಳ್ಳೈ = ನಾಲ್ಕು ವೇದಗಳ ತಾತ್ಪರ್ಯವನ್ನೂ, ಅಡೈವೇ-ಆಯ್‌ನ್ದು = ಕ್ರಮವಾಗಿ ಸಂಪೂರ್ಣವಾಗಿ ಆರಿಸಿ, ನಾಲಾಯಿರಂ = ನಾಲ್ಕು ಸಾವಿರ ಪಾಶುರಗಳನ್ನು, ತಮಿಳಾಲ್ = ತಮಿಳಿನಲ್ಲಿ, ಉರೈ-ಶೆಯ್‌ದವತ್ತೈ-ನಾಡಿ = ಹೇಳಿರುವುದನ್ನು ಸಂಗ್ರಹಿಸಿ, ವಹೈ-ತೊಹೈ-ಶೆಯ್‌ದಾಯ್ = ವಿಭಾಗಿಸಿ ಎಣಿಸಿದ ಮಹಾತ್ಮನೇ ! ಪೂರಣ-ಮಾ-ಞಾನಿಯರ್-ಶೇರ್ = ಪರಿಪೂರ್ಣವಿಜ್ಞಾನಿಗಳು ಸೇರಿ ನಿತ್ಯವಾಸ ಮಾಡುವ, ಪೊಂಗು-ಪುಗಳ್ = ಮೇಲೆ ಮೇಲೆ ಹೆಚ್ಚುವ ಯಶಸ್ಸುಳ್ಳ, ತೂಪ್ಪುಲ್-ವರುಂ = ತೂಪ್ಪುಲಲ್ಲಿ ಅವತರಿಸಿದ, ಪುನಿದನ್-ಎನ್ರುಂ = ಪರಿಶುದ್ಧರೆಂದೂ, ಪಿಳ್ಳೈ-ಎನ್ರೂ = ಕುಮಾರರೆಂದೂ, ಬುವಿಯೋರ್-ಪುಗಳ್- ವೇಂಗಡವಾ = ಲೋಕದವರೆಲ್ಲರಿಂದಲೂ ಹೊಗಳಿಸಿಕೊಳ್ಳುವ ವೇಂಕಟನಾಥರೇ ! ದಾರಣಿಯೋರ್ = ಈ ಜಗದ ಜನರು, ಇಂಗು-ಉಹಕ್ಕ = ಇಲ್ಲೇ ಖ್ಯಾತಿಪಡೆವಂತೆ, ಶಾತ್ತಿಯ = (ನೀವು) ಮಾಡಿದ,

ನಲ್-ಪ್ರಬಂದ-ಶಾರಂ-ತನ್ನೈ = ಉತ್ತಮವಾದ ''ಪ್ರಬಂಧಸಾರ''ವನ್ನು, ಉರ್ರೈತ್ತು - ವಾಳುಂ-ಮನಂ = ಅನುಸಂಧಾನ ಮಾಡಿ ಉಜ್ಜೀವಿಸುವ ಮನಸ್ಸನ್ನು, ಎನ್-ತನಕ್ಕು = ನನಗೆ, ತಂದು-ಅರುಳಾಯ್ = ಕೊಟ್ಟು ಕರುಣಿಸ್ಸೆ.

आम्नायानां चतुर्णां मुनय इह समस्तार्थसारं समोदं ।
सर्वेप्युज्जीविता स्सन्त्विति पदयुगलं प्राप्य नारायणस्य ।।
व्याजह्रुर्द्राविडोक्त्या चतुरनुगसहस्रं च पद्यानि यानि ।
तेषां संख्याविभागाकलनपटुमते ! भो महात्मन् ! कवीन्द्र ! ।। १

पूर्णज्ञानाधिवासे ह्युपचितयशसि प्रोदित स्तूप्पुलाख्ये ।
संशुद्ध स्सत्कुमार स्त्विति भुवि विनुत स्त्वं गुरो ! वेङ्कटेश ! ।।
मर्त्यास्सन्त्वत्र हृष्टाइति भवदुदितं सत्प्रबन्धादिसारं ।
चित्तं चोज्जीवितं यन्मननत इह मे देहि तादृक् दयस्व ।। २

ಮೂಲ : ಆದಿಮರ್ರೈಯೋದಿಮಕಿಳ್‌ಅಯಗ್ಗಿರೀವರ್ ತಮ್ಮರುಳಾಲ್
ಅನ್ಬುಡನೇತೂಪ್ಪುಲ್ ನಗರವದರಿತ್ತೇಯಿಂಗುವಂದು,
ವಾದಿಯರ್ರೈವೆನ್ರುವಂದು ವಣ್ಬುವಿ ಮೇಲ್ಏತಿರಾಶರ್
ವಾಳ್‌ವುರುನಲ್‌ದರಿಶನತ್ತೈವಣ್ಮೈಯುಡನೇ ವಳರ್ತ್ತು,
ನೀದಿನೆರಿತವರಾಮಲ್ ನಿರುತ್ತಿಯಿಡುಂ ವೇಂಗಡವಾ !
ನೇಶಮುಡನಾಳ್‌ವಾರ್‌ಹಳ್‌ನಿಲೈಹಳೈಯೆಲ್ಲಾಮುಣರ್‌ನ್ದು ।
ಶಾದುಶನುಂ ವಾಳವೆನ್ರು ಶಾತ್ತಿಯ ನಲ್‌ಪ್ರಬಂದಶಾರಂ
ತನ್ನೈಯುರ್ರೈತ್ತುವಾಳುಮನಂ ತನ್ದರುಳಾಯೆನ್ತನಕ್ಕೆ ॥ 2

ಅರ್ಥ :- ಆದಿ-ಮರ್ರೈ = ಅನಾದಿ ವೇದಗಳನ್ನು, ಓದಿ = (ಬ್ರಹ್ಮನಿಗೆ) ಉಪದೇಶಿಸಿ, ಮಗಿಳ್ = ಸಂತೋಷಪಟ್ಟು, ಅಯಗ್ಗಿರೀವರ್-ತಂ-ಅರುಳಾಲ್ = ಹಯಗ್ರೀವರ ದಯೆಯಿಂದ, ತೂಪ್ಪುಲ್-ನಗರ್-ಅವತರಿತ್ತು = ತೂಪ್ಪುಲ್‌ನಲ್ಲಿ ಅವತರಿಸಿ, ಅನ್ಬುಡನೇ = ಪ್ರೀತಿಯಿಂದ, ಇಂಗು-ವಂದು = ಇಲ್ಲಿ ಬಂದು, ವಾದಿಯರ್ರೈ-ವೆನ್ರು-ಉವಂದು = ಪರಮತಾವಾದಿಗಳನ್ನು ಜಯಿಸಿ, ಹರ್ಷಿಸಿ, ವಣ್-ಬುವಿ-ಮೇಲ್ = ಬಲಿಷ್ಠವಾದ ಭೂಮಂಡಲದಲ್ಲಿ, ವಾಳ್-ಉರು = ನೆಲೆಯಾಗಿರುವ, ಎತಿರಾಶರ್ = ಶ್ರೀಭಾಷ್ಯಕಾರರ, ನಲ್-ದರಿಶನತ್ತೈ = ಅತ್ಯುತ್ತಮ ಸಿದ್ಧಾಂತವನ್ನು, ವಣ್ಮೈ-ಉಡನೇ-ವಳರ್ತ್ತು = (ಎಲ್ಲರೂ

ಬಾಳಲೆಂದು) ಉದಾರ ಗುಣದಿಂದ ವೃದ್ಧಿಪಡಿಸಿ, ನೀತಿ-ನೆರಿ-ತವರಾಮಲ್ = ವೇದಮಾರ್ಗವನ್ನು ಬಿಡದಂತೆ, ನಿರುತ್ತಿ-ಇಡುಂ-ವೇಂಗಡವಾ = ಸಂಸ್ಥಾಪನೆ ಮಾಡುವ ವೇಂಕಟನಾಥರೇ ! ಆಳ್‌ವಾರ್‌ಹಳ್-ನಿಲೈಹಳೈ-ಎಲ್ಲಾಂ-ಉಣರ್‌ನ್ದು = ಆಳ್ವಾರ್ರುಗಳ ಸ್ವಭಾವವನ್ನೆಲ್ಲಾ ಅರಿತು, ಶಾದು-ಶನಂ-ವಾಳ-ಎನ್ರು = ಸಾಧು ಜನರು ಉಜ್ಜೀವಸಲಿ ಎಂದು, ನೇಶಂ-ಉಡನ್-ಶಾತ್ತಿಯ = ಪ್ರೀತಿಯಿಂದ ಮಾಡಿದ, ನಲ್-ಪ್ರಬಂದ-ಶಾರಂ-ತನ್ನೈ = ಉತ್ತಮವಾದ ಪ್ರಬಂಧ ಸಾರವನ್ನು, ಉಣರ್‌ನ್ದು-ವಾಳುಂ-ಮನಂ = ಅನುಭವಿಸಿ ಬಾಳುವ ಮನಸ್ಸನ್ನು, ಎನಕ್ಕು-ತಂದು ಅರುಳಾಯ್ = ನನಗೆ ಕೊಟ್ಟು ಕರುಣಿಸು.

वेदाध्यापनतुष्टवाजिशिरसः प्रीत्या च कारुण्यतः ।
तूप्पुल्सम्भव ! वादिनो विजितवन् ! हृष्ट ! स्थिरायां दृढम् ।।
सिद्धान्तं त्वभिवर्धयन् यतिपते स्तस्यैव संस्थापक ! ।
श्रीमान् ! वेङ्कटनाथ ! देशिकमणे ! वेदैकपद्याश्रय ।। १

सम्यक् सर्वान् स्वभावान् मुनिकुलमहितांश्चानुभूयाथ तद्वत् ।
सन्त श्चोज्जीविता स्सन्त्विति सहजपरप्रीतिमूर्ते ! सुकीर्ते ! ।।
वेदान्तचार्यनामन् ! भवदुपरचितं सत्प्रबन्धादिसारं ।
चित्तं चोज्जीवितं यन्मननत इह मे देहि तादृक् दयस्व ।। २

ಮೂಲ : ಆಳ್ವಾರ್‌ಹಳವತರಿತ್ತ ನಾಳೂರ್ ತಿಂಗಳ್
ಅಡೈವು ತಿರುನಾಮಂಗಳವರ್ ತಾಂಶೆಯ್ದ
ವಾಳ್ವಾನ ತಿರುಮೊಳಿಹಳವತ್ತುಳ್ ಪಾಟ್ಟ್
ವಹೈಯಾನ ತೊಹೈಯಿಲಕ್ಕ ಮತ್ತು ಮೆಲ್ಲಾಂ,
ವೀಳ್ವಾಹ ಮೇದಿನಿಮೇಲ್ ವಿಳಂಗನಾಳುಂ
ವಿರಿತ್ತುರೈಕ್ಕುಂ ಕರುತ್ತುಡನೇ ಮಿಕ್ಕೋರ್‌ತಂಗಳ್,
ನೀಳ್ವಾದನಿರಂತರಮುಂ ತೊಳುದು ವಾಳ್‌ತ್ತುಂ
ನೇಶಮುಡನಡಿಯೇನ್ ತನ್‌ನೆಂಜುತಾನೇ ॥ 1

ಅರ್ಥ :- ಆಳ್‌ವಾರ್‌ಹಳ್-ಅವರಿತ್ತ = ಆಳ್ವಾರ್ರುಗಳು ಅವತರಿಸಿದ, ನಾಳ್ = ದಿನ (ನಕ್ಷತ್ರ) ಊರ್ = ಊರು, ತಿಂಗಳ್ = ತಿಂಗಳು, ಅಡೈವು = ಕ್ರಮ (ಅವರವರ ಅವತಾರ ಕ್ರಮ) ತಿರುನಾಮಂಗಳ್ = ಹೆಸರು, ಅವರ್-ತಾಂ-ಶೆಯ್ದ = ಅವರವರು ಮಾಡಿದ,

ವಾಳ್ವಾನ-ತಿರುಮೊಳಿ ಹಳ್ = (ಸರ್ವರೂ) ಉಜ್ಜೀವಿಸಲು ಕಾರಣವಾದ ಸೂಕ್ತಗಳು, ಅವತ್ತುಳ್-ಪಾಟ್ಟ್-ವಹೈಯಾನ-ತೊಹೈ = ಆ ದಿವ್ಯ ಪ್ರಬಂಧಗಳಲ್ಲಿರುವ ಪಾಶುರಗಳ ವಿಭಾಗದಂತೆ ಎಣಿಕೆಯೂ, ಇಲಕ್ಕಂ = ಒಟ್ಟು ಸಂಖ್ಯೆ ಮತ್ತುಂ-ಎಲ್ಲಾಂ = ಆಯಾಪ್ರಬಂಧಗಳ ಸಾರಾಂಶವೆಲ್ಲವನ್ನೂ, ವೀಳ್‌ವಾಹ = ಎಲ್ಲರೂ ಆಸೆಪಡುವಂತೆ, ನಾಳುಂ = ಎಂದೆಂದಿಗೂ, ಮೇದಿನಿಮೇಲ್-ವಿಳಂಗ = ಭೂಮಂಡಲದಲ್ಲಿ ಬೆಳಗುವಂತೆ, ವಿರಿತ್ತು-ಉರೈಕ್ಕುಂ-ಕರುತ್ತು-ಉಡನ್ = ಪ್ರಚುರ ಪಡಿಸಿ ಹೇಳಬೇಕೆಂಬ ಅಭಿಲಾಷೆಯಿಂದ, ಅಡಿಯೇನ್-ತನ್-ನೆಂಜು = ಈ ನನ್ನ ಮನಸ್ಸು, ಮಿಕ್ಕೋರ್-ತಂಗಳ್ = ಹಿರಿಯರಾದಾಚಾರ್ಯರ, ನೀಳ್-ಪಾದಂ = ಮಹಾಮಹಿಮೆಯುಳ್ಳ ಪಾದಗಳನ್ನು, ನೇಶಂ-ಉಡನ್ = ಭಕ್ತಿಯಿಂದ, ನಿರಂತರಮುಂ = ಯಾವಾಗಲೂ, ತೊಳುದು = ಸೇವಿಸಿ, ವಾಳ್‌ತ್ತುಂ = ಚೆನ್ನಾಗಿ ಬಾಳುವಂತೆ ಮಾಡುವುದು.

ತಾತ್ಪರ್ಯ :- ಆಳ್ವಾರ್ರುಗಳು ಲೋಕೋಜ್ಜೀವನಾರ್ಥವಾಗಿ ಅವತಾರಮಾಡಿದರು. ಅವರು ಅವತರಿಸಿದ ನಕ್ಷತ್ರ, ತಿಂಗಳು, ದಿವ್ಯಸ್ಥಳ, ಹೆಸರು, ಅವರು ರಚಿಸಿದ ಪ್ರಬಂಧ, ಅದರಲ್ಲಿನ ಪದ್ಯಸಂಖ್ಯೆ ಮತ್ತು ಒಟ್ಟಿನಲ್ಲಿ ನಾಲ್ಕು ಸಾವಿರವಾಗಿ ಬೆಳಗುತ್ತಿರುವ ವಿವರವನ್ನೂ ಯಾವ ಅನುಮಾನಕ್ಕೂ ಅವಕಾಶವಿಲ್ಲದಂತೆ ಅನುಸಂಧಾನಮಾಡಿ, ಸಕಲರೂ ಉಜ್ಜೀವನಗೊಳ್ಳಲೆಂದು ತಾವು ರಚಿಸಿದ ಈ ''ಪ್ರಬಂಧಸಾರ''ವೆಂಬುದು ನಿರ್ವಿಘ್ನವಾಗಿ ಪೂರ್ಣಗೊಳ್ಳಲೆಂದು ತಮ್ಮ ಪೂರ್ವಾಚಾರ್ಯರ ಪಾದಪದ್ಮಸ್ಮರಣ ರೂಪವಾದ ಮಂಗಳಪದ್ಯವನ್ನು ಮೊದಲು ಮಾಡಿರುವರು. ಓ ಮನಸ್ಸೇ! ನೀನು ನಮ್ಮ ಪೂರ್ವಗುರುಗಳ ಪಾದಸ್ಮರಣೆ ಮಾಡಿ, ಮುಂದೆ ವಿವರಿಸುವ ಈ ಪ್ರಬಂಧಾನು ಸಂಧಾನದಿಂದ ನೀನೊಬ್ಬನೇ ಆನಂದಿಸಿ ಪೂತನಾಗುವುದಲ್ಲದೇ ಇಡೀ ಭಾಗವತೋತ್ತಮರೆಲ್ಲರನ್ನೂ ಆನಂದಪಡಿಸಿ ಎಲ್ಲರಬಾಳನ್ನೂ ಹಸನಾಗಿಸು.

**यस्मिन्नृक्षे पुरे मास्यजनिषत मुनीन्द्राश्च तत्तत्क्रमाख्याः ।**
**तत्तद्दिव्यप्रबन्धा विभजनगणनाभ्यां सहाहत्यसंख्याः ।।**
**तत्तत्सारार्थजातं निखिल मवगतास्सर्व उज्जीविता स्स्युः ।**
**भायुश्चेत्यार्यपादौ विशद मभिहितुं सेवते मानसं मे ॥** १

ಮೂಲ : ಅರುಳ್ ಮಿಗತ್ತದೊರುವಡಿವಾಯ್ ಕಚ್ಚಿತನ್ನಿಲ್
ಐಪ್ಪಶಿಮಾದತ್ತಿರುವೋಣುತ್ತುನಾಳಿಲ್,
ಪೊರುಳ್ ಮಿಗುತ್ತಮರ್ರೈವಿಳಂಗಬ್ಬುವಿಯೋರುಯ್ಯ
ಪೊಯ್‌ಹೈದನಿಲ್ ವನ್ದುದಿತ್ತಪುನಿದಾಮುನ್ನಾಳ್,

ಇರುಳದನಿಲ್ ತಣ್ಕೋವಲಿಡ್ಡೈಕಳಿಚ್ಚೆನ್ರು
ಇರುವರುಡನ್ನಿರ್ಕವುಮ್ಮಾಲಿಡ್ಡೈನೆರುಕ್ಕ,
ತಿರುವಿಳಕ್ಕಾಮೆನ "ವೈಯ್ಯನ್ದಹಳಿ" ನೂರಾಂ
ಶೆಳುಂ ಪೊರುಳ್ಳೈಯೆನಕ್ಕರುಳ್ಶೆಯ್ ತಿರುಂದನೀಯೇ ॥ 2

ಅರ್ಥ :- ಪೊರುಳ್-ಮಿಗುತ್ತ = ಸಾರಾರ್ಥಗಳು ಹೆಚ್ಚಾಗಿರುವ, ಮರೈ-ವಿಳಂಗ = ವೇದಗಳು ಮತ್ತಷ್ಟು ಪ್ರಕಾಶಿಸುವಂತೆ ಮಾಡಲೂ, ಬುವಿಯೋರ್-ಉಯ್ಯ = ಈ ಲೋಕದವರು ಉಜ್ಜೀವನಗೊಳ್ಳಲೆಂದೂ, ಐಪ್ಪಶಿ-ಮಾದ-ತಿರುವೋಣತ್ತು-ನಾಳಿಲ್ = ತುಲಾಮಾಸದ ಶ್ರವಣ ನಕ್ಷತ್ರದಲ್ಲಿ, ಕಚ್ಚಿ-ತನ್ನಿಲ್ = ಕಾಂಚೀಪುರದಲ್ಲಿ, ಪೊಯ್ಹೈ-ತನ್ನಿಲ್ = ಪದ್ಮಸರಸ್ಸಿನಲ್ಲಿ, ಮಿಗುತ್ತದ್. ಒರು-ವಡಿವಾಯ್ = (ಚೇತನರಿಗಾಗಿ) ಅತಿಶಯವಾದ ದಯೆಯೇ ರೂಪವೆತ್ತಿ ಬಂದಂತೆ, ವಂದು-ಉದಿತ್ತ = ಬಂದವತರಿಸಿದ, ಪುನಿದಾ = ಅತಿಪಾವನಕರರಾದ ಪೊಯ್ಹೈ ಆಳ್ವಾರೇ !, ಮುನ್ನಾಳ್ = ಹಿಂದೊಮ್ಮೆ, ಇರುಳದನಿಲ್ = ಕತ್ತಲಿಲ್, ತಣ್-ಕೋವಲ್ = ಶೀತಲವಾದ ತಿರುಕ್ಕೋವಲೂರಿನಲ್ಲಿ, ಇಡ್ಡೈ-ಕಳಿ-ಶೆನ್ರು = (ಒಂದು ಮನೆಯ) ಬೀದಿ ಜಗುಲಿಯ ಮೇಲೆ ಸೇರಿ, ಇರುವರ್-ಉಡನ್-ನಿರ್ಕವುಂ = ಇಬ್ಬರೊಡನೆ (ಪೂದತ್ತಾರ್-ಪೇಯಾಳ್ವಾರ್) ಕೂಡಿರಲು, ಮಾಲ್-ಇಡ್ಡೈ-ನೆರುಕ್ಕ = (ಆಗ) ಭಗವಂತನು ನಡುವೆ ಬಂದಿರಲು, ತಿರು-ವಿಳಕ್ಕು-ಆಂ-ಎನುಂ = ಅದ್ಭುತ ಜ್ಯೋತಿಯಾಗಿದೆಯೆಂದು ಹೇಳಿದ, 'ವೈಯ್ಯಂದಹಳಿ'' = ಈ ಪದದಿಂದಲೇ ಮೊದಲಾಗುವ, ನೂರುಂ = (ಮುದಲ್ ತಿರುವಂದಾದಿ) ನೂರು ಪಾಶುರಗಳೆಂಬ, ಶೆಳುಂ-ಪೊರುಳ್ಳೈ = ಅಭಿವೃದ್ಧವಾಗುವ ಐಶ್ವರ್ಯವನ್ನು, ನೀ-ಎನುಕ್ಕು = ನೀನು ನನಗೆ, ತಿರುಂದ-ಅರುಳ್-ಶೆಯ್ = ಕೊರತೆಯಾಗದಂತೆ ತಿಳಿಸಿ ಕರುಣಿಸಬೇಕು.

ತಾತ್ಪರ್ಯ :- ಪೊಯ್ಹೈ ಆಳ್ವಾರು ಕಾಂಚಿಯಲ್ಲಿ ತಾವರೆಕೆರೆಯಲ್ಲಿ ಉದಯಿಸಿದರು. ಆ ಸರಸ್ಸಿನ ಹೆಸರು ಪೊಯ್ಹೈ, ಆದ್ದರಿಂದಲೇ ಅದೇ ಹೆಸರಿನಿಂದಲೇ ಪ್ರಸಿದ್ಧರಾದರು. ಈ ಮಹಿಮರ ಅವತಾರದಿಂದ ವೇದಾಂತಾರ್ಥಗಳು ಗಹನವಾಗಿದ್ದರೂ ಬೆಳಕಿಗೆ ಬಂದುವು. ಆದರಿಂದ ಸಮಸ್ತರೂ ಉಜ್ಜೀವಿಸಲು ಅವಕಾಶವಾಯಿತು. ಇವರು ಒಮ್ಮೆ ತಿರುಕ್ಕೋವಲೂರಿಗೆ ಹೋಗಿದ್ದಾಗ ''ಮೃಕಂಡು'' ಎಂಬ ಮುನಿವರರ ಮನೆಯ ಮುಂಜಗುಲಿಯಲ್ಲಿ ತಂಗಿದರು. ರಾತ್ರಿ ತುಂಬ ಕತ್ತಲು, ಅದೇ ರಾತ್ರಿ ಅಲ್ಲಿಗೆ ಪೂದತ್ತಾಳ್ವಾರು ಪೇಯಾಳ್ವಾರು ಎಂಬ ಇಬ್ಬರು ಬಂದು ಸೇರಿದರು. ಅದೇ ಸಮಯ ನೋಡಿ ಇವರ ನಡುವೆ ಭಗವಂತನು ಸೇರಿದನು. ಇವರ ಮೂವರೂ ಜ್ಞಾನಜ್ಯೋತಿಯನ್ನು ಪಡೆದು ಒಬ್ಬೊಬ್ಬರೂ ನೂರು ನೂರು ಪಾಶುರಗಳನ್ನು ಅಂತಾದಿರೂಪದಲ್ಲಿ ಪಾಡಿದರು. ಅದರಲ್ಲಿ ಜಗತ್ತಿಗೆ ಬೆಳಕನ್ನು ನೀಡಿ, ಕಾಪಾಡಿದಂತೆ ಹೊಂದಿಕೊಂಡಿತು. ಇವರ ಸೂಕ್ತಿ

''ವೈಯ್ಯಂದಹಳಿಯಾ'' ಎಂದಾರಂಭವಾಗುವುದು, ಇದೇ ''ಮುದಲ್‌ತಿರುವಂದಾದಿ'' ಎಂಬುದು. ತಮ್ಮ ಮನಸ್ಸಿಗೆ ಮಂದಟ್ಟಾಗುವಂತೆ ಮಾಡಬೇಕೆಂದು, ನಮ್ಮ ದೇಶಿಕರು ಆಳ್ವಾರ್ರನ್ನು ಪ್ರಾರ್ಥಿಸುತ್ತಾರೆ.

सारार्थाकरवेदवाग्विलसनक्षोणीजनोजीवने ।
कर्तुं मासि तुलाभिधे श्रवणभे काञ्च्यां सरस्यम्बुजे ॥
कारुण्यातिशयो यथा धुततनुः प्रादुर्भवन् ! पूत ! भोः ।
श्रीदेवालयपत्तने शिखिरिते योगिन् ! सरस्सम्भव ! ॥ १

रात्रौ कस्यचिदालयस्य पुरतोऽलिन्दं भवत्यास्थिते ।
द्वाभ्यां मघ्य उपागते भगवति ''ज्योतिः परं स्यादि'' ति ॥
य ''द्वैय्यन्दकळी'' ति पद्यशतकं गीतं समृद्धं वसु ।
त्वं मे चेतसि तन्निबोध सुखदं वेद्यं च कारुण्यतः ॥ १

ಮೂಲ : ಕಡನ್ಮಲ್ಲೈಕ್ಕಾವಲನೇ ! ಪೂದವೇನ್ದೇ !
ಕಾಶಿನಿಮೇಲೈಪ್ಪಶಿಯಿಲವಿಟ್ಟನಾಳ್‌ವನ್ದು,
ಇಡರ್‌ಕಡಿಯುಂ ತಣ್‌ತಿರುಕ್ಕೋವಲಿಡೈಕಳಿಚ್ಚೆನ್ರು,
ಇಣ್ಣೆಯಿಲ್ಲಾ ಮೂವರು ಮಾಯಿಶೈನ್ದೇನಿರ್ಕ,
ನಡುವಿಲಿವರೊರುವರು ಮೆನ್ನರಿಯಾವಣ್ಣಂ
ನಳ್ಳಿರುಳಿಲ್ ಮಾಲ್ ನೆರುಕ್ಕನಸ್ದಾಙ್ಞಾನ,
ಶುಡರ್‌ವಳಕ್ಕೇತ್ತಿಯ ವನ್ಬೇದಕಳಿಯಾನ
ತೊಡೈನೂರು ಮೆನಕ್ಕರುಳ್‌ಶೆಯ್‌ತುಲಂಗನೀಯೇ ॥ 3

ಅರ್ಥ :- ಕಡಲ್-ಮಲ್ಲೈ-ಕಾವಲನೇ = ''ತಿರುಕ್ಕಡಲ್‌ಮಲ್ಲೈ'' ಎಂಬ ದಿವ್ಯದೇಶದ ಪಾಲಕನೆ ! ಪೂದವೇಂದೆ = ಪೂದತ್ತಾಳ್ವಾರೆಂಬ ಸ್ವಾಮಿಯೆ ! ಕಾಶಿನಿ-ಮೇಲ್ = ಭೂಮಂಡಲದಲ್ಲಿ, ಐಪ್ಪಶಿಯಿಲ್ = ತುಲಾಮಾಸದಲ್ಲಿ ಅವಿಟ್ಟ-ನಾಳ್-ವಂದು = ಧನಿಷ್ಠಾ ನಕ್ಷತ್ರದದಿನ ಅವತರಿಸಿ, ಇಡರ್ ಕೋವಲ್ = ತಿರುಕ್ಕೋವಲೂರಿನಲ್ಲಿ, ಇಡೈ-ಕಳಿ-ಶೆನ್ರು = ಒಂದು ಮನೆಯ ಜಗುಲಿಯಲ್ಲಿ ಸೇರಿ, ಇಣ್ಣೈ-ಎಲ್ಲಾ-ಮೂವರು ಮಾಯ್ = ಅಸಾಧಾರಣವಾದ (ನೀವು) ಮೂವರೂ, ಇಶೈಂದೇ-ಇರ್ಕ = ಒಂದಾಗಿ ಸೇರಿರಲು, ನಳ್ಳಿರುಳಿಲ್ = ತುಂಬ ಕತ್ತಲಲ್ಲಿ, ನಡುವಿಲ್-ಒರುವರುಂ-ಇವರ್-ಎನ್ರು = (ಇವರಲ್ಲಿ) ಯಾರೊಬ್ಬರೂ ಇಂತಹವರೆಂದು, ಅರಿಯಾವಣ್ಣಂ = ಅರಿಯದಂತೆ, ಮಾಲ್-ನೆರುಕ್ಕ

= ದೇವರು ಬಂದಿರಲು, (ಅವನನ್ನು ಸಂದರ್ಶಿಸಲು) ನಂದಾ-ಞಾನ-ಶುಡರ್-ವಿಳಕ್ಕು-ಏತ್ತಿಯ = ನಂದಿಹೋಗದ ಜ್ಞಾನಜ್ಯೋತಿ ಪೂರ್ಣವಾದ ದೀಪವನ್ನು ಉರಿಸಿದ, ಅನ್ಬೇದಕಳಿಯಾನ = "ಅನ್ಬೇದಕಳಿಯಾ" ಎಂದಾರಂಭವಾಗುವ, ತೊಡೈ ನೂರುಂ = ನೂರು ಪದ್ಯಗಳನ್ನೂ, ನೀ-ಎನಕ್ಕು = ನೀನು ನನಗೆ, ತುಲಂಗ = ಚೆನ್ನಾಗಿ ಬೆಳಗುವಂತೆ, ಅರುಳ್-ಶೆಯ್ = ಕೃಪೆಮಾಡು.

ತಾತ್ಪರ್ಯ :- ತುಲಾಮಾಸದಲ್ಲಿ ಧನಿಷ್ಠಾ ನಕ್ಷತ್ರದಲ್ಲಿ "ತಿರುಕ್ಕಡಲ್‌ಮಲ್ಲೈ" ಎಂಬ ದಿವ್ಯ ಕ್ಷೇತ್ರದಲ್ಲಿ ಅವತರಿಸಿದ ಪೂದತ್ತಾಳ್ವಾರ್ರೇ ! ನೀವು ಪಾಡಿದ "ಅನ್ಬೇದಕಳಿಯಾ" ಎಂದು ಮೊದಲಾಗುವ, "ಇರಂಡಾಂ ತಿರುವಂದಾದಿ" ಎಂಬ ಹೆಸರಿನ ದಿವ್ಯ ಪ್ರಬಂಧದ ನೂರು ಪಾಶುರಗಳನ್ನು ನನ್ನ ನಿತ್ಯದ ಅನುಸಂಧಾನಕ್ಕೆ ಮುಖ್ಯವಾಗಿರುವುದರಿಂದ ದಯವಿಟ್ಟು ನನಗೆ ಅನುಗ್ರಹಿಸಬೇಕು ಎಂದು ಶ್ರೀಮದಾಚಾರ್ಯರು ಪ್ರಾರ್ಥಿಸಿರುತ್ತಾರೆ.

**श्रीमान् ! अम्बुधिमल्लपाल ! सुमुने ! भूताख्य ! नाथ ! क्षितौ ।**<br>
**तौले मासि धनिष्ठभे धृतजने ! श्रीकोवलूर् सत्पुरे ॥**<br>
**एकत्र प्रघणे भवत्स्वपि यथाऽन्योन्यं न विद्यात्तथा ।**<br>
**श्रीशे सत्यनपायसन्मतिमहाज्योतिः प्रदीपोत्सवम् ॥ १**

**द्वितीयं शतकं गीतं "अन्बेदकळिये"ति हि ।**<br>
**प्रद्योतेत यथा चित्ते मदीयेऽनुगृहाण भोः ॥ २**

**ಮೂಲ :** **ಮಾಮಯಿಲೈಪ್ಪದಿಯದನಿಲ್ ತುಲಾಮಾದತ್ತಿಲ್**<br>
**ವರುಂಶದಯತ್ತವತರಿತ್ತು ಕ್ಕೋವಲೂರಿಲ್,**<br>
**ತೂಮುನಿವರಿರುವರುಡನ್ ತುಲಂಗನಿನ್ರು,**<br>
**ತುನ್ನಿಯಪೇರಿರುಳ್ ನೀಂಗಜ್ಜೋತಿತ್ತೋನ್ರ,**<br>
**ಶೇಮಮುಡನೆಡುಮಾಲೈಕ್ಕಾಣಪ್ಪುಕ್ಕು**<br>
**ತಿರುಕ್ಕಂಡೇನೆನವುರೈತ್ತತೇವೇ ಉನ್ತನ್,**<br>
**ಪಾಮರುವು ತಮಿಳ್ ಮಾಲೈನೂರುಪಾಟ್ಟುಂ**<br>
**ಪಳವಡಿಯೇನುಕ್ಕರುಳ್‌ಶೆಯ್ ಪರಮ ! ನೀಯೇ ॥ 4**

ಅರ್ಥ :- ಮಾಮಯಿಲ್-ಐಪ್ಪತಿಯದನಿಲ್ = ಮಹಾಮಹಿಮೆಯುಳ್ಳ ಮೈಲಾಪುರವೆಂಬ ದಿವ್ಯಕ್ಷೇತ್ರದಲ್ಲಿ, ತುಲಾಮಾದತ್ತಿಲ್-ವರುಂ = ತುಲಾಮಾಸದಲ್ಲಿ ಬರುವ, ಶದಯತ್ತು = ಶತಭಿಷಕ್ ನಕ್ಷತ್ರದ ದಿನ, ಅವತರಿತ್ತು = ಉದಯಿಸಿ,

ಕೋವಲೂರಿಲ್ = ತಿರುಕ್ಕೋವಲೂರಿನಲ್ಲಿ, ತೂ-ಮುನಿವರ್-ಇರುವರ್-ಉಡನ್ = ಪರಮಪಾವನರಾದ (ಹಿಂದಿನ) ಇಬ್ಬರು ಆಳ್ವಾರ್ರ ಸಂಗಡ, ತುಲಂಗ-ನಿನ್ರು = ಬೆಳಗುತ್ತ, ತುನ್ನಿಯ-ಪೇರ್-ಇರುಳ್-ನೀಂಗ = (ಎಲ್ಲೆಲ್ಲೂ) ಕವಿದ ಕಗ್ಗತ್ತಲೆಯು ತೊಲಗುವಂತೆ, ಶೋದಿ-ತೋನ್ರ = ಜ್ಯೋತಿಸ್ಸು ಕಾಣಿಸಿಕೊಳ್ಳಲು, ಶೇಮಂ-ಉಡನ್ = ಅತ್ಯಾನಂದದಿಂದ, ನೆಡು-ಮಾಲ್ಶೈ-ಕಾಣ-ಪುಕ್ಕು = ಪ್ರತ್ಯಕ್ಷವಾಗಿ ಪರಮಪುರುಷನನ್ನು ಕಾಣಲು ಆರಂಭಿಸಿ, ''ತಿರು-ಕ್ಕಂಡೇನ್'' ಎಂದು ತೊಡಗಿ ಹೇಳಿದ ಸ್ವಾಮಿಯೇ ! ಪರಮ = (ಎಲ್ಲರಿಗಿಂತ) ಉತ್ತಮನೇ ! ಉನ್-ತನ್ = ನಿನ್ನದಾದ, ಪಾಮರುವು-ತಮಿಳ್-ಮಾಲ್ಶೈ = ಪದ್ಯಗಳಿಂದ ತುಂಬಿದ ತಮಿಳಿನ ಮಾಲಿಕೆಯಾದ, ನೂರು-ಪಾಟ್ಟುಂ = ನೂರನ್ನೂ ಪಳಿವಡಿಯೇನುಕ್ಕು = ಅನೇಕ ತಲೆಮಾರುಗಳಿಂದ ನಿನಗೆ ದಾಸನಾದ ನನಗೆ, ನೀ = ನೀನು, ಅರುಳ್-ಶೆಯ್ = ಅನುಗ್ರಹಿಸಬೇಕು.

ತಾತ್ಪರ್ಯ :- ಬಹಳ ಮಹಿಮೆಯುಳ್ಳ (ಈಗಿನ ಮದರಾಸಿನ ಒಂದು ಭಾಗ) ಮೈಲಾಪುರವೆಂಬ ಕ್ಷೇತ್ರದಲ್ಲಿ ಆದಿಕೇಶವಸ್ವಾಮಿ ದೇವಾಲಯದ ಅತಿ ಸಮೀಪದಲ್ಲಿ ತುಲಾಮಾಸದ ಶತಭಿಷಾ ನಕ್ಷತ್ರದಲ್ಲಿ ಅವತರಿಸಿದ ಪೇಯಾಳ್ವಾರ್ರೇ ! ನೀವು ಬಹು ಕರುಣಾಳುಗಳಾಗಿ, ತಿರುಕ್ಕೋವಲೂರಿನಲ್ಲಿ ಹಿಂದಿನ ಇಬ್ಬರು ಆಳ್ವಾರ್ರೊಡನೆ ಕೂಡಿಕೊಂಡಿದ್ದಾದ ಪರಮಾತ್ಮನು ದರ್ಶನಕೊಡಲು, ಅವನನ್ನು ಸಂದರ್ಶಿಸಿದ ಕೂಡಲೇ ''ತಿರುಕ್ಕಂಡೇನ್'' ಎಂದಾರಂಭಿಸಿ, ಸಕಲವೇದಾಂತ ಸಾರಾರ್ಥವನ್ನು ಬೋಧಿಸುವ ನೂರು ಪಾಶುರಗಳನ್ನು ಪಾಡಿದಿರಿ. ಅದೇ ''ಮೂನ್ರಾಂತಿರುವಂದಾದಿ'' ಎಂದು ಪ್ರಖ್ಯಾತಗೊಂಡಿರುವುದು. ನಾನು ಕೇವಲ ಇಂದಿನ ಭಕ್ತನಲ್ಲ, ನಮ್ಮ ಪೀಳಿಗೆಯು ಭಕ್ತಪೀಳಿಗೆ. ಎಷ್ಟೋ ಕಾಲದಿಂದ ನಿಷ್ಕಪಟವಾದ ಭಕ್ತಿಯಿಂದಿರುವ ನನಗೆ ದಯಮಾಡಿ ನಿಮ್ಮ ಆ ನೂರು ಪದ್ಯಗಳನ್ನೂ ಉಪದೇಶಿಸಬೇಕು.

तौले मासे मयूरे पुरे उदित ! जलाधीशतारे महाख्य ! ।
त्वय्यन्याभ्यां मुनिभ्यां सह लसति ''तिरक्कोवलूर'' वास्त्वलिन्दे ।।
ज्योतिष्युद्योतमाने जगति परिवृताज्ञाननिर्मूलनार्थं ।
साक्षात् कुर्वन् श्रियस्त्वं प्रियमिह सुमुने ! मोदमानो महात्मन् ! ।। १

श्रियं व्यलोकयं हीति देव ! ते परम ! स्रजम् ।
द्राविडोक्तिशतीं नित्यनतायानुगृहाण मे ।।

४

ಮೂಲ : ತೈಮಕತ್ತಿಲ್‌ವರುಮಳಿಶೈಪ್ಪರನೇ ! ಮತ್ತೈ
ಚ್ಚಮಯಂಗಳ್ ಪಲತೆರಿಂದು ಮಾಯೋನಲ್ಲಾಲ್

ದೈವಂಮತ್ತಿಲ್ಲೈಯೆನವುರೈತ್ತ ವೇದ
ಚ್ಚೆಳುಂಪೊರುಳ್ ನಾನ್ಮುಹನ್‌ತೋಣ್ಣೂತ್ತಾರುಪಾಟ್ಟುಂ,
ಮೆಯ್‌ಮಿಗುತ್ತ ತಿರುಚ್ಚಂದವಿರುತ್ತಪ್ಪಾಡಲ್
ವಿಳಂಗಿಯನೂತ್ತಿರುಪದುಂ ತಪ್ಪಾಮಲ್ ಮೆಯ್ಯೇ ।
ವೈಯಗತ್ತುಮರವಾಮಲುರೈತ್ತುವಾಳುಂ
ವಗೈಯಡಿಯೇನಕ್ಕುರುಳ್ ಶೆಯ್‌ಮಗಿಳ್‌ನ್ದುನೀಯೇ ॥ 5

ಅರ್ಥ :- ತೈ-ಮಕತ್ತಿಲ್-ವರುಂ = ಮಕರಮಾಸದ ಮಖಾನಕ್ಷತ್ರದಲ್ಲಿ ಅವತರಿಸಿದ ಮಳಿಶೈ-ಪರನೇ = ತಿರುಮಳಿಶೈಯಾಳ್ವಾರ್‌ರೇ ! ಮತ್ತೈ-ಪಲ-ಶಮಯಂಗಳ್-ತೆರಿಂದು = (ತಮ್ಮದೇ ಅಲ್ಲದೆ) ಇತರ ಮತಗಳನ್ನೂ ಅರಿತು, ಮಾಯೋನ್-ಅಲ್ಲಾಲ್ = ಆಶ್ಚರ್ಯಕರಕಾರ್ಯವನ್ನು ಮಾಡುವ ಸರ್ವೇಶ್ವರ್ರನನ್ನಲ್ಲದೆ, ದೆಯ್‌ವಂ-ಮತ್ತಿಲ್ಲೈ = ಬೇರೆ ದೇವರಿಲ್ಲ, ಎನ-ಉರೈತ್ತ = ಎಂದು ಪ್ರಚುರಪಡಿಸಿದ, ವೇದ-ಶೆಳುಂ-ಪೊರುಳ್ = ವೇದದಲ್ಲಿ ತುಂಬಿರುವ ಸಾರಾರ್ಥವಾದ, ನಾನ್ಮುಹನ್ = ''ನಾನ್ಮುಹನ್‌ತಿರುವಂದಾದಿ'' ಎಂದು ಖ್ಯಾತವಾದ, ತೋಣ್ಣೂತ್ತು-ಆರು-ಪಾಟ್ಟುಂ = ತೊಂಭತ್ತಾರು ಪಾಶುರಗಳನ್ನೂ, ಮೆಯ್-ಮಿಹುತ್ತ = ಸತ್ಯವಾದ ಅಂಶಗಳೇ ತುಂಬಿದ, ತಿರುಚ್ಚಂದ-ವಿರುತ್ತ-ಪಾಡಲ್ = ''ತಿರುಚ್ಚಂದ ವಿರುತ್ತಂ'' ಎಂದು ಪ್ರಸಿದ್ಧವಾದ ಛಂದಸ್ಸಿನಲ್ಲಿರುವ ಪಾಶುರಗಳಾಗಿ, ವಿಳಂಗಿಯ = ಪ್ರಕಾಶವಾದ, ನೂತ್ತಿರುಪದುಂ = 120 ಪದ್ಯಗಳನ್ನೂ, ತಪ್ಪಾಮಲ್ = ತಪ್ಪದಂತೆ, ಮೆಯ್ಯೇ = ಇದ್ದುದು ಇದ್ದಂತೆಯೇ, ವೈಯಹತ್ತು = ಈ ಲೋಕದಲ್ಲಿ, ಮರವಾಮಲ್ = ಮರೆಯದಂತೆ, ಉರೈತ್ತು = ಅನುಸಂಧಾನಮಾಡಿ, ವಾಳುಂ-ವಹೈ = ಬಾಳುವಂತೆ, ನೀ-ಮಹಿಳ್‌ನ್ದು = ನೀನು ಪ್ರಸನ್ನಗೊಂಡು, ಅಡಿಯೇನುಕ್ಕು = ಪಾದಸೇವಕನಾದ ನನಗೆ, ಅರುಳ್-ಶೆಯ್ = ಕೃಪೆಮಾಡಬೇಕು.

ತಾತ್ಪರ್ಯ :- ಪುಷ್ಯಮಾಸದ ಮಖಾನಕ್ಷತ್ರದಲ್ಲಿ ''ತಿರುಮಳಿಶೈ'' ಎಂಬ ಮಹೀಸಾರ ಕ್ಷೇತ್ರದಲ್ಲಿ ಅವತರಿಸಿ, ''ತಿರುಮಳಿಶೈಯಾಳ್ವಾರ್'' ಎಂಬ ನಾಮಧೇಯದ ಮಹಾ ಮಹಿಮ ಮುನಿವರ್ಯರೇ ! ನಮ್ಮ ಮತವೊಂದೇ ಅಲ್ಲದೆ, ಇತರ ಅನೇಕ ಮತಸಿದ್ಧಾಂತಗಳನ್ನೂ ಚೆನ್ನಾಗಿ ಪರ್ಯಾಲೋಚಿಸಿ ಕೊನೆಗೆ ''ಶ್ರೀಮನ್ನಾರಾಯಣನೊಬ್ಬನೇ ಸಮಸ್ತರಿಂದಲೂ ಉಪಾಸನೆಗೊಳ್ಳುವ ದೇವತೆ ಬೇರೆಯಲ್ಲ'' ಎಂಬ ವೇದದ ಸಾರಾರ್ಥವನ್ನು 96 ಪಾಶುರಗಳಲ್ಲಿ ''ನಾನ್ಮುಹನ್ ತಿರುವಂದಾದಿ'' ಎಂಬ ಹೆಸರಿನ ದಿವ್ಯ ಪ್ರಬಂಧದಿಂದ ಪ್ರಕಾಶಪಡಿಸಿ ಸ್ಥಾಪಿಸಿರುವಿರಿ. ಅಷ್ಟೇ ಅಲ್ಲದೆ ''ತಿರುಚ್ಚಂದವಿರುತ್ತಂ'' ಎಂಬ 120 ಪದ್ಯಗಳುಳ್ಳ ದಿವ್ಯ ಪ್ರಬಂಧದಿಂದ ''ಸಮಸ್ತವೂ ಪರಮಾತ್ಮನಿಗೆ ಶರೀರವಾಗಿದೆ'' ಎಂಬ ಯಥಾರ್ಥ ತತ್ತ್ವವನ್ನು ಲೋಕಕ್ಕೆ ಬೆಳಗಿದಿರಿ. ಇಂತಹ ದಿವ್ಯ ಪ್ರಬಂಧವನ್ನು ತಪ್ಪದೆ,

ಮರೆಯದೆ, ಇದ್ದಂತೆಯೇ ಅನುಸಂಧಾನ ಮಾಡಿ, ಉಜ್ಜೀವಿಸಬೇಕೆಂಬ ಉತ್ಕಟೇಚ್ಛೆಯಿರುವ ಮತ್ತು ನಿಮ್ಮ ಭಕ್ತನಾದ ನನಗೆ ಅನುಗ್ರಹಿಸಬೇಕು.

पौषे मासे मखोडुन्युदित ! मुनिमणे ! भक्तिसार ! प्रधीमन् ।
नानासिद्धान्तसारप्रमथनत इहात्यद्भुतानन्त शक्तिः ।।
''श्रीमानेवाखिलेशो न पर'' इति समुद्घुष्टवन् ! वेदचूडा- ।
सारार्थं 'नान्मुह' न्नित्यतिमधुरगिरारब्धदिव्यप्रबन्धम् ।। १

पद्यानां षण्णवत्या सकलगुणयुजा सन्निबद्धं तथान्यं ।
ख्यातं गीतं च विंशत्यधिकशतयुतं तं 'तिरुच्चन्द' वृत्ते ।।
नित्यं सत्यैकबद्धं जगति च समुदीर्यावित स्स्यां यथाहं ।
सामोदं त्वं प्रसीदन् प्रवितर विनतायानुगृह्णीष्व मे भोः ।। ५

ಮೂಲ : ಮುನ್ನುರೈತ್ತ ''ತಿರುವಿರುತ್ತಂ'' ನೂರುಪಾಟ್ಟುಂ
ಮುರೈಯಿನ್ವರುಮಾಶಿರಿಯ ಮೇಳುಪಾಟ್ಟುಂ,
ಮನ್ನಿಯನಲ್‌ಪೊರುಳ್ ಪೆರಿಯತಿರುವನ್ದಾದಿ
ಮರವಾದ ಪಡಿಯೆಣ್ಬತ್ತೇಳುಪಾಟ್ಟುಂ,
ಪಿನ್ನುರೈತ್ತದೋರ್‌ತಿರುವಾಯ್‌ಮೊಳಿಯೆಪ್ಪೋದುಂ
ಪಿಳ್ಳೈಯರವಾಯಿರತ್ತೊರುನೂತ್ತಿರಣ್ಡುಪಾಟ್ಟುಂ,
ಇನ್ನಿಲತ್ತಿಲ್ ವೈಕಾಶಿವಿಶಾಕಂತನ್ನಿಲ್
ಎಳಿಲ್ ಕುರುಹೈವರುಮಾರಾ ! ವಿರಂಗುನೀಯೇ ॥ 6

ಅರ್ಥ :- ವೈಕಾಶಿ-ವಿಶಾಕಂ-ತನ್ನಿಲ್ = ವೈಶಾಖಮಾಸದ ವಿಶಾಖಾ ನಕ್ಷತ್ರದಲ್ಲಿ, ಇನ್ನಿಲತ್ತಿಲ್ = ಈ ಲೋಕದಲ್ಲಿ, ಎಳಿಲ್ -ಕುರುಹೈ-ವರುಂ = ಸುಂದರವಾದ ''ತಿರುಕ್ಕುರುಹೂರ್'' ಎಂಬ ದಿವ್ಯ ಸ್ಥಳದಲ್ಲಿ ಅವತರಿಸಿದ, ಮಾರಾ = ಶಠಕೋಪಸೂರಿಯೇ! ಮುನ್-ಉರೈತ್ತ = ಮೊದಲು (ನೀವು) ಪಾಡಿದ, ತಿರುವಿರುತ್ತಂ-ನೂರುಪಾಟ್ಟುಂ = 'ತಿರುವಿರುತ್ತಂ' ಎಂಬ ನೂರುಪಾಶುರಗಳನ್ನೂ, ಮುರೈಯಿಲ್-ವರುಂ = ಕ್ರಮವಾಗಿ (ಅದಾದ ಮೇಲೆ) ಮಾಡಿದ, ಆಶಿರಿಯಂ-ಏಳು-ಪಾಟ್ಟುಂ = ''ತಿರುವಾಶಿರಿಯುಂ'' ಎಂಬ 7 ಪಾಶುರಗಳನ್ನೂ, ಮರವಾದಪಡಿ = ಎಂದೆಂದಿಗೂ ಮರೆಯದಂತೆ, ನಲ್-ಪೊರುಳ್- ಮನ್ನಿಯ = ಉತ್ತಮವಾದ ಸಾರಾರ್ಥಗಳು

ನೆಲೆಗೊಂಡಿರುವ, ಪೆರಿಯ ತಿರುವಂದಾದಿ ಎಣ್ಬತ್ತೇಳು ಪಾಟ್ಟುಂ = ''ಪೆರಿಯತಿರುವಂದಾದಿ'' ಯೆಂಬ ದಿವ್ಯಪ್ರಬಂಧದ 87 ಪಾಶುರಗಳನ್ನೂ, ಪಿನ್-ಉರೈತ್ತದು = ಇದಾದನಂತರ ಹೇಳಿದ, ಓರ್-ತಿರುವಾಯ್‌ಮೊಳಿ = ಅಸದೃಶವಾಗಿಯೂ, ಬಾಯಲ್ಲಿ ಹೇಳಲು ಬಹಳ ಒಪ್ಪಿಗೆಯಾಗಿಯೂ ಇರುವಂತಹಕ ''ತಿರುವಾಯ್‌ಮೊಳಿ'' ಎಂಬ ದಿವ್ಯ ಪ್ರಬಂಧದಲ್ಲಿರುವ, ಆಯಿರತ್ತು-ಒರು-ನೂತ್ತು-ಇರಂಡು-ಪಾಟ್ಟುಂ = 1102 ಪಾಶುರಗಳನ್ನೂ, ಎಪ್ಪೋದುಂ = ಸರ್ವದಾ, ಪಿಳ್ಳೈ-ಅರ = ಅನುಸಂಧಾನಮಾಡುವಂತೆ, ನೀ-ಇರಂಗು = ನೀವು (ನನಗೆ) ಕೃಪೆಮಾಡಬೇಕು.

ತಾತ್ಪರ್ಯ :- ವೈಶಾಖಮಾಸ ವಿಶಾಖಾ ನಕ್ಷತ್ರದಲ್ಲಿ ''ತಿರುಕ್ಕುರುಹೂರ್'' ಎಂಬ ದಿವ್ಯದೇಶದಲ್ಲಿ ಅವತರಿಸಿದ ನಮ್ಮಾಳ್ವಾರ್ರೇ ! ನೀವು ಅನುಭವಿಸಿದ ಭಗವದನುಭವಾಮೃತವನ್ನು ಲೋಕಕ್ಕೇ ಆಸ್ವಾದಗೊಳಿಸಿರುವಿರಿ. ನೀವು ಪಾಡಿರುವುವು ನಾಲ್ಕು ದಿವ್ಯ ಪ್ರಬಂಧಗಳು. ಮೊದಲನೆಯದು ''ತಿರುವಿರುತ್ತಂ'' ಇದರಲ್ಲಿ 100 ಪಾಶುರಗಳಿವೆ. ನಿಮ್ಮ ಜ್ಞಾನನೇತ್ರದಿಂದ ಪರಮಪುರುಷನನ್ನು ಸಾಕ್ಷಾತ್ಕರಿಸಿಕೊಂಡು, ಈ ಸಂಸಾರದ ನಶ್ವರತೆಯನ್ನೂ, ಇದರ ದುಃಖವನ್ನೂ ಸಾಕ್ಷಾತ್ಕರಿಸಿಕೊಂಡು, ಈ ಸಂಸಾರದ ನಶ್ವರತೆಯನ್ನೂ, ಇದರ ದುಃಖವನ್ನೂ ಸಹಿಸಲಾಗದಿರುವುದನ್ನೂ, ದೇವರಲ್ಲಿ ಅರಿಕೆಮಾಡಿ, ಸಂಸಾರಿಗಳಿಗೆ ಸಂಸಾರ ನೀಗುವಂತೆ ಬೇಡಿರುವಿರಿ. ಭಗವದನುಭವಕ್ಕೆ ಪ್ರಧಾನವಿರೋಧಿಯಾದ ಪ್ರಕೃತಿ ಸಂಬಂಧವನ್ನು ನೀಗಿಕೊಳ್ಳುವುದೇ ಮೊದಲನೆಯ ಬೇಡಿಕೆ. 2ನೆಯದು ''ತಿರುವಾಶಿರಿಯಂ''. ಇದು 27 ಪಾಶುರಗಳುಳ್ಳದ್ದು. ನಿಮ್ಮ ಬೇಡಿಕೆಯನ್ನು ಆಲಿಸಿ, ಪರಮಾತ್ಮನು ಪರಮಪದದಲ್ಲಿ ಅನುಭವಿಸುವಂತಹ ತನ್ನ ಸ್ವರೂಪ-ವಿಗ್ರಹ-ಗುಣ-ವಿಭೂತ್ಯಾದಿಗಳೆಲ್ಲವನ್ನೂ ಇಲ್ಲೇ ಅನುಭವಿಸುವಂತೆ ನಿಮಗೆ ತೋರಲು, ಅವೆಲ್ಲವನ್ನೂ ಸಾಕ್ಷಾತ್ ಇಲ್ಲೇ ಅನುಭವಿಸಿ ಪಾಡಿದಿರಿ. 3ನೆಯದು ''ಪೆರಿಯತಿರುವಂದಾದಿ''. ಇದರಲ್ಲಿ ಮೇಲೆ ಅನುಭವಿಸಿದ ವಿಷಯದಲ್ಲಿ ಮೇಲೆಮೇಲೆ ಆಸೆಯು ಉಕ್ಕಿ, ಅಳತೆಗೇ ಸಿಕ್ಕದ ಸ್ಥಿತಿಯನ್ನು 87 ಪಾಶುರಗಳಲ್ಲಿ ಹೇಳಿರುವಿರಿ. 4ನೆಯದು ''ತಿರುವಾಯ್‌ಮೊಳಿ''. ಇದರಲ್ಲಿ 1102 ಪಾಶುರಗಳಿವೆ. ನೀವು ಆಸೆಪಟ್ಟಂತೆ ಪರಿಪೂರ್ಣ ಭಗವದನುಭವವನ್ನು ಪಡೆದು, ಮುಕ್ತರಾದುದನ್ನು ಪ್ರಕಾಶಪಡಿಸಿರುವಿರಿ. ಹೀಗೆ ಪಾಡಿರುವ ನಿಮ್ಮ ಸಮಸ್ತ ಕೃತಿಗಳನ್ನೂ ನನಗೆ ಕೃಪೆ ಮಾಡಬೇಕು.

**वैशाखे करुकापुरे ह्युदितवन् ! योगिन् ! विशाखोडुनि ।**
**त्वद्गीतं शतपद्यकं 'तिरुविरुत्तं' नाम चादौ क्रमात् ।।**
**प्रोक्तं 'त्वशिरियं' च सप्तकमितं सारार्थपूर्णं ततः ।**
**सप्ताशीतिमितं 'विशालतिरुवन्दादीति' नाम्नोदितम् ।। १**

ಮರೆಯದೆ, ಇದ್ದಂತೆಯೇ ಅನುಸಂಧಾನ ಮಾಡಿ, ಉಜ್ಜೀವಿಸಬೇಕೆಂಬ ಉತ್ಕಟೇಚ್ಛೆಯಿರುವ ಮತ್ತು ನಿಮ್ಮ ಭಕ್ತನಾದ ನನಗೆ ಅನುಗ್ರಹಿಸಬೇಕು.

पौषे मासे मखोडुन्युदित ! मुनिमणे ! भक्तिसार ! प्रधीमन् ।
नानासिद्धान्तसारप्रमथनत इहात्यद्भुतानन्त शक्तिः ।।
''श्रीमानेवाखिलेशो न पर'' इति समुद्घुष्टवन् ! वेदचूडा- ।
सारार्थं 'नान्मुह' न्नित्यतिमधुरगिरारब्धदिव्यप्रबन्धम् ।। १

पद्यानां षण्णवत्या सकलगुणयुजा सन्निबद्धं तथान्यं ।
ख्यातं गीतं च विशत्यधिकशतयुतं तं 'तिरुच्चन्द' वृत्ते ।।
नित्यं सत्यैकबद्धं जगति च समुदीर्यावित स्स्यां यथाहं ।
सामोदं त्वं प्रसीदन् प्रवितत विनतायानुगृह्णीष्व मे भोः ।। ५

ಮೂಲ : ಮುನ್ನುರೈತ್ತ "ತಿರುವಿರುತ್ತಂ" ನೂರುಪಾಟ್ಟುಂ
ಮುರೈಯಿನ್ವರುಮಾಶಿರಿಯ ಮೇಳುಪಾಟ್ಟುಂ,
ಮನ್ನಿಯನಲ್‌ಪೊರುಳ್ ಪೆರಿಯತಿರುವನ್ದಾದಿ
ಮರವಾದ ಪಡಿಯೆಣ್ಬತ್ತೇಳುಪಾಟ್ಟುಂ,
ಪಿನ್ನುರೈತ್ತದೋರ್‌ತಿರುವಾಯ್‌ಮೊಳಿಯೆಪ್ಪೋದುಂ
ಪಿಳ್ಳೈಯರವಾಯಿರತ್ತೊರುನೂತ್ತಿರಣ್ಡುಪಾಟ್ಟುಂ,
ಇನ್ನಿಲತ್ತಿಲ್ ವೈಕಾಶಿವಿಶಾಕಂತನ್ನಿಲ್
ಎಳಿಲ್ ಕುರುಹೈವರುಮಾರಾ ! ವಿರಂಗುನೀಯೇ ॥ 6

ಅರ್ಥ :- ವೈಕಾಶಿ-ವಿಶಾಕಂ-ತನ್ನಿಲ್ = ವೈಶಾಖಮಾಸದ ವಿಶಾಖಾ ನಕ್ಷತ್ರದಲ್ಲಿ, ಇನ್ನಿಲತ್ತಿಲ್ = ಈ ಲೋಕದಲ್ಲಿ, ಎಳಿಲ್-ಕುರುಹೈ-ವರುಂ = ಸುಂದರವಾದ "ತಿರುಕ್ಕುರುಹೂರ್" ಎಂಬ ದಿವ್ಯ ಸ್ಥಳದಲ್ಲಿ ಅವತರಿಸಿದ, ಮಾರಾ = ಶಠಕೋಪಸೂರಿಯೇ! ಮುನ್-ಉರೈತ್ತ = ಮೊದಲು (ನೀವು) ಪಾಡಿದ, ತಿರುವಿರುತ್ತಂ-ನೂರುಪಾಟ್ಟುಂ = 'ತಿರುವಿರುತ್ತಂ' ಎಂಬ ನೂರುಪಾಶುರಗಳನ್ನೂ, ಮುರೈಯಿಉ-ವರುಂ = ಕ್ರಮವಾಗಿ (ಅದಾದ ಮೇಲೆ) ಮಾಡಿದ, ಆಶಿರಿಯಂ-ಏಳು-ಪಾಟ್ಟುಂ = "ತಿರುವಾಶಿರಿಯುಂ" ಎಂಬ 7 ಪಾಶುರಗಳನ್ನೂ, ಮರವಾದಪಡಿ = ಎಂದೆಂದಿಗೂ ಮರೆಯದಂತೆ, ನಲ್-ಪೊರುಳ್- ಮನ್ನಿಯ = ಉತ್ತಮವಾದ ಸಾರಾರ್ಥಗಳು

ನೆಲೆಗೊಂಡಿರುವ, ಪೆರಿಯ ತಿರುವಂದಾದಿ ಎಣ್ಬತ್ತೇಳು ಪಾಟ್ಟುಂ = ''ಪೆರಿಯತಿರುವಂದಾದಿ'' ಯೆಂಬ ದಿವ್ಯಪ್ರಬಂಧದ 87 ಪಾಶುರಗಳನ್ನೂ, ಪಿನ್-ಉರೈತ್ತದು = ಇದಾದನಂತರ ಹೇಳಿದ, ಓರ್-ತಿರುವಾಯ್‌ಮೊಳಿ = ಅಸದೃಶವಾಗಿಯೂ, ಬಾಯಲ್ಲಿ ಹೇಳಲು ಬಹಳ ಒಪ್ಪಿಗೆಯಾಗಿಯೂ ಇರುವಂತಹಕ ''ತಿರುವಾಯ್‌ಮೊಳಿ'' ಎಂಬ ದಿವ್ಯ ಪ್ರಬಂಧದಲ್ಲಿರುವ, ಆಯಿರತ್ತು-ಒರು-ನೂತ್ತು-ಇರಂಡು-ಪಾಟ್ಟುಂ = 1102 ಪಾಶುರಗಳನ್ನೂ, ಎಪ್ಪೋದುಂ = ಸರ್ವದಾ, ಪಿಳ್ಳೈ-ಅರ = ಅನುಸಂಧಾನಮಾಡುವಂತೆ, ನೀ-ಇರಂಗು = ನೀವು (ನನಗೆ) ಕೃಪೆಮಾಡಬೇಕು.

ತಾತ್ಪರ್ಯ :- ವೈಶಾಖಮಾಸ ವಿಶಾಖಾ ನಕ್ಷತ್ರದಲ್ಲಿ ''ತಿರುಕ್ಕುರುಹೂರ್'' ಎಂಬ ದಿವ್ಯದೇಶದಲ್ಲಿ ಅವತರಿಸಿದ ನಮ್ಮಾಳ್ವಾರ್ರೇ ! ನೀವು ಅನುಭವಿಸಿದ ಭಗವದನುಭವಾಮೃತವನ್ನು ಲೋಕಕ್ಕೇ ಆಸ್ವಾದಗೊಳಿಸಿರುವಿರಿ. ನೀವು ಪಾಡಿರುವುವು ನಾಲ್ಕು ದಿವ್ಯ ಪ್ರಬಂಧಗಳು. ಮೊದಲನೆಯದು ''ತಿರುವಿರುತ್ತಂ'' ಇದರಲ್ಲಿ 100 ಪಾಶುರಗಳಿವೆ. ನಿಮ್ಮ ಜ್ಞಾನನೇತ್ರದಿಂದ ಪರಮಪುರುಷನನ್ನು ಸಾಕ್ಷಾತ್ಕರಿಸಿಕೊಂಡು, ಈ ಸಂಸಾರದ ನಶ್ವರತೆಯನ್ನೂ, ಇದರ ದುಃಖವನ್ನೂ ಸಾಕ್ಷಾತ್ಕರಿಸಿಕೊಂಡು, ಈ ಸಂಸಾರದ ನಶ್ವರತೆಯನ್ನೂ, ಇದರ ದುಃಖವನ್ನೂ ಸಹಿಸಲಾಗದಿರುವುದನ್ನೂ, ದೇವರಲ್ಲಿ ಅರಿಕೆಮಾಡಿ, ಸಂಸಾರಿಗಳಿಗೆ ಸಂಸಾರ ನೀಗುವಂತೆ ಬೇಡಿರುವಿರಿ. ಭಗವದನುಭವಕ್ಕೆ ಪ್ರಧಾನವಿರೋಧಿಯಾದ ಪ್ರಕೃತಿ ಸಂಬಂಧವನ್ನು ನೀಗಿಕೊಳ್ಳುವುದೇ ಮೊದಲನೆಯ ಬೇಡಿಕೆ. 2ನೆಯದು ''ತಿರುವಾಶಿರಿಯಂ''. ಇದು 27 ಪಾಶುರಗಳುಳ್ಳದ್ದು. ನಿಮ್ಮ ಬೇಡಿಕೆಯನ್ನು ಆಲಿಸಿ, ಪರಮಾತ್ಮನು ಪರಮಪದದಲ್ಲಿ ಅನುಭವಿಸುವಂತಹ ತನ್ನ ಸ್ವರೂಪ-ವಿಗ್ರಹ-ಗುಣ-ವಿಭೂತ್ಯಾದಿಗಳೆಲ್ಲವನ್ನೂ ಇಲ್ಲೇ ಅನುಭವಿಸುವಂತೆ ನಿಮಗೆ ತೋರಲು, ಅವೆಲ್ಲವನ್ನೂ ಸಾಕ್ಷಾತ್ ಇಲ್ಲೇ ಅನುಭವಿಸಿ ಪಾಡಿದಿರಿ. 3ನೆಯದು ''ಪೆರಿಯತಿರುವಂದಾದಿ''. ಇದರಲ್ಲಿ ಮೇಲೆ ಅನುಭವಿಸಿದ ವಿಷಯದಲ್ಲಿ ಮೇಲೆಮೇಲೆ ಆಸೆಯು ಉಕ್ಕಿ, ಅಳತೆಗೇ ಸಿಕ್ಕದ ಸ್ಥಿತಿಯನ್ನು 87 ಪಾಶುರಗಳಲ್ಲಿ ಹೇಳಿರುವಿರಿ. 4ನೆಯದು ''ತಿರುವಾಯ್‌ಮೊಳಿ''. ಇದರಲ್ಲಿ 1102 ಪಾಶುರಗಳಿವೆ. ನೀವು ಆಸೆಪಟ್ಟಂತೆ ಪರಿಪೂರ್ಣ ಭಗವದನುಭವವನ್ನು ಪಡೆದು, ಮುಕ್ತರಾದುದನ್ನು ಪ್ರಕಾಶಪಡಿಸಿರುವಿರಿ. ಹೀಗೆ ಪಾಡಿರುವ ನಿಮ್ಮ ಸಮಸ್ತ ಕೃತಿಗಳನ್ನೂ ನನಗೆ ಕೃಪೆ ಮಾಡಬೇಕು.

वैशाखे करुकापुरे ह्युदितवन् ! योगिन् ! विशाखोडुनि ।
त्वद्गीतं शतपद्यकं 'तिरुविरुत्तं' नाम चादौ क्रमात् ।।
प्रोक्तं 'त्वशिरियं' च ससकमितं सारार्थपूर्णं ततः ।
ससाशीतिमितं 'विशालतिरुवन्दादीति' नाम्नोदितम् ।। १

अन्ते त्वं 'तिरुवाय्मोळी' ति सुवचं माधुर्यधुर्यं व्यधाः ।
साहस्त्रा शतयुक्तया द्व्यधिकया संयोजितं संख्यया ।।
निर्दुष्टं भगवद्गुणानुभवदं श्रीवैष्णवोज्जीवकं ।
यद्वन्नैव च विस्मराम्यनुगृहाणेमानि सर्वाणि मे ।। ६

ಮೂಲ : ತೇರಿಯ ಮಾಞ್ಞಾನಮುಡನ್‌ತಿರುಕ್ಕೋಳೂರಿಲ್
ಶಿತ್ತಿರೈಯಿಲ್‌ಶಿತ್ತಿರೈನಾಳ್‌ವನ್ದುತ್ತೋನ್ರಿ
ಆರಿಯನಲ್ಲನ್ಬುಡನೇ ಕುರುಹೂರ್ ನಂಬಿಕ್ಕು
ಅನವತರಮಂತರಂಗವಡಿಮೈಶೆಯ್ದು,
ಮಾರನ್ನೈಯಲ್ಲಾಲೆನ್ರುಮರುಂದುಂತೇವು
ಮತ್ತರಿಯೇನೆನುಂ ಮದುರಕವಿಯೇನೀಮುನ್,
ಕೂರಿಯ ಕಣ್ಣಿನುಣ್ ಶಿರುತ್ತಾಂಬದನಿಲ್‌ಪಾಟ್ಟು
ಕ್ಕುಲವುಪದಿನೊನ್ರುಮೆನಕ್ಕುದವುನೀಯೆ ॥ 7

ಅರ್ಥ :- ತಿರುಕ್ಕೋಳೂರಿಲ್ = ''ತಿರುಕ್ಕೋಳೂರ್'' ಎಂಬ ಕ್ಷೇತ್ರದಲ್ಲಿ, ಶಿತ್ತಿರೈಯಿಲ್ = ಚೈತ್ರಮಾಸದಲ್ಲಿ, ಶಿತ್ತಿರೈನಾಳ್ = ಚಿತ್ರಾನಕ್ಷತ್ರದ ದಿನ, ತೇರಿಯ-ಮಾ-ಞಾನಂ-ಉಡನ್ = ತಿಳಿಯಾಗಿ ಪೂರ್ಣವಾದ ಜ್ಞಾನದಿಂದ, ವಂದು-ತೋನ್ರಿ = ಬಂದು ಅವತರಿಸಿ, ಆರಿಯ-ನಲ್-ಅನ್ಬುಡನೇ = ಭಕ್ತಿಯೇ ಮೂರ್ತಿಯಾಗಿರುವಂತಿರುವ ಅಂತರಂಗ-ಅಡಿಮೈ-ಶೆಯ್ದು = ಅಂತರಂಗವಾದ ಸೇವೆಯನ್ನು ಮಾಡಿ, ಮಾರನ್ನೈ-ಅಲ್ಲಾಲ್ = ನಮ್ಮಾಳ್ವಾರಲ್ಲದೆ, ಎನ್ರುಂ = ಎಂದಿಗೂ, ಮರಂದುಂ = ಮರವಿನಲ್ಲೂ, ಮತ್ತು-ದೇವು-ಅರಿಯೇನ್-ಎನುಂ = ಮತ್ತಾವದೇವರನ್ನೂ ಅರಿಯೆನು ಎಂದು ಹೇಳಿದ ಮದುರ ಕವಿಯೇ = ಮಧುರ ಕವಿಗಳೇ ! ನೀ-ಮುನ್-ಕೂರಿಯ = ನೀವು ಮೊದಲು ಪಾಡಿರುವ, ಕಣ್ಣಿನುಣ್‌ಶಿರುತ್ತಾಂಬು- ಅದನಿಲ್ = ''ಕಣ್ಣಿನುಣ್‌ಶಿರುತ್ತಾಂಬು'' ಎಂದಾರಂಭವಾಗಿರುವ ಪ್ರಬಂಧದಲ್ಲಿ, ಕುಲವು = ಬೆಳಗುವ, ಪಾಟ್ಟು-ಪದಿನೊನ್ನುಂ = 11 ಪಾಶುರಗಳನ್ನೂ, ನೀ-ಎನುಕ್ಕು-ಉದವು = ನೀವು ನನಗೆ ಒದಗುವಂತೆ ದಯೆಗೈಯ್ಯಬೇಕು.

ತಾತ್ಪರ್ಯ :- ''ತಿರುಕ್ಕೋಳೂರ್'' ಎಂಬ ಕ್ಷೇತ್ರದಲ್ಲಿ ಚೈತ್ರಮಾಸದ ಚಿತ್ರಾ ನಕ್ಷತ್ರದಲ್ಲಿ ಅವತರಿಸಿದ ''ಮದುರ ಕವಿ''ಯಾಳ್ವಾರ್ರೇ ! ಮಹಾಮಹಿಮರಾದ ''ನಮ್ಮಾಳ್ವಾರ್ರ'' ವಿಷಯವಾಗಿ 11 ಪಾಶುರಗಳುಳ್ಳ ''ಕಣ್ಣಿನುಣ್‌ಶಿರುತ್ತಾಂಬು'' ಎಂಬ ಪ್ರಬಂಧವನ್ನು ಪಾಡಿರುವಿರಿ. ಪರಮಾತ್ಮನನ್ನು ಸದಾಚಾರ್ಯರ ಮೂಲಕವಾಗಿಯೇ ಪಡೆಯಬೇಕೆಂದು

''ನಮ್ಮಾಳ್ವಾರ್ರ'' ಅಡಿದಾವರೆಗಳಲ್ಲಿ ಪ್ರವಣರಾಗಿ, ಅವರ ದಿವ್ಯಸೂಕ್ತಿಗಳೂ ಮತ್ತು ಅಡಿದಾವರೆಗಳೂ, ಧಾರಕವೂ ಪೋಷಕವೂ ಮತ್ತು ಭೋಗ್ಯತಮವೂ ಎಂದು ನಿರಂತರವಾಗಿ ಸೇವೆಮಾಡಿ, ''ಭಗವದ್ಭಕ್ತಿಗಿಂತ ಆಚಾರ್ಯ ಭಕ್ತಿಯೇ ಮೇಲಾದುದು'' ಎಂದು ಲೋಕಕ್ಕೆ ಒಳ್ಳೆಯ ಮಾರ್ಗದರ್ಶಕರಾದಿರಿ, ಇಂತಹ ನಿಮ್ಮ ದಿವ್ಯಸೂಕ್ತಿಯನ್ನು ನನಗೆ ಕರುಣಿಸಬೇಕು.

(ಇಲ್ಲಿ ''ನೀಮುನ್ ಕೂರಿಯ'' ಎಂಬುದು ಬಲು ಚೆನ್ನಾಗಿ ಒಪ್ಪಿದೆ, ''ಭಗವದ್ಗುಣದಲ್ಲಿ ಎಷ್ಟೇ ಅನುಭವವುಳ್ಳವರಾದರೂ ಆಚಾರ್ಯಗುಣಾನುಭವವಿಲ್ಲದೆ ಉಜ್ಜೀವಿಸಲಾರರು'' ಎಂಬುದು ವ್ಯಕ್ತವಾಗಿ ತೋರಿರುವರು. ಆಚಾರ್ಯ ಭಕ್ತಿಯ ಮಾರ್ಗದಲ್ಲಿ ಇವರೇ ಮೊದಲಿಗರೆಂಬುದು ಸ್ಪಷ್ಟ, ನಮ್ಮಾಳ್ವಾರ್ರು ಭಗವದನುಭವ ಮಾಡಿ, ನಂತರ ಭಾಗವತಾನುಭವವನ್ನು ತೋರಿರುವರು, ಇವರದು ಮೊಟ್ಟಮೊದಲು ಭಾಗವತನಿಷ್ಠೆ ಅನಂತರ ಭಗವನ್ನಿಷ್ಠೆ. ಆದ್ದರಿಂದಲೇ ''ನೀಮುರ್'' ಎಂದಿರುವುದು ಎಂದು ಹೇಳಬಹುದು)

**चैत्रे चित्राढ्यकाले प्रविमलमतिमन् ! जात ! कोळूरूपुराग्रे ।**
**सम्यग्भक्त्याकृते ! श्रीशठमथनपदोपासनासक्त ! घोषन् ।।**
**नेतो जानेऽन्यदैवंत्विति मधुरकवे ! त्वत्कृतं 'कण्णिनुण्णि- ।**
**त्यारब्धं ते प्रबन्धं वितर करुणया मेऽद्य सैकादशं त्वम् ।।** ೭

ಮೂಲ : **ಪೊನ್ಪುರೈಯುಂ ವೇಲ್ ಕುಲಶೇಖರನೇ ! ಮಾಶಿ**
**ಪುನರ್ಪೂಶತ್ತೆಳಿಲ್ ವಂಜಿಕ್ಕಳತ್ತಿಲ್‌ತೋನ್ರಿ,**
**ಅನ್ಬುಡನೇನಮ್ಬೆರುಮಾಳ್ ಶೆಂಬೊರ್ಕೋಯಿಲ್**
**ಅನೈತ್ತುಲಗಿನ್ ಪೆರುವಾಳ್ವು ಮಡಿಯಾರ್‌ತಂಗಳ್,**
**ಇನ್ಬಮಿಗು ಪೆರುಂಕುಳುವುಂ ಕಾಣಮಣ್ಮೇಲ್**
**''ಇರುಳಿರಿಯ''ವೆನ್ರಡುತ್ತವಿಶೈಯಿಲ್ ಶೊನ್ನ,**
**ನನ್ಪೊರುಳ್‌ಶೇರ್‌ತಿರುಮೊಳಿನೂತ್ತೈನ್ದುಪಾಟ್ಟುಂ**
**ನನ್ರಾಹವೆನಕ್ಕರುಳ್ ಶೆಯ್‌ನಲ್ಲಿನೀಯೇ ॥** 8

ಅರ್ಥ :- ಪೊರ್-ಪುರೈಯುಂ-ವೇಲ್ = ಹೊನ್ನಿನಂತೆ ಹೊಳೆಯುವ ವೇಲಾಯುಧವನ್ನುಳ್ಳ, ಕುಲಶೇಖರನೇ = ಕುಲಶೇಖರಾಳ್ವಾರೇ ! ಮಾಶಿ-ಪುನರ್ಪೂಶತ್ತು = ಮಾಘಮಾಸದ ಪುನರ್ವಸು ನಕ್ಷತ್ರದಲ್ಲಿ, ಎಳಿಲ್-ವಂಜಿಕ್ಕಳತ್ತು-ತೋನ್ರಿ =

ಸುಂದರವಾದ ''ವಂಜಿಕ್ಕಳಂ'' ಎಂಬ ದಿವ್ಯಸ್ಥಳದಲ್ಲಿ ಅವತರಿಸಿ, ಅನ್ಬುಡನೆ = ಭಕ್ತಿಯಿಂದ, ನಂ-ಪೆರುಮಾಳ್ = ಶ್ರೀರಂಗನಾಥನ, ಶೆಂ-ಪೊನ್-ಕೋಯಿಲ್ = ಕೆಂಪುಹೊನ್ನಿನ ಶ್ರೀರಂಗ ನಗರದಲ್ಲಿರುವ, ಅನ್ನೈತ್ತು-ಉಲಹಿನ್-ಪೆರು-ವಾಳ್ವುಂ = ಸಕಲ ಜನರ ಅತಿಸಮೃದ್ಧವಾದ ಸಿರಿಯನ್ನೂ, ಅಡಿಯಾರ್-ತಂಗಳ್ = ಭಾಗವತೋತ್ತಮರ, ಇನ್ಬಂ-ಮಿಹು = ಅತ್ಯಾನಂದಕರವಾದ, ಪೆರು-ಕುಳುವುಂ = ಮಹಾಗೋಷ್ಠಿಯನ್ನೂ, ಕಾಣ = ಸಂದರ್ಶಿಸಿ ಅನುಭವಿಸುವುದಕ್ಕೂ (ಆಸೆಪಟ್ಟು) ಮಣ್-ಮೇಲ್ = ಭೂಮಿಯಮೇಲೆ, (ಅಜ್ಞಾನವನ್ನು ನಿವಾರಿಸಲು) ಇರುಳಿರಿಯ = ''ಇರುಳಿರಿಯ'' ಎಂದಾರಂಭವಾಗಿ, ಎಡುತ್ತ-ಇಶೈಯಿಲ್-ಶೊನ್ನ = ಉಚ್ಚಸ್ವರದಲ್ಲಿ ಪಾಡಿರುವ, ನಲ್-ಪೊರುಳ್-ಶೇರ್ = ಅತ್ಯುತ್ತಮವಾದ ಸಾರಾರ್ಥಗಳಡಗಿರುವ, ತಿರುಮೊಳಿ-ನೂತ್ತು-ಐಂದು-ಪಾಟ್ಟುಂ = ''ಪೆರುಮಾಳ್ ತಿರುಮೊಳಿ'' ಎಂಬ 105 ಪಾಶುರಗಳನ್ನೂ, ನೀ-ನಲ್-ಹಿ = ನೀವು ಪ್ರಸನ್ನರಾಗಿ, ನನ್ರಾಹ-ಎನಕ್ಕು-ಅರುಳ್-ಶೆಯ್ = (ಮನದಲ್ಲಿ ನೆಲೆಯಾಗಿರುವಂತೆ) ಚೆನ್ನಾಗಿ, ನನಗೆ ಕೃಪೆಮಾಡಬೇಕು.

ತಾತ್ಪರ್ಯ :- ಮಾಘಮಾಸದ ಪುನರ್ವಸು ನಕ್ಷತ್ರದಲ್ಲಿ ''ತಿರುವಂಜಿಕ್ಕಳಂ'' ಎಂಬ ದಿವ್ಯಕ್ಷೇತ್ರದಲ್ಲಿ ಅವತರಿಸಿದ ''ಕುಲಶೇಖರಾಳ್ವಾರ್ರೇ ! ನೀವು ನಿಮ್ಮ ರಾಜಮನೆತನಕ್ಕೆ ತಕ್ಕಂತೆ ರಾಜಪದವಿಯಲ್ಲಿದ್ದು ಆಳುವಾಗಲೂ ''ಶ್ರೀಮನ್ನಾರಾಯಣನೇ ಪರತತ್ವ''ವೆಂಬುದನ್ನೂ, ರಾಮ-ಕೃಷ್ಣಾದಿ ವಿಭವಾವತಾರಗಳಲ್ಲಿಯೂ, ಹಾಗೆಯೇ ಶ್ರೀರಂಗಾದಿ ದಿವ್ಯಕ್ಷೇತ್ರಗಳಲ್ಲಿ ಅರ್ಚಾರೂಪಿಯಾಗಿರುವ ಪರಮಪುರುಷನ ವಿಗ್ರಹ ವಿಶೇಷಗಳಲ್ಲಿಯೂ, ಪರವಶರಾಗಿ ಪೂರ್ಣವಾಗಿ ಅನುಭವಿಸಿರುವಿರಿ. ಮೇಲಾಗಿ ಭಾಗವತ ಗೋಷ್ಠಿಯಲ್ಲಿ ಅತ್ಯಂತ ಭಕ್ತಿಯುಕ್ತರಾಗಿದ್ದಿರಿ. ಶ್ರೀರಂಗನಾಥನ ಅಡಿದಾವರೆಗಳ ತಣ್ಣೆಳಲಿನಲ್ಲಿ ನಿತ್ಯವಾಸಮಾಡುವ ಭಾಗ್ಯವನ್ನೂ ಕಣ್ದಣಿದುನೋಡಿ, ಆನಂದಿಸಬೇಕೆಂಬ ಹಿರಿಯಾಸೆಯಿಂದಲೂ ಪಾಡಿದ 105 ಪಾಶುರಗಳುಳ್ಳ ''ಪೆರುಮಾಳ್ ತಿರುಮೊಳಿ'' ಎಂಬ ದಿವ್ಯಪ್ರಬಂಧವನ್ನು, ಪ್ರಸನ್ನಚಿತ್ತರಾಗಿ ನನಗೆ ಅನುಗ್ರಹಿಸಬೇಕು.

(''ಘುಷ್ಯತೇ ಯಸ್ಯ ನಗರೇ ರಂಗಯಾತ್ರಾ ದಿನೇ ದಿನೇ ।'' ಎಂಬುಕ್ತಿಗನುಗುಣವಾಗಿ ನಮ್ಮ ರಸಿಕಶಿರೋಮಣಿ ದೇಶಿಕವರ್ಯರೂ ''ಎಡುತ್ತವಿಶೈಯಿಲ್ ಶೊನ್ನ'' ಎಂದು ಸೂಚಿಸಿರುವರು).

कुम्भे 'वञ्जिक्कळाख्ये पुर उदित ! पुनर्वस्वहे शातकुम्भ- ।
प्रद्योतत्कुन्तपाणे ! निजकुलविनुतं रङ्गनाथं स्वदैवं ।।
हैमं धामास्य रम्यं जगदनुभवनीयैकभाग्याधिवासं ।
तां चानन्दप्रदात्रीं प्रणतपरिषदं संदिदृक्षो ! महात्मन् ।। १

योगिन् ! श्रीकुलशेखर ! प्रभुमणे धात्र्यां विमोहच्छिदं ।
उच्चै र्गीत ममुं 'तवेरुळिरिये' त्यारब्धपद्यात्मकम् ।।
पञ्चोपेतशतं च मे 'तिरुमोळि' त्याम्नात मत्यद्भुतं ।
कारुण्या त्समुपादिशाद्य भगवन् ! सम्यक् प्रसन्नो मयि ।। ८

ಮೂಲ : ಪೇರಣಿಂದ ವಿಲ್ಲಿಪುತ್ತೂರಾನಿತನ್ನಿಲ್
ಪೆರುಂಶೋದಿತನಿಲ್ ತೋನ್ರುಂ ಪೆರುಮಾನೇ ಮುನ್,
ಶೀರಣಿಂದ ಪಾಂಡಿಯನ್ ತನ್ನೆಂಜುತನ್ನಿಲ್
ತಿಯಕ್ಕರಮಾಲ್ ಪರತ್ತುವತ್ತೈತ್ತಿರಮಾಚ್ಚೆಪ್ಪಿ,
ವಾರಣಮೇಲ್ ಮದುರೈವಲಂ ವರವೇ ವಾನಿಲ್
ಮಾಲ್‌ಗರುಡವಾಹನನಾಯ್ ತೋನ್ರವಾಳ್‌ತ್ತುಂ,
ಏರಣಿಪಲ್ಲಾಂಡು ಮುದಲ್ಪಾಟ್ಟು ನಾನೂತ್ತು
ಎಳುಪತ್ತೊನ್ರಿರಂಡು ಮೆನಕ್ಕು ದವುನೀಯೇ ॥ 9

ಅರ್ಥ :- ಪೇರ್-ಅಣಿಂದ = ಹೆಸರುವಾಸಿಯಾದ (ಪ್ರಸಿದ್ಧವಾದ) ವಿಲ್ಲಿಪುತ್ತೂರ್ = ಶ್ರೀ ವಿಲ್ಲಿಪುತ್ತೂರಿನಲ್ಲಿ, ಆನಿ-ತನ್ನಿಲ್ = ಮಿಥುನ ಮಾಸದಲ್ಲಿ, ಪೆರುಂ-ಶೋದಿ-ತನಿಲ್ = ಮಹಾ ನಕ್ಷತ್ರವಾದ ಸ್ವಾತಿಯಲ್ಲಿ, ತೋನ್ರುಂ = ಅವತರಿಸಿದ, ಪೆರುಮಾನೇ = (ಹಿರಿಮೆಯಲ್ಲಿ ಹಿರಿಯರಾದ) ಪೆರಿಯಾಳ್ವಾರ್‌ರ್ರೇ ! ನೀ-ಮುನ್ = ನೀವು ಹಿಂದೆ ಒಮ್ಮೆ, ಶೀರ್-ಅಣಿಂದ = ಸದ್ಗುಣೈಶ್ವರ್ಯ ಭರಿತನಾದ, ಪಾಂಡಿಯನ್-ತನ್ = ಪಾಂಡ್ಯರಾಜನ, ನೆಂಜು-ತನ್ನಿಲ್ = ಮನಸ್ಸಿನಲ್ಲಿ, ತಿಯಕ್ಕು-ಅರ = ಸಂಶಯವನ್ನು ನಿವಾರಿಸುವಂತೆ (ಮನಸ್ಸಿಗೆ ನಾಟುವಂತೆ) ಮಾಲ್-ಪರತ್ತುವತ್ತೈ = ''ಶ್ರೀಮನ್ನಾರಾಯಣನೇ ಎಲ್ಲಕ್ಕಿಂತ ಮೇಲಾದ ತತ್ವ''ವೆಂಬುದನ್ನು , ಆಂ-ಶೆಪ್ಪಿ = ನೆಲೆಗೊಳ್ಳುವಂತೆ ಬೋಧಿಸಿ, ವಾರಣ-ಮೇಲ್ = ಆನೆಯ ಮೇಲೆ, ಮದುರೈ-ವಲಂ-ವರ = ಮಧುರೆಯಲ್ಲಿ ಪ್ರದಕ್ಷಿಣವಾಗಿ ಮೆರವಣಿಗೆ ಬಂದಾಗ, ವಾನಿಲ್ = ಆಕಾಶದಲ್ಲಿ, ಮಾಲ್ = ಭಗವಂತನು, ಗರುಡ-ವಾಹನನಾಯ್-ತೋನ್ರ = ಗರುಢಾರೂಢನಾಗಿ ಬಂದು ದರ್ಶನಕೊಡಲು ವಾಳ್‌ತ್ತುಂ = (ನೀವು) ಮಂಗಳಾಶಾಸನವನ್ನು ಮಾಡಿದ, ಏರ್-ಅಣಿ = ಬಲು ಸೊಗಸಾದ, ಪಲ್ಲಾಂಡು-ಮುದಲ್ = ''ಪಲ್ಲಾಂಡು'' ಎಂದು ಮೊದಲಾಗುವ, ಪಾಟ್ಟು = ಪಾಶುರಗಳಾದ, ನಾನೂತ್ತು-ಎಳುಪತ್ತು-ಒನ್ರು-ಇರಂಡುಂ = 473ರನ್ನೂ, ಎನಕ್ಕು-ಉದವು = ನನಗೆ ಬರುವಂತೆ ದಯೆಬೀರಬೇಕು.

**ತಾತ್ಪರ್ಯ** :- ''ಶ್ರೀವಿಲ್ಲಿಪುತ್ತೂರ್'' ಎಂದು ಪ್ರಖ್ಯಾತವಾದ ದಿವ್ಯ ಕ್ಷೇತ್ರದಲ್ಲಿ ಜ್ಯೇಷ್ಠಮಾಸದ ಸ್ವಾತೀ ನಕ್ಷತ್ರದಲ್ಲಿ ಅವತರಿಸಿ, ಅಸದೃಶ ಭಗವದ್ಭಕ್ತರಾಗಿದ್ದ ''ಪೆರಿಯಾಳ್ವಾರೇ!'' ಪಾಂಡ್ಯರಾಜನಾದ ವಲ್ಲಭದೇವನು ಮಧುರೆಯಲ್ಲಿ ''ಪರತತ್ವ ನಿರ್ಣಾಯಕ'' ಸಭೆಯನ್ನೇರ್ಪಡಿಸಿ, ನಾನಾ ದೇಶಗಳಿಂದ ಉದ್ದಾಮ ಪಂಡಿತರನ್ನು ಕರೆಸಿ ವಾದವಿವಾದ ನಡೆಸಿದಾಗ, ನೀವು ಭಗವತ್ಪ್ರೇರಣೆಯಿಂದಲೇ ಅಲ್ಲಿಗೆ ಬಂದು, ನೆರೆದಿದ್ದ ವಿದ್ವತ್‌ಗೋಷ್ಠಿಯು ಆಶ್ಚರ್ಯಪಡುವಂತೆ ಅನನ್ಯಸಾಮಾನ್ಯ ಮರ್ಯಾದೆಯನ್ನು ಪಡೆದು, ''ಶ್ರೀಮನ್ನಾರಾಯಣನೇ ಪರತತ್ವವು'' ಎಂಬುದನ್ನು ಅನೇಕ ಶ್ರುತಿವಚನಗಳ ಸಹಿತ ನಿರೂಪಿಸಿ, ಸ್ಥಾಪಿಸಿ, ಸನ್ಮಾನವನ್ನು ಸಂಪಾದಿಸಿದಿರಿ. ಅಷ್ಟೇ ಅಲ್ಲದೆ ಆ ಅರಸನು ಸಂತೋಷಪಟ್ಟು, ತನ್ನ ಸಮಸ್ತ ಬಿರುದಾವಳಿಗಳೊಂದಿಗೆ ತನ್ನ ಆನೆಯ ಮೇಲೆ ನಿಮ್ಮನ್ನು ಬಿಜಯಮಾಡಿಸಿ, ನಗರದಲ್ಲಿ ಮೆರವಣಿಗೆ ಮಾಡಿಸಿದಾಗ, ನಿಮ್ಮ ವೈಭವವನ್ನು ನೋಡಲು ಮತ್ತು ನಿಮಗೆ ಪ್ರತ್ಯಕ್ಷನಾಗಿರುವುದನ್ನು ವ್ಯಕ್ತಪಡಿಸಲೋಸುಗ ಪರಮಾತ್ಮನು ಲಕ್ಷ್ಮೀಸಮೇತನಾಗಿ ಗರುಡವಾಹನನಾಗಿ ದರ್ಶನವೀಯಲು, ''ಪಲ್ಲಾಂಡು'' ಎಂದು ಆರಂಭಿಸಿ ಮಂಗಳಾಶಾಸನ ಮಾಡಿದಿರಿ. ಹಾಗೆಯೇ ''ಪೆರಿಯಾಳ್ವಾರ್ ತಿರುಮೊಳಿ'' ಎಂಬ ದಿವ್ಯ ಪ್ರಬಂಧವನ್ನು ಮುಂದುವರಿಸಿ ಪಾಡಿರುವಿರಿ. ಆ ನಿಮ್ಮ 473 ಪಾಶುರಗಳೂ ನನ್ನ ಮನದಲ್ಲಿ ನೆಲೆಗೊಳ್ಳುವಂತೆ ಅನುಗ್ರಹಿಸಬೇಕು.

**ख्याते 'श्रीविल्लिपुत्तूर्' अभिधपुरवरे ज्येष्ठमासे महर्क्षे ।**
**स्वात्याख्ये विष्णुचित्त ! प्रभव ! वरमुने ! त्वं पुरा सद्गुणस्य ।।**
**चित्ते पाण्ड्यस्य निस्संशय मिह परतत्वं श्रियो वल्लभं हि ।**
**निर्धार्य स्थापयित्वा पर मधिमधुरं वारणेन्द्राधिरूढे ।। १**

**त्वय्यायाते क्रमेणोत्सवकृतविभवे वीथिकासु प्रमोदात् ।**
**अभ्रे च भ्राजमाने श्रितमुनिपमहं वीक्षितुं लोकनाथे ।।**
**निध्यायन् गीतवांस्त्वं गरुडभुजवहं ताश्च 'पल्लाण्ड्' मुखोक्तिः ।**
**कारुण्येन त्रिसप्तत्यधिकशतचतुष्कोन्मिता मे प्रयच्छ ।। २**

ಮೂಲ : ವೇಯರ್‌ಪುಹಳ್ ವಿಲ್ಲಿಪುತ್ತೂರಾಡಿಪ್ಪೂರಂ
ಮೇನ್ಮೇಲುಮ್ಮಿಹವಿಳಂಗ ವಿಟ್ಟುಚಿತ್ತನ್,
ತೂಯತಿರುಮಹಳಾಯ್ ವನ್ದರಂಗನಾರ್ಕ್ಕು
ತುಳಾಯ್‌ಮಾಲೈಮುಡಿ ಶೂಡಿಕೊಡುತ್ತಮಾದೇ,

ಸೇಯಮುಡನ್ ''ತಿರುಪ್ಪಾವೈ'' ಪಾಟ್ಟಾರ್ೈಂದುಂ
ನೀಯುರೈತ್ತ್ತೈಯೊರುಂತಿಂಗಳ್ ಪಾಮಾಲೈ,
ಆಯಪುಗಳ್‌ನೂರುಡನ್ ನಾರ್ಪತ್ತ್‌ಮೂನ್ರುಂ
ಅನ್ಬುಡನೇಯಡಿಯೇನುಕ್ಕರುಳ್ ಶೆಯ್‌ನೀಯೇ ॥ 10

**ಅರ್ಥ** :- ವೇಯರ್-ಪುಗಳ್ = (ಮೂಂಗಿಲ್) ಮನೆತನಕ್ಕೆ ತಿಲಕಪ್ರಾಯಳೆಂದು ಹೊಗಳಿಸಿಕೊಳ್ಳುವ, ವಿಲ್ಲಿಪುತ್ತೂರ್ = ಶ್ರೀವಿಲ್ಲಿಪುತ್ತೂರಿನಲ್ಲಿ, ಆಡಿ-ಪೂರಂ = ಆಷಾಢ ಮಾಸದ ಪೂರ್ವಫಲ್ಗುನೀ (ಪುಬ್ಬ) ನಕ್ಷತ್ರದ ದಿವಸವು, ಮೇಲ್-ಮೇಲುಂ-ವಿಳಂಗ = ಹೆಚ್ಚು ಹೆಚ್ಚಾಗಿ (ತನ್ನವತಾರದಿಂದ) ಮಹಿಮೆಯನ್ನು ಬೆಳಗುವಂತೆ, ವಿಟ್ಟುಶಿತ್ತನ್ = ವಿಷ್ಣುಚಿತ್ತರ, (ಪೆರಿಯಾಳ್ವಾರ್) ತೂಯ-ತ್ತಿರುಮಗಳಾಯ್-ವಂದು = ಪರಮಪಾವನಳಾದ ಮಗಳಾಗಿ ಬಂದು ಅವತರಿಸಿ, ಅರಂಗನಾರ್ಕು = ಶ್ರೀರಂಗನಾಥನಿಗೆ, ತುಳಾಯ್-ಮಾಲೈ = ತುಲಸೀಮಾಲಿಕೆಯನ್ನು, ಮುಡಿ-ಶೂಡಿ-ಕೊಡುತ್ತ-ಮಾದೇ = (ಮೊದಲು) ತನ್ನ ಸಿರಿಮುಡಿಗೆ ಮುಡಿದು ನೋಡಿಕೊಂಡು ಭಗವಂತನಿಗೆ ಕೊಟ್ಟ ಗೋದಾದೇವಿಯೇ ! ನೇಯಂ-ಉಡನ್ = (ಶ್ರೀರಂಗನಾಥನಲ್ಲಿ) ಭಕ್ತಿಯಿಂದ, ನೀ-ಉರೈತ್ತ = ನೀನು ಪಾಡಿದ, ತಿರು-ಪಾವೈ-ಆರು-ಐಂದು = ''ತಿರುಪ್ಪಾವೈ'' ಎಂಬ ಮೂವತ್ತು ಪಾಶುರಗಳನ್ನೂ, (ಮತ್ತು) ತೈ-ಒರು-ತಿಂಗಳ್-ಪಾ-ಮಾಲೈ-ಆಯ = ''ತೈಯೊರುತಿಂಗಳ್'' ಎಂದಾರಂಭವಾಗಿ ಪದ್ಯಮಾಲಿಕೆಯೆಂದು, ಪುಗಳ್ = ಪ್ರಸಿದ್ಧವಾದ, ನೂರು-ಉಡನ್-ನಾರ್ಪತ್ತು-ಮೂನ್ರುಂ = 143 ಪಾಶುರಗಳನ್ನೂ, ಅನ್ಬು-ಉಡನ್ = ಬಹಳ ಪ್ರೀತಿಯಿಂದ, ನೀ = ನೀನು, ಅಡಿಯೇನುಕ್ಕು = ಭಕ್ತನಾದ ನನಗೆ, ಅರುಳ್-ಶೆಯ್ = ಕೃಪೆಮಾಡು.

**ತಾತ್ಪರ್ಯ** :- ಆಷಾಢಮಾಸದ ಪೂರ್ವಫಲ್ಗುನೀ (ಪುಬ್ಬ) ನಕ್ಷತ್ರದಲ್ಲಿ ಶ್ರೀವಿಲ್ಲಿಪುತ್ತೂರಿನಲ್ಲಿ ತುಲಸೀವನದಲ್ಲಿ ಅವತರಿಸಿದ ಗೋದಾದೇವಿಯೇ ! ಶ್ರೀಜನಕರಾಜನಿಗೆ ಸೀತೆಯು ಲಭಿಸಿದಂತೆ ಶ್ರೀವಿಷ್ಣು ಚಿತ್ತರಿಗೆ ಲಭಿಸಿರುವೆ. ಚೆಲುವಿನಸಿರಿಯ ಕುವರಿಯಾದ ನಿನ್ನನ್ನು ತಮ್ಮೊಲುವಿನ ಸಿರಿಕುವರಿಯಂತೆ ಭಾವಿಸಿ, ತಿಳಿಯರಿವೆಂಬ ಹಾಲನ್ನು ಕುಡಿಸಿ, ಬೆಳೆಸಿ ಬೆಳಗಿದರು. ನೀನೂ ಶ್ರೀರಂಗನಾಥನಲ್ಲಿ ಅತಿಶಯವೂ ಅಚಂಚಲವೂ ಆದ ಪ್ರೇಮದಿಂದ ಅವನನ್ನೇ ಸರ್ವಸ್ವಪ್ರಿಯತಮನನ್ನಾಗಿ ಆರಿಸಿಕೊಂಡೆ. ನಿನ್ನ ತಂದೆಯು ಆ ರಂಗನಾಥನಿಗೆ ಧರಿಸಲು ಇಟ್ಟಿದ್ದ ಪೂಮಾಲೆಯನ್ನು ನಿನ್ನ ಸಿರಿಮುಡಿಗೆ ಮುಡಿದು, ಬೆಡಗಿ, ಕನ್ನಡಿಯಲ್ಲಿ ನಿನ್ನೊಡಲ ಮತ್ತು ಮುಡಿಯ ಚೆಲುವನ್ನು ನೋಡಿ, ಇದು ಶ್ರೀಕೃಷ್ಣನಿಗೆ ಒಪ್ಪತಕ್ಕದ್ದೆಂದು, ಆನಂದಿಸಿ, ಅದನ್ನು ಕಳೆದಿಡುತ್ತಿದ್ದೆ. ಆ ನಿನ್ನ ಪ್ರಿಯತಮ ರಂಗನೂ ಅದೇ ತನಗೆ ಪರಮಭೋಗ್ಯವೆಂದು ಅಲಂಕರಿಸಿಕೊಳ್ಳುತ್ತಿದ್ದನು. ಒಮ್ಮೆ ಅವನ ಸನ್ನಿಧಿಗೆ ಬಿಜಯಮಾಡಿ, ಹಾಗೆಯೇ ಅವನೊಡನೆ ಕೂಡಿಕೊಂಡೆ. ಅಪಾರ

ಮಹಿಮಳು ನೀನು, ಅನನ್ಯ ಭಕ್ತಿಯಿಂದ ನೀನು ಪಾಡಿದ ದಿವ್ಯ-ಪ್ರಬಂಧಗಳನ್ನು (173 ಪಾಶುರಗಳನ್ನು) ನನಗೆ ಕರುಣಿಸಬೇಕು.

आषाढे पूर्वफल्गुन्यतिशयसुभगा त्वत्समुद्भूतियोगा ।
जोते ! श्रीविष्णुचित्तात् अतिशुचि ! विनुते ! रङ्गनाथाय क्ल्प्ताम् ।।
मालां धृत्वात्ममौळावथ निजरमणायार्पयन्तीह गोदे ! ।
प्रीत्या गीता स्त्वया या ससकलफलजुषः ताश्च षट्पञ्चगाथाः ।।
गुणिता दशभिश्चतुर्दशापि त्र्यधिका 'स्तैय्योरुतिङ्गळा' ह्युपात्ताः ।
अधुनानुगृहाण मे प्रसन्ना प्रथिता स्त्वं सरसाश्च रम्यगाथाः ॥ १०

ಮೂಲ : ಮನ್ನುಮದಿಳ್ ತಿರುಮಣ್ಡಂಗುಡಿ ತಾನ್‌ವಾಳ
ಮಾರ್‌ಹಳಿಮಾದಕ್ಕೇಟ್ಟೈನಾಳಿಲ್‌ವನ್ದು,
ತುನ್ನುಪುಗಳ್ ತೊಣ್ಡರಡಿಪ್ಪೊಡಿಯೇ ! ನೀ ಮುನ್
ತುಳಾಯ್ ಮಾಲೈಪ್ಪಣಿಯಡಿಮೈಶೆಯ್ದುನಾಳುಂ,
ತೆನ್ನರಂಗ ಮಣವಾಳರ್ಕನ್ಬು ಮಿಕ್ಕು
ಚ್ಚೆಪ್ಪಿಯ ನಲ್‌ತಿರುಮಾಲೈ ನಾರ್ಪ್ಪತ್ತೈಂದುಂ,
ಪನ್ನಿಯನಲ್ ತಿರುಪ್ಪಳ್ಳಿಯೆಳುಚ್ಚಿಪ್ಪತ್ತುಂ
ಪಳವಡಿಯೇನುಕ್ಕರುಳ್‌ಶೆಯ್ ಪರಿನ್ದುನೀಯೇ ॥ 11

ಅರ್ಥ :- ಮನ್ನುಂ-ಮದಿಳ್ = ಸ್ಥಿರವಾದ ಮಹಡಿಮನೆಗಳಿರುವ, ತಿರು-ಮಂಡಂಗುಡಿತಾನ್ = ''ತಿರುಮಂಡಂಗುಡಿ'' ಎಂಬ ದಿವ್ಯದೇಶವು, ವಾಳ = ಮೇಲ್ಮೆಯಿಂದ ಬಾಳಿಬೆಳಗುವಂತಿರುವ ಸ್ಥಳದಲ್ಲಿ, ಮಾರ್ಹಳಿ-ಮಾದ-ಕೇಟ್ಟೈ-ನಾಳಿಲ್ = ಮಾರ್ಗಶಿರ ತಿಂಗಳಿನಲ್ಲಿ ಜ್ಯೇಷ್ಠಾನಕ್ಷತ್ರದ ದಿನ, ವಂದು = ಅವತರಿಸಿ, ತುನ್ನು-ಪುಗಳ್ = ಪೂರ್ಣಯಶಸ್ಸಿನ ತೊಂಡರ್-ಅಡಿ-ಪೊಡಿಯೇ = ತೊಂಡರಡಿಪ್ಪೊಡಿಯಾಳ್ವಾರ್‌ರೇ ! (ಭಕ್ತರ ಅಡಿಯಧೂಳು ಎಂಬರ್ಥದ ಮಹಿಮರೇ !) ನೀ-ಮುನ್ = ನೀವು ಹಿಂದೆ, ತೆನ್-ಅರಂಗ-ಮಣವಾಳರ್ಕು = ಶ್ರೀರಂಗದ ಶ್ರೀರಂಗನಾಥನಿಗೆ, ನಾಳುಂ = ಪ್ರತಿ ನಿತ್ಯವೂ, ತುಳಾಯ್-ಮಾಲೈ-ಪಣಿ-ಅಡಿಮೈ-ಶೆಯ್ದು = ತುಲಸೀಮಾಲೆಯನ್ನು ಕಟ್ಟಿ ಧರಿಸುವ ಸೇವೆಯನ್ನು ಮಾಡಿ, ಅನ್ಬು-ಮಿಕ್ಕು = ಭಕ್ತಿ ಮಿತಿಮೀರಿ, ಶೆಪ್ಪಿಯ = ಹೇಳಿದ ನಲ್-ತಿರುಮಾಲೈ = ಉತ್ತಮವಾದ ''ತಿರುಮಾಲೈ'' ಎಂಬ ದಿವ್ಯಪ್ರಬಂಧದ, ನಾರ್ಪ್ಪತ್ತೈಂದು = ನಲವತ್ತೈದು ಪಾಶುರಗಳನ್ನೂ, (ಮತ್ತು) ಪನ್ನಿಯ-ನಲ್-ತಿರುಪ್ಪಳ್ಳಿಯೆಳುಚ್ಚಿ-ಪತ್ತುಂ =

ಪಾಡಿದ ಉತ್ತಮವಾದ 'ತಿರುಪ್ಪಳ್ಳಿಯೆಳುಚ್ಚಿ''ಯ 10 ಪಾಶುರಗಳನ್ನೂ, ಪಳ-ಅಡಿಯೇನುಕ್ಕು = ಮೊದಲಿನಿಂದಲೂ ಸೇವಕನಾಗಿಯೇ ಇರುವ ನನಗೆ, ಪರಿಂದು = ಪ್ರೀತಿಯಿಂದ, ನೀ-ಅರುಳ್‌ಶೆಯ್ = ನೀವು ಕೃಪೆಮಾಡಬೇಕು.

ತಾತ್ಪರ್ಯ :- ಮಾರ್ಗಶೀರ್ಷ ಮಾಸದ ಜ್ಯೇಷ್ಠಾ ನಕ್ಷತ್ರದಲ್ಲಿ ಚೋಳದೇಶದ ''ತಿರುಮಂಡಂಗುಡಿ'' ಎಂಬ ದಿವ್ಯ ದೇಶದಲ್ಲಿ ಅವತರಿಸಿದ ''ತೊಂಡರಡಿಪ್ಪೊಡಿ ಯಾಳ್ವಾರ್‍ರೇ'' ! ಸಹಜವಾದ ಸತ್ವಗುಣಪೂರ್ಣರಾಗಿ ಭಗವದ್ಭಕ್ತಿ ಭರಿತರಾಗಿ, ದಿನವೂ ತುಲಸಿ ಹೂ ಮಾಲೆಗಳನ್ನು ಕಟ್ಟಿ, ಶ್ರೀ ರಂಗನಾಥನಿಗೆ ಸಲ್ಲಿಸಿ, ಆ ಆನಂದವನ್ನು ಅನುಭವಿಸಿದಿರಿ. ಆ ಅನುಭವ ಪರೀವಾಹಕವಾಗಿ ಹೊರಹೊಮ್ಮಿದ ನಿಮ್ಮ ''ತಿರುಮಾಲೈ'' ಪ್ರಬಂಧದ 45 ಪಾಶುರಗಳನ್ನೂ ''ತಿರುಪ್ಪಳ್ಳಿಯೆಳುಚ್ಚಿ''ಯ 10 ಪಾಶುರಗಳನ್ನೂ ಎಂದಿನಿಂದಲೂ ಪರಮ ಭಕ್ತನಾಗಿರುವ ನನಗೆ ಅನುಗ್ರಹಿಸಬೇಕು.

क्षेत्रे 'मण्डंगुडी' ति स्थिरतरसुमहासौधभासे शरासे ।
मासे ज्येष्ठोडुजात ! प्रणुतगुणनिधे ! देव भक्ताङ्घ्रिरेणो ! ।।
पूर्वं श्रीरङ्गराजेऽनिश मिह तुलसीदामसेवां वितन्वन् ।
व्यातानी र्यांश्च भक्त्या ननु नवगुणिताः पञ्चसंख्या स्सुगाधाः ।। १

द्राविड्यां 'तिरुमालै' इत्यभिहिताः अत्युत्तमा स्ता स्तथा ।
सङ्गीता दश गाधिका स्सुललिताः प्राबोधिका स्सत्फलाः ।।
श्रीरङ्गाधिपतेः पदाब्जविषये या स्ताश्च सर्वा अपि ।
त्वत्पादप्रणताय मेऽनवरतं प्रीत्याऽनुगृह्णीष्व भोः ।। ११

ಮೂಲ : ಉಲಹರಿಯ ಮಲಿಪುಹಳ್ ಕಾರ್ತಿಹೈಮಾದತ್ತಿಲ್
ಉರೋಹಿಣಿನಾಳುರಂದ್ಯೆವಳಮ್ಬದಿಯಿಲ್ ತೋನ್ರಿ,
ತಲಮಳನ್ದ ತೆನ್ನರಂಗರ್ ಪಾಲುಲೋಕ
ಶಾರಂಗ ಮಾಮುನಿ ತೋಳ್‌ತನಿಲೇ ವಂದು,
ಪಲಮರೈಯಿನ್ ಪೊರುಳಾಲ್ ಪಾಣ್ಬೆರುಮಾಳೇ ! ನೀ
ಪಾದಾದಿಕೇಶಮದಾಯ್ ಪಾಡಿತ್ತಂದ,
ಶೊಲ್‌ಅಮಲನಾದಿಪಿರಾನ್ ಪತ್ತು ಪಾಟ್ಟುಂ
ಶೋರಾಮಲೆನಕ್ಕರುಳ್‌ಶೆಯ್ ತುಲಂಗನೀಯೆ ॥ 12

**ಅರ್ಥ** :- ಪಾಣ್ ಪೆರುಮಾಳೇ = ಓ ! ತಿರುಪ್ಪಾಣಾಳ್ವಾರ್ರೇ ! ಉಲಹು-ಅರಿಯ = ಜಗತ್ತು ತಿಳಿಯಲೆಂದು, ಮಲಿ-ಪುಗಳ್-ಕಾರ್ತಿಹೈ-ಮಾದತ್ತಿಲ್ = ಕೀರ್ತಿಯಿಂದ ಪೂರ್ತಿಯಾದ ಕಾರ್ತಿಕ ಮಾಸದಲ್ಲಿ, ಉರೋಹಿಣಿನಾಳ್ = ರೋಹಿಣೀ ನಕ್ಷತ್ರದಲ್ಲಿ, ಉರಂದೈ-ವಳಂ-ಪದಿಯಿಲ್ = 'ಉರೈಯೂರ್' ಎಂದು ಶ್ರೀರಂಗನಾಥನ ಕಟಾಕ್ಷಕ್ಕೆ ಪಾತ್ರವಾಗಿ ತುಂಬ ಬೆಳಗುವ ದಿವ್ಯ ಸ್ಥಳದಲ್ಲಿ, ತೋನ್ರಿ = ಅವತರಿಸಿ, ತಲಂ-ಅಳಂದ = ಭೂಮಿಯನ್ನಳೆದು, ತೆನ್-ಅರಂಗರ್-ಪಾಲ್ = ಸುಂದರನಾದ ಶ್ರೀರಂಗನಾಥನ ಸನ್ನಿಧಿಯಲ್ಲಿ, ಉಲೋಕಶಾರಂಗ-ಮಾಮುನಿ-ತೋಳ್-ತನಿಲೇ = 'ಲೋಕಸಾರಂಗ' ರೆಂಬ ಮುನಿಯ ಭುಜಗಳ ಮೇಲೆ, ವಂದು = ಬಂದು, ಪಲ-ಮರೈಯಿನ್-ಪೊರುಳಾಲ್ = ಹಲವಾರು ಉಪನಿಷತ್ತುಗಳ ಸಾರಾರ್ಥಗಳಿಂದ ಪೂರ್ಣವಾಗಿ, ಪಾದಾದಿ ಕೇಶಮದಾಯ್ (ಶ್ರೀರಂಗನಾಥನ) ಅಡಿಯಿಂದ ಮುಡಿಯವರೆಗೆ, ನೀ-ಪಾಡಿ-ತಂದ = ನೀವು ಪಾಡಿ (ಲೋಕಕ್ಕೂ) ಅನುಗ್ರಹಿಸಿದ, ಶೊಲ್ = (ವೇದವೆಂಬ) ಪ್ರಾಚೀನಸೂಕ್ತಿಯಾದ, ಅಮಲನಾದ ಪಿರಾನ್-ಪತ್ತು-ಪಾಟ್ಟುಂ = 'ಅಮಲನಾದ ಪಿರಾನ್' ಎಂಬ ಪ್ರಬಂಧದ 10 ಪಾಶುರಗಳನ್ನೂ, ಶೋರಾಮಲ್ = (ಸೋರದಂತೆ) ಮರೆಯದಂತೆ ಬೆಳಗಲು, ನೀ-ಎನಕ್ಕು-ಅರುಳ್-ಶೆಯ್ = ನೀವು ನನಗೆ ಕೃಪೆಮಾಡಬೇಕು.

**ತಾತ್ಪರ್ಯ** :- ಕಾರ್ತಿಕಮಾಸದ ರೋಹಿಣೀನಕ್ಷತ್ರದ ದಿನ ಶ್ರೀರಂಗನಾಥನ ದಿವ್ಯ ಕಟಾಕ್ಷಕ್ಕೆ ಪಾತ್ರರಾಗಿರುವ, 'ಉರೈಯೂರ್' ಎಂಬ ದಿವ್ಯಕ್ಷೇತ್ರದಲ್ಲಿ ಅವತರಿಸಿದ ತಿರುಪ್ಪಾಣಾಳ್ವಾರ್ರೇ ! ನಿಮ್ಮ ಮಹಿಮೆಯನ್ನು ಇಡೀ ಜಗತ್ತಿಗೇ ಬೆಳಗಿದಿರಿ. ಮೊದಲಿನಿಂದಲೂ ಸತ್ವಗುಣಗಣಿಯಾಗಿ, ಶ್ರೀರಂಗನಾಥನ ಕಣ್ಮಣಿಯಾಗಿ, ಮನಸ್ಸು ತಣಿಯುವಂತೆ ಫಣಿಶಾಯಿಯನ್ನೇ ಕೀರ್ತನೆ ಮಾಡುತ್ತ, ಪರಮಾತ್ಮನ ಪ್ರಸನ್ನತೆಗೆ ಪಾತ್ರರಾಗಿ, ಲೋಕಸಾರಂಗ ಮುನಿಯೆಂಬ ದೇವಾಲಯ ಸೇವಾನಿರತರ ತೋಳುಗಳ ಮೇಲೆ ಬಿಜಯಮಾಡಿ ಬರುವಂತೆ, ಶ್ರೀರಂಗನಾಥನಿಂದ ಆಜ್ಞಾಪಿತರಾಗಿ, ಬಂದು ಆ ಭಗವಂತನ ಅಡಿದಾವರೆಗಳಿಂದ ಹಿಡಿದು ಮುಡಿಯವರೆಗೆ ದಿವ್ಯಮಂಗಳ ವಿಗ್ರಹವನ್ನು ಅನುಭವಿಸಿ, ಪಾಡಿದ ''ಅಮಲನಾದ ಪಿರಾನ್'' ಎಂಬ 10 ಪದ್ಯಗಳನ್ನು ನಾನೆಂದಿಗೂ ಮರೆಯದೆ ಅನುಸಂಧಾನ ಮಾಡುವಂತೆ, ನಿಮ್ಮಡಿಯಾಳಾದ ನನಗೆ ಕರುಣಿಸಬೇಕು.

कीर्त्युत्पूरितकार्तिके हि भगवन् पाणान् ! जगत् वेत्त्विति ।
रोहिण्यां उरैयूर' पुरेऽतिमहिते संजात ! रङ्गेशितुः ।।
मित्वा भूमि मवस्थितस्य रुचिरस्याग्रे मुनीन्द्रोद्वह ।।
प्राणौ स्त्वं श्रुतिमौलिसारमहितैः पादादिमूर्धावधि ।। १

प्रतनै द्राविडैः पद्यैः दशभि स्तान्यहं यथा ।
न विस्मरेयं तद्बद्धि संप्रीत्यानुगृहाण मे ।। १२

ಮೂಲ : ಅರಿವುತರುಂ ಪೆರಿಯತಿರುಮೊಳಿತಪ್ಪಾಮಲ್
ಆಯಿರತ್ತೋಡೆಣ್ಬತ್ತುನಾಲುಪಾಟ್ಟುಂ,
ಕುರಿಯದೊರುತಾಣ್ಡಹಂ ನಾಲೈನ್ದೈನ್ದುಂ
ಕುಲಾನೆಡುಂದಾಂಡಹಮೆಳುಕೂತ್ತಿರುಕ್ಕೈಯೊನ್ರುಂ,
ಶಿರಿಯಮಡಲ್ ಪಾಟ್ಟು ಮುಪ್ಪತ್ತೆಟ್ಟಿರಂಡುಂ
ಶೀರ್ ಪೆರಿಯಮಡಲ್ ತನಿಲ್ ಪಾಟ್ಟೆಳುಪತ್ತೆಟ್ಟುಂ,
— ಇರೈಯವನೇ ! ಕಾರ್ತಿಕೈಯಿಲ್ ಕಾರ್ತಿಕೈನಾಳ್
ಎಳಿಲ್ ಕುರೈಯಲ್ ವರುಂಕಲಿಯಾ ವಿರಂಗುನೀಯೆ ॥ 13

ಅರ್ಥ :- ಕಾರ್ತಿಕೈಯಿಲ್ = ಕಾರ್ತಿಕಮಾಸದಲ್ಲಿ, ಕಾರ್ತಿಹೈ- ನಾಳ್ = ಕೃತ್ತಿಕಾ ನಕ್ಷತ್ರದ ದಿವಸ, ಎಳಿಲ್-ಕುರೈಯಲ್ = ಸುಂದರವಾದ ''ತಿರುಕ್ಕರೈಯಲೂರಿ''ನಲ್ಲಿ, ವರುಂ-ಕಲಿಯಾ = ಅವತರಿಸಿದ ತಿರುಮಂಗೈಯಾಳ್ವಾರೇ ! ಇರೈಯವನೇ = ಸ್ವಾಮಿಯೇ! ಅರಿವು-ತರುಂ = ಒಳ್ಳೆಯ ಜ್ಞಾನವನ್ನುಕೊಡುವ, ಪೆರಿಯ-ತಿರು-ಮೊಳಿ = 'ಪೆರಿಯತಿರುಮೊಳಿ' ಎಂಬ ಪ್ರಬಂಧದ, ಆಯಿರತ್ತು-ಓಡು-ಎಣ್-ಪತ್ತು-ನಾಲು-ಪಾಟ್ಟುಂ = 1084 ಪಾಶುರಗಳನ್ನೂ, ಒರು-ಕುರಿಯದು-ತಾಂಡಹಂ = ಅಸಾಧಾರಣವಾದ ''ತಿರುಕ್ಕುರುಂದಾಂಡಹಂ'' ಎಂಬ ಪ್ರಬಂಧದ, ನಾಲು-ಐಂದುಂ = 20 ಸಾವಿರ ಪಾಶುರಗಳನ್ನೂ, ಕುಲಾ-ನೆಡುಂದಾಂಡಹಂ = ಪ್ರಕಾಶಿಸುವ, ''ತಿರುನೆಡುಂದಾಂಡಹಂ'' ಎಂಬ ಪ್ರಬಂಧದ, ಆರು-ಐಂದುಂ = 30 ಪಾಶುರಗಳನ್ನೂ, ಎಳುಕೂತ್ತಿರುಕ್ಕೈ-ಒನ್ರುಂ = ''ತಿರುವೆಳುಕೂತ್ತಿರುಕ್ಕೈ'' ಎಂಬ ಒಂದು ಪಾಶುರವನ್ನೂ, ಶಿರಿಯಮಡಲ್-ಮುಪ್ಪತ್ತು-ಎಟ್ಟು-ಇರಂಡುಂ = ''ಶಿರಿಯಮಡಲ್'' ಎಂಬುದರ 40 ಪಾಶುರಗಳನ್ನೂ, ಶೀರ್-ಪೆರಿಯಮಡಲ್-ತನಿಲ್- ಎಳುಪತ್ತು-ಎಟ್ಟು-ಪಾಟ್ಟುಂ = ಗುಣಭರಿತವಾದ ''ಪೆರಿಯಮಡಲ್''ಎಂಬ ಪ್ರಬಂಧದ 78 ಪಾಶುರಗಳನ್ನೂ, ತಪ್ಪಾಮಲ್ = ತಪ್ಪದೇ (ಅನುಸಂಧಾನಮಾಡುವಂತೆ) ನೀ-ಇರಂಗು = ನೀವು (ನನಗೆ) ಕೃಪೆಮಾಡಬೇಕು. (ಒಟ್ಟು 1253 ಪಾ.)

ತಾತ್ಪರ್ಯ :- ಓ ತಿರುಮಂಗೈಯಾಳ್ವಾರ್ರೇ ! ನೀವು ಕಾರ್ತಿಕಮಾಸದ ಕೃತ್ತಿಕಾ ನಕ್ಷತ್ರದದಿನ ''ತಿರುಕ್ಕುರೈಯಲೂರ್'' ಎಂಬಲ್ಲಿ ಅವತರಿಸಿ, ಜ್ಞಾನಜ್ಯೋತಿಯನ್ನು ಬೆಳಗುವಂತಹ ಅತ್ಯಂತ ಪ್ರೌಢಿಮೆಯುಳ್ಳ, 'ಪೆರಿಯತಿರುಮೊಳಿ' ಎಂಬ 1084 ಪಾಶುರಗಳನ್ನೂ, ಅನ್ಯಾದೃಶವಾದ

''ತಿರುಕ್ಕುರುಂದಾಂಡಹಂ'' ಎಂಬ 20 ಪಾಶುರಗಳನ್ನೂ, ಚೆನ್ನಾಗಿ ಬೆಳಗುವಂತಹ ''ತಿರುನೆಡುಂದಾಂಡಹಂ'' ಎಂಬ 30 ಪದ್ಯಗಳನ್ನೂ ''ಎಳುಕೂತ್ತಿರುಕ್ಕೈ'' ಎಂಬ ಒಂದು ಪದ್ಯವನ್ನೂ ''ಶಿರಿಯಮಡಲ್'' ಎಂಬ 40 ಪಾಶುರಗಳನ್ನೂ, ಮತ್ತು ಸದ್ಗುಣಗಳಿಂದ ಪೂರ್ಣವಾದ ''ಪೆರಿಯಮಡಲ್'' ಎಂಬ 78 ಪದ್ಯಗಳನ್ನೂ (6 ಪ್ರಬಂಧಗಳ ಒಟ್ಟು 1253 ಪಾಶುರಗಳು) ತಪ್ಪದೇ ನೆನೆಯುವಂತೆ ಕೃಪೆಮಾಡಬೇಕು.

स्वामिन् ! 'श्रीकुरैयल्' पुरेऽतिरुचिरे भोः ! कार्तिके कृत्तिका- ।
जात श्रीकलिवैरिसंयमिमणे ! प्रज्ञाप्रदात्रीं कृतिम् ।।
'श्रीसूक्तिं महतीं' अशीत्यधिकसाहस्रया चतुर्भिर्युतां ।
पञ्चावृत्तचतुर्युता मसदृशीं 'श्रीमत्कुरुन्दाण्डहम्' ।
त्रिंशत्पद्ययुतां प्रबन्धमहितां 'श्रीमन्नेडुन्दाण्डहं' ।
श्लोकां 'श्रीयेळुकूतिरुक्कै' इति तां 'लघ्वीं मडल्नामिकाम्' ।।
चत्वारिंशदधिष्ठितां च 'महतीं गुण्यां मडल्संज्ञिकां ।
सप्तावृत्तदशाधिकाष्टकमितां, ताश्चनुगृह्णीष्व मे ।। १३

ಮೂಲ : ದೇಶಮೆಲಾಮುಹನ್ದಿಡಮೇ ಪೆರುಂಬೂದೂರಿಲ್
ಶಿತ್ತಿರೈಯಿಲಾದಿರೈನಾಳ್‌ವನ್ದುದ್ತೋನ್ರಿ,
ಕಾಶಿನಿಮೇಲ್ ವಾದಿಯರ್ರೈ ವೆನ್ರರಂಗರ್
ಗತಿಯಾಹವಾಳ್‌ನ್ದರುಳುಮೆತಿರಾಶಾ ! ಮುನ್,
ಬೂಶುರರ್ಕ್ಕೋನ್‌ತಿರುವರಂಗತ್ತಮುದನಾರುನ್
ಪೊನ್ನಡಿಮೇಲನ್ದಾದಿಯಾಹಪ್ಪೋತ್ತಿ
ಪೇಶಿಯನಲ್‌ಕಲಿತ್ತುರೈನೂತ್ತೆಟ್ಟುಪ್ಪಾಟ್ಟುಂ
ಪಿಳ್ಳೈಯರವೇ ಯೆನಕ್ಕರುಳ್‌ಶೆಯ್ ಪೇಣನೀಯೆ ॥ 14

ಅರ್ಥ :- ದೇಶಂ-ಎಲಾಂ = ನಾಡೆಲ್ಲಾ, ಉಹಂದು-ಇಡವೇ = ಸಂತೋಷವಾಗಿ ಹೊಗಳುವಹಾಗೆಯೇ, ಪೆರುಂಬೂದೂರಿಲ್ = ಶ್ರೀಪೆರುಂಬೂದೂರಿನಲ್ಲಿ,ಚಿತ್ತಿರೈಯಿಲ್ = ಚೈತ್ರಮಾಸದ, ಆದಿರೈ-ನಾಳ್ = ಆರ್ದ್ರಾ ನಕ್ಷತ್ರದಲ್ಲಿ, ವಂದು-ತೋನ್ರಿ = ಬಂದವತರಿಸಿ, ಕಾಶಿನಿ-ಮೇಲ್ = ಭೂಮಂಡಲದಲ್ಲಿರುವ, ವಾದಿಯರೈ-ವೆನ್ರು = ವಾದಿಗಳನ್ನು ವಾದದಲ್ಲಿ ಜಯಿಸಿ, ಅರಂಗರ್-ಗತಿಯಾಹ = ಶ್ರೀರಂಗನಾಥನೇ ಗತಿ

ಎಂದು, ವಾಳ್‌ನ್ದು-ಅರುಳುಂ = (ತಾವು) ಉಜ್ಜೀವಿಸಿ (ಆಶ್ರಿತರಲ್ಲಿ) ಕೃಪೆಗೈಯ್ಯುವ ಯತಿರಾಶಾ = ಯತಿರಾಜರಾದ ಶ್ರೀರಾಮಾನುಜರೇ ! ಮುನ್ = ಹಿಂದೆ, ಬೂ-ಶುರರ್-ಕೋನ್ = ಭೂಸುರರಿಗೆ ನಾಯಕರಾದ, ತಿರುವರಂಗತ್ತಮುದನಾರ್ = ತಿರುವರಂಗತ್ತಮುದನಾರ್ ಎಂಬುವರು, ಉನ್-ಪೊರ್-ಅಡಿಮೇಲ್ = ನಿಮ್ಮ ಅಂದವಾದ ಪಾದಾರವಿಂದಗಳಮೇಲೆ, ಅಂದಾದಿಯಾಹ-ಪೋತ್ತಿ-ಪೇಶಿಯ = ಅಂತಾದಿಯಾದ ಪಾಶುರಗಳಿಂದ ಹೊಗಳಿ ಹೇಳಿದ, ನಲ್-ಕಲಿತ್ತುರೈ = ಉತ್ತಮವಾದ ''ಕಲಿತ್ತುರೈ'' ಎಂಬ ವೃತ್ತದಲ್ಲಿ ರಚಿಸಿದ, ನೂತ್ತು-ಎಟ್ಟು-ಪಾಟ್ಟುಂ = ''ರಾಮಾನುಜನೂತ್ತಂದಾದಿ'' ಎಂಬ 108 ಪಾಶುರಗಳನ್ನೂ, ಪಿಳ್ಳೈ-ಅರ = ತಪ್ಪಿಹೋಗದಂತೆ (ಅನುಸಂಧಾನ ಮಾಡುವಂತೆ) ನೀ-ಪೇಣಿ = ನೀವು (ನನ್ನಲ್ಲಿ) ವಾತ್ಸಲ್ಯವಿಟ್ಟು, ಎನಕ್ಕು = ನನಗೆ, ಅರುಳ್-ಶೆಯ್ = ದಯೆಗೈಯ್ಯಬೇಕು.

ತಾತ್ಪರ್ಯ :– ಚೈತ್ರಮಾಸದ ಆರ್ದ್ರಾನಕ್ಷತ್ರದಲ್ಲಿ ತೊಂಡಮಂಡಲದಲ್ಲಿರುವ ''ಶ್ರೀಪೆರುಂಬೂದೂರೆಂಬ'' ದಿವ್ಯಕ್ಷೇತ್ರದಲ್ಲಿ ಅವತರಿಸಿ, ಶ್ರೀಭಾಷ್ಯಕಾರರೆಂದು ಖ್ಯಾತರಾದ ಶ್ರೀರಾಮಾನುಜರೇ ! ಈ ಲೋಕದಲ್ಲಿ ಜೀವರಾಶಿಗಳು ಉಜ್ಜೀವಿತರಾಗಲೆಂದು ಮಹೋದಾರ ಗುಣಸಂಪನ್ನರಾಗಿ ಬೆಳಗಿದಿರಿ. ನಿಮ್ಮ ಚರಣಕಮಲಗಳಮೇಲೆ ಅತಿಶಯ ಭಕ್ತಿಯಿಂದ ನಿಮ್ಮ ಅನುಮತಿಯನ್ನು ಪಡೆದೇ, ನಿಮ್ಮ ಅಂತರಂಗ ಶಿಷ್ಯವರೇಣ್ಯರಾದ, ''ಶ್ರೀಕೂರತ್ತಾಳ್‌ವಾನ್''ರವರ ಪಾದಪದ್ಮಗಳನ್ನು ಆಶ್ರಯಿಸಿ, ಉಜ್ಜೀವಿಸಿದ ''ತಿರುವರಂಗತ್ತಮುದನಾರ್ರವರು'' ನಿಮಗಿದ್ದ ಆಳ್ವಾರ್ರುಗಳ ಸಂಬಂಧವನ್ನೂ, ಅದರಿಂದ ಬಂದ ಪ್ರಬಂಧಾನುಸಂಧಾನದ ಕ್ರಮವನ್ನೂ ಮತ್ತು ನಿಮ್ಮಲ್ಲಿದ್ದ ಸಹಜಕಾರುಣ್ಯಾತಿಶಯವನ್ನೂ ನೇರವಾಗಿ ತಾವು ಅನುಭವಿಸಿ, ''ದಿವ್ಯಪ್ರಬಂಧವು ನಾಲ್ಕು ಸಾವಿರ; ಪಾಶುರಗಳಿಂದ ಸಂಪೂರ್ಣಗೊಳ್ಳಲೆಂಬಭಿಪ್ರಾಯದಿಂದಲೇ ರಚಿಸಿದರೋ'' ಎಂಬಂತಿರುವ ''ಶ್ರೀರಾಮಾನುಜನೂತ್ತಾಂದಾದಿ''ಯ 108 ಪಾಶುರಗಳನ್ನೂ, ತಪ್ಪದೇ ನಾನು ಅನುಸಂಧಾನ ಮಾಡಲು ನೀವೇ ನನಗೆ ಅನುಗ್ರಹಿಸಬೇಕು.

(ಶ್ರೀ ದೇಶಿಕರು ಈ ಪಾಶುರದಲ್ಲಿ ''ನೂತ್ತಂದಾದಿ'' ರಚಿಸಿದವರನ್ನು ಹೇಳದೇ, ಶ್ರೀಭಾಷ್ಯಕಾರರನ್ನು ಪ್ರಾರ್ಥಿಸಿರುವುದರ ಆಶಯ ಹೀಗಿರಬಹುದು; ತಿರುವರಂಗತ್ತಮುದನಾರು ಶ್ರೀರಾಮಾನುಜಾಚಾರ್ಯರ ಅನುಜ್ಞೆಯಿಂದಲೇ ಇದನ್ನು ಸಂಕೀರ್ತಿಸಿರುವುದರಿಂದಲೂ, ಹಾಗೆಯೇ ಎಲ್ಲರೂ ಇದನ್ನೂ ಅನುಸಂಧಾನ ಮಾಡುವಂತೆ ಹೇಳಿದ್ದುದರಿಂದಲೂ, ಈ ಪ್ರಬಂಧವನ್ನು ಸೇರಿಸಿಕೊಂಡೇ ಹಿಂದಿನ ಎಲ್ಲಾ ಪ್ರಬಂಧಗಳನ್ನೂ (ನಾಲಾಯಿರವನ್ನೂ) ''ತಿರುಕ್ಕುರುಹೈಪ್ಪಿರಾನ್ ಪಿಳ್ಳಾನ್''ಗೆ ಉಪದೇಶಿಸಿದರೆಂದು ಪ್ರಸಿದ್ಧಿಯಿರುವುದರಿಂದಲೂ, ಈ ಪ್ರಬಂಧಕ್ಕೆ ವಿಷಯರಾದ ಮತ್ತು ಇದು ತನಗೊಪ್ಪಿತವೆಂದು ಭಾವಿಸಿದ್ದ ಶ್ರೀಮದಚಾರ್ಯರನ್ನೇ ಉಪಾದೇಯತಮರನ್ನಾಗಿ ತಿಳಿದ

ಕಾರಣ ಹೀಗೆ ಗ್ರಂಥಕ್ಕೆ ವಿಷಯರಾದ ಆಚಾರ್ಯರನ್ನೇ ಪ್ರಾರ್ಥಿಸಿರುವರೆಂದು ಭಾವಿಸೋಣ).

श्रीमद्भूताभिधाने सकलजगदभिष्टूयमाने पुरेऽग्र्ये।
चैत्रे चार्द्रपवित्रेऽहनि सुकृतिजने ! सर्वदुर्वादिजैत्र ! ।।
रङ्गैकोपायजीविन् ! सदयहृदय ! भो योगिराट् ! लक्ष्मणार्य ! ।
श्रीमद्रङ्गामृतेन क्षितिसुरपतिना त्वत्पदाम्भोजयुग्मे ।। १

अन्तादिरूपेण सुविर्णिता याः 'कलित्तुरै' वृत्तविचित्रिता स्ताः ।
अष्टोत्तरा अत्र शतेन युक्ता गाथाःकृपातोऽनुगृहाण मे त्वम् ।। १४

ಮೂಲ : ಎಣ್ಣಿಲ್ ಮುದಲಾಳ್‌ವಾರ್‌ಹಳ್‌ಮೂನ್ರುನೂರುಂ
ಎಳಿಲ್‌ಮಳಿಶೈಪ್ಪಿರಾನಿರುನೂತ್ತೊರುಪತ್ತಾರುಂ,
ಉಣ್ಮೈಮಿಹುಮಾರನ್‌ಮರ್ರೈಯಾಯಿರತ್ತೋಡು
ಉತ್ತವಿರುನೂತ್ತುತ್ತೊಣ್ಣೂರುಮಾರುಂ,
ವಣ್ಮೈಯುಡೈಮದುರಕವಿ ಪತ್ತುಮೊನ್ರುಂ
ವಂಜಿಯರ್‌ಕೋನ್‌ನೂತ್ತೈಂದುಂಪಟ್ಟನಾದನ್,
ಪಣ್ಣಿಯಲ್‌ನಾನೂತ್ತೆಳುಪತ್ತುಮೂನ್ರುಂ
ಪಾರ್‌ಕ್ಕೋದೈ ನೂತ್ತೈಳುಪತ್ತುಮೂನ್ರೇ ॥ 15

ಬತ್ತರಡಿಪ್ಪೊಡಿ ಪಾಡಲ್ನೈಂಬತ್ತೈಂದುಂ
ಪಾಣರ್‌ಪುಗಳ್‌ಪತ್ತುಡನೇ ಪರಕಾಲನ್‌ಶೊಲ್,
ಅತ್ತನುಯರ್ ವೇಂಗಡಮಾರ್‌ಕ್ಕಾಯಿರತ್ತೋಡಾನ
ಇರುನೂತ್ತೋರೈಂಬತ್ತುಮೂನ್ರುಂ,
ಮುತ್ತಿತರು ಮೆತಿರಾಶರ್ ಪೊನ್ನಡಿಕ್ಕೇ
ಮೊಳಿಂದವಮುದರ್ ಪಾಡಲ್ ನೂರುಮೆಟ್ಟುಂ,
ಎತ್ತಿಶೈಯುಂವಾಳವಿವರ್‌ಪಾಡಿವೈತ್ತ
ಇವೈನಾಲಾಯಿರಮುಮಡಿಯೋಂಗಳ್‌ವಾಳ್ವೇ ॥ 16

ಅರ್ಥ :- ಎಣ್ಣಿಲ್ - ಎಣಿಸಲಾರಂಭಿಸಿದರೆ, ಮುದಲ್ - ಆಳ್ವಾರ್‌ಹಳ್ -

ಮೂನ್ರು-ನೂರುಂ = ಮೊದಲಿನ ಮೂವರು ಆಳ್ವಾರು್ರಗಳು ಮಾಡಿದ 300, ಎಳಿಲ್-ಮಳಿಶೈಪ್ಪಿರಾನ್ = ತೇಜಸ್ವಿಗಳಾದ ತಿರುಮಳಿಶೈಯಾಳ್ವಾರ್ರ, ಇರು-ನೂತ್ತು-ಒರುಪತ್ತು-ಆರುಂ = 216, ಉಣ್ಮೈ-ಮಿಹು = ಸತ್ಯಾರ್ಥಗಳೇ ತುಂಬಿರುವ, ಮಾರನ್-ಮರೈ = ನಮ್ಮಾಳ್ವಾರ್ರ ವೇದಸಾರವಾದ, ಆಯಿರತ್ತೋಡು-ಉತ್ತ-ಇರು-ನೂತುತ್ತೊಣ್ಣೂರುಂ-ಆರುಂ = 1296, ವಣ್ಮೈ-ಉಡೈ = ಔದಾರ್ಯಗುಣನಿಧಿಯಾದ, ಮದುರಕವಿಪತ್ತುಂ-ಒನ್ರುಂ = ಮಧುರಕವಿಗಳ 11 ಪದ್ಯಗಳೂ, ವಂಜಿಯರ್-ಕೋನ್ = ವಂಜಿನಾಡೊಡೆಯರಾದ ಕುಲಶೇಖರರ, ನೂತ್ತು-ಐಂದು = 105 ಪದ್ಯಗಳೂ, ಪಟ್ಟನಾದನ್ = ಪೆರಿಯಾಳ್ವಾರ್ರ, ಪಣ್-ಇಯಲ್ = ಪಾಡುವ ಸ್ಥಿತಿಯಲ್ಲಿರುವ, ನಾನೂತ್ತು-ಎಳುಪತ್ತುಂ-ಮೂನ್ರುಂ = 473, ಪಾರ್-ಕೋದೈ = ಭೂದೇವಿಯ ಅವತಾರವಾದ ಗೋದಾದೇವಿಯ, ನೂತ್ತು-ಎಳುಪತ್ತು-ಮೂನ್ರುಂ = 173, ಪತ್ತರ್-ಅಡಿ-ಪೊಡಿ-ಪಾಡಲ್ = ತೊಂಡರಡಿಪ್ಪೊಡಿಯಾಳ್ವಾರು್ರ ಪಾಡಿರುವ, ಐಂ-ಪತ್ತು-ಐಂದುಂ = 55, ಪಾಣರ್-ಪುಹಳ್ =ತಿರುಪ್ಪಾಣಾಳ್ವಾರು್ರ ಪಾಡಿದ, ಪತ್ತು-ಉಡನೇ =10ರೊಂದಿಗೆ, ಪರಕಾಲನ್-ಶೊಲ್ = ವಿಮತರಿಗೆ ಕಾಲರೂಪವಾದ ತಿರುಮಂಗೈಯಾಳ್ವಾರು್ರ ಪಾಡಿರುವ, ಅತ್ತನ್-ಉಯರ್-ವೇಂಗಡಮಾರ್ಕು = ಜಗತ್ಪಿತನೆನಿಸಿ, ಅತ್ಯುನ್ನತ ವೇಂಕಟಾಚಲಕ್ಕೆ ಅಧಿಪತಿಯಾದ ಶ್ರೀನಿವಾಸನ ವಿಷಯವಾದ, ಆಯಿರತ್ತೋಡು-ಆನ-ಇರು-ನೂತ್ತು-ಓರ್ರೆಂಬತ್ತುಂ-ಮೂನ್ರುಂ = 1253 ಮುತ್ತಿ-ತರುಂ = ಮುಕ್ತಿಮಾರ್ಗವನ್ನು ತೋರಿಸಿಕೊಟ್ಟ, ಎತಿರಾಜರ್ = ಯತಿಶ್ರೇಷ್ಠರಾದ ಶ್ರೀಭಾಷ್ಯಕಾರರ, ಪೊನ್‌ಅಡಿಕ್ಕೇ-ಮೊಳಿಂದ = ಅಂದವಾದ ಪಾದಾರವಿಂದಗಳ ವಿಷಯವಾಗಿ, ಅಮುದನಾರ್, ಪಾಡಲ್ = ತಿರುವರಂಗತ್ತಮುದನಾರು್ರಪಾಡಿದ, ನೂರುಂ-ಎಟ್ಟುಂ = 108 ಪಾಶುರಗಳೂ, (ಒಟ್ಟುಸೇರಿ) ಎತ್ತಿಶೈಯುಂ-ವಾಳ = ಎಲ್ಲಾ ದಿಕ್ಕಿನಲ್ಲಿರುವವರೂ (ಸರ್ವರೂ) ಉಜ್ಜೀವಿಸುವುದಕ್ಕಾಗಿಯೇ, ಇವರ್-ಪಾಡಿ-ವೈತ್ತ = ಮೇಲೆ ಹೇಳಿದ 13 ಮಂದಿ ಮಹನೀಯರೂ ಪಾಡಿರುವ, ಇವ್ವೈ-ನಾಲಾಯಿರಮುಂ = ಈ ನಾಲ್ಕು ಸಾವಿರ ಪಾಶುರಗಳೂ, ಅಡಿಯೋಂಗಳ್-ವಾಳ್ವು = ಅತ್ಯಂತಭಕ್ತರಾದ ನಮ್ಮಂತಹವರು ಉಜ್ಜೀವಿಸಲು ಸಾಧಕವಾಗಿರತಕ್ಕವು.

ತಾತ್ಪರ್ಯ :- ಪೊಯ್‌ಹೈ 100, ಪೂದತ್ತಾರ್ 100, ಪೇಯಾಳ್ವಾರ್ 100, ತಿರುಮಳಿಶೈಯಾಳ್ವಾರು್ರ 216, ನಮ್ಮಾಳ್ವಾರು್ರ 1296, ಮಧುರಕವಿಗಳು 11, ಕುಲಶೇಖರರು 105, ಪೆರಿಯಾಳ್ವಾರು್ರ 473, ಗೋದಾದೇವಿಯು 173, ತೊಂಡರಡಿಪ್ಪೊಡಿಯಾಳ್ವಾರು್ರ 55, ತಿರುಪ್ಪಾಣಾಳ್ವಾರು್ರ 10, ತಿರುಮಂಗೈಯಾಳ್ವಾರು್ರ 1253, ತಿರುವರಂಗತ್ತಮುದನ್ರಾರು 108, ಹೀಗೆ 13 ಮಂದಿ ಮಹಾಶಯರು ಮಾಡಿರುವ ಒಟ್ಟು 4000 ಪಾಶುರಗಳುಳ್ಳ ದಿವ್ಯ ಪ್ರಬಂಧಾನುಸಂಧಾನವು ನಿಜವಾಗಿಯೂ

ಭಗವದ್ಭಕ್ತರು ಉಜ್ಜೀವನಗೊಳಿಸಲು ಸುಲಭವಾದ ಸಾಧಕವಾಗಿರುತ್ತದೆ. ಇಷ್ಟು ಮಹಾಶಕ್ತಿ ಈ ಶ್ರೀ ಸೂಕ್ತಿಗಳಲ್ಲಿ ಅಡಗಿರುವುದರಿಂದಲೇ ಇವು ಇಂದಿಗೂ ಅಚ್ಚಳಿಯದೇ ಸರ್ವಜನರಿಗೂ ಅತಿಸ್ಪೃಹಣೀಯವಾಗಿದೆ.

संख्यातुं संप्रवृत्ते त्रिशतक मुदितं योगिभिश्चादिमै स्तैः ।
ज्योतिष्मद्भक्तिसाराभिधमुनिकृतया षोडशेतद्विशत्या ।।
सत्यैकार्थप्रकाशा श्शठमथनमुनेः षण्णवत्या द्विशत्या ।
साहस्र्येता स्सुगाधा मधुरकविमुने रेवमेकादशापि ।। १

गाधाश्श्रीकुलशेखरार्यरचिताः शत्या च पञ्चेतया ।
सप्तत्या त्रियुजा चतुश्शतमिता श्श्रीविष्णुचित्तोदिताः ।।
गेया स्ता वसुधापरा च जननी गोदा हि तस्या गिरः ।
सप्तत्या शतयुक्तया त्रियुतया गम्भीरभावोत्तराः ।। २

पञ्चाशद्युक्तपञ्च प्रणतपदरजोयोगिगीता दशापि ।
श्रीपाणस्याथ तातोन्नवृषशिखरिश्रीनिवासाङ्घ्रिनिष्ठाः ।।
साहस्र्याप्तद्विशत्या कलिमथनमुनेः तास्त्रिपञ्चाशतेताः ।
दातु र्मुक्ते र्यतीन्दोः प्रतिपदकमले बन्धुरे कीर्तिता स्ताः ।। ३

श्रीमद्रङ्गामृतस्याप्यतिशयगुरुभक्त्याकृते स्साष्टशत्या ।
सर्वास्वाशासु सर्वा अवनतजनतोज्जीवनायैव क्लृप्ताः ।।
एवं गीता मुनीन्द्रैः समुहितचतुरावृत्तसाहस्रगाधाः ।
आहत्यास्माक मेता मुनिपदरसिकानां समुज्जीविका हि ।। १६

ಮೂಲ : ವೈಯಹಮೆಣ್ ಪೊಯ್ ಹೈಬೂರ್ತಪೇಯಾಳ್ವಾರ್
ಮಳಿಶೈಯರ್ ಕೋನ್ ಮಗಿಳ್ ಮಾರನ್ ಮದುರಕವಿ,
ಪೊಯ್ಯಿಲ್ ಪುಗಳ್ ಕೋಳಿಯರ್ ಕೋನ್ ವಿಟ್ಟುಶಿತ್ತನ್
ಪೂಂಕೋದೈತೊಂಡರಡಿಪ್ಪೊಡಿಪಾಣಾಳ್ವಾರ್,
ಐಯನರುಳ್ ಕಲಿಯನ್ ಎತಿರಾಶರ್ ತಮ್ಮೋಡು
ಆರಿರುವರೋರೊರುವರವರ್ ತಾಂಶೆಯ್ದ,

**ತುಯ್ಯತಮಿಳಿರುಪತ್ತುನಾನ್ಗಿನ್ ಪ್ಪಾಟಿನ್ ತೊಹೈ**
**ನಾಲಾಯಿರಮುಮಡಿಯೋಂಗಳ್ ವಾಳ್ವೇ ॥ 17**

ಅರ್ಥ :- ವೈಯಹಂ-ಎಣ್ = ಈ ಲೋಕದ ಜನರಿಂದ ಅನುಸಂಧಾನ ಮಾಡಲ್ಪಡುವ ಪೊಯ್ ಹೈ-ಬೂತನ್-ಪೇಯಾಳ್ವಾರ್-ಮಳಿಶೈಯರ್ ಕೋನ್ = ಪೊಯ್ ಹೈ, ಪೂದತ್ತಾಳ್ವಾರ್, ಪೇಯಾಳ್ವಾರ್, ತಿರುಮಳಿಶೈಯಾಳ್ವಾರ್ರುಗಳೂ, ಮಗಿಳ್-ಮಾರನ್ = ಕೀರ್ತಿಮೂರ್ತಿಯಾದ ನಮ್ಮಾಳ್ವಾರ್ರೂ, ಮಧುರಕವಿಗಳೂ, ಪೊಯ್-ಇಲ್-ಪುಗಳ್ = ಅಚ್ಚಳಿಯದಯಶಸ್ಸುಳ್ಳ, ಕೋಳಿಯರ್-ಕೋನ್ = ಕುಲಶೇಖರರೂ, ವಿಟ್ಟುಶಿತ್ತನ್ = ಪೆರಿಯಾಳ್ವಾರ್ರೂ, ಪಾಣಾಳ್ವಾರ್= ತಿರುಪ್ಪಾಣಾಳ್ವಾರ್ರೂ, ಐರ್ಯ = ಸ್ವಾಮಿಯೂ, ಅರುಳ್ = ಕರುಣಾಶಾಲಿಯೂ ಆದ, ಕಲಿಯನ್ = ತಿರುಮಂಗೈಯಾಳ್ವಾರ್ರೂ, ಎತಿರಾಶರ್-ತಂ-ಓಡು = ಯತಿರಾಜರಾದ ಶ್ರೀ ರಾಮಾನುಜಾಚಾರ್ಯರಿಗೆ ಸೇರಿದ ತಿರುವಂಗತ್ತಮುದನಾರರೊಡನೆ, ಆರ್-ಇರುವರ್-ಓರ್-ಒರುವರ್ = ಹನ್ನೆರಡುಮಂದಿಯೊಂದಿಗೆ ಅಸಾಧಾರಣವಾಗಿ ಸೇರಿದವರೊಬ್ಬರು ಒಟ್ಟು ಈ 13 ಮಹಿಮರೂ, ಅವರ್-ತಾಂ-ಶೆಯ್ದ = ಅವರುಗಳು ಮಾಡಿದ, ತುಯ್ಯ-ತಮಿಳ್ = ಪರಿಶುದ್ಧವಾದ ತಿಳಿ ತಮಿಳಿನ, ಇರು-ಪತ್ತು-ನಾನ್ಗಿನ್-ಪಾಟ್ಟ್-ತೊಹೈ = 24 ದಿವ್ಯ ಪ್ರಬಂಧಗಳಲ್ಲಿರುವ ಪಾಶುರಗಳು ಒಟ್ಟು ಸಂಖ್ಯೆಯಾದ, ನಾಲಾಯಿರಮುಂ = ನಾಲ್ಕು ಸಾವಿರವೂ, ಅಡಿಯೋಂಗಳ್-ವಾಳ್ವು = ನಮ್ಮಂತಹ ಭಕ್ತರ ಉಜ್ಜೀವನ ಸಾಧನವಾದುವು.

ತಾತ್ಪರ್ಯ :- 12 ಜನ ಆಳ್ವಾರ್ರುಗಳು ಮತ್ತು ಶ್ರೀ ರಾಮಾನುಜಾಚಾರ್ಯರ ಮಹಿಮೆಯನ್ನುವರ್ಣಿಸಿ ಆಚಾರ್ಯನಿಷ್ಠೆಯನ್ನು ಪ್ರಕಾಶಪಡಿಸಿದ ತಿರುವರಂಗತ್ತಮುದನಾರ್ ಒಬ್ಬರು ಒಟ್ಟು ಈ 13 ಮಂದಿಯೂ ಮಾಡಿದ ಪ್ರಬಂಧಗಳು 24. ಇವುಗಳ ಒಟ್ಟು ಪಾಶುರಗಳು 4000. ಇವೆಲ್ಲವೂ ಭಕ್ತಶಿರೋಮಣಿಗಳಿಗೆ ಉಜ್ಜೀವನಸಾಧಕಗಳಾಗಿವೆ. ಇದೇ ಈ ''ನಾಲಾಯಿರ ದಿವ್ಯಪ್ರಬಂಧ''ದ ಮೇಲ್ಮೆ. ಭಗವದ್ಗುಣರಸಾನುಭವಿಗಳಿಗೆ ಇವು ಉಪಾದೇಯತಮವು.

**कासारो भूतयोगी महदथ शठजित् कीर्तिमान् भक्तिसारः ।**
**सत्यैकालम्बकीर्तिः मधुरकवि रसौ वंशमौलिर्मुनि श्च ।।**
**श्रीगोदा विष्णुचित्तः प्रणतपदरजाः पाणनाथो दयालुः ।**
**स्वामी श्रीकल्यरातिः यतिपतिपदसेवी च मान्या जगत्याम् ।। १**

षडिभ श्च द्विगुणीकृता मुनिवरा एक श्च तेषां च ये ।
ग्रन्था विंशतियुक्चतुर्मितियुता स्तत्रत्यगाथामितिः ।।
साहस्त्री च चतुर्गुणा समुदिता सर्वोचितानन्ददा ।
सैवोज्जीवनहेतु रत्र भगवत्संसेविनां न स्सदा ।। ೧೭

ಮೂಲ : ಅನ್ದಮಿಲಾವಾರಣಂಗಳ್ ನಾಲಾಹಿನಿನ್ರ,
ಅದನ್‌ಕರುತ್ತೈಯಾಳ್ವಾರ್ ಹಳಾಯ್‌ನ್ದೆಡುತ್ತು,
ಶೆನ್ದಮಿಳಾಲರುಳ್‌ಶೆಯ್ದವಹೈತೊಹೈಯುಂ
ಶಿನ್ದಾಮಲುಲಹಂಗಳ್ ವಾಳವೆನ್ರು,
ಶನ್ದಮಿಹುತಮಿಳ್‌ಮರ್ರೈಯೋನ್ ತೂಪ್ಪುಲ್‌ತೋನ್ರುಂ
ವೇದಾಂತಗುರುಮೊಳಿಂದ ಪ್ರಬಂದಶಾರಂ,
ಶಿನ್ದೈಯಿನಾಲನುದಿನಮುಂಶಿನ್ದಿಪ್ಪೋರ್ಕ್ಕು
ಶೇಮಮದಾಂ ತಿರುಮಾಲ್ ತನ್ ಕರುಣೈಯಾಲೇ ॥ 18

॥ದೇಶಿಕನ್ ತಿರವಡಿಹಳೇ ಶರಣಂ ॥

ಅರ್ಥ :- ನಾಲ್-ಆಹಿ-ನಿನ್ರ = ಋಕ್, ಯಜುಸ್, ಸಾಮ, ಅಥರ್ವಣವೆಂದು ನಾಲ್ಕುಬಗೆಯಾಗಿ, ಅಂತಂ-ಇಲಾ = ಕೊನೆಯಿಲ್ಲದ, (ಅಪರಿಮಿತವಾದ) ಆರಣಂ-ಆದನ್ = ವೇದಗಳ, ಕರುತ್ತೈ = ಸಾರವಾದರ್ಥವನ್ನೂ, ಆಳ್ವಾರ್‌ಹಳ್ = ಹಿಂದೆ ಹೇಳಿದ 13 ಮಂದಿ ಆಳ್ವಾರ್ರುಗಳೂ, ಆಯ್‌ನ್ದು-ಎಡುತ್ತು = ಆರಿಸಿ ಕ್ರೋಡೀಕರಿಸಿ, ಶೆಂ-ತಮಿಳಾಲ್-ಅರುಳ್-ಶೆಯ್ದ = ಸೊಗಯಿಸುವ ತಮಿಳಿನಲ್ಲಿಮಾಡಿದ, ವಹೈ-ತೊಹೈಯುಂ = ಪ್ರಬಂಧಗಳ ವಿವಿಧರೀತಿಗಳನ್ನೂ ಮತ್ತು ಅವುಗಳಲ್ಲಿರುವ ಪಾಶುರಗಳ ಒಟ್ಟು ಸಂಖ್ಯೆಯನ್ನೂ, ಶಿಂದಾಮಲ್ = ಯಾವರೀತಿಯಲ್ಲೂ ಯಾವುದೊಂದೂ ಬಿಟ್ಟುಹೋಗದಂತೆ, ಉಲಹಂಗಳ್-ವಾಳ-ಎನ್ರು = ಜನರೆಲ್ಲ ಉಜ್ಜೀವಿಸಬೇಕೆಂದೆಣಿಸಿ, ಶೆಂದಂ-ಮಿಹು = ಅತಿ ಸೊಗಸಾದ, ತಮಿಳ್-ಮರ್ರೈಯೋನ್ = ತಮಿಳು ವೇದವಾದ ದಿವ್ಯ ಪ್ರಬಂಧಗಳನ್ನು ಕಲಿತು ಅನುಭವಿಸಿರುವವರೂ, ತೂಪ್ಪುಲ್-ತೋನ್ರುಂ = ತೂಪ್ಪುಲಗ್ರಹಾರದಲ್ಲಿ ಅವತರಿಸಿದವರೂ ಆದ, ವೇದಾಂತ ಗುರು = ನಿಗಮಾಂತದೇಶಿಕರು, ಮೊಳಿಂದ = ಹೇಳಿರುವ, ಪ್ರಬಂಧಶಾರಂ = ಈ ಪ್ರಬಂಧ ಸಾರವೆಂಬ ಗ್ರಂಥವನ್ನು, ಶಿನ್ದೈಯಿನಾಲ್ = ತಮ್ಮ ಮನಸ್ಸಿನಿಂದ, ಅನುದಿನಮುಂ =

ನಿತ್ಯವೂ, ಶಿಂದಿಪ್ಪೋರ್ಕ್ಕು = ಚಿಂತಿಸುವವರಿಗೆ (ಅನುಸಂಧಾನಮಾಡುವವರಿಗೆ) ತಿರುಮಾಲ್-ತನ್ = ಶ್ರೀಮನ್ನಾರಾಯಣನ, ಕರುಣೈಯಾಲ್ = ದಯೆಯಿಂದ, ಶೇಮಂ-ಅದು-ಆಂ = ಕ್ಷೇಮಕರವಾಗುವುದು.

ತಾತ್ಪರ್ಯ :- ಪರಮಕರುಣಾಳುಗಳಾದ ನಮ್ಮ ಆಳ್ವಾರ್ರುಗಳು ನಾಲ್ಕು ವೇದಗಳ ಸಾರಾಂಶವನ್ನು ಆಯ್ದುಕ್ರೋಢೀಕರಿಸಿ, ನಾಲ್ಕು ಸಾವಿರ ಪಾಶುರಗಳುಳ್ಳ 24 ದಿವ್ಯ ಪ್ರಬಂಧಗಳನ್ನು ರಚಿಸಿದರು. ಈ ಪ್ರಬಂಧಗಳ ಎಣಿಕೆ, ಇವುಗಳ ವಿಷಯ ಮತ್ತು ಇವುಗಳ ಪಾಶುರಗಳ ಸಂಖ್ಯೆ, ಇವುಗಳನ್ನು ಯಾರೂ ವಿಪರೀತವಾಗಿ ತಿಳಿದುಕೊಳ್ಳದಿರಲೆಂದು, ಸರಿಯಾದ ಲೆಕ್ಕವಿಟ್ಟು, ನಮ್ಮ ಶ್ರೀ ನಿಗಮಾಂತ ದೇಶಿಕರು ಈ "ಪ್ರಬಂಧಸಾರ"ವನ್ನು ಪ್ರಕಾಶಪಡಿಸಿರುವರು. ಇದನ್ನು ಮನನಮಾಡುವವರು ಆ ಪರಮಾತ್ಮನ ಕೃಪೆಯಿಂದ ಸಕಲವಿಧ ಕ್ಷೇಮವನ್ನು ಪಡೆಯುವರು. ಅಭಿವಾದನೆ ಮಾಡುವಾಗ ಅವರವರ ಗೋತ್ರಪ್ರವರಗಳನ್ನು ಹೇಳುವಂತೆ ಶ್ರೀಮದಾಚಾರ್ಯರು ತಮ್ಮನ್ನು "ತಮಿಳ್‌ಮರೈಯೋನ್" ಎಂದು ಬಲು ಹಿರಿಹೆಮ್ಮೆಗಳಿಂದ ಕೊಂಡಾಡಿಕೊಂಡಿರುವರು.

अन्तातीतचतुर्विधागमनिगूढार्थान् मुनीन्द्रा यथा ।
सङ्गृह्य न्यगदंश्च सुद्रविडवाग्रीतीश्च संख्या श्रुताः ।।
सर्वोज्जीवकृते हि सुद्रविडवाक्प्राज्ञो यथावस्थितं ।
तूप्पुल्वेदशिरोगुरु स्समलिखत् सारं प्रबन्धादिकम् ।। १

स्वान्ते चिन्तयतां नित्यं श्रीमन्नारायणस्य हि ।
करुणातिशयेनेह सर्वं क्षेमंकरं भवेत् ।। १८

।। श्रीमते निगमान्तमहादेशिकाय नमः ।।

प्रबन्धसारं श्रुतिमौलिसूरेः ।
व्याख्याच्च कर्णाटकभाषया तथा ।।
श्लोकीचकार स्वगुरोः प्रसादात् ।
गोपालसूरि स्सुमनोरसाय ।।

||ಶ್ರೀಃ ||

||ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ||

# ಆಹಾರನಿಯಮಂ

## (ತನಿಯನ್)

**ಶೀರಾರುಂ ವೇದಾಂತ ದೇಶಿಕರ್ ಕೋಳ್ - ಶೆಳುಮರ್ಯೆಯಿನುಳ್ ಪೊರುಳ್ಕೆಚ್ಚಿನ್ದೈಶೈಯ್ದೇ, ಆರಾಯ್‌ನ್ದುವಾಳ್‌ವುರ ವಿಬ್ಬುವಿಯೋರ್ ತಂಗಳ್ಕು ಅನ್ಬುಡನೇ ಆಹಾರನಿಯತಿ ಶೊನ್ನಾನ್, ಏರಾರುಂಯತಿರಾಶರ್ ಅರುಳಿನಾಲೇ ಎದಿರ್‌ನ್ದವರ್‌ಹಳ್ ಶಿಂಗಮೆನ ವಿಂಗುವಂದೋಳ್, ಶೀರಾರುಂ ವೇಂಗಡವನ್ ತೂಪ್ಪುಲ್ ಪಿಳ್ಳೈ-ಶೆಳುಂತಿರುತ್ತಾಳಿಣೈ ಮಲರೆನ್ ಶೆನ್ನಿಯದೇ ||**

ಶ್ರೀ ಭಾಷ್ಯಕಾರರು ಶ್ರೀ ರಾಮಾನುಜರ ದಯೆಗೆ ಪ್ರಧಾನ ಪಾತ್ರರಾಗಿ, ಪ್ರತಿವಾದಿ ಗಜಗಳಿಗೆ ಸಿಂಹದಂತಿದ್ದು ಜಯಿಸಿ ಕವಿತಾರ್ಕಿಕ ಸಿಂಹರೆಂದು ವಿಖ್ಯಾತರಾದ ಶ್ರೀ ವೇದಾಂತ ದೇಶಿಕರು, ವೇದಗಳಲ್ಲಿನ ಸೂಕ್ಷ್ಮಾರ್ಥಗಳನ್ನು ಆರಿಸಿ, ''ಈ ಜಗದ ಜನರು ಶಾಸ್ತ್ರನಿಷಿದ್ಧವಾದ ತಾಮಸ ಆಹಾರ ವಸ್ತುಗಳನ್ನು ಸೇವಿಸಿ, ಹೆಚ್ಚಿಕೊಂಡ ಅಜ್ಞಾನದಿಂದ ಮಾಡಬೇಕಾದುದನ್ನೂ ಬಿಟ್ಟೂ, ಮಾಡಬಾರದುದನ್ನೂ ಮಾಡುತ್ತಲೂ, ದೋಷಭಾಗಿಗಳಾಗದೇ, ಭಗವದ್ಭಕ್ತಿವರ್ಧಕವಾದ ಸಾತ್ವಿಕವಾದ ಆಹಾರವನ್ನು ಸೇವಿಸಿ ಉಜ್ಜೀವಿಸಲಿ'' ಎಂದು ತಿಳಿಯಾದ ತಮಿಳಿನ ಕವಿತೆಯಲ್ಲಿ ''ಆಹಾರನಿಯಮಂ'' ಎಂಬ ದಿವ್ಯಸೂಕ್ತಿಯನ್ನು ಅನುಗ್ರಹಿಸಿರುವರು. ಇದರಂತೆ ಆಚರಿಸುವ ಶ್ರೀ ದೇಶಿಕಭಕ್ತರ ಪಾದಾರವಿಂದಗಳು ಈ ದಾಸನ ಶಿರೋಭೂಷಣವಾಗಲಿ.

ನಾವು ಸೇವಿಸುವ ಆಹಾರವಸ್ತು ಎಲ್ಲ ರೀತಿಯಿಂದಲೂ ಶುದ್ಧವಾಗಿರಬೇಕು. ಹಾಗಿಲ್ಲದಿದ್ದರೆ ಮನುಸ್ಸು ತಿಳಿಗೊಳ್ಳುವುದಿಲ್ಲ. ತಿಳಿಮನವಿಲ್ಲದವರು ಒಳ್ಳೆಯ ಕಾರ್ಯವನ್ನು ಮಾಡಿ ಸಫಲರಾಗುವುದಿಲ್ಲ. ಇದು ಬರಿಯ ಮಾತಲ್ಲ. ಗೀತೆಯಲ್ಲಿ ವಿಶದವಾಗಿ ಹೇಳಿದೆ. ''ಆಹಾರಶುದ್ಧೌ ಸತ್ವಶುದ್ಧಿಃ ಸತ್ವಶುದ್ಧೌ ಧ್ರುವಾಸ್ಮೃತಿಃ'' ಎಂದು ಉಪನಿಷತ್ತೂ ಉಪದೇಶವಿತ್ತಿದೆ. ಈ ಪ್ರಬಂಧದಲ್ಲಿ 10 ಪಾಶುರಗಳಿಂದ ಸೇವಿಸಬಾರದಂತಹವನ್ನೂ 5 ಪಾಶುರಗಳಿಂದ ಸೇವಿಸಬಹುದಾದುವನ್ನೂ, ಮೇಲೆ 3 ಪಾಶುರಗಳಿಂದ ಹಾಲು, ನೀರು, ವೀಳೆಯದೆಲೆ ಮೊದಲಾದವುಗಳಲ್ಲಿನ ದೋಷಗಳನ್ನು ಹೇಳಿ ಅಂತಹವನ್ನು

ಸೇವಿಸಬಾರದೆಂದು ಹೇಳಿ, ಹೆಚ್ಚು ಇಲ್ಲಿ ಹೇಳಲಾಗದುದರಿಂದ ಅವನ್ನು ತಿಳಿದ ಹಿರಿಯರಿಂದರಿಯಬೇಕೆಂದು ತಿಳಿಸಿ ಮುಗಿಸಿರುವರು.

ಶ್ರೀಮದಾಚಾರ್ಯರ ಉಪದೇಶಸಾರಾಮೃತವು ಕನ್ನಡನುಡಿನಾಡಿಗರಿಗೂ ಲಭಿಸಿ, ಎಲ್ಲರೂ ಸಫಲರಾಗಲೆಂಬ ಹಿರಿದಾಸೆಯು ಬರೆಸಿತು. ಸರಿಯಾಗಿ ಉಪಯೋಗಿಸಿಕೊಂಡು ಸಹಕರಿಸುವರೆಂದು ವಿಶ್ವಾಸವೂ ಇದೆ.

*ಇತಿ, ಸದಾಚಾರ್ಯದಯಾವಲಂಬೀ*

ಶುಭಕೃತ್ -ಆಶ್ವಯುಜ
1962

**ವಿದ್ವಾನ್ ಹ- ಗೋಪಾಲಾಚಾರ್ಯಃ**
ನಂ. 14, 4ನೇ ಕ್ರಾಸ್, ಕಾಳಿದಾಸ ರಸ್ತೆ,
ವಾಣಿವಿಲಾಸ ಮೊಹಲ್ಲ, ಮೈಸೂರು

---

॥ಶ್ರೀಃ॥

॥ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ॥

# ಆಹಾರ ನಿಯಮಂ

ಮೂಲ : ಆಹಾರತ್ತಿರುವಹ್ಯೆಯಾಂ ನನ್ರುಂತೀದುಂ,
ಅರುಮರೈಕೊಂಡೆತಿರಾಶರಿವೈಮೊಳಿಂದಾರ್,
ಆಹಾದವಳಿವಿಲಕ್ಕಿಯಾಕ್ಕುಂಕಣ್ಣನ್
ಅನ್ನೈತ್ತುಲಹಂವಾಳವಿದುಶಾತ್ತಿವೈತ್ತಾನ್,
ಪೋಹಾದು ಪೋಕ್ಕುವಿಕ್ಕುಮುನಿವರ್ಶೊನ್ನ
ಪೊಯ್ಯಾದಮೊಳಿಹಳೈಯುಂ ಪೊರುಂದಕ್ಕೇರ್ಣ್ಗ್,
ಆಹಾದೆನ್ರವೈತವಿರ್ನ್ದಾಮದುವೇಕೊಂಡ.
ಅಶಗರನುಮಾಹಂಕಾತ್ತರುಳ್ಪೆತ್ತಾನೇ ॥ 1

ಸಮಸ್ತರೂ ಸನ್ಮಾರ್ಗಗಾಮಿಗಳಾಗಿ ಪರಮಪುರುಷಾರ್ಥವನ್ನು ಪಡೆಯುವಂತಾಗಬೇಕೆಂದು ಭಗವಂತನ ಸಂಕಲ್ಪ. ಅಂತಹ ಸದ್ವರ್ತನೆಗೆ ಮುಖ್ಯವಾಗಿ ಪರಿಪೋಷಕವಾದುದು ಒಳ್ಳೆಯ ಆಹಾರವೇ. ತಾಮಸಾಹಾರವನ್ನು ಬಿಟ್ಟು, ಭಗವದ್ಭಕ್ತಿವರ್ಧಕವಾದ ಸಾತ್ವಿಕಾಹಾರವನ್ನೇ ಸೇವಿಸಿ, ಬಾಳನ್ನು ಹಸನಾಗಿಸಿ ಕೊಳ್ಳುವುದಕ್ಕಾಗಿಯೇ ಭಗವದ್ಗೀತೆಯಲ್ಲಿ ಪ್ರಾಸಂಗಿಕವಾಗಿ ಶ್ರೀ ಕೃಷ್ಣಪರಮಾತ್ಮನು ಆಹಾರದ ಕಟ್ಟಳೆಯನ್ನು ಉಪದೇಶಿಸಿ ಕರುಣಿಸಿರುವನು. ನಮ್ಮ ಶ್ರೀ ಭಾಷ್ಯಕಾರರೂ ಆ ದಿವ್ಯವಾದ ಉಪದೇಶವಾಗಮೃತವನ್ನಾಸ್ವಾಸಿದಿ, ವೇದಚನಗಳನ್ನೂ ವಿಮರ್ಶಿಸಿ, ''ಆಹಾರವು'' ಒಳ್ಳೆಯದು, ಕೆಟ್ಟದ್ದು, ಎಂದು ಎರಡು ವಿಧವಾಗಿರುವುದನ್ನು ಗೀತಾಭಾಷ್ಯದಲ್ಲಿ ವಿಶದಪಡಿಸಿರುವರು. ವೇದಗಳಿಗೆ ಪ್ರಮಾಣತಮವಾದ ಸ್ಥಾನ ಇದೆ. ಅದನ್ನು ಬಿಟ್ಟರೆ ಸ್ಮೃತಿಗಳೇ ಮೇಲಾದುವು. ಅಂತಹ ಸ್ಮೃತಿಗಳನ್ನು ಬರೆದು ಕರುಣಿಸದವರು ''ಮನು'' ಮೊದಲಾದ ದಯಾನಿಧಿಗಳು. ಅವರು ಆಹಾರದ ಮಹಿಮೆಯನ್ನು ತಿಳಿಸುವಾಗ ''ಅಜಗರನ' ವೃತ್ತಾಂತವನ್ನು ಉದಾಹರಿಸುವರು. ಆತ ತಾನಾಗಿ ದೊರೆತ ಸಾತ್ವಿಕವಾದ ಆಹಾರವನ್ನೇ ಸೇವಿಸುತ್ತಿದ್ದನು. ಅದರಿಂದ ಭಗವದ್ಭಕ್ತಿ ಹೆಚ್ಚಾಗಿ ಕೊನೆಗೆ ಮುಕ್ತಿಯನ್ನೂ ಪಡೆದನು. ಸತ್ವಗುಣವುಳ್ಳ ಆಹಾರ ಸೇವನೆಯಿಂದ ಮನವು ತಿಳಿಗೊಳ್ಳುವುದು. ತಿಳಿಗೊಂಡ ಮನವು ಅಮಲವಾದ ಭಕ್ತಿಯುತವಾಗಿ ಮುಕ್ತಿಪಡೆಯಲು ಶಕ್ತಿಯುಳ್ಳದ್ದಾಗುವುದು. ಶಾಸ್ತ್ರನಿಷಿದ್ಧ ಆಹಾರವು ದುರಾಹಾರವೆನಿಸುವುದು. ಅದು ತಮೋಗುಣವನ್ನು ಹೆಚ್ಚಿಸುವುದು.

ಅದರ ಫಲ ಅಜ್ಞಾನ ಹೆಚ್ಚುವುದು. ಆದ್ದರಿಂದ ಒಳ್ಳೆಯ ಶಾಸ್ತ್ರವಿಹಿತವಾದುದನ್ನೇ ಉಣಬೇಕು.

''ಅಜಗರ''ವೆಂದರೆ ಹೆಬ್ಬಾವು. ಅದು ಬಿದ್ದಲ್ಲೇ ಇದ್ದು ತಾನಾಗಿ ದೊರಕಿದಷ್ಟನ್ನೇ ತಿಂದು ಬದುಕುವ ಸ್ವಭಾವವುಳ್ಳದ್ದು. ಈ ಅಂಶದಲ್ಲಿ ಮೇಲೆ ಉದಾಹೃತನ ಹೆಸರೂ ಅನ್ವರ್ಥವಾಗಿರುವಂತಿದೆ. ಆದರೆ ಅವನು ಶಾಸ್ತ್ರವಿಧಿಸಿದ ಸತ್ವಗುಣಮಯವಾದ ಆಹಾರವನ್ನೇ ತೆಗೆದುಕೊಳ್ಳುತ್ತಿದ್ದನು. ಆದುದರಿಂದ ಆಹಾರ ನಿಯಮವನ್ನರಿತು, ಗುಣದೋಷಗಳನ್ನು ವಿಮರ್ಶಿಸಿ, ಹಿರಿಯರು ತೋರಿದ ಸದಾಹಾರವನ್ನು ಸೇವಿಸಿ, ಸದ್ಗುಣಪೂರ್ಣರಾಗಿ, ಪರಮಫಲವಾದ ಮುಕ್ತಿಪಡೆಯುವರಾಗಬೇಕು.

**आहारो द्विप्रकार स्स्दसदिति गिरं वैदिकीं सन्ददर्शुः ।**
**भाष्ये रामानुजार्या अपगमितदुरध्वा च सन्मार्गनेता ।।**
**कृष्णो गोप्तोदधोषीत् अकथि मुनिवरै र्नाशितानाश्यपापैः ।**
**सत्योक्ति स्ताः शृणुध्वं ह्यभजदजगरो मुक्ति मुक्ताद्यभुक्त्या ।।** १

ಮೂಲ : ವಾಯಿಲಲ್ಲಾ ವಾಯಿಲಿನಾಲ್ ವಂದಶೋರುಂ-
ವರಹುಮುದಲಾಹಾದೆನ್ರೈತ್ತಶೋರುಂ
ವಾಯಿನಿನ್ರುಂ ವಿಳುಮವ್ವೈತಾಂಪಟ್ಟಶೋರುಂ-
ವಾಯ್ಕ್ಕೊಂಡಕವಳತ್ತಿನ್ ಮಿಹುನ್ದಶೋರುಂ,
ತೀಯವರ್ ಕಣ್ಬಡುಂಶೋರುಂ ತೀದಲ್ಶೋರುಂ-
ಶೀರೈಯುರೈತುಮ್ಮಲಿವ್ವೈಪಟ್ಟಶೋರುಂ,
ನಾಯ್ಮುದಲಾನವ್ವೈಪಾರ್ಕ್ಕುಂ ತೀಣ್ಡುಂಶೋರುಂ-
ನಾಳ್ತೂಯ್ದಲ್ಲಾಚ್ಚೋರುಂನಣ್ಣಾಚ್ಚೋರೇ ॥ 2

ಭಾ.ಅ. : ಮನೆಯ ಮುಂಬಾಗಿಲಿನಿಂದ ತರದೆ, ಹಿತ್ತಿಲಬಾಗಿಲು ಮುಂತಾದ ಕಡೆಯಿಂದ ಬಂದ ಅನ್ನವೂ, ಬರಗು (ಹಾರಕ) ಮೊದಲಾದ ಧಾನ್ಯಗಳಿಂದ ಮಾಡಿದನ್ನವೂ ಬಾಯಿಂದ ಬಿದ್ದ ವಸ್ತುವಿನೊಡನೆ ಸೇರಿದನ್ನವೂ, ಬಾಯಿಗೆ ಹಾಕಿಕೊಂಡ ತುತ್ತಿನಲ್ಲಿ ಉಳಿಕೆಯಾದುದನ್ನೂ, ದೋಷದೃಷ್ಟಿಯವರು ನೋಡಿದನ್ನವನ್ನೂ, ಸೀದು ಹೋಗಿರುವುದನ್ನೂ, ಬಟ್ಟೆ, ಎಂಜಲು, ಸೀನು ತಗಲಿದನ್ನವನ್ನೂ, ನಾಯಿ ಮೊದಲಾದವು ನೋಡಿದ, ತಾಗಿದನ್ನವನ್ನೂ ಮತ್ತು ಏಕಾದಶೀ ಮೊದಲಾದ ವ್ರತದಿನಗಳಲ್ಲಿಯೂ ಅನ್ನವನ್ನು ಸೇವಿಸಬಾರದು, ಇಂತಹವೆಲ್ಲವೂ ಒಳ್ಳೆಯ ಫಲಗಳನ್ನು ಕೊಡದೆ ಕೆಟ್ಟಪರಿಣಾಮವನ್ನೇ

ಉಂಟುಮಾಡುವುದರಿಂದ ಶಾಸ್ತ್ರನಿಷಿದ್ಧವಾದುವು. ಶಾಸ್ತ್ರಗಳು ಹೇಳುವುದೆಲ್ಲಾ ನಮ್ಮ ಹಿತಕ್ಕಾಗಿಯೇ ಎಂಬುದನ್ನು ಮರೆಯಬಾರದು.

अमार्गायातान्नं वरकमुखधान्यान्न मघदं ।
मुखोद्गीर्णाक्तान्नं कृतकबळशेषं वसनगम् ।।
द्विषद्दृष्टं लालाक्षुतयुत मवघ्रात मशनं ।
न च प्लुष्टं श्वादीक्षित मसमयान्नं बुधवरः ।। २

ಮೂಲ : ಮನಿಶರ್‌ಪಶುಮುದಲಾನಾರ್ ಮೋನ್ದಶೋರುಂ
ಮನಿಶರ್‌ತಮಿಲಾಹಾದಾರ್‌ತೀಣ್ಡುಂಶೋರುಂ,
ಇನಿಮೈಯುಡನಾದರ‍್ಮಿಲ್ಲಾದಾರ್ ಶೋರುಂ
ಈಪ್ಪುಳುನೂಲ್‌ಮಯಿರುಗಿರ್‌ಹಳಿರುಕ್ಕುಂಶೋರುಂ,
ಮುನಿವರೆನುಂತುರವರತ್ತೋರೀನ್ದಶೋರುಂ
ಮುನಿವರ್‌ತಂಗಳ್ ಪಾತ್ತಿರತ್ತಿಲ್ ಪಟ್ಟಶೋರುಂ,
ಮನಿಶರೆಲಿಕುಕ್ಕುಟಂಗಳ್ ಕಾಕಂ ಪೂನೈ
ವಾಯ್ಕೊಂಡಕರಿಶೋರುಂಮರುವಾಚ್ಚೋರೇ ॥ 3

ಭಾ.ಅ. : ಯಾವ ಜನರೇ ಆಗಲೀ ಯಾವ ಪ್ರಾಣಿಯೇ ಆಗಲಿ ಮೂಸಿ ನೋಡಿದ ಆಹಾರವಸ್ತುವನ್ನೂ, ಮುಟ್ಟಬಾರದವರಾದ ಜನರಾಗಲೀ, ರೋಗಿಗಳಾಗಲೀ, ಮುಟ್ಟಿದನ್ನವನ್ನೂ, ಆದರದಿಂದಲೂ ಪ್ರೀತಿಯ ಮಾತುಗಳಿಂದಲೂ ಬಡಿಸದ ಆಹಾರವಸ್ತುವನ್ನೂ ನೊಣ, ಹುಳು, ನೂಲು, ಕೂದಲು, ಉಗುರು, ಇವುಗಳು ಸೇರಿರುವ ಆಹಾರವನ್ನೂ, ಸನ್ಯಾಸಿಗಳು ತಮ್ಮ ಕೈಯ್ಯಿಂದ ಕೊಟ್ಟನ್ನವನ್ನೂ, ಸನ್ಯಾಸಿಗಳ ಪಾತ್ರೆಗಳಲ್ಲಿರುವ ಆಹಾರವನ್ನೂ, ಜನರು, ಇಲಿ, ಕಾಗೆ, ಕೋಳಿ, ಬೆಕ್ಕು, ಇವು ಯಾವುವೂ ಬಾಯಿ ಹಾಕಿರಕೂಡದು, ಹಾಗೇನಾದರೂ ಬಾಯಿ ಹಾಕಿದ್ದರೆ ಅಂತಹುದನ್ನೂ ಸೇವಿಸದೆ ಬಿಟ್ಟುಬಿಡಬೇಕು. ಇವೆಲ್ಲಾ ನಿಷಿದ್ಧವು.

आघ्रातं मर्त्यधेनुप्रभृतिभि रथ यत् स्पृष्ट मन्नं त्वनर्हैः ।
निस्स्नेहानादरान्नं क्रिमिनखसहितं तन्तुकेशादियुक्तम् ।।
दत्तं यत् त्यागनिष्ठै र्यतिभि रुपहितं भैक्षपात्रेऽन्न मेवं ।
मर्त्याखुध्वाङ्क्षपादायुधवृषगिलभुक्शिष्ट मन्नादि वर्ज्यम् ।। ३

ಮೂಲ : ಅತ್ತಿಹಳ್‌ಪೇರಾಕ್‌ಕ್ಕಿರಲಿ ವೇಣ್‌ಕತ್ತಾರಿ
ಆಲರಶು ನರುವಿಲಿ ಪುಂಗಾಯಿಲಾರ್ರೈ,
ಬುದ್ಧಿಕೊಲ್ಲಿಕುರಿಂಜಿತಾನ್ರಿಕುಶುಂಬೈವೇಳ್ಳೈ
ಪುನ್ಮುರುಂಗ್ಗೈಮುರುಂಗ್ಗೈಶುಕಮುಳರಿಯುಳ್ಳಿ,
ಶಿತ್ತವರ್ರೈ ಕೊಮ್ಮಡಿಹಳ್‌ಪಣ್ಣೈತ್ತೊಯ್ಯಿಲ್
ಶೀಂಗಾಡನ್ ತೇರಲೂವೈಪನ್ನೈಮಯೂರನ್,
ಶುದ್ದಿಯಿಲ್ಲಾನಿಲತ್ತಿನವೈಕಡಂಬುಕಾಳಾನ್
ಶುರ್ರೈಪೀರ್ಕ್ಕುಂಶಣಂತಿನ್ನಾರ್ ಶುರಿದಿಯೋರೇ ॥ 4

ಅತ್ತಿ ಹಣ್ಣಿನ ಜಾತಿ, ಸರ್ರಾಕ್ಷೀ (ಕೃಷ್ಣ ತುಳಸೀ) ಆಲದ ಬಿಳಿಲು, ಬಿಳಿಬದನೆ, ಆಲ, ಅರಳಿ, ಚಳ್ಳಿಕಾಯಿ, ಹೊಂಗೆ, ನೆಲಬೇವು, (ಆರ್ರೈ = ) ಬುದ್ಧಿಯನ್ನು ನಾಶಪಡಿಸುವ ವಸ್ತು, ಕೆಂಪು-ಕಪ್ಪು ಮೊದಲಾದ ಗೋರಂಟಿ (ಕುಸುಬೆ ಅಥವಾ ನಾಯಿ ಕೊಡೆ) ಹವಳದ ಬಳ್ಳಿ, ಕೆಂಪು ನುಗ್ಗೆ, ನುಗ್ಗೆ, ಮಾಚೀ ಪತ್ರೆ, ತಾವರೆ ಗೆಡ್ಡೆ, ಹತ್ತು ವಿಧ ಈರುಳ್ಳಿ ಜಾತಿ, ಚಿಟ್ಟವರೆ (ತುಮ್ಮಟ್ಟಿ) ಪಣ್ಣೈ (ಪಣ್ಣೈಕ್ಕೀರ್ರೈ) ತೋಯ್ಯಿರ್‌ಕೀರ್ರೈ, (ಶೀಂಗಾರ್ಡ, ಕೊಟ್ಟಿಕ್ಕಿಳಂಗು) (ತೇತಾಂಕೊಟ್ಟೈ)(ಊವೈಕ್ಕಾಯ್), ಪನ್ನೈ, ನವಿಲುಕೋಸುಗಡ್ಡೆ (ಮಯೂರ್ರ -ಮಯಿಲಡಿ), ಅಶುದ್ಧ ಪ್ರದೇಶದಲ್ಲಿ ಬೆಳೆದವೂ, ನಾಯಿಕೊಡೆ, ಕಡಂಬಂ-(ಈಚಲು), ಸೋರೆಕಾಯಿ, ಕಳಂಜಂ (ಬೆಳ್ಳುಳ್ಳಿ), ಹೀರೇಕಾಯಿ, ಶಣಕ್ಕೀರ್ರೈ (ತೃಣಶಾಕ), ಇವೇ ಮೊದಲಾದುವನ್ನು ಶ್ರುತಿಸ್ಮೃತಿ ಪರಿಚಯವುಳ್ಳವರಾಗಿ ಅನುಷ್ಠಾನನಿಷ್ಠರಾದ ಹಿರಿಯರು ಉಪಯೋಗಿಸುವುದಿಲ್ಲ.

नादन्ति श्रुतिवेदिनश्च सुरसां प्लक्षं वटोदुम्बरे
वार्ताकं धवलं करञ्जमथ च श्लेष्मातकं भूतिकम् ।
अश्वत्थं मतिनाशकं कुरवकं कौसुम्बकं नालिकां
शिग्रुं तन्मधुशिग्रु गृञ्जन शुकालर्कानि तद्वद्विसम् ॥ १

कोम्मट्टिप्रभृती न्यवेद्यवचनान्यूह्यानि वर्ज्यानि च
तद्वद्यान्यशुचिस्थलेषु जनिता न्याहार वस्तूनि वा ।
नीपालाबुकळंजभेद मखिलं कोशातकं वैदिकाः
एवं ते तृणशाकमेव च तथा श्रुत्यादिभिर्निन्दितम् ॥ ४

ಮೂಲ : ಶಿರುಕೀರ್ರೈಶೆವ್ವಹತ್ತಿ ಮುರುಕ್ಕಿರಂಡುಂ
ಶಿರುಪಶಳ್ಳೈಪ್ಪೆರುಂಪಶಳ್ಳೈಯಮ್ಮಣಂದಾಳ್
ಪರಿತೊರುವರ್ ಕೊಡಾದಿರುಕ್ಕತ್ತಾನೇ ಶೆನ್ರು
ಪಾಯ್ನ್ದೆಡುತ್ತುಕ್ಕೊಳ್ಳುಮವ್ವೈಬಹಿರಾಕ್ಕೂರುಂ,
ಕುರಿತ್ತಾಲುಂ ತಿನ್ನೊಣಾಕ್ಕೈಪ್ಪುಂ ತುವರ್ಪುಂ
ಕೂರ್ಕುಮವ್ವೈಪ್ಪಳಲುಮವ್ವೈಕೊಡುಂಪುಳಿಪ್ಪುಂ,
ಕರಿಕ್ಕಾಹಾದಿವ್ವೈಯೆನ್ರುಕಣ್ಣುರ್ರೈತ್ತಾರ್
ಕಾರ್ಮೇನಿಯರುಳಾಳರ್ ಕಟಕತ್ತಾರೇ ॥ 5

ಕಿರಿಕೀರೆ, ಕೆಂಪಗಸೆ, ಮುಳ್ಳುನುಗ್ಗೆ (ಶಿರುಪಶಳ್ಳೈ ? ಪೆರುಂಪಶಳ್ಳೈ ? ಅಮ್ಮಣಂದಾಳ್ ?) ಇತರರ ತೋಟದಲ್ಲಿರುವುವು ಆ ತೋಟದ ಯಜಮಾನನ ಅನುಮತಿ ಇಲ್ಲದೆ ತಾನೇ ಹೋಗಿ ತಿಳಿಯದಂತೆ ತಂದವು. ಗೋಷ್ಠಿಗೆ ಸಾರ್ವತ್ರಿಕವಾಗಿ ವಿನಿಯೋಗಿಸಲು ಇಟ್ಟಿರುವುದರಲ್ಲಿ ವಿನಿಯೋಗವಾಗುವುದಕ್ಕಿಂತ ಮೊದಲೇ ತನಗಾಗಿ ತೆಗೆದಿಟ್ಟುಕೊಂಡವು, ಎಷ್ಟೆ ಹಸಿವಾಗಿದ್ದರೂ ತಿನ್ನಲಾಗದಷ್ಟು ಕಹಿಯಾಗಲೀ, ಉಪ್ಪಾಗಲೀ ಒಗಚಾಗಲೀ, ಅತಿಕಾರದ್ದಾಗಲೀ, ತುಂಬಾ ಕಳಿತು ಹೋದವಾಗಲೀ, ಅತ್ಯಂತ ಹುಳಿಯಿರುವುದಾಗಲೀ ಇರುವ ಆಹಾರ ವಸ್ತುಗಳನ್ನು ನೀಲಮೇಘಶ್ಯಾಮ ಪರಮ ದಯಾಳು ವರದರಾಜನ ಸಮೀಪ ನಿವಾಸಿಗಳಾದ ವೈದಿಕೋತ್ತಮರು ಮೇಲೆ ಹೇಳಿದುದನ್ನು ವ್ಯಂಜನಾದಿಗಳಿಗೆ ಉಪಯೋಗವಾಗುವುದಿಲ್ಲವೆಂದು ವರ್ಜಿಸಿರುವರು.

पालाशं तण्डुलीयं हरुणमतसिकं व्यञ्जनायार्हपादं ।
अन्यारामाहृतं यत्त्वनुमतिरहितं यच्च सर्वार्थनिष्ठम् ।।
नादद्यात् तत् कदापि स्मृतिविहित मपि क्षुद्वतोऽप्युत्कटानि ।
कट्वाम्लोग्राणि नीलाम्बुदनिभवरदोपाश्रयाः संन्यषिध्यन् ।। ५

ಮೂಲ : ಮಾಲಮುದು ಶೆಯ್ಯಾಮಲ್ ವನ್ದವೆಲ್ಲಾಂ
ವರುವಿರುಂದಿಲ್ ವಳಂಗಾಮಲ್ ವೈತ್ತವೆಲ್ಲಾಂ
ಕಾಲಮಿದುವನ್ರೆನ್ರು ಕಳಿತ್ತವೆಲ್ಲಾಂ
ಕಡ್ಡೈಯಿಲ್ ವರುಂ ಕರಿಮುದಲಾಕ್ಕಳುವಾವೆಲ್ಲಾಂ,
ನೂಲಿಶ್ಶೈಯಾವಳಿಹಳಿನಾಲ್ ವನ್ದವೆಲ್ಲಾಂ
ನುಹರಾದದುಡನ್ ಪಾಕಂಶೆಯ್ ಯ್ದವೆಲ್ಲಾಂ,

ಶೀಲಮಿಲಾಚ್ಚಿರಿಯೋರಾಕ್ಕಿನವುಂ ನಲ್ಲೋರ್
ಶೆಲಮಲಂಗಳ್ ಪಟ್ಟನವುಂ ತಿನ್ನಾರ್ ತಾಮೇ II 6

ಅರ್ಥ :- (ಮಾಲ್-ಅಮುದು-ಶೆಯ್ಯಾಮಲ್-ವಂದ-ಎಲ್ಲಾಂ) ಲಕ್ಷ್ಮೀವಲ್ಲಭನಿಗೆ ನಿವೇದಿಸದೇ ಬಂದವೆಲ್ಲವನ್ನೂ, (ವರು-ವಿರುಂದಿಲ್-ವಳಂಗಾಮಲ್-ವೈತ್ತ-ಎಲ್ಲಾಂ) ಬಂದ ಅತಿಥಿಗಳಿಗೆ ಬಡಿಸದೆ ತನಗಾಗಿ ಇಟ್ಟುಕೊಂಡವೆಲ್ಲವನ್ನೂ, (ಕಾಲಂ-ಇದ್-ಅನ್ರು-ಎನ್ರು-ಕಳಿತ್ತ-ಎಲ್ಲಾಂ) ಈ ಕಾಲದಲ್ಲಿ ಇಂತಹುದನ್ನು ಉಪಯೋಗಿಸಬಾರದು ಎಂದು ನಿಷೇಧಿಸಿರುವುದೆಲ್ಲವನ್ನೂ, ಕಡೈಯಿಲ್-ವರುಂ-ಕರಿ-ಮುದಲಾ-ಕಳುವಾ-ಎಲ್ಲಾಂ = ಅಂಗಡಿಯಿಂದ ತಂದ ತರಕಾರಿ ಮೊದಲಾದುವನ್ನು ತೊಳೆಯದೆ ಇದ್ದರೆ, ಅವೆಲ್ಲವನ್ನೂ, (ನೂಲ್-ಇಶೈಯಾ-ವಳಿಹಳಾಲ್-ವಂದವೆಲ್ಲಾಂ) ಶಾಸ್ತ್ರಸಮ್ಮತವಾಗದೇ ಕೇವಲ ವಿರೋಧಮಾರ್ಗದಿಂದ ಸಂಪ್ರಾದಿಸಿದ ವಸ್ತುಗಳನ್ನೂ, (ನುಹರಾದದು-ಉಡನ್-ಪಾಕಂ-ಶೆಯ್ದ-ಇಲ್ಲಾಂ) = ತಿನ್ನಬಾರದೆಂದು ನಿಷೇಧಿಸಿರುವ ವಸ್ತುಗಳೊಂದಿಗೆ ಬೇಯಿಸಿದ ವಸ್ತುವನ್ನು, (ಶೀಲಂ-ಇಲಾ-ಶಿರಿಯೋರ್-ಆಕ್ಕಿನವುಂ) = ಆಚಾರವಿಚಾರ ಶೀಲರಲ್ಲದ ಚಿಕ್ಕವರು ಬಡಿಸಿದುದನ್ನೂ, (ಶೆಲ-ಮಲಂಗಳ್-ಪಟ್ಟನವುಂ) = ಮೂತ್ರ-ಮಲ-ಸಂಬಂಧವುಳ್ಳವುಗಳನ್ನೂ, ನಲ್ಲೋರ್-ತಿಣ್ಣಾರ್-ತಾಂ) = ಸತ್ವಗುಣ ಪ್ರಚುರರಾದ ಹಿರಿಯರು ತಿನ್ನರು.

**श्रीशानिवेदित मुपाहृत मत्त्यशेषं**
**स्वार्थैकरक्षित मदत्त मुपागतेभ्यः**
**भोक्तुं न चैष समयस्त्विति यन्निषिद्धं**
**शाकाद्यशोधितमुपाहृत मापणाद्यैः ।।**
**शास्त्रीयमार्गरहितेन पथार्जितं च पक्वं त्वभोज्य**
**वसुभिस्सह यत् कृतं च ।**
**निष्पन्न माकृतिनिहीनविशीलबालैः**
**सन्त स्त्यजन्ति सकलं मलमूत्रसङ्गि ।। ६**

ಮೂಲ : ದೇವರ್ಹಳುಕ್ಕಿವೈಯೆನ್ರುವೈತ್ತವೆಲ್ಲಾಂ
ಶಿವನ್ಮುದಲಾದೇವರ್ಹಳುಕ್ಕಿಟ್ಟವೆಲ್ಲಾಂ
ಆವಿಮುದಲಾನವತ್ತುಕ್ಕ್ಯಾಹಾವೆಲ್ಲಾಂ
ಅದುವಿದುವೆನ್ರರಿಯವರಿದಾನವೆಲ್ಲಾಂ

ನಾವಿಲಿಡುವುದರ್ಕರಿದಾಯಿರುಪ್ಪವೆಲ್ಲಾಂ
ನನ್ರ್ರನ್ರುತಮ್ಮುಳ್ಳಮಿಶೈಯಾವೆಲ್ಲಾಂ,
ಓವಿಯನಾಳೋವಾದ ಪೂವುಂ ಕಾಯುಂ
ಉತ್ತಮರ್‌ಹಳಟ್ಟುಪ್ಪುಮುಹವಾರ್‌ತಾಮೇ ॥ 7

ದೇವರಿಗೆಂದುದ್ದೇಶಿಸಿಟ್ಟವೆಲ್ಲವನ್ನೂ, ಈಶ್ವರಮೊದಲಾದ ದೇವತಾಂತರಗಳಿಗೆ ನಿವೇದನ ಮಾಡಿದುದನ್ನೂ, ಪ್ರಾಣ-ಇಂದ್ರಿಯ ಮೊದಲಾದವುಗಳಿಗೆ ಅನುಕೂಲ ವಾಗಿರದೆ ಕೆಡಕು ಮಾಡುವುವೆಲ್ಲವನ್ನೂ, ಇದು ಇಂತಹುದು ಎಂದರಿಯಲಾಗದವನ್ನೂ ಎಂದರೆ ನಾಮರೂಪಗುಣಗಳನ್ನರಿಯದ ಪದಾರ್ಥಗಳನ್ನೂ, ನಾಲಿಗೆಯಲ್ಲಿಡಲು ಆಗದಷ್ಟು, ಬಿಸಿ-ಖಾರ-ಮೊದಲಾದವುಳ್ಳವನ್ನೂ, ತನ್ನ ಮನಸ್ಸಿಗೆ ಒಳ್ಳೆಯದೆಂದು ತೋರದಿರುವುದನ್ನೂ, ಕಾಲವಲ್ಲದ ಕಾಲದಲ್ಲಿ ಬಿಡುವ ಹೂ-ಕಾಯಿ-ಹಣ್ಣು ಮೊದಲಾದುವನ್ನೂ, ಕಾಯಿಸಿದ ಉಪ್ಪಿನಲ್ಲಿರುವ ಕೊಳೆಯುಪ್ಪನ್ನೂ, ಶಿಷ್ಟರು ಉಪಯೋಗಿಸಲು ಇಷ್ಟಪಡುವುದಿಲ್ಲ.

श्रीशार्थं निहितानि यानि गिरिशादिभ्योऽर्पितं यच्च तत् ।
वस्तु प्राणमुखावगर्ह्य मखिलं त्वज्ञातनामादिकम् ।।
जिह्वा यत्र जुगुप्सते सदिति यच्चित्तं न मन्येत तत् ।
शिष्टाः पुष्प मकालजंफल मपि त्यक्ष्यन्ति पक्वार्णवम् ।। ७

ಮೂಲ : ಕಿಳಿಂಜಲ್ ಮುದಲ್ ಶುಟ್ಟನಶುಣ್ಣಾಂಬುತಾನುಂ
ಕಿಳರ್‌ಪುನಲಿಲೆಳುಂಕುಮಿಳಿನುರೈಹಳ್‌ತಾಮುಂ,
ವಿಳೈಂದದನಿನ್ಮುದನ್ಮಾಲುಕ್ಕಿಯಾವೆಲ್ಲಾಂ
ವಿಳೈಂದನಿಲಮರುಕಾಂಬೆನ್ರ್ರೆಳುಂದವೆಲ್ಲಾಂ,
ಕಳೈಂದಮನತ್ತಾರ್ ಮತ್ತುಂಕಳಿತ್ತವೆಲ್ಲಾಂ
ಕಡಿಯಮುದರ್ನಿಯಮತ್ತಾರ್‌ಕಳಿತ್ತವೆಲ್ಲಾಂ,
ತೆಳಿಂದಪುನಲ್‌ತಿರುವೇಂಗಡತ್ತುಮಾಲ್‌ತನ್
ತಿರುವಾಣೈ ಕಡವಾದಾರ್ ತಿನ್ನಾರ್‌ತಾಮೇ ॥ 8

ಮುತ್ತಿನಚಿಪ್ಪು ಮೊದಲಾದುವನ್ನು ಸುಟ್ಟು ಮಾಡುವ ಸುಣ್ಣವನ್ನೂ, ಚಿಲುಮೆ ಮೊದಲಾದುವಿಂದ ಹರಿಯುವ ನೀರಿನಲ್ಲೇಳುವ ಗುಳ್ಳೆ-ನೊರೆಗಳನ್ನೂ, ನೆಲದಲ್ಲಿ ಬೆಳೆದ

ವಸ್ತುಗಳಲ್ಲಿ ಮೊದಮೊದಲು ದೇವರಿಗೆ ಕೊಡದಿರುವುದನ್ನೂ, ಬೆಳೆದ ಭೂಮಿಯಲ್ಲಿ ಮತ್ತೆ ಆ ಕೂಳೆಗಳಿಂದ ಬೆಳೆದವೆಲ್ಲವನ್ನೂ, ತೀವ್ರವಾದ ಆಹಾರ ನಿಯಮವುಳ್ಳ ಹಿರಿಯರು ತಮ್ಮ ಗುರುಗಳ ಉಪದೇಶದಂತೆ ಕೂಡದೆಂದು ಬಿಟ್ಟವೆಲ್ಲವನ್ನೂ, ಸ್ವಚ್ಛವಾದ ನೀರುಹರಿವ ವೆಂಕಟಾದ್ರಿ, ಅಧೀಶನಾದ ಶ್ರೀನಿವಾಸನ ದಿವ್ಯಾಜ್ಞೆಯನ್ನು ಮೀರದೆ ನಡೆಯುವವರು ಭುಜಿಸರು, (ತಿನ್ನುವುದಿಲ್ಲ).

चूर्णान् संप्लुष्टशुक्तिप्रभृतिविरचितान् स्रोतउत्थांश्च फेनान् ।
नव्यं व्रीह्यादिकं प्राक् अनशितपुरदैवं पुनः पूर्वभूजम् ।।
संसाराशाविहीना विजहुरिह तथा ये च तीव्रव्रता यान् ।
आज्ञाधीना नचाद्युः विमलजलनागश्रीनिवासस्य भक्ताः ।। ೮

ಮೂಲ : ಮೋರಲದುಶಾರಂಗಳ್ ವಾಂಗಿತ್ತೆಲ್ಲಾಂ —
ಮುಳುಪ್ಪಹಲಿಲ್ ವಿಳಂಗನಿಯುಂದಾನಂತಾನುಂ,
ಓರಿರವಿಲೆಳ್ಳುಡನೇ ಕೂಡಿತ್ತೆಲ್ಲಾಂ
ಎಳ್ಳದನಿಲೆಣ್ಣೈ ತಯಿರ್‌ತರುಪಂಡಂಗಳ್,
ಓರ್‌ತವತ್ತೈ ಮಂತಿರತ್ತೈಯೊಳಿಪ್ಪವೆಲ್ಲಾಂ
ಉಣ್ಣಾದನಾಳ್‌ಹಳಿಲೂಣ್ ಅನ್ದಿಪ್ಪೋದೂಣ್,
ನಾರಣನಾರಡಿಪಣಿಯುನಲ್ಲೋರ್‌ನಾಳುಂ
ನಳ್ಳಿರವಿಲೂಣುಂ ಇವ್ವೈಯುಣ್ಣಾರ್‌ತಾಮೇ ॥ 9

ಅರ್ಥ:- ಮೋರ್-ಅಲದು-ಶಾರಂಗಳ್-ವಾಂಗಿತ್ತೆಲ್ಲಾಂ = ಮೊಸರು ಹೊರತು ಬೇರೆ ವಸ್ತುಗಳಲ್ಲಿರುವ ಸಾರಾಂಶವನ್ನು ತೆಗೆದ ಮೇಲೆ ಇರುವುದೆಲ್ಲವನ್ನೂ, ಮುಳುಪಹಲಿಲ್-ವಿಳಂ-ಕನಿಯುಂದಾನಂ-ತಾನುಂ = ಹಗಲಿನಲ್ಲಿ ಬೇಲದಹಣ್ಣನ್ನೂ ಅವಲಕ್ಕಿ ಅಥವಾ ಪುರಿ ಇವನ್ನೂ, ಓರ್-ಇರವಿಲ್-ಎಳ್-ಉಡನೆ-ಕೂಡಿತ್ತು-ಎಲ್ಲಾಂ = ರಾತ್ರಿಯಲ್ಲಿ ಎಳ್ಳು ಮಿಶ್ರಿತವಾದ ಪದಾರ್ಥಗಳೆಲ್ಲವನ್ನೂ, ಎಳ್ಳು-ತನಿಲ್-ಎಣ್ಣೈ-ತಯಿರ್-ತರು-ಪಡಂಗಳ್ = ಹಾಗೆಯೇ ರಾತ್ರಿಯಲ್ಲಿ ಒಳ್ಳೆಣ್ಣೆ ಮತ್ತು ಮೊಸರು ಕಲೆತಿರುವ ಪದಾರ್ಥಗಳನ್ನೂ, ಓರ್-ತವತ್ತೈ-ಮಂತಿರತ್ತೈ-ಒಳಿಪ್ಪದೆಲ್ಲಾಂ = ಅಸಾಧಾರಣ ತಪಸ್ಸನ್ನೂ, ಮಂತ್ರವನ್ನೂ ಕೆಡಿಸುವಂತಹುದಲ್ಲೆವನ್ನೂ, ಉಣ್ಣಾದ-ನಾಳ್‌ಹಳಿಲ್-ಉಣ್ = ಅನ್ನವನ್ನೂಟಮಾಡಬಾರದ ವ್ರತದಿನಗಳಲ್ಲಿ ಊಟ ಮಾಡುವುದನ್ನೂ, ಅಂದಿ-ಪೋದು-ಉಣ್ = ಸಂಜೆಯ ಹೊತ್ತು ಊಟಮಾಡುವುದನ್ನೂ, ನಡು-ಇರವಿಲ್-

ಊಣುಂ = ಅರ್ಧರಾತ್ರಿಯಲ್ಲಿ ಊಟವನ್ನೂ, ಇವ್ವೈ = ಹೀಗೆ ಇವೆಲ್ಲವನ್ನು, ನಾರಣನಾರ್-ಅಡಿ-ಪಣಿಯುಂ-ನಲ್ಲೋರ್ = ಯಾದವಾದ್ರಿಯಲ್ಲಿ ಶ್ರೀನಾರಾಯಣನ ಪಾದಾರವಿಂದ ಸೇವಕರಾದ ಮಹನೀಯರು, ನಾಳುಂ = ಎಂದಿಗೂ, ನಣ್ಣಾರ್-ತಾಂ = ಆದರಿಸರು (ಉಪಯೋಗಿಸುವುದಿಲ್ಲ)

क्रीतं तक्रं विनाऽन्यद्रसवसु न लभेताह्नि नाद्यात् कपित्थं ।
धाना वा भोज्यरात्रौ तिलमिलित मभोज्यं तिलोत्थं च तैलम् ।।
दध्ना वा कल्पितं यन्मनुह मपि तपोघ्नं त्वथाभोज्यघस्रे ।
सन्ध्यायां वा निशीथे विदधति निघसं नैव नारायणीयाः ।। ९

ಮೂಲ : ಕುಳಿಮುದಲಾನವ್ವೆ ಶೆಯ್ಯಾದುಣ್ಣು ಮೂಣುಂ
ಕೂಟ್ಟಲ್ಲಾಪ್ಪಂತಿಯಿಲೂಣ್ ಪಿರರ್ಕೈಯ್ಯೂಣುಂ,
ನಳಿರ್ಮದಿತೀವಿಳಕ್ಕಾಹವುಣ್ಣು ಮೂಣುಂ
ನಳ್ಳಿರವಿಲ್ ವಿಳಕ್ಕಿನ್ರಿಯುಣ್ಣು ಮೂಣುಂ
ಕಿಳಿಮೊಳಿಯಾಳುಣಾನಿರ್ಕಕ್ಕಣವನೂಣುಂ
ಕೀಳಾರ್ರೈನೋಕ್ಕೂಣುಂ ಇಡಕ್ಕೈಯ್ಯೂಣುಂ,
ಒಳಿಮರ್ರೈಯೋರ್ ಮತ್ತು ಮುಹವಾದವೂಣುಂ
ಒಳಿಯರಂಗರಡಿಪಣಿವಾರುಹವಾರ್ ತಾಮೇ ॥ 10

ಸ್ನಾನ-ಸಂಧ್ಯಾವಂದನೆಗಳನ್ನು ಮಾಡದೆ ಊಟ ಮಾಡುವುದನ್ನೂ, ಸಹ ಭೋಜನಕ್ಕೆ ಅರ್ಹರಲ್ಲದವರ ಪಂಙ್ಕ್ತಿಯಲ್ಲಿ ಊಟಮಾಡುವುದನ್ನೂ ಪರರ ಹಸ್ತದ ಊಟವನ್ನೂ, ದೀಪಕ್ಕೆ ಪ್ರತಿಯಾಗಿ ಬೆಳದಿಂಗಳಲ್ಲಾಗಲೀ, ಬೆಂಕಿಯ ಬೆಳಕಲ್ಲಾಗಲೀ ಮಾಡುವ ಊಟವನ್ನೂ, ಕತ್ತಲಲ್ಲಿ ದೀಪವಿಲ್ಲದೆ ಊಟಮಾಡುವುದನ್ನೂ, ಪ್ರಿಯಮಡದಿಯೂ ಪತಿಯೂ ಒಂದೇ ಕಾಲದಲ್ಲಿ ಊಟ ಮಾಡುವುದನ್ನೂ, ಹುಟ್ಟು-ನಡತೆ-ಮೊದಲಾದುವಲ್ಲಿ ತುಂಬ ಕೀಳಾಗಿರುವವರನ್ನು ನೋಡುತ್ತಾ ಊಟಮಾಡುವುದನ್ನೂ, ಎಡಗೈಯಲ್ಲಿ ಊಟಮಾಡುವುದನ್ನು, ಬ್ರಹ್ಮತೇಜಸ್ಸಿನ ವೈದಿಕೋತ್ತಮರು ಕೂಡದೆಂದು ಹೇಳಿರುವ ಊಟವನ್ನೂ, ಶ್ರೀರಂಗನಾಥನ ಪಾದಕಮಲ ಭಕ್ತರು ಒಪ್ಪುವುದಿಲ್ಲ. ಮೇಲೆ ಹೇಳಿದುವೆಲ್ಲವನ್ನೂ ಬಿಡಬೇಕು. ಉಪಯೋಗಿಸಬಾರದು.

नाद्यात् स्नानाद्यपेत स्त्वनुचितजनपङ्क्तौ च नैवान्यदीयं ।
ज्योत्स्नायां अग्निभायां अविहित मशनं रात्रिकालेऽत्वदीपे ।।

नाद्यात् सार्धं स्वपत्न्या पतिस्थमजनालोकितं चापि वामात् ।
हस्तात् यत् ब्राह्मणौ श्वानशित मिह महोरङ्गभक्ताश्च नाद्युः ॥ १०

ಮೂಲ : ಎಚ್ಚಿಲ್ ತನಿಲ್ ವಾರ್‍ಕುಂ-ನೆಯ್ ಇರುಪಾಕಂಗಳ್
ಇರುಂಬಾಲುಂ ಕೈಯಾಲು ಮಿಟ್ಟವೆಲ್ಲಾಂ
ಪಚ್ಚೈಯಲ್ಲಾಲ್ ಕಡಿತ್ತುರೈಪಳ್ಳೈಯವೂಶಲ್
ಪಿರರಹತ್ತುಪ್ಪಾಕ್ಕಂಶೆಯ್ದೆಡುತ್ತವನ್ನಂ,
ನಚ್ಚಿನವೈಪಳಿತ್ತವೈಮಣ್ಣಾತ್ತಂ ತೀದುಂ
ನಕತ್ತಾಲೇ ವಿಣ್ಡ ವೈತಾಂಕಾಣುಮುಪ್ಪುಂ,
ಪಿಚ್ಚುಳದಾಮವೈ ಕಾಡಿಬಿನ್ನಪಾಕಂ
ಪಿಶಿಂಗಳ್‌ತನ್ನಿಲ್‌ಶಿವಂದದುವುಂ ಪಿಳ್ಳೈಯೂಣಾಮೇ ॥ 11

ಊಟದ ನಡುವೆ ಎಂಜಲಲ್ಲಿ ತುಪ್ಪವನ್ನು ಬಡಿಸಬಾರದು. ಎರಡುಸಲ ಬೆಂದಿರುವಸ್ತುವನ್ನು ತಿನ್ನಕೂಡದು. ಕಬ್ಬಿಣದ ಪಾತ್ರೆಯಿಂದಾಗಲೀ ಕೈಯಿಂದಾಗಲೀ ಬಡಿಸುವುದನ್ನು ಉಪಯೋಗಿಸಕೂಡದು. ಪಕ್ವಮಾಡದ ಹಸಿಯ ಪದಾರ್ಥಗಳನ್ನು ಕೈಯ್ಯಿಂದಲೇ ಬಡಿಸಬೇಕು. ಕಡಿದು ಮಿಕ್ಕಿದ್ದನ್ನು ಮತ್ತೆ ಉಪಯೋಗಿಸಬಾರದು. ಹಳಿಸಿದುದನ್ನೂ, ಬೇರೆಯವರ ಮನೆಯಲ್ಲಿ ಪಾಕಮಾಡಿ ತಂದುದನ್ನೂ, ಇತರರು ಆಸೆಪಟ್ಟಿದ್ದನ್ನೂ, ಇತರರು ನಿಂದಿಸಿ ಕೊಡುವ ಅನ್ನವನ್ನೂ, ಮಣ್ಣಿನ ವಾಸನೆಯುಳ್ಳದ್ದನ್ನೂ, ಸೀದುಹೋಗಿ ಕೆಟ್ಟಿರುವುದನ್ನೂ, ಉಗುರಿನಿಂದ ಕತ್ತರಿಸುದುವನ್ನೂ, ತನ್ನ ಕಣ್ಣಿಗೆ ಬಿದ್ದ ಉಪ್ಪನ್ನೂ, ಪಿತ್ತ ಹೆಚ್ಚಿಸುವ ವಸ್ತುಗಳನ್ನೂ (ಕಾಡಿ) ಆರನಾಳವನ್ನೂ-ಗಂಜಿಯನ್ನೂ, ಊಟಮಾಡಲುಬಂದವರಿಗೇ ಬೇರೆ ತನಗೇ ಬೇರೆ ಎಂದು ವಿಭಾಗಿಸಿ ಮಾಡಿದ ಊಟವನ್ನೂ, ಮರದಹಾಲಿನಿಂದಾಗುವ ಕೆಂಪು ಹಿಂಗು ಮೊದಲಾದುವನ್ನೂ ಉಪಯೋಗಿಸಕೂಡಮ. ಮೇಲೆ ಹೇಳಿದುವೆಲ್ಲಾ ನಿಂದ್ಯವಾದವು ನಿಷಿದ್ಧವು.

मध्येभुक्ति घृतं द्विपक्व मशनं दत्तं करेणायसा ।
नाद्यात् यन्नशृतं करेण वितरेत् नात्तावशिष्टं पुनः ॥
त्याज्यं पर्युषितं परालयशृतानीतं तथान्येप्सितं ।
मृद्गन्धं त्वशनं स्वदृष्टलवणं निन्द्यं च लूनं नखैः । १
आरनाल मथ पित्तवर्धकं भिन्नपाक मतिथिभ्य आत्मने ॥
वृक्षनिर्यसनवर्गलोहितं नाददीत मनुजश्च जेमितुम् ॥ ११

ಮೂಲ : ತಾದೈನಲ್ಲಾಶಿರಿಯನ್ ಮುದಲ್‌ತಮ್ಮೈಯನೆಚ್ಚಿಲ್
ದರಣಿಶುರರ್‌ಶೋಮತ್ತಿಲರುಂದು ಮೆಚ್ಚಿಲ್
ಮಾದರ್‌ಹಳ್ಕುಕ್ಕಣವನಿತಮಾನವೆಚ್ಚಿಲ್
ಮಯಿರ್‌ಪುಳುನೂಲ್ ವಿಳುಂದಾಲುಂ ಪುನಿದಂ ಮಣ್ಣಾಲ್,
ಮಾದವತ್ತುಕ್ಕೂವಿಳಂಗಾಯ್ ಮುಕವಾಶತ್ತು
ಮಾದುಳಂಗಾಯ್ ಮರಣಂವಿರಿಲ್ ಕಳಿತ್ತವೆಲ್ಲಾಂ,
ಓದಿವೈತ್ತವುಣ್ಣಾನ್ನಾಳುಹುಂದವೆಟ್ಟುಂ
ಉಳವೆನ್ರುಂಕಳಿತ್ತವತ್ತಿಲ್ ನನ್ರಾಮೂಣೇ ॥ 12

ತಂದೆ-ಉತ್ತಮ ಆಚಾರ್ಯರು-ಹಿರಿಯ ಅಣ್ಣ - ಇವರ ಎಂಜಿಲನ್ನು ಉಪಯೋಗಿಸಬಹುದು. ಬ್ರಾಹ್ಮಣರು ಸೋಮಪಾನಮಾಡಿ ಮಿಕ್ಕಿದ್ದುದನ್ನು ಸೇವಿಸಬಹುದು. ಸತಿಯರಿಗೆ ಪತಿಯ ಹಿತಕರವಾದ ಉಚ್ಚಿಷ್ಟವು ನಿಷಿದ್ಧವಲ್ಲ ಸ್ವೀಕರಿಸಬಹುದು. ಬಡಿಸಿದ ಅನ್ನದಲ್ಲಿ ಕೂದಲು-ಹುಳು-ನೂಲು- ಇವು ಬಿದ್ದಿದ್ದರೂ ಮಣ್ಣಿನಿಂದ ಪರಿಶುದ್ಧವಾಗುವುದು. ಚೈತ್ರ ಮಾಸದಲ್ಲಾಗಲೀ ತಪಸ್ಸಿನಲ್ಲಾಗಲೀ ಶ್ರೀಫಲವನ್ನು ಸ್ವೀಕರಿಸಬಹುದು. ದೇವರ ಪೂಜಾಕಾಲದಲ್ಲಿ ಮುಖವಾಸ ಚೂರ್ಣಕ್ಕಾಗಿ (ಮಾತುಳಂಗಾರ್) ಉಪಯೋಗಿಸಬಹುದು. ಬೇರೆ ಹೊತ್ತಿನಲ್ಲಿ ಕೂಡದು. ಕೂಡವೆಂದು ಹೇಳಿದುವೆಲ್ಲಾ ಆಪತ್ಕಾಲದಲ್ಲಿ ಉಪಯೋಗವಾಗಬಹುದು. ಉಪವಾಸ ವ್ರತ ದಿನಗಳಲ್ಲಿ ನೀರು-ಗೆಣಸು-ತುಪ್ಪ-ಹಾಲು-ಯಾಗಹವಿಸ್ಸು-ನಿಮಂತ್ರಣ-ಆಚಾರ್ಯರ ಉಪದೇಶ-ಮತ್ತು ಔಷಧ-ಇವು ವ್ರತ ವಿಘ್ನಕರವಲ್ಲ. ಮೇಲೆ ಹೇಳಿದವೆಂಟೂ ಸರಿಯಾದ ಭೋಜನವಾಗಿಯೇ ಆಗುವುವು.

शिष्टा स्तूच्छिष्टमेषां जगदुरपि पितु र्ज्यायसो भ्रातु रिष्टं ।
स्वाचार्यस्यापि सोमाश्यवनिसुरनिपीतावशिष्टं सतीनाम् ।।
पत्युच्छिष्टं च केशाद्यशुचिकरयुतं मृज्जलेनैति शुद्धिं ।
चैत्रे मासे वरं श्रीफल मिति भगवत्पूजने मातुलङ्गम् ।। १

मृत्या वापदि यद्यच्च निषिद्धं शुद्ध मेव तत् ।
उपवासदिनोक्ताष्टव्रतघ्न मपि मुक्तिदम् ।। १२

ಮೂಲ : ಮಾಕರುಂಬಿನ್ ಶಾರು ತಯಿರ್‌ಪಾಲ್‌ನೆಯ್‌ಪಾಕ್ಕು
ವಳ್ಳೈಮಿಳಹು ತೇನೇಲಂ ಪನಿನೀರಾದಿ,

ಆಕರಶಂತೂಯ್‌ದಾಹುಮರಿಯಾವೆಲ್ಲಾಂ
ಅರಿಯಾದಾರ್ಕ್ಕರಿಯಳವುಂ ತೂಯವಾಹುಂ,
ಶಾಕರಂಗಳ್ ತೂಯನವಾಮುವಾಕ್ಕಳ್‌ಕೂಡಿಲ್
ಶಲಮೆಲ್ಲಾಂ ಗಂಗೈಯಾಮುಪರಾಗತ್ತಿಲ್,
ಮಾಕರಂಗಳ್ ಪಿಣಮುದಲಾ ಮನೈತ್ತುಂಕೊಂಡು
ವರುಪುನಲುಂ ತೂಯ್‌ದಾಹುಂ ವೇಗತ್ತಾಲೇ ॥ 13

ಕಬ್ಬಿನ ಹಾಲು (ರಸ)-ಮೊಸರು-ಹಾಲು-ತುಪ್ಪ-ಅಡಿಕೆ-ಶಂಖ-ಮೆಣಸು- ಜೇನು ತುಪ್ಪ-ಏಲಕ್ಕಿ-ಹಿಮದನೀರು ಇವೆಲ್ಲವೂ ಶುದ್ಧವಾದವು. ಇವನ್ನು ಉಪಯೋಗಿಸಬಹುದು. ಯಾವವಸ್ತುವೇ ಆಗಲಿ ಅದರ ಗುಣಾದಿಗಳು.ತಿಳಿಯದಿದ್ದು ಅದು ತಿಳಿಯುವವರೆಗೆ ಅವನ್ನು ಸೇವಿಸಿದ್ದರೂ ದೋಷವಿಲ್ಲ. ಶುದ್ಧವೇ. ತಿಳಿದನಂತರ ಕೂಡದು. ಹುಣ್ಣಿಮೆ-ಅಮಾವಾಸ್ಯೆಗಳಲ್ಲಿ ಸಮುದ್ರದನೀರು ಪರಿಶುದ್ಧವು. ಆಗ ಅದರಲ್ಲಿ ಸ್ನಾನ ಮಾಡಬಹುದು. ಗ್ರಹಣ ಸಮಯದಲ್ಲಿ ಎಂತಹ ನೀರಾಗಿದ್ದರೂ ಅದು ಗಂಗಾತೀರ್ಥದಷ್ಟು ಪಾವನವಾದುದು. ವೇಗವಾಗಿ ಹರಿಯುವ ನದೀ ನೀರಿನಲ್ಲಿ ಕುದುರೆ-ಕತ್ತೆ-ಹೆಣ-ಮೊದಲಾದ ಅಶುದ್ಧ ವಸ್ತುಗಳು ತೇಲಿ ಹೋದರೂ ಆ ನೀರು ಶುದ್ಧವೇ. ಕಾರಣ ನೀರು ವೇಗವಾಗಿ ಹರಿದು ಹೋಗುವುದಷ್ಟೆ.

इक्षो रसो दधिपयो घृतपूगशङ्खाः ।
मध्वेलका हिमजलं च मरीचकाद्याः ।।
शुद्धास्तथाकरभवाश्च भवन्ति यावत् ।
वस्तुस्वरूपगुणशोधनबुद्धिमेति ।। १

सिन्धूदकं भवति पर्वसु सर्वशुद्धं
गङ्गोदकं भवति तोयमिहोपरागे ।
स्रोतस्विनी सखरवाजिशवपि मेध्या वेगेन
सर्वसरितोहि शुभापगा स्स्युः ।। १३

ಮೂಲ : ತೀಯಾಲೇ ನೀರೊಳಿಯ ವೆಂದವೆಲ್ಲಾಂ
ತೀಯಿಡುದಲೊಳಿತ್ತಿಡವೇ ಪಳುತ್ತವೆಲ್ಲಾಂ,
ತೀಯಾಲುಂ ನೀರಾಲುಂ ವೆಂದವತ್ತಿಲ್

ತೇರವುಲರ್‌ನೆಲ್ಲು ಮುದಲಾನವೆಲ್ಲಾಂ,
ಊಶಾದ ಮಾವಟಕಮಪ್ಪಂ ಶೀಡೈ
ಉರೊಟ್ಟಿಮುದಲಾಮವತ್ತಿಲ್ ಪಳೈಯದೇನುಂ,
ಕೂಶಾದೇಕೊಣ್ಡಿಡುಮಿನ್ ಪುದಿಯದೇನುಂ
ಕೊಳ್ಳೇಣ್ಮೆನ್‌ತನ್ನಿರತಂ ಕುಲ್ಯೆಂದಕ್ಕಾಲೇ ॥ 14

ನೀರಿನ ಸಂಬಂಧವಿಲ್ಲದೆ ಬೆಂಕಿಯಲ್ಲಿ ಬೆಂದ (ಸುಣ್ಣದಕಲ್ಲು ಮುಂತಾದ) ವಸ್ತುಗಳನ್ನೂ, ಬೆಂಕಿಯ ಕಾವು ಇಲ್ಲದೆ ತಾನಾಗಿಯೇ ಹಣ್ಣಾದವೆಲ್ಲವನ್ನೂ, ನೀರಿನಿಂದಲೂ ಬೆಂಕಿಯಿಂದಲೂ ಬೆಂದವುಗಳಲ್ಲಿ ದೀರ್ಘಕಾಲ ಕೆಡದೆ ಬಾಳಿಕೆ ಬರುವ ಅವಲಕ್ಕಿ ಮೊದಲಾದುವೂ, ಹಿಟ್ಟಿನ ಸಂಡಿಗೆ-ಹಪ್ಪಳ-ಅಪ್ಪ-ಶೀಡೆ-ರೊಟ್ಟಿ ಮೊದಲಾದುವಲ್ಲಿ ಹಳಸದೆ ವಾಸನೆ ಬರದೆ ಇರತಕ್ಕವು ಎಷ್ಟೇ ಹಳೆಯದಾಗಿದ್ದರೂ, ಸ್ವಲ್ಪವೂ ಅಳುಕದೆ ತೆಗೆದುಕೊಳ್ಳಬಹುದು. ದೋಷವಿಲ್ಲ. ಎಷ್ಟೇ ಹೊಸದಾಗಿದ್ದರೂ ಅದು ತನ್ನ ಸ್ವಾಭಾವಿಕರಸವನ್ನು ಕಳೆದುಕೊಂಡಿದ್ದರೆ ತೆಗೆದುಕೊಂಡು ಉಪಯೋಗಿಸಕೂಡದು.

औष्येनाग्ने विनाऽम्बुक्कथित मखिल मप्युत्तमं यद्विनाग्निं ।
पक्कीभूतं फलाद्यप्यतिशुचि यदुभाभ्यांच शाल्यादि पक्कम् ।।
सर्वं तद्दीर्घकालावधिक मिति तथा यातयामांश्च पैष्टान् ।
निश्शङ्कं स्वीकुरुध्वं नवकृत मपि चेन्नीरसं संत्यजेत ।। १४

ಮೂಲ : ತಲೈಪ್ಪಯನಾಂ ವಿಕಾರಂಗಳ್ ಶಾಕಡಂಗಳ್
ಶಕ್ಕರಂಗಳ್ ತನಕ್ಕಡೈತ್ತ ಮರುನ್ದುತಾನುಂ,
ಕಲಕ್ಕಮಿಲ್ಲಾನನ್ನೀರಿಲ್ ವೈತ್ತಶೋರುಂ
ಕರಿಮೋರ್ ನೆಯ್‌ಪಾಲ್‌ತಯಿರ್‌ಕಳ್‌ಕಲಂದಶೋರುಂ,
ವಿಲಕ್ಕಮಿಲ್ಲಾ ಮಾಕ್ಕನ್ನಲ್ ಗೋದುಮತ್ತಾಲ್
ವಿಳೈವುರವಾಕ್ಕಿಯ ನಲ್‌ವಿಕಾರಂತಾನುಂ,
ಇಲೈಕ್ಕರಿಪೋಲಿವೈಯನ್ನೆತ್ತುಂ ಪಳೈಯವೇನುಂ
ಎನ್ನಾಳುಂ ವೈತ್ತುಣ್ಣ ವಿಶೈಹಿನ್ರಾರೇ ॥ 15

ಕಲೈ-ಪಯನಾಂ-ವಿಕಾರಂಗಳ್ = ಹಾಲು ಮೊದಲಾದವುಗಳ ಪ್ರಧಾನವಾದ ರೂಪಾಂತರ ವಸ್ತುಗಳಾದ ಹಾಲುಖೋವಾ ಮುಂತಾದವು, ಶಾಕಟಂಗಳ್-ಶಕ್ಕರಂಗಳ್

= ಚಕ್ರಾಕೃತಿಯಲ್ಲಿರುವ ಚಕ್ಕಲಿ-ಮುಚ್ಚೋರೆ-ತೆಂಗೋಳು ಮೊದಲಾದವು, ತನಕ್ಕು-ಅಡೈತ್ತ-ಮರುಂದ್-ತಾನುಂ = ವೈದ್ಯರು ತನಗೆ ಹೇಳಿದ ಔಷಧಗಳು, ಕಲಕ್ಕಂ-ಇಲ್ಲಾ-ನಲ್-ನೀರಿಲ್-ವೈತ್ತ-ಶೋರುಂ = ಶುದ್ಧವಾದ ನೀರಿನಲ್ಲಿಟ್ಟ ಅನ್ನ (ತಂಗಳು) ಕರಿ-ಮೋರ್-ನೆಯ್-ಪಾಲ್-ತಯಿರ್-ಹಳ್‌ಕಲಂದಶೋರುಂ = ಕಾಯಿಪಲ್ಯ-ಮೊಸರು ತುಪ್ಪ-ಹಾಲು ಮತ್ತು ಮೊಸರನ್ನ ಇವುಗಳ ವಿಲಕ್ಕಂ-ಇಲ್ಲಾ-ಮಾ-ಕನ್ನಲ್-ಗೋದುಮತ್ತಾಲ್-ವಿಳೈಪುರವಾಕ್ಕಿಯನಲ್-ವಿಕಾರಂ-ತಾನುಂ = ನಿಷಿದ್ಧವಲ್ಲದ ಹಿಟ್ಟು, ಬೆಲ್ಲ, ಗೋಧಿಗಳಿಂದ ತಯಾರಿಸಿದ ಭಕ್ಷ್ಯಗಳು ಇವ್ವೈ-ಅನೈತ್ತುಂ = ಇವೆಲ್ಲವನ್ನೂ, ಇಲ್ಲೈ, ಕರಿಪೋಲ್ = ಹಪ್ಪಳಸಂಡಿಗೆಗಳಂತೆ, ಪಳೈಯವೇನುಂ = ಎಷ್ಟೇ ಹಳೆಯದಾಗಿದ್ದರೂ, ವೈತ್ತು = ಇಟ್ಟಿದ್ದು. ಎನ್ನಾಳುಂ = ಯಾವಾಗಬೇಕಾದರೂ, ಉಣ್ಣ = ಊಟಮಾಡಲು ಇಶೈಹಿನ್ರಾರ್ = ಸಮ್ಮತಿಸಿರುವರು.

सारान् क्षीरविकारजान् कृतफलानद्यात् प्रयाणेऽखिलान् ।
वैद्योक्तात्मरुगौषधं च निहितं स्वच्छेजलेऽन्नं य यत् ।।
सक्षीरं सघृतं सतक्र मशनं सव्यञ्जनं दाधिकं ।
पिष्टं यत्सरसं यवैर्विरचितान् भक्ष्यान्बुधो भक्षयेत् ।। १

शाकपत्रवदेतानि पुराणान्यपि सादरं ।
निधाय सुचिरं सन्तो भोक्तुं चा भ्युपयन्ति हि ।। १५

ಮೂಲ : ತಯರ್‌ತನ್ನಿಲ್ ವಿಕಾರಂಗಳ್ ಪೂವಿಲ್‌ಕಾಯಿಲ್
ಪಳತ್ತಿಲ್‌ವರುಂ ಶಾರೂಶಲ್ ತೂಯವಾಹುಂ,
ಉಯಿರಳಿಯಾಮೈಕ್ಕಣ್ಣಾವೂಶಲುಣ್ಣಿಲ್
ಉರಕ್ಕಳುವಿನೆಯ್‌ತೇ ನಿಟ್ಟುಣ್ಣಲಾಹುಂ,
ಪಯಿಲ್‌ಮರೈನೂಲುರೈಯಾದ ಪಳೈಯವೂಶಲ್
ಪಳಿಪ್ಪಿಲದಾಂ ನೆಯ್ಯಾಲೆನ್ರುರೈತ್ತಾನ್ ಶರ್ಕ್ಕ
ಮಯಿರ್‌ಮುದಲಾನವ್ವೈ ಪಿನ್ನುಂ ಪಟ್ಟದಾಹಿಲ್
ಮಣ್ಣೀರ್ ಮತ್ತುರೈತ್ತವತ್ತಾಲ್ ವರಂಗಳಾಮೇ ॥ 16

ಅರ್ಥ :- ತಯಿರ್ ತನ್ನಿಲ್-ವಿಕಾರಂಗಳ್ = ಮೊಸರು ಮತ್ತು ಅದರ ವಿಕಾರವಾದ ಕೆನೆ-ಬೆಣ್ಣೆ- ತುಪ್ಪಮೊದಲಾದವುಗಳಿಂದ ಮಾಡಿದ ವಸ್ತುಗಳೂ, ಪೂವಿಲ್-ಕಾಯಿಲ್-ಪಳತ್ತಿಲ್ = ಹೂ-ಕಾಯಿ-ಹಣ್ಣುಗಳಲ್ಲಿ, ವರುಂ-ಶಾರು = ಬರುವರಸಗಳೂ, ಊಶಲ್ =

ಸ್ವಲ್ಪಹಳಿಯದಾಗಿದ್ದರೂ, ತೂಯ್-ಅವ್-ಆಹುಂ = ಪರಿಶುದ್ಧವಾದುವೇ ಎಂದು ಉಪಯೋಗಿಸಬಹುದು. ಉಯಿರ್-ಅಳಿಯಾಮೈಕ್ಕು = ಪ್ರಾಣವು ಹೋಗದಿರುವುದಕ್ಕಾಗಿ (ಆಪತ್ಕಾಲದಲ್ಲಿಪ್ರಾಣವುಳಿಸಿಕೊಳ್ಳಲು) ಉಣ್ಣಾ-ಊಶಲ್-ಉಣ್ಣಲ್ = ತಿನ್ನಲಾಗದಷ್ಟು ಹಳಿಸಿ ಹೋದ ವಸ್ತುಗಳನ್ನೇ ತಿನ್ನಬೇಕಾದ ಸಂದರ್ಭದಲ್ಲಿ, ಉರ-ಕಳುವಿ = ಅವನ್ನು ಚೆನ್ನಾಗಿ ನೀರಿನಲ್ಲಿ ತೊಳೆದು, ನೆಯ್-ತೇನ್-ಇಟ್ಟು = ಅವುಗಳಿಗೆ ಜೇನುತುಪ್ಪವನ್ನೋ ತುಪ್ಪವನ್ನೋ ಮಿಶ್ರಮಾಡಿ, ಉಣ್ಣಲ್-ಆಹುಂ = ತಿನ್ನಬಹುದು. ಪಯಿಲ್-ಮರೈ-ನೂಲ್-1ಉರೈಯಾದ-ಪಳೈಯವೂಶಲ್ = ವೇದಶಾಸ್ತ್ರಗಳಲ್ಲಿ ಹೇಳಲ್ಪಡದ, ಹಳಸಿದ ವಸ್ತುಗಳು (ಪಯಿನ್ಮರೈಯೆಡುತ್ತ ಎಂದು ವೇದಗಳು-ಶಾಸ್ತ್ರಗಳು ಇವುಗಳಷ್ಟೇ ಪ್ರಮಾಣವಾದುವೆಂದು ಪ್ರಸಿದ್ಧಿಪಡೆದ ಎಂದರ್ಥ, ಪಾಠಭೇದವುಂಟು. ಆಗ ಅನಾದಿ ಇದು ಶಂಖ ಋಷಿಗೆ ವಿಶೇಷಣವಾಗುವುದು.) ನೆಯ್ಯಾಲ್ = ತುಪ್ಪವನ್ನು ಬೆರಸುವುದರಿಂದ, ಪಳಿಪ್ಪು-ಇಲದ್-ಆಂ = ಹಳಸಿದ ದೋಷವಿಲ್ಲದವುಗಳಾಗಿ ಆಗುವುವು. ಎನ್ರು = ಎಂದು, ಶಂಕನ್ = ಶಂಖ ಮಹರ್ಷಿಯು, ಉರೈತ್ತಾನ್ = ಹೇಳಿರುವನು. ಮಯಿರ್-ಮುದಲಾನವೈ-ಪಿನ್ನುಂ-ಪಟ್ಟದು-ಆಹಿಲ್ = ಕೂದಲು ಮೊದಲಾದುವು ಸೇರಿದುದರಿಂದ ಅಶುದ್ಧವೆನಿಸಿದ ವಸ್ತುಗಳು, ಮಣ್ಣೀರ್-ಮತ್ತು-ಉರೈತ್ತವತ್ತಾಲ್ = ಮಣ್ಣಿನ ನೀರು ಮತ್ತು ಶುದ್ಧಿಕರವಸ್ತುಗಳೆಂದು ಪರಿಗಣಿಸಲ್ಪಟ್ಟವುಗಳಿಂದ, ಪರಂಗಳ್-ಆಂ = ಅವೂ ಸ್ವೀಕರಿಸಲು ಯೋಗ್ಯವಾಗಿಯೇ ಆಗುವುವು.

दध्नो ये वा विकारा विविसुमफलोत्था रसा यातयामाः ।
अप्येवं तेऽतिशुद्धा न जहति सुधिय स्तान् यदा प्राणगुप्त्यै ।।
प्राप्तं प्रत्नं त्वभक्ष्यं तदपि सलिलतः क्षालयित्वाऽथ सिक्त्वा ।
माध्व्या चाद्यात् घृतेनेति च निगमसमानोक्तिशङ्खर्षिराह ॥ १६

ಮೂಲ : ಒರುಕುಳಂಬಿ ಯಿರುಕನ್ರಿ, ಯೊಟ್ಟಗಪ್ಪಾಲ್
ಉಪ್ಪುಡನ್‌ಪಾಲ್ ಮೋರುಡನ್‌ಪಾಲ್ ಮಾದರ್‌ತಂಪಾಲ್
ಕರುವುಡೈಯವತ್ತಿನ್‌ಪಾಲ್ ಕನ್ರಿಲ್ಲಾಪ್ಪಾಲ್
ಮರುಕನ್ರಾಲ್‌ಕರಂದಿಡುಂಪಾಲ್ ತಿರಿಂದಿಡುಂಪಾಲ್,
ತಿರುಮಹಳಾರ್‌ಕ್ಕಣವನಲ್ಲಾದ್ದೈವತ್ತಿನ್‌ಪೇರ್
ಶಿನ್ನಮುಡೈಯವತ್ತಿನ್‌ಪಾಲ್ ಶೆಮ್ಮರಿಪ್ಪಾಲ್
ಪರಿವದಿಲನ್ದಣರ್‌ವಿಲೈಪ್ಪಾಲ್ ಶೆಂಬಿನಿಲ್‌ಪಾಲ್
ತೀದಾಂಪಾಲಿವೈಯನೈತ್ತುಂ ಪರುಹಾಪ್ಪಾಲೇ ॥ 17

ಕುಡಿಯಬಾರದ ಹಾಲುಗಳನ್ನು ಸಂಗ್ರಹಿಸುವರು :

ಒರು-ಕುಳಂಬಿ = ಒಂದು ಗೊರಸಿನವು (ಕುದುರೆ-ಕತ್ತೆ-ಮೊದಲಾದವು), ಇರು-ಕನ್ರಿ = ಎರಡು ಕರುಗಳಿರುವ ಹಸು, ಒಟ್ಟಗ = ಒಂಟೆ, (ಇವುಗಳ) ಪಾಲ್ = ಹಾಲು, ಉಪ್ಪು-ಉಡನ್-ಪಾಲ್ = ಉಪ್ಪುಬೆರೆಸಿರುವ ಹಾಲೂ, ಮೋರು-ಉಡನ್-ಪಾಲ್ = ಮೊಸರು ಸೇರಿದ ಹಾಲೂ, ಮಾದರ್-ತಂ-ಪಾಲ್ = ಸ್ತ್ರೀಯರಸ್ತನ್ಯವೂ, ಕರುವು-ಉಡೈಯ-ಅವತ್ತಿ್ರ-ಪಾಲ್ = ತೆನೆಯಾಗಿರುವ ಹಸುವಿನ ಹಾಲೂ, ಕನ್ಱ್-ಇಲ್ಲಾ-ಪಾಲ್ = ಕರುವಿಲ್ಲದೇ ಕರೆಯುವ ಹಾಲೂ, ಮರು-ಕನ್ರಾಲ್-ಕರಂದ್-ಇಡುಂ-ಪಾಲ್ = ಬೇರೆ ಕರುವಿನಿಂದ ಕರೆಯುವ ಹಾಲೂ, ತಿರಿಂದ್-ಇಡುಂ-ಪಾಲ್ = ಯಾಚಿಸಿ ತರುವ ಹಾಲೂ, ತಿರುಮಹಳಾರ್-ಕಣವನ್- ಅಲ್ಲಾ- ದೈವತ್ತಿನ್-ಪೇರ್-ಶಿನ್ನಂ-ಉಡೈಯ-ಅವತ್ತಿ್ರ-ಪಾಲ್ = ಲಕ್ಷ್ಮೀನಾಯಕನನ್ನು ಬಿಟ್ಟು ಉಳಿದ ದೇವತಾಂತರಗಳ ಹೆಸರಾಗಲೀ, ಚಿಹ್ನೆಯಾಗಲೀ ಇರುವ ಹಸುವಿನ ಹಾಲೂ, ಶೆಮ್ಮರಿ-ಪಾಲ್ = ಕುರಿಯ ಹಾಲೂ, ಪರಿವದ್-ಇಲ್-ಅಂದಣ್ = ಯಾವ ದೋಷವೂ ಇಲ್ಲದ (ಶ್ರೋತ್ರಿಯರಾದ) ಬ್ರಾಹ್ಮಣರು-(ಗೊಲ್ಲರಂತೆ) ವಿಲೈ-ಪಾಲ್ = ಮಾರುವ ಹಾಲೂ, ಶೆಂಬಿನಿಲ್-ಪಾಲ್ = ತಾಮ್ರಪಾತ್ರೆಯಲ್ಲಿಟ್ಟಹಾಲೂ, ತೀದಾಂಪಾಲ್-ತುಂಬ ಕಾದುಹೋದ, ಅಥವಾ ಕೆಟ್ಟುಹೋದ ಹಾಲು ಇವ್ವೈ-ಅನೈತ್ತುಂ = ಮೇಲೆ ಹೇಳಿದ ಹಾಲುಗಳೆಲ್ಲಾ, ಪರುಹಾ-ಪಾಲ್ = ಕುಡಿಯಬಾರದ (ಸೇವಿಸಬಾರದ) ಹಾಲುಗಳು.

**त्याज्यं चैकशफीपयो यमजने धेनो श्र मायं पयः ।**
**वैवत्सं परवत्सदं च लवणो न्मिश्रं सतक्रं पयः ।।**
**गन्धिन्या श्च पयो निषिद्ध मपि च क्रीतं पयो योषितां ।**
**श्रीनाथेतरनामचिह्नकलिताया गोः पय श्चौरणम् ।।** १

**विक्रीतं ब्राह्मणैर्यच्च दूषितं ताम्रपात्रगम् ।**
**निन्द्यं पूर्वोक्त मखिलं न पिबेत् जात्वपि क्वचित् ।।** १७

ಮೂಲ : ಗಂಗೈಯಲ್ಲದಿರಂಡಾನಾಳ್ ವೈತ್ತನೀರುಂ
ಕಾಲ್‌ಕಳುವಿಮಿಹುನೀರುಂ ಕಲಕ್ಕನೀರುಂ,
ತೆಂಗಿನುಳದಾಯ್‌ತ್ತೀಯಾಲ್ ಕಾಯ್‌ನ್ದನೀರುಂ
ಶಿರುಕುಳಿನೀರ್ ವಳಿತ್ತಣ್ಣೀರ್‌ಪ್ಪನ್ದಲ್‌ನೀರುಂ,
ಶಂಕೈಯುಡೈನೀರ್ ವಣ್ಣಾನ್‌ತುರೈಯಿನ್‌ನೀರುಂ

ದಾರೈಯಿನಾಲೆಚ್ಚಿಲಿದುವೆನ್ರನೀರುಂ,
ಶಂಗುಕಲಮಾಕ್ಕೊಂಡು ಪರುಹುನೀರುಂ
ದರೈಯಿಲ್‌ವಿಳಾಮಳೈನೀರುಂ ತವಿರುನೀರೇ ॥ 18

ಅರ್ಥ :- ಸೇವಿಸಬಾರದಂತಹ ನೀರಿನ ಸಂಗ್ರಹ :

ಗಂಗೈ-ಅಲ್ಲದ್-ಇರಂಡಾಂ-ನಾಳ್-ವೈತ್ತ-ನೀರುಂ = ಗಂಗೆಯ ನೀರೊಂದು ಹೊರತು ಒಂದು ದಿನಕ್ಕೆ ಮೇಲೆ ಇಟ್ಟನೀರೂ, ಕಾಲ್-ಕಳವಿ-ಮಿಹುಂ-ನೀರುಂ = ಕಾಲನ್ನು ತೊಳೆದುಕೊಂಡ ಮೇಲೆ ಉಳಿಯುವ ನೀರೂ, ಕಲಕ್ಕನೀರುಂ = ಕದಡಿರುವ ನೀರೂ, ತೆಂಗಿನ-ಉಳದಾಯ್-ತೀಯಾಲ್-ಕಾಯ್‌ನ್ದ-ನೀರುಂ = ತೆಂಗಿನ ಕಾಯಲ್ಲಿರುವು (ಎಳನೀರು)ದು ಬೆಂಕಿಯಿಂದ ಕಾಯಿಸಲ್ಪಟ್ಟರೆ ಅದೂ, ಶಿರು-ಕುಳಿ-ನೀರ್ = ಚಿಕ್ಕ ಹಳ್ಳದಲ್ಲಿ ತಂಗಿದ ನೀರೂ, ವಳಿ-ತಣ್ಣೀರ್ = ದಾರಿಯಲ್ಲಿರುವ ನೀರೂ, ಪಂದಲ್-ನೀರುಂ = ಅರವಟ್ಟಿಗೆಗಳಲ್ಲಿ ಕೊಡುವ ನೀರೂ, ಶಂಕೈ-ಉಡೈಯ-ನೀರ್ = ಸಂದೇಹಾಸ್ಪದವಾದ ನೀರೂ, ವಣ್ಣಾ-ತುರೈಯಿನ್-ನೀರುಂ = ಅಗಸರು ಬಟ್ಟೆಯೊಗೆಯುವ ತೊರೆಯ ನೀರೂ, ದಾರೈಯಿನಾಲ್-ಎಚ್ಚಿಲ್-ಇದು-ಎನ್ರ-ನೀರುಂ = ಧಾರಾಕಾರವಾಗಿ ಬೀಳುವಾಗ ಎಂಜಲಾದ ನೀರೂ, ಶಂಗು-ಕಲಂ-ಆಕ್ಕೊಂಡು-ನೀರುಂ = ಶಂಖವನ್ನು ಪಾತ್ರೆಯಾಗಿ ಮಾಡಿಕೊಂಡು (ಅದರಿಂದ) ಕುಡಿಯುವ ನೀರೂ, ದರೈಯಿಲ್-ವಿಳಾ-ಮಳೈ-ನೀರುಂ = ನೆಲದ ಮೇಲೆ ಬೀಳದೆ ಮೇಲೆಯೇ ಸುರಿವ ಮಳೆನೀರೂ, ತವಿರು-ನೀರ್ = (ಮೇಲೆ ಹೇಳಿದ ನೀರೆಲ್ಲಾ) ಬಿಟ್ಟುಬಿಡಬೇಕಾದುದೇ. ಉಪಯೋಗಿಸಕೂಡದು.

गङ्गावारि विना यनन्यसलिलं यातैकरात्रस्थितं ।
पादक्षालनशेष माविल मथौषन्नारिकेळोदकम् ।।
तोयं पाल्वल मध्वनीर मुदकं प्रापं च सन्देहदं ।
सोपानाद्रजकस्य चागत मिदं धाराम्बवशुद्धं त्विति ।। १

शङ्खपात्रेण पानीयं न पिबेत् तच्च निन्दितम् ।
वर्षतोयं धराऽस्पृष्टं नोपादेयं कथंचन ।। १८

ಮೂಲ : ವೆತ್ತಿಲೈಮುನ್ತ್ತಿನ್ನಾದೇ ತಿನ್ನುಂ ಪಾಕ್ಕುಂ
ವೆತ್ತಿಲೈಯಿನಡಿನುಣಿಯುನಡುವಿಲೀರ್ಕ್ಕುಂ,
ವೆತ್ತಿಲೈಯುಂ ಪಾಕ್ಕು ಮುಡನ್‌ಕೂಟ್ಟಿತ್ತಿನ್ನುಂ
ವಿದವೈಕ್ಕು ಮುದಲ್ ಮುಡಿವಾಚ್ಚಿರಮತ್ತಾರ್ಕ್ಕುಂ,

ಶುತ್ತಿಲ್ಲೈಯುಂ ಶುಣ್ಣಾಂಬಿನಿಲ್ಲೈಯುಂ ಶೋಕಂ
ವಿರತಂಕೊಂಡಿಡುನಾಳ್ ವೆತ್ತಿಲ್ಲೈಯುಂ ಪಾಕ್ಕುಂ,
ವೆತ್ತಿಲ್ಲೈತ್ತಿನ್ನಾನಿರ್ಕಪ್ಪರುಹುನೀರುಂ
ವಿದ್ಯೆಯೆನವೈತ್ತದು ತಿನಲುಂ ವಿಲಕ್ಕಿನಾರೇ ॥ 19

ವೀಳೆಯದೆಲೆಯ ಸೇವನೆಯ ಕೆಟ್ಟರೀತಿಯನ್ನು ಖಂಡಿಸುವರು :-

ವೆತ್ತಿಲ್ಲೈ-ಮುನ್-ತಿನ್ನಾದೇ-ತಿನ್ನುಂ-ಪಾಕ್ಕುಂ = ವೀಳೆಯದೆಲೆಯನ್ನು ಮೊದಲು ಹಾಕಿಕೊಳ್ಳದೆ, ಮೊದಮೊದಲೇ ಅಡಿಕೆಯನ್ನು ಹಾಕಿಕೊಳ್ಳಬಾರದು, (ಹಾಗೆಯೇ) ವೆತ್ತಿಯನ್-ಅಡಿ-ನುಣಿಯುಂ-ನಡುವಿಲ್-ಈರ್ಕ್ಕುಂ = ವೀಳೆಯದೆಲಯ ತುದಿ ಅಡಿಯಕಾವು ಮತ್ತು ನಡುವೆ ಇರುವ ನರ ಇವನ್ನೂ, ವೆತ್ತಿಲ್ಲೈಯುಂ-ಪಾಕ್ಕುಂ-ಉಡನ್ ಕೂಟ್ಟಿತಿನ್ನುಂ = ವೀಳೆಯದೆಲೆಯನ್ನೂ ಅಡಿಕೆಯನ್ನೂ ಒಟ್ಟಿಗೆ ತಿನ್ನುವುದನ್ನೂ ನಿಷೇಧಿಸಿರುವರು. ವಿದವೈಕ್ಕುಂ-ಮುದಲ್-ಮುಡಿವು-ಆಚ್ಚಿರ ಮತ್ತಾರ್ಕ್ಕುಂ = ವಿಧವೆಯೂ, ಬ್ರಹ್ಮಚಾರಿ ಮತ್ತು ಸನ್ಯಾಸಿಗಳಿಗೂ ತಾಂಬೂಲ ಸೇವನೆ ಕೂಡದು. ಶುತ್ತು-ಇಲ್ಲೈಯುಂ = ಎಲೆಯ ಸುತ್ತಲೂ ಇರುವ ಅಂಚು ಭಾಗವನ್ನೂ, ಶುಣ್ಣಾಂಬು-ಇಲ್ಲೈಯುಂ = ಸುಣ್ಣವಿಟ್ಟಿದ್ದ ಎಲೆಯನ್ನೂ ಉಪಯೋಗಿಸಬಾರದು. ಶೋಕಂ-ವಿರತಂ-ಕೊಂಡು-ಇಡುಂ-ನಾಳ್ = ದುಃಖ ಮತ್ತು ವ್ರತ ಇವುಗಳುಳ್ಳ ದಿನಗಳಲ್ಲಿ ವೀಳೆದೆಲೆ ಅಡಿಕೆಯನ್ನುಪಯೋಗಿಸಬಾರದು. ವೆತ್ತಿಲ್ಲೈತಿನ್ನಾನಿರ್ಕ-ಪರುಹು-ನೀರುಂ = ವೀಳೆಯದೆಲೆಯನ್ನು ಸೇವಿಸುವಾಗ ನೀರನ್ನು ಕುಡಿಯಬಾರದು. ವಿದ್ಯೆ-ಎನ-ವೈತ್ತದು = ಬೀಜಾರ್ಥವಾಗಿಟ್ಟದನ್ನೂ, ತಿನಲುಂ -ವಿಲಕ್ಕಿಗಾರ್ = ತಿನ್ನಕೂಡದೆಂದು ನಿಷೇಧಿಸಿರುವರು.

ताम्बूलीन्यसनं विना प्रथमतो पूगादनं दोषकृत् ।
मूलं मध्य मथाग्रमस्य नदितं नाद्याच्च तन्निन्दितम् ।।
भोक्तव्यं युगपन्न चोभय मथोवर्णी मुनि श्चाधवा ।
पर्णं तत्परितः स्थितं न च सुधापर्णं न दुःखेऽहनि ।। १

ताम्बूलादनकाले च न जात्वपि जलं पिबेत् ।
निक्षिप्तं यच्च बीजार्थं धर्मज्ञा स्तन्यषेधिषुः ।। ११

ಮೂಲ ಶಾತಿಗುಣಮಾಚ್ಚಿರಮಂದೇಶಂ ಕಾಲಂ
ದರುಮಂಗಳ್ ನಿಮಿತ್ತಂಗಳ್ ಮುದಲಾವ್ರೋದುಂ,
ಬೇದಮುದಲಾಹವೊರುದಿರವಿಯನ್ನಾದ್

ಪಿರಿನ್ದುನಲಂ ತೀಙ್ಗಿನ್ನೆಯುಂ ಪೆತ್ತುನಿರ್ಕ್ಕುಂ,
ಪಾದಮಿಶ್ಶೈಪ್ಪಿರಂದೋರ್ಕ್ಕುಕ್ಕಪಿಲೈಯಿನ್‌ಪಾಲ್
ಪರುಹಿಡಲಾಹಾದೆನ್ರುಮರ್ೈಯೋರ್‌ಶೊನ್ನಾರ್,
ಆದಲಿನಾಲೋದಿ ಯುಣರ್‌ನ್ದವರ್ ಪಾಲೆಲ್ಲಾಂ
ಅಡಿಕ್ಕಡಿಯುಂ ಕೇಟ್ಟಯರ್‌ವುತೀರ್ಮಿನೀರೇ ॥ 20

ಶಾತಿ-ಗುಣಂ-ಅಚ್ಚಿರಮಂ-ದೇಶ-ಕಾಲಂ-ದರುಮಂಗಳ್-ನಿಮಿತ್ತಂಗಳ್-ಮುದಲಾ-ಓದುಂ = ಬ್ರಾಹ್ಮಣಾದಿ ಜಾತಿಗಳೂ, ಜ್ಞಾನ-ಅಜ್ಞಾನ ಮೊದಲಾದ ಗುಣಗಳೂ (ಸತ್ವಾದಿಗಳೂ) ಬ್ರಹ್ಮಚರ್ಯಾದಿ ಆಶ್ರಮಗಳೂ, (ದಕ್ಷಿಣ ಉತ್ತರಾದಿ ದೇಶಗಳೂ) ಗ್ರಹಣಾದಿಕಾಲಗಳೂ ಅತಿಥಿಸತ್ಕಾರ, ಕುಟುಂಬಪಾಲನ, ಪಾಪಪುಣ್ಯಗಳುಳ್ಳಸ್ಥಿತಿಯೂ, ಬಾಲ್ಯಯೌವ್ವನಾವಸ್ಥೆಗಳೂ-ಮುದಲಾಹ-ಓದುಂ = ಮೊದಲಾದುವುಗಳಲ್ಲಿ, ಓದುಂ = ಹೇಳಲ್ಪಡುವ, ಒರು-ದಿರವಿಯ‍ರ್ತಾನ್ = ಒಂದೇ ವಸ್ತುವು ತಾನು ಪಿರಂದ್ = ಉಂಟಾಗಿ, ನಲಂ-ತೀಂಗಿನ್ನೈ-ಪೆತ್ತು-ನಿರ್ಕ್ಕುಂ = ಒಳ್ಳೆಯತನವನ್ನೂ ಕೆಟ್ಟತನವನ್ನೂ ಹೊಂದಿರುತ್ತದೆ. (ಇದಕ್ಕೆ ದೃಷ್ಟಾಂತ) ಪಾದಂ-ಮಿಶ್ಶೈ-ಪಿರಂದೋರ್ಕ್ಕು = ಪರಮಾತ್ಮನ ಪಾದಗಳಲ್ಲಿ ಜನಿಸಿದವರೆಂದು ಶ್ರುತಿಪ್ರಸಿದ್ಧರಾದ ಜಾತಿಯವರಿಗೆ, ಕಪಿಲೆಯಿನ್-ಪಾಲ್ = ಕೆಂದುಬಣ್ಣದ ಹಸುವಿನ ಹಾಲನ್ನು, ಪರುಹಿಡಿಲಾಹುದು-ಎನ್ರು = ಕುಡಿಯಬಾರದು ಎಂದು ಮರೈಯೋರ್=ಶೊನ್ನಾರ್ = ಶ್ರೋತ್ರಿಯರು ಹೇಳಿರುವರು. ಆದಲಿಲ್ = ಆದ್ದರಿಂದ, ನಾಳ್-ಓದಿ-ಉಣರ್‌ನ್ದವರ್-ಪಾಲ್-ಸಕಾಲದಲ್ಲಿ ಅಧ್ಯಯನಮಾಡಿ ಎಲ್ಲವನ್ನೂ ಅರಿತು ಅನುಭವಿಸಿರುವರ ಹತ್ತಿರ, ಎಲ್ಲಾ-ಅಡಿಕ್ಕಡಿಯುಂ-ಕೇಟ್ಟು = ಸಕಲ ವಿಷಯಗಳನ್ನೂ ಆಗಾಗ್ಗೆ ಕೇಳಿಕೇಳಿ, ಅಯರ್ವು = ಅಜ್ಞಾನವನ್ನು, ಉದಿರ್ ಮಿನೀರ್ = (ಸಂದೇಹವನ್ನು ಹೋಗಲಾಡಿಸಿಕೊಳ್ಳಿ).

ब्राह्मण्यादिनि राश्रमै रपि गुणै र्देशै र्निमितै स्तथा ।
कालै र्धर्मत आत्तभेद मपि च द्रव्यं यदेकं हितत् ।।
स्मृत्याद्युक्त मुपेत्य भाति सदसद्भावं त्विहोदाहृतिः ।
वेदज्ञैः कथिता न कापिलपय श्रीशङ्घ्रिजानामिति ।। १

अतो हि बहुधाधीतैः अनुभूतिरतै र्बुधैः ।
भूयो भूयोऽपि जिज्ञाय जहीनाज्ञानजं तमः ।। २०

ಮೂಲ : ಕಂಗಿರುಳಾಲ್ ವಿಡಿಯಾದ ವುಲಹುಕ್ಕೆಲ್ಲಾಂ
ಕೈ ವಿಳಕ್ಕಾ ಮಿವ್ವೈಯೆನ್ರು ಕಣ್ಣನ್ ಕಾಟ್ಟುಂ,
ಪೊಂಗುಪುಗಳಾಗಮಂಗಳ್ ತೆರಿಯಚ್ಚೊನ್ನ
ಪೊರುಳಿವೈನಾಂಪುಣ್ಣೆಯರ್‌ಪಾಲ್ ಕೇಟ್ಟುಚ್ಚೊನ್ನೋಂ,
ಮಂಗುಡಲುಂ ಪೊರುಳುಮಲ್ಲದರಿಯಾಮಾನ್ದರ್
ವಲ್ಲೆಯುಳಹಪ್ಪಟ್ಟು ವರಮ್ಬಳಿಯಾದೆನ್ರುಂ,
ಪಂಗಯಮಾದುತ್ತವರುಳಾಳರ್‌ತಮ್ಪಾಲ್
ಪತ್ತಿಮಿಹುಪವಿತ್ತಿರಂಗಳ್ ಪಯಿನ್ನಿನೀರೇ ॥ 21

ಶ್ರೀಮದಾಚಾರ್ಯರು ತಾವು ಈ ತ್ಯಾಜ್ಯೋಪಾದೇಯಗಳನ್ನು ಹಿರಿಯರ ಉಪದೇಶದಿಂದ ಗ್ರಹಿಸಿದುದಾಗಿಯೂ, ಸಂಗ್ರಹಿಸುದುದಾಗಿಯೂ ಹೇಳಿ ಎಲ್ಲರೂ ಹೀಗೆಯೇ ನಡೆದುಕೊಳ್ಳಬೇಕೆನ್ನುವರು. ಕಂಗಿರುಳಾಲ್-ವಿಡಿಯಾದ-ಉಲಹಕ್ಕೆಲ್ಲಾಂ = ಅಜ್ಞಾನಾಂಧಕಾರಿಂದ ಬೆಳಗಾಗದ (ಅಜ್ಞಾನ ಕವಿದ ಈ ಜಗಕ್ಕೆ) ಲೋಕಕ್ಕೆಲ್ಲಾ, ಇವ್ವೈ-ಕೈ-ವಿಳಕ್ಕು-ಆಂ-ಎನ್ರು = ಶ್ರುತಿಸ್ಮೃತಿಗಳಲ್ಲಿ ಹೇಳಿರುವ ವಿಷಯಗಳು ಕೈದೀವಿಗೆಯಾಗುವುದೆಂದು (ಮಾನಂ ಪ್ರದೀಪಮಿವ ಕಾರುಣಿಕೋದದಾತಿ'' ಎಂಬಂತೆ) ಕಣ್ಣ್ನ್-ಕಾಟ್ಟುಂ = ಶ್ರೀ ಕೃಷ್ಣನು ತೋರಿಸಿದ, ಪೊಂಗು-ಪುಗಳ್-ಆಗಮಂಗಳ್ = ಯಾವಾಗಲೂ ಹೊಗಳುವ ವೇದಗಳು. ತೆರಿಯ-ಶೊನ್ನ = ತಿಳಿಯುವಂತೆ ವಿವರಿಸಿ ಹೇಳಿದ, ಪೊರುಳ್-ಇವ್ವೈ = ಈ ಸಾರವಾದ ಅರ್ಥಗಳನ್ನು ನಾಂ-ಪುಣ್ಣೆಯರ್‌ಪಾಲ್-ಕೇಟ್ಟು-ಶೊನ್ನೋಂ =, ನಾವು ಅಂತ ಹಿರಿಯರಲ್ಲಿ ಕೇಳಿ ಹೇಳಿರುವೆವು. ಮಂಗುಡಲುಂ-ಪೊರುಳುಂ-ಅಲ್ಲದ್-ಅರಿಯಾ-ಮಾಂದರ್-ವಲ್ಲೆಯುಳ್ - ಆಹಪ್ಪಟ್ಟು-ವರಂಬಳಿಯಾದ್ = ನಶ್ವರವಾದ ಈ ದೇಹ ಮತ್ತು ಹಣವನ್ನು ಬಿಟ್ಟು ಬೇರೆಯಾವುದನ್ನೂ ಅರಿಯದ ಮಾನವರ ಬಲೆಗೆ ಸಿಕ್ಕಿ ಮರ್ಯಾದೆ ಮೀರದೆ, ಎನ್ರುಂ = ಎಂದೆಂದಿಗೂ, ಪಂಕಯ-ಮಾದು-ಉತ್ತ-ಅರುಳಾಳರ್-ತಂ-ಪಾಲ್-ಪತ್ತಿ-ಮಿಹು = ಪಂಕಜವಾಸಿನಿಯಾದ ಮಹಾಲಕ್ಷ್ಮಿಯು ನಿತ್ಯವಾಸಮಾಡುವ, ಪರಮ ದಯಾಳುವಾದ ವರದರಾಜನಲ್ಲಿ ಭಕ್ತಿಯನ್ನು ಹೆಚ್ಚಿಸುವಂತಹ, ಪವಿತ್ತಿರಂಗಳ್-ಪಯಿಲ್‌ಮಿನೀರ್ = (ಇಂತಹವೇ) ಪರಿಶುದ್ಧವಾದುವು ಎಂದು ಕೇಳಿ ತಿಳಿದುಕೊಳ್ಳಿರಿ.

गाढाज्ञानान्धकारावृतजगति नृणां ज्ञानदा निष्प्रभाते ।
एते हस्तप्रदीपा स्स्युरिति निगदितान् वासुदेवेन नित्यैः ॥

ख्यातै र्वेदै रिहोक्तान् वय मतिशयितान् सारभूतान् निशम्य ।
श्रेष्ठानां सन्निधाने सुविशद मवदामात्मभाग्याच्च सन्तः ।। १

विनाशि हि शरीर मप्यथ विनाश्य मर्थं विना ।
परं त्वनभिजानता मवशगा स्स्वमर्यादया ।।
सहैव करुणानिधेः कमलवासिनीवक्षसः ।
ह्यवाप्नुत च भक्तिदान् पदयुगे विमृश्योत्तमान् ।। २१

॥ श्रीमते निगमान्तमहोदेशिकाय नमः ॥

कृतो वेदान्तार्यैः द्रविडवचसाऽहारन्नियमः ।
श्रुतिस्मृत्याद्युक्तो निखिलसुजनार्थं हि तमिमम् ।
श्रितो गोपालार्यः श्रुतिशिखर रामानुजगुरुं ।
व्यधात् सन्मोदार्थं विवृतिमहितं श्लोकसहितम् ।।

॥ಶ್ರೀಃ॥

# ಪಿಳ್ಳೈಯಂದಾದಿ

श्रीतूप्पुल्निगमान्तदेशिकपरां गाथामयीं संस्तुतिं ।
रम्यां श्रीवरदाह्वयेन रचितां गीतां पितु श्चाग्रतः ।।
अद्याचार्यततिं प्रणम्य शिरसा दैव्या गिरा भव्यया ।
व्यातन्वेऽह मुदारतत्करुणया गोपालसूरि र्मुदा ।।

ಶ್ರೀಮನ್ನಿಗಮಾಂತ ಮಹಾದೇಶಿಕರು ಅವತರಿಸಿ ಇಂದಿಗೆ 690 ವರ್ಷಗಳಾದುವು. ಇವರ ಪುತ್ರರೇ ಪ್ರಕೃತ ಈ ದಿವ್ಯ ಪ್ರಬಂಧಕರ್ತಾ. ಇವರು ಜನ್ಮತಾಳಿ ಇಂದಿಗೆ 643 ವರ್ಷಗಳಾದವು. ಇವರಿಗೆ ''ವರದಾಚಾರ್ಯ'' ''ನಯಿನಾರಾಚಾರ್ಯ'' ಎಂಬ ಹೆಸರುಗಳಿವೆ. ''ಪಿತುಃಶತಗುಣಃಪುತ್ರಃ'' ಎಂಬುದು ಇವರಲ್ಲಿ ಅಕ್ಷರಶಃ ಸತ್ಯ. ತಂದೆಯವರಾದ ಶ್ರೀ ದೇಶಿಕರಲ್ಲಿ ''ಶ್ರೀಭಾಷ್ಯ'' ಕಾಲಕ್ಷೇಪಮಾಡಲು ತೊಡಗಿದಾಗ ಆವರೆಗೆ ಹೇಳಲ್ಪಡುತ್ತಿದ್ದ ''ನಮಃಪದಮಿದಂ ಭೂಯಾತ್ .... ಇದಂ ಜಗತ್॥'' ಎಂಬುದರೊಡನೆ 'ಶ್ರೀಮಾನ್ ವೆಂಕಟನಾಥಾರ್ಯಃ ...... ಹೃದಿ ॥ ಎಂಬ ಸ್ವತಃ ಮಾಡಿದ ಧ್ಯಾನಶ್ಲೋಕವನ್ನೂ ಹೇಳಿದರು. ಅದೇ ಇಂದೂ ಹೇಳಲ್ಪಡುತ್ತಿದೆ. ಶ್ರೀ ದೇಶಿಕರ ಮಹಿಮೆಯನ್ನು ''ಪಿಳ್ಳೈಯಂದಾದಿ''ಯಲ್ಲಿ ಕೊಂಡಾಡಿರುವರು. ಅದು ತಿಳಿಯಾದ ತಮಿಳಿನಲ್ಲಿದೆ. ಅವರೆದುರಿನಲ್ಲೇ ಪಾಡಿ, ಶ್ರೀ ರಾಮಾನುಜರನ್ನು ''ಅಮುದನಾರ್''ರವರು ಪಾಡಿ ಕೀರ್ತಿ ಪಡೆದಂತೆ, ಶ್ರೀ ದೇಶಿಕರ ಕೃಪೆಯ ಮೂರ್ತಿಗಳಾದರು.

ಕನ್ನಡನಾಡಿನ ರಸಿಕರು ತಮಿಳಿನ ರಸವನ್ನು ಸವಿಯುವಂತಾಗಲೆಂದು ಯತ್ನಿಸಿದೆ. ಇದು ಶ್ರೀಮದಾಚಾರ್ಯರ ಕೃಪೆಯಿಂದಲೂ, ಸದಭಿಮಾನಿಗಳ ನೆರವಿನಿಂದಲೂ ಪೂರ್ಣಗೊಂಡು ಸಕಲರ ಶ್ರೇಯಸ್ಸಿಗೆ ಕಾರಣವಾಗಲೆಂದು ಪ್ರಾರ್ಥಿಸುತ್ತೇನೆ.

ಶಾರ್ವರಿ-ಜ್ಯೇಷ್ಠ
1960

*ಇತಿ, ಸದಾಚಾರ್ಯದಯಾವಲಂಬೀ*

**ವಿದ್ವಾನ್ ಹ- ಗೋಪಾಲಾಚಾರ್ಯಃ**
ನಂ. 14, 4ನೇ ಕ್ರಾಸ್, ಕಾಳಿದಾಸ ರಸ್ತೆ,
ವಾಣಿವಿಲಾಸ ಮೊಹಲ್ಲ, ಮೈಸೂರು

॥ಶ್ರೀಃ ॥

# ಪಿಳ್ಳೈಯಂದಾದಿ

## (ತನಿಯರ್)

## (ತಿರುಮಲೈ ಎಂಬೆರುಮಾನಾರಪ್ಪ್ ಅರುಳಿಚ್ಚೆಯ್ದದ್)

ಮೂಲ : ಶೀರಾರ್‌ತೂಪ್ಪಲ್ ಪಿಳ್ಳೈಯಂದಾದಿಯೆನ್ರ್ ಶೆಳುಂದಮಿಳಾಲ್,
ನೇರಾಹವೇದಾಂತದೇಶಿಕರ್ ತಾಳಿಣೈಕ್ಕೀಳ್‌ಮೊಳಿನ್ದಾನ್,
ಏರಾರ್‌ಮರೈಪ್ಪೊರುಳೆಲ್ಲಾಮೆಡುತ್ತಿವ್ವುಲುಹುಕ್ಕುಯ್ಯವೇ,
ಶೀರಾಹಿಯ ವರದಾರ್ರಿಯನ್ ಪಾದಂ ತುಣೈನಮಕ್ಕೇ ॥

ಭಾವಾರ್ಥ :- ವೇದಂಗಳಿಣ್ ಪೊರುಹಳ್ ನಿರೈಂದಿರುಪ್ಪದುಂ, ಶೆವಿಕ್ಕ್ ಇನಿದಾಯುಂ, ತಂ ತಂದೈಯಾರಾನ ''ತೂಪ್ಪುಲ್‌ಪಿಳ್ಳೈಯೆನ್ರ್ ಪೇರುಡೈಯ ನಿಗಮಾಂತದೇಶಿಕರ್ ವಿಷಯಮಾನ ಶೆಂದಮಿಳ್‌ಪಾಶುರಂಗಳಾಯುಂಯಿರುಕ್ಕುಂ ಪಿಳ್ಳೈಯಂದಾದಿಯೈ'' ಇಮ್ಮಾನಿಡರ್ಗಿ ನನ್ಮೈಕ್ಕಾಹ, ಶ್ರೀ ದೇಶಿಕರ್ ತಿರುವಡಿಮಲರ್ ಹಳಿಲ್ ಭಕ್ತಿಯಾಲೇ ಪಾಡಿನ, ನಲ್ಲಗುಣಂಗಳೇ ಉರುವಂಪೆತ್ತ್ ವಂದವ ತರಿತ್ತಿರುಕ್ಕುಂಪಡಿ ಇರುಕ್ಕಿರ ವರದಾಚಾರ್ಯರ್ಗಿ ತಿರುವಡಿಹಳೇ ಅಡಿಯೇಂಗಳುಕ್ಕು ತುಣೈ.

ಅರ್ಥ :- ಶೀರ್-ಆಹಿಯ = ಸದ್ಗುಣಗಳೇ ಆಕಾರವೆತ್ತಿ ಬಂದಂತಿರುವ, ವರದಾರಿಯನ್ = (ನಿಗಮಾಂತದೇಶಿಕರ ಕುಮಾರರು) ವರದಾಚಾರ್ಯರು, ಶೀರ್-ಆರ್ = ಸದ್ಗುಣಗಳಿಂದ ತುಂಬಿದ, ತೂಪ್ಪುಲ್ = ತೂಪ್ಪುಲಗ್ರಹಾರದ, ವೇದಾಂತ ದೇಶಿಕರ್ = ವೇದಾಂತಾಚಾರ್ಯರ, ತಾಳ್-ಇಣೈ-ಕೀಳ್ = ಪಾದಗಳೆರಡರ ವಿಷಯವಾಗಿ, ನೇರಾಹ = ಸಾಕ್ಷಾತ್ತಾಗಿ, ಇ-ಉಲಹಕ್ಕ್-ಉಯ್ಯವೇ = ಈ ಜಗತ್ತಿನ ಜನರ ಶ್ರೇಯಸ್ಸಿಗಾಗಿ, ಏರ್-ಆರ್-ಮರೈ-ಪೊರುಳ್-ಎಲ್ಲಾಂ = ಉಪನಿಷತ್ತುಗಳಲ್ಲಿ ತುಂಬಿರುವ ಸಾರಾರ್ಥಗಳೆಲ್ಲವನ್ನೂ, ಎಡುತ್ತ್ = ಉದ್ಧರಿಸಿ, ಶೆಳುಂ-ತಮಿಳಾಲ್ = ಮನೋಹರವಾದ ತಮಿಳಿನಲ್ಲಿ, ಪಿಳ್ಳೈ-ಅಂದಾದಿ ಎನ್ರ್ = ''ಪಿಳ್ಳೈಯಂದಾದಿ'' ಎಂದು (ಪ್ರಖ್ಯಾತವಾದ ಗ್ರಂಥವನ್ನು) ಮೊಳಿಂದಾರ್ = ಹೇಳಿರುವರು. (ಅಂತಹ ವರದಾಚಾರ್ಯರ) ಪಾದಂ = ಪಾದಗಳು, ನಮಕ್ಕೇ = (ಅವರನ್ನೇ ನಂಬಿರುವ) ನಮಗೇ, ತುಣೈ = ಸಹಾಯವು.

श्रीतूप्पुल्प्रियनन्दनांघ्रियुगलस्यान्तादिका गाथिकाः
लोकोज्जीवनहेतुत श्श्रुतिनिगूढार्थान्विता द्राविडीः ।

भक्त्या यो विरचय्य कर्णमधुरं तत्संन्निधौ सञ्जगौ
मित्रं तस्य गुणाकृते श्च वरदाचार्यस्य पादौ हि नः ॥

ಮೂಲ : ಮಾಮಲರ್ ಮನ್ನಿಯಮಂಗೈ ಮಹಿಳ್‌ನ್ದುರೈಮಾರ್ಬಿನ್ರ್ತಾಳ್,
ತೂಮಲರ್‌ಶೂಡಿಯ ತೊಲ್ಲರುಳ್‌ಮಾರ್ರ ತುಣೈಯಡಿಕ್ಕೀಳ್,
ವಾಳ್‌ವೈಯುಹಕ್ಕುಂ ಇರಾಮಾನುಶಮುನಿವಣ್ಮೈಪ್ಪೋತ್ತುಂ,
ಶೀರ್ಮೈಯರ್ ಎಂಗಳ್ ತೂಪ್ಪುಲ್ ಪಿಳ್ಳೈಪಾದಂ ಎರ್ಶೆನ್ನಿಯದೇ ॥

ಭಾವಾರ್ಥ :- ತಾಮರೈಪ್ಪೂವಿಲ್‌ವಸಿಕ್ಕುಂಪೆರಿಯಪಿರಾಟ್ಟಿಯಾಲೇ ವಿಳಂಗುಂ ತಿರುಮಾರ್ಬುಡೈಯ ಎಂಬೆರುಮಾರ್ ತಿರುವಡಿಮಲರ್‌ಹಳೈ ತಂತಲೈಯಿಲ್ ದರಿತ್ತವರುಂ, ಏರಾಳಮಾನ ಅರುಳಿರುಪ್ಪವರುಮಾನ ನಮ್ಮಾಳ್ವಾರಿನ್ ತಿರುವಡಿ ಮಲರ್‌ಹಳಿರ್ ಕೀಳ್ ವಾಳ್‌ವದೈಯೇ ವಿರುಂಬುಂ (ಆಶೈಪ್ಪಡುಂ) ಎಂಬೆರುಮಾನಾರುಡೈಯ ಅದ್ಭುತಮಾನ ಔದಾರ್ಯಗುಣತ್ತೈ ತುದಿಕ್ಕುಂ ತೂಪ್ಪಿಲ್‌ಪಿಳ್ಳೈಯಿನ್ ತಿರುವಡಿಮಲರ್‌ಹಳ್ ಅಡಿಯೇನ್ ತಲೈಯಿಲೇಯೇ ನಿಲೈಪೆತ್ತಿರುಕ್ಕಿನ್ರನ

ಅರ್ಥ :- ಮಾ-ಮಲರ್ = ಮಹತ್ತಾದ ತಾವರೆ ಹೂವಿನಲ್ಲಿ, ಮನ್ನಿಯ = ನಿತ್ಯವಾಸಮಾಡುವ, ಮಂಗೈ = ಮಹಾಲಕ್ಷ್ಮಿಯು, ಮಹಿಳ್‌ನ್ದ್-ಉರೈ-ಮಾರ್ಬಿನನ್ = (ಎಂದಿಗೂ ಅಗಲಿರಲಾರೆನೆಂದು) ಅತಿಸಂತೋಷದಿಂದ ನಿತ್ಯವಾಸಮಾಡುವ ವಕ್ಷಸ್ಥಳವುಳ್ಳ ಭಗವಂತನ, ತಾಳ್-ತೂ-ಮಲರ್ = ಪರಮಪಾವನವಾದ ಪಾದಾರವಿಂದಗಳನ್ನು, (ನಮ್ಮ ತಲೆಯಮೇಲೆ) ಶೂಡಿಯ = ಮುಡಿಸಿಕೊಂಡಿರುವ, ತೊಲ್-ಅರುಳ್ = ಅಪಾರಕರುಣೆಯುಳ್ಳ, ಮಾರನ್ = ನಮ್ಮಾಳ್ವಾರರ, ತುಣೈ-ಅಡಿ = ಎರಡು ಅಡಿಗಳ, ಕೀಳ್ = ಕೆಳಗೆ, ವಾಳ್‌ವೈ = ಬಾಳುವುದನ್ನೇ (ಅದಲ್ಲದೆ ಮತ್ತಾವುದನ್ನೂ ಬಯಸದೆ) ಉಹಕ್ಕುಂ = ಬಹಳ ಆಸೆಪಡುವ, ಇರಾಮಾನುಶ-ಮುನಿ = ಶ್ರೀರಾಮಾನುಜಾಚಾರ್ಯರ, ವಣ್ಮೈ = ಔದಾರ್ಯಾದಿ ಸದ್ಗುಣಗಳನ್ನೂ, ಪೋತ್ತುಂ = (ನಿತ್ಯವೂ) ಪೊಗಳಿ ಅನುಸಂಧಾನ ಮಾಡುವ, ಶೀರ್ಮೈಯನ್ = ಐಶ್ವರ್ಯವನ್ನು ಪಡೆದಿರುವ, ಎಂಗಳ್ = ನಮ್ಮ, ತೂಪ್ಪುಲ್-ಪಿಳ್ಳೈ = ಶ್ರೀ ನಿಗಮಾಂತ ದೇಶಿಕರ, ಪಾದಂ = ಪಾದಗಳು, ಎರ್ = ನನ್ನ, ಶೆನ್ನಿಯದ್ = ತಲೆಯಮೇಲೆ ಬೆಳಗಿರತಕ್ಕವು.

राजीवान्तर्निवासानिशवसतिसमुल्लासिवक्षस्स्थलश्री-
कान्तांघ्र्यब्जोत्तमाङ्गानवधिककरुणश्रीशठार्यंघ्रियुग्मे ।
श्रीमद्रामानुजस्याभिलषितवसतेरद्भुतौदार्यशंसि-
त्रस्मत्तूप्पुल्सुतस्यानघचरणयुगं राजते मस्तके मे ॥ २

ಮೂಲ : ಶೆನ್ನಿವಣಂಗಚ್ಚಿರುಪನಿಶೋರ ಎರ್ ಕಣ್ಣಿಣ್ಣೈಹಳ್,
ವೆನ್ನರಕಂಗಳುಂವೀಯ ವಿಯರ್ಗತಿ ಯಿನ್ಬಮೇವ,
ತುನ್ನುಪುಹಳುಡೈತ್ತೂಪ್ಪುಲ್ ದುರಂದರನ್ ತೂಮಲರ್ತ್ತಾಳ್,
ಮನ್ನಿಯನಾಳ್‌ಹಳು ಮಾಹುಂಗೊಲ್ ಮಾನಿಲತ್ತೀರ್ ನಮಕ್ಕೇ ॥

ಭಾವಾರ್ಥ :- ನಮದ್ ತಲೈಹಳ್ ಶ್ರೀ ದೇಶಿಕರ್ ತಿರುವಡಿಹಳಿಲ್ ವಣಂಗಿರುಕ್ಕುಂಪಡಿಯಾಹವುಂ, ಕಣ್‌ಗಳ್ ಆನಂದಕ್ಕಣ್ಣೀರ್ ಪೆರುಕ್ಕುಹಳ್ಳೈ ಉಡೈಯನವೈಯಾಹವುಂ. ವಲ್‌ವಿನೈಹಳ್ ಅತ್ತನೈಯುಂ ನಶಿತ್ತು ಪೋಂಪಡಿಯಾಹವುಂ, ಪರಮಪದತ್ತಿಲ್ ಆನಂದಂ ಕರೈಪೆರಂಡ್ ಪೆರುಹುಂಪಡಿಯಾಹವುಂ, ತೂಪ್ಪುಲ್ ಪಿಳ್ಳೈಯಾನ ನಿಗಮಾಂತಗುರುವಿನ್ ತಿರುವಡಿಮಲರ್‌ಹಳ್ ಎಪ್ಪೋದುಂ ನಮ್ ಶೆನ್ನಿಮೇಲ್ ಶೆನ್ರುಪೊರುಂದಿರುಕ್ಕುಂ ನರ್ಕಾಲಮುಂ ವರುಮಾ ? ಓ ಉಲಹಿಯರೇ ! ಅದ್ ಎಪ್ಪೋದು ವರುಂ ?

ಅರ್ಥ :- ಶೆನ್ನಿ = (ನಮ್ಮ) ತಲೆಗಳು, (ಶ್ರೀದೇಶಿಕರ ಪಾದಗಳಿಗೆ) ವಣಂಗ = ಬಾಗಿರುವಂತೆಯೂ, ಎರ್ = ನನ್ನ , ಕಣ್-ಇಣೈಹಳ್ = ಕಣ್ಣುಗಳೆರಡೂ, ಶಿರು-ಪನಿ-ಶೋರ = ಆನಂದಬಾಷ್ಪವನ್ನು ಸುರಿಸುವಂತೆಯೂ, ವೆಂ-ನರಕಂಗಳುಂ = ಅತಿ ಕ್ರೂರವಾದ ಪಾಪಗಳೆಲ್ಲವೂ, ವೀಯ = ನಶಿಸಿಹೋಗುವಂತೆಯೂ, ವಿಯರ್-ಗತಿ = ಪರಮಪದದ, ಇನ್ಬಂ = ಆನಂದವು, ಏವ = ಎಲ್ಲೆಮೀರಿ ಹರಿಯುವಂತೆಯೂ, ತುನ್ನು-ಪುಹಳ್-ಉಡೈ = ಪ್ರಖ್ಯಾತ ಕೀರ್ತಿಯುಳ್ಳ, ತೂಪ್ಪುಲ್-ದುರಂ-ದರರ್ = ತೂಪ್ಪುಲ್ ದೇಶಿಕವರ್ಯರ, ತೂ-ಮಲರ್-ತಾಳ್ = ಪಾವನವಾದ ಪಾದಾರವಿಂದಗಳೇ (ಪ್ರಾಪ್ಯವೂ ಪ್ರಾಪಕವೂ ಆಗಿರುವಂತಹ) ಮನ್ನಿಯ = ಶಾಶ್ವತವಾದ, ನಾಳ್‌ಹಳುಂ = ದಿವಸಗಳೂ, ನಮಕ್ಕೇ = ನಮಗೇನೇ, ಮಾನಿಲತ್ತೀರ್ = ವಿಶಾಲ ಜಗತ್ತಿನ ನಿವಾಸಿಗಳೇ ! (ಇಂತಹವು ಎಂದಾದರೂ ಎಲ್ಲಾದರೂ) ಆಹುಂಗೋಲ್ = ಬರುವುವೋ ? (ಹೇಳಿ)

यद्वन्मूर्धा नमेन्नो गुरुचरणयुगं मानवा ! नेत्रयुग्मं
आनन्दाश्रुप्रवर्षं सतत मनुभवेत् तीव्रदुःखं प्रणश्येत् ।
व्योम्न्यानन्दः परे स्यात् परम उरुयशस्तूप्पुलग्रेसरस्य
तद्वन्नित्यं पदाब्जं शिरसि सुनिहितं नः कदा वा भवेन्नु ।। २

ಮೂಲ : ಮಾನಿಲತ್ತೋದಿಯ ಮಾಮರೈಮನ್ನಿಯ ನರ್ಕಲೈಹಳ್,
ಆನವೈಶೆಯ್ಯು ಮರುಂ ಪೊರುಳತ್ತನೈಯೇ ಯರುಳುಂ,

**ತೂನೆರಿಕಾಟ್ಟುಂ ಇರಾಮಾನುಶಮುನಿತೋತ್ತಿರಂ ಶೆಯ್,**
**ಊನಮಿಲ್ ತೂಪ್ಪುಲಯ್ಯನೋರ್‌ಪುಹಳನ್ರಿ ಉಯ್‌ವಿಲ್ಲೈಯೇ ॥3**

ಭಾವ :- ಜೀವಾತ್ಮಾಕ್ಕುಳುಕ್ಕ್ ನನ್ಮೈಕೊಡುಕ್ಕುಂವೇದ ವೇದಾಂತಗಳಿಲುಂ, ಮಟ್ರ ಶಾಸ್ತ್ರಂಗಳ್ ಮುಳುದಿಲುಮುಳ್ಳ ಉಣ್ಮೈಯಾನಪ್ಪೊರುಳ್ ಉರೈಪ್ಪವರುಂ, ನಲ್ಲ ವಳಿ ಕಾಣ್ಬಿಪ್ಪವರುಂ ನಂ ಎಂಬೆರುಮಾನಾರಾನ ರಾಮಾನುಶರ್, ಅಂದ ಮಹಾನ್ಯೆ ಎಪ್ಪೋದುಂ ಪುಹಳುಮವರ್ ನಂ ತೂಪ್ಪುಲ್ ಪಿಳ್ಳೈಯೆನ್ನುಂ ಶ್ರೀದೇಶಿರ್ಕ, ಇವ್ವಿದಮಾಯಿರುಕ್ಕುಂ ಆಚಾರ್ಯನ್ಯೆ ಕೊಂಡಾಡುವದ್ಯೆಕ್ಕಾಟ್ಟಿಲುಂ ವೇರೊನ್ರು ಉಜ್ಜೀವಿಪ್ಪಿಕ್ಕುಂವಹೈ ಭಾಗ್ಯರ್ವಾಹಳುಕ್ಕು ಏದುಂ ಇಲ್ಲೈ.

ಅರ್ಥ :- ಮಾನಿಲತ್ತ್ = ವಿಶಾಲ ಜಗತ್ತಿನಲ್ಲಿ, ಓದಿಯ = (ನಿಯಮದೊಡನೆ) ಅಧ್ಯಯನ ಮಾಡುವ, ಮಾ-ಮರ್ಕೈ = ವೇದಗಳು, (ಮತ್ತು) ಮನ್ನಿಯ = ನಿತ್ಯವಾದ, ನಲ್-ಕಲೈಹಳ್ = ಒಳ್ಳೆಯ ಶಾಸ್ತ್ರಗಳು, ಆನ = ಆದ, ಅವ್ವೈ = ಅವೆಲ್ಲವೂ, ಶೆಯ್ಯುಂ = ಮಾಡುವ (ವಶೀಕರಿಸುವ) ಅರುಂ-ಪೊರುಳ್-ಅತ್ತನ್ಯೆಯುಂ = ತಾತ್ವಿಕವಾದ ಸಾರಾರ್ಥವಪ್ಪನ್ನೂ, ಅರುಳುಂ = ಕರುಣಿಸುವ, ತೂ-ನೆರಿ-ಕಾಟ್ಟುಂ = ಪರಿಶುದ್ಧವಾದ (ಶರಣಾಗತಿಯೆಂಬ) ಮಾರ್ಗವನ್ನು ತೋರುವ, ಇರಾಮಾನುಶಮುನಿ = ಶ್ರೀರಾಮಾನುಜರ, ತೋತ್ತಿರಂ = ಪೊಗಳಿಕೆಯನ್ನು, ಶೆಯ್ = ಗೈಯ್ಯುವ, ಊನಂ-ಇಲ್ = ಯಾವವಿಧಕೊರತೆಯೂ ಇಲ್ಲದ, ತೂಪ್ಪುಲ್-ಅಯ್ಯನ್ = ತೂಪ್ಪುಲ್ ಸ್ವಾಮಿಯಾದ ದೇಶಿಕರ, ಓರ್ = ಅಸಮಾನವಾದ, ಪುಹಳ್ = ಸ್ತೋತ್ರಮಾಡುವುದೊಂದು ಅನ್ರಿ = ಹೊರತು (ಮತ್ತಾವ) ಉಯ್ವ್ = ಉಜ್ಜೀವಿಸುವ ದಾರಿ, ಇಲ್ಲೈ = ಇಲ್ಲವೇ ಇಲ್ಲ.

**जीवोज्जीवप्रवृत्तश्रुतिनिवहविद शशास्त्रसन्दोहवेत्तुः**
**सम्यक् तत्वार्थबोद्धु श्शरणवरणसन्दर्शिनो योगिनेतुः ।**
**श्रीमद्रामानुजस्य स्तुति मनवरतं कुर्वत स्तूप्पुलिन्दोः**
**गानात् श्रेयःप्रदानात् परमिह परतो नोऽस्ति नोजीवनार्थम् ।। ३**

ಮೂಲ : **ಉಯ್ಯುಂ ವಹೈಯಿಲ್ಲೈ ಉತ್ತರವೇದಿಯಿಲ್ ವಂದುದಿತ್ತ,**
**ಶೆಯ್ಯವಳ್‌ಮೇವಿಯ ಶೀರರುಳಾಳರೈ ಚ್ಚಿಂದ್ಯೆ ಶೆಯ್ಯುಂ,**
**ಮೆಯ್ಯವನೆಂದ್ಯೆ ಇರಾಮಾನುಶನರುಳ್ ಮೇವಿವಾಳುಂ,**
**ಅಯ್ಯನಿಲಂಗು ತೂಪ್ಪುಲ್ ಪಿಳ್ಳೈಯಾಯ್‌ನ್ದ ಪೊರುಳನ್ನಿಯೇ ॥ 4**

ಭಾವಾರ್ಥ :- ಕಾಂಚಿಯಿಲ್ ವಿಳಂಗುಂ ಪರದೈವಂ ಪೇರರುಳಾಳರ್ ವರದನ್. ಅಂದಪ್ಪೆರುಮಾಳ್ ಮೀರ್ಗ ಬ್ರಹ್ಮಾವೇ ವಂದ್ ನೆರ್ರೈವೇತ್ತಿನ ಯಾಗತ್ತಿಲ್ ಯಾಗ ವೇದಿಯುಳ್ ಉದಿತ್ತವರ್, ಅಪ್ಪೆರುಮಾಳೈ ಎಪ್ಪೋದುಂ ನಿನ್ನೈಂಬವರುಂ, ಉಣ್ಮೈಯಾನ ಒಳುಕ್ಕತ್ತೈಯೇ ಉಡೈಯವರುಮಾನವರ್ ನಮ್ಮುಡೈಯವರಾನ ರಾಮಾನುಶರ್, ಇವರುಡೈಯ ಅರುಳೈಯೇ ವಾಳ್ಹೈಕ್ಕ್ ಮುಖ್ಯ ಕಾರಣಮಾಹಕ್ಕೊಂಡವರ್, ಬ್ರಹ್ಮತೇಜಸ್ಸಿ ನಿನ್ರುಂ ವಿಳಂಗುಂ ತೂಪ್ಪುಲಿಲ್ ಅವತರಿತ್ತವರ್ ನಂ ದೇಶಿಕರ್, ಇಂದ ಮರ್ಹಾ ಅರುಳಿಚ್ಚೆಯ್ದ ಅರುಮೈಯುಂ, ಪೆರುಮೈಯುಂ, ಉಣ್ಮೈಯುಮಾನ ಶಾಸ್ತ್ರಾರ್ಥಂಗಳೈತ್ತವಿರ ಇವ್ವುಲಹತ್ತಿಲ್ ನಮಕ್ಕ್ ಉಜ್ಜೀವಿಕ್ಕವಳಿ ವೇರೊನ್ರಿಲ್ಲೈ.

ಅರ್ಥ :- ಉತ್ತರವೇದಿಯಿಲ್ = (ಬ್ರಹ್ಮನು ಮಾಡಿದ ಯಾಗದ) ಉತ್ತರ ವೇದಿಕೆಯಲ್ಲಿ, ವಂದ್ = (ಅರ್ಪಿಸಿದ ಆಹುತಿಯ ಪರಿಮಳಾದಿ ಗುಣಗಳಿಗೆ ಪರವಶನಾಗಿ) ಬಂದು, ಉದಿತ್ತ = ಉದಯಿಸಿದ, ಶೆಯ್ಯವಳ್-ಮೇವಿಯ = ಮಹಾಲಕ್ಷ್ಮಿಯೊಡನೆ ಕೂಡಿದ, ಶೀರ್ = ಕಲ್ಯಾಣಗುಣಗಳುಳ್ಳ, ಅರುಳಾಳರೈ = ಕರುಣಾಳು ವರದರಾಜನನ್ನು, ಚಿಂದೈ-ಶೆಯ್ಯುಂ = ಅನವರತವೂ ಧ್ಯಾನಿಸುವ, ಮೆಯ್ಯರ್ವ = ಸತ್ಯನಿಷ್ಠರಾದ, ಎಂದೈ = ನಮ್ಮ ರಕ್ಷಕನಾದ, ಇರಾಮಾನುಶರ್ = ಶ್ರೀ ರಾಮಾನುಜರ, ಅರುಳ್-ಮೇವಿ-ವಾಳುಂ = ದಯೆಯನ್ನೇ ಸಾಧನವಾಗಿ ಮಾಡಿಕೊಂಡು ಬಾಳುವ, ಅಯ್ಯರ್-ಇಲಂಗ್ = ಬ್ರಹ್ಮತೇಜಸ್ಸಿನಿಂದ ಪ್ರಕಾಶಮಾನವಾದ, ತೂಪ್ಪುಲ್ = ತೂಪ್ಪುಲಗ್ರಹಾರದ, ಪಿಳ್ಳೈ = ''ಕುಮಾರ''ಎಂದು ಖ್ಯಾತರಾದ ದೇಶಿಕ ಸಾರ್ವಭೌಮನು, ಆಯ್‌ನ್ದ = ಹೇಳಿದ, ಪೊರುಳ್-ಅನ್ರಿ = (ಭಗವಂತನು ''ಶರಣಂವ್ರಜ'' ಎಂದು ಗೀತೆಯಲ್ಲಿ ಹೇಳಿದ) ಶರಣಾಗತಿ ಮಾರ್ಗವನ್ನು ಬಿಟ್ಟು, (ಈ ನಮಗೆ ಬೇರೆ ಯಾವ) ಉಯ್ಯುಂ = ಉಜ್ಜೀವಿಸುವ, ವಹೈ = ದಾರಿಯು, ಇಲ್ಲೈ = ಇಲ್ಲವೇ ಇಲ್ಲ, (ಆದ್ದರಿಂದಲೇ ಈ ಮಹಿಮೆಯನ್ನು ಎಲ್ಲರೂ ಶರಣುಹೊಂದಬೇಕೆಂಬ ಭಾವ).

**वेद्यां कस्योत्तरायां उदित उरुदयं ध्यायत: श्रीधरं तं**
**सत्यैकालम्बिशीलोत्तरमुनितिलकस्यार्यरामानुजस्य ।**
**कारुण्यं ह्यात्मजीवातुरिति दृढधिया ब्रह्मतेजस्वितूप्पुल्-**
**नन्देनोक्तात् कलौघात् पर मिह न भवेत् अस्मदुत्तारतन्त्रम् ॥ ४**

ಮೂಲ : ಅನ್ರಿವ್ವುಲಹಿನ್ನೈಯಾಕ್ಕಿ ಅರುಂ ಪೊರುಳ್ ನೂಲ್ ವಿರಿತ್ತ್,
ನಿನ್ರ್ ತನ್ನೀಳ್‌ಪುಹಳ್ ವೇಂಗಡಮಾಮಲೈಮೇವಿಪ್ಪಿನ್ನುಂ,
ವೆನ್ರಿಪ್ಪುಹಳ್ ತಿರುವೇಂಗಡನಾದನೆನುಂ ಗುರುವಾಯ್,

ನಿನ್ರು ನಿಹಳ್‌ನ್ದ್‌ಮಣ್‌ಮೇಲ್ ನಿನ್ರನೋಯ್‌ಹಳ್
ತವಿರ್‌ತ್ತನನೇ ॥ 5

**ಭಾವಾರ್ಥ :-** ಸರ್ವಶರಣ್ಯರ್ ಶ್ರೀಮನ್ನಾರಾಯಣರ್ ಇವ್ವುಲಹತ್ತೈ ಸೃಷ್ಟಿತ್ತಾರ್, ಉಡನೇ ಸತ್ವಗುಣ ಪರಿಪೂರ್ತಿಯುಳ್ಳ ಶಾಸ್ತ್ರಂಗಳೈ ಪೇರರುಳಾಲೇ ವೆಳಿಯಿಟ್ಟಾರ್, ಸಕಲ ಜೀವರ್‌ಹಳುಂ ಉಯ್‌ವದರ್ಕ್ಕಾಹವೇ ಸರ್ವೋತ್ತಮಮಾನ ತಿರುವೇಂಗಡ ಮಾಮಲೈಯಿಲ್ ತಿರುವೇಂಗಡ ಮುಡಿಯನಾಹವೇ ವಂದ್ ತೋನ್ರಿನಾರ್, ಪಿನ್ಬುಂ ಮಿಹವುಂ ಒಶಂದದಾಯುಂ ತೋನ್ರುಂ ತೂಪ್ಪುಲಿಲ್ ತಿರುವೇಂಗಡನಾದನೆನುಂಗುರುವಿರ್ ಉರುವತ್ತೈ ದರಿತ್ತ್ ಅವತರಿತ್ತ್ ಇಂದ ಮಾನಿಡತ್ತಿಲ್ ನೆಡುಂಕಾಲಮಾಹ ನಿನ್ರಿರುಂದ ನೋಯ್‌ಹಳೈ ನೀಕ್ಕಿ ಯರುಳಿನಾರ್ (ದೇಶಿಕರ್ ದರ್ಶನದೇಶಕನಾಹವುಂ ಲೋಕದೇಶಿಕನಾಹವುಂ ವಿಳಂಗುವುದೇ ಇಕ್ಕಾರಣತ್ತೈ ಪೋಷಿಕ್ಕುಂ)

**ಅರ್ಥ :-** (ಶ್ರೀಮನ್ನಾರಾಯಣನು) ಅನ್ರು = ಅಂದು (ಸೃಷ್ಟಿಮಾಡಿದಾಗ) (ಚೇತನರಲ್ಲಿ ಬಹುಕರುಣೆಯಿಂದ) ಇ-ಉಲಹಿನ್ನೈ = ಈ ಲೋಕವನ್ನು, ಆಕ್ಕಿ = ಸೃಷ್ಟಿಸಿ, (ಈ ಲೋಗರ ಆಚರಣೆಗೆ ಪ್ರಮಾಣವಾದ) ಅರುಂ-ಪೊರುಳ್ = ಧರ್ಮಾನುಷ್ಠಾನವನ್ನು ತಿಳಿಸುವ, ನೂಲ್ = ಶಾಸ್ತ್ರಗಳನ್ನು, ವಿರಿತ್ತ್ = ವಿಶದಪಡಿಸಿ, ನಿನ್ರು = (ಎಲ್ಲರಿಗೂ ತಿಳಿಯುವಂತೆ) ನಿಂತು, ತರ್ = ತನ್ನ, ನೀಳ್ = ಅನಂತವಾದ, ಪುಹಳ್ = ಕೀರ್ತಿಯಾಗಿರುವ, ತಿರು-ವೆಂಗಡ-ಮಾ-ಮಲೈ = ಶ್ರೀ ವೇಂಕಟಾಚಲದಲ್ಲಿ, ಮೇವಿ = ನಿತ್ಯವಾಸಮಾಡಿದ, ಪಿನ್ನುಂ = ನಂತರವೂ, (ತನ್ನಿಷ್ಟಪೂರ್ಣವಾಗದಿರಲು) ವೆನ್ರಿ = (ಹೊರ ಮತ್ತು ಒಳಗಿನ ಶತ್ರುಗಳನ್ನು) ಸದೆಬಡಿದು, ಪುಹಳ್ = ಯಶಸ್ಸನ್ನು ಗಳಿಸುವ, ತಿರುಂ-ವೇಂಗಡ ನಾದನ್-ಎನುಂ = ''ಶ್ರೀ ವೇಂಕಟನಾಥನೆಂಬ'' (ಖ್ಯಾತರಾದ), ಗುರುವಾಯ್ = ಆಚಾರ್ಯನಾಗಿ (ಬಂದವತರಿಸಿ) ನಿನ್ರು = ಸ್ಥಿರವಾಗಿ, ನಿಹಳ್‌ನ್ದ = ಎಲ್ಲೆಲ್ಲೂ ಹರಡಿ, ಮಣ್-ಮೇಲ್ = ಭೂಮಂಡಲದಲ್ಲಿ, ನಿನ್ರ = ನೆಲೆಗೊಂಡಿದ್ದ, ನೋಯ್‌ಹಳೈ = (ದುರ್ಮತವಾದಗಳೆಂಬ) ರೋಗಗಳನ್ನು, ತವಿರ್ತನನೇ = ನಿವಾರಿಸಿದನಲ್ಲವೇ. ( ಈ ಕಾರಣದಿಂದಲೇ ಈ ಮಹಾತ್ಮರನ್ನೇ ಆಶ್ರಯಿಸಿ ಉಜ್ಜೀವಿಸೋಣ)

**सृष्ट्यादौ लोक मीश स्तदनु करुणया सत्वपूर्ण कलौघं ।**
**व्यातन्वन् सर्वजीवातिशयकुशललाभाय सत्कीर्तिमूर्तिम् ।**
**प्राप्याथो वेङ्कटाद्रिं निरवधिकयशोरूप मादाय भूयः**
**तूप्पुल् श्रीवेङ्कटेशाह्वय मवनितलेऽनादिपापान्यलुम्पत् ।। ५**

ಮೂಲ : ವಿತ್ತಹನ್ ವೇದಿಯನ್ ವೇದಾಂತದೇಶಿಕನ್ ಎಂಗಳ್ ತೂಪ್ಪುಲ್,
ಮೆಯ್‌ತ್ತರ್ವ ಉತ್ತರ್ಮ ವೇಂಗಡನಾದರ್ ವಿಯನ್‌ಕಲ್ಬೈಹಳ್,
ಮೊಯ್‌ತ್ತಿಡು ನಾರ್ವಿ ಮುಳಕ್ಕೊಡು ವಾದಿಯರ್ ಮೂಲಮರ
ಕೈತ್ತವನೆನ್ರುರೈತ್ತೇನ್ ಕಂಡಿಲೇನ್ ಎನ್ ಕಡುವಿನ್ನೈಯೇ ॥ 6

ಭಾವಾರ್ಥ :- ''ಎಲ್ಲಾ ಶಾಸ್ತ್ರಗಳಿಲುಂ ಪಾಂಡಿತ್ಯಮುಳ್ಳವರ್,ಮರ್ರೈಹಳಿನ್ ಕರುತ್ತೈನನ್ರಾಹ ಅರಿಂದವರ್, ವೇದಾಂತಂಗಳುಕ್ಕೇ ಆಚಾರ್ಯರ್, ನಮ್ಮುಡ್ಯೆಯ ತಪಸ್ಸಿನ್ ಪಲಮಾಯ್ ತೂಪ್ಪುಲಿಲ್ ವಂದವದರಿತ್ತವರ್, ಎಲ್ಲಾರ್ರೈಯುಂ ಉಜ್ಜೀವಿಪ್ಪಿಕ್ಕುಮವರ್, ವೇಂಗಡನಾದ ನೆನ್ರು ಪೆಯರುಳ್ಳವರ್, ಎಲ್ಲಾ ವಿದಮಾನ ನಲ್ಲ ಕಲೈಹಳ್ ವಿಳಂಗುಂ ನಾವಿನುಡೈಯ ಮುಳಕ್ಕತ್ತಾಲೇ ವಾದಿಹಳೈ ಜಯಿತ್ತವರ್'' ಎನ್ರುಅಡಿಯೇನ್ ಶೊನ್ನೇನ್, ಉಡನೆ ಎನ್ ಪಾಪಂಗಳೆಲ್ಲಾಂ ತುಲೈಂದನ, (ಉಡನೇ ಕಾಣಾಮೇಪೋಯಿನ)

ಅರ್ಥ :- ವಿತ್ತಹನ್ = ಎಲ್ಲಾ ಶಾಸ್ತ್ರಗಳಲ್ಲೂ ಪೂರ್ಣ ಪಾಂಡಿತ್ಯವುಳ್ಳವರು, ವೇದಿಯನ್ = ವೇದಗಳಲ್ಲಿ ಸರಿಸಾಟಿಯಿಲ್ಲದಂತಹ ಜ್ಞಾನವುಳ್ಳವರು, ವೇದಾಂತ ದೇಶಿಕರ್ = ವೇದಾಂತಗಳಿಗೇ ಆಚಾರ್ಯರೂ, ಆದ, ಎಂಗಳ್ = ನಮ್ಮ, ತೂಪ್ಪುಲ್ = ತೂಪ್ಪಲಿನ, ಮೆಯ್-ತವನ್ = ಸತ್ಯವಾದ ತಪಸ್ಸುಳ್ಳವರು, ಉತ್ತಮನ್ = ಬಹುಶ್ರೇಷ್ಠರು, ವೇಂಗಡನಾದನ್ = (ಶ್ರೀನಿವಾಸದೇವರೇ ಈ ರೂಪದಲ್ಲಿ ಬಂದ) ವೇಂಕಟನಾಥರು, ವಿಯನ್-ಕಲೈಹಳ್ = ನಾನಾವಿಧ ಶಾಸ್ತ್ರಗಳು (ವಾದಿನಿರಸನಕ್ಕಾಗಿ) ಮೊಯ್‌ತ್ತಿಡುಂ = ನಾನು ತಾನೆಂದು ಮೇಲೆಮೇಲೆ ಸಡಗರದಿಂದ ಬರುವ,ನಾವಿನ್ = ನಾಲಿಗೆಯ, ಮುಳಿಕ್ಕೊಡು = ಆರ್ಭಟವು, ವಾದಿಯರ್ = ದುರ್ವಾದಿಗಳನ್ನು ಮೂಲಂ-ಅರ = ಬುಡಸಹಿತ ನಾಶಪಡಿಸುವಂತೆ, ಕತ್ತವನ್ = ವಿದ್ಯೆಯನ್ನು ಕಲಿತವರೂ, ಕಲಿಸುವವರೂ, ಎನ್ರು = ಎಂದು, ಉರೈತ್ತೇರ್ = (ಮುಕ್ತಕಂಠದಿಂದ) ಕೂಗಿ ಹೇಳಿದೆನು. (ಕೂಡಲೆ) ಎನ್ = ನನ್ನ, ತೀ-ವಿನ್ನೈ = ಉಗ್ರವಾದ ಪಾಪವನ್ನು, ಕಂಡಿಲೇನ್ = ಕಾಣಲಿಲ್ಲ. (ಈ ಗುಣನಿಧಿಯ ನಾಮಾಮೃತವನ್ನು ಸವಿಯುವವರಿಗೆ ತಕ್ಷಣ ಕಡುತರ ಪಾಪವೆಲ್ಲ ತೊಲಗುವುದು)

नानाशास्त्रप्रवीणो निखिलनिगमवागर्थवित् वेदमौळे:
आचार्योऽस्मत्तपस्याफलत उदितवान् तूप्पुलग्रस्थलेऽग्र्य: ।
सूरीन्द्रो वेङ्कटेशो बहुविधसुकलालोलजिह्वाप्रघोष-
प्रध्वस्तारातिचक्र स्त्विति हि समनवं नैक्ष एनो ममोग्रम् ॥ ६

ಮೂಲ : ವಿನ್ನೈಹಾಳ್ ! ಉಮಕ್ಕಿನ ವೇರೋರಿಡಂ ತೇಡವೇಂಡು ಮೆನ್ನೈ,
ಚ್ಚಿನಮೇವಿ ಮುನ್‌ಪೋಲ್ ಶಿದೈಕ್ಕುಂವಹೈ ಇಂಗರಿದುಕಂಡೀರ್

ಎನಿದಿಲಿರಾಮಾನುಶಮುನಿಯಿನ್ನುರೈಶೇರುಂ ತೂಪ್ಪುಲ್
ಪುನಿದರೆನ್‌ಪುನ್ದಿಪುಹನ್ದ್ತಿಹಳ್‌ನ್ದ್‌ಪೊರುಂದಿನರೇ ॥ 7

ಭಾವಾರ್ಥ :- ಏ ಪಾವಂಗಳೇ ! ಉಂಗಳುಕ್ಕು ಇನಿ ಇವ್ವಿಡಂ ಕಿಡೈಯಾದ್, ವೇರೊರು ಇಡಂ ತೇಡಿಕ್ಕೊಳ್ಳವೇಣುಂ-ನೀಂಗಳ್ ಮುನ್ಪೋಲ್ ಕೋಪಿತ್ತುಕ್ಕೊಂಡು ಎನ್ನೈ ದುಃಖಪ್ಪಡುತ್ತ ಇನ್ನು ಮುಡಿಯಾದ್, ಏನೆನ್ರಾಲ್, ಎಂಬೆರುಮಾನಾರುಡೈಯ ಮಿಕ್ಕ ಮದಿಪ್ಪುತ್ತ ಶ್ರೀಸೂಕ್ತಿಹಳ್ ವಿಹರಿಕ್ಕುಂ ಇಡಮಾನ ತೂಪ್ಪುಲ್ ಪಿಳ್ಳೈಯೆನ್ನುಂ ಶ್ರೀದೇಶಿಕರ್ ಎನ್ನೆಂಜುಳ್ ನಿಲೈ ನಿನ್ರು ಒಳಿವೆಳಿಯಿಡುಹಿರಾರ್ ಕಾಣ್.

ಅರ್ಥ :- ವಿನ್ನೈಹಾಳ್ = (ನನ್ನ) ಓ! ಪಾಪಗಳಿರಾ ! ಮುನ್ ಪೋಲ್ = ಹಿಂದಿನಂತೆ, ಶಿನ-ಮೇವಿ = ಕೋಪಗೊಂಡು, ಎನ್ನೈ = ನನ್ನನ್ನು, ಇಂಗ್ = ಇಲ್ಲಿ, ಶಿದೈಕ್ಕುಂ = ಸದೆಬಡಿಯುವ (ಪೀಡಿಸುವ), ವಹೈ = ರೀತಿಯು, (ಇನ್ನು) ಅರಿದ್ = ಆಗದು (ಸಲ್ಲದು) ಕಂಡೀರ್ = ತಿಳಿದಿರಾ ! (ಆದ್ದರಿಂದ) ಇನಿ = ಇನ್ನುಮೇಲೆ, ಉಮಕ್ಕ್ = ನಿಮಗೆ (ವಾಸಿಸಲು) ವೇರ್-ಓರ್-ಇಡಂ = ಬೇರೆ ಒಂದು ಜಾಗವನ್ನು, ತೇಡವೇಂಡುಂ = ಹುಡುಕಿಕೊಳ್ಳಬೇಕು, (ಏಕೆಂದರೆ) ಎನದಿಲ್ = ನನ್ನಲ್ಲಿ, ಇರಾಮಾನುಶಮುನಿಯಿರ್ = ಶ್ರೀ ರಾಮಾನುಜರ, ಉರೈ = ದಿವ್ಯಸೂಕ್ತಿಗಳು, ಶೇರುಂ = (ತಾವಾಗಿಯೇ) ಬಂದು ಸೇರುವ, ತೂಪ್ಪುಲ್ = ತೂಪ್ಪುಲಿನ, ಪುನಿದರ್ ಪವಿತ್ರರಾದ (ದೇಶಿಕರು) ಎನ್ = ನನ್ನ, ಪುನ್ದಿ = ಮನಸ್ಸನ್ನು, ಪುಹುಂದ್ = ಹೊಕ್ಕು, ತಿಹಳ್‌ನ್ದ್ = ಬೆಳಗಿ, ಪೊರುಂದಿನರ್ = ನೆಲೆಯಾಗಿ ನಿಂತಿರುವರು.

अद्यारभ्याघसंघाः ! मदितरपद मन्वेषणीयं भवद्भिः
रोषान्मां हिंसितुं वो न भवति सुकरं प्रागिवातोऽपयात ।
एतच्चैवं कुतश्चेत् यतिकुलपतिरामानुजार्योक्तिलीला-
लोल श्श्री तूप्पुलार्यो विलसति हृदयं गाढ माविश्य यन्मे ।। ೭

ಮೂಲ : ಪೊರುಂದಿ ಬ್ಬುವಿತನಿಲ್‌ಪೊಯ್‌ವಾಳ್ ಹೈಪೂಣ್‌ಗ್ಹಿನ್ರಪೂರಿ-
ಯರ್‌ಹಾಳ್ ।
ಇರುನ್ದ್‌ನರಹಿನಿಡರ್ ಕೆಡುಮಾತ್ತಲರಿಹಿನ್ರಿಲೀರ್,
ಪೊರುಂದುಂಪೊರೊಳ್ಳೊನ್ರು ಕೇಳಿರ್ ಪೊಂಗುಮಿವ್ವಿಡರ್‌ಕ್ಕಡರ್ಕ್ಕು
ವರುಂದಾದ್ ತೂಪ್ಪುಲ್ ಮಾಪೂರುಡನ್ ಪಾದಂ ವಣಂಗುಮಿನೇ ॥

ಭಾವಾರ್ಥ :- ಇಂದ ಬುವಿಯಿಲ್ ಶಿರಿದುಂ ನಿಲೈಯಿಲ್ಲಾದದುಂ

(ಆಹೈಯಾಲೆಯೇ) ಪೊಯ್ಯಾನದುಮಾನ ವಾಳ್ವೈಯಡೈಂದಿರುಕ್ಕುಂ ಮನಿದರ್‌ಹಳೇ! ನೀಂಗಳ್ ಇಂಗಿರುಕ್ಕುಂಪೋದೇ ನರಕಯಾತನೈಹಳೈ ನಶಿಪ್ಪಿಕ್ಕ ಸುಲಭಮಾನ ಮಾರ್ಗತ್ತೈ ಅರಿಯವೂಟ್ಟೀರ್‌ಹಳೇ ? (ಉಂಗಳ್ ಸ್ವರೂಪತ್ತಿರ್ಕ್) ತಹುದಿಯಾನ (ಒಪ್ಪುಮವೈಯಾನ) ಉಪಾಯತ್ತೈ ಶೊಲ್ಲುಹಿರೇನ್, ಕೇಳುಂಗಳ್ :- ಇಬ್ಬವಕ್ಕಡಲೈ ತಾಂಡಿ ವಿಕ್ಕುಮವರುಂ ಮಿಹವುಂ ಉಯರ್‌ನ್ದವರುಂ ತೂಪ್ಪುಲ್‌ಮಹಾಪುರುಷರಾನ ಶ್ರೀ ದೇಶಿಕನ್. ಇವರ್ ತಿರುವಡಿಮಲರ್‌ಹಳೈ ವಣಂಗುಂಗಳ್.

ಅರ್ಥ :- ಇ-ಬುವಿ-ತನಿಲ್ = ಈ ಭೂಮಂಡಲದಲ್ಲಿ (ಅಲ್ಪವೂ, ಅಸ್ಥಿರವೂ ಆದ್ದರಿಂದಲೇ) ಪೊಯ್ = ಸುಳ್ಳಾಗಿ ತೋರುವ, ವಾಳ್‌ಹೈ = ಬಾಳಿಗೆ, ಪೊರುಂದಿ = ಸ್ಥಿರವಾಗಿ, ಪೂಣ್‌ಗಿನ್ರ = (ಆಸೆಪಟ್ಟು) ಹೊಂದಿಕೊಂಡಿರುವ, ಪೂರಿಯರ್‌ಹಾಳ್ = ನೀಚಮನುಜರೇ! ಇರುಂದ್ = (ಇಲ್ಲಿ) ಇದ್ದುಕೊಂಡೇ, ನರಹ್ಗ್ = ನರಕದ, ಇಡರ್ = ದುಃಖವನ್ನು (ಯಾತನೆಯನ್ನು) ಕೆಡುಮಾತ್ತಲ್ = ತೊಡೆದು ಹಾಕಲು, (ಸುಲಭ ಮಾರ್ಗವನ್ನು) ಅರಿಹಿನ್ರಿಲೀರ್ = ತಿಳಿಯದೆ ಇರುವಿರಲ್ಲಾ! (ನಿಮ್ಮ ಸ್ವರೂಪಕ್ಕೆ) ಪೊರುಂದುಂ = ಹೊಂದಿಕೆಯಾಗುವಂತಹ, ಪೊರುಳ್-ಒನ್ರ್ = ಉಪಾಯವೊಂದನ್ನು, (ಹೇಳುವೆನು) ಕೇಳೀರ್ = ಕೇಳಿರಿ, ಪೊಂಗುಂ = (ಬೇಡವೆಂದರೂ ಬಿಡದೆ) ಮೇಲೆಮೇಲೆ "ಬರುವ, ಇ-ಇಡರ್ = ಈ ದುಃಖವನ್ನು, ಕಡರ್‍ಕುಂ = ದಾಟಲು, ತೂಪ್ಪುಲ್ = ತೂಪ್ಪುಲಿನ, ಮಾ-ಪೂರುಡನ್ = ಮಹಾಪುರುಷರಾದ (ದೇಶಿಕರ) ಪಾದಂ = ಪಾದಗಳಿಗೆ, ವಣಂಗುಮಿನ್ = ನಮಿಸಿರಿ, (ಆ ದುಃಖವು ಖಂಡಿತ) ವರುಂದಾದ್ = (ನಿಮ್ಮ ಬಳಿಗೆ) ಬಾರದು.

अत्यल्पानित्यहीनायनगतिसुभरात्मोदराः ! भो ! नराः ! कौ
सुष्ठूपायं विभुक्तेः विषहनिरयतो नैव जानीथ यूथम् ।
युष्माकंतं ब्रुवेऽहं निशमयत भवाम्भोधिदुःखापनुत्यै
तूप्पुल्जातस्य पादौ प्रणमत महतः पूरुषस्याशु भक्त्या ।। ८

ಮೂಲ : ವಣಕ್ಕಮೊಡುಕ್ಕಂ ವಳಕ್ಕಮೊಳುಕ್ಕಂ ಇರಕ್ಕಂ ಶೇರುಂ,
ಇಣಕ್ಕಮುರಕ್ಕಂ ಇಳುಕ್ಕುಮಳುಕ್ಕುಮಿ ಮಿಹಂದ್‌ನಿರ್‍ಕುಂ
ಕುಣಕ್ಕುಲಮೋಂಗುಂ ಇರಾಮಾನುಶ್ಗಗುಣಂಕೂರುಂತೂಪ್ಪುಲ್
ಆಣುಕ್ಕನೈಪ್ಪಿಳ್ಳೈತನ್ನೈ ಅರಣಾಹ ವಡೈಬವರ್ಕ್ಕೇ ॥ 9

ಭಾವಾರ್ಥ :- ಎಣ್ಣಿರಂದ ನಲ್ಲಗುಣಂಗಳುಕ್ಕಮುದಕ್ಕಡಲಾನ ಎಂಬೆರು ಮಾನಾರುಡೈಯ ಗುಣಗಣಂಗಳೈ ಕೊಂಡಾಡುಹಿರ ನಂ ತೂಪ್ಪುಲ್‌ಪಿಳ್ಳೈಯಾನ ಶ್ರೀದೇಶಿಕನೈಯೇ ಭಕ್ತಿಯುಡನ್ ಶರಣಮುಡೈಯುಮರ್‌ಹಳುಕ್ಕ್ ತಾನ್

ಪೆರಿಯೋರ್‌ಹಳಿಡತ್ತಿಲ್ ವಣಂಗುಹೈ, ಒಡಂಗಿರುಕ್ಕೈ, ವಿನಯಂ, ನಲ್ಲೊಳುಕ್ಕಂ, ನಲ್ಲ ಆಚಾರ ಸಂಪತ್ತು ದಯೈ ಮುದಲಿಯ ನಲ್ಲಗುಣಂಗಳ್ ತಾಮಾಹವೇ ವಂದ್ ನಿಲ್ಪೆರುಂ, ಕೆಟ್ಟಜನತ್ತೋಡಿರುಪ್ಪು, ಪೆರುಮಯಕ್ಕಾನ ಅರಿವಿರಂದ ದುಕ್ಕಂ ಪಾಪಂಗಳ್, ಅಶುದ್ಧಿಹಳ್, ಮುದಲಿಯ ಕೆಡುದಲ್‌ಹಳ್ ಕಿಟ್ಟಶೇರಾದ್.

ಅರ್ಥ :- ಗುಣ = ಸದ್ಗುಣಗಳ, ಕುಲಂ = ಸಮೂಹವೇ, ಓಂಗುಂ = ಹೆಚ್ಚುತ್ತಿರುವ, ಇರಾಮಾನುಶನ್ = ಶ್ರೀರಾಮಾನುಜರ, ಗುಣಂ = ಕಲ್ಯಾಣಗುಣಗಳನ್ನು, ಕೂರುಂ = ಕೀರ್ತನೆಮಾಡುವ, ತೂಪ್ಪುಲ್ = ತೂಪ್ಪುಲಿನ, ಅಣುಕ್ಕನ್ನೆ = ಸೂಕ್ಷ್ಮಾರ್ಥವೇದಿಯೂ, ಪಿಳ್ಳೈದನ್ನೆ = ಕುಮಾರನಾಗಿಯೂ ಆದ (ಖ್ಯಾತರಾದ ದೇಶಿಕರನ್ನೇ) ಅರಣ್-ಆಹ = ರಕ್ಷಕರನ್ನಾಗಿ, ಅಡೈಬವರಕ್ಕೇ = ಆಶ್ರಯಿಸುವವರಿಗೇನೇ, ವಣಕ್ಕಂ = ನಮಿಸುವ ಸ್ವಭಾವವೂ, ಒಡುಕ್ಕಂ = ವಿಧೇಯತೆಯೂ, ವಳಕ್ಕಂ = ಸಂಪ್ರದಾಯಪಾಲನೆಯೂ, ಒಳುಕ್ಕಂ = ಸದಾಚಾರವೂ, ಇರಕ್ಕಂ = ಕರುಣೆಯೂ, ಶೇರುಂ = (ತಾವಾಗಿಯೇ) ಸೇರುವುವು, ಇಣಕ್ಕಂ = ದುಷ್ಟಸಹವಾಸವೂ, ಉರಕ್ಕಂ = ಅಜ್ಞಾನವೆಂಬ ನಿದ್ರೆಯೂ, ಇಳುಕ್ಕುಂ = ಪಾಪವೂ, ಅಳುಕ್ಕುಂ = ಅಶುಚಿಯೂ, ಇಹಂದ್‌ನಿರ್ಕುಂ = ದೂರನಿಲ್ಲುವುವು, (ಹತ್ತಿರ ಸೇರವು), ''ಕುಣಕ್ಕುಲಮೋಂಗುಂ'' ಎಂಬುದನ್ನು ಶ್ರೀ ರಾಮಾನುಜರಿಗೆ ವಿಶೇಷಣವಾಗಿ ಮಾಡಿದೆ. ಅದನ್ನು ಫಲಶ್ರುತಿಯ ಗುಂಪಿಗೆ ಸೇರಿಸಿ'' ಗುಣ = ಸದ್ಗುಣಗಳುಳ್ಳ, ಕುಲ = ವಂಶವು, ಓಂಗುಂ = ವೃದ್ಧಿಯಾಗುವುದು ಎಂದು ಹೇಳಿದರೂ ಯುಕ್ತತಮವಾಗದಿರದು.

**सिध्येयुः प्रश्रितत्वं मृदुशुभचरिताचारकारुण्यभावाः**
**नश्येयु र्नीचरसङ्गोऽमति रघनिचयोऽशुद्धिभावश्च तेषां ।**
**श्रीमद्रामानुजस्य प्रगुणगुणनिधे स्तावकं सद्गुणानां**
**श्रीतूप्पुल्सूरिवर्यं ह्यनितरशरणा येऽति भक्त्या प्रपन्नाः ।।** ९

ಮೂಲ : **ಅಡೈಬವರ್ ತೀವಿನ್ನೈಮಾತ್ತಿಯರುಳ್‌ತರುಂ ತೂಪ್ಪುಲ್ಲೈಯಾ,**
**ಇಡರ್‌ತರುಂ ಇಪ್ಪಿರವಿಕ್ಕಡಲ್‌ತನ್ನಿಲಮರ್‌ನ್ದ ವೆನ್ನೈ,**
**ಕಡೈಯರಪ್ಪಾಶಂಕಳತ್ತಿ ನಿರ್ತಾಳಿಣ್ಯೈಕ್ಕಾಣುಂ ವಣ್ಣಂ,**
**ಉಡೈಯವನೇ! ಅರುಳಾಯ್ ಉಣರ್‌ನ್ದಾರ್‌ತಂಗಳ್‌ಕರ್ಪಹಮೇ ॥**

ಭಾವಾರ್ಥ :- ಅಡಿಯಾರ್‌ಹಳುಡೈಯ ಪಾಪಂಗಳ್ಳೆ ನೀಕ್ಕಿವೈಪ್ಪವರುಂ ಅರುಳಾಹಿಯ ಮಳೈಯ್ಯೆ ಪೊಳಿಯವಿಪ್ಪವರುಂ, ತಂಪರುವ್ವೈಯ್ಯೆ ಅರಿಬವರ್ಕ್ಕ ಕಲ್ಪವೃಕ್ಷಮಾಯಿರುಪ್ಪವರುಂ, ನಮ್ಮಾಚಾರ್ಯರುಂ, ನಂಸ್ವಾಮಿಯುಮಾಯಿರುಪ್ಪವರುಮಾನ

ತೂಪ್ಪುಲ್ ಪಿಳ್ಳೈಯಾನ ಶ್ರೀ ದೇಶಿಕನೇ ! (ಸಂಸಾರಮಾಹಿಯತುನ್ಬಂತರುಂ) ಇಪ್ಪಿರವಿಯೆನ್ನುಂ ಪೆರುಂಕಡಲಿಲೇ ಅಮಿಳ್‌ನ್ದಿರುಕ್ಕುಂ ಅಡಿಯೇನ್ನೈ ಉಡನೇ ಉದ್ಧರಿತ್ತು ಕಡತ್ತೇತ್ತಿವೈತ್ತು, ದೇವರೀರ್ ತಿರುವಡಿಮಲರ್ ಹಳಿಲೇ ನಿಲೈಪೆತ್ತ ಸೇವೈಯ್ಯೈ ಸಾದಿತ್ತರುಳವೇಣುಂ,

ಅರ್ಥ :- ಅಡೈಬವರ್ = (ತಮ್ಮನ್ನು) ಆಶ್ರಯಿಸುವವರ, ತೀ-ವಿನ್ನೈ = ಕಡುತರ ಪಾಪಗಳನ್ನು, ಮಾತ್ತಿ = ಹೋಗಲಾಡಿಸಿ, ಅರುಳ್ = ದಯೆಯನ್ನು, ತರುಂ = ಬೀರುವ, ಉಣರ್‌ನ್ದಾರ್-ತಂಗಳ್ = (ನಿಮ್ಮ ಮಹಿಮೆಯನ್ನು) ಅನುಭವಿಸಿದವರಿಗೆ, ಕರ್ಪಹಮೇ = ಕಲ್ಪತರುವಿನಂತೆ ಇರುವ, ತೂಪ್ಪುಲ್ -ಅಯ್ಯಾ = ತೂಪ್ಪುಲ್ ಪಿಳ್ಳೈಯಾದ, ಉಡೈಯವನೇ = (ನಮ್ಮ) ಸ್ವಾಮಿಯೇ! ಇಡರ್ = ದುಃಖವನ್ನು, ತರುಂ = ಕೊಡುವ, ಇ-ಪಿರವಿ-ಕಡಲ್ = ಈ ಸಂಸಾರವೆಂಬ ಕಡಲಿನಲ್ಲಿ ಅಮರ್‌ನ್ದ = ಮುಳುಗಿದ, (ಬಿದ್ದಿರುವ) ಎನ್ನೈ = ನನ್ನನ್ನು, ಕಡೈ-ಅರ = ಕೊನೆಗಾಣದ, ಪಾಶಂ = ಬಂಧನದಿಂದ, ಕಳತ್ತಿ = ಬಿಡಿಸಿ, ನಿನ್ = ನಿನ್ನ, ತಾಳ್-ಇಣೈ = ಅಡಿಗಳೆರಡನ್ನೂ, ಕಾಣುಂ = ಕಾಣುವ ವಣ್ಣಂ = ರೀತಿಯನ್ನು, ಅರುಳಾಯ್ = (ನನಗೆ) ಕರುಣಿಸೈ.

आत्मैकालम्बिरक्ष्याश्रितदुरघ मपोह्यानुकम्पाभिवर्षिन् !
तूप्पुल्स्वामिन् ! गुरो ! मे निजमहिमविदां कल्पभूजातकल्प !
संसारावर्तदुःखाधिकजलधिनिमग्नस्य पाशान् मदीयान्
विच्छिद्याद्धा प्रदेहि त्वदुभयपदनिर्वर्णनस्थास्नुसेवाम् ॥ १०

ಮೂಲ : ಕರ್ಪಗಮೇ ! ಯೆನ್ರು ಕಾಶಿನಿಯೋರೈಕ್ಕದಿಕ್ಕ ಮಾಟ್ಟೇನ್,
ವೆರ್ಪ್ಪಿಡೈಯೇ ನಿನ್ರು ವೆನ್ದವತ್ತೀಯಿಲುಮೇವ ಮಾಟ್ಟೇನ್,
ಪರ್ಪಲ್ ಕಲೈವಲ್ಲಪ್ಪಾವಲನೇ ! ಪತ್ತರೇತ್ತುಂ ತೂಪ್ಪುಲ್,
ಅರ್ಬುದನೇ ! ಅರುಳಾಯ್ ಅಡಿಯೇನುಕ್ಕರುಂಪೊರುಳೇ ॥ 11

ಭಾವಾರ್ಥ :- ಸಮಸ್ತ ಕಲೈಹಳೈಯುಂ ಅರಿಂದವರುಂ, ನಲ್ಲ ಕವಿಮಣಿಯುಂ ತೂಪ್ಪುಲಿಲ್ ಅವತರಿತ್ತವರುಂ, ಬಕ್ತರಾಲ್ ಪುಹಳಪ್ಪಡುಮವರುಂ, ಅದ್ಭುತ ಗುಣಚೇಷ್ಟಿತಂಗಳುಳ್ಳವರುಮಾನ ತೂಪ್ಪುಲ್ ದೇಶಿಕನೇ ! ದೇವರೀರ್ ಅಡಿಯನಾನ ಎನ್ನೈ ಅರುಳಿಟ್ಟು ಮುಕ್ತಿಯುಡೈಯವೈಪ್ಪೀರ್, ಇವ್ವುಲಹಿಲುಳ್ಳ ಪಣಮುಳ್ಳವರ್ ಹಳೈ "ಕಲ್ಪವೃಕ್ಷಮೇ!" ಎನ್ರು ಅಡಿಯೇನ್ ತುದಿಕ್ಕಮಾಟ್ಟೇನ್, ಮಲೈಯಿಲಿರುಂದ್ ಉಗ್ರಮಾಹ ತಪಸ್ಸೈಶೆಯ್ದು ಇದ್ದೇಹಂದಹಿಕ್ಕವಿಡಮಾಟ್ಟೇನ್.

ಅರ್ಥ :- ಪರ್ಪಲ್-ಕಲೈ-ವಲ್ಲ = ಬಹುವಿಧ ಶಾಸ್ತ್ರಗಳನ್ನು ಬಲ್ಲವರಾದ, ಪಾವಲನೇ = ಕವಿತೆಯನ್ನು ಬಲ್ಲವರೇ ! (ಮಹಾಕವಿಮಣಿಯೇ !) ಪತ್ತರ್ = ಭಕ್ತರಿಂದ, ಏತ್ತುಂ = ಕೊಂಡಾಡಿಸಿಕೊಳ್ಳತಕ್ಕ, ತೂಪ್ಪುಲ್ = ತೂಪ್ಪುಲಿನ, ಅರ್ಪುದನೇ = ಆಶ್ಚರ್ಯಚೇಷ್ಟಿತರೇ ! (ದೇಶಿಕರೇ) ಅಡಿಯೇನುಕ್ಕ್ = (ನಿಮ್ಮ) ಸೇವಕನಾದ ನನಗೆ, ಉಯುಂ-ಪೊರುಳ್ = ಮುಕ್ತಿಯ ಉಪಾಯವನ್ನು, ಅರುಳಾಯೇ = ಕರುಣಿಸಬೇಕೈ, ಕಾಶಿನಿಯೋರ್ಯೈ = (ಧನಿಕರಾದ) ಈ ಜನರನ್ನು, ಕರ್ಪಗಮೇ = ''ಕಲ್ಪವೃಕ್ಷದಂತೆ ಇರುವ ದಾನಶೂರರೇ !'' ಎನ್ರು = ಎಂದು, ಕದಿಕ್ಕ-ಮಾಟ್ಟೇನ್ = (ಸಂಬೋಧಿಸಿ) ರಕ್ಷಕರನ್ನಾಗಿ ಎಣಿಸೆನು, (ಪೊಗಳೆನು) ವೆರ್ಪ್-ಇಡೈಯೇ = ಪರ್ವತದಲ್ಲೇ, ನಿನ್ರು = ನಿಂತು, ವೆಂ-ತವ-ತೀಯಲುಂ = ತೀವ್ರವಾದ ತಪಸ್ಸೆಂಬ ಉರಿಯಲ್ಲಿ, ಏವ-ಮಾಟ್ಟೇನ್ = (ಸಿಕ್ಕಿ ಮೈದಹಿಸಿಕೊಳ್ಳಲು) ಯತ್ನವನ್ನೂ ಮಾಡೆನು.

कल्पक्षोणीरुहेति क्षितिगतधनिकान् संस्तुयां नैव वाचा
शैलेऽत्युग्रं तपस्यन् तनुमिह न दहेयं कथंचित् कदापि ।
विज्ञाताशेषतन्त्राप्रतिमकविमणे ! भक्तबृन्दस्तुतश्री-
तूप्पुल्जाताद्भुत ! त्वं निरुपधिदयया मां च मुक्तं विधत्स्व ॥ ११

ಮೂಲ : ಪೊರುಳಾನದೊನ್ರುಮೆನ್ನಿಲ್ ಪೊರುಂದಾದದುವನ್ರಿಯನ್ನೋ,
ಮರುಳೇ ಮಿಹುತ್ತ್ ಮರ್ರೈಯವರ್ ನಲ್‌ವಳಿಮಾತ್ತಿನಿನ್ರೇನ್,
ತೆರುಳಾರ್ ಮರ್ರೈಮುಡಿತ್ತೇಶಿಕನೇ ! ಎಂಗಳ್‌ತೂಪ್ಪುಲ್‌ದೇವೇ !
ಅರುಳಾಯ್ ಇನಿಯೆನುಕ್ಕುನ್ನರುಳೇಯನ್ರಿ ಯಾರಿಲ್ಲೈಯೇ ॥

ಭಾವಾರ್ಥ :- ಅರಿವುಕ್ಕ್ ಪಿರಪ್ಪಿಡಮಾಯ್, ವೇದಾಂತಗಳುಕ್ಕ್ ಆಚಾರ್ಯರಾಯ್, ನಮ್ಮೆಲ್ಲೈಯತ್ತ ಬಾಗ್ಯತ್ತಾಲ್ ತೂಪ್ಪುಲಿಲ್ ವಿಳಂಗಿ ನಿನ್ರ ಪೆರುಂದೈವಮೇ ! ಅಡಿಯೇನಿಡಂ ಶಿರಂದುಪಾಯಮೊನ್ರುಮಿಲ್ಲೈ, ಅತ್ತುಡನ್ ಅರಿವಿಲ್ಲಾತ್ತಾಲ್ ಶುಮ್ಮೈಯಿನಾಲೇ ವೈದಿಕರ್ ಹಳುಪ್ಪೈಯ ಅನುಷ್ಠಾನತ್ತಿರ್ಕ್ ನೇರ್‌ಮಾರಾನ ಆಚಾರಂಗಳುಳ್ಳವನುಮಲ್ಲೇನ್, ಇನಿ ದೇವರೀರ್‌ಕೃಪೈ ತವಿರ ಮತ್ತೊರು ಉಪಾಯುವುಂ ಅಡಿಯೇನುಕ್ಕಿಲ್ಲೈ, ಇನ್ರರುಳವೇಣುಂ.

ಅರ್ಥ :- ತೆರುಳ್ = ಶುದ್ಧವಾದ ಜ್ಞಾನದಿಂದ, ಆರ್ = ಪೂರ್ಣರಾದ, ಮರ್ರೈ = ವೇದಳಿಗೆ, ಮುಡಿ = ಶಿರಸ್ಸಿನಂತಿರುವ (ವೇದಾಂತಗಳಿಗೆ) ದೇಶಿಕನೇ = ಆಚಾರ್ಯರೇ ! ಎಂಗಳ್ = ನಮ್ಮ, ತೂಪ್ಪುಲ್ = ತೂಪ್ಪಲಿನ, ದೇವೇ = ದೇವರೇ, ಎನ್ನಿಲ್ = ನನ್ನಲ್ಲಿ, ಪೊರುಳ್-ಆನದ್ = ಉಪಾಯವಾದುದು, ಒನ್ರುಂ = ಯಾವುದೊಂದೂ, ಪೊರುಂದಾದ್

= ನೆಲೆಗೊಂಡಿಲ್ಲ, ಅದ್-ಅನ್ರಿ = ಅಷ್ಟೇ ಅಲ್ಲದೆ, ಮರುಳೇ = ಅಜ್ಞಾನವೇ, ಮಿಹುತ್ತ್ = ಮೇರೆಮೀರಿ, ಮರ್ರೈಯವರ್ = ವೈದಿಕರ, ನಲ್-ವಳಿ = ಒಳ್ಳೆಯ ಅನುಷ್ಠಾನವನ್ನು, ಮಾತ್ತಿ = (ಬಿಟ್ಟು) ಅದಕ್ಕೆ ವಿರುದ್ಧವಾಗಿ, ನಿನ್ರೇನ್ = ನಿಂತೆನು, ಅಂದೋ = ಅಯ್ಯೋ, ಇನಿ = ಇನ್ನುಮೇಲೆ, ಎನ್ = ನಿನ್ನ, ಅರುಳೇ = ದಯೆಯೇ, ಅನ್ರಿ = ಹೊರತು, (ಮತ್ತೆ) ಯಾರ್-ಇಲ್ಲೈ = ಯಾವುದೂ ಇಲ್ಲವೇ ಇಲ್ಲ. (ಆದುದರಿಂದ) ಅರುಳಾಯ್ = ಕೃಪೆತೋರಬೇಕು.

**कोऽप्यग्र्यो नास्त्युपायो मयि तदपि विमोहाधिक श्चास्ति हन्त**
**श्रुत्युक्ताचारहीन स्तदितरदुरनुष्ठाननिष्ठोऽभवं भोः ।**
**विज्ञानोत्पत्तिभूमे ! श्रुतिशिखरगुरूत्तंस ! भाग्याधिकास्म-**
**त्तूप्पुल्देवेत ऊर्ध्वं न हि तव करुणायाः परो मे दयस्व ॥ १२**

**ಮೂಲ :** ಆರಾಹವೆಣ್ಣುಮರುಂ ಕರುಮಂ ಇಞಾನಂ ಕಾದಲ್‌ಕೊಂಡು,
ವೇರಾಹನಿರ್ಕುಂ ವಿರಹೆನಕ್ಕಿಲ್ಲೈ ವಿರತ್ತಿಯಿಲ್ಲೆ,
ತೇರಾದ್ ತಿಣ್ಮತಿಶೀರಾರ್ ಕದಿಯಿಲುಂ ಶೆಂಪೊನ್ಮೇನಿ,
ಮಾರಾದ ತೂಪ್ಪುಲ್‌ಮಾಲೇ ! ಮರವೇನಿನಿ ನಿನ್ಪದಮೇ ॥ 13

**ಭಾವಾರ್ಥ** :- ಉರುಕ್ಕಿನಪೊನ್ರತಿರುಮೇನಿಯುಳ್ಳವರುಂ, ತೂಪ್ಪುಲ್ ಪಿಳ್ಳೈಯುಮಾನ ದೇಶಿಕನೇ ! ಅಡಿಯೇನುಕ್ಕ್ ಕರ್ಮ-ಜ್ಞಾನ-ಭಕ್ತಿಯೋಗಗಂಗಳಿಲ್ ಒನ್ರಿಲುಂ ಶಕ್ತಿಯುಂ ವೈರಾಗ್ಯಮುಂ ಯಾದೊನ್ರುಮಿಲ್ಲೈ, ಶರಣಾಗತಿಯೆನ್ರು ಮುಪಾಯತ್ತಿಲುಂ ಶಾಸ್ತ್ರಂಗಳಾಲ್ ವಿದಿಕ್ಕಪ್ಪಟ್ಟ ಮಹಾವಿಶ್ವಾಸಮುಂ ಅಡಿಯೇನಿಡಂ ಅಡಿಯೋಡಿಲ್ಲೈ, ಆಹ ಶರಣಾಗತಿಯುಂ ಎನಕ್ಕಿಲ್ಲೈಯಾಯಿತ್ತ್, ಆನಾಲುಂ ಇಪ್ಪೋದು ದೇವರೀರ್ ತಿರುವಡಿಮಹಲರ್‌ಹಳ್ ತಾನ್ ಪ್ರಾಪ್ಯಮುಂ ಪ್ರಾಪಕಮುಂ ಎನ್ರಿರುಪ್ಪದೈ ಮರವೇನ್.

**ಅರ್ಥ** :- ಆರ್-ಆಹ = ಮೋಕ್ಷಕ್ಕೆ ಉಪಾಯವಾಗಿ, ಎಣ್ಣುಂ = ವಿಧಿಸಿರುವ ಅರುಂ = ಮಾಡಲು ಕಷ್ಟವಾದ, ಕರುಮಂ = ಕರ್ಮಯೋಗವನ್ನೂ, ಇಞಾನಂ = ಜ್ಞಾನಯೋಗವನ್ನೂ, ಕಾದಲ್ = ಭಕ್ತಿಯೋಗವನ್ನೂ, ಕೊಂಡು = ಆಚರಿಸಿ, ವೇರಾಹ = (ಕರ್ಮಠ, ಜ್ಞಾನಿ, ಪ್ರಪನ್ನ ಎಂದು) ಬೇರೆಯಾಗಿ, ನಿರ್ಕುಂ = ನಿಲ್ಲುವ, ವಿರಹ್ = ಸಾಮರ್ಥ್ಯವು, ಎನಕ್ಕು = ನನಗೆ, ಇಲ್ಲೈ = ಇಲ್ಲ, ವಿರತ್ತಿ = ವೈರಾಗ್ಯವೂ, ಇಲ್ಲೈ = ಇಲ್ಲ, ಶೀರ್-ಆರ್-ಗತಿಯಿಲುಂ = ಕಲ್ಯಾಣಗುಣಭರಿತವಾದ ಶರಣಾಗತಿಯಲ್ಲಿಯೂ, ತಿಣ್-ಮತಿ = ದೃಢಬುದ್ಧಿಯು (ಮಹಾವಿಶ್ವಾಸವು), ತೇರಾದ್ = ಪೂರ್ಣವಾಗಿಲ್ಲ,

(ಆದರೂ) ಶೆಂ-ಪೊರ್-ಮೇನಿ = ಕರಗಿ ಕೆಂಪಾದ ಚಿನ್ನದಂತೆ ಇರುವ ಮೈಸಿರಿಯ, ಮಾರಾದ = ಒಂದೇ ಸಮನಿರುವ, ತೂಪ್ಪುಲ್-ಮಾಲೇ = ತೂಪ್ಪುಲಿನ ವ್ಯಾಮೋಹಕರ ಗುರುವರ್ಯರೇ ! ಇನಿ = ಇನ್ನು, ನಿನ್-ಪದಂ = ನಿಮ್ಮಡಿಗಳನ್ನು, ಮರವೇನೇ = ಮರೆಯುವೆನೆ? (ನನಗೆ ಅವೇ ಅಲ್ಲವೇ ಪ್ರಾಪ್ಯವೂ ಪ್ರಾಪಕವೂ)

कर्मज्ञानाढ्यभक्त्याचरण इह न मे शक्तिः आहो विरक्तिः
विश्वासो चा प्रगाढो न च विधिविहितो न्यासकृत्येऽपि वास्ते ।
तप्तस्वर्णाभमूर्ते ! प्रविलसदनघोदारकीर्ते ! सुतूप्पुल्-
स्वामिन् ! त्वत्पादपाथोरुहयुग मधुना विस्मरेयं हि नैव ॥ १३

ಮೂಲ : ನಿನ್ಪದಂ ತನ್ನಿಲುಂ ನೇರೇ ಯೆನಕ್ಕಿಲ್ಲೈ ಅನ್ಬುಕಣ್ಡಾಯ್,
ನಿನ್ಪದ ಮೊನ್ರಿಯವನ್ಬರಿಲುಂ ನೇಶಮಿಲ್ಲೈಯನ್ದೋ,
ಎನ್ಪಡಿಕಂಡಿನಿಯೆನ್ಪಯನೇದಮಿಲ್ ತೂಪ್ಪುಲೆಂದಾಯ್,
ಉನ್ಪಡಿಯೇಯರುಳಾಲ್ ಉದವಾಯ್ ಎನಕ್ಕುನ್ನರುಳೇ ॥ 14

ಭಾವಾರ್ಥ :- ದೋಷಮೆನ್ಪದಿನ್ ತೊಡುವುಂ ಪೆರಾದವರುಂ, ತೂಪ್ಪುಲಿಲ್ ತೋನ್ರಿನ ಸ್ವಾಮಿಯುಮಾನ ದೇಶಿಕನೇ ! ದೇವರೀರ್ ತಿರುವಡಿಹಳಿಲ್ ಚಲಿಯಾದ ಭಕ್ತಿ ಅಡಿಯೇನುಕ್ಕ್ ಕಿಡೈಯಾದ್, ದೇವರ್ ತಿರುವಡಿಯಡಿಯಾರಿಡಮುಂ ಅನ್ಬ್ ಶಿರಿದುಂ ಎನಕ್ಕಿಲ್ಲೈ, ಅಯ್ಯೋ ! ಎನ್ನಿವ್ವಿದನಿಲೈಯೈ ನಿನೈತ್ತಾರ್ ಎನ್ನ ಪ್ರಯೋಜನಂ ? ಆಹೈ ಯಾಲ್ ದೇವರೀರ್ ಗುಣತ್ತಿರ್ಕ್ ಒಪ್ಪುಮದಾಯುಂ, ನಿರ್ಹೇತುಕಮಾಯುಂ, ಯಾದೊರು ತಡೈಯಿಲ್ಲಾದದುಮಾನ ಕೃಪೈಯೈ ಅಡಿಯೇನಿಲ್ ಮಳೈಯಾಹ ಪೊಳಿಯವಿಕ್ಕವುಂ.

ಅರ್ಥ:- ಏದಂ-ಇಲ್ = ದೋಷದ ಸೊಲ್ಲೇ ಇಲ್ಲದ, ತೂಪ್ಪುಲ್ = ತೂಪ್ಪುಲಲ್ಲಿ (ಅವತರಿಸಿದ) ಎರ್-ತಾಯ್ = ನನ್ನ ಸ್ವಾಮಿಯೇ ! ನಿನ್ = ನಿಮ್ಮ, ಪದಂ-ತನ್ನಿಲ್ = ಅಡಿಗಳಲ್ಲಿ ಅನ್ಬ್ = ಭಕ್ತಿಯು, ಎನಕ್ಕ್ = ನನಗೆ, ನೇರೇ-ಇಲ್ಲೈ = (ನಿಮ್ಮೆದುರಿನಲ್ಲೂ) ಉಂಟಾಗಲೇ ಇಲ್ಲ, ಕಂಡಾಯ್ = ಕಂಡಿರಾ ? (ಅಲ್ಲದೆ) ನಿನ್-ಪದಂ-ಒನ್ರಿಯ = ನಿಮ್ಮಡಿಗಳನ್ನೇ ಆಶ್ರಯಿಸಿದ, ಅನ್ಬರಿಲುಂ = ಭಕ್ತರಲ್ಲೂ, ನೇಶಂ-ಇಲ್ಲೈ = ಸ್ವಲ್ಪವೂ ಅಲ್ಲ, ಅನ್ದೋ = ಅಯ್ಯೋ ! ಇನಿ = ಇನ್ನು, (ಹೀಗಿರುವಾಗ) ಎನ್-ಪಡಿ = ನನ್ನ ರೀತಿಯನ್ನು, ಕಂಡ್ = ನೋಡಿ, ಎನ್-ಪಯನ್ = ಏನು ಪ್ರಯೋಜನ? (ಆದುದರಿಂದ) ಉನ್-ಪಡಿಯೇ = ನಿಮ್ಮ (ಗುಣಕ್ಕೆ) ಅನುಗುಣವಾಗಿಯೇ, ಅರುಳಾಲ್ = (ತಡೆಯಿಲ್ಲದ) ಕರುಣೆಯಿಂದ, ಎನಕ್ಕ್ = ನನಗೆ, ಉನ್-ಅರುಳೇ = ನಿಮ್ಮ ಕರುಣೆಯನ್ನೇ ಉದವಾಯ್ = (ಬೀರಿ) ಕೈಬಿಡದೆ ಕಾಪಾಡಬೇಕುಖಿ

भक्ति स्साक्षात् त्वदग्रे मम पुनरचला न त्वदंघ्र्याश्रितेषु
प्रीति र्वा नैव जातेत्यथ यदि मनुषे भोः ! फलं किं तत स्स्यात् ।
दोषस्पृक्दूरतूप्पुल्व्युदितविभुमणे ! पूर्णकारुण्यवर्षं
युष्मच्छीलानुरूपं गुरुवर ! मयि संवर्ष हर्षात् जनिघ्नम् ।। १४

ಮೂಲ : ಉನ್ನರುಳನ್ರಿ ಎನುಕ್ಕೊರು ನಲ್‌ತುಣ್ಯೆಯಿನ್ಮೈಯಿನಾಲ್,
ಎನ್ನಿರುವಲ್ವಿನ್ಯೆ ನೀಯೇವಿಲಕ್ಕಿ ಇದಂಕರುದಿ,
ಮನ್ನಿಯನಲ್ ತಿರುಮಂದಿರಮೋದುಂ ಪೊರುಳ್‌ನಿಲೈಯೇ,
ಪೊನ್ನರುಳಾಲರುಳಾಯ್ ಪುಹಳ್‌ತೂಪ್ಪುಲ್‌ಕುಲವಿಳಕ್ಕೇ ! ॥

ಭಾವಾರ್ಥ :- ನಲ್ಲವರ್‌ಹಳಾಲ್ ತಿರುಳ್ ತಿರುಳಾಹ ಪುಹಳಪ್ಪಡುವರುಂ, ತೂಪ್ಪುಲುಕ್ಕ್ ದೀಪಮುಮಾನ ದೇಶಿಕನೇ ! ದೇವರೀರಿಡಂ ವಿಳಂಗುಂ ಎಲ್ಲೈಯತ್ತರುಳ್ ತವಿರ ಮತ್ತೊರು ಶಿರಂದ ತುಣ್ಯೆ ಅಡಿಯೇನುಕ್ಕಿಲ್ಲೈ, ಆಹೈಯಾಲ್ ಎನ್ನನ್ಮೈಯೈ ಸ್ವಾಮಿಯಾನ ದೇವರೀರ್ ತಾನ್ ಅರಿಂದ್, ಪುಣ್ಯಪಾಪಂಗಳಿನ್ನಿನ್ರುಂ ವಿಡಪ್ಪಡುಂಬಡಿ ಅಡಿಯೇನ್ಯೆ ಶೆಯ್ಯವಿತ್ತ್ ತಿರುಮಂತ್ರತ್ತಿಲ್ ಕೂರಿನ ಮೂನ್ರು ನಿಲೈಹಳೈಯುಂ (ಸ್ವರೂಪ-ಉಪಾಯ-ಪುರುಷಾರ್ಥನಿಷ್ಠೈಹಳೈ) ಇಪ್ಪೋದೇ ಅಡಿಯೇ ನುಕ್ಕರುಳವೇಣುಂ.

ಅರ್ಥ :- ಪುಹಳ್ = (ಸಜ್ಜನರಿಂದ) ಹೊಗಳಿಸಿಕೊಳ್ಳುವ, ತೂಪ್ಪುಲ್ = ತೂಪ್ಪಲಿಗೆ, ಕುಲ-ವಿಳಕ್ಕೇ = ಕುಲದೀಪವಾಗಿ ಬೆಳಗುವ ದೇಶಿಕೋತ್ತಮರೇ ! ಉನ್ = ನಿಮ್ಮ, ಅರುಳ್-ಅನ್ರಿ = ದಯೆಯೊಂದನ್ನು ಬಿಟ್ಟು, ಎನಕ್ಕ್ = ನನಗೆ, ಒರು = ಬೇರೊಂದು, ನಲ್-ತುಣ್ಯೆ = ಒಳ್ಳೆಯ ಸಹಕಾರವು, ಯಿನ್ಮೈಯಿನಾಲ್ = ಇಲ್ಲದಿರುವುದರಿಂದ, ಎನ್ = ನನ್ನ, ಇರು-ವಲ್-ವಿನ್ಯೆ = ಎರಡು ಬಲಿಷ್ಠ ಪಾಪಗಳಿಂದ (ಪುಣ್ಯ ಮತ್ತು ಪಾಪಗಳೆಂಬ ಸ್ವರ್ಣ ಮತ್ತು ಲೋಹಮಯ ಕಟ್ಟುಗಳಿಂದ) ನೀಯೇ = ನೀವೇ, ವಿಲಕ್ಕಿ = ಬಿಡಿಸಿ, ಇದಂ = ಹಿತವನ್ನು, ಕರುದಿ = ಚಿಂತಿಸಿ, ಮನ್ನಿಯ = ನಿತ್ಯವಾದ, ನಲ್ = ಎಲ್ಲಕ್ಕಿಂತ ಉತ್ತಮವಾದ, ತಿರು-ಮಂತಿರಂ = ಶ್ರೀಮದಷ್ಟಾಕ್ಷರವು, ಓದುಂ = ಪ್ರತಿಪಾದಿಸುವ, ಪೊರುಳ್ = ಗೂಡಾರ್ಥಗಳ, ನಿಲೈಯೈ = ನಿಷ್ಠೆಯನ್ನು, ಪೊನ್ನರುಳಾಲ್ = ಅಪಾರ ಕರುಣೆಯಿಂದ, ಅರುಳಾಯ್ = (ನನಗೆ) ಕರುಣಿಸಬೇಕು, (ಮೂಲ ಮಂತ್ರದ ಸಾರಾರ್ಥವನ್ನು ಅನುಸಂಧಾನ ಮಾಡಿ, ದ್ವಯಮಂತ್ರವನ್ನು ಸದಾ ಉಚ್ಚರಿಸುತ್ತಾ, ಚರಮಶ್ಲೋಕದ ಭಾವಕ್ಕೆ ಲಕ್ಷ್ಯವಾಗುವಂತೆ ಮಾಡಿ ರಕ್ಷಿಸಬೇಕು).

मान्यो नान्य स्सहायो निरुपधिकरुणाया स्तवास्ते ममातः
प्रौढे मेऽपास्य दुःखे हिततम मपि विज्ञाय भूय स्त्वमेव ।

श्रीमत्प्रेष्ठाष्टवर्णं मनु मनुपठितुं ताश्च निष्ठा वरिष्ठाः
स्वामिन् ! अद्य प्रदेया स्सदभिविनुततूप्पुल्कुलैकप्रदीप ! ॥ १५

ಮೂಲ : ವಿಳಕ್ಕಾಹಿ ವೇಂಗಡವೆರ್ಪಿನಿಲ್‌ವಾಳುಂ ವಿರೈಮಲರಾಳ್,
ವಳಕ್ಕಾದಲ್‌ಕೊಂಡುರೈ ಮಾರ್ಬ್‌ ತಿರತ್ತುಮುನದಡಿಯಾರ್,
ತುಳಕ್ಕಾದಲಿಲ್ಲವರ್ ತಂಗಳ್ ತಿರತ್ತಿಲುಂ ತೂಯ್‌ಮೈಯೆಣ್ಣಿ,
ಕಳಕ್ಕಾದಲ್ ಶೆಯ್ಯುಂನಿಲೈಕಡಿಯಾಯ್ ತೂಪ್ಪುಲ್‌ಕಾವಲನೇ ॥

ಭಾವಾರ್ಥ :- ತೂಪ್ಪುಲುಕ್ಕ್ ಕಾವಲನಾನ ದೇಶಿಕನೇ ! ಗರುತ್ಮಾನಾಲೇ ನಿಲೈಪೆತ್ತ ತಿರುವೇಂಗಡವೆರ್ಪಿನಿಲ್ ವಿಳಂಗುಂ ಮಣಿವಿಳಕ್ಕಾಯಿರುಪ್ಪವರುಂ, ಅಳಹಾಯುಂ, ಮಣಮುತ್ತದುಮಾನ ಕಮಲಮಲರಿಲ್ ವಾಳುಂ ತಿರುವಾಲೆ ಅಣೈಕ್ಕಪ್ಪೆತ್ತ ಅಹನ್ರ ಮಾರ್ಬುಡೈಯವನುಮಾನ ಎಂಬೆರುಮಾನಿಡಮುಂ, ಮಯರ್ವರ ಮದಿನಲಮುಡೈಯ ದೇವರೀರಡಿಯಾರಿಡಮುಂ, ಮಿಹವುಂ ಮೇಲಾನ ಬಕ್ತಿ ಅಡಿಯೇನುಕ್ಕುಂಡಾಹ ವೇಣುಮೆನ್ರು ತಿರುವುಳ್ಳಂಪತ್ತಿ, ಅವರ್‌ಹಳ್ ತಿರತ್ತಿಲ್ ಕಪಟಮಾನ ಬಕ್ತಿ ಪಣ್ಣುಮದೈ ಪೋಕ್ಕಡಿತ್ತರುಳವೇಣುಂ.

ಅರ್ಥ :- ತೂಪ್ಪುಲ್-ಕಾವಲನೇ = ತೂಪ್ಪುಲಿನ ಸ್ವಾಮಿಯೇ! ವೇಂಗಡ-ವೆರ್ಪಿನಿಲ್ = ವೇಂಕಟಾಚಲದಲ್ಲಿ, ವಿಳಕ್ಕಾಹಿ = ದೀಪವಾಗಿ, ವಾಳುಂ = ಇರುತ್ತಿರುವ, ವಿರೈ-ಮಲರ್ ಆಳ್ = ಸೌಂದರ್ಯವೂ, ಪರಿಮಳವೂ ತುಂಬಿದ ತಾವರೆಯಲ್ಲಿರುವ ಮಹಾಲಕ್ಷ್ಮಿಯ, ವಳ-ಕಾದಲ್ = ಆಲಿಂಗನವನ್ನು, ಕೊಂಡು = ಪಡೆದು, ಉರೈ = ವಿಶಾಲವಾದ, ಮಾರ್ಬ್ = ವಕ್ಷಸ್ಥಳವುಳ್ಳ (ಶ್ರೀನಿವಾಸನ) ತಿರತ್ತುಂ = ಸನ್ನಿಧಿಯಲ್ಲೂ, ತುಳ-ಕಾದಲ್- ಇಲ್ಲವರ್ -ತಂಗಳ್ = ಚಂಚಲಭಕ್ತಿಯಿಲ್ಲದೆ ಇರುವ, ಉನದ್-ಅಡಿಯಾರ್ = ನಿಮ್ಮ ಸೇವಕರ, ತಿರತ್ತಿಲುಂ = ಸನ್ನಿಧಿಯಲ್ಲೂ, ತೂಯ್‌ಮೈ = ಶುದ್ಧವಾದ ಭಕ್ತಿಯು (ಉಂಟಾಗುವಂತೆ) ಎಣ್ಣಿ = ಸಂಕಲ್ಪಿಸಿ, ಕಳ = ಕಪಟದ, ಕಾದಲ್ = ಭಕ್ತಿಯನ್ನು, ಶೆಯ್ಯುಂ = ಮಾಡುವ, ನಿಲೈ = ರೀತಿಯನ್ನು, ಕಡಿಯಾಯ್ = ನಿವಾರಿಸಿ, ಕಾಪಾಡಬೇಕು.

विख्याते वेङ्कटाद्रावनुकलविलसद्दिव्यदीपेऽखिलापे
पद्मावासातिरम्यप्रसरसुरभितश्रीसमाश्लिष्टहृत्के ।
युष्मद्भक्तेषु शुद्धाधिकमतिषु परां मे च संकल्प्य भक्तिं
तादृक्षेषु त्व मेता मपनुद कपटां पाहि तूप्पुल्सुरक्षिन् ॥ १६

ಮೂಲ : ಕಾವಲನ್ ಎಂಗಳ್ ಕಿಡಾಂಬಿಕ್ಕುಲಪತಿ ಅಪ್ಪುಳಾರ್ ತಂ,
ತೇಮಲರ್ ಶೇವಡಿಶೇರ್ನ್ದ್ ಪಣಿಂದವರ್ ತಮ್ಮರುಳಾಲ್,
ನಾವಲರುಂ ತೆನ್‌ವಡಮೊಳಿನಲ್ ಪೊರುಳ್ ಪೆತ್ತನಂಬಿ,
ಕಾವಲತ್ತೂಪ್ಪುಲ್ ಕುಲತ್ತರಶೇ ! ಎಮ್ಮೈಕ್ಕಾತ್ತರುಳೇ ॥ 17

ಭಾವಾರ್ಥ :- ನಮ್ಮೈ ರಕ್ಷಿಪ್ಪವರುಂ ಕಿಡಾಂಬಿಕುಲತ್ತಿರ್ಕ್ಕ ತಲೈವರಾನ ಅಪ್ಪುಳಾರೆನ್ರುಂ ಆತ್ರೇಯ ರಾಮಾನುಜಾಚಾರ್ಯರುಡೈಯ ತೇನ್ನಿರೈಂದ ತಿರುವಡಿ ಮಲರ್‌ಹಳೈ ಅಡೈಂದ್ ಅವೈಯೇ ಎಪ್ಪೋದುಂ ಪಣಿಂದ್, ಅಮ್ಮಹಾನಿನ್ ಅನ್ಬು ನಿರೈಂದ ಕಟಾಕ್ಷ ವರ್ಷಂಗಳಾಲ್ ವಿಳಂಗಿ, ಉಭಯ ವೇದಾಂತ ಕರುತ್ತುಡೈಯ ಅಣ್ಣಲೇ ! ನಿರೈಂದವರೇ ! ಸರ್ವರಕ್ಷಕರೇ ! ತೂಪ್ಪುಲೆಂದಾಯ್ ! ಎಮ್ಮೈ ಎಪ್ಪೋದುಂ ಕಾತ್ತರುಳವೇಣುಂ.

(ವಿ.ಸೂ. :- ಇಕ್ಕುಲತ್ತಾರ್ ರೊಂಬವುಮಾಚಾರಶೀಲರಾಹೈಯಾಲ್ ಜಲಪೂರ್ಣಕುಂಭಂಗಳೈ ಎಪ್ಪೋದುಂ ಧರಿತ್ತ್ ಇರುಂದದಾಹವುಂ, ಅತ್ತಾಲೆಯೇ ಸಕಲ ದೋಷನಿವಾರಣಂ ಶೆಯ್ದ್‌ಕೊಂಡಿರುಂದದಾಹವುಂ, ಆಹೈಯಾಲೆಯೇ ಇಕ್ಕುಲಂ ಘಟಾಂಬು = (ಗಡಾಂಬು = ಕಡಾಂಬಿ = ಅಪ್ಪುಳಾರ್ = ಜಲಮುಳ್ಳವರ್) ಎನ್ರ್ = ಪೆಯರ್‌ಪೆತ್ತ್ ಕಡಾಂಬಿಕುಲಮೆನ್ರ್ ವಳಂಗುಹಿರದಾಯ್ ಅರಿಂದ ಪೆರಿಯವರ್ ಕೂರಿಟ್ಟನರ್.

ಅರ್ಥ:- ಎಂಗಳ್ = ನಮ್ಮನ್ನು, ಕಾವಲನ್ = ರಕ್ಷಿಸುವವರೂ, ಕಿಡಾಂಬಿ. ಕುಲಪತಿ = ''ಕಡಾಂಬಿ' ಎಂಬ ಖ್ಯಾತ ವಂಶಕ್ಕೆ ಪತಿಯೆನಿಸಿದ, ಅಪ್ಪುಳಾರ್-ತಂ = ಅಪ್ಪುಳಾರವರ, (ಆತ್ರೇಯ ರಾಮಾನುಜರು, ವಾದಿಹಂಸಾಂಬುದಾಚಾರ್ಯರು ಎಂದು ಪ್ರಸಿದ್ಧರಾದವರು) ತೇ-ಮಲರ್-ಶೇವಡಿ = ಜೇನುಸುರಿಸುವ, ಸುಂದರವಾದ, ಅಡಿದಾವರೆಗಳನ್ನು, ಶೇರ್ನ್ದ್ = ಆಶ್ರಯಿಸಿ, (ಅನವರತವೂ) ಪಣಿಂದ್ = ಸ್ತುತಿಸಿ ವಂದಿಸುತ್ತಾ, ಅವರ್-ತಂ = ಅಂತಹ ಮಹಾಮಹಿಮರ, ಅರುಳಾಲ್ = ಕೃಪಾವಿಶೇಷದಿಂದ, (ಅವರ) ನಾ-ಅಲರುಂ = ನಾಲಿಗೆಯಿಂದ ಹೊರಬಂದ, ತೆನ್+ವಡ-ಮೊಳಿ = ತಮಿಳು-ಸಂಸ್ಕೃತವಾಣಿಯ (ಉಭಯವೇದಾಂತದ) ನಲ್-ಪೊರುಳ್ = ಉತ್ತಮವಾದ ವಿಶೇಷಾರ್ಥಗಳನ್ನು, ಪೆತ್ತ = ಪಡೆದ, ನಂಬಿ = ಸ್ವಾಮಿಯೇ ! ಪೂರ್ಣನೇ ! ಕಾವಲ = ರಕ್ಷಕವಾದ, ತೂಪ್ಪುಲ್-ಕುಲತ್ತ್-ಅರಶೇ = ತೂಪ್ಪುಲ್ ವಂಶಕ್ಕೆ ಅರಸನಾದ ದೇಶಿಕೋತ್ತಮನೇ ! ಎಮ್ಮೈ = ನಮ್ಮನ್ನು, ಕಾತ್ತ್ = ರಕ್ಷಿಸಿ, ಅರುಳ್ = ಕರುಣಿಸಬೇಕು.

अस्मत्संरक्षकश्रीघटजलकुलपत्यार्यरामानुजस्य
स्यन्दन्माध्वीकरक्ताम्बुजचरणयुगं प्रेत्य नित्यं प्रणम्य ।

तद्धर्षेक्षाभिवर्षश्रुतिशिखरयुगोल्लासिसारार्थवर्षिन् !
भोः ! पूर्ण ! त्राण ! तूप्पुल्कुलमहितपते ! संततं पालयाऽस्मान् ।।१७

ಮೂಲ : ಅರುಳ್‌ತರುಂ ಆರಣದೇಶಿಕನೇ ! ಎಂಗಳ್ ತೂಪ್ಪುಲ್‌ತೇವೇ !
ವರುಕವಿತಾರ್ಕಿಕಶಿಂಗಮೇ ! ವಾದಿಯರ್ ವಾಳ್‌ವರುತ್ತಾಯ್,
ಇರುಕೈಯುಂಕೂಪ್ಪಿ ಉರೈಕ್ಕುಂ ಇವ್ವಿಣ್ಣಪ್ಪಂ ಒನ್ರು ಕೇಳಾಯ್,
ಉರುವವೆನುಕ್ಕರುಳಾಯ್ ಎಣ್ಣುಮುಳ್ಳಂ ಉನ್‌ತೊಂಡರೈಯೇ ॥

ಭಾವಾರ್ಥ :- ಅರುಳ್ ಮಳೈಪೊಳಿಯುಂ ವೇದಾಂತಗಳುಕ್ಕ್ ಆಚಾರ್ಯರೇ! ನಮಕ್ಕುಂ ವಿಳಂಗುಂ ತೂಪ್ಪುಲುಕ್ಕುಂ ಕುಲಪೆರುಮಾನೇ ! ಕವಿಹಳುಕ್ಕುಂ ತಾರ್ಕಿಕರುಕ್ಕುಂ ಶಿಂಗಂಪೋಲ್ ಶಿರಂದೊಳಿಯಮವರೇ ! ಕೈಹಳಿರಂಡೈಯುಂ ಕ್ಕೂಪ್ಪಿ ಉರೈಕ್ಕುಂ ಓರ್ ಇವ್ವಿಣ್ಣಪ್ಪತ್ತೈ ತಿರುಚ್ಚೆವಿಶಾತ್ತಿಯರುಳೀರ್. ಅದೆನ್ನೆನಿಲ್, ದೇವರೀರಡಿಯಾರ್ ತಿರತ್ತಿಲೇಯೇ ಅಡಿಯೇನುಡೈಯ ನೆಂಜಾನದ್ ಈಡು ಪಡುಂಬಡಿ ಕೃಪೈಶೆಯ್ಯವೇಣುಂ.

ಅರ್ಥ :- ಅರುಳ್ = ದಯೆಯನ್ನು, ತರುಂ = (ಧಾರಾಕಾರವಾಗಿ) ಸುರಿಸುವ ಆರಣದೇಶಿಕನೇ = ವೇದಾಂತಚಾರ್ಯರೇ ! ಎಂಗಳ್ = ನಮ್ಮ, ತೂಪ್ಪುಲ್ = ತೂಪ್ಪುಲಿನ, ತೇವೇ = ದೇವರೇ ! ವರು = ಬರುವ, ಕವಿ = ಕವಿಗಳೂ, ತಾರ್ಕಿಕ = ವಾದಿಗಳಿಗೂ, ಶಿಂಗಮೇ = ಸಿಂಹವಾಗಿರುವವರೇ ! ವಾದಿಯರ್ = ದುರ್ವಾದಿಗಳ, ವಾಳ್‌ವ್ = ಬಾಳನ್ನು, ಅರುತ್ತಾಯ್ = ನಿರ್ಮೂಲಗೊಳಿಸಿದಿರಲ್ಲವೇ ! ಇರು-ಕೈಯುಂ = ಕೈಗಳೆರಡನ್ನೂ, ಕೂಪ್ಪಿ = ಜೋಡಿಸಿ, ಉರೈಕ್ಕುಂ = ಅರಿಕೆ ಮಾಡಿಕೊಳ್ಳುವ, ಇ-ವಿಣಪ್ಪಂ-ಒನ್ರು = (ನನ್ನ) ಈ ವಿಜ್ಞಾಪನೆಯೊಂದನ್ನು, ಕೇಳಾಯ್ = (ದಯವಿಟ್ಟು) ಆಲಿಸಬೇಕು. (ಏನೆಂದರೆ) ಉನ್ = ನಿಮ್ಮ, ತೊಂಡರೈ = ಅಡಿದಾವರೆಯ ಸೇವಕರನ್ನು, ಎಣ್ಣುಂ = (ಸದಾ) ಚಿಂತಿಸುವ, ಉಳ್ಳಂ = ಅಂತರಂಗವಾದ, ಉರುವ್ = ಸಂಬಂಧವನ್ನು, ಎನಕ್ಕ್ = ನನಗೆ, ಅರುಳಾಯ್ = ಕರುಣಿಸಬೇಕು.

कारुण्यासारवर्षिन् ! श्रुतिशिखरगुरो ! पूत तूप्पुल्प्रभो ! नः
कव्यग्र्यांहयुतर्कप्रविदुरुमदहृत्केसरिन् ! वादिमर्दिन् ।
मूर्ध्न्याधायांजलिं मे निशमय वदतोऽमुं हि विज्ञापनां भोः
युष्मद्भक्तैकसक्तं मम कुरु कृपया चित्त मश्रांत मत्र ।। १८

